# ಕನ್ನಡ ವಾರ್ಷಿಕ–೧೯೯೧

ಸಂಪಾದಕ

ಡಾ. ಬಸವರಾಜ ಕಲ್ಗುಡಿ




ಕನ್ನಡ ವಿಶ್ವವಿದ್ಯಾಲಯ

ಹಂಪಿ - ೫೮೩ ೨೧೧

*KANNADA VARSHIKA* : 1991 (Kannada Year Book : 1991)
Edited by Dr. Basavaraja Kalgudi, Kannada Adyayana Kendra,
Bangalore University, BANGALORE 560 056.
Published by Prasaranga, Kannada University, HAMPI - 583211, KARNATAKA

No of Pages: XIV + 458

First Published : 1992



**ಮುಖಪುಟ :**

ಶ್ರವಣ ಬೆಳಗೊಳದ ಜೈನಮಠದಲ್ಲಿನ ಭಿತ್ತಿಚಿತ್ರ (ಕ್ರಿ. ಶ. ೧೭೫೦–೧೮೨೫)
ಪ್ರತಿಕೃತಿ : ಕಾಳಿದಾಸ ಪತ್ತಾರ್ ವಿನ್ಯಾಸ : ದೇವರಾಜ್
ಸೌಜನ್ಯ : ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು

**ಬೆಲೆ: ರೂ :೮೦–೦೦ ಎಂಭತ್ತು ರೂಪಾಯಿಗಳು (ಸಾಮಾನ್ಯ ಪ್ರತಿ)**
**: ರೂ :೧೫೦–೦೦ ನೂರೈವತ್ತು ರೂಪಾಯಿಗಳು (ಗ್ರಂಥಾಲಯ ಪ್ರತಿ)**

**ಕನ್ನಡ ವಾರ್ಷಿಕ ಸಲಹಾ ಸಮಿತಿ :**

ಅಧ್ಯಕ್ಷರು : ಡಾ. ಚಂದ್ರಶೇಖರ ಕಂಬಾರ

ಸದಸ್ಯರು : ಡಾ ಕೆ. ಮರುಳಸಿದ್ಧಪ್ಪ
ಶ್ರೀ ಕಿ. ರಂ. ನಾಗರಾಜ
ಡಾ ಕೆ. ವಿ. ನಾರಾಯಣ

ಸಂಪಾದಕರು : ಡಾ ಬಸವರಾಜ ಕಲ್ಗುಡಿ

**ಪ್ರಕಾಶಕರು :**

ಚಿ. ಶ್ರೀನಿವಾಸರಾಜು
ನಿರ್ದೇಶಕ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ : ೫೮೩೨೧೧

**ಮುದ್ರಕರು :**

**ರೋಮಾಂಚನ ಗ್ರಾಫಿಕ್ಸ್**
**32, ರೈಲ್ವೆ ಪ್ಯಾರಲಲ್ ರಸ್ತೆ, ಬೆಂಗಳೂರು.**

# ಮುನ್ನುಡಿ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್‌ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ ಸಾಹಿತ್ಯವನ್ನು ಹುಟ್ಟಿಸುವದು ನಮ್ಮ ವಿಶ್ವವಿದ್ಯಾಲಯದ ಕರ್ತವ್ಯವಾಗಿದೆ. ಶಾಸ್ತ್ರ – ಕಲೆ, ಅಭಿಜಾತ – ಜಾನಪದ, ಮಾರ್ಗ – ದೇಸಿ, ಸ್ವಕೀಯ – ಪರಕೀಯ, ಪೌರ್ವಾತ್ಯ – ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ ಇದಕ್ಕಿಂತ ವಿಶಾಲವಾದ, ಹೆಚ್ಚು ಪರಿಣಾಮಕಾರಿಯಾದ ಪರಿಪ್ರೇಕ್ಷ್ಯವನ್ನು ಕಟ್ಟುವುದರಲ್ಲಿ ತೊಡಗಿದೆ. ಪ್ರಸಾರಾಂಗದ ಪ್ರಕಟಣೆಗಳಿಗೆ ಹೀಗೆ ಸಾರ್ಥಕವಾಗಬಲ್ಲ ಉದ್ದೇಶವಿದೆ. ಲೋಕದಲ್ಲಿಯ ತಿಳುಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಒಂದು ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಈ

ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆಯೆಂದರೂ ತಪ್ಪಿಲ್ಲ. ಈ ದೃಷ್ಟಿಯಿಂದ ಈ ವರ್ಷ ಕೆಲವು ಪುಸ್ತಕಗಳನ್ನು ನಾವು ಪ್ರಕಟಿಸುತ್ತಿದ್ದೇವೆ.

ಪ್ರಸ್ತುತ 'ಕನ್ನಡ ವಾರ್ಷಿಕ' ಆಯಾ ವರ್ಷದ ಕರ್ನಾಟಕದ ಸಂಸ್ಕೃತಿ ಸಾಧನೆಗಳನ್ನು ಗುರುತಿಸುವ ಉದ್ದೇಶವನ್ನು ಹೊಂದಿದೆ. ಡಾ. ಜಿ. ಎಸ್. ಶಿವರುದ್ರಪ್ಪನವರು ಬೆಂಗಳೂರು ವಿಶ್ವವಿದ್ಯಾಲಯದ ನಿರ್ದೇಶಕರಾಗಿದ್ದಾಗ ಆಯಾ ವರ್ಷ ಪ್ರಕಟವಾದ ಸಾಹಿತ್ಯ ಕೃತಿಗಳ ಸಮೀಕ್ಷೆ ಮಾಡುವ ಯೋಜನೆಯನ್ನು 'ಸಾಹಿತ್ಯ ವಾರ್ಷಿಕ' ಸಂಪುಟಗಳ ಮೂಲಕ ಮಾಡಿದರು. ಕನ್ನಡ ವಿಮರ್ಶೆಯ ಬೆಳವಣಿಗೆಯಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಸಾಹಿತ್ಯ ವಾರ್ಷಿಕವು ತನ್ನ ಪ್ರಭಾವ ಬೀರಿತೆನ್ನುವುದು ಖಚಿತವಾದ ಮಾತಾಗಿದೆ. ಈ ಯೋಜನೆ ವಿಶ್ವವಿದ್ಯಾಲಯಗಳ ಪ್ರಕಟನಾ ಯೋಜನೆಯಲ್ಲಿ ವಿಶಿಷ್ಟವಾದಂಥಾಗಿತ್ತು.

ಕನ್ನಡ ವಿಶ್ವವಿದ್ಯಾಲಯದ 'ಕನ್ನಡ ವಾರ್ಷಿಕ'ವು ಸಾಹಿತ್ಯ ವಾರ್ಷಿಕದ ವ್ಯಾಪ್ತಿ ಏನಿತ್ತು ಅದನ್ನು ಒಳಗೊಂಡು ಸಂಸ್ಕೃತಿ ಸಾಧನೆಯ ಸಮೀಕ್ಷೆಯನ್ನು ಮಾಡುವೆಡೆಗೆ ತನ್ನ ದೃಷ್ಟಿಯನ್ನೂ, ವ್ಯಾಪ್ತಿಯನ್ನೂ ಬೆಳೆಸಿಕೊಂಡಿದೆ. 'ಕನ್ನಡ ವಾರ್ಷಿಕ' ಕೇವಲ ಸಾಧನೆಗಳ, ಅಭಿವ್ಯಕ್ತಿಗಳ ಪಟ್ಟಿ ಮಾತ್ರವಾಗದೇ ಆಯಾ ಸಾಧನೆಗಳ ಸಾಂಸ್ಕೃತಿಕ ಸತ್ವವನ್ನು ಅರಿಯುವ ಕಾರ್ಯವನ್ನೂ ಮಾಡಿದೆ. ಈ ದೃಷ್ಟಿಯಿಂದ ಇದು ಅನನ್ಯ ಕೃತಿಯಾಗಿದೆ.

ಈ ಕೃತಿಯ ಸಂಪಾದಕರಾದ ಡಾ. ಬಸವರಾಜ ಕಲ್ಗುಡಿಯವರು ಕನ್ನಡ ಸಾಹಿತ್ಯ–ಸಂಸ್ಕೃತಿ–ಇತಿಹಾಸ ಇವುಗಳ ಸಂಬಂಧವನ್ನು ಕುರಿತಂತೆ ಆಧುನಿಕ ದೃಷ್ಟಿಯಿಂದ ನೋಡುವ ಚಿಂತಕರಲ್ಲಿ ಒಬ್ಬರು. ಈ ಕುರಿತು ಗಮನಾರ್ಹ ಸಂಶೋಧನೆಯನ್ನು ಮಾಡಿರುವ ಇವರು 'ಕನ್ನಡ ವಾರ್ಷಿಕ'ದ ಉದ್ದೇಶವನ್ನೂ ಬಹಳ ಸಮರ್ಥವಾಗಿ ನಿರ್ವಹಿಸಿದ್ದಾರೆ. ಕರ್ನಾಟಕದ ಒಂದು ವರ್ಷದ ಸಾಧನೆಗಳನ್ನೂ, ಅಭಿವ್ಯಕ್ತಿಗಳನ್ನೂ ಗುರುತಿಸಿ ಅವುಗಳನ್ನು ಬರೆಸಿ, ಸಂಯೋಜಿಸುವ ಕಾರ್ಯ ಒಬ್ಬ ವ್ಯಕ್ತಿಯ ವ್ಯಾಪ್ತಿಯ ಅಳವಿಗೆ ಮೀರಿದ್ದು. ಈ ಕಷ್ಟಗಳನ್ನೆಲ್ಲ ನಿಭಾಯಿಸಿ, ಪರಿಶ್ರಮದಿಂದ 'ಕನ್ನಡ ವಾರ್ಷಿಕ 1991' ಸಂಚಿಕೆಯನ್ನು ಕಲ್ಗುಡಿಯವರು ಸಂಯೋಜಿಸಿದ್ದಾರೆ. ಇದೊಂದು ಮತ್ತೆ ಮತ್ತೆ ಓದಬಲ್ಲ, ಗ್ರಹಿಕೆಗೆ ಒಳಗಾಗಬಲ್ಲ ಸ್ವತಂತ್ರ ಕೃತಿಯ ಸ್ವರೂಪ ತಳೆಯುವಂತೆ ಮಾಡಿದ್ದಾರೆ – ಇವರಿಗೂ, 'ಕನ್ನಡ ವಾರ್ಷಿಕ 1991' ಸಂಚಿಕೆಯನ್ನು ಯಶಸ್ವಿಯಾಗಿ ಹೊರತರಲು ಗ್ರಂಥದ ಎಲ್ಲ ಲೇಖಕರು ಕಾರಣರಾಗಿದ್ದಾರೆ – ಅವರಿಗೂ ನಾನು ಆಭಾರಿಯಾಗಿದ್ದೇನೆ.

ಕುಲಪತಿಗಳು
ಕನ್ನಡ ವಿಶ್ವವಿದ್ಯಾಲಯ
ಹಂಪಿ – ೫೮೩೨೧೧

ಚಂದ್ರಶೇಖರ ಕಂಬಾರ

# ಸಂಪಾದಕನ ಮಾತು

ಕನ್ನಡ ಸಂಸ್ಕೃತಿಯನ್ನು ಸೃಜನಶೀಲ ಅಭಿವ್ಯಕ್ತಿಯ ಅಸಂಖ್ಯಾತ ವಿನ್ಯಾಸಗಳು ಪರಂಪರಾಗತವಾಗಿ ಸಜೀವವಾಗಿಟ್ಟಿವೆ. ಸಂಸ್ಕೃತಿಯಲ್ಲಿ ಅರಿವಿನ ವಿಸ್ತಾರಗಳು ಬೆಳೆಯುತ್ತ, ಹೊಸ ಸ್ವರೂಪಕ್ಕೆ ಕಾರಣವಾಗುವುದೇ ಸೃಜನಶೀಲ ಪ್ರತಿಭೆಯ ಹೊಸ ಹೊಸ ಸ್ವರೂಪಗಳಿಂದ. ಒಂದು ಇನ್ನೊಂದಕ್ಕೆ, ಹಿಂದಿನದು ಮುಂದಿನದಕ್ಕೆ ಸಾಗುವ ಈ ಪ್ರಕ್ರಿಯೆ ನಮ್ಮೆಲ್ಲರ ಬದುಕನ್ನು ಹಸನುಗೊಳಿಸುವುದೇ, ಮೌಲ್ಯ ವಿನ್ಯಾಸಗಳಿಗೆ ಗುರಿಪಡಿಸುವುದೇ ಆಗಿದೆ. ಈ ಹಸನುಗೊಳಿಸುವಿಕೆಯಾಗಲೀ, ಮೌಲ್ಯ ಪ್ರಸರಣವಾಗಲೀ ಕೇವಲ ನೀತಿ ಬದ್ಧವೆಂದು ತಿಳಿದರೆ ತಪ್ಪು. ಬದುಕಿನ ಕ್ರಮವನ್ನು ಕುರಿತ ಮೂಲಭೂತ ಆಲೋಚನೆಯೇ ಇಲ್ಲಿ ಪ್ರಧಾನ. ಸಂಸ್ಕೃತಿಯನ್ನು ರೂಪಿಸುವಲ್ಲಿ ಪ್ರಧಾನ ಪಾತ್ರವಹಿಸುವ ಈ ಸೃಜನಶೀಲ ಪ್ರಜ್ಞಾ ಪ್ರವಾಹಗಳು ಚರಿತ್ರೆಯ ಜೊತೆಗೆ ತೆಕ್ಕೆ ಹಾಕಿಕೊಳ್ಳುತ್ತಲೇ – ಹೊಸ ಕ್ರಮವೊಂದನ್ನು ಸೃಷ್ಟಿಸುವ ಸಾಧ್ಯಾಸಾಧ್ಯತೆಗಳಾಗುತ್ತವೆ. ಮೂರನೆಯ ಜಗತ್ತಿನ ಸಂದರ್ಭದಲ್ಲಿ ಈ ರೀತಿ ಬದುಕಿನ ಕ್ರಮದ ಕುರಿತು ಅರಿವು, ಪರ್ಯಾಯ ನೆಲೆಯೊಂದರ ಹುಡುಕುವಿಗೆ ಎಳಸುತ್ತಿದೆ. ನಮ್ಮ ಬದುಕಿನ ಮೇಲೆ ಪ್ರಭಾವ ಬೀರುತ್ತಿರುವ ಪಶ್ಚಿಮದ, ವಸಾಹತುಶಾಹೀ ಸಂಸ್ಕೃತಿಯ ಪರಿಣಾಮಗಳು ಈ ಬದುಕಿನ ಸೃಜನಶೀಲ ನೆಲೆಗಳ ಮೇಲೆ ಮಾಡುತ್ತಿರುವ ಪ್ರಭಾವದ ಸ್ವರೂಪವನ್ನು ನಾವಿನ್ನೂ ಅರಿಯಬೇಕಾಗಿದೆ.

ಕನ್ನಡ ಸಂಸ್ಕೃತಿಯು ಇಂತೆಲ್ಲ ಪ್ರಭಾವಗಳನ್ನೂ ಅರಗಿಸಿಕೊಳ್ಳುತ್ತಿದೆಯೇ? ಜೀರ್ಣಿಸಿಕೊಳ್ಳುತ್ತಿದ್ದರೆ ಅದರ ವಿನ್ಯಾಸಗಳೇನು? ಇವೆಲ್ಲ ಪ್ರಶ್ನೆಗಳಿಗೆ ನಿರ್ಣಾಯಕ ಉತ್ತರ ಸಾಧ್ಯವಿಲ್ಲ. ನಮ್ಮ ಪ್ರಜ್ಞಾಸ್ತರಗಳು, ಬದುಕಿನೊಡನೆ ಸಂಧಿಸುವ ನೆಲೆಯಲ್ಲಿ ಹುಟ್ಟುವ ಹತ್ತು ಹಲವು ಸ್ವರೂಪಗಳಲ್ಲಿ ಇದನ್ನು ಗುರುತಿಸಿಕೊಳ್ಳುತ್ತ ಹೋಗಬೇಕಾಗುತ್ತದೆ.

ಈ ದೃಷ್ಟಿಯಿಂದ ಕನ್ನಡ ವಾರ್ಷಿಕ ತನ್ನ ಮೊದಲ, ಪ್ರಮುಖ ಹೆಜ್ಜೆಯನ್ನು ಇಡುತ್ತಿದೆ. ಇಲ್ಲಿ ಅಭಿವ್ಯಕ್ತಗೊಂಡಿರುವ ಸಂಸ್ಕೃತಿ ಸಮೀಕ್ಷೆ, ಸಾಧನೆಯ ವಿವರಗಳು—ಕನ್ನಡ ಬದುಕು ಇಡುತ್ತಿರುವ ಹೆಜ್ಜೆಯ ವಾಸನೆಯ ಕಿಂಚಿತ್ತನ್ನಾದರೂ ಹಿಡಿಯಬೇಕು, ಹಿಡಿಯುತ್ತದೆ ಎನ್ನುವ ಆಶಯವಿದೆ. ಹಾಗೆ ನೋಡಿದರೆ ವರ್ಷದ ಚೌಕಟ್ಟು ಇಲ್ಲಿ ತಾಂತ್ರಿಕವಾದದ್ದು. ಒಂದು ಚೌಕಟ್ಟನ್ನು ಹಾಕಿಕೊಳ್ಳುವ ಉದ್ದೇಶಹೊಂದಿರುವಂಥದ್ದು. ಏಕೆಂದರೆ ಯಾವುದೇ ಸಂಸ್ಕೃತಿಯಲ್ಲಿ ಸಾಧನೆ, ಮತ್ತು ವರ್ತಮಾನದಲ್ಲಿ ಗೋಚರವಾಗುವ ಚಟವಟಿಕೆಗಳಿಗೆ, ಅಗಾಧವಾದ ಕಾಲದ ಪರಿಶ್ರಮವಿರುತ್ತದೆ. ಹಿಂದಿನಿಂದ ಬಂದ ಅತ್ಯುತ್ತಮವಾದ್ದರ ಬಳುವಳಿ ಇರುತ್ತದೆ; ಮುಂದಕ್ಕೆ ಸಾಗುವ ಚೇತನ, ಆಶಯವಿರುತ್ತದೆ. ಇವೆಲ್ಲದರ ಮಿಂಚೊಂದು ವಾರ್ಷಿಕದ ಒಡಲೊಳಗಿಂದ ಗೋಚರಿಸಬೇಕು ಎನ್ನುವ ಆಶಯವನ್ನು 'ಕನ್ನಡ ವಾರ್ಷಿಕ'ವು ಹೊಂದಿದೆ.

ಜಿ.ಎಸ್. ಶಿವರುದ್ರಪ್ಪನವರ ಸಂಪಾದಕತ್ವದಲ್ಲಿ ಬರುತ್ತಿದ್ದ 'ಸಾಹಿತ್ಯ ವಾರ್ಷಿಕ'ವು ಒಂದು ರೀತಿಯಲ್ಲಿ 'ಕನ್ನಡ ವಾರ್ಷಿಕ'ದ ಚೌಕಟ್ಟನ್ನೂ ನಿರ್ಮಿಸುವ, ಮತ್ತು ಅದನ್ನು ಮೀರುವ ಪ್ರಯತ್ನಕ್ಕೆ ಪ್ರೇರಣೆಯಾಗಿದೆ. ಇಲ್ಲಿಯ ದರ್ಶನ ವಿಸ್ತಾರಕ್ಕೆ ಅಲ್ಲಿಯ ಬೆಳಕೇ ಧಾತುವಾಗಿದೆ.

'ಕನ್ನಡ ವಾರ್ಷಿಕ 1991' ಕೇವಲ ಸಾಧನೆಯ, ಅಭಿವ್ಯಕ್ತಿಯ ವಿವರಗಳ ಪಟ್ಟಿಯಲ್ಲ. ಆಯಾ ಸಾಧನೆಯ, ಅಭಿವ್ಯಕ್ತಿಗಳ ಸಾಂಸ್ಕೃತಿಕ ಸತ್ವವನ್ನು ಅರಿಯುವ ಮುಖ್ಯ ಉದ್ದೇಶವನ್ನು

ತಮ ಹೊಂದಿದೆ. ಇಲ್ಲಿ ಅಭಿವ್ಯಕ್ತಿಗೊಂಡ ವಿವರಗಳನ್ನು ಸಮಗ್ರವಾಗಿ ಗಮನಿಸಿದರೆ ನಮ್ಮ ಸಂಸ್ಕೃತಿಯ ದಾರಿ, ಸದ್ಯಕ್ಕೆ ಎತ್ತಣದಿಂದೆತ್ತಣಕ್ಕೇರಬಹುದು ಎನ್ನುವ ಬಗ್ಗೆ ಆಲೋಚನೆಗೆ ಹಚ್ಚುವಂತೆ ಮಾಡುತ್ತದೆ ಎನ್ನುವ ನಂಬಿಕೆ ನನ್ನದು.

1991ರ ಅಭಿವ್ಯಕ್ತಿ ಹಾಗೂ ಸಾಧನೆಗಳ ಒಡಲಾಳದಲ್ಲಿ ನಮ್ಮ ಬದುಕಿನ ಸತ್ವಗಳ ಹುಡುಕಾಟವು ಪ್ರಧಾನವಾಗಿ ತೋರುತ್ತಿದೆ ಎನ್ನುವುದು ಪ್ರಮುಖವಾಗಿ ಗಮನಿಸಬೇಕಾದ ವಿಚಾರ. ನಮ್ಮ ಬದುಕಿನ ಸತ್ವವಾದ ಮೂಲ ಬೇರಿನೆಡೆಗೆ, ಅವಜ್ಞೆಗೆ ಗುರಿಯಾಗಿದ್ದ ಬಹುಸಂಖ್ಯಾತ ಜನಪದ ಲೋಕದ ಸಂಕೀರ್ಣ ಸತ್ವವನ್ನು ಅರಿಯುವ ಎಡೆಗೆ ನಮ್ಮ ಅರಿವಿನ ಕ್ರಮಗಳು ಸಾಗುತ್ತಿವೆ ಎನ್ನುವುದು ಗಾಢವಾಗಿ ಕಾಣಿಸುವಂಥ ನೋಟವಾಗಿದೆ. ಈ ಎಲ್ಲ ನೋಟದ ಸೂಕ್ಷ್ಮಸ್ತರಗಳು 'ಕನ್ನಡ ವಾರ್ಷಿಕ 1991'ರಲ್ಲಿ ಇವೆ.

'ಕನ್ನಡ ವಾರ್ಷಿಕ 1991' ರಲ್ಲಿ ಮುಖ್ಯವಾಗಿ ಎರಡು ಭಾಗಗಳಿವೆ. ಮೊದಲ ಭಾಗವು ಕರ್ನಾಟಕದ ಚಾರಿತ್ರಿಕ, ಭೌಗೋಳಿಕ, ಸಾಂಸ್ಕೃತಿಕ ಅಂಶಗಳನ್ನೊಳಗೊಂಡ ಮೂಲಭೂತ ಮಾಹಿತಿಯ ಜೊತೆಗೆ, 1991ರ ಪ್ರಮುಖ ಘಟನೆಗಳು ಹಾಗೂ ಸಾಧನೆಗೆ ಪಾತ್ರರಾದ ಪ್ರಮುಖ ವ್ಯಕ್ತಿಗಳ–ಹಿನ್ನೆಲೆಯಲ್ಲಿ ವಿಶ್ಲೇಷಣಾತ್ಮಕ ಸಮೀಕ್ಷೆಯನ್ನು ಒಳಗೊಂಡಿದೆ. ಎರಡನೆಯ ಭಾಗವು 1991 ರಲ್ಲಿಯ ಸಾಂಸ್ಕೃತಿಕ ಅಭಿವ್ಯಕ್ತಿಗಳನ್ನು ಕುರಿತ ಸಮೀಕ್ಷೆಯನ್ನು ಒಳಗೊಂಡಿದೆ. ಇದರಲ್ಲಿ ಸಾಹಿತ್ಯ ಪ್ರಕಾರಗಳು ಮಾತ್ರವಲ್ಲದೆ ಸಾಹಿತ್ಯೇತರ ಅಭಿವ್ಯಕ್ತಿಗಳಾದ ಸಂಗೀತ, ನೃತ್ಯ, ರಂಗಪ್ರದರ್ಶನ, ಸಿನಿಮಾ, ಶೈಕ್ಷಣಿಕ ಚಟುವಟಿಕೆ, ಚಿತ್ರಕಲೆ, ನಾಟಕ, ಕ್ರೀಡೆ ಮೊದಲಾದವುಗಳನ್ನು ಕುರಿತಂತೆ– ಆಯಾವರ್ಷದ ಪ್ರಮುಖ ಘಟನೆಗಳ ಸ್ವರೂಪ ಮತ್ತು ಸತ್ವವನ್ನು ಅರಿಯುವ ಪ್ರಯತ್ನವಿದೆ.

* 'ಕನ್ನಡ ವಾರ್ಷಿಕ 1991' ರ ವಿಶಿಷ್ಟ ಯೋಜನೆಯ ಸಂಯೋಜನೆಯಲ್ಲಿ ತೊಡಗಿಸಿದ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳೂ, ನನ್ನ ಗುರುಗಳೂ ಆದ ಡಾ. ಚಂದ್ರಶೇಖರ ಕಂಬಾರರಿಗೆ–

* ಈ ಕೃತಿಯ ಸಂಯೋಜನೆಗೆ ಹಾಗೂ ಅಂತಿಮವಾಗಿ ಅದು ಈ ರೂಪು ತಳೆಯುವುದಕ್ಕೆ ಮುಖ್ಯವಾಗಿ ಈ ಗ್ರಂಥದ ಲೇಖಕರೂ ಮತ್ತು ಸಲಹಾಸಮಿತಿಯ ಸದಸ್ಯರೂ ಪ್ರಮುಖ ಕಾರಣರಾಗಿದ್ದಾರೆ. ಅವರಿಗೆ –

* ಇಲ್ಲಿಯ ಕೆಲವು ಲೇಖನಗಳನ್ನು ಪ್ರಜಾವಾಣಿ ಪತ್ರಿಕೆಯಿಂದ ಆಯ್ದುಕೊಂಡಿದೆ. ಸುಬ್ಬಣ್ಣನವರನ್ನು ಕುರಿತ ಟಿಪ್ಪಣಿಯಲ್ಲಿ ಸಂದರ್ಶನ ಹಾಗೂ ಸುಬ್ಬಣ್ಣನವರ ಪ್ರಶಸ್ತಿ ಭಾಷಣದ ಭಾಗವನ್ನು 'ನಮ್ಮ ಸುಬ್ಬಣ್ಣ' ಕೃತಿಯಿಂದ ಆಯ್ದುಕೊಂಡಿದೆ. ಇನ್ನುಳಿದ ಅನೇಕ ವಿಷಯಕ್ಕೆ ಪೂರಕವಾದ ಮಾಹಿತಿಯನ್ನು ವಿವಿಧ ಕಡೆಗಳಿಂದ ಸಂಗ್ರಹಿಸಿದೆ. ಈ ಎಲ್ಲ ಸಂಪಾದಕರಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗಳಿಗೆ–

* 'ಕನ್ನಡ ವಾರ್ಷಿಕ' ಅಂದವು ಹೆಚ್ಚುವಂತೆ ಮಾಡುವಲ್ಲಿ ಛಾಯಾಚಿತ್ರಗಳ ಪಾತ್ರವು ಮುಖ್ಯವಾದದ್ದಾಗಿದೆ. ಇಲ್ಲಿಯ ಛಾಯಾಚಿತ್ರಗಳನ್ನು ಅನೇಕ ಮೂಲಗಳಿಂದ ಪಡೆಯಲಾಗಿದೆ. ಪ್ರಮುಖವಾಗಿ ಸಹಾಯ ಒದಗಿಸಿದ ಕನ್ನಡ ಪ್ರಭದ ಸಂಪಾದಕರಿಗೆ, ಕರ್ನಾಟಕ ಗೆಜೆಟಿಯರ್‌ನ ನಿರ್ದೇಶಕರಿಗೆ–

*   ಈ ಕೃತಿಯು ಇಷ್ಟು ಅಂದವಾಗಿ ಬರಲು ಮುಖ್ಯ ಕಾರಣ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ : ಇದರ ನಿರ್ದೇಶಕರಾದ ಚಿ. ಶ್ರೀನಿವಾಸರಾಜು, ಹಾಗೂ ವಾಸುಕಿ ಅವರಿಗೆ–

*   ಪುಸ್ತಕ ಸಿದ್ಧಗೊಳ್ಳುವುದಕ್ಕೆ ಶ್ರಮಿಸಿದ ಗೆಳೆಯ ಮಲ್ಲೇಪುರಂ ಜಿ. ವೆಂಕಟೇಶ ಹಾಗೂ ಪ್ರಕಾಶ ಇವರಿಗೆ–

*   'ವಾರ್ಷಿಕ'ದ ಮುಖಪುಟ ವಿಶಿಷ್ಟವಾದದ್ದು. ಶ್ರೇಷ್ಠ ಪ್ರತಿಭೆಗೆ, ಅರಿವಿಗೆ ಹಾಗೂ ವೈಭವಕ್ಕೆ ಕಾಲಾನುಗತಿಕವಾಗಿ ಪ್ರತೀಕವಾಗಿರುವ ಇಂದ್ರನನ್ನು ಆಹ್ವಾನಿಸುವ ಚಿತ್ರವಿದು. ಪ್ರತಿಭೆಗಳು, ಸೃಜನಕ್ರಿಯೆಯ ಸ್ವರೂಪಗಳು ಒಂದೆಡೆಗೆ ಸೇರುವ 'ಕನ್ನಡ ವಾರ್ಷಿಕ' ದ ವಸ್ತುವಿಗೆ ಚಿತ್ರ ತಕ್ಕುದಾಗಿದ್ದು ಪುಸ್ತಕದ ಅಂದವನ್ನು ಹೆಚ್ಚಿಸಿದೆ. ಇದಕ್ಕೆ ನೆರವಾದ ಲಲಿತಕಲಾ ಅಕಾಡೆಮಿಗೆ–

*   ಕೃತಿನ್ನು ಅಂದವಾಗಿ ಮುದ್ರಿಸಿದ ರೋಮಾಂಚನ ಗ್ರಾಫಿಕ್ಸ್‌ನವರಿಗೆ–

**ನನ್ನ ವಂದನೆಗಳು.**

ಕೊನೆಯದಾಗಿ ಕಣ್ತಪ್ಪಿನಿಂದ ಕೆಲವು ಅಂಶಗಳು ಬಿಟ್ಟು ಹೋಗಿರುವ ಸಾಧ್ಯತೆಯು ಇದೆ. ಅಂಥ ಅಂಶಗಳನ್ನು ತೋರಿ ಸಹೃದಯರು ತಿದ್ದುವರೆಂದು ನಾನು ನಂಬುತ್ತೇನೆ.

ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು – ೫೬೦ ೦೫೬

ಬಸವರಾಜ ಕಲ್ಗುಡಿ

# ಒಳಪುಟಗಳಲ್ಲಿ

## ಭಾಗ : ಎರಡು

**(ಅ) ಅಂದು ಇಂದನ್ನು ಜೋಡಿಸುವ ನೆನಪು**



**(ಆ) 1991ರ ಸಾಂಸ್ಕೃತಿಕ ಅಭಿವ್ಯಕ್ತಿಗಳು**

# ಭಾಗ : ಒಂದು

* ಕರ್ನಾಟಕ : ಒಂದು ಸ್ಥೂಲ ಪರಿಚಯ
* ಪ್ರಮುಖ ಘಟನೆಗಳು – 1991
* ಪ್ರಮುಖ ವ್ಯಕ್ತಿಗಳು, ಪ್ರಶಸ್ತಿಗಳು – 1991

# ಕರ್ನಾಟಕ : ಒಂದು ಸ್ಥೂಲ ಚಿತ್ರ

ಎಚ್. ಎಸ್. ಗೋಪಾಲರಾವ್

ಏಷ್ಯಾಖಂಡದ ದಕ್ಷಿಣದ ತುಟ್ಟತುದಿಯ ಪ್ರಸ್ಥಭೂಮಿಯಲ್ಲಿರುವ ಕರ್ನಾಟಕವು ಕುವೆಂಪು ಅವರು ಮಾತುಗಳಲ್ಲಿ 'ಭಾರತ ಜನನಿಯ ತನುಜಾತೆ' ವಿಸ್ತೀರ್ಣ ಮತ್ತು ಜನಸಂಖ್ಯೆಯ ಪ್ರಮಾಣದಂತೆ ಭಾರತದಲ್ಲಿ ಎಂಟನೆಯ ದೊಡ್ಡ ರಾಜ್ಯವೆಂದು ಪರಿಗಣಿತವಾಗಿರುವ ಕರ್ನಾಟಕವು ಅತ್ಯಂತ ಪುರಾತನವಾದ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದೆ. ತನ್ನ ಮೊದಲಿನ 'ಕರ್ನಾಟಕ' ಎಂಬ ಹೆಸರನ್ನು ಬಹಳ ವರ್ಷಗಳ ಕಾಲ ಕಳೆದುಕೊಂಡು 'ಮೈಸೂರು' ಎನಿಸಿಕೊಂಡಿದ್ದ ಈ ರಾಜ್ಯವು ಮತ್ತೆ ೧೯೭೩ ರಲ್ಲಿ 'ಕರ್ನಾಟಕ' ಎಂಬ ಹೆಸರನ್ನು ಪಡೆದು, ತನ್ನ ಹಿರಿಮೆ–ಗರಿಮೆಗಳ ಪುನರುತ್ಥಾನಕ್ಕೆ ಕಾರ್ಯೋನ್ಮುಖವಾಗಿದೆ.

ಭಾರತದ ಪ್ರಮುಖ ರಾಜ್ಯಗಳಲ್ಲೊಂದಾದ 'ಕರ್ನಾಟಕ'ವು ಉತ್ತರ ಅಕ್ಷಾಂಶ ೧೧° ೩೦' ನಿಂದ ೧೮° ೪೫' ವರೆಗೆ ಮತ್ತು ಪೂರ್ವ ರೇಖಾಂಶ ೨೪° ೧೨ ನಿಂದ ೭೮ ೩೦' ವರಗೆ ಹಬ್ಬಿದೆ. ೧, ೯೧, ೩೩೩ ಕಿ.ಮೀ. ವಿಸ್ತೀರ್ಣದ ಕರ್ನಾಟಕವು ಉತ್ತರ– ದಕ್ಷಿಣ ಸುಮಾರು ೭೭೦ ಕಿ.ಮೀ. ಚಿಕ್ಕಮಗಳೂರು – ೧, ೦೧೬, ೯೮೦; ಚಿತ್ರದುರ್ಗ ೨, ೧೭೮, ೨೫೨ ಮತ್ತು ಪೂರ್ವ–ಪಶ್ಚಿಮ ಸು. ೪೦೦ ಕಿ.ಮೀ. ಉದ್ದವಿದೆ. ಕರ್ನಾಟಕವು ವಾಯುವ್ಯ ಮತ್ತು ಉತ್ತರ ಭಾಗಗಳಲ್ಲಿ ಮಹಾರಾಷ್ಟ್ರ, ಪೂರ್ವದಲ್ಲಿ ಆಂಧ್ರಪ್ರದೇಶ, ಆಗ್ನೇಯ ಮತ್ತು ದಕ್ಷಿಣಗಳಲ್ಲಿ ತಮಿಳುನಾಡು ಮತ್ತು ನೈಋತ್ಯದಲ್ಲಿ ಕೇರಳಗಳನ್ನು ನೆರೆರಾಜ್ಯಗಳಾಗಿ ಹೊಂದಿದ್ದು, ಪಶ್ಚಿಮ ಭಾಗದಲ್ಲಿ ಅರಬ್ಬೀ ಸಮುದ್ರವಿದೆ. ಅರಬ್ಬೀ ಸಮುದ್ರಕ್ಕೆ ಹೊಂದಿಕೊಂಡಂತೆ ಕರ್ನಾಟಕದ ಕರಾವಳಿಯ ಉದ್ದ ಸುಮಾರು ೩೨೦ ಕಿ. ಮೀ.

**ಜನಸಂಖ್ಯೆ :**

೧, ೯೧, ೭೭೩ ಚ.ಕಿ.ಮೀ. ವಿಸ್ತೀರ್ಣದ ಕರ್ನಾಟಕದ ಜನಸಂಖ್ಯೆಯು ೧೯೯೧ರ ಜನಗಣತಿಯ ತಾತ್ಕಾಲಿಕ ಮಾಹಿತಿಯಂತೆ ೪೪, ೮೦೬, ೪೬೮, ಪುರುಷರು ೨,೨೮, ೪೬, ೬೧೩ ಮತ್ತು ಸ್ತ್ರೀಯರು ೨, ೧೯, ೫೯, ೮೫೫, ನಗರಗಳಲ್ಲಿ ವಾಸಿಸುತ್ತಿರುವವರ ಸಂಖ್ಯೆ ೧, ೩೮, ೫೦, ೭೦೨ (ಪುರುಷರು ೭೧, ೩೬, ೭೫೨, ಸ್ತ್ರೀಯರು ೬೬, ೭೩, ೯೪೩) ಗ್ರಾಮಗಳಲ್ಲಿ ವಾಸಿಸುತ್ತಿರುವವರ

ಸಂಖ್ಯೆ ೩, ೦೬, ೫೫, ೭೬೬, (ಪುರುಷರು ೧, ೫೬, ೬೯, ೮೬೦, ಸ್ತ್ರೀಯರು ೧, ೫೨, ೮೫, ೯೦೯) ನಗರಗಳಲ್ಲಿನ ಅಕ್ಷರಸ್ಥರ ಸಂಖ್ಯೆ ೮೮, ೧೨, ೯೨೭ (ಪುರುಷರು ೫೦, ೫೮, ೬೪೧ ಸ್ತ್ರೀಯರು ೩೭, ೫೪, ೨೮೬) ಗ್ರಾಮಗಳಲ್ಲಿನ ಅಕ್ಷರಸ್ಥರ ಸಂಖ್ಯೆ ೧, ೨೨, ೬೭, ೯೯೩ (ಪುರುಷರು ೩೮, ೨೮, ೧೫೮, ಸ್ತ್ರೀಯರು ೪೪, ೩೯, ೮೩೫)

ಜಿಲ್ಲಾವಾರು ಜನಸಂಖ್ಯೆಯು ಕೆಳಕಂಡಂತಿದೆ – ಬೆಂಗಳೂರು ನಗರ ಜಿಲ್ಲೆ ಸುಮಾರು ೪, ೮೦೭, ೦೧೯, ಬೆಂಗಳೂರು ಗ್ರಾಮಾಂತರ – ೧,೬೬೪, ೩೧೫, ಬೆಳಗಾವಿ –೩೫೨೧, ೪೦೯, ಬಳ್ಳಾರಿ – ೧, ೮೮೬, ೭೧೪; ಬೀದರ್ – ೧, ೨೫೨. ೩೩೩ ಬಿಜಾಪುರ – ೨. ೯೧೮, ೮೨೯. ದಕ್ಷಿಣ ಕನ್ನಡ – ೨, ೬೯೨, ೧೨೩; ಧಾರವಾಡ – ೩, ೪೯೯, ೧೨೫; ಗುಲ್ಬರ್ಗಾ – ೨, ೫೭೪, ೪೮೭, ಹಾಸನ – ೧, ೫೬೬, ೭೨೪; ಕೊಡುಗು – ೪೮೫, ೨೨೯, ೧೨೩, ೧೫೫, ೮೮೫, ರಾಯಚೂರು – ೨, ೩೦೫, ೮೩೨, ಶಿವಮೊಗ್ಗ – ೧, ೯೦೬, ೫೨೩, ತುಮಕೂರು– ೨, ೩೦೧, ೧೩೮, ಮಂಡ್ಯ – ೧, ೬೪೨, ೨೨೦, ಮೈಸೂರು – ೩, ೧೫೫, ೮೨೫ ಮತ್ತು ಉತ್ತರ ಕನ್ನಡ ೧, ೨೧೮, ೩೬೭.

ಇವರಲ್ಲಿ ಅಕ್ಷರಸ್ಥರ ಒಟ್ಟು ಸಂಖ್ಯೆ ಸುಮಾರು ೨೧, ೦೮೦, ೯೨೦ ಅಕ್ಷರಸ್ಥ ಪುರುಷರು ೧೨, ೮೮೬, ೭೯೯ ರಷ್ಟಿದ್ದರೆ ೮, ೧೯೪, ೧೨೧ ರಷ್ಟು ಮಹಿಳೆಯರಿದ್ದಾರೆ. ಮಹಿಳಾ ಸಾಕ್ಷರತೆಯು ದಕ್ಷಿಣ ಕನ್ನಡ, ಕೊಡಗು, ಉತ್ತರ ಕನ್ನಡ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.

**ಮೇಲ್ಮೈ ಲಕ್ಷಣ :**

ಭಾರತ ದಖ್ಖನ್ ಪ್ರಸ್ಥಭೂಮಿಯು ಭೂವೈಜ್ಞಾನಿಕ ಮತ್ತು ಭೌಗೋಳಿಕ ಅಂಶಗಳಿಂದ ಅತ್ಯಂತ ಪ್ರಾಚೀನ ಭೂಭಾಗವೆಂದು ಪರಿಗಣಿತವಾಗಿದ್ದು, ಕರ್ನಾಟಕದ ಬಹುಪ್ರದೇಶವು ಆ ಭಾಗದಲ್ಲೇ ಸೇರಿದೆ. ಪ್ರಸ್ಥ ಭೂಮಿಯ ಎರಡೂ ಅಂಚುಗಳಲ್ಲಿ ಪರ್ವತ ಶ್ರೇಣಿಗಳಿದ್ದು, ಅವುಗಳನ್ನು ಪಶ್ಚಿಮ ಘಟ್ಟಗಳು ಮತ್ತು ಪೂರ್ವಘಟ್ಟಗಳು ಎಂದು ಹೆಸರಿಸಲಾಗಿದೆ. ಈ ಎರಡೂ ಘಟ್ಟ ಶ್ರೇಣಿಗಳು ಕರ್ನಾಟಕದ ದಕ್ಷಿಣದಲ್ಲಿರುವ ನೀಲಗಿರಿಯ ಬಳಿ ಸಂಧಿಸುತ್ತವೆ. ಪೂರ್ವಘಟ್ಟಗಳಿಗಿಂತಲೂ ಪಶ್ಚಿಮ ಘಟ್ಟಗಳು ಎತ್ತರ ಹಾಗೂ ಕಡಿದಾದುವು. ಸಹ್ಯಾದ್ರಿ ಪರ್ವತ ಶ್ರೇಣಿ ಎಂದೂ ಕರೆಯಲ್ಪಡುವ ಪಶ್ಚಿಮ ಘಟ್ಟಗಳು ಉತ್ತರದಿಂದ ದಕ್ಷಿಣಕ್ಕೆ ಹರಡಿದ್ದು ಎತ್ತರವೂ ಉತ್ತರದಿಂದ ದಕ್ಷಿಣಕ್ಕೆ ವಿಸ್ತರಿಸುತ್ತಾ ಹೆಚ್ಚಾಗುತ್ತದೆ...

ಈ ಶ್ರೇಣಿಯಲ್ಲಿ ಕರ್ನಾಟಕದಲ್ಲಿರುವ ಚಂದ್ರದ್ರೋಣ ಪರ್ವತ ಅಥವಾ ಬಾಬಾಬುಡನ್‌ಗಿರಿ ಶಾಖೆಯ ಮುಳ್ಳಯ್ಯನಗಿರಿ ಮತ್ತು ಕುದುರೆಮುಖ ಪರ್ವತಗಳು

ಅತ್ಯಂತ ಎತ್ತರವಾದವು. ಕುದುರೆಮುಖದ ಎತ್ತರ ೧೨೪೪.೪ ಮೀಟರ್. ಈ ಶ್ರೇಣಿಯ ಇನ್ನೂ ಹಲವು ಪರ್ವತಗಳೆಂದರೆ ಕೊಡಚಾದ್ರಿ (೧೩೪೪ ಮೀ.) ಮತ್ತು ಪುಷ್ಪಗಿರಿ (೧೭೧೩ ಮೀ.) ಸಹ್ಯಾದ್ರಿ ಶ್ರೇಣಿಯು ಪಶ್ಚಿಮದಲ್ಲಿ ಕಡಿದಾಗಿದೆ. ಈ ಶ್ರೇಣಿಯಲ್ಲಿರುವ ಕೊಲ್ಲೂರುಘಾಟ್, ಆಗುಂಬೆ ಘಾಟ್ ಮತ್ತು ಚಾರ್ಮಾಡಿ ಘಾಟ್‌ಗಳು ಬಯಲು ಸೀಮೆ ಮತ್ತು ಕರಾವಳಿಯ ನಡುವಿನ ಸಂಪರ್ಕ ಮಾರ್ಗಗಳಾಗಿವೆ. ಈಶಾನ್ಯದಿಂದ ನೈಋತ್ಯಕ್ಕೆ ಹಬ್ಬುವ ಪೂರ್ವಘಟ್ಟಗಳು ಹೆಚ್ಚಾಗಿ ಗೋಚರವಾಗುವುದು ಕೋಲಾರದ ಬಳಿ–ಪೂರ್ವಘಟ್ಟಗಳು ಪಶ್ಚಿಮ ಘಟ್ಟಗಳಿಗಿಂತ ತಗ್ಗಾಗಿದ್ದು, ಈ ಶ್ರೇಣಿಯು ಅಲ್ಲಲ್ಲಿ ಕಡಿದುಕೊಂಡಂತೆ ಕಾಣತ್ತದೆ. ಅಲ್ಲಲ್ಲಿ ಒಂದೊಂದು ಬೆಟ್ಟಗಳು ಕಾಣುತ್ತದೆ.

ಕರ್ನಾಟಕವನ್ನು ಮೇಲ್ಮೈ ಲಕ್ಷಣಗಳಿಗನುಗುಣವಾಗಿ ಮೂರು ಭಾಗಗಳನ್ನಾಗಿ ವರ್ಗೀಕರಿಸಲಾಗಿದೆ. ಅವುಗಳೆಂದರೆ – ೧ ಬಯಲು ಸೀಮೆ ಅಥವಾ ಮೈದಾನ ಪ್ರದೇಶ. ೨. ಮಲೆನಾಡು ಮತ್ತು ೩. ಕರಾವಳಿ.

ಬಯಲುಸೀಮೆಯನ್ನು ಉತ್ತರದ ಮೈದಾನ ಮತ್ತು ದಕ್ಷಿಣದ ಮೈದಾನ ಎಂದು ಗುರುತಿಸಲಾಗಿದೆ. ದಕ್ಷಿಣದ ಪ್ರದೇಶವು ಪರ್ಯಾಯ ದ್ವೀಪದ ಅತಿ ಎತ್ತರದ ಭೂಭಾಗವಾಗಿದೆ. – ಬಯಲು ಸೀಮೆಯನ್ನು ತುಂಗಭದ್ರಾ ನದಿಯು ಪ್ರತ್ಯೇಕಿಸಿದೆ. – ತುಂಗಭದ್ರೆಯ ಉತ್ತರಕ್ಕಿರುವ ಮೈದಾನ ಪ್ರದೇಶವು ಕಲ್ಲುಮಣ್ಣನ್ನು ಹೊಂದಿದ್ದು, ಆ ಭಾಗದ ಅತ್ಯಂತ ಹೆಚ್ಚಿನ ಎತ್ತರವು ಸಮುದ್ರಮಟ್ಟದಿಂದ ಸುಮಾರು ೬೦೦ ಮೀಟರುಗಳಷ್ಟು – ಈ ಭಾಗದಲ್ಲಿ ಅಲ್ಲಲ್ಲಿ ಬೋಳು ಬೆಟ್ಟಗಳನ್ನು ಕಾಣಬಹುದು. ದಕ್ಷಿಣಭಾಗದ ಮೈದಾನ ಪ್ರದೇಶವು ಕೆಲವೆಡೆಗಳಲ್ಲಿ ಸಮುದ್ರಮಟ್ಟದಿಂದ ಸುಮಾರು ೧೦೮೦ ರಿಂದ ೧೮೦ ಮೀ. ಎತ್ತರದಲ್ಲಿದ್ದು, ಇಲ್ಲಿನ ಮಣ್ಣು ಕಂದು ಬಣ್ಣದ್ದಾಗಿದೆ. ಇಲ್ಲಿಯೂ ಅಲ್ಲಲ್ಲಿ ಪರ್ವತಗಳನ್ನು ಕಾಣಬಹುದು. ಆದರೆ ಇವುಗಳು ಅರಣ್ಯಗಳಿಗೂ ಆಶ್ರಯವಾಗಿದೆ ಉತ್ತರ ಮತ್ತು ದಕ್ಷಿಣ ಮೈದಾನಗಳೆರಡರಲ್ಲೂ ಹಲವಾರು ನದಿಗಳು ಹರಿಯುತ್ತವೆ. ಇವುಗಳಲ್ಲಿ ಉತ್ತರದ ನದಿಗಳ ಸಂಖ್ಯೆಯೇ ಹೆಚ್ಚು. ಅಲ್ಲದೆ ಅವುಗಳ ಪಾತ್ರದ ಉದ್ದ ಸಹಜವಾಗಿಯೇ ಹೆಚ್ಚು ಮತ್ತು ಇವುಗಳೆಲ್ಲವೂ ವ್ಯವಸಾಯೋಪಯೋಗಿಗಳು. ದಕ್ಷಿಣದ ನದಿಗಳ ಸಂಖ್ಯೆ ಕಡಿಮೆ ಇರುವಂತೆಯೇ, ಅವುಗಳ ಪಾತ್ರದ ಹರವು ಮತ್ತು ವಿಸ್ತಾರಗಳೂ ಕಡಿಮೆ. ಇವು ಅಧಿಕವಾಗಿ ಜಲವಿದ್ಯುತ್ ಯೋಜನೆಗೆ ಹೆಚ್ಚು ಉಪಯೋಗಕಾರಿಯಾಗಿವೆ.

ಪಶ್ಚಿಮ ಘಟ್ಟಗಳಿಗೂ ಅರಬ್ಬೀ ಸಮುದ್ರಕ್ಕೂ ನಡುವೆ ಇರುವ ಪ್ರದೇಶವೇ ಕರಾವಳಿ ಅಥವಾ ಸಮುದ್ರತೀರ ಪ್ರದೇಶ. ಇದು ಕಿರಿದಾದ ಪ್ರದೇಶ. ಇದರ ಅಗಲ ೧೦ ರಿಂದ ೬೫ ಕಿ. ಮೀ. ವರೆಗೆ ಮಾತ್ರ. ಕೆಲವೆಡೆಗಳಲ್ಲಿ ಈ ಪ್ರದೇಶದ ಎತ್ತರ ಸುಮಾರು ೧೨೦ ಮೀ. ಅನ್ನೂ ಮೀರುವುದುಂಟು. ಈ ಪ್ರದೇಶವು

ದಕ್ಷಿಣದ ಕಡೆ ಅಗಲವಾಗಿದ್ದು, ಹಲವಡೆ ಪಶ್ಚಿಮ ಘಟ್ಟಗಳ ಭಾಗಗಳಂತೆಯೇ ಇರುವ ಬೆಟ್ಟಗಳು, ಅವುಗಳ ನಡುವಿನ ಕಣಿವೆಗಳು ಗಮನಾರ್ಹವಾಗಿವೆ- ಕರಾವಳಿ ತೀರ ಪ್ರದೇಶದಲ್ಲಿ ಬಹು ಪ್ರಾಚೀನವಾದ ಮತ್ತು ಈಗಲೂ ಪ್ರಾಮುಖ್ಯತೆ ಪಡೆದಿರುವ ಹಲವು ಬಂದರುಗಳಿವೆ. ಅವುಗಳಲ್ಲಿ ಬಹಳ ಮುಖ್ಯವಾದವು ಮಂಗಳೂರು, ಕಾರವಾರ, ಮಲ್ಪೆ ಹಾಗೂ ಭಟ್ಕಳ.

ಕರಾವಳಿ ಪ್ರದೇಶವನ್ನು ಉತ್ತರ ಕರಾವಳಿ ಮತ್ತು ದಕ್ಷಿಣ ಕರಾವಳಿ ಎಂದು ವರ್ಗೀಕರಿಸಿ ಅಧ್ಯಯನ ಮಾಡುವುದುಂಟು. ಉತ್ತರ ಕರ್ನಾಟಕದ ಕರಾವಳಿಯನ್ನು ಉತ್ತರ ಕರಾವಳಿ ಎಂದು ದಕ್ಷಿಣ ಕರ್ನಾಟಕದ ಕರಾವಳಿಯನ್ನು ದಕ್ಷಿಣ ಕರಾವಳಿ ಎಂದು ಗುರುತಿಸಲಾಗಿದೆ. ಉತ್ತರ ಕರಾವಳಿಯಲ್ಲಿ ಕೃಷಿಗೆ ಆದ್ಯತೆಯಿಲ್ಲ.

ಪಶ್ಚಿಮ ಘಟ್ಟಗಳ ಪೂರ್ವಕ್ಕಿರುವ, ಘಟ್ಟಗಳಿಗೇ ಹೊಂದಿಕೊಂಡ ಅರಣ್ಯ ಪ್ರದೇಶವೇ ಮಲೆನಾಡು. ಇದು ಸುಮಾರು ೨ ರಿಂದ ೧೦೮ ಕಿ. ಮೀ. ಅಗಲವಾಗಿದೆ. ಈ ಭಾಗವು ಕರ್ನಾಟಕದ ಶ್ರೀಮಂತಿಕೆಯನ್ನು ಮಾತ್ರವಲ್ಲದೆ ಆಕರ್ಷಣೆಯನ್ನೂ ಹೆಚ್ಚಿಸಿದೆ. ಈ ಭಾಗದ ಅರಣ್ಯ ಸಂಪತ್ತು ಮತ್ತು ಖನಿಜ ಸಂಪತ್ತುಗಳಲ್ಲದ, ಕಾಫಿ ಬೆಳೆ ಕರ್ನಾಟಕಕ್ಕೆ ವರದಾನವಾಗಿದೆ. ಕರ್ನಾಟಕದ ಈ ಭಾಗದಲ್ಲಿ ಅತ್ಯಂತ ಹೆಚ್ಚಿಗೆ ಮಳೆಯಾಗುತ್ತದೆ.

## ವಾಯುಗುಣ :

ಕರ್ನಾಟಕದ ಬಹುತೇಕ ಭಾಗಗಳು ಸಮುದ್ರ ಮಟ್ಟಕ್ಕಿಂತ ಎತ್ತರದಲ್ಲಿರುವುದರಿಂದ ಇಲ್ಲಿ ಹವಾಮಾನದ ವೈಪರೀತ್ಯಗಳು ಗಮನಾರ್ಹವೇನಲ್ಲ; ದಕ್ಷಿಣ ಭಾರತದ ಪ್ರಸ್ಥಭೂಮಿಯು ಭೂಮಧ್ಯರೇಖೆ ಮತ್ತು ಕರ್ಕಾಟಕ ಸಂಕ್ರಾಂತಿ ವೃತ್ತಗಳ ನಡುವೆ ಇರುವುದರಿಂದ ಇದು ಸಹಜವಾಗಿಯೇ ಉಷ್ಣವಲಯಕ್ಕೆ ಸೇರುತ್ತದೆ. ಇಲ್ಲಿನ ಭೂಲಕ್ಷಣದಿಂದಾಗಿ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಇಲ್ಲಿನ ವಾಯುಗುಣದಲ್ಲಿ ಗುರುತಿಸಬಹುದಾಗಿದೆ. ಸಹಜವಾಗಿಯೇ ಎತ್ತರದ ಪ್ರಸ್ಥಭೂಮಿ, ಪೂರ್ವ ಮತ್ತು ಪಶ್ಚಿಮ ಘಟ್ಟಗಳು, ವಿಶೇಷವಾಗಿ ಎತ್ತರದ ಪಶ್ಚಿಮ ಘಟ್ಟಗಳು ಮತ್ತು ಅಧಿಕ ಮಳೆಯಿಂದಾಗಿ ಬೆಳೆದಿರುವ ದಟ್ಟವಾದ ಕಾಡುಗಳು ಕರ್ನಾಟಕದ ವಾಯುಗುಣದ ಮೇಲೆ ಪ್ರಭಾವ ಬೀರುತ್ತವೆ.

ಕರ್ನಾಟಕದಲ್ಲಿ ಪ್ರಮುಖವಾಗಿ ಮೂರು ವರ್ಗದ ಹವಾಮಾನವನ್ನು ಗುರುತಿಸಬಹುದು. ಅವುಗಳೆಂದರೆ ಮಳೆಗಾಲ, ಚಳಿಗಾಲ ಮತ್ತು ಬೇಸಿಗೆ. ಇದರಲ್ಲಿ ಅಧಿಕಪಾಲು ಮಳೆಗಾಲದ್ದೇ ಆಗಿದೆ. ಕರ್ನಾಟಕವು ಈಶಾನ್ಯ ಮಾನ್‌ಸೂನ್ ಮತ್ತು ನೈರುತ್ಯ ಮಾನ್‌ಸೂನ್ ಮಾರುತಗಳೆರಡರಿಂದಲೂ ಮಳೆಯನ್ನು ಪಡೆಯುತ್ತದೆ. ಇವುಗಳನ್ನು ಕ್ರಮವಾಗಿ ಮುಂಗಾರು ಮತ್ತು

ಹಿಂಗಾರು ಎಂದು ಕೃಷಿವಲಯದಲ್ಲಿ ಗುರುತಿಸಲಾಗಿದೆ. ನೈಋತ್ಯ ಮಾನ್ಸೂನ್ ಮಾರುತಗಳಿಂದ ಜೂನ್‌ನಿಂದ ಸೆಪ್ಟಂಬರ್‌ವರೆಗೆ ಮತ್ತು ಈಶಾನ್ಯದ ಮಾನ್ಸೂನ್ ಮಾರುತಗಳಿಂದ ಅಕ್ಟೋಬರ್‌ನಿಂದ ಡಿಸೆಂಬರ್‌ವರೆಗೆ ಮಳೆ ಬೀಳುತ್ತದೆ. ಅರಬ್ಬೀ ಸಮುದ್ರದ ಕಡೆಯಿಂದ ಬೀಸುವ ಈಶಾನ್ಯ ಮಾನ್ಸೂನ್ ಮಾರುತಗಳಿಂದ ಕರ್ನಾಟಕದ ಬಹುಭಾಗ ಮಳೆಯನ್ನು ಪಡೆಯುತ್ತದೆ. ದಕ್ಷಿಣ ಕನ್ನಡ, ಉತ್ತರ ಕನ್ನಡ, ಹಾಸನ, ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು ಮತ್ತು ಬೆಳಗಾಂ ಜಿಲ್ಲೆಗಳಲ್ಲಿ ನೈಋತ್ಯ ಮಾನ್ಸೂನ್ ಮಾರುತಗಳಿಂದ ಅಲ್ಲಿ ಅಧಿಕ ಮಳೆಯಾಗುತ್ತದೆ. ಇದು ಸರಾಸರಿ ೧೫೦೦ ರಿಂದ ೮೦೦೦ ಮಿ. ಮೀ. ಪ್ರಮಾಣದವರೆಗೂ ಇರುತ್ತದೆ. ಇದೇ ಮಾರುತಗಳಿಂದ ಬೀದರ್, ಗುಲ್ಬರ್ಗಾ, ವಿಜಾಪುರ, ಧಾರವಾಡ ಮತ್ತು ಬಳ್ಳಾರಿ ಜಿಲ್ಲೆಗಳೂ ಮಳೆಯನ್ನು ಪಡೆಯುತ್ತವೆ. ಆದರೆ ಇಲ್ಲಿ ಆ ಮಳೆಯ ಪ್ರಮಾಣ ಕಡಿಮೆ. ನೈಋತ್ಯದಿಂದ ಈಶಾನ್ಯಕ್ಕೆ ಚಲಿಸುವ ಈ ಮಳೆಯ ಮಾರುತದಿಂದ ಪಶ್ಚಿಮ ಭಾಗಗಳಲ್ಲಿ ಹೆಚ್ಚು ಮಳೆ ಬಿದ್ದು, ಕ್ರಮೇಣ ಕಡಿಮೆಯಾಗುತ್ತಾ ಪೂರ್ವ ಭಾಗದಲ್ಲಿ ಮಳೆ ಕಡಿಮೆಯಾಗುವುದು ಸ್ವಾಭಾವಿಕ. ನೈಋತ್ಯ ಮಾನ್ಸೂನ್ ಮಾರುತಗಳ ಮಳೆಗಾಲದ ಅವಧಿಯಲ್ಲೇ ಕರ್ನಾಟಕವು ಅತ್ಯಧಿಕ ಮಳೆಯನ್ನು ಪಡೆದು, ಮಲೆನಾಡಿನ ಮತ್ತು ಪಶ್ಚಿಮ ಘಟ್ಟಪ್ರದೇಶದ ಹಲವು ಸ್ಥಳಗಳಲ್ಲಿ ಈ ಪ್ರಮಾಣ ಗರಿಷ್ಟ ಮಟ್ಟ ತಲುಪುತ್ತದೆ. ಭಾರತದಲ್ಲಿ ಅತ್ಯಧಿಕ ಮಳೆ ಬೀಳುವ ೧೪ ಸ್ಥಳಗಳಲ್ಲಿ, ಕರ್ನಾಟಕದಲ್ಲೇ ೪ ಸ್ಥಳಗಳಿವೆ. ಅವುಗಳೆಂದರೆ ಶಿವಮೊಗ್ಗ ಜಿಲ್ಲೆಯ ಆಗುಂಬೆ, ಕೊಡುಗು ಜಿಲ್ಲೆಯ ಭಾಗಮಂಡಲ, ಪುಲ್ಲಿಂಗೋತ್ ಮತ್ತು ಮಾಕುಟ್. ಆಗುಂಬೆಯನ್ನು ದಕ್ಷಿಣದ ಚಿರಾಪುಂಜಿಯೆಂದೇ ಪರಿಗಣಿಸಲಾಗಿದೆ. ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಉ. ಕನ್ನಡ, ದ. ಕನ್ನಡ, ಬೆಳಗಾಂ ಜಿಲ್ಲೆಗಳಲ್ಲಿ ಸರಾಸರಿ ವಾರ್ಷಿಕ ಮಳೆಯ ಪ್ರಮಾಣ ೩೭೫೦ ಮಿ. ಮೀ. ಆದರೆ, ಬೆಂಗಳೂರು ಕೋಲಾರ್, ಮಂಡ್ಯ ಮತ್ತು ಮೈಸೂರು ಜಿಲ್ಲೆಗಳಲ್ಲಿ ಈ ಪ್ರಮಾಣ ಸರಾಸರಿ ಸುಮಾರು ೭೫೦ ಮಿ. ಮೀ. ಗಳಷ್ಟು. ಚಿತ್ರದುರ್ಗ, ಬೀದರ್ ಗುಲ್ಬರ್ಗಾ ರಾಯಚೂರು, ವಿಜಾಪುರ, ಬಳ್ಳಾರಿ, ಧಾರವಾಡ ಮತ್ತು ತುಮಕೂರು ಜಿಲ್ಲೆಗಳಲ್ಲಿ ಮಳೆಯ ಪ್ರಮಾಣ ವಾರ್ಷಿಕ ಸರಾಸರಿ ಸುಮಾರು ೬೨೫ ಮಿ. ಮೀ. ಗಳಷ್ಟು. ಕೆಲವು ಜಿಲ್ಲೆಗಳಲ್ಲಿ, ವಿಶೇಷವಾಗಿ ರಾಯಚೂರು, ತುಮಕೂರು, ಬಳ್ಳಾರಿ ಜಿಲ್ಲೆಗಳಲ್ಲಿ ಈ ಪ್ರಮಾಣ ಕೆಲವು ಬಾರಿ ಮತ್ತಷ್ಟು ಕುಸಿಯುತ್ತದೆ.

ಜೂನ್‌ನಲ್ಲಿ ಆರಂಭವಾಗುವ ಮುಂಗಾರು ಮಳೆಯು ಜುಲೈ ತಿಂಗಳಿನಲ್ಲಿ ಪರಮಾವಧಿ ಮಟ್ಟವನ್ನು ತಲುಪಿ, ಕ್ರಮೇಣ ಕಡಿಮೆಯಾಗುತ್ತಾ ಅಕ್ಟೋಬರ್ ಹೊತ್ತಿಗೆ ನಿಲ್ಲುತ್ತದೆ. ಸೆಪ್ಟಂಬರ್‌ನಲ್ಲಿ ಆರಂಭವಾಗುವ ಹಿಂಗಾರು ಮಳೆಯು ಅಕ್ಟೋಬರ್ ಅಂತ್ಯಕ್ಕೆ ಮುಗಿಯುತ್ತದೆ. ನವೆಂಬರ್‌ನಿಂದ ಫೆಬ್ರವರಿಯವರೆಗೆ ಚಳಿಗಾಲ ಎಂದು ಪರಿಗಣಿತವಾಗಿದ್ದು, ಡಿಸೆಂಬರ್ ತಿಂಗಳಿನಲ್ಲಿ ಚಳಿಯು

ಅಧಿಕವಾಗಿರುತ್ತದೆ. ಮಾರ್ಚಿನಿಂದ ಜೂನ್ ಪೂರ್ಣವಾಗಿ ಕರ್ನಾಟಕದಲ್ಲಿ ಬೇಸಿಗೆಯ ಕಾಲ. ಇದು ಉತ್ತರದ ಮೈದಾನ ಪ್ರದೇಶದಲ್ಲಿ ಪ್ರಖರವಾಗಿರುತ್ತದೆ. ದಕ್ಷಿಣದ ಮೈದಾನ ಪ್ರದೇಶದಲ್ಲಿ ಬೇಸಿಗೆಯಲ್ಲಿ ಉಷ್ಣತೆಯು ೩೫ ರಿಂದ ೩೭ ಸೆಲ್ಸಿಯರ್ಸ್ ತಲುಪಿದರೆ, ರಾಯಚೂರು, ಗುಲ್ಬರ್ಗಾ ಜಿಲ್ಲೆಗಳಲ್ಲಿ ಇದು ೪೨° ಸೆಲ್ಸಿಯರ್ಸ್ ತಲುಪುತ್ತದೆ.

ಚಳಿಗಾಲದಲ್ಲಿ ಕರಾವಳಿಯ ಪ್ರದೇಶಗಳಲ್ಲಿ ಉಷ್ಣತೆಯು ೧೦ ರಿಂದ ೧೧° ಸೆಲ್ಸಿಯರ್ಸ್ ವರೆಗ ಕುಸಿಯುತ್ತದೆ. ಇದರ ಅನುಭವನ್ನು ಕೊಡಗಿನ ಮಡಿಕೇರಿಯಲ್ಲಿ ಕಾಣಬಹುದು.

## ಅರಣ್ಯ ಸಂಪತ್ತು :

ಮಳೆ ಮತ್ತು ವಾಯುಗುಣದ ಪ್ರಭಾವವು ಯಾವುದೇ ಭೂ ಭಾಗದ ಸಸ್ಯ ಸಂಪತ್ತಿನ ಮೇಲೆಯೂ ಆಗುವುದು ಸಹಜ. ಯಾವುದೇ ಪ್ರದೇಶದ ಅಭಿವೃದ್ಧಿಗೆ ಅಲ್ಲಿನ ಸಸ್ಯ ಸಂಪತ್ತು, ವಿಶೇಷವಾಗಿ ಅರಣ್ಯ ಸಂಪತ್ತು ನೆರವಾಗುತ್ತದೆ.

ಕರ್ನಾಟಕದ ಅರಣ್ಯ ಸಂಪತ್ತು ವಿಶೇಷ ಮಹತ್ವ ಪಡೆದಿದೆ. ಇದು ರಾಜ್ಯದ ಬೆಳವಣಿಗೆಗೆ ಸಹಕಾರಿಯೂ ಆಗಿದೆ. ಕರ್ನಾಟಕದ ಕಾಡುಗಳನ್ನು ಪ್ರಮುಖವಾಗಿ 5 ವರ್ಗಗಳನ್ನಾಗಿ ವಿಂಗಡಿಸಲಾಗಿದೆ.

1) ಉಷ್ಣವಲಯದ ನಿತ್ಯಹರಿದ್ವರ್ಣದ ಕಾಡುಗಳು

2) ಉಷ್ಣವಲಯದ ಆಂಶಿಕ ನಿತ್ಯ ಹರಿದ್ವರ್ಣದ ಕಾಡುಗಳು

3) ಬೇಸಿಗೆಯಲ್ಲಿ ಎಲೆ ಉದುರುವ ಕಾಡುಗಳು

4) ಮೈದಾನ ಪ್ರದೇಶದ ಒಣಕಾಡು

5) ಕುರುಚಲು ಕಾಡು

ಮಳೆಯ ಪ್ರಮಾಣವು ವಾರ್ಷಿಕ ಸರಾಸರಿ ೩೦೦೦ ದಿಂದ ೬೦೦೦ ದವರೆಗೆ ಇರುವ ಉ. ಕನ್ನಡ, ದ. ಕನ್ನಡ, ಶಿವಮೊಗ್ಗ, ಹಾಸನ, ಚಿಕ್ಕಮಗಳೂರು, ಕೊಡಗು ಜಿಲ್ಲೆಗಳ ಕೆಲವು ಭಾಗಗಳಲ್ಲಿ ಅತಿ ಎತ್ತರಕ್ಕೆ ಬೆಳೆಯುವ ನಾಗಸಂಪಿಗೆ, ಹಲಸು, ಹಿಪ್ಪೆ, ನೇರಳೆ ಮುಂತಾದ ಮರಗಳನ್ನುಳ್ಳ ದಟ್ಟವಾದ ಕಾಡುಗಳಿದ್ದು, ಈ ಕಾಡುಗಳನ್ನು ಉಷ್ಣವಲಯದ ನಿತ್ಯ ಹರಿದ್ವರ್ಣದ ಕಾಡುಗಳು ಎಂದು ಪರಿಗಣಿಸಲಾಗಿದೆ.

ಉ. ಕನ್ನಡ, ದ. ಕನ್ನಡ, ಕೊಡಗು, ಶಿವಮೊಗ್ಗ, ಬೆಳಗಾಂ ಜಿಲ್ಲೆಯ ಕೆಲವು ಭಾಗಗಳಲ್ಲಿ ಮಳೆಯ ಪ್ರಮಾಣ ಸುಮಾರು ೨೦೦೦ ದಿಂದ ೩೦೦೦ ಮಿ. ಮೀ. ಇದ್ದು, ಅಂತಹ ಭಾಗಗಳಲ್ಲಿರುವ ಕಾಡುಗಳನ್ನು ಉಷ್ಣವಲಯದ ಆಂಶಿಕ

ನಿತ್ಯ ಹರಿದ್ವರ್ಣದ ಕಾಡುಗಳು ಎಂದು ವರ್ಗೀಕರಿಸಲಾಗಿದೆ. ಇದು ಕರ್ನಾಟಕದ ಶ್ರೀಮಂತ ಅರಣ್ಯ ಪ್ರದೇಶವಾಗಿದೆ. ಈ ಕಾಡುಗಳಲ್ಲಿ ನಂದಿ, ಹಲಸು, ಮಾವು, ಬಿಟೆ, ತೇಗ – ಇತ್ಯಾದಿ ಮರಗಳು ದಟ್ಟವಾಗಿವೆ.

ಸುಮಾರು ೧೫೦೦ ರಿಂದ ೨೦೦೦ ಮಿ. ಮೀ. ಮಳೆ ಬೀಳುವ ಮೈಸೂರು, ಚಿಕ್ಕಮಗಳೂರು, ಹಾಸನ ಮತ್ತು ಶಿಮೊಗ್ಗ ಜಿಲ್ಲೆಗಳ ಕೆಲವು ಭಾಗಗಳಲ್ಲಿ ತೇಗ, ಮತ್ತಿ, ನಂದಿ, ಹೊನ್ನೆ, ಬೀಟೆ ಇತ್ಯಾದಿ ಮರಗಳು ಇರುವ ಕಾಡು ಅಧಿಕವಾಗಿದ್ದು, ಅವುಗಳ ಎಲೆಗಳು ಬೇಸಿಗೆಯಲ್ಲಿ ಉದುರುವುದರಿಂದ, ಈ ಕಾಡುಗಳನ್ನು ಬೇಸಿಗೆಯಲ್ಲಿ ಎಲೆಯುದುರುವ ಕಾಡುಗಳು ಎಂದು ಕರೆಯಲಾಗಿದೆ. ಇದು ಕರ್ನಾಟಕದ ಅತ್ಯಂತ ಶ್ರೀಮಂತ ಅರಣ್ಯ ವಲಯವಾಗಿದೆ.

ಮೈದಾನ ಪ್ರದೇಶದ ಒಣಕಾಡು ದಕ್ಷಿಣ ಬಯಲು ಸೀಮೆಯ ಪೂರ್ವ ಮತ್ತು ಪಶ್ಚಿಮ ಘಟ್ಟಗಳ ಅಂಚಿನಲ್ಲಿ ಕಂಡುಬರುತ್ತದೆ. ಈ ಭಾಗದಲ್ಲಿ ಮಳೆಯ ಪ್ರಮಾಣ ಸುಮಾರು ೩೫೦ ರಿಂದ ೧೫೦೦ ಮಿ. ಮೀ. ಇದ್ದು.. ತೇಗ, ಹೊನ್ನೆ, ನಂದಿ, ಮತ್ತಿ, ಶ್ರೀಗಂಧ, ಇತ್ಯಾದಿ ಮರಗಳು ಹೆಚ್ಚಾಗಿವೆ. ಮೈಸೂರು ಮತ್ತು ಕೊಡಗು ಜಿಲ್ಲೆಗಳಲ್ಲಿ ಈ ಕಾಡುಗಳನ್ನು ಕಾಣಬಹುದು.

ಚಿತ್ರದುರ್ಗ, ಗುಲ್ಬರ್ಗಾ, ಬಳ್ಳಾರಿ, ರಾಯಚೂರು, ಇತ್ಯಾದಿ ಜಿಲ್ಲೆಗಳಲ್ಲಿ ಮಳೆಯ ಪ್ರಮಾಣವು ಕಡಿಮೆಯಿದ್ದು, ಈ ಪ್ರದೇಶದಲ್ಲಿ ಕುರುಚಲು ಕಾಡುಗಳಿವೆ.

ಕರ್ನಾಟಕದ ಒಟ್ಟು ೧, ೯೧, ೭೭೩ ಚ. ಕಿ.ಮೀ. ಪ್ರದೇಶದಲ್ಲಿ ಅರಣ್ಯ ಪ್ರದೇಶವು ೩೮, ೭೭೪ ಚ. ಕಿ.ಮೀ, ಅಂದರೆ ಒಟ್ಟು ವಿಸ್ತೀರ್ಣದ ಶೇಕಡ ೨೦.೧೬ ರಷ್ಟಿದೆ. ಇದರಲ್ಲಿ ಶೇಕಡ ೨೦ ರಷ್ಟು ಭೂಮಿಯು ರಾಜ್ಯದ ಅರಣ್ಯ ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿದೆ. ಈ ಪ್ರದೇಶವನ್ನು ಮೀಸಲು ಅರಣ್ಯ, ಸಂರಕ್ಷಿತ ಅರಣ್ಯ, ವರ್ಗೀಕರಿಸಿದ ಅರಣ್ಯ, ಗ್ರಾಮಾಂತರ ಅರಣ್ಯ ಮತ್ತು ಖಾಸಗಿ ಅರಣ್ಯವೆಂದು ಗುರುತಿಸಲಾಗಿದೆ. ಕರ್ನಾಟಕದ ಒಟ್ಟು ಭೂಪ್ರದೇಶದಲ್ಲಿ ಉತ್ತರ ಕನ್ನಡ ಜಿಲ್ಲೆಯ ಪಾಲೇ ಅಧಿಕವಾದುದು. (೮೨೯೨ ಚಿ. ಕಿ.ಮೀ) ನಂತರದ ಸ್ಥಾನಗಳನ್ನು ಕ್ರಮವಾಗಿ ದಕ್ಷಿಣ ಕನ್ನಡ (೫೧೮೨ ಚ. ಕಿ. ಮೀ.) ಮೈಸೂರು (೪೧೩೦ ಚ.ಕಿ.ಮೀ) ಶಿವಮೊಗ್ಗ (೩೨೭೦ ಚಂ. ಕಿ.ಮೀ) ಕೊಡಗು (೧೨೬೦ ಚ. ಕಿ.ಮೀ) ಜಿಲ್ಲೆಗಳು ಪಡೆದಿವೆ.

೧೯೫೬ ರಿಂದ ೧೯೮೬–೮೭ ರ ವರೆಗೆ ಜಲವಿದ್ಯುತ್ ಯೋಜನೆಗಳು, ವಿದ್ಯುದ್ಮಾರ್ಗಗಳು, ರಸ್ತೆಗಳು, ಕೆರೆಗಳು, ವಸತಿ ಯೋಜನೆಗಳು, ಗಣಿ, ವ್ಯವಸಾಯ, ಮರುವಸತಿ ಮತಿತ್ತರ ಕಾರಣಗಳಿಂದಾಗಿ ೨೦೩೯೧೩ ಹೆಕ್ಟೇರ್ ಅರಣ್ಯ ಪ್ರದೇಶದ ಬಳಕೆಯಾಗಿದೆ.

ಕರ್ನಾಟಕ ರಾಜ್ಯದಲ್ಲಿ ಅರಣ್ಯ ವರ್ಧನೆಗೆ ಹೆಚ್ಚಿನ ಗಮನ ನೀಡಲಾಗಿದ್ದು,

ಈ ನಿಟ್ಟಿನಲ್ಲಿ ಅರಣ್ಯ ಇಲಾಖೆಯು ತೀವ್ರ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಮೈದಾನ ಪ್ರದೇಶದಲ್ಲೂ ಅರಣ್ಯವರ್ಧನೆಗೆ ಪ್ರಯತ್ನಗಳು ನಡೆದಿವೆ.

ಕರ್ನಾಟಕ ರಾಜ್ಯ ಹಲವಾರು ಸ್ಥಳಗಳಲ್ಲಿ ನ್ಯಾಷನಲ್ ಪಾರ್ಕ್, ವನ್ಯ ಪ್ರಾಣಿಧಾಮ ಮತ್ತು ಪಕ್ಷಿಧಾಮಗಳಿವೆ. ಅವುಗಳಲ್ಲಿ ಪ್ರಮುಖವಾದವು ಕೆಳಕಂಡತಿವೆ.

ಮೈಸೂರು ಜಿಲ್ಲೆಯ ರಂಗನತಿಟ್ಟು ಮತ್ತು ಅರಾಬಿತಿಟ್ಟು ಪಕ್ಷಿದಾಮಗಳು, ಕಾವೇರಿ ಮತ್ತು ನುಗು ವನ್ಯ ಪ್ರಾಣಿಧಾಮ, ಬಿಳಿಗಿರಿ ರಂಗನ ಬೆಟ್ಟ ಅರಣ್ಯಧಾಮ, ನಾಗರಹೊಳೆ ಮತ್ತು ಬಂಡೀಪುರ ನ್ಯಾಷನಲ್ ಪಾರ್ಕ್, ಮಡಿಕೇರಿ ಜಿಲ್ಲೆಯ ಬ್ರಹ್ಮಗಿರಿ, ಪುಷ್ಪಗಿರಿ ಮತ್ತು ತಲಕಾವೇರಿ ವನ್ಯ ಪ್ರಾಣಿ ಧಾಮಗಳು, ಮಂಡ್ಯ ಜಿಲ್ಲೆಯ ಮೇಲುಕೋಟೆ ದೇವಾಲಯದ ಪಕ್ಷಿಧಾಮ, ಆದಿಚುಂಚನಗಿರಿ ನವಿಲುಧಾಮ, ದಕ್ಷಿಣಕನ್ನಡ ಜಿಲ್ಲೆಯ ಸೋಮೇಶ್ವರ ಮತ್ತು ಮೂಕಾಂಬಿಕಾ ವನ್ಯ ಪ್ರಾಣಿ ಧಾಮ ಶಿವಮೊಗ ಜಿಲ್ಲೆಯ ಶರಾವತಿ ಕಣಿವೆ ಮತ್ತು ಸೆರಿಟಹಳ್ಳಿ ವನ್ಯ ಪ್ರಾಣಿಧಾಮ, ಚಿಕ್ಕಮಗಳೂರು ಜಿಲ್ಲೆಯ ಭದ್ರಾ ಪಕ್ಷಿಧಾಮ ಮತ್ತು ಕುದುರೆಮುಖ ನ್ಯಾಷನಲ್‌ಪಾರ್ಕ್, ಧಾರವಾಡ ಜಿಲ್ಲೆಯ ರಾಣಿಬೆನ್ನೂರು ಬ್ಲಾಕ್‌ಟಕ್ ಪಕ್ಷಿಧಾಮ, ಉತ್ತರ ಕನ್ನಡ ಜಿಲ್ಲೆಯ ಧಾಂಡೇಲಿ ವನ್ಯ ಪ್ರಾಣಿಧಾಮ ಮತ್ತು ಅಂಶಿ ನ್ಯಾಷನಲ್ ಪಾರ್ಕ್, ಬೆಳಗಾಂ ಜಿಲ್ಲೆಯ ಘಟಪ್ರಭ ಪಕ್ಷಿಧಾಮ, ಬೆಂಗಳೂರು ಜಿಲ್ಲೆಯ ಬನ್ನೇರುಘಟ್ಟ ನ್ಯಾಷನಲ್ ಪಾರ್ಕ್ ಬಹಳ ಮುಖ್ಯವಾದವುಗಳು.

ಈ ಅರಣ್ಯಗಳಲ್ಲಿ ಹುಲಿ, ಚಿರತೆ, ಆನೆ ಮತ್ತು ಕಾಡೆಮ್ಮೆಗಳು ಬಹಳ ಪ್ರಮುಖವಾದ ವನ್ಯ ಪ್ರಾಣಿಗಳಾಗಿದ್ದು, ಜೊತೆಗೆ ವಾನರ ವರ್ಗದ ಸಿಂಗಲೀಕ, ಮುಸುವ, ಲಂಗೂರ್, ಕಿರುಬ, ತೋಳ, ಕರಡಿ, ಜಿಂಕೆ, ಕಾಡುಹಂದಿ, ನರಿ ಇತ್ಯಾದಿ ಪ್ರಾಣಿಗಳು ಅಲ್ಪ ಪ್ರಮಾಣದಲ್ಲಿದೆ.

## ಖನಿಜ ಸಂಪತ್ತು :

ಅರಣ್ಯ ಸಂಪತ್ತಿನಲ್ಲಿ ಶ್ರೀಮಂತವಾಗಿರುವಂತೆಯೇ ಕರ್ನಾಟಕವು ಖನಿಜ ಸಂಪತ್ತಿನಲ್ಲಿಯೂ ಶ್ರೀಮಂತವಾಗಿದೆ. ಭಾರತದ ಮತ್ತಾವುದೇ ರಾಜ್ಯಕ್ಕಿಂತಲೂ ಮೊದಲು ಕರ್ನಾಟಕದಲ್ಲಿ ಭೂಶೋಧನಾ ಇಲಾಖೆಯು ೧೮೯೪ ರಲ್ಲೇ ಸ್ಥಾಪಿತವಾಗಿದೆ. ಚಿನ್ನ, ಕಬ್ಬಿಣ, ತಾಮ್ರ, ಮ್ಯಾಂಗನೀಸ್, ಕ್ರೋಮೈಟ್, ಬಾಕ್ಸೈಟ್, ಇತ್ಯಾದಿ ಖನಿಜಗಳು ಕರ್ನಾಟಕದ ಭೂಗರ್ಭದಲ್ಲಿ ಸಮೃದ್ಧವಾಗಿವೆ.

ಭಾರತದಲ್ಲಿ ಚಿನ್ನದ ಉತ್ಪತ್ತಿ ಇರುವ ರಾಜ್ಯ ಕರ್ನಾಟಕ ಮಾತ್ರ ಎಂಬುದು ಹೆಮ್ಮೆಯ ವಿಷಯ. ಇಲ್ಲಿಯ ಕೋಲಾರ ಚಿನ್ನದ ಗಣಿಯು ಕ್ರಿ.ಪೂ. ೨೦೦೦ ದಷ್ಟು, ಸುಮಾರು ೪೦೦೦ ವರ್ಷಗಳಷ್ಟು ಪ್ರಾಚೀನವಾದುದು ಎಂದು ಹಲವಾರು ಇತಿಹಾಸ ತಜ್ಞರ ಅಭಿಪ್ರಾಯವಾಗಿದೆ. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ

ಸುವ್ಯವಸ್ಥಿತವಾಗಿ ಕಾರ್ಯಾರಂಭ ಮಾಡಿದ ಕೋಲಾರದ ಚಿನ್ನದ ಗಣಿಗಳು ಅತ್ಯಂತ ಆಳವಾಗಿವೆ. ಕೆಲವು ವರ್ಷಗಳ ಹಿಂದೆ ೨೨೦೦ ಕಿ. ಗ್ರಾಂ ಗೂ ಹೆಚ್ಚು ವಾರ್ಷಿಕ ಉತ್ಪನ್ನವಿದ್ದ ಕೋಲಾರ ಚಿನ್ನದ ಗಣಿಯಲ್ಲಿ ಈಗ ವಾರ್ಷಿಕ ಉತ್ಪನ್ನವು ಪ್ರತಿವರ್ಷ ಇಳಿಮುಖವಾಗಿದ್ದು, ಕೇಂದ್ರ ಸರ್ಕಾರವು ಈ ಗಣಿಯನ್ನು ಮುಚ್ಚುವ ಸನ್ನಾಹದಲ್ಲಿದೆ. ಇಲ್ಲಿನ ಚಿನ್ನದ ನಿಕ್ಷೇಪದ ಸಾಮರ್ಥ್ಯ ಇನ್ನು ಮುಂದೆ ಉತ್ತೇಜನಕಾರಿಯಾಗಿಲ್ಲ ಎಂದು ನಿರ್ಧರಿಸಲಾಗಿದೆ. ಆದರೆ ಈವರೆಗೆ ಭಾರತ ಚಿನ್ನದ ಉತ್ಪಾದನೆಯು, ಪ್ರಪಂಚದಲ್ಲೇ ಮಹತ್ವದ ಸ್ಥಾನಗಳಿಸಲು ಕೋಲಾರ ಚಿನ್ನದ ಗಣಿಗಳೇ ಕಾರಣ ಎಂಬುದು ನಿರ್ವಿವಾದ. ಕರ್ನಾಟಕದ ರಾಯಚೂರು ಜಿಲ್ಲೆಯ ಹಟ್ಟಿ ಚಿನ್ನದ ಗಣಿಗಳು ಈಗ ಪ್ರಾಮುಖ್ಯತೆ ಪಡೆದಿವೆ. ವಾರ್ಷಿಕ ಸುಮಾರು ೧೦೦೦ ಕಿ. ಗ್ರಾಂ. ಉತ್ಪಾದನಾ ಸಾಮರ್ಥ್ಯವಿರುವ ಹಟ್ಟಿ ಚಿನ್ನದ ಗಣಿಗಳು ಈಗ ಭಾರತದ ಚಿನ್ನದ ಉತ್ಪಾದನೆಯ ಪ್ರಮುಖ ಕೇಂದ್ರವಾಗಿವೆ. (ಕಳೆದ ನೂರು ವರ್ಷಗಳಲ್ಲಿ ಸುಮಾರು ೮೦೦ ಟನ್‌ಗಳಷ್ಟು ಬಂಗಾರವು ಕೋಲಾರದ ಚಿನ್ನದ ಗಣಿಗಳಿಂದ ಉತ್ಪಾದನೆಯಾಗಿದೆ ಎಂದು ತಿಳಿಯಲಾಗಿದೆ.) ರಾಯಚೂರು ಜಿಲ್ಲೆಯ ವಂದಲಿಯಲ್ಲಿ ಚಿನ್ನದ ನಿಕ್ಷೇಪವನ್ನು ಭೂಗರ್ಭ ವಿಜ್ಞಾನಿಗಳು ಪತ್ತೆ ಹಚ್ಚಿದ್ದಾರೆ. ಕೋಲಾರ ಚಿನ್ನದ ಗಣಿಗಳು ಮತ್ತು ಹಟ್ಟಿಗಣಿಗಳ ಆಸುಪಾಸಿನಲ್ಲಿ ಮತ್ತಷ್ಟು ಚಿನ್ನದ ನಿಕ್ಷೇಪ ಇರಬಹುದೆಂಬ ನಿರೀಕ್ಷೆಯಿಂದ ಭೂಗರ್ಭ ಶಾಸ್ತ್ರಜ್ಞರು ಶೋಧಕಾರ್ಯ ನಡೆಸಿದ್ದಾರೆ. ತುಮಕೂರು, ಮೈಸೂರು, ಚಿತ್ರದುರ್ಗ, ಶಿವಮೊಗ್ಗ, ಹಾಸನ, ಧಾರವಾಡ, ಚಿಕ್ಕಮಗಳೂರು, ರಾಯಚೂರು, ಜೀಲ್ಲೆಗಳಲ್ಲೂ ಹಿಂದೆ ಚಿನ್ನದ ಗಣಿಗಳಿದ್ದುವೆಂದು ತಿಳಿದು ಬಂದಿದೆ. ಸದ್ಯಕ್ಕೆ ಹಟ್ಟಿ ಚಿನ್ನದ ಗಣಿಗಳು ಮಾತ್ರ ಆರ್ಥಿಕವಾಗಿ ಲಾಭದಾಯಕವಾಗಿವೆ. – ಈ ಚಿನ್ನದ ಗಣಿಗಳಲ್ಲೇ ಚಿನ್ನದ ಜೊತೆಗೇ ಗಮನಾರ್ಹ ಪ್ರಮಾಣದಲ್ಲಿ ಬೆಳ್ಳಿಯೂ ದೊರೆತಿದೆ. ಇದರ ಉತ್ಪಾದನೆಯಲ್ಲಿ ಕರ್ನಾಟಕದ ಸ್ಥಾನ ಎರಡನೆಯದು. ಕರ್ನಾಟಕದಲ್ಲಿ ದೊರೆಯುವ ಕಬ್ಬಿಣದ ಅದುರಿನ ಗುಣಮಟ್ಟ ಅತ್ಯುತ್ತಮವಾದುದು ಎಂಬುದು ಸಂಬಂಧಿಸಿದ ತಜ್ಞರ ಅಭಿಮತ. ಭಾರತದ ಕಬ್ಬಿಣದ ಉತ್ಪಾದನಾ ಸಾಮರ್ಥ್ಯದಲ್ಲಿ ಕರ್ನಾಟಕದ ಸ್ಥಾನ ಮೂರನೆಯದು. ಕೆಮ್ಮಣ್ಣುಗುಂಡಿಯಲ್ಲಿ ದೊರೆಯುವ ಕಬ್ಬಿಣದ ಅದುರಿನ ಸಂಸ್ಕರಣ ಕಾರ್ಯ ಭದ್ರಾವತಿಯಲ್ಲಿ ಆರಂಭವಾದದ್ದು ೧೯೨೩ರಲ್ಲಿ. ದಕ್ಷಿಣ ಭಾರತದಲ್ಲಿ ಕಬ್ಬಿಣದ ಕೈಗಾರಿಕೆಗೆ ಇದೇ ಮೊದಲ ಪ್ರಯತ್ನ. ಈಗ ಸುಮಾರು ೩೧ ಲಕ್ಷ ಟನ್‌ಗಳಿಗೂ ಹೆಚ್ಚು ಕಬ್ಬಿಣದ ಉತ್ಪಾದನೆ ಕರ್ನಾಟಕದಲ್ಲಾಗುತ್ತಿದೆ. ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ ಎಂದು ನಾಮಕರಣಗೊಂಡಿರುವ ಭದ್ರಾವತಿಯ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯು ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಯಲ್ಲಿ ಕರ್ನಾಟಕದ ಸ್ಥಾನವನ್ನು ಮೇಲ್ಮಟ್ಟದಲ್ಲಿ ಕಾಪಾಡಿಕೊಂಡು ಬಂದಿದೆ. ಈ ಹಿರಿಮೆಯ ಸ್ಥಾನಕ್ಕೆ ಕುದುರೆಮುಖ ಕಬ್ಬಿಣ ಮತ್ತು ಉಕ್ಕು ಗಣಿಗಳ

ಕೊಡುಗೆಯೂ ಕಳೆದ ಹಲವು ವರ್ಷಗಳಿಂದ ಅಪಾರವಾಗಿಯೇ ಆಗಿದೆ. ಅಯಸ್ಕಾಂತೀಯ ಗುಣವುಳ್ಳ ಕಬ್ಬಿಣದ ಅದುರು ಕದುರೆಮುಖ ಗಣಿಗಳಲ್ಲಿ ಸಿಗುತ್ತಿರುವುದು ವಿಶೇಷವಾಗಿದೆ. ಬಳ್ಳಾರಿ ಜಿಲ್ಲೆಯ ಸಂಡೂರು, ಚಿಕ್ಕಮಗಳೂರು ಜಿಲ್ಲೆಯ ಕುದುರೆಮುಖ, ಶಿವಮೊಗ್ಗ ಜಿಲ್ಲೆಯ ಕೆಮ್ಮಣ್ಣುಗುಂಡಿ–ಚಿತ್ರದುರ್ಗ ಜಿಲ್ಲೆಯ ವಜ್ರಾ, ಕುದುರೆ, ಕಣಿವೆ ಇತ್ಯಾದಿ ಪ್ರದೇಶಗಳಲ್ಲಿ ಕಬ್ಬಿಣದ ಅದುರಿನ ನಿಕ್ಷೇಪ ಹೇರಳವಾಗಿಯೇ ಇರುವುದು ಪತ್ತೆಯಾಗಿದೆ. ಭದ್ರಾವತಿ, ಸಂಡೂರು, ಕುದುರೆಮುಖ– ಇವು ಕಬ್ಬಿಣ ತಯಾರಿಕೆಯಲ್ಲಿ ಕರ್ನಾಟಕದ ಸ್ಥಾನವನ್ನು ಹೆಮ್ಮೆ ಪಡುವ ರೀತಿಯಲ್ಲಿ ಕಾಪಾಡಿವೆ.

ಮ್ಯಾಂಗನೀಸ್‌ನ ಉತ್ಪಾದನೆಯಲ್ಲೂ ಕರ್ನಾಟಕವು ಭಾರತದಲ್ಲಿ ಮೊದಲ ಸ್ಥಾನದಲ್ಲಿದೆ. ತುಮಕೂರು, ಚಿತ್ರದುರ್ಗ, ಬಳ್ಳಾರಿ, ಉ. ಕನ್ನಡ. ಶಿವಮೊಗ್ಗ ಜಿಲ್ಲೆಗಳ ಹಲವೆಡೆಗಳಲ್ಲಿ ಮ್ಯಾಂಗನೀಸ್ ಅದುರನ್ನು ತೆಗೆಯುವ ಕಾರ್ಯ ನಡೆದಿದೆ. ಬಳ್ಳಾರಿ ಜಿಲ್ಲೆಯ ಸಂಡೂರು, ಕುಮಾರು ಸ್ವಾಮಿ, ರಾಮನದುರ್ಗ, ಬೆಟ್ಟಗಳು, ಶಿವಮೊಗ್ಗೆಯ ಕುಂಸಿ, ಶಂಕರ ಗುಡ್ಡ, ತುಪ್ಪೂರು, ತುಮಕೂರು ಜಿಲ್ಲೆಯ ಚಿಕ್ಕನಾಯಕನ ಹಳ್ಳಿ ಇತ್ಯಾದಿ ಸ್ಥಳಗಳಲ್ಲಿ ಮ್ಯಾಂಗನೀಸ್ ಅದುರು ದೊರೆಯುತ್ತಿದ್ದು, ಒಟ್ಟು ವಾರ್ಷಿಕ ಉತ್ಪಾದನೆ ೪.೫ ಲಕ್ಷ ಟನ್‌ಗಳನ್ನು ಮೀರಿದೆ.

ಕಬ್ಬಿಣ ಕೈಗಾರಿಕೆಯಲ್ಲಿ ಮುಖ್ಯವಾಗಿ ಬೇಕಾದ ಕ್ರೋಮೈಟ್ ಅನ್ನು ಹಾಸನ ಜಿಲ್ಲೆಯ ಬೈರಾಪುರ, ಮೈಸೂರು ಜಿಲ್ಲೆಯ ಕಡಕೊಳಗಳಲ್ಲಿ ಪಡೆಯಲಾಗುತ್ತಿದೆ,

ತಾಮ್ರವು ಕರ್ನಾಟಕದಲ್ಲಿ ಇತ್ತೀಚೆಗೆ ಹೆಚ್ಚಾಗಿ ದೊರೆಯುತ್ತಿದೆ. ಚಿತ್ರದುರ್ಗದ ಬಳಿಯ ಇಂಗಳದಾಳು, ಅರಸೀಕೆರೆ ತಾಲೂಕಿನ ಕಲ್ಯಾಡಿಗಳಲ್ಲಿ ತಾಮ್ರದ ಅದುರು ದೊರೆಯುತ್ತಿದ್ದು, ಈ ಗಣಿಗಳ ಅಭಿವೃದ್ಧಿಯಿಂದ ಭಾರತವು ಆಮದು ಮಾಡಿಕೊಳ್ಳುತ್ತಿರುವ ತಾಮ್ರದ ಪ್ರಮಾಣವನ್ನು ಕಡಿಮೆ ಮಾಡಿಕೊಳ್ಳುವ ಸಾಧ್ಯತೆಗಳಿವೆ.

ಸುಣ್ಣಕಲ್ಲು ಅನೇಕ ಉದ್ಯಮಗಳಲ್ಲಿ ಬಹುಮುಖ್ಯವಾಗಿ ಬೇಕಾದ ಕಚ್ಚಾವಸ್ತು. ಅದರಲ್ಲೂ ವಿಶೇಷವಾಗಿ ಸಿಮೆಂಟ್ ತಯಾರಿಕೆಯಲ್ಲಿ ಸುಣ್ಣಕಲ್ಲಿನ ಅವಶ್ಯಕತೆ ಬಹಳ ಮುಖ್ಯವಾದುದು. ಭಾರತದಲ್ಲಿ ಉತ್ಪಾದನೆಯಾಗುವ ಸುಣ್ಣಕಲ್ಲಿನ ಪ್ರಮಾಣದಲ್ಲಿ ಕರ್ನಾಟಕದ ಪಾಲು ಅಧಿಕ. ಸುಣ್ಣಕಲ್ಲಿನ ಉತ್ಪಾದನೆಯಲ್ಲಿ ಕರ್ನಾಟಕವು ಭಾರತದಲ್ಲಿ ಮೊದಲ ಸ್ಥಾನದಲ್ಲಿದೆ. ಬಿಜಾಪುರ, ಬೆಳಗಾಂ, ಗುಲ್ಬರ್ಗಾ, ಶಿವಮೊಗ್ಗ, ತುಮಕೂರು ಜಿಲ್ಲೆಗಳಲ್ಲಿ ಅತ್ಯುತ್ತಮ ಸುಣ್ಣಕಲ್ಲು ದೊರೆಯುತ್ತಿದ್ದು, ೨೫ ರಿಂದ ೩೦ ಲಕ್ಷ ಟನ್ ಉತ್ಪಾದನಾ ಸಾಮರ್ಥ್ಯವಿದೆ. ಸುಣ್ಣಕಲ್ಲು ದೊರೆಯುವ ಸ್ಥಾನಗಳಿಗೆ ಸಮೀಪದಲ್ಲೇ ಹಲವಾರು ಸಿಮೆಂಟ್ ಕಾರ್ಖಾನೆಗಳೂ ಸ್ಥಾಪಿತವಾಗಿರುವುದು ಆರ್ಥಿಕ ದೃಷ್ಟಿಯಿಂದ ಲಾಭದಾಯಕವಾಗಿದೆ.

ವರ್ತಮಾನ ಪರಿಸ್ಥಿತಿಯಲ್ಲಿ ದೇಶದ ಆರ್ಥಿಕ ಪ್ರಗತಿಗೆ ಅಲ್ಯುಮಿನಿಯಂನ ಅವಶ್ಯಕತೆಯು ಅಧಿಕವಾಗಿದೆ. ಅಲ್ಯುಮಿನಿಯಂನ ಅದುರನ್ನು ಸದ್ಯಕ್ಕೆ ಬೆಳಗಾಂವಿಯ ಬಳಿ ಮಾತ್ರ ತೆಗೆಯಲಾಗುತ್ತಿದೆ.

ಕಬ್ಬಿಣದ ತಯಾರಿಕೆಯಲ್ಲಿ ಬೇಕಾಗುವ ಮ್ಯಾಂಗನೀಸ್, ಟಿಟೇಡಿಯಂ, ಟಿಟೇನಿಯಂ ವೆನೇಡಿಯಂ ಅದುರುಗಳು ಹಾಸನ, ಶಿವಮೊಗ್ಗ, ಉ. ಕನ್ನಡ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ದೊರೆಯುತ್ತವೆ. ಪಿಂಗಾಣಿ ತಯಾರಿಕೆಗೆ ಬೇಕಾದ ಸುದ್ದೆಮಣ್ಣು ಬೆಂಗಳೂರು ಜಿಲ್ಲೆಯಲ್ಲಿ ದೊರೆಯುತ್ತದೆ.

ಕಟ್ಟಡದ ನಿರ್ಮಾಣಕ್ಕಾಗಿ ಕಲ್ಲಿನ ಬಳಕೆ ಅವಶ್ಯಕವಾಗಿದ್ದು, ಈಗ ಕಲ್ಲಿನ ಉದ್ಯಮ ಹೆಚ್ಚು ಬೇಡಿಕೆಯದಾಗಿದೆ.

ಕರ್ನಾಟಕದಲ್ಲಿ ಗಣಿ ಉದ್ಯಮಕ್ಕೆ ಒಳ್ಳೆಯ ಭವಿಷ್ಯ ಇದೆಯೆಂದು ತಜ್ಞರ ನಂಬಿಕೆ ಚಿನ್ನ, ಕಬ್ಬಿಣ, ತಾಮ್ರ ಇತ್ಯಾದಿ ಬಹುಮುಖ್ಯ ಲೋಹಗಳ ಕೈಗಾರಿಕೆಯು ಕರ್ನಾಟಕದಲ್ಲಿ ಹೆಚ್ಚಿನ ಆದ್ಯತೆ ಪಡೆದಿದ್ದು, ಚಿನ್ನ, ಕಬ್ಬಿಣ, ಮ್ಯಾಂಗನೀಸ್, ಸುಣ್ಣಕಲ್ಲು ಗಣಿ ಕೈಗಾರಿಕೆಯಲ್ಲಿ ಕರ್ನಾಟಕವು ತನ್ನ ಸ್ಥಾನವನ್ನು ಈಗಿನಂತೆಯೇ ಉಳಿಸಿಕೊಳ್ಳುತ್ತದೆ ಎಂದು ನಿರೀಕ್ಷಿಸಲಾಗಿದೆ.

**ಕೈಗಾರಿಕೆಗಳು :**

ಕರ್ನಾಟಕವು ಖನಿಜ ಸಂಪತ್ತಿನಲ್ಲಿ ಶ್ರೀಮಂತವಾಗಿದ್ದು ತನ್ನಲ್ಲಿ ದೊರೆಯುವ ಖನಿಜಗಳ ಬಳಕೆಯಿಂದ ಹಲವಾರು ಕೈಗಾರಿಕೆಗಳು ನಡೆಯಲೂ ಕಾರಣವಾಗಿದೆ. ಹಲವಾರು ಶಾಸನಗಳು ಮತ್ತು ಸಾಹಿತ್ಯ ಕೃತಿಗಳ ಆಧಾರದಿಂದ ಕರ್ನಾಟಕದಲ್ಲಿ ಕೈಗಾರಿಕೆಯು ಪ್ರಾಚೀನ ಕಾಲದಿಂದಲೂ ಪ್ರಬುದ್ಧಾವಸ್ಥೆಯಲ್ಲಿಯೇ ಇತ್ತು ಎಂದು ತಿಳಿಯಬಹುದಾಗಿದೆ. ಮಡಿಕೆ–ಕುಡಿಕೆಗಳ ತಯಾರಿಕೆ, ಚಿನ್ನದ ಆಭರಣಗಳು, ಗಾಜಿನ ಬಳೆಗಳು, ತಾಮ್ರದ ಫಲಕಗಳು – ಇತ್ಯಾದಿ ಇನ್ನೂ ಅನೇಕ ಪ್ರಾಚೀನ ಕಾಲದಿಂದ ಉಳಿದು ಬಂದಿರುವ ಸಾಕ್ಷ್ಯಾಧಾರಗಳಿಂದಲೂ ಕರ್ನಾಟಕದಲ್ಲಿ ಕೈಗಾರಿಕೋದ್ಯಮ ತೀರಾ ಹೊಸದಲ್ಲ ಎಂಬ ನಿರ್ಧಾರಕ್ಕೆ ಬರಬಹುದಾಗಿದೆ. ಆದರೆ ಇದಕ್ಕೆ ಒಂದು ವ್ಯವಸ್ಥಿತ ರೂಪ ದೊರೆಯಿತು, ಆಧುನಿಕಗೊಂಡು, ಅದು ೨೦ನೆಯ ಶತಮಾನದಲ್ಲಿ ವಂಶಪಾರಂಪರಿಕವಾದ ಕಸುಬಾಗಿ, ಅತ್ಯಲ್ಪ ಉತ್ಪಾದನಾ ಸಾಮರ್ಥ್ಯವಿದ್ದ ಹಿಂದಿನ ಕಾಲದ ಪ್ರಧಾನವಾಗಿ ಗೃಹಕೈಗಾರಿಕೆಗಳು ಈಗ ವಿಶಾಲ ವ್ಯಾಪ್ತಿಯನ್ನು ಪಡೆದು ಸಾರ್ವಜನಿಕ ಕ್ಷೇತ್ರವನ್ನು ಪ್ರವೇಶಿಸಿವೆ. ಹಿಂದೆ ಗೃಹ ಕೈಗಾರಿಕೆಗಳು ಕಚ್ಚಾ ಮಾಲಿಗಾಗಿ ಮತ್ತು ಸಿದ್ಧಗೊಳಿಸಿದ ವಸ್ತುವಿನ ಮಾರಾಟಕ್ಕಾಗಿ ಮತ್ತೊಂದು ಮಾರುಕಟ್ಟೆಯನ್ನು ಅವಲಂಬಿಸಬೇಕಾಗಿತ್ತು. ಮಧ್ಯವರ್ತಿಗಳು ಹೆಚ್ಚಿದಷ್ಟೂ ಲಾಭಾಂಶ ಕಡಿಮೆ ಮತ್ತು ಸ್ವಾವಲಂಬನೆಗೆ ಅವಕಾಶವಿರುತ್ತಿರಲಿಲ್ಲ. ಅದೇ ಕಾರಣದಿಂದ ಈಗ ಬಹುತೇಕ ಕೈಗಾರಿಕೆಗಳು ಸಾರ್ವಜನಿಕ ವಲಯಕ್ಕೆ ಸೇರಿವೆ.

ನೇಕಾರರು, ಬಣ್ಣಕಾರರು, ತೆಲ್ಲಿಗರು, ಶಿಲ್ಪಿಗಳು, ಕುಂಬಾರರು, ಅಕ್ಕಸಾಲಿಗರು, ಕಮ್ಮಾರರು, ಚಮ್ಮಾರರು ಎಂದಿನಿಂದಲೂ ಇದ್ದವರೇ; ಇವರು ಗೃಹ ಕಸುಬನ್ನಾಗಿ ಸ್ವೀಕರಿಸಿದ್ದ ಲಘು ಪ್ರಮಾಣದ ಕೈಗಾರಿಕೆಗಳು ಈಗ ಉಪೇಕ್ಷೆಗೊಳಗಾಗಿ ಹಿಂದೆ ಸರಿದಿದ್ದರೂ, ಈಗಿನ ಮಾಧ್ಯಮ ಹಾಗೂ ಅಧಿಕ ಪ್ರಮಾಣದ ಕೈಗಾರಿಕೆಗಳಿಗೂ ಇವೇ ಪ್ರೇರಣೆ ನೀಡಿದುವು ಎಂದು ತಿಳಿದರೆ ಉತ್ಪ್ರೇಕ್ಷೆಯಾಗಲಾರದು. ಕರ್ನಾಟಕದಲ್ಲಿ ಅತ್ಯುತ್ತಮ ಬಟ್ಟೆ ಮತ್ತು ಎಣ್ಣೆ ತಯಾರಾಗುತ್ತಿದ್ದುದಕ್ಕೆ, ಅನೇಕ ಆಧಾರಗಳಿವೆ.

ವ್ಯವಸ್ಥಿತವಾಗಿ ಕರ್ನಾಟಕದಲ್ಲಿ ಕೈಗಾರಿಕೆ ಆರಂಭವಾದದ್ದು ೧೯ನೆಯ ಶತಮಾನ ಅಂತ್ಯದಲ್ಲಿ. ಚಿನ್ನದ ಗಣಿಗಳು (ಕೋಲಾರ ಮತ್ತು ಹಟ್ಟಿ), ಬಟ್ಟೆಯ ಗಿರಣಿಗಳು (ಬೆಂಗಳೂರು, ದಾವಣಗೆರೆ, ಗುಲಬರ್ಗಾ, ಮೈಸೂರು) ಕಾರ್ಯಾರಂಭ ಮಾಡಿದವು. ೧೯೦೨ ರಲ್ಲಿ ಕರ್ನಾಟಕವು ವಿದ್ಯುದುತ್ಪಾದನೆಯನ್ನು ಆರಂಭ ಮಾಡಿದ ನಂತರವಂತು ಕೈಗಾರಿಕೆಗಳು ಬೆಳೆಯುತ್ತಲೇ ಬಂದಿವೆ. ಕಬ್ಬಿಣ ಮತ್ತು ಉಕ್ಕು ಕಾಗದ, ಸಿಮೆಂಟ್, ಸಕ್ಕರೆ, ವಿದ್ಯುತ್, ಗಾಜು, ಪೋರ್ಸಲೀನ್, ಮತ್ತಿತರ ಅಧಿಕ ಪ್ರಮಾಣದ ಕೈಗಾರಿಕೆಗಳ ಜೊತೆಗೆ ಮಧ್ಯಮ ಮತ್ತು ಅಲ್ಪಪ್ರಮಾಣದ ಹಲವು ಕೈಗಾರಿಕೆಗಳು ೨೦ ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಸ್ಥಾಪಿತಗೊಂಡು, ಬೆಳೆದು, ಪ್ರಗತಿಯನ್ನು ಸಾಧಿಸಿ, ಕರ್ನಾಟಕವನ್ನು ಕೈಗಾರಿಕಾವಲಯದಲ್ಲಿ ಸುಸ್ಥಿತಿಯಲ್ಲಿರಿಸಿವೆ. ಇವೆಲ್ಲಕ್ಕೂ ಕಳಶವಿಟ್ಟಂತೆ ಕೇಂದ್ರ ಸರ್ಕಾರವು ಬೆಂಗಳೂರಿನಲ್ಲಿ ಸ್ಥಾಪಿಸಿರುವ ಸಾರ್ವಜನಿಕ ವಲಯದ ಹಿಂದೂಸ್ಥಾನ್ ಏರೋನಾಟಿಕ್ಸ್ ಲಿ, (ವಿಮಾನ ಕಾರ್ಖಾನೆ) ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್, ಭಾರತ್ ಎಲ್‌ಕ್ಟ್ರಾನಿಕ್ಸ್ ಲಿ., ಹಿಂದೂಸ್ಥಾನ್ ಮೆಷಿನ್ ಟೂಲ್ಸ್‌ನ ಯಂತ್ರಗಳು ಮತ್ತು ಕೈಗಡಿಯಾರ ಕಾರ್ಖಾನೆಗಳು ಸ್ಥಾಪನೆಯಾಗಿ ಕರ್ನಾಟಕವು ಇಡೀ ಭಾರತದಲ್ಲಿ ಮಾತ್ರವಲ್ಲದೆ ಅಂತರರಾಷ್ಟ್ರೀಯ ವಲಯದಲ್ಲೂ ಮಹತ್ವದ ಸಾಧನೆ ಮಾಡಿ ಪ್ರಗತಿ ಪಥದಲ್ಲಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಸ್ವಾಮ್ಯದ ಹಲವಾರು ಕಾರ್ಖಾನೆಗಳು ಅಲ್ಲದೆ ಖಾಸಗಿ ಸ್ವಾಮ್ಯದ ಅನೇಕ ಕೈಗಾರಿಕೆಗಳು ಕರ್ನಾಟಕದಲ್ಲಿ ಸಿಮೆಂಟ್, ಅಲ್ಯೂಮಿನಿಯಂ, ಮ್ಯಾಂಗನೀಸ್, ಬಟ್ಟೆ, ಸೋಪ್, ಶ್ರೀಗಂಧದ ಎಣ್ಣೆ, ಗಾಜು, ಮತ್ತಿತರ ಕಾರ್ಖಾನೆಗಳು ಕಾರ್ಯಪ್ರವೃತ್ತವಾಗಿವೆ. ವಿದ್ಯುತ್ ಉಪಕರಣಗಳ ತಯಾರಿಕೆಯಲ್ಲೂ ಕರ್ನಾಟಕ ಹಿಂದೆ ಬಿದ್ದಿಲ್ಲ. ಎನ್.ಜಿ.ಇ.ಎಫ್. ಜಿ. ಇ.ಎಫ್. ಮತ್ತು ಈಗ ಬಿ.ಎಚ್.ಇ.ಎಲ್.ನ ಸ್ವಾಮ್ಯಕ್ಕೆ ಒಳಪಟ್ಟಿರುವ ರೆಮ್ಕೋ ಮತ್ತು ಪೋರ್ಸಲೀನ್ ಕಾರ್ಖಾನೆಗಳು ಕರ್ನಾಟಕದ ಪ್ರಮುಖ ಕಾರ್ಖಾನೆಗಳಾಗಿವೆ. ಭದ್ರಾವತಿಯ ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಮತ್ತು ಕಾಗದದ ಕಾರ್ಖಾನೆಗಳು ಕರ್ನಾಟಕದ ಹಿರಿಯ ಕಾರ್ಖಾನೆಗಳಲ್ಲಿ ಎರಡಾಗಿದ್ದು, ಇವುಗಳ ಸಾಧನೆಯೂ ಮಹತ್ವದ್ದಾಗಿದೆ.

ಭಾರತದ ರೇಷ್ಮೆ ಉತ್ಪಾದನೆಯಲ್ಲಿ ಕರ್ನಾಟಕದ ಪಾಲು ಶೇಕಡ ೮೫ ರಷ್ಟಿರುವುದು ಹೆಮ್ಮೆಯ ಸಂಗತಿಯಾಗಿದೆ.

ಕರ್ನಾಟಕ ಸರ್ಕಾರವು ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವಲ್ಲಿ ಹಿಂದೆ ಬಿದ್ದಿಲ್ಲ. ಬೆಂಗಳೂರು ನಗರವಲ್ಲದೆ ಇನ್ನೂ ಅನೇಕ ಪ್ರಮುಖ ನಗರಗಳ ಆಸುಪಾಸಿನಲ್ಲಿ ಕೈಗಾರಿಕಾ ಕ್ಷೇತ್ರಗಳ ನಿರ್ಮಾಣ ಮಾಡಿ, ವಿವಿಧ ವರ್ಗದ ಅನೇಕ ಸಣ್ಣ ಕೈಗಾರಿಕೆಗಳು ಬೆಳೆಯಲು ಕಾರಣವಾಗಿದೆ. ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗಳ ನೆರವಿನೊಂದಿಗೆ, ಕರ್ನಾಟಕ ರಾಜ್ಯ ಹಣಕಾಸು ಮಂಡಲಿಯ ಆರ್ಥಿಕ ನೆರವೂ ದೊರೆತು ಸಣ್ಣ ಪ್ರಮಾಣದ ಕೈಗಾರಿಕೆಗಳು ಗಮನಾರ್ಹ ಪ್ರಗತಿ ಸಾಧಿಸಿವೆ.

ಕರ್ನಾಟಕದಲ್ಲಿ ಕೈಗಾರಿಕೆಗಳ ಪ್ರಗತಿಗೆ ಇಲ್ಲಿನ ವಿದ್ಯುಚ್ಛಕ್ತಿ ಕ್ಷೇತ್ರದ ಕೊಡುಗೆ ಅತ್ಯಂತ ಮಹತ್ತರವಾದುದು. ಕೈಗಾರಿಕೆಗಳಿಗೆ ಬೇಕಾದ ಕಚ್ಚಾವಸ್ತುಗಳು, ಕಾರ್ಮಿಕರ ಮೂಲಕ ದೊರೆಯಬೇಕಾದ ಮಾನವಶಕ್ತಿ, ಇವೆಲ್ಲವುಗಳ ಕ್ರೋಢೀಕರಣ ಮತ್ತು ನಿರ್ವಹಣೆಗೆ ಬೇಕಾದ ಆರ್ಥಿಕ ಸಂಪನ್ಮೂಲಗಳ ಜೊತೆ ಜೊತೆಗೇ ಯಂತ್ರಗಳ ಚಾಲನೆಗೆ ಅತ್ಯವಶ್ಯಕವಾದ ವಿದ್ಯುಚ್ಛಕ್ತಿ ಇಲ್ಲದಿದ್ದರೆ ಕೈಗಾರಿಕೆಗಳು ಬೃಹತ್ ಪ್ರಮಾಣದಲ್ಲಿ ಬೆಳೆಯಲಾಗಲೀ, ವ್ಯಾಪಕ ಸಾಧನೆ ಮಾಡಲಾಗಲೀ ಸಾಧ್ಯವಿಲ್ಲ. ಆಧುನಿಕ ಯುಗದಲ್ಲಿ ಗಾಳಿ, ನೀರು, ಬೆಳಕುಗಳಂತೆ ಅತ್ಯವಶ್ಯಕ ವರ್ಗಕ್ಕೆ ಸೇರಿದ ವಿದ್ಯುಚ್ಛಕ್ತಿಯ ಉತ್ಪಾದನೆಯ ವಿಷಯದಲ್ಲೂ ಕರ್ನಾಟಕ ಹಿಂದೆ ಬಿದ್ದಿಲ್ಲ.

ಭಾರತದಲ್ಲಿ ಪ್ರಪ್ರಥಮವಾಗಿ ಜಲವಿದ್ಯುದುತ್ಪಾದನಾ ಕೇಂದ್ರವೊಂದು ಸ್ಥಾಪಿತವಾದುದ್ದು ಕರ್ನಾಟಕದಲ್ಲಿ ಎಂಬುದು ಹೆಮ್ಮೆಯ ವಿಷಯವಾಗಿದೆ. ೧೯೦೨ ರಲ್ಲಿ ಸ್ಥಾಪಿತವಾದ ಶಿವನ ಸಮುದ್ರದ ಜಲವಿದ್ಯುತ್ ಉತ್ಪಾದನಾ ಕೇಂದ್ರದಿಂದ ಆರಂಭವಾಗಿ ಇತ್ತೀಚೆಗೆ ಆಂಶಿಕವಾಗಿ ಚಾಲನೆಗೊಂಡ ಕಾಳಿ ಜಲವಿದ್ಯುದಾಗಾರದವರೆಗೆ ಹಲವಾರು ಜಲವಿದ್ಯುತ್ ಉತ್ಪಾದನಾ ಕೇಂದ್ರಗಳು ಕರ್ನಾಟಕದಲ್ಲಿ ಕಾರ್ಯ ನಿರ್ವಹಿಸುತ್ತಿವೆ.

ಈಗ ಕರ್ನಾಟಕದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ವಿದ್ಯುದಾಗರಗಳಿಂದ ಒಟ್ಟು ಸು. ೩೦೬೦ ಮೆಗಾವಾಟ್ ವಿದ್ಯುತ್ ಉತ್ಪಾದನೆಯಾಗುತ್ತಿದ್ದು, ಬೇಡಿಕೆಯು ೧೮೦೦ ದಶಲಕ್ಷ ಯೂನಿಟ್ ಇದೆ. ಇದರಿಂದಾಗಿ ವಿದ್ಯುತ್ ಕೊರತೆ ಎಷ್ಟರ ಮಟ್ಟಿಗೆ ನಮ್ಮನ್ನು ಪರೀಕ್ಷಿಸುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ. ಒಂದು ಹಂತದಲ್ಲಿ ವಿದ್ಯುತ್ ಕೊರತೆಯ ಮಾತಿರಲಿ, ಬೇಡಿಕೆಗಿಂತ ಅಧಿಕ ಉತ್ಪಾದನಾ ಸಾಮರ್ಥ್ಯ ಹೊಂದಿದ್ದ ಕರ್ನಾಟಕದ ವಿದ್ಯುತ್ ಜಾಲ, ಕೈಗಾರಿಕೆಗಳ ಬೆಳವಣಿಗೆಯಿಂದಾಗಿ ಈಗ, ನೆರೆರಾಜ್ಯಗಳಿಂದ ಸ್ವಲ್ಪ ಅಂಶ ವಿದ್ಯುತ್ತನ್ನು ಆಮದು ಮಾಡಿಕೊಂಡರೂ ವಿದ್ಯುತ್ ಕೊರತೆಯನ್ನು ಎದುರಿಸುತ್ತಿದೆ. ಶಿವನಸಮುದ್ರ

ಲಿಂಷಾ ಮತ್ತು ಜೋಗಿನ ಮಹಾತ್ಮ ಗಾಂಧಿ ವಿದ್ಯುದಾಗರಗಳು ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯ ಅಧಿಕಾರ ವ್ಯಾಪ್ತಿಯಲ್ಲೇ ಉಳಿದಿದ್ದು, ಉಳಿದ ಜಲವಿದ್ಯುತ್ ಉತ್ಪಾದನಾ ಕೇಂದ್ರಗಳೂ ಕರ್ನಾಟಕ ಪವರ್ ಕಾರ್ಪೋರೇಷನ್‌ನ ಆಡಳಿತ ವ್ಯಾಪ್ತಿಯಲ್ಲಿವೆ.

ಕರ್ನಾಟಕದಲ್ಲಿ ವಿದ್ಯುತ್ ಉತ್ಪಾದನೆಯ ಜವಾಬ್ದಾರಿಯನ್ನು ಕರ್ನಾಟಕ ಪವರ್ ಕಾರ್ಪೋರೇಷನ್ ಸಂಸ್ಥೆಯೂ, ವಿದ್ಯುತ್ ಸಾಗಣೆ ಮತ್ತು ಸರಬರಾಜಿನ ಜವಾಬ್ದಾರಿಯನ್ನು ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯೂ ನಿರ್ವಹಿಸುತ್ತಿವೆ. ಕರ್ನಾಟಕದಲ್ಲಿ ಪ್ರಸ್ತುತ ವಿದ್ಯುತ್ ಉತ್ಪಾದಿಸುತ್ತಿರುವ ಜಲವಿದ್ಯುತ್ ಕಾರ್ಯಾಗಾರಗಳು ಮತ್ತು ರಾಯಚೂರಿನ ಶಾಖೋತ್ಪನ್ನ ವಿದ್ಯುತ್ ಕೇಂದ್ರಗಳ ಜೊತೆಗೆ, ನಿರ್ಮಾಣದ ವಿವಿಧ ಹಂತಗಳಲ್ಲಿರುವ ಎಲ್ಲಾ ಜಲವಿದ್ಯುತ್ ಕಾರ್ಯಾಗಾರಗಳೂ ವಿದ್ಯುತ್ ಉತ್ಪಾದನೆಯನ್ನು ಆರಂಭಿಸಿದರೆ ಒಟ್ಟು ಸು. ೫೦೦೦ ಮೆಗಾವಾಟ್ ವಿದ್ಯುತ್‌ಶಕ್ತಿಯ ಉತ್ಪಾದನೆಯಾಗುವ ನಿರೀಕ್ಷೆಯಿದೆ. ಬೆಂಗಳೂರು ನಗರದ ವಿದ್ಯುತ್ ಬೇಡಿಕೆಯ ಒಂದು ಪಾಲನ್ನು ನಿರ್ವಹಿಸಲು, ಯಲಹಂಕದ ಬಳಿ ೧೨೦ ಮೆಗಾವಾಟ್ ಸಾಮರ್ಥ್ಯದ ಡೀಸಲ್ ವಿದ್ಯುತ್ ಉತ್ಪಾದನಾ ಕೇಂದ್ರವು ನಿರ್ಮಾಣದ ಅಂತಿಮ ಹಂತದಲ್ಲಿದ್ದು, ಸಧ್ಯದಲ್ಲೇ ಕಾರ್ಯಾರಂಭ ಮಾಡುವ ನಿರೀಕ್ಷೆಯಿದೆ.

ಈಗಾಗಲೇ ಕರ್ನಾಟಕದಲ್ಲಿ ಜನವಸತಿಯಿರುವ ಎಲ್ಲಾ ೨೬,೧೪೮೩ ಗ್ರಾಮಗಳಿಗೂ ವಿದ್ಯುತ್ ಸರಬರಾಜನ್ನು ಒದಗಿಸಿ, ಶೇಕಡಾ ೧೦೦ ರಷ್ಟು ಗ್ರಾಮಗಳಿಗೆ ವಿದ್ಯುತ್ ಸರಬರಾಜು ಮಾಡಿರುವ ದಾಖಲೆಯನ್ನು ಕರ್ನಾಟಕವು ಸಾಧಿಸಿದೆ. ಪ್ರತಿವರ್ಷವೂ ಸುಮಾರು ೬೦,೦೦೦ ಕ್ಕೂ ಹೆಚ್ಚು ನೀರಾವರಿ ಪಂಪ್ ಸೆಟ್‌ಗಳಿಗೆ ಹೊಸದಾಗಿ ವಿದ್ಯುತ್ ಸರಬರಾಜು ಮಾಡಿ, ದಾಖಲೆ ಸ್ಥಾಪಿಸಿರುವ ಕರ್ನಾಟಕದಲ್ಲಿ, ಪ್ರತಿವರ್ಷ ಸೇರ್ಪಡೆಯಾಗುತ್ತಿತರುವ ವಿವಿಧ ವರ್ಗಗಳ (ಕೈಗಾರಿಕೆ, ಮನೆ ಬಳಕೆ ಮತ್ತಿತರ ವರ್ಗಗಳು) ಆವರಣಗಳ ಸಂಖ್ಯೆಯನ್ನು ಗಮನಿಸಿದಾಗ ವಿದ್ಯುತ್ ಬೇಡಿಕೆಯು, ಉತ್ಪಾದನೆಗಿಂತ ಹೆಚ್ಚಾಗುತ್ತಲೇ ಮುಂದುವರಿಯುವುದು ಕಂಡು ಬರುತ್ತದೆ. ಈ ಕೊರತೆಯ ನಿವಾರಣೆಗೆ ಕರ್ನಾಟಕವು ಈಗ ವಿದ್ಯುತ್ ಉತ್ಪಾದನೆಗೆ ಹೆಚ್ಚಿನ ಆದ್ಯತೆ ನೀಡುತ್ತಿರುವುದು ಭರವಸೆ ಹುಟ್ಟಿಸಿದೆ.

## ನದಿಗಳು :

ಜಲವಿದ್ಯುತ್ ಉತ್ಪಾದನೆಗೆ ಕರ್ನಾಟಕವು ಹೆಚ್ಚಾಗಿ ಅವಲಂಬಿಸಿರುವುದು ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ ಪಶ್ಚಿಮಕ್ಕೆ ಹರಿದು ಅರಬ್ಬೀ ಸಮುದ್ರವನ್ನು ಸೇರುವ ನದಿಗಳಾದ ಶರಾವತಿ, ಕಾಳಿ, ಚಕ್ರಾ ಮತ್ತಿತರ ನದಿಗಳು.

ಕರ್ನಾಟಕದ ನದಿಗಳು ಸಾಮಾನ್ಯವಾಗಿ ಪೂರ್ವದಿಂದ ಪಶ್ಚಿಮಕ್ಕೆ, ಅಥವಾ ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತವೆ. ಇವುಗಳ ಉಗಮ ಸಾಮಾನ್ಯವಾಗಿ ಪೂರ್ವ ಘಟ್ಟಗಳು ಅಥವಾ ಪಶ್ಚಿಮ ಘಟ್ಟಗಳಲ್ಲಿ.

ಕರ್ನಾಟಕದ ಬಹುಮುಖ್ಯವಾದ ನದಿಗಳೆಂದರೆ ಕಾವೇರಿ, ತುಂಗಭದ್ರಾ ಮತ್ತು ಕೃಷ್ಣಾ. ಇವುಗಳ ಜೊತೆಗೆ ಅವುಗಳ ಉಪನದಿಗಳ ಪಾತ್ರವೂ ಸೇರುವುದು ಸ್ವಾಭಾವಿಕ. ಕರ್ನಾಟಕಕ್ಕೆ ಮಳೆ ತರುವ ನೈಋತ್ಯ ಮತ್ತು ಈಶಾನ್ಯ ಮಾರುತಗಳು ಈ ನದಿಗಳಿಗೆ ಜಲಸಂಪತ್ತನ್ನು ಸಮೃದ್ಧವಾಗಿ ಒದಗಿಸುತ್ತವೆ.

ಕರ್ನಾಟಕ ನದಿಗಳ ಜಲಾನಯನ ಪ್ರದೇಶವನ್ನು ಪ್ರಮುಖವಾಗಿ ಐದು ಭಾಗಗಳಾಗಿ ವರ್ಗೀಕರಿಸಲಾಗಿದೆ.

### ೧. ಪಶ್ಚಿಮಕ್ಕೆ ಹರಿಯುವ ನದೀಜಾಲ :

ಕಾಳೀ, ಶರಾವತಿ, ಅಘನಾಶಿನಿ, ನೇತ್ರಾವತಿ, ತಟ್ಟೆಹಳ್ಳ, ಸೀತಾನದಿ ಕುಮಾರಧಾರಾ, ಗಂಗೊಳ್ಳಿ ಮತ್ತು ಚಕ್ರಾನದಿಗಳು ಈ ವರ್ಗದಲ್ಲಿ ಸೇರುತ್ತವೆ. ಇವೆಲ್ಲವೂ ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ ಪಶ್ಚಿಮಕ್ಕೆ ಹರಿದು, ಅರಬ್ಬೀ ಸಮುದ್ರವನ್ನು ಸೇರುತ್ತವೆ. ಹೆಚ್ಚಾಗಿ ಘಟ್ಟಪ್ರದೇಶ ಮತ್ತು ಕರಾವಳಿ ಪ್ರದೇಶಗಳಲ್ಲೇ ಇವು ಹರಿಯುವುದರಿಂದ, ಕೃಷಿಗೆ ಸಹಾಯಕವಲ್ಲವಾದರೂ ವಿದ್ಯುತ್ ಉತ್ಪಾದನೆಗೆ ಅತ್ಯಂತ ಸ್ವಾಭಾವಿಕ ನೆರವನ್ನು ನೀಡಿವೆ. ಹೆಸರಿಸಿದ ಪ್ರಮುಖ ನದಿಗಳ ಜೊತೆಗೆ, ಇನ್ನೂ ಹಲವು ಸಣ್ಣ ಉಪನದಿಗಳು ಸೇರಿ, ಈ ಜಲಾನಯನ ಪ್ರದೇಶದಲ್ಲಿ ಒಟ್ಟು ಸುಮಾರು 57 ನದಿಗಳಿವೆಯೆಂದು ಅಂದಾಜು ಮಾಡಲಾಗಿದೆ. ಇವುಗಳಲ್ಲಿ ಅತ್ಯಂತ ಉದ್ದವಾದುದು ಕಾಳಿನದಿ. ಅದರ ಉದ್ದ 161 ಕಿ. ಮೀ. ಶರಾವತಿಯ ಉದ್ದ 132 ಕಿ. ಮೀ. ಪ್ರಸ್ತಾಪಿಸುತ್ತಿರುವ ನದಿಗಳ ಜಾಲದ ಜಲಾನಯನ ಪ್ರದೇಶದಲ್ಲಿ 1.76 ಲಕ್ಷ ಹೆಕ್ಟೇರ್ ಭೂಮಿ ಮಾತ್ರ ನೀರಾವರಿ ಸೌಲಭ್ಯಕ್ಕೊಳಪಟ್ಟಿದೆ. ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆಯ ಅಧಿಕಭಾಗ, ಕೊಡಗು, ಶಿವಮೊಗ್ಗ, ಬೆಳಗಾಂ, ಹಾಸನ, ಚಿಕ್ಕಮಗಳೂರು ಜಿಲ್ಲೆಗಳ ಸ್ವಲ್ಪಭಾಗಗಳು ಈ ಜಲಾನಯನ ಪ್ರದೇಶದ ವ್ಯಾಪ್ತಿಯಲ್ಲಿ ಸೇರುತ್ತವೆ.

### ೨. ಕೃಷ್ಣಾ ಜಲಾನಯನ ಪ್ರದೇಶ :

ಕೃಷ್ಣಾ, ಭೀಮಾ, ಮಲಪ್ರಭಾ, ಘಟಪ್ರಭಾ, ತುಂಗಭದ್ರಾ ಮತ್ತು ವೇದಾವತಿ ನದಿಗಳು ಈ ಜಲಾನಯನ ಪ್ರದೇಶದಲ್ಲಿ ಸೇರುತ್ತವೆ. ಇವುಗಳಲ್ಲದೆ ವೇದಗಂಗಾ, ದೂದ್‌ಗಂಗಾ, ಮಾರ್ಕಂಡೇಯ, ಹಿರಣ್ಯಕೇಶಿ, ಬೆಣ್ಣೆಹಳ್ಳ, ವರದಾ, ಕುಮುದ್ವತಿ ಇತ್ಯಾದಿ ಸಣ್ಣನದಿಗಳೂ ಈ ವ್ಯಾಪ್ತಿಯಲ್ಲಿ ಸೇರುತ್ತವೆ. ಕೃಷ್ಣಾ ಜಲಾನಯನ ಪ್ರದೇಶದ ಒಟ್ಟು ವಿಸ್ತಾರ ಸು. 113.271 ಚ. ಕಿ.ಮೀ ಎಂದು

ತಿಳಿಯಲಾಗಿದೆ. ಈ ಎಲ್ಲ ನದಿಗಳು ನೈಋತ್ಯ ಮಾನ್ಸೂನ್ ಮಾರುತಗಳಿಂದ ಲಭಿಸುವ ಮಳೆಯಿಂದ ನೀರನ್ನು ಪಡೆಯುತ್ತವೆ. ಆ ಕಾಲದಲ್ಲಿ ತುಂಬಿ ಹರಿಯುತ್ತವೆ. ಈ ನದಿಗಳ ಜಲಾನಯನ ಪ್ರದೇಶದಲ್ಲಿ 7.4 ಲಕ್ಷ ಹೆಕ್ಟೇರ್ ಭೂಮಿಯು ನೀರಾವರಿಗೆ ಒಳಪಟ್ಟಿದೆ. ಬಳ್ಳಾರಿ, ಬಿಜಾಪುರ, ಚಿತ್ರದುರ್ಗ, ಗುಲ್ಬರ್ಗಾ ಮತ್ತು ಶಿವಮೊಗ್ಗ ಜಿಲ್ಲೆಗಳ ಕೆಲವು ಭಾಗಗಳು ಕೃಷ್ಣಾ ಜಲಾನಯನ ಪ್ರದೇಶದಲ್ಲಿ ಹೆಚ್ಚು ಭೂಮಿಗೆ ನದಿಗಳಿಂದ ಸೌಲಭ್ಯ ಒದಗಿಸಲು ಸಾಧ್ಯವಾಗಿದೆ.

೩. ಕಾವೇರಿ ಜಲಾನಯನ ಪ್ರದೇಶ :

ಈ ಪ್ರದೇಶದ ಬಹುಮುಖ್ಯ ನದಿಗಳೆಂದರೆ ಕಾವೇರಿ, ಹೇಮಾವತಿ, ಕಪಿಲಾ, ಶಿಂಷಾ ಮತ್ತು ಅರ್ಕಾವತಿ ಇವಲ್ಲದೆ ಹಾರಂಗಿ, ರಾಮತೀರ್ಥ, ಲಕ್ಷ್ಮಣತೀರ್ಥ, ಸುವರ್ಣಾವತಿ, ಇತ್ಯಾದಿ ಸುಮಾರು 50ಕ್ಕೂ ಹೆಚ್ಚು ಉಪನದಿಗಳಿವೆ. ಮೈಸೂರು ಮತ್ತು ಮಂಡ್ಯ ಜಿಲ್ಲೆಗಳು, ಕೊಡಗು, ಹಾಸನ, ಚಿಕ್ಕಮಗಳೂರು, ಬೆಂಗಳೂರು ಮತ್ತು ತುಮಕೂರು ಜಿಲ್ಲೆಗಳ ಸ್ವಲ್ಪಭಾಗಗಳು ಈ ಜಲಾನಯನ ಪ್ರದೇಶಕ್ಕೆ ಸೇರಿವೆ. ಈ ಭಾಗದಲ್ಲೂ ನೈಋತ್ಯ ಮತ್ತು ಈಶಾನ್ಯ ಮಾನ್ಸೂನ್ ಮಾರುತಗಳೆರಡರಿಂದಲೂ ಮಳೆ ಬೀಳುತ್ತದೆ. ಕಾವೇರಿ ನದೀಜಾಲದಿಂದಾಗಿ, ಅದರ ವ್ಯಾಪ್ತಿಗೆ ಬರುವ ಪ್ರದೇಶದಲ್ಲಿ 3 ಲಕ್ಷ ಹೆಕ್ಟೇರ್‌ನಷ್ಟು ಭೂಮಿಗೆ ನೀರಾವರಿ ಸೌಲಭ್ಯ ದೊರೆತಿದೆ.

೪. ಗೋದಾವರಿ ಜಲಾನಯನ ಪ್ರದೇಶ :

ಈ ಭಾಗದಲ್ಲಿ ಮುಖ್ಯವಾಗಿ ಹರಿಯುವ ನದಿಗಳೆಂದರೆ ಮಾಂಜರಾ, ಕಾರಂಜಿ, ಮಧುರನಾಲಾ, ದೇವನಾಲಾ, ಚುಳಕಿನಾಲಾ, ಹೆಬ್ಬಾಳ ಇತ್ಯಾದಿ. ಸುಮಾರು 14 ನದಿಗಳು ಹರಿಯುವ ಈ ಪ್ರದೇಶದಲ್ಲಿ, 0.17 ಲಕ್ಷ ಹೆಕ್ಟೇರ್ ಭೂಮಿಯು, ನದಿಗಳಿಂದಾಗಿ ನೀರಾವರಿ ಸೌಲಭ್ಯ ಪಡೆದಿದೆ. ಬೀದರ್ ಜಿಲ್ಲೆಯೊಂದರ ಅಧಿಕ ಭಾಗ ಮಾತ್ರ ಈ ಜಲಾನಯನ ಪ್ರದೇಶದ ವ್ಯಾಪ್ತಿಯಲ್ಲಿ ಸೇರುತ್ತದೆ.

೫. ಪಾಲಾರ್ ಮತ್ತು ಪೆನ್ನಾರ್ ನದಿಗಳ ಜಲಾನಯನ ಪ್ರದೇಶ :

ಈ ಎರಡೂ ನದಿಗಳು ಕೋಲಾರ ಜಿಲ್ಲೆ, ಬೆಂಗಳೂರು ಮತ್ತು ತುಮಕೂರು ಜಿಲ್ಲೆಯ ಸ್ವಲ್ಪ ಭಾಗದಲ್ಲಿ ಹರಿಯುತ್ತವೆ. ಈ ಜಲಾನಯನ ಪ್ರದೇಶದಲ್ಲಿ, ಈ ನದಿಗಳಿಂದಾಗಿ ಯಾವುದೇ ರೀತಿಯ ಅಧಿಕ ಸೌಲಭ್ಯ ಲಭ್ಯವಾಗುತ್ತಿಲ್ಲ. ಇವುಗಳು ಕಡಿಮೆ ಮಳೆ ಬೀಳುವ ಪ್ರದೇಶಗಳಲ್ಲಿ ಹರಿಯುವುದರಿಂದ, ಇವುಗಳಿಗೆ ನೀರು ಒದಗುವುದೇ ದುಸ್ತರ.

ಜಲಾನಯನ ಪ್ರದೇಶಗಳಲ್ಲಿ ಬೀಳುವ ಮಳೆಯ ನೀರೆಲ್ಲವೂ ನದಿಯ ಪಾಲಾಗದೆ, ನದಿಯಲ್ಲಿ ಹರಿಯುವ ನೀರೆಲ್ಲವೂ ಸಮುದ್ರದ ಪಾಲಾಗದ

ಅದರಲ್ಲಿ ಸ್ವಲ್ಪ ಭಾಗವನ್ನು ಭೂಮಿ ಹೀರಿ ರಕ್ಷಿಸುತ್ತದೆ. ಈ ಅಂತರ್ಜಲ ಸಂಪತ್ತು ಪ್ರಾಕೃತಿಕ ಸಮತೋಲನವನ್ನು ಕಾಪಾಡುತ್ತದೆ. ಭೂಮಿಯು ಮರುಭೂಮಿಯಾಗದಿರಲು ಈ ಅಂತರ್ಜಲ ಸಂಪತ್ತು ಕೂಡಾ ಕಾರಣವಾಗುತ್ತದೆ.

**ಕೃಷಿ ಸಂಪತ್ತು :**

ಭಾರತದಂತೆಯೇ, ಅದರ ಒಂದು ಪ್ರಮುಖ ರಾಜ್ಯವಾದ ಕರ್ನಾಟಕವೂ ಕೃಷಿ ಪ್ರಧಾನವಾದುದು; ನವಶಿಲಾಯುಗದ ಕಾಲದಿಂದಲೂ ಕರ್ನಾಟಕದಲ್ಲಿ ಕೃಷಿಯು ಬೆಳೆದುಬಂದಿದೆ. ರಾಗಿ, ಬತ್ತ, ಜೋಳ, ದ್ವಿದಳ ಧಾನ್ಯಗಳು, ಎಣ್ಣೆಕಾಳುಗಳು, ಮತ್ತು ಹತ್ತಿ ಕರ್ನಾಟಕದ ಪ್ರಧಾನ ಬೆಳೆಗಳು. ಇವಲ್ಲದೆ ಕಾಫಿ, ಟೀ, ಅಡಕೆ ಇತ್ಯಾದಿಗಳನ್ನೂ ಅಧಿಕಪ್ರಮಾಣದಲ್ಲಿಯೇ ಬೆಳೆಯಲಾಗುತ್ತಿದೆ. ಕರ್ನಾಟಕದಲ್ಲಿ ಸಾಗುವಳಿ ಯೋಗ್ಯವಾದ 1, 02, 48, 408 ಹೆಕ್ಟೇರ್ ಭೂಮಿಯಲ್ಲಿ ಆಹಾರ ಬೆಳೆಗಳನ್ನು ಶೇಕಡ 72 ರಷ್ಟು ಭೂಮಿಯಲ್ಲಿ ಬೆಳೆಯಲಾಗುತ್ತಿದೆ. ಉಳಿದ ಭೂಮಿಯಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತಿದೆ.

ಕರ್ನಾಟಕದ ಬಹುತೇಕ ಜನತೆಯ ಮುಖ್ಯ ಆಹಾರವೆಂದರೆ ರಾಗಿ. ಪ್ರಧಾನವಾಗಿ ಮಳೆಯನ್ನೇ ಆಶ್ರಯಿಸಿ ಬೆಳೆಯುವ ರಾಗಿಯ ಬಿತ್ತನೆ ಜೂನ್, ಜುಲೈನಲ್ಲಿ ನಡೆದು ನವೆಂಬರ್, ಡಿಸೆಂಬರ್‌ನಲ್ಲಿ ಕಟಾವು ನಡೆಯುತ್ತದೆ. ರಾಜ್ಯದ ಒಟ್ಟು ಆಹಾರೋತ್ಪಾದನೆಯ ಭೂಮಿಯಲ್ಲಿ ರಾಗಿಯನ್ನು 2.98 ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಬೆಳೆಯಲಾಗುತ್ತದೆ. ರಾಗಿ ಬೆಳೆಯುವ ಪ್ರಮುಖ ಜಿಲ್ಲೆಗಳೆಂದರೆ ಬೆಂಗಳೂರು ತುಮಕೂರು, ಹಾಸನ, ಮೈಸೂರು, ಮಂಡ್ಯ ಮತ್ತು ಕೋಲಾರ. ರಾಗಿಯ ಹಲವಾರು ಸುಧಾರಿತ ತಳಿಗಳನ್ನೂ ಬೆಳೆಯಲಾಗುತ್ತಿದ್ದು ರಾಗಿಯ ಒಟ್ಟು ವಾರ್ಷಿಕ ಉತ್ಪಾದನೆ ಸುಮಾರು 16 ಲಕ್ಷ ಟನ್‌ಗಳಷ್ಟು.

ಬತ್ತವು ಕರ್ನಾಟಕದ ಮತ್ತೊಂದು ಮುಖ್ಯ ಬೆಳೆ. ಇದು ಹೆಚ್ಚು ನೀರನ್ನು ಅಪೇಕ್ಷಿಸುವ ಬೆಳೆಯಾದ್ದರಿಂದ ನೀರಾವರಿ ಸೌಲಭ್ಯವಿರುವ ಸ್ಥಳಗಳಲ್ಲಿ ಮಾತ್ರ ಇದನ್ನು ಬೆಳೆಯಲಾಗುತ್ತದೆ. ಮಲೆನಾಡು ಮತ್ತು ಕರಾವಳಿ ಪ್ರದೇಶಗಳಲ್ಲಿ ಬತ್ತವನ್ನು ಹೆಚ್ಚಾಗಿ ಬೆಳೆಯಲಾಗುತ್ತದೆ. ನೀರಾವರಿ ಸೌಲಭ್ಯ ಉತ್ತಮವಾಗಿರುವ ಸ್ಥಳಗಳಲ್ಲಿ ಬತ್ತದ ಎರಡು ಬೆಳೆಯನ್ನು ತೆಗೆಯಲಾಗುತ್ತದೆ. ಜೂನ್, ಜುಲೈನಿಂದ ನವೆಂಬರ್, ಡಿಸೆಂಬರ್‌ವರೆಗೆ ಒಂದು ಬೆಳೆಯ ಅವಧಿಯಾದರೆ: ಫೆಬ್ರವರಿ, ಮಾರ್ಚಿನಿಂದ ಜೂನ್, ಜುಲೈವರೆಗೆ ಮತ್ತೊಂದು ಅವಧಿಯಾಗಿರುತ್ತದೆ. ಭತ್ತವನ್ನು ಬೆಳೆಯುವ ಕೃಷಿ ಪ್ರದೇಶದ ವಿಸ್ತೀರ್ಣವು ಸು. 12 ಲಕ್ಷ ಹೆಕ್ಟೇರ್‌ಗಳಿದ್ದು. ಉತ್ಪನ್ನವು ಸುಮಾರು 26 ಲಕ್ಷ ಟನ್‌ಗಳಷ್ಟು.

ರಾಗಿ ಮತ್ತು ಬತ್ತಗಳ ನಂತರ, ಕರ್ನಾಟಕದ ಬಹುಮುಖ್ಯ ಆಹಾರ ಬೆಳೆಯೆಂದರೆ ಜೋಳ. ಇದು ಕರ್ನಾಟಕದ ಉತ್ತರ ಭಾಗದಲ್ಲಿ ಹೆಚ್ಚಾಗಿ

ಬೆಳೆಯುತ್ತದೆ. ಮತ್ತು ಈ ಭಾಗದ ಜನರ ಬಹು ಮುಖ್ಯ ಆಹಾರ ಕೂಡಾ. ಸುಮಾರು 21.5 ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಸು 16 ಲಕ್ಷ ಟನ್ ಜೋಳವನ್ನು ಬೆಳೆಯಲಾಗುತ್ತದೆ. ಇದು ಮಳೆಯನ್ನು ಆಧರಿಸಿದ ಬೆಳೆ. ಇತ್ತೀಚೆಗೆ ಜೋಳದಲ್ಲೂ ಹಲವಾರು ಸುಧಾರಿತ ಮಾದರಿಗಳನ್ನು ಕಂಡುಹಿಡಿದಿರುವುದರಿಂದ, ಜೋಳದ ಇಳುವರಿಯ ಪ್ರಮಾಣವೂ ಅಧಿಕವಾಗಿದೆ.

ಧಾರವಾಡ, ಬಿಜಾಪುರ, ಬೆಳಗಾಂ, ರಾಯಚೂರು ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ಮೊದಲಿಗೆ ಹೆಚ್ಚಾಗಿ ಬೆಳೆಯುತ್ತಿದ್ದ ಗೋಧಿಯ ಪ್ರಮಾಣ ಈಚೆಗೆ ಕಡಿಮೆಯಾಗಿದೆ. ಸುಮಾರು 2 ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಸುಮಾರು 1 ಲಕ್ಷ ಟನ್ ಗೋಧಿಯನ್ನು ಮಾತ್ರ ಕರ್ನಾಟಕದಲ್ಲಿ ಬೆಳೆಯಲಾಗುತ್ತಿದೆ.

ತೊಗರಿ, ಕಡಲೆ, ಅಲಸಂದೆ ಮತ್ತಿತರ ದ್ವಿದಳ ಧಾನ್ಯಗಳನ್ನು ರಾಯಚೂರು ಜಿಲ್ಲೆಯಲ್ಲಿ ಹೆಚ್ಚಾಗಿ ಬೆಳೆಯಲಾಗುತ್ತದೆ. ಸುಮಾರು 18.39 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ 7.63 ಲಕ್ಷ ಟನ್‌ಗಳಷ್ಟು ದ್ವಿದಳ ಧಾನ್ಯಗಳನ್ನು ಕರ್ನಾಟಕದಲ್ಲಿ ಬೆಳೆಯಲಾಗುತ್ತಿದೆ.

ನೀರಾವರಿಯನ್ನು ಆಶ್ರಯಿಸುವ ಕಬ್ಬು ಕೂಡಾ ಕರ್ನಾಟಕದ ಮುಖ್ಯ ಬೆಳೆಗಳಲ್ಲೊಂದು. ನದಿಯ ನಾಲಾಬಯಲುಗಳಲ್ಲಿ ಈ ಬೆಳೆ ಅಧಿಕ. ಬೆಳಗಾಂ, ಮಂಡ್ಯ, ಬಳ್ಳಾರಿ, ರಾಯಚೂರುಗಳಲ್ಲಿ ಮುಖ್ಯವಾಗಿ ಮತ್ತು ಇನ್ನೂ ಹಲವಾರು ಜಿಲ್ಲೆಗಳಲ್ಲಿ ಕಬ್ಬಿನ ಬೆಳೆಗೆ ಆದ್ಯತೆ ಇದೆ. ಸು 2.24 ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಸು 185 ಲಕ್ಷ ಟನ್ ಕಬ್ಬನ್ನು ಬೆಳೆಯಲಾಗುತ್ತಿದೆ. ಬೆಲ್ಲ ಮತ್ತು ಸಕ್ಕರೆಯ ಉತ್ಪಾದನೆಗಲ್ಲದೆ ಮದ್ಯದ ತಯಾರಿಕೆಗೆ ಕೂಡಾ ಕಬ್ಬನ್ನು ಆಶ್ರಯಿಸಲಾಗುತ್ತದೆ.

ಮಳೆಯ ಆಶ್ರಯದಲ್ಲೇ ಕಡಲೆಕಾಯಿ, ಹರಳು, ಎಳ್ಳು ಮತ್ತಿತರ ಎಣ್ಣೆಕಾಳುಗಳನ್ನು ಬೆಳಗಾಂ, ಧಾರವಾಡ, ರಾಯಚೂರು, ಬಿಜಾಪೂರ ಮತ್ತು ಗುಲ್ಬರ್ಗ ಜಿಲ್ಲೆಗಳಲ್ಲಿ ಬೆಳೆಯಲಾಗುತ್ತಿದೆ. ಸು. 29 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಎಣ್ಣೆ ಬೀಜಗಳನ್ನು ಬೆಳೆಯಲಾಗುತ್ತಿದ್ದು, ಒಟ್ಟು ಉತ್ಪಾದನೆ ಸು. 17.5 ಲಕ್ಷ ಟನ್‌ಗಳಿವೆ.

ಕರ್ನಾಟಕದ ಪ್ರಮುಖ ವಾಣಿಜ್ಯ ಬೆಳೆಗಳಲ್ಲಿ ಹತ್ತಿ ಕೂಡಾ ಮುಖ್ಯವಾದುದು. ಸು 5 ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಸು 6.51 ಲಕ್ಷ ಟನ್ ಹತ್ತಿಯನ್ನು ಬೆಳೆಯಲಾಗುತ್ತಿದೆ. ಹತ್ತಿ ಬೆಳೆಯುವ ಪ್ರದೇಶದ ವಿಸ್ತೀರ್ಣವು ಪ್ರತಿವರ್ಷ ಕಡಿಮೆಯಾಗುತ್ತಿದ್ದರೂ, ಅಧಿಕ ಇಳುವರಿಯ ತಳಿಗಳಿಂದಾಗಿ ಉತ್ಪಾದನೆ ಪ್ರಮಾಣದಲ್ಲಿ ಅಧಿಕ ಏರಿಳಿತಗಳಿಲ್ಲದಿರುವುದನ್ನು ಗುರುತಿಸಬಹುದು. ರಾಯಚೂರು, ಧಾರವಾಡ, ಬಿಜಾಪುರ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚು ಹತ್ತಿಯನ್ನು ಬೆಳೆಯಲಾಗುತ್ತಿದೆ.

ಮಾವು, ಕಿತ್ತಳೆ ಇತ್ಯಾದಿ ಹಣ್ಣುಗಳ ಬೆಳೆಯಲ್ಲೂ ಕರ್ನಾಟಕದ ಸಾಧನೆ ತೃಪ್ತಿಕರವಾಗಿದೆ. ತೆಂಗು ಮತ್ತು ಅಡಿಕೆಯ ಬೆಳೆಗಳೂ ಕೂಡ ಕರ್ನಾಟಕದಲ್ಲಿ ವಿಶೇಷ ಸ್ಥಾನ ಪಡೆದಿವೆ. ಕಾಫಿಯ ಬೆಳೆಗೆ ಕರ್ನಾಟಕದ ಕೊಡುಗೆ ಅಪಾರ. ಭಾರತದ ಕಾಫಿ ಉತ್ಪನ್ನದಲ್ಲಿ ಕರ್ನಾಟಕದ ಪಾಲು ಶೇಕಡ 60ರಷ್ಟು ಸು 1.2 ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಸುಮಾರು 1.5 ಲಕ್ಷಟನ್‌ಗಳಷ್ಟು ಕಾಫಿಯ ಉತ್ಪಾದನೆ ಕರ್ನಾಟಕದಲ್ಲಾಗುತ್ತಿದೆ. ಚಿಕ್ಕಮಗಳೂರು, ಹಾಸನ ಮತ್ತು ಕೊಡಗು ಜಿಲ್ಲೆಗಳು ಕಾಫಿ ಬೆಳೆಯ ಪ್ರಮುಖ ಜಿಲ್ಲೆಗಳು.

ಮೆಣಸಿನಕಾಯಿ, ಏಲಕ್ಕಿ ಮತ್ತು ತಂಬಾಕುಗಳ ಉತ್ಪಾದನೆಯಲ್ಲೂ ಕರ್ನಾಟಕ ಹಿಂದೆ ಬಿದ್ದಿಲ್ಲ. ಭಾರತದ ಏಲಕ್ಕಿ ಉತ್ಪಾದನೆಯಲ್ಲಿ ಕರ್ನಾಟಕದ ಪಾಲು ಶೇ. 59ರಷ್ಟು. ಹಾಗೆಯೇ ರೇಷ್ಮೆ ಮತ್ತು ಅಡಿಕೆಯ ಉತ್ಪಾದನೆಯಲ್ಲಿ ಕರ್ನಾಟಕದ ಪಾಲು ಅತ್ಯಂತ ಮಹತ್ವದ್ದಾಗಿದೆ. ಭಾರತದ ರೇಷ್ಮೆ ಮತ್ತು ಅಡಿಕೆ ಉತ್ಪಾದನೆಯಲ್ಲಿ ಕರ್ನಾಟಕ ಶೇ. 80 ರಷ್ಟು ಇರುವುದು ಹೆಮ್ಮೆಯ ವಿಷಯವಾಗಿದೆ.

## ಶಿಕ್ಷಣರಂಗ

ಶಿಕ್ಷಣರಂಗದಲ್ಲಿ ಕೂಡಾ ಕರ್ನಾಟಕದ ಸಾಧನೆ ಮಹತ್ವವಾದುದು. ಕ್ರಿ.ಶ. 8ನೆಯ ಶತಮಾನದಿಂದಲೂ ವಿದ್ಯಾಭ್ಯಾಸದ ಬಗೆಗೆ ಅತ್ಯಂತ ಮಹತ್ವದ ದಾಖಲೆಗಳನ್ನು ಹೊಂದಿರುವ ಕರ್ನಾಟಕವು ಈಗಲೂ ಶಿಕ್ಷಣಕ್ಕೆ ವಿಶೇಷ ಪ್ರಾಧಾನ್ಯತೆ ನೀಡಿದೆ. ಮೈಸೂರು ಒಡೆಯರ ಆಳ್ವಿಕೆಯ ಕಾಲದಿಂದಲೂ ಆಧುನಿಕ ಶಿಕ್ಷಣಕ್ಕೆ ಪ್ರಾಶಸ್ತ್ಯ ದೊರೆತಿದ್ದು, ಈಗ ಪ್ರಾಥಮಿಕ ಶಿಕ್ಷಣವನ್ನು ಕರ್ನಾಟಕದಲ್ಲಿ ಕಡ್ಡಾಯ ಮಾಡಲಾಗಿದೆ. ಅಕ್ಷರಸ್ಥರ ಪ್ರಮಾಣ ದಿನೇ ದಿನೇ ಏರುತ್ತಿದ್ದು, ಕಾರಣಾಂತರಗಳಿಂದ ಶಾಲೆದಳಿಗೆ ತಪ್ಪಿಸಿಕೊಳ್ಳುವ ವಿದ್ಯಾರ್ಥಿಗಳನ್ನು ಮತ್ತೆ ಶಾಲೆಗಳಿಗೆ ಬರುವಂತೆ ಮತ್ತು ಕಳುಹಿಸುವಂತೆ ಪ್ರೇರೇಪಿಸಲು ಒಂದು ಆಂದೋಲನದ ರೀತಿಯ ಕಾರ್ಯಕ್ರಮವೇ ಕರ್ನಾಟಕದಲ್ಲಿ ಇತ್ತೀಚೆಗೆ ನಡೆದಿದೆ. ಸುಮಾರು 41,650 ಪ್ರಾಥಮಿಕ ಶಾಲೆಗಳು ಕರ್ನಾಟಕದಲ್ಲಿವೆಯೆಂದು ಅಂದಾಜು ಮಾಡಲಾಗಿದೆ. ಈ ಶಾಲೆಗಳಲ್ಲಿ ಸುಮಾರು 73 ಲಕ್ಷ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿದ್ದು ಶಿಕ್ಷಕರ ಸಂಖ್ಯೆಯು ಸುಮಾರು 138.780 ಎಂದು ತಿಳಿಯಲಾಗಿದೆ. 1 ರಿಂದ 7ನೆಯ ತರಗತಿಯ ವರೆಗಿನ ಪ್ರಾಥಮಿಕ ಶಿಕ್ಷಣದ ನಂತರದ ಪ್ರೌಢ ವಿದ್ಯಾಭ್ಯಾಸವು 3 ವರ್ಷಗಳದ್ದಾಗಿದ್ದು, ಇದಕ್ಕೆ ಕರ್ನಾಟಕದಲ್ಲಿ ಸುಮಾರು 4000ಕ್ಕೂ ಹೆಚ್ಚು ಪ್ರೌಢಶಾಲೆಗಳಿವೆ. 30,000 ಕ್ಕೂ ಹೆಚ್ಚು ಉಪಾಧ್ಯಾಯರುಗಳಿರುವ ಈ ಶಾಲೆಗಳಲ್ಲಿ ಸುಮಾರು 12 ಲಕ್ಷಕ್ಕೂ ಮೇಲ್ಪಟ್ಟು ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದಾರೆ ಎಂದು ಅಂದಾಜು ಮಾಡಲಾಗಿದೆ. ಅನೇಕ ಪ್ರೌಢಶಾಲೆಗಳು ಸಂಯುಕ್ತ ಪದವಿ ಪೂರ್ವ ಕಾಲೇಜುಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದು,

ಅವುಗಳಲ್ಲಿ ಪ್ರೌಢ ಶಿಕ್ಷಣದ ನಂತರದ 2 ವರ್ಷಗಳ ಪದವಿ ಶಿಕ್ಷಣಕ್ಕೂ ವ್ಯವಸ್ಥೆ ಇದೆ.

ಕರ್ನಾಟಕದಲ್ಲಿ ಪ್ರಸ್ತುತ ಏಳು ವಿಶ್ವವಿದ್ಯಾನಿಲಯಗಳಿವೆ. ಅವುಗಳಲ್ಲಿ ಇತ್ತೀಚೆಗೆ ಆರಂಭಗೊಂಡ, ಬೋಧನೆಯೇ ಪ್ರಧಾನವಾಗಿರದ ಹಂಪೆಯ ಕನ್ನಡ ವಿಶ್ವವಿದ್ಯಾನಿಲಯವನ್ನು ಹೊರತುಪಡಿಸಿ, ಉಳಿದ ಬೋಧನಾಪ್ರಧಾನವಾದ ಆರು ವಿಶ್ವವಿದ್ಯಾನಿಲಯಗಳ (ಮೈಸೂರು, ಬೆಂಗಳೂರು, ಗುಲ್ಬರ್ಗಾ, ಮಂಗಳೂರು, ಕರ್ನಾಟಕ ಮತ್ತು ಕುವೆಂಪು) ವ್ಯಾಪ್ತಿಯಲ್ಲಿ ಹಲವಾರು ಪದವಿಪೂರ್ವ, ಪದವಿ ಮತ್ತು ಸ್ನಾತಕೋತ್ತರ ಕಾಲೇಜುಗಳ ಕಾರ್ಯನಿರ್ವಹಿಸುತ್ತಿವೆ. ಇವುಗಳಲ್ಲಿ ಅತ್ಯಂತ ಹಳೆಯ ವಿಶ್ವವಿದ್ಯಾನಿಲಯವು ಮೈಸೂರು ವಿಶ್ವವಿದ್ಯಾನಿಲಯವಾದರೆ, ಇತ್ತೀಚಿನದು ಕುವೆಂಪು ವಿಶ್ವವಿದ್ಯಾಲಯ.

ಕಲೆಯ ವಿವಿಧ ಪ್ರಕಾರಗಳು ವಿಜ್ಞಾನ ಮತ್ತು ವಾಣಿಜ್ಯ ವಿವಿಧ ಪ್ರಕಾರಗಳ ಕಾಲೇಜುಗಳಲ್ಲದೆ ಹಲವಾರು ಎಂಜಿನಿಯರಿಂಗ್ ಮತ್ತು ವೈದ್ಯಕೀಯ ಕಾಲೇಜುಗಳೂ ಈ ವಿಶ್ವವಿದ್ಯಾನಿಲಯಗಳ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿವೆ. ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲೂ ವಿವಿಧ ವಿಷಯಗಳ ಸ್ನಾತಕೋತ್ತರ ಅಧ್ಯಯನಕ್ಕೂ ಅವಕಾಶವಿದೆ.

ಬಹುತೇಕ ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲೂ ಪ್ರಸಾರಾಂಗಗಳಿದ್ದು, ಇವುಗಳ ಮೂಲಕ ಬಹುಮೂಲ್ಯವಾದ ಗ್ರಂಥಗಳ ಪ್ರಕಟಣೆಯಾಗುತ್ತಿರುವುದು ಅಭ್ಯಾಸಗಳಿಗೆ ಅತ್ಯಂತ ಉಪಯುಕ್ತವಾಗಿದೆ.

## ಕರ್ನಾಟಕದ ಇತಿಹಾಸ : ಸ್ಥೂಲಪರಿಚಯ

### ಕರ್ನಾಟಕ : ಕನ್ನಡ

ಕರ್ನಾಟಕದ ಇತಿಹಾಸದ ಸ್ಥೂಲ ಪರಿಚಯದ ಸಂದರ್ಭದಲ್ಲೇ ಆರಂಭದಲ್ಲಿ 'ಕರ್ನಾಟಕ' ಶಬ್ದದ ಬಗೆಗೆ ಈವರೆಗೆ ನಡೆದಿರುವ ಚರ್ಚೆಯ ಸ್ಥೂಲ ಪರಿಚಯವನ್ನು ಮಾಡಿಕೊಡುವುದೂ ಆವಶ್ಯಕವಾಗಿದೆ. 'ಕರ್ನಾಟಕ' ಮತ್ತು 'ಕನ್ನಡ' ಪದಗಳು ದೇಶ, ಭಾಷೆ ಮತ್ತು ಕುಲ ಇವುಗಳಲ್ಲಿ ಯಾವುದನ್ನು ನಿರ್ದೇಶಿಸುತ್ತವೆ ಎಂಬ ಬಗ್ಗೆ ಇಂದಿಗೂ ಭಿನ್ನಾಭಿಪ್ರಾಯಗಳಿವೆ. 'ಮೈಸೂರು' ರಾಜ್ಯವು 'ಕರ್ನಾಟಕ' ಎಂಬ ತನ್ನ ಪ್ರಾಚೀನ ಹೆಸರನ್ನು ಮತ್ತೆ ಪಡೆದಿರುವ ಕಾರಣ 'ಕರ್ನಾಟಕ' ಪದದ ವ್ಯುತ್ಪತ್ತಿಯ ಬಗೆಗೆ ಸಾಮಾನ್ಯ ತಿಳುವಳಿಕೆಯಾದರೂ ಇರುವುದು ಸೂಕ್ತ.

'ಕವಿರಾಜಮಾರ್ಗ' ಮತ್ತು 'ಕಬ್ಬಿಗರ ಕಾವ' ಗ್ರಂಥಗಳಲ್ಲಿ 'ಕನ್ನಡ' ಎಂಬುದು ದೇಶವಾಚಕವಾಗಿದೆ. 'ಕನ್ನಡ' ಭಾಷಾವಾಚಕ ಎಂಬುದು ರೂಢಿಯಿಂದ ತಿಳಿದು ಬಂದಿದೆ. 'ಕನ್ನಡ'ವು ಕೆಲವು ಕವಿಗಳ ಪ್ರಕಾರ ಕುಲವಾಚಕವೂ ಹೌದು.

ಮಹಾಭಾರತದ ಸಭಾಪರ್ವದಲ್ಲಿ 'ಕರ್ಣಾಟಾಃ' ಎಂದೂ, ಭೀಷ್ಮಪರ್ವದಲ್ಲಿ 'ಕರ್ಣಾಟಕಾಃ' ಎಂದೂ ಜನಪದವನ್ನು ನಿರ್ದೇಶಿಸಲಾಗಿದೆ. ಇದರ ಕಾಲ ಕ್ರಿ.ಪೂ. 300 ಎಂಬುದು ಕೆಲವು ವಿದ್ವಾಂಸರ ಅಭಿಮತ. ಕ್ರಿ. ಶ. ಸು 400 ರ ಶೂದ್ರಕ (ಮೃಚ್ಛಕಟಿಕ) ಕ್ರಿ.ಶ. ಸು 6ನೆಯ ಶತಮಾನದ ವರಾಹಮಿಹಿರ (ಬೃಹತ್ಸಂಹಿತಾ), ಕ್ರಿ. ಶ. ಸು 8 ನೆಯ ಶತಮಾನದ ಸೋಮದೇವ (ಕಥಾ ಸರಿತ್ಸಾಗರ) ಕ್ರಿ.ಶ. 10ನೆಯ ಶತಮಾನದ ರಾಜಶೇಖರ (ಕಾವ್ಯಮೀಮಾಂಸಾ) – ಇತ್ಯಾದಿ ಕವಿಗಳು ಮತ್ತು ಆಲಂಕಾರಿಕರು 'ಕರ್ಣಾಟಿಕ'ವನ್ನು ದೇಶ ಎಂಬ ಅರ್ಥಲ್ಲಿಯೇ ಪ್ರಯೋಗಿಸಿದ್ದಾರೆ. ಪ್ರಾಚೀನ ತಮಿಳು ಸಾಹಿತ್ಯ ಕೃತಿಯಾದ ಶಿಲಪ್ಪದಿಗಾರಂ ನಲ್ಲಿ ಪ್ರಯೋಗವಾಗಿರುವ ಕರುನಾಡರ್ ಎಂಬ ಜನಾಂಗವಾಚಕವು 'ಕರುನಾಡು' ದೇಶವೆಂದೇ ಸೂಚಿಸುತ್ತದೆ. ಕ್ರಿ.ಶ. ಸು. 770ರ ವೇಳ್ವಿಕುಡಿ ತಾಮ್ರಶಾಸನವು 'ಕರುನಾಡಗನ್' ಎಂದು ಜನಾಂಗವಾಚಕವಾಗಿ ಬಳಸಿರುವ ಸಂದರ್ಭದಲ್ಲೂ ಕರುನಾಡು ಒಂದು ದೇಶವೆಂದೇ ಸ್ಪಷ್ಟವಾಗಿದೆ. ಆ ನಂತರ 'ಕನ್ನಡ'ವು ದೇಶವಾಚಕವಾಗಿ ಬಳಸಲ್ಪಟ್ಟಿದೆ ಎಂದು ಭಾವಿಸಬಹುದಾಗಿದೆ. 'ಕಿವಿಗೆ ಇಂಪಾದ' 'ಕರಣ ಮತ್ತು ನಟರ ಸಂಮ್ಮಿಶ್ರರೂಪ' 'ಕಪ್ಪುನಾಡಿನ ಒಳಪ್ರದೇಶ' 'ಎತ್ತರದನಾಡು' 'ಸುವಾಸನಾಯುಕ್ತ ನಾಡು' 'ಭಾವಗಳನ್ನೂ ಒಡಮೂಡಿಸುವ ಕನ್+ಅಳ್' 'ಕಪ್ಪುಮಣ್ಣಿನ ನಾಡು' – ಹೀಗೆ ಅನೇಕ ರೀತಿಯಲ್ಲಿ ವಿದ್ವಾಂಸರು ಕರ್ನಾಟಕ ಮತ್ತು ಕನ್ನಡ ಪದಗಳನ್ನು ಅರ್ಥೈಸಿದ್ದಾರೆ.

ಕರುನಾಡು, ಕರ್ನಾಟಕದ ಭಾಷೆ ಕನ್ನಡವಾದರೂ, ಕರ್ನಾಟಕದಂತೆಯೇ ಕನ್ನಡವನ್ನು ದೇಶವಾಚಕವಾಗಿ, ಕನ್ನಡದಂತೆಯೇ ಕರ್ನಾಟಕವನ್ನು ಭಾಷಾವಾಚಕವಾಗಿ, ಎರಡನ್ನೂ ಕುಲವಾಚಕವಾಗಿ ಪ್ರಯೋಗಿಸಿರುವುದು ಉಂಟು. ಈ ಶಬ್ದಗಳ ಬೆನ್ನು ಹತ್ತಿ ಹೋದಾಗ ದೇಶ, ಭಾಷೆ ಮತ್ತು ಕುಲಗಳ ಪ್ರಾಚೀನತೆಯನ್ನು ಗುರುತಿಸಲು ಸಾಧ್ಯವಾಗುವುದು ಮಹತ್ವದ ಶೋಧವಾಗುತ್ತದೆ. ನಮ್ಮ ಹಿಂದಿನ ಅನೇಕ ವಿದ್ವಾಂಸರ ಈ ಸಾಹಸದ ಕಾರಣದಿಂದ ಕರ್ನಾಟಕವು ಮಹಾಭಾರತದ ಕಾಲಕ್ಕಾಗಲೇ ಪ್ರಸಿದ್ಧವಾದ ನಾಡಾಗಿತ್ತು ಎಂಬದುದು ಸ್ಪಷ್ಟವಾಗುತ್ತದೆ.

**ಪ್ರಾಗಿತಿಹಾಸ :**

ಕರ್ನಾಟಕದಲ್ಲಿ ಆದಿ ಶಿಲಾಯುಗ, ನವ ಶಿಲಾಯುಗ ಮತ್ತು ಬೃಹತ್ ಶಿಲಾಯುಗಗಳ ಪಳೆಯುಳಿಕೆಗಳು ದೊರೆತಿವೆ.

ಚಿಕ್ಕಮಗಳೂರು ಜಿಲ್ಲೆ (ಕಡೂರು, ಲಿಂಗದ ಹಳ್ಳಿ, ನಿಡಘಟ್ಟ), ಚಿತ್ರದುರ್ಗ ಜಿಲ್ಲೆ (ತಾಳ್ಯ, ಜಾನಕಲ್) ಶಿವಮೊಗ್ಗ (ನ್ಯಾಮತಿ), ಬಿಜಾಪುರ ಜಿಲ್ಲೆ (ಮಗ್ಗೇರಿ), ಬಳ್ಳಾರಿ ಜಿಲ್ಲೆ (ದಾರೋಜಿ, ಗಂದಿಗನೂರು, ಹಲಕುಂದಿ, ನಿಟ್ಟೂರು), ತುಮಕೂರು ಜಿಲ್ಲೆ (ಕಿಬ್ಬನ ಹಳ್ಳಿ) ಗಳಲ್ಲಿ ಆದಿಶಿಲಾಯುಗದ ನಿವೇಶನಗಳು ಪತ್ತೆಯಾಗಿವೆ. ಸೂಕ್ಷ್ಮ ಶಿಲಾಯುಧ (ಮೈಕ್ರೋಲಿಥಿಕ್) ಕಾಲದ ನಿವೇಶನಗಳು ಬಿಜಾಪೂರ ಜಿಲ್ಲೆ

(ಸಾಲವಡಗಿ), ಬಳ್ಳಾರಿ ಜಿಲ್ಲೆ (ಸಂಗನ ಕಲ್ಲು), ಬೆಂಗಳೂರು ಜಿಲ್ಲೆ (ಜಾಲಹಳ್ಳಿ) ಮತ್ತು ಬೆಳಗಾಂ ಜಿಲ್ಲೆ (ಸಪ್ತಸಾಗರ) ಮತ್ತಿನ್ನೂ ಹಲವೆಡೆಗಳಲ್ಲಿ ಸೂಕ್ಷ್ಮ ಶಿಲಾಯುಧಕಾಲದ ಅನೇಕ ಆಯುಧಗಳು ಪತ್ತೆಯಾಗಿವೆ.

ಹೊಸ ಶಿಲಾಯುಗ ಮತ್ತು ತಾಮ್ರ ಶಿಲಾಯುಗಗಳ ಕಾಲದ ಹಲವಾರು ನಿವೇಶನಗಳು ಮೈಸೂರು ಜಿಲ್ಲೆ ಹೆಮ್ಮಿಗೆ (ಟಿ.ನರಸೀಪುರ), ಮಂಡ್ಯ ಜಿಲ್ಲೆ (ಪಾಂಡವಪುರ), ರಾಯಚೂರು ಜಿಲ್ಲೆ (ಮಸ್ಕಿ, ಲಿಂಗಸುಗೂರು), ಚಿತ್ರದುರ್ಗ ಜಿಲ್ಲೆ (ಬ್ರಹ್ಮಗಿರಿ), ಬಳ್ಳಾರಿ ಜಿಲ್ಲೆ (ಸಂಗನಕಲ್ಲು) ಕುಪ್ಪಗಲು), ಬಿಜಾಪುರ ಜಿಲ್ಲೆ (ತೇರದಾಳ), ಕೋಲಾರ ಜಿಲ್ಲೆ (ಬನಹಳ್ಳಿ) ಗಳಲ್ಲಿ ಕಂಡುಬಂದಿವೆ.

ಬೃಹತ್ ಶಿಲಾಯುಗ ಅಥವಾ ಕಬ್ಬಿಣದ ಯುಗಗಳ ಪಳೆಯುಳಿಕೆಗಳಿಗೂ ಕರ್ನಾಟಕದಲ್ಲಿ ಕೊರತೆಯಿಲ್ಲ. ಈ ಕಾಲದ ಬೃಹತ್ ಶಿಲಾಗೋರಿಗಳನ್ನು ಮೋರಿಯರ ಮನೆ, ಪಾಂಡವರ ಗುಡಿ ಇತ್ಯಾದಿ ಹೆಸರುಗಳಿಂದ ಗುರುತಿಸಲಾಗುತ್ತದೆ. ಹೊಸ ಶಿಲಾಯುಗದ ಕಾಲದ ಜನರಿಗೆ ತಾಮ್ರದ ಉಪಯೋಗ ತಿಳಿದಿದ್ದಂತೆ, ಬೃಹತ್ ಶಿಲಾಯುಗದ ಜನರಿಗೆ ಕಬ್ಬಿಣದ ಉಪಯೋಗ ಚೆನ್ನಾಗಿ ತಿಳಿದಿತ್ತು. ಇವರ ಕಾಲದ ಶಿಲಾಗೋರಿಗಳಲ್ಲಿ ಕಬ್ಬಿಣದ ಆಯುಧಗಳೂ ದೊರೆಯುತ್ತವೆ. ಹಲವು ವಿಧದ ಶಿಲಾಗೋರಿಗಳನ್ನು ಬೃಹತ್ ಶಿಲಾಯುಗದ ಕಾಲದ ಜನ ನಿರ್ಮಿಸುತ್ತಿದ್ದರು. ಈ ಕಾಲದ ಪಳೆಯುಳಿಕೆಗಳನ್ನು ಬೆಳಗಾಂ, ಬಿಜಾಪುರ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ಕೋಲಾರ, ಬೆಂಗಳೂರು, ಮೈಸೂರು ಮತ್ತು ಕೊಡಗು ಜಿಲ್ಲೆಗಳಲ್ಲಿ ಕಾಣಬಹುದಾಗಿದೆ.

ಪ್ರಾಗಿತಿಹಾಸತಜ್ಞರು ಕರ್ನಾಟಕಕ್ಕೆ ಸಂಬಂಧಿಸಿದಂತೆ ಪ್ರಾಗಿತಿಹಾಸಕಾಲವನ್ನು ಹೀಗೆ ವರ್ಗೀಕರಿಸಿದ್ದಾರೆ.

1. ಹಳೆಯ ಶಿಲಾಯುಗ – ಕ್ರಿ ಪೂ 5,00,000 ದಿಂದ 10,000 ವರ್ಷಗಳವರೆಗೆ
2. ಮಧ್ಯಂತರ ಶಿಲಾಯುಗ – ಕ್ರಿ.ಪೂ. ಸು 10,000 ದಿಂದ 3,000 ವರೆಗೆ.
3. ನವಶಿಲಾಯುಗ – ತಾಮ್ರ ಶಿಲಾಯುಗ – ಕ್ರಿ. ಪೂ. ಸು 2500 ರಿಂದ 800 ರ ವರೆಗೆ
4. ಕಬ್ಬಿಣದ ಯುಗ – ಕ್ರಿ. ಪೂ. 1000 ದಿಂದ 300 ರವರೆಗೆ

ಕ್ರಿ.ಪೂ. 300 ರ ವೇಳೆಗೆ ಸಮಗ್ರ ಕರ್ನಾಟಕದಲ್ಲಿ, ಅಶೋಕನ ಶಾಸನಗಳ ರೂಪದಲ್ಲಿ ಲಿಖಿತ ದಾಖಲೆಗಳು ದೊರೆಯುವುದರಿಂದ, ಆ ನಂತರದ ಕಾಲವನ್ನು ಐತಿಹಾಸಿಕ ಯುಗ ಎಂದು ತೀರ್ಮಾನಿಸಬಹುದು.

ಅದಕ್ಕೆ ಮೊದಲು ಕನಿಷ್ಠ 5 ಲಕ್ಷ ವರ್ಷಗಳ ಕಾಲ ಕರ್ನಾಟಕವು ಮಾನವನ ನೆಲೆಯಾಗಿ, ಅವನ ಬೆಳವಣಿಗೆಯ ವಿವಿಧ ಹಂತಗಳನ್ನು ಪರಿಚಯಿಸುವ ವಿಪುಲ

ಸಾಮಗ್ರಿಯನ್ನು ಹೊಂದಿರುವುದು ಈಗ ಕೇವಲ ಊಹೆಯ ಮಾತಲ್ಲ. ಪ್ರಾಚೀನ ಕರ್ನಾಟಕದ ಮಾನವ ಬದುಕು ನಡೆಸಿದ ರೀತಿಯನ್ನು ಅರ್ಥಮಾಡಿಕೊಳ್ಳುವ ಸ್ಥಿತಿಯಲ್ಲಿ ನಾವಿದ್ದೇವೆ. ಅವನು ಬಳಸಿದ ಆಯುಧಗಳು, ಸಾವನ್ನು ಸ್ವಾಗತಿಸಿದ ರೀತಿ, ಮರಣಾನಂತರದ ಬದುಕಿನ ಬಗ್ಗೆ ಅವನಿಗಿದ್ದ ನಂಬಿಕೆಗಳು, ತನ್ನ ಭಾವನೆಗಳನ್ನು ಅಭಿವ್ಯಕ್ತಿಗೊಳಿಸಲು ತನ್ನ ಶಿಲಾಶಾಸನಗಳಲ್ಲಿ ಬರೆದ ಚಿತ್ರಗಳು, ಶಿಲಾಶ್ರಯಗಳನ್ನು ತ್ಯಜಿಸಿ, ತನ್ನದೇ ಆದ ವಸತಿಯೊಂದನ್ನು ಸಿದ್ಧ ಮಾಡಿಕೊಂಡ ಸುಳಿವುಗಳು ನಮಗೀಗ ಅಚ್ಚರಿಯ ವಿಷಯಗಳಲ್ಲ. ಕರ್ನಾಟಕವು ಪ್ರಾಚೀನ ಮಾನವನ ಎಲ್ಲಾ ಕಾಲದ ನೆಲೆಯಾಗಿತ್ತು ಎಂಬ ಸತ್ಯಸಂಗತಿ ಈಗ ಮನುಷ್ಯನ ಇತಿಹಾಸದ ಅಭ್ಯಾಸಿಗಳಿಗೆಲ್ಲ ತಿಳಿದ ವಿಷಯ. ಇದೇ ಮಾನವ ವಿವಿಧ ಹಂತದ ಬೆಳವಣಿಗೆಯ ಘಟ್ಟಗಳನ್ನು ದಾಟಿ ಇತಿಹಾಸಕಾಲಕ್ಕೆ ಪ್ರವೇಶಿಸಿದ್ದನ್ನು ಅಶೋಕನ ಕಾಲದ ಶಾಸನಗಳ ಕಾಲಕ್ಕೆ ಅಂದರೆ ಕ್ರಿ. ಪೂ. 3ನೆಯ ಶತಮಾನದ ಕಾಲಕ್ಕೆ ನಾವು ಗುರುತಿಸಲು ಸಾಧ್ಯವಾಗಿದೆ.

**ಇತಿಹಾಸದ ಆರಂಭ :**

ಕರ್ನಾಟಕದ ಇತಿಹಾಸ ಆರಂಭವಾಗುವುದು ಕ್ರಿ.ಪೂ. 3ನೆಯ ಶತಮಾನದ ನಂತರ ಎಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಆ ಮೊದಲಿನ ಯಾವ ಲಿಖಿತ ದಾಖಲೆಗಳೂ ನಮಗೆ ಈವರೆಗೆ ದೊರೆತಿಲ್ಲ. ಕರ್ನಾಟಕದಲ್ಲಿ ದೊರೆತಿರುವ ಸಧ್ಯಕ್ಕೆ ಮೊಟ್ಟ ಮೊದಲಿನ ಲಿಖಿತ ದಾಖಲೆಗಳೆಂದರೆ ಅಶೋಕನ ಲಘು ಪ್ರಸ್ತರ ಶಾಸನಗಳು. ಇವುಗಳ ಕಾಲ ಕ್ರಿ.ಪೂ. 261–260 ಎಂದು ತಿಳಿಯಲಾಗಿದೆ. ರಾಯಚೂರು ಜಿಲ್ಲೆಯ ಮಸ್ಕಿ, ಕೊಪ್ಪಳ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟಂಗ ರಾಮೇಶ್ವರ, ಸಿದ್ದಾಪುರ, ಬಳ್ಳಾರಿ ಜಿಲ್ಲೆಯ ನಿಟ್ಟೂರು, ಉದಗೋಳ ಮತ್ತು ಗುಲ್ಬರ್ಗಾ ಜಿಲ್ಲೆಯ ಸನ್ನತಿಗಳಲ್ಲಿ ಅಶೋಕನ ಶಾನಗಳು ದೊರೆತಿದ್ದು, ಇವುಗಳಲ್ಲಿ ಮಸ್ಕಿಯ ಶಾಸನವು ದೇವಾನಾಂಪ್ರಿಯ ಪ್ರಿಯದರ್ಶಿಯೇ ಅಶೋಕ ಎಂಬುದನ್ನು ಸ್ಪಷ್ಟಪಡಿಸಿತು. ಬ್ರಹ್ಮಗಿರಿಯ ಶಾಸನದಿಂದ ಸುವರ್ಣಗಿರಿಯಲ್ಲಿ ಒಬ್ಬ ಯುವರಾಜನೂ, ಇಸಿಲ ಎಂಬಲ್ಲಿ ಒಬ್ಬ ಮಹಾಮಾತ್ರನೂ ಇದ್ದ ವಿಷಯ ತಿಳಿಯುತ್ತದೆ. ಈಗಿನ ರಾಯಚೂರು ಜಿಲ್ಲೆಯ ಕನಕಗಿರಿಯೇ ಆಗಿನ ಸುವರ್ಣಗಿರಿ ಮತ್ತು ಈಗಿನ ಬ್ರಹ್ಮಗಿರಿಯೇ ಆಗಿನ 'ಇಸಿಲ' ಇರಬೇಕೆಂದು ವಿದ್ವಾಂಸರ ಅಭಿಪ್ರಾಯಗಳಾಗಿವೆ.

ಅಶೋಕ ಶಾಸನಗಳೆಲ್ಲವೂ ಧರ್ಮಶಾಸನಗಳು. ಇವುಗಳಲ್ಲಿ ರಾಜಕೀಯ ಮಹತ್ವದ ವಿವರಗಳೇನಿಲ್ಲ. ಬ್ರಾಹ್ಮೀಲಿಪಿ ಮತ್ತು ಪ್ರಾಕೃತ ಭಾಷೆಯಲ್ಲಿರುವ (ಬ್ರಹ್ಮಗಿರಿಯ ಶಾಸನದ ಕೊನೆಯ ಸಾಲು ಮಾತ್ರ ಖರೋಷ್ಟಿ ಲಿಪಿಯಲ್ಲಿದೆ) ಅಶೋಕನ ಕರ್ನಾಟಕದ ಎಲ್ಲಾ ಶಾಸನಗಳ ಉದ್ದೇಶ ಧರ್ಮಪ್ರಸಾರ; ಜನರನ್ನು ಧರ್ಮದಿಂದ ನಡೆಯುವಂತೆ ಕೋರುವುದೇ ಆಗಿದೆ. ಈ ಶಾಸನಗಳೆಲ್ಲವೂ

ಅಶೋಕನ ಸಾಮ್ರಾಜ್ಯದ ಗಡಿಪ್ರದೇಶದಲ್ಲಿ ಕೊರೆಯಲ್ಪಟ್ಟುವು ಎಂದು ಭಾವಿಸುವುದಾದರೆ, ಕರ್ನಾಟಕವು ಅಶೋಕನ ಸಾಮ್ರಾಜ್ಯದ ವ್ಯಾಪ್ತಿಗೆ ಒಳಪಟ್ಟು, ಗಡಿರಾಜ್ಯವಾಗಿದ್ದಿರಬೇಕು. ಅಶೋಕನ ತಾತನಾದ ಚಂದ್ರಗುಪ್ತನು, ಭದ್ರಬಾಹುಮುನಿಗಳ ಶಿಷ್ಯತ್ವನ್ನು ಸ್ವೀಕರಿಸಿ, ಜೈನಧರ್ಮವನ್ನು ಸ್ವೀಕರಿಸಿ, ತನ್ನ ಬದುಕಿನ ಕೊನೆಯ ಕಾಲವನ್ನು ಶ್ರವಣ ಬೆಳಗೊಳದಲ್ಲಿ ಕಳೆದು, ಅಲ್ಲಿಯೇ ಮರಣ ಹೊಂದಿದನು ಎಂಬ ಐತಿಹ್ಯವೂ ಇದೆ.

**ಶಾತವಾಹನರು :**

ಮೌರ್ಯರ ಬಳಿಕ ಕರ್ನಾಟಕವು ಶಾತವಾಹನರ ವಶವಾಯಿತು. ಆ ವಂಶದ ಕುಂತಲ ಶಾತಕರ್ಣಿ ಮತ್ತು ಹಾಲರು ಕರ್ನಾಟಕವನ್ನಾಳಿದರು. ಶಾತವಾಹನರ ಸಾಮಂತರಾಗಿದ್ದ ಚುಟುಗಳು ಕ್ರಿ. ಶ. 3 ನೆಯ ಶತಮಾನದ ವರೆಗೂ ಕರ್ನಾಟಕವನ್ನಾಳಿದರು. ಆ ವಂಶದವರಲ್ಲಿ ವಿಣ್ಹುಕಡ ಚುಟುಕುಲಾನಂದ ಮತ್ತು ಸಾತ್ತಕಣ್ಣಿ ಎಂಬಿಬ್ಬರ ಹೆಸರು ನಮಗೆ ತಿಳಿದು ಬರುತ್ತದೆ. ಕ್ರಿ.ಪೂ. 3 ನೆಯ ಶತಮಾನದಿಂದ ಕ್ರಿ. ಶ. 3ನೆಯ ಶತಮಾನದವರೆಗೆ ಶಾತವಾಹನರು ಮತ್ತು ಚುಟುಗಳು ಕರ್ನಾಟಕವನ್ನಾಳುತ್ತಿದ್ದ ಸಮಯದಲ್ಲೇ ಆಳುಪರು ಕರಾವಳಿಯಲ್ಲಿ ಪ್ರಬಲರಾಗಿದ್ದು, ಎರಡೂ ವಂಶಗಳವರು ಸಮುದ್ರದ ಮೂಲಕ ವಿದೇಶಗಳೊಡನೆ ಸಂಪರ್ಕವಿರಿಸಿಕೊಂಡಿದ್ದರು ಎಂದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ.

**ಕದಂಬರು :**

ಕರ್ನಾಟಕದ ಸ್ಪಷ್ಟ ಇತಿಹಾಸ ಗೋಚರವಾಗುವುದು ಕದಂಬರ ಮಯೂರಶರ್ಮನ ಆಳ್ವಿಕೆಯ ನಂತರ ; ತಾಳಗುಂದದ ಮಯೂರಶರ್ಮನು ಕರ್ನಾಟಕದಲ್ಲಿ ಕನ್ನಡಿಗರೇ ಆದ ರಾಜ್ಯವೊಂದನ್ನು ಕಟ್ಟಿದ ಮೊದಲ ಕನ್ನಡಿಗ. ಮೊದಲ ಕನ್ನಡ ದೊರೆಯೆಂದು ಪರಿಗಣಿಸಬಹುದಾದ ಮಯೂರವರ್ಮನ ತಂದೆ ಬಂಧುಷೇಣ ಮತ್ತು ತಾತ ವೀರಶರ್ಮ. ತಾತ ಮತ್ತು ಗುರು ವೀರಶರ್ಮನ ಜೊತೆಗೆ ವಿದ್ಯಾಭ್ಯಾಸದ ಸಲುವಾಗಿ ಮಯೂರಶರ್ಮನು ಪಲ್ಲವರ ರಾಜಧಾನಿ ಕಂಚಿಗೆ ಹೋಗಿದ್ದಾಗ, ಅಲ್ಲಿ ಯಾವುದೋ ಸಂದರ್ಭದಲ್ಲಿ ಅವಮಾನಿತನಾಗಿ, ಸ್ವದೇಶಕ್ಕೆ ಹಿಂದಿರುಗಿ ಬನವಾಸಿಯನ್ನು ಕೇಂದ್ರ ಮಾಡಿಕೊಂಡು ಬಂದು ರಾಜ್ಯವನ್ನು ಕಟ್ಟಿದ, ಸ್ವಾಭಿಮಾನ ಮತ್ತು ಸಾಹಸಗಳಿಗೆ ಹೆಸರಾದ ಮಯೂರವರ್ಮನಿಂದ ಆರಂಭವಾದ ಕದಂಬರಾಜ್ಯ ಕ್ರಿ. ಶ. 325 ರಿಂದ 540 ರ ವರೆಗೂ ಪ್ರಬಲವಾಗಿತ್ತು. ಬೆಳಗಾಂ, ಧಾರವಾಡ, ಉತ್ತರ ಕನ್ನಡ, ಶಿವಮೊಗ್ಗ, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳು ಕದಂಬರ ಆಳ್ವಿಕೆಗೆ ಸೇರಿದ್ದವು. ಕನ್ನಡದ ಮೊಟ್ಟಮೊದಲ ಶಾಸನವೆಂದು ಈವರೆಗೆ ಒಪ್ಪಿತವಾಗಿರುವ ಹಲ್ಮಿಡಿಯ ಶಾಸನವು ಕದಂಬರ ಆಳ್ವಿಕೆಯ ಕಾಲಕ್ಕೇ ಸೇರಿದೆ. ಕರ್ನಾಟಕದ ರಾಜಕೀಯ

ಇತಿಹಾಸಕ್ಕೆ ಹೊಸದಿಕ್ಕು ತೋರಿಸಿದ ಕೀರ್ತಿ ಮಯೂರವರ್ಮನದಾದರೆ, ಅವನ ನಂತರ ರಾಜ್ಯವಾಳಿದ ಅವನ ವಂಶಸ್ಥರು ತಮ್ಮ ರಾಜ್ಯ ಕೀರ್ತಿ, ಗೌರವಗಳನ್ನು ಕಾಪಾಡಿದರು. ವೈದಿಕರಾದರೂ, ಸರ್ವಧರ್ಮಗಳಿಗೂ ಗೌರವ ಸಲ್ಲಿಸಿದರು.

### ಗಂಗರು :

ಕರ್ನಾಟಕದಲ್ಲಿ ಉತ್ತರದಲ್ಲಿ ಬನವಾಸಿಯನ್ನು ಕೇಂದ್ರ ಮಾಡಿಕೊಂಡು ಕದಂಬರು ರಾಜ್ಯವಾಳುತ್ತಿದ್ದಾಗಲೇ, ಅವರ ಸಮಕಾಲೀನರಾಗಿ ಕರ್ನಾಟಕದ ದಕ್ಷಿಣದಲ್ಲಿ ಕುವಳಾಲ (ಕೋಲಾರ)ವನ್ನು ಕೇಂದ್ರ ಮಾಡಿಕೊಂಡು ರಾಜ್ಯವಾಳಿದವರು ಗಂಗರು. ಗಂಗರ ಮೂಲಪುರುಷ ಕೊಂಗುಣಿವರ್ಮನಾದರೂ, ಗಂಗವಂಶದ ಕೀರ್ತಿಯನ್ನು ಹಾರಿಸಿದವರು ದುರ್ವಿನೀತ, ಶ್ರೀಪುರುಷ, ಶಿವಮಾರ, ಇಮ್ಮಡಿ ಮಾರಸಿಂಹ ಮುಂತಾದ ರಾಜರುಗಳು; ಗಂಗವಾಡಿ 96000 ದ ರಾಜ್ಯವನ್ನಾಳಿದ ಗಂಗರು ಈಗಿನ ಕರ್ನಾಟಕದ ಬೆಂಗಳೂರು, ಕೊಡಗು, ಮಂಡ್ಯ, ಮೈಸೂರು ಕಡಪ ಜಿಲ್ಲೆಗಳು, ಮತ್ತು ತಮಿಳುನಾಡಿನ ಧರ್ಮಪುರಿ, ಸೇಲಂ, ಪೆರಿಯಾರ್ ಹಾಗೂ ಕೊಯಮತ್ತೂರು ಜಿಲ್ಲೆಗಳ ಭಾಗಗಳನ್ನೊಳಗೊಂಡ ಪ್ರದೇಶವನ್ನು ಆಳಿದರು. ಕ್ರಿ.ಶ. 325 ರಿಂದ ಕ್ರಿ.ಶ. ಸು 1000 ದ ವರೆಗೆ ರಾಜ್ಯಭಾರ ಮಾಡಿದ ಗಂಗರು ಮೊದಲಿಗೆ ಸ್ವತಂತ್ರರಾಗಿದ್ದರೂ, ಕೊನೆಯ ಕಾಲದಲ್ಲಿ ಬಾದಾಮಿಯ ಚಾಲುಕ್ಯರು ಮತ್ತು ರಾಷ್ಟ್ರಕೂಟರ ಸಾಮಂತರಾಗಿ ಆಳಿದರು. ಮೊದಲಿಗೆ ಕೋಲಾರ ಮತ್ತು ಆನಂತರ ತಲಕಾಡನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಗಂಗರಲ್ಲಿ ಶ್ರೀಪುರುಷ ಬಹಳ ಪ್ರಖ್ಯಾತ ದೊರೆ. ಇವರು ಜೈನರಾದರೂ ಎಲ್ಲ ಧರ್ಮಗಳನ್ನೂ ಸಮಾನವಾಗಿ ಕಂಡವರು. ಗಂಗವಂಶದ ಕೊನೆಯ ರಾಚಮಲ್ಲನ ಕಾಲದಲ್ಲಿಯೇ ಚಾವುಂಡರಾಯನು ಶ್ರವಣಬೆಳಗೊಳದ ಗೊಮ್ಮಟೇಶ್ವರನ ಪ್ರತಿಮೆಯನ್ನು ಸ್ಥಾಪಿಸಿದ್ದು ಎಂದು ತಿಳಿಯಲಾಗಿದೆ.

ಗಂಗರ ದುರ್ವಿನೀತನು ಬಹಳ ಪ್ರಭಾವಶಾಲಿಯಾದ ರಾಜನಾಗಿದ್ದು, ಕವಿಯೂ ಸಾಹಿತ್ಯಾಭಿಮಾನಿಯೂ ಆಗಿದ್ದು, ಭಾರವಿಗೆ ಆಶ್ರಯದಾತನಾಗಿದ್ದನೆಂದು ತಿಳಿಯಲಾಗಿದೆ. ಶ್ರೀಪುರುಷನು ಗಜಶಾಸ್ತ್ರವೆಂಬ ಗ್ರಂಥವನ್ನೂ, ಶಿವಮಾರನು ಗಜಾಷ್ಟಕ ಎಂಬ ಗ್ರಂಥವನ್ನೂ ರಚಿಸಿದ್ದುದಾಗಿ ತಿಳಿದು ಬರುತ್ತದೆ. ಆದರೆ ಇವುಗಳಾವುವೂ ಈವರೆಗೆ ಲಭ್ಯವಿಲ್ಲ.

### ಬಾದಾಮಿಯ ಚಾಲುಕ್ಯರು :

ಕರ್ನಾಟಕದ ಉತ್ತರದಲ್ಲಿ ಕದಂಬರನ್ನು ಸೋಲಿಸಿ, ರಾಜ್ಯಭಾರ ಮಾಡಿದವರು ಬಾದಾಮಿಯ ಚಾಲುಕ್ಯರು. ಇವರ ಕಾಲದಲ್ಲಿ ಕರ್ನಾಟಕವು ವಿಸ್ತರಿಸಲ್ಪಟ್ಟಿತು. ಕದಂಬರ ಇಮ್ಮಡಿ ಕೃಷ್ಣವರ್ಮನನ್ನು ಕ್ರಿ.ಶ. 540ರಲ್ಲಿ ಸೋಲಿಸಿದ ಮೊದಲನೆಯ ಪುಲಿಕೇಶಿಯಿಂದ ಬಾದಾಮಿ ಚಾಲುಕ್ಯರ ಸ್ವತಂತ್ರ ಸಾಮ್ರಾಜ್ಯ ಸ್ಥಾಪನೆಯಾಯಿತು.

ಅವನ ಕಾಲದಲ್ಲಿ, (ಕ್ರಿ. ಶ. 543) ಬಾದಾಮಿಯ ಕೋಟೆಯು ಕಟ್ಟಲ್ಪಟ್ಟಿತು. ವೈದಿಕ ಧರ್ಮಾವಲಂಬಿಗಳಾಗಿದ್ದ ಬಾದಾಮಿಯ ಚಾಲುಕ್ಯರು, ಯಾಗ, ಯಜ್ಞಗಳ ಆಚರಣೆಗೆ ಪ್ರಾಧಾನ್ಯತೆ ನೀಡಿದ್ದಂತೆ ತೋರುತ್ತದೆ. ಮೊದಲನೆಯ ಪುಲಿಕೇಶಿಯ ಮೊಮ್ಮಗ ಇಮ್ಮಡಿ ಪುಲಿಕೇಶಿಯು ಬಾದಾಮಿ ಚಾಲುಕ್ಯ ಮನೆತನದಲ್ಲಿ ಬಹಳ, ಸಮರ್ಥನಾದ ದೊರೆ. ಇವನು ಅನೇಕ ದಿಗ್ವಿಜಯಗಳನ್ನು ಮಾಡಿ, ತನ್ನ 'ಕರ್ನಾಟಕ ಬಲ' ಎಂಬ ಸೈನ್ಯದಿಂದ ರಾಜ್ಯವನ್ನು ವಿಸ್ತರಿಸುವ ಸಂದರ್ಭದಲ್ಲಿ, ಉತ್ತರಾಪಥೇಶ್ವರನೆಂಬ ಹೆಸರಿನಿಂದ ಪ್ರಬಲನಾಗಿದ್ದ ಕನೂಜಿನ ಶ್ರೀ ಹರ್ಷನನ್ನು ನರ್ಮದಾನದಿಯ ತೀರದಲ್ಲಿ ಸೋಲಿಸಿ ಮಧ್ಯಭಾರತದ ಮಾಳವರನ್ನೂ, ಗುರ್ಜರರನ್ನೂ ಸೋಲಿಸಿದ. ಕೋಸಲ, ಕಳಿಂಗದ ದೊರೆಗಳು ಶರಣಾಗತರಾದರು. ಕಂಚಿಯ ಪಲ್ಲವದೊರೆ ಮಹೇಂದ್ರವರ್ಮನನ್ನು ಸೋಲಿಸಿದ. ಇಮ್ಮಡಿ ಪುಲಿಕೇಶಿಯ ಕಾಲದಲ್ಲೇ ಅವನ ಆಸ್ಥಾನಕ್ಕೆ ಚೀನಾದ ಪ್ರವಾಸಿ ಹ್ಯುಯೆನ್‌ತ್ಸಾಂಗನು ಬಂದಿದ್ದು, ಪುಲಿಕೇಶಿಯನ್ನು ಕೀರ್ತಿಸಿದ್ದಾನೆ. ಕನ್ನಡಿಗರನ್ನು ಹೊಗಳಿದ್ದಾನೆ. ನರ್ಮದೆಯ ವರೆಗೆ ಕರ್ನಾಟಕ ಸಾಮ್ರಾಜ್ಯವನ್ನು ವಿಸ್ತರಿಸಿದ ಕೀರ್ತಿ ಇಮ್ಮಡಿ ಪುಲಿಕೇಶಿಗೆ ಸಲ್ಲುತ್ತದೆ. ಅವನ ಆಸ್ಥಾನದಲ್ಲಿ ದಂಡನಾಯಕನೂ ಆಗಿದ್ದ ಕವಿ ರವಿಕೀರ್ತಿಯು ಪುಲಿಕೇಶಿಯ ವಿಜಯಯಾತ್ರೆಯನ್ನು ಶಾಸನಕಾವ್ಯವೊಂದರ ಮೂಲಕ ದಾಖಲಿಸಿದ್ದಾನೆ. ತನ್ನನ್ನು ಕಾಳಿದಾಸ ಮತ್ತು ಭಾರವಿಗಳಿಗೆ ಹೋಲಿಸಿ ಕೊಂಡಿರುವ ಕವಿ ರವಿಕೀರ್ತಿಯು ತಾನೇ ಕಟ್ಟಿಸಿದ ಮೇಗುತಿ ದೇವಾಲಯದ ಗೋಡೆಯ ಮೇಲೆ ಕೊರೆಸಿರುವ ಅವನ ಶಾಸನವು ಇಮ್ಮಡಿ ಪುಲಿಕೇಶಿಯ ವ್ಯಕ್ತಿತ್ವನ್ನು ಸಮರ್ಥವಾಗಿ ದಾಖಲಿಸಿದೆ. ಮೊದಲನೆಯ ವಿಕ್ರಮಾದಿತ್ಯನ ಕಾಲದಲ್ಲಿ ಗುಜರಾತಿನ ಚಾಲುಕ್ಯಶಾಖೆ ಆರಂಭಗೊಂಡಿತು. ಮೊದಲನೆಯ ವಿಕ್ರಮಾದಿತ್ಯನ ಕಾಲದಲ್ಲಿ ಪಲ್ಲವರ ವಿರುದ್ಧ ಹಲವಾರು ಯುದ್ಧಗಳನ್ನು ಮಾಡಿದ್ದರೂ, ಯುದ್ಧಗಳ ನಡುವೆ ದೇಶವು ಉತ್ತಮವಾಗಿ ಬೆಳೆಯುವಂತೆ, ಶಾಂತಿ ಲಭಿಸುವಂತೆ ಶ್ರಮಿಸಿದ. ಮೊದಲನೆಯ ವಿಕ್ರಮಾದಿತ್ಯನ ನಂತರ ಅವನ ಮಗ ವಿನಯಾದಿತ್ಯ, ಮತ್ತು ಆ ನಂತರ ವಿನಯಾದಿತ್ಯನ ಮಗ ವಿಜಯಾದಿತ್ಯರು ಚಾಲುಕ್ಯ ಸಾಮ್ರಾಜ್ಯವನ್ನಾಳಿದರು. ಎರಡನೆಯ ವಿಕ್ರಮಾದಿತ್ಯನು ವಿಜಯಾದಿತ್ಯನ ಮಗ. ಇವನ ಕಾಲದಲ್ಲಿ ಕರ್ನಾಟಕ ಬಲವು ಕಂಚಿಯನ್ನು ಪಲ್ಲವರಿಂದ ವಶಪಡಿಸಿಕೊಂಡಿತು. ಆದರೆ ಪಲ್ಲವರಂತೆ ಇವರು ಕಂಚಿಯನ್ನು ಹಾಳು ಮಾಡಲಿಲ್ಲ. ಬದಲಿಗೆ ಕಂಚಿಯ ದೇವಾಲಯಕ್ಕೆ ಹಲವಾರು ದಾನಗಳನ್ನು ಮಾಡಿದರು. ಬಾದಾಮಿ ಚಾಲುಕ್ಯ ವಂಶವು ಎರಡನೆಯ ಕೀರ್ತಿವರ್ಮನೊಂದಿಗೆ ಕ್ರಿ.ಶ. 757ರ ಸುಮಾರಿಗೆ ಅಳಿದು, ಆ ನಂತರ ಕರ್ನಾಟಕವು ಅವರ ಮಾಂಡಳಿಕರಾಗಿದ್ದ ರಾಷ್ಟ್ರಕೂಟರ ವಶವಾಯಿತು. ಬಾದಾಮಿ ಚಾಲುಕ್ಯ ಕಾಲದಲ್ಲಿ ಕರ್ನಾಟಕವು ರಾಜ್ಯ ವಿಸ್ತರಣೆ ಮಾಡಿಕೊಂಡಿತು. ಕರ್ನಾಟಕ ಬಲ ಎಂಬ ಸೈನ್ಯವು ಪ್ರಸಿದ್ಧಿ ಪಡೆದಿತ್ತು. ತನ್ನ ಜೊತೆಗೇ ಚಾಲುಕ್ಯ ಶಾಖೆಗಳು

ನೆರೆಹೊರೆಯಲ್ಲಿ ಸ್ಥಾಪನೆಗೊಂಡು, ಬೆಳೆಯಲು ಸಹಾಯಕವಾಯಿತು. ಬಾದಾಮಿ ಚಾಲುಕ್ಯರ ಕಾಲದಲ್ಲಿ ಹಲವಾರು ದೇವಾಲಯಗಳ ನಿರ್ಮಾಣದ ಕಾರಣದಿಂದಾಗಿ ಕರ್ನಾಟಕದ ವಾಸ್ತುಶಿಲ್ಪ ಇತಿಹಾಸದಲ್ಲೂ ಶಾಶ್ವತ ಸ್ಥಾನವನ್ನು ಗಳಿಸಿದೆ. ಕರ್ನಾಟಕವನ್ನು ಆಳಿದ ಮೊದಲ ಚಾಲುಕ್ಯರ ರಾಜಧಾನಿಯು ಬಾದಾಮಿಯಾಗಿದ್ದುದರಿಂದ, ಅವರನ್ನು ಬಾದಾಮಿ ಚಾಲುಕ್ಯರೆಂದೇ ಗುರುತಿಸಲಾಗಿದೆ.

**ರಾಷ್ಟ್ರಕೂಟರು :**

ಬಾದಾಮಿಯ ಚಾಲುಕ್ಯರ ನಂತರ ಕರ್ನಾಟಕ ಮತ್ತು ಈಗಿನ ಮಹಾರಾಷ್ಟ್ರದ ದಕ್ಷಿಣ ಭಾಗಗಳನ್ನು ಕ್ರಿ.ಶ. ಸು 750 ರಿಂದ 980 ರವರೆಗೆ ಆಳಿದವರು ರಾಷ್ಟ್ರಕೂಟರು. ಗುಲ್ಬರ್ಗ ಜಿಲ್ಲೆಯ ಮಾನ್ಯಖೇಟ (ಈಗಿನ ಮಳಖೇಡ)ವು ಅವರ ರಾಜಧಾನಿಯಾಗಿತ್ತು. ಈ ವಂಶದಲ್ಲಿ 1ನೆಯ ಕೃಷ್ಣ, ಧ್ರುವ, ಮೂರನೆಯ ಗೋವಿಂದ, ನೃಪತುಂಗನೆಂಬ ಹೆಸರು ಪಡೆದ 1ನೆಯ ಅಮೋಘವರ್ಷ ಮತ್ತು 3ನೆಯ ಕೃಷ್ಣ ಖ್ಯಾತಿ ಪಡೆದ ದೊರೆಗಳು.

ಚಳುಕ್ಯ ಸಾಮ್ರಾಜ್ಯವನ್ನು ವಶಪಡಿಸಿಕೊಂಡು ಒಂದನೆಯ ಕೃಷ್ಣನು, ಆ ನಂತರ ಅದನ್ನು ವಿಸ್ತರಿಸುವ ಸಲುವಾಗಿ ದಕ್ಷಿಣದಲ್ಲಿ ತಲಕಾಡು ಗಂಗರನ್ನೂ, ವೆಂಗಿಯ ಚಾಲುಕ್ಯರನ್ನೂ ಸೋಲಿಸಿ, ಕಾವೇರಿಯಿಂದ ಉತ್ತರಕ್ಕೆ ವಿಂಧ್ಯದವರೆಗೂ ಕರ್ನಾಟಕವನ್ನು ವಿಸ್ತರಿಸಿದ, ಇವನ ಕಾಲದಲ್ಲೇ ಪ್ರಪಂಚದ ವಿಸ್ಮಯಗಳಲ್ಲೊಂದಾದ ಎಲ್ಲೋರದ ಕೈಲಾಸ ದೇವಾಲಯ ನಿರ್ಮಾಣವಾದದ್ದು. ಮೊದಲನೆಯ ಕೃಷ್ಣ ವಿಲಾಸಪ್ರಿಯನಾಗಿ ಬಹುಬೇಗ ಅಧಿಕಾರ ಕಳೆದುಕೊಂಡು, ಅವನ ತಮ್ಮ ಧ್ರುವನು ಅಧಿಕಾರ ವಹಿಸಿಕೊಂಡನು. ರಾಷ್ಟ್ರಕೂಟರ ಸಮರ್ಥ ದೊರೆಗಳಲ್ಲಿ ಧ್ರುವನು ಒಬ್ಬನು.

ರಾಷ್ಟ್ರಕೂಟರಲ್ಲಿ ಇಡೀ ಭರತಖಂಡವನ್ನು ತಮ್ಮ ಆಡಳಿತ ವ್ಯಾಪ್ತಿಗೆ ಸೇರಿಸಿಕೊಂಡವನು ಮೂರನೆಯ ಗೋವಿಂದ. ಇವರ ಕಾಲದಲ್ಲೇ ಗುಜರಾತಿನಲ್ಲಿ ರಾಷ್ಟ್ರಕೂಟರ ಶಾಖೆಯೊಂದು ಅಧಿಕಾರ ಪಡೆಯಿತು. ಮೂರನೆಯ ಗೋವಿಂದನ ಮಗನೇ ನೃಪತುಂಗನೆಂದು ಖ್ಯಾತಿ ಪಡೆದಿರುವ ಒಂದನೆಯ ಅಮೋಘವರ್ಷ. ಅವನಿಗೆ ರಾಜಕೀಯಕ್ಕಿಂತ ಧರ್ಮವು ಪ್ರಿಯವಾಗಿದ್ದಂತೆ, ಸಾಹಿತ್ಯಾಸಕ್ತಿಯಿದ್ದಂತೆ ಕಂಡು ಬರುತ್ತದೆ. ಕನ್ನಡದ ಮೊದಲ ಕೃತಿಯಾಗಿ ದೊರೆತಿರುವ 'ಕವಿರಾಜಮಾರ್ಗ'–ಲಕ್ಷಣ ಗ್ರಂಥವೂ ಇವನ ಆಸ್ಥಾನದಲ್ಲೇ ರಚಿಸಲ್ಪಟ್ಟುದು. ಅಮೋಘವರ್ಷ ನೃಪತುಂಗನ ನಂತರ ಅವನ ಮಗ ಇಮ್ಮಡಿಕೃಷ್ಣ ಅಧಿಕಾರ ವಹಿಸಿಕೊಂಡನು. ಆ ನಂತರ ಮೂರನೆಯ ಕೃಷ್ಣನವರೆಗೆ ಯಾವ ರಾಜರೂ ಪ್ರಬಲರಾಗಿರಲಿಲ್ಲ. ಇವನು ಗಂಗರೊಡನೆ ವೈವಾಹಿಕ ಸಂಬಂಧ ಬೆಳೆಸಿದನು. ರಾಷ್ಟ್ರಕೂಟರಿಂದ ಹಿಂದೊಮ್ಮೆ ತಮ್ಮ ರಾಜ್ಯವನ್ನು ಕಳೆದುಕೊಂಡಿದ್ದ ಚಾಲುಕ್ಯರು (ಬಾದಾಮಿ) ಮತ್ತೆ ಅದೇ ರಾಜ್ಯವನ್ನು ಪಡೆದುಕೊಂಡರು. ಈ ನಿಟ್ಟಿನಲ್ಲಿ ಇಮ್ಮಡಿ ತೈಲಪನ ಶ್ರಮ ಅಪಾರವಾದುದು.

## ಕಲ್ಯಾಣದ ಚಾಲುಕ್ಯರು :

ರಾಷ್ಟ್ರಕೂಟರ ನಂತರ ಮತ್ತೆ ಆಳತೊಡಗಿದ ಚಾಲುಕ್ಯರು ಕಲ್ಯಾಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡದ್ದರಿಂದ ಅವರನ್ನು ಕಲ್ಯಾಣದ ಚಾಲುಕ್ಯರು ಎಂದು ಕರೆಯಲಾಗಿದೆ. ಕ್ರಿ.ಶ. 973ರಲ್ಲಿ ಇಮ್ಮಡಿ ತೈಲಪನಿಂದ ಆರಂಭಗೊಂಡ ಈ ವಂಶದ ಅಧಿಕಾರವು ಕ್ರಿ.ಶ. 1189 ರವರೆಗೂ ಮುಂದುವರೆಯಿತು. ತೈಲಪನ ಕಾಲಕ್ಕೆ ಕಲ್ಯಾಣ ಚಾಲುಕ್ಯ ಸಾಮ್ರಾಜ್ಯವು ರಾಷ್ಟ್ರಕೂಟರ ಆಳ್ವಿಕೆಯ ಪ್ರಾಂತ್ಯಗಳನ್ನೇ ಅಲ್ಲದೆ ಗಂಗವಾಡಿ ಮತ್ತು ನೊಳಂಬವಾಡಿಗಳನ್ನೂ ಒಳಗೊಂಡಿತ್ತು.

ಇಮ್ಮಡಿ ತೈಲಪನ ಮರಣಾನಂತರ ಅಧಿಕಾರಕ್ಕೆ ಬಂದ ಅವನ ಮಗ ಇರಿವ ಬೆಡಂಗ ಸತ್ಯಾಶ್ರಯನು (ಕ್ರಿ.ಶ. 997–1008) ಚೋಳ ರಾಜರಾಜ ಮತ್ತು ರಾಜೇಂದ್ರರೊಡನೆ ಯುದ್ಧಮಾಡಿ, ಅವರ ಆಕ್ರಮಣಕಾರೀ ಹೋರಾಟವನ್ನು ವಿರೋಧಿಸಿದ. ಕೊಂಕಣದ ಮಾಂಡಲಿಕ ಶಿಲಾಹಾರ ವಂಶದ ಅಪರಾಜಿತನನ್ನು ಸತ್ಯಾಶ್ರಯನು ಸೋಲಿಸಿದ. ಗುಜರಾತಿನಲ್ಲಿ ಆಳುತ್ತಿದ್ದ ಚಾಲುಕ್ಯ ಶಾಖೆಯ ನೆರವಿಗೂ ಧಾವಿಸಿದ. ನಂತರ ಆಳಿದ ಚಾಲುಕ್ಯ ರಾಜರಲ್ಲಿ ಪ್ರಮುಖರಾದವರು ಇಮ್ಮಡಿ ಜಯಸಿಂಹ (1015–1044) ಮೊದಲನೆಯ ಸೋಮೇಶ್ವರ (1044–1068) ವಿಕ್ರಮಾದಿತ್ಯ (1076–1127) ಸುಮಾರು 50 ವರ್ಷಗಳ ಕಾಲ ಆರನೆಯ ವಿಕ್ರಮಾದಿತ್ಯ ರಾಜ್ಯವಾಳಿದ. ತಾನು ಪಟ್ಟಕ್ಕೆ ಬರುತ್ತಿದ್ದಂತೆಯೇ ತನ್ನ ಹೆಸರಿನಲ್ಲಿ ಚಾಲುಕ್ಯ ವಿಕ್ರಮ ಶಕೆಯನ್ನು ಆರಂಭಿಸಿದ. ಆರನೆಯ ವಿಕ್ರಮಾದಿತ್ಯನು ಕವಿಗಳಿಗೆ ಆಶ್ರಯದಾತನಾಗಿದ್ದ. ಬಿಲ್ಹಣನ 'ವಿಕ್ರಮಾಂಕ ದೇವಚರಿತಂ' ನ್ಯಾಯಶಾಸ್ತ್ರ ವಿಶಾರದ ವಿಜ್ಞಾನೇಶ್ವರನ 'ಮಿತಾಕ್ಷರಾ' ಗ್ರಂಥಗಳ ರಚನೆಯಾದದ್ದು ವಿಕ್ರಮಾದಿತ್ಯನ ಕಾಲದಲ್ಲಿ ; ಅವುಗಳ ಕರ್ತೃಗಳಿಗೆ ವಿಕ್ರಮಾದಿತ್ಯ ಆಶ್ರಯ ನೀಡಿದ್ದ.

ಆರನೆಯ ವಿಕ್ರಮಾದಿತ್ಯನ ನಂತರ ಅವರ ಮಗ ಮುಮ್ಮಡಿ ಸೋಮೇಶ್ವರ ಪಟ್ಟಕ್ಕೆ ಬಂದ (1127–1139) ಇವನು ಸ್ವತಃ ಕವಿ ಮತ್ತು ಪಂಡಿತನಾಗಿದ್ದು, ರಾಜ್ಯಾಡಳಿತಕ್ಕಿಂತ ಕಾವ್ಯ ರಚನೆಯಲ್ಲಿ ಹೆಚ್ಚು ಆಸಕ್ತನಾಗಿದ್ದ. ಅವನ ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿ ಎಂಬ ವಿಶ್ವಕೋಶ ಮತ್ತು ವಿಕ್ರಮಾದಿತ್ಯನನ್ನು ಕುರಿತ ವಿಕ್ರಮಾಂಕಾಭ್ಯುದಯಂ ಎರಡೂ ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿ ಗಮನಿಸಲೇಬೇಕಾದ ಕೃತಿಗಳಾಗಿವೆ.

## ಕಲಚುರಿಯರು :

ಇಮ್ಮಡಿ ಬಿಜ್ಜಳನಿಂದ ಆರಂಭವಾದ ಕಲಚುರಿಯರ ಆಳ್ವಿಕೆಯು ಕೇವಲ ಇಪ್ಪತ್ತು ವರ್ಷ ನಡೆಯಿತು. ಬಿಜ್ಜಳ ಕಾಲದಲ್ಲೇ ಬಸವಣ್ಣನ ಧಾರ್ಮಿಕ ಕ್ರಾಂತಿಯು ನಡೆಯಿತು. ಕಲಚುರ್ಯರ ನಂತರ, ಅವರೆಗೆ ಒಂದಾಗಿದ್ದ ಕರ್ನಾಟಕವು

ಎರಡು ಭಾಗಗಳಾಗಿ ಒಡೆದು ಹೋಯಿತು. ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದ ಹೊಯ್ಸಳರು ಕ್ರಿ. ಶ. ಸು. 1200 ರ ವೇಳೆಗೆ ಎರಡನೆ ವೀರಬಲ್ಲಾಳನ ಕಾಲದಲ್ಲಿ ಸ್ವತಂತ್ರರಾಗಿ ತುಂಗಭದ್ರಾ ನದಿಯ ದಕ್ಷಿಣದ ಭಾಗಗಳನ್ನು ಆಳತೊಡಗಿದರು. ತುಂಗಭದ್ರೆಯ ಉತ್ತರ ಭಾಗವು ಸೇಉಣರ ವಶವಾಯಿತು.

ಹೊಯ್ಸಳರು :

'ದ್ವಾರಾವತಿ ಪುರವರಾಧೀಶ್ವರ'ರು ಎನಿಸಿಕೊಂಡ ಹೊಯ್ಸಳರು 11ನೆಯ ಶತಮಾನದಿಂದ 14ನೆಯ ಶತಮಾನದವರೆಗೆ ಕರ್ನಾಟಕದ ದಕ್ಷಿಣ ಭಾಗವನ್ನು ಆಳಿದರು. ಒಂದನೆಯ ಬಲ್ಲಾಳನ ನಂತರ (ಕ್ರಿ.ಶ. 1100–1108) ಹೊಯ್ಸಳ ವಂಶದಲ್ಲಿ ಅತ್ಯಂತ ಪ್ರಭಾವಿಶಾಲಿಯಾದ ವಿಷ್ಣುವರ್ಧನನು ರಾಜನಾದನು. (1108 ರಿಂದ 1142). ಹೊಯ್ಸಳ ಇತಿಹಾಸದಲ್ಲಿ ಇವನ ಆಳ್ವಿಕೆಯ ಕಾಲ ಅತ್ಯಂತ ಮಹತ್ವದ್ದಾಗಿದೆ. ಇವನ ಕಾಲದಲ್ಲೇ ಚೋಳರು ಹೊಯ್ಸಳರಿಗೆ ಸೋತು ತಲಕಾಡಿನಿಂದ ಓಡಿಹೋದದ್ದು (1116). ಹೊಯ್ಸಳ ವಂಶದಲ್ಲಿ ವಿಷ್ಣುವರ್ಧನನ ನಂತರ ಎರಡನೆಯ ವೀರಬಲ್ಲಾಳನೇ ಬಹಳ ಪ್ರಬಲವಾದ ದೊರೆ.

ಎರಡನೆಯ ವೀರಬಲ್ಲಾಳನ ಮಗ ಎರಡನೆಯ ನರಸಿಂಹನು (1220–1235) ಹೊಯ್ಸಳ ರಾಜ್ಯವನ್ನು ಚೋಳನಾಡಿಗೂ ಕೊಂಡೊಯ್ದ. ತಮಿಳುನಾಡಿನಲ್ಲಿ ಆಗ ಇದ್ದ ಅವ್ಯವಸ್ಥೆಯ ಪರಿಸ್ಥಿತಿಯನ್ನು ಸದುಪಯೋಗ ಪಡಿಸಿಕೊಂಡು ಚೋಳ–ಹೊಯ್ಸಳ ಬಾಂಧ್ಯವ್ಯಕ್ಕೆ ಸ್ನೇಹ–ಸಂಬಂಧಗಳ ಬೆಸುಗೆ ಹಾಕಿ, ಚೋಳನಾಡಿನಲ್ಲಿ ಹೊಯ್ಸಳ ಪ್ರಭಾವ ಹಬ್ಬುವುದಕ್ಕೆ ಎರಡನೆಯ ನರಸಿಂಹ ಕಾರಣನಾದ. ನಂತರ ಆಳಿದ ರಾಜರಲ್ಲಿ ಮುಖ್ಯನಾದವನು 3 ನೆಯ ಬಲ್ಲಾಳ.

ಸೇಉಣರು :

ಕನ್ನಡಿಗರೇ ಆದರೂ ಅಧಿಕವಾಗಿ ಮಹಾರಾಷ್ಟ್ರದ ದಕ್ಷಿಣ ಭಾಗವನ್ನು ಕ್ರಿ.ಶ. 835 ರಿಂದ 1334 ರ ವರೆಗೆ ಆಳಿದ ಸೇಉಣರ ಮೂಲಸ್ಥಾನ ನಾಸಿಕ್ ಜಿಲ್ಲೆಯ ಸಿನ್ನರ್ ಎಂದ ಗುರುತಿಸಲಾಗಿದೆ. ಈ ವಂಶದ ಮೊದಲ ಅರಸ ಸೇಉಣ ಚಂದ್ರ (835–860). ಈ ಸೇಉಣರನ್ನು ದೇವಗಿರಿಯ ಯಾದವರು ಎಂದು ಕರೆಯಲಾಗುತ್ತದೆ. ಇವರಲ್ಲಿ ಇಮ್ಮಡಿ ಸಿಂಘಣ (ಕ್ರಿ. ಶ. 119–1247) ಅತ್ಯಂತ ಪ್ರಸಿದ್ಧ ದೊರೆ.

**ವಿಜಯನಗರ ಸಾಮ್ರಾಜ್ಯ :**

ಉತ್ತರದ ಖಿಲ್ಜಿ ಸುಲ್ತಾನರು ದಕ್ಷಿಣ ಭಾರತವನ್ನೂ ಆಕ್ರಮಿಸಿ, ಇಲ್ಲಿ ಒಂದೊಂದೇ ರಾಜ್ಯಗಳು ಅವರ ಕೈವಶವಾಗುತ್ತಿದ್ದ ಸಂದರ್ಭದಲ್ಲಿ ದಕ್ಷಿಣ ಭಾರತದ ಮಟ್ಟಿಗಾದರೂ ಆಳಿದ ಎಲ್ಲಾ ರಾಜವಂಶಗಳೂ ಒಟ್ಟಾಗಿ ಧಾಳಿಕೋರ ಮುಸ್ಲಿಮರನ್ನು ಎದುರಿಸುವುದು ಅತ್ಯಾವಶ್ಯಕವಾಗಿತ್ತು. ಮತ್ತೆ ಸೇರಿಸುವ ಕೆಲಸ

ನಡೆಯಬೇಕಾಗಿತ್ತು. ಈ ನಿಟ್ಟಿನಲ್ಲಿ ಹೊಯ್ಸಳ ಮೂರನೆಯ ಬಲ್ಲಾಳ ಪ್ರಯತ್ನಿಸಿದ್ದಿರಬಹುದಾದರೂ, ಅವನು ಮಧುರೆಯ ಸುಲ್ತಾನನಿಂದ ಮೋಸದಿಂದ ಕೊಲ್ಲಲ್ಪಟ್ಟ. ಹೊಯ್ಸಳ ವೀರಬಲ್ಲಾಳನ ಆಸೆಯನ್ನು ನೆರವೇರಿಸಲು ಹರಿಹರ ಮತ್ತು ಬುಕ್ಕರ ಪ್ರಯತ್ನದ ಫಲದಿಂದ ಕ್ರಿ.ಶ. 1336 ರಲ್ಲಿ ಪ್ರಬಲವಾದ ವಿಜಯನಗರ ಸಾಮ್ರಾಜ್ಯ ಸ್ಥಾಪಿತವಾಯಿತು. ಇದು 1565ರವರೆಗೆ ಅತ್ಯಂತ ಸಾರ್ಥಕವಾಗಿ ಆಳ್ವಿಕೆ ನಡೆಸಿತು. ಬಳ್ಳಾರಿ ಜಿಲ್ಲೆಯ ಹಂಪೆಯೇ ವಿಜಯನಗರ. ಅದೇ ಹರಿಹರ–ಬುಕ್ಕರ ರಾಜಧಾನಿಯಾಯಿತು. ಅಲ್ಲಿನ ಪ್ರಾಚೀನ ವಿರೂಪಾಕ್ಷನೇ ಅವರ ದೈವವಾದ. ವಿಜಯನಗರ ಸಾಮ್ರಾಜ್ಯವನ್ನು ಮೊದಲು ಆಳಿದ ಹರಿಹರ–ಬುಕ್ಕ ಸಂಗಮ ವಂಶಕ್ಕೆ ಸೇರಿದವರು. ಆ ವಂಶದ ನಂತರ ಸಾಳುವ ಮತ್ತು ತುಳುವ ವಂಶಗಳೂ ವಿಜಯನಗರವನ್ನು ಆಳಿದುವು.

ವಿಜಯನಗರವನ್ನು ಮೊದಲು ಆಳಿದ ಸಂಗಮ ವಂಶದ ಮೊದಲ ದೊರೆ ಹರಿಹರ (1336–1356). ಕ್ರಿ. ಶ. 1356 ರಲ್ಲಿ ಹರಿಹರನ ತಮ್ಮ ಬುಕ್ಕರಾಯನು ಪಟ್ಟಾಭಿಷಿಕ್ತನಾದ. 1377ರಲ್ಲಿ ಇಮ್ಮಡಿ ಹರಿಹರ (ಬುಕ್ಕನ ಮಗ) ಅಧಿಕಾರ ವಹಿಸಿಕೊಂಡ ನಂತರ ಉತ್ತರದಲ್ಲೂ ರಾಜ್ಯ ವಿಸ್ತರಣೆ ಮಾಡಿದ. ನಂತರದ ರಾಜರಲ್ಲಿ 1406ರಲ್ಲಿ ದೇವರಾಯ, ನಂತರ ಅವನ ಮೊಮ್ಮಗ ಇಮ್ಮಡಿ ದೇವರಾಯ ಮುಖ್ಯರು. ವಿರೂಪಾಕ್ಷನ ನಂತರ ಸಾಳುವ ವಂಶದ ಆಳ್ವಿಕೆ ಆರಂಭವಾಯಿತು. ನಂತರ ವಿಜಯನಗರವನ್ನಾಳಿದ ಮೂರನೆಯ ತುಳುವ ವಂಶದ ಅರಸರಲ್ಲಿ ಕೃಷ್ಣದೇವರಾಯನು (1509–1529) ಬಹಳ ಪ್ರಖ್ಯಾತನಾದ ಮತ್ತು ಪ್ರಭಾವಶಾಲಿಯಾದ ಅರಸನಾಗಿ, ವಿಜಯನಗರ ಸಾಮಾಜ್ಯವನ್ನು ಅತ್ಯಂತ ವೈಭವೋಪೇತವಾಗಿ ಮಾಡಿದ. ಇವನ ಕಾಲದಲ್ಲೇ ಹಂಪಿಯು ತನ್ನ ಉಚ್ಛ್ರಾಯ ಸ್ಥಿತಿಯನ್ನು ತಲುಪಿತ್ತು. ಕೃಷ್ಣದೇವರಾಯನು ವಿದೇಶಗಳೊಡನೆ ವ್ಯಾಪಾರ–ವಹಿವಾಟು ನಡೆಸುತ್ತಿದ್ದು, ಭಟ್ಕಳ, ಹೊನ್ನಾವರ ಇತ್ಯಾದಿ ಬಂದರುಗಳನ್ನು ಅಭಿವೃದ್ಧಿ ಪಡಿಸಿದ್ದ. ಹಲವಾರು ದೇವಾಲಯಗಳ ನಿರ್ಮಾಣ ಇವನ ಕಾಲದಲ್ಲಾಯಿತು. ಅಲ್ಲದೆ ಹಂಪಿಯ ಪ್ರದೇಶದಲ್ಲಿ ಕಾಲುವೆಗಳ ಮೂಲಕ, ಪೋರ್ಚುಗೀಸ್ ಎಂಜಿನಿಯರುಗಳ ಸಹಾಯದಿಂದ ನೀರಾವರಿ ಸೌಲಭ್ಯವನ್ನು ಏರ್ಪಡಿಸಿದ.

**ಪಾಳೆಯಗಾರರು :**

ವಿಜಯನಗರ ಸಾಮ್ರಾಜ್ಯದ ಪತನಾನಂತರ ಹಲವಾರು ಪಾಳೆಯಗಾರರು ಕರ್ನಾಟಕದ ವಿವಿಧ ಭಾಗಗಳಲ್ಲಿ ಆಳ್ವಿಕೆ ನಡೆಸಿದರು. ವಿಜಯನಗರ ಅಂತ್ಯದ ಕಾಲದಲ್ಲಿ ಸುಮಾರು 60ಕ್ಕೂ ಹೆಚ್ಚು ಪಾಳೆಯ ಪಟ್ಟುಗಳು ಇದ್ದವು. ಅವುಗಳಲ್ಲಿ ಚಿತ್ರದುರ್ಗ, ಯಲಹಂಕ, ನಿಡುಗಲ್ಲು, ತರೀಕೆರೆ, ಗುಮ್ಮನಾಯಕನ ಪಾಳ್ಯ, ಹರಪನಹಳ್ಳಿ, ಹಾಗಲವಾಡಿ, ಉಮ್ಮತ್ತೂರು, ಮಧುಗಿರಿ, ಕಳಲೆ, ಹೊಸಕೋಟೆ,

ಚನ್ನಪಟ್ಟಣ– ಇತ್ಯಾದಿ ಪ್ರದೇಶಗಳ ಪಾಳೆಯಗಾರರು ಪ್ರಮುಖರಾಗಿ ಕಾಣುತ್ತಾರೆ. ಇದೇ ಕಾಲದಲ್ಲಿ ಕೆಳದಿಯ ಅರಸರು, ಸಾಂತರಸರು, ಸಾಳುವರು, ಅಜಿಲರು ಚೌಟರು, ಸೋಂದೆಯ ನಾಯಕರು ಕರ್ನಾಟಕ ವಿವಿಧ ಭಾಗಗಳನ್ನಾಗಿ ಕರ್ನಾಟಕದ ರಾಜಕೀಯ ಇತಿಹಾಸವನ್ನು ರೂಪಿಸಿದ್ದಾರೆ.

## ಮೈಸೂರು ಒಡೆಯರು

ಕೊನೆಯದಾಗಿ ಕರ್ನಾಟಕವನ್ನಾಳಿದ ಅರಸು ಮನೆತನವೆಂದರೆ ಮೈಸೂರಿನ ಒಡೆಯರದು. ಈ ವಂಶದ ಆರಂಭದ ಇತಿಹಾಸವು ಅಸ್ಪಷ್ಟ. ಈ ವಂಶದ ಮೂಲಪುರುಷ ಯದುರಾಯರು (ಸು 1399–1423) ಮೈಸೂರಿನ ಸಮೀಪ ಹದಿನಾಡಿನಲ್ಲಿ ಆಡಳಿತವನ್ನು ಆರಂಭ ಮಾಡಿದರೆಂದು ತಿಳಿದು ಬಂದಿದೆ. ರಾಜ ಒಡೆಯರ ಕಾಲದಿಂದೀಚೆಗೆ ಮೈಸೂರು ಅರಸರ ಇತಿಹಾಸವು ಸ್ಪಷ್ಟವಾಗಿದೆ. ಅವರ ಕಾಲಕ್ಕೆ ಶ್ರೀ ರಂಗಪಟ್ಟಣವೇ ಮೈಸೂರು ಅರಸರ ರಾಜಧಾನಿಯಾಗಿತ್ತು. ರಾಜ ಒಡೆಯರ ಕಾಲದಲ್ಲಿ ಮೈಸೂರು ಪಾಳೆಯ ಪಟ್ಟಿನಿಂದ ರಾಜ್ಯದ ಸ್ವರೂಪಕ್ಕೆ ತಿರುಗಿರುವ ಸಾಧ್ಯತೆಗಳಿವೆ. ರಾಜ ಒಡೆಯರ ನಂತರ ಪಟ್ಟಕ್ಕೆ ಬಂದ ಅವರ ಮೊಮ್ಮಗ ಚಾಮರಾಜ ಒಡೆಯರ ಕಾಲದಲ್ಲಿ (1617–37) ಮೈಸೂರು ರಾಜ್ಯದ ವಿಸ್ತರಣೆ ಆರಂಭವಾಯಿತು. ಆ ನಂತರ ರಣಧೀರ ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ (1638–1659) ಮೈಸೂರು ರಾಜ್ಯವು ಬಹಳ ವಿಸ್ತಾರಗೊಂಡಿತು. ದೇವರಾಜ ಒಡೆಯರ ಕಾಲದಲ್ಲಿ (1659–1673) ಸೇಲಂವರೆಗೆ ಕರ್ನಾಟಕವು ಹಬ್ಬಿತು. ಚಿಕ್ಕದೇವರಾಜ ಒಡೆಯರ ಕಾಲ (1673–1704) ಮೈಸೂರಿನ ಇತಿಹಾಸದಲ್ಲಿ ಬಹುಮುಖ್ಯವಾದ ಘಟ್ಟ. ತುಮಕೂರು, ಚಿಕ್ಕಮಗಳೂರು ಜಿಲ್ಲೆಗಳಿಂದ ಪಳನಿ, ಕೊಡಗು, ಬೇಲೂರಿನಿಂದ ಸೇಲಂವರೆಗೆ ರಾಜ್ಯ ವಿಸ್ತಾರಗೊಂಡಿತು. ನಂತರದ ಅರಸರಲ್ಲಿ ಇಮ್ಮಡಿ ಕಂಠೀರವ ನರಸರಾಜ (1704–1714), ದೊಡ್ಡ ಕೃಷ್ಣರಾಜ (1714–1732), ಚಾಮರಾಜ (1732–1734), ಇಮ್ಮಡಿ ಕೃಷ್ಣರಾಜ (1734–66) ಇವರುಗಳ ಕಾಲದಲ್ಲಿ ಅರಸರಿಗಿಂತ ದಳವಾಯಿಗಳ ಆಳ್ವಿಕೆಯೇ ಪ್ರಬಲವಾಗಿ ಇಮ್ಮಡಿ ಕೃಷ್ಣರಾಜರ ಕಾಲದಲ್ಲಿ ಹೈದರನು ಸರ್ವಾಧಿಕಾರಿಯಾದ. ನಂತರ ಟಿಪ್ಪು ಮೈಸೂರನ್ನು ಆಳಿದ.

ಈ ಸಂದರ್ಭದಲ್ಲಿ ಇಮ್ಮಡಿ ಕೃಷ್ಣರಾಜರ ಹೆಂಡತಿ ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಸತತ ಪ್ರಯತ್ನದಿಂದಾಗಿ 1799 ರಲ್ಲಿ ಮೈಸೂರು ಸಂಸ್ಥಾನವು ಟಿಪ್ಪುವಿನಿಂದ ಬಿಡುಗಡೆಯಾಗಿ ಬ್ರಿಟಿಷರ ಮೂಲಕ ಮೈಸೂರು ಅರಸರ ವಶಕ್ಕೆ ಬಂದಿತು. 1799 ರಿಂದ 1831 ರ ವರೆಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರು ಸಂಸ್ಥಾನವನ್ನು ಬ್ರಿಟಿಷರ ರೆಸಿಡೆಂಟರು ಮತ್ತು ದಿವಾನರ ನೆರವಿನಿಂದ ಆಳಿದರು. ಆದರೆ 1831ರಲ್ಲಿ ಬ್ರಿಟಿಷ್ ಸರ್ಕಾರ ಮೈಸೂರು ಸಂಸ್ಥಾನದ ಆಡಳಿತವನ್ನು ತಾನೇ ವಹಿಸಿಕೊಂಡಿತು. 1881 ರಲ್ಲಿ ಮತ್ತೆ

ಮೈಸೂರು ಸಂಸ್ಥಾನವು ಮೈಸೂರು ಅರಸರ ಆಳ್ವಿಕೆಗೆ ಒಳಪಟ್ಟಿತು. ಆಗ ಪಟ್ಟಣಕ್ಕೆ ಬಂದ ಚಾಮರಾಜ ಒಡೆಯರ್ ಅವರು ದಿವಾನ್ ರಂಗಾಚಾರ್ಲು, ಕೆ. ಶೇಷಾದ್ರಿ ಅಯ್ಯರ್ ಅವರ ನೆರವಿನಿಂದ ಮೈಸೂರು ದೇಶವನ್ನು ಆಧುನಿಕ ಸೌಲಭ್ಯಗಳಿಂದ ಸಜ್ಜುಗೊಳಿಸಲು ಶ್ರಮಿಸಿದರು. ಅದರ ಫಲವಾಗಿಯೇ ನೀರಾವರಿ ನಾಲೆಗಳು, ರೈಲ್ವೆ ಸೌಲಭ್ಯ ಇತ್ಯಾದಿ ಕಾರ್ಯಕ್ರಮಗಳು ಫಲಪ್ರದವಾದುವು.

ಚಾಮರಾಜ ಒಡೆಯರ ನಂತರ ನಾಲ್ಮಡಿ ಕೃಷ್ಣರಾಜ ಒಡೆಯರ್ ಅವರು ಪಟ್ಟಕ್ಕೆ ಬಂದರು. ಇವರ ಕಾಲದಲ್ಲಿ ಭದ್ರಾವತಿಯ ಕಬ್ಬಿಣದ ಕಾರ್ಖಾನೆ, ಕೆ.ಆರ್. ಸಾಗರ, ಶಿವಸಮುದ್ರ ಜಲವಿದ್ಯುತ್ ಉತ್ಪಾದನಾ ಕೇಂದ್ರ – ಇತ್ಯಾದಿ ಕಾರ್ಯಗಳು ಸಾಧಿತವಾದವು. 1940 ರಲ್ಲಿ ಪಟ್ಟಕ್ಕೆ ಬಂದ ಜಯಚಾಮರಾಜಒಡೆಯರ್ ಅವರು ಭಾರತಕ್ಕೆ ಸ್ವತಂತ್ರಬರುವವರೆಗೂ ಮೈಸೂರು ಸಂಸ್ಥಾನದ ಅರಸರಾಗಿದ್ದು, 1949 ರಲ್ಲಿ ಪಟ್ಟಕ್ಕೆ ಬಂದ ಜಯಚಾಮರಾಜ ಒಡೆಯರ್ ಅವರು ಭಾರತಕ್ಕೆ ಸ್ವತಂತ್ರ ಬರುವವರೆಗೂ ಮೈಸೂರು ಸಂಸ್ಥಾನದ ಅರಸರಾಗಿದ್ದು, 1948ರಲ್ಲಿ ಮೈಸೂರನ್ನು ಸ್ವತಂತ್ರ ಭಾರತದ ಕಕ್ಷೆಗೆ ಬರುವಂತೆ ಒಪ್ಪಂದ ಮಾಡಿಕೊಂಡರು.

ಸ್ವಾತಂತ್ರ್ಯಾನಂತರ ಮೈಸೂರು ರಾಜ್ಯಕ್ಕೆ ಪ್ರಥಮ ಮುಖ್ಯಮಂತ್ರಿಯಾದವರು ಶ್ರೀ ಕೆ. ಸಿ. ರೆಡ್ಡಿ ಅವರು (1947–52), ಆನಂತರ 1952–1956 ರವರೆಗೆ ಶ್ರೀ ಕೆ. ಹನುಮಂತಯ್ಯ ಅವರು ರಾಜ್ಯ ಮುಖ್ಯಮಂತ್ರಿಗಳಾಗಿದ್ದರು. ಕರ್ನಾಟಕದ ಏಕೀಕರಣದ ನಂತರ ಕ್ರಮವಾಗಿ ಶ್ರೀ ಎಸ್.ನಿಜಲಿಂಗಪ್ಪ, ಶ್ರೀ ಬಿ.ಡಿ. ಜತ್ತಿ, ಶ್ರೀ ಎಸ್. ಆರ್. ಕಂಠಿ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ವೀರೇಂದ್ರ ಪಾಟೀಲ್, ಶ್ರೀ ದೇವರಾಜ್ ಅರಸ್, ಶ್ರೀ ಆರ್. ಗುಂಡೂರಾವ್, ಶ್ರೀ ರಾಮಕೃಷ್ಣಹೆಗ್ಗಡೆ, ಶ್ರೀ ಎಸ್. ಆರ್. ಬೊಮ್ಮಾಯಿ, ಶ್ರೀ ವೀರೇಂದ್ರಪಾಟೀಲ್ ಅವರು ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದು, ಈಗ ಎರಡು ವರ್ಷಗಳಿಂದ ಶ್ರೀ ಎಸ್. ಬಂಗಾರಪ್ಪ ಅವರು ಕರ್ನಾಟಕ ಮುಖ್ಯಮಂತ್ರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

1947 ರಲ್ಲಿ ಸ್ವಾತಂತ್ರ್ಯ ಪಡೆದು, 1948ರಲ್ಲಿ ಭಾರತದ ಒಂದು ಸಂಸ್ಥಾನವಾಗಿ ಪರಿಗಣಿತವಾಗಿ, 1950ರಲ್ಲಿ ಭಾರತದ ಗಣರಾಜ್ಯದ ಕಕ್ಷೆಯಲ್ಲಿ ಸೇರಿದ ಮೈಸೂರು ಸಂಸ್ಥಾನವು 1950ರಲ್ಲಿ, ತಾನು ಕಳೆದಕೊಂಡಿದ್ದ ಎಲ್ಲಾ ಕನ್ನಡದ ಭಾಗಗಳನ್ನೂ (ಕೆಲವನ್ನು ಬಿಟ್ಟು) ಸೇರಿಸಿಕೊಂಡು ವಿಶಾಲ ಮೈಸೂರು ರಾಜ್ಯವಾಯಿತು. 12 ಜಿಲ್ಲೆಗಳ ಮೈಸೂರು ರಾಜ್ಯ 1956ರ ನವೆಂಬರ್ 1 ರಂದು 19 ಜಿಲ್ಲೆಗಳ ವಿಶಾಲ ಮೈಸೂರು ರಾಜ್ಯವಾಯಿತು. 1973 ನವೆಂಬರ್ 1 ರಂದು ರಾಜ್ಯದ ಹೆಸರು 'ಕರ್ನಾಟಕ' ವೆಂದು ಬದಲಾಯಿತು. 1986ರಲ್ಲಿ ಕರ್ನಾಟಕವು 20 ಜಿಲ್ಲೆಗಳ ರಾಜ್ಯವಾಯಿತು. (ಬೆಂಗಳೂರು ಜಿಲ್ಲೆಯನ್ನು ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಎಂದು ಎರಡು ಜಿಲ್ಲೆಗಳನ್ನಾಗಿ ವಿಂಗಡಿಸಲಾಯಿತು.

## ಕರ್ನಾಟಕ ಧಾರ್ಮಿಕ ಪರಂಪರೆ : ಸ್ಥೂಲ ಚಿತ್ರ

ಕರ್ನಾಟಕವು ಮೂಲತಃ ವೈದಿಕ ಧರ್ಮದ ಪ್ರಭಾವದಲ್ಲಿ ಬೆಳೆದು ಬಂದಿದೆ. ಇಲ್ಲಿನ ಆರಂಭಕಾಲದ ಅರಸರಲ್ಲಿ ಕದಂಬರು ಮತ್ತು ಬಾದಾಮಿಯ ಚಾಲುಕ್ಯರು ವೈದಿಕ ಧರ್ಮಾನುಯಾಯಿಗಳೇ ಆಗಿದ್ದರು. ಯಜ್ಞ, ಯಾಗಾದಿಗಳ ಆಚರಣೆಯೂ ಅವರ ಕಾಲದಲ್ಲಿದ್ದುದಕ್ಕೆ ಹಲವಾರು ಶಾಸನಗಳು ದಾಖಲೆಗಳಾಗಿವೆ. ಆದರೂ ಕರ್ನಾಟಕವು ಎಲ್ಲಾ ಧರ್ಮಗಳ ಸಮನ್ವಯದ ರಂಗಭೂಮಿಯಾಗಿದೆ ಎಂಬುದು ಉತ್ಪ್ರೇಕ್ಷೆಯ ಮಾತಲ್ಲ.

**ಬೌದ್ಧ ಧರ್ಮ** : ಅಶೋಕನ ಶಾಸನಗಳ ಮೂಲಕ, ಕರ್ನಾಟಕದಲ್ಲಿ ಕ್ರಿ.ಪೂ. 3ನೆಯ ಶತಮಾನದ ವೇಳೆಗೆ ಬೌದ್ಧಮತ ಅಸ್ತಿತ್ವದಲ್ಲಿದ್ದಿತ್ತೆಂದು ಊಹಿಸಲು ಅವಕಾಶಗಳಿವೆ. ಸನ್ನತಿ, ಬನವಾಸಿ, ಬಳ್ಳಿಗಾವೆ ಡಂಬಳಗಳು ಬೌದ್ಧ ಕೇಂದ್ರಗಳಾಗಿದ್ದವು ಎಂದು ಖಚಿತವಾಗಿ ಹೇಳಲು ಹಲವಾರು ಸಾಕ್ಷ್ಯಾಧಾರಗಳಿವೆ. ಕ್ರಿ.ಪೂ. 3ನೆಯ ಶತಮಾನದಿಂದ ಕ್ರಿ.ಶ. 12 ನೆಯ ಶತಮಾನದ ವರೆಗೆ ಬೌದ್ಧ ಧರ್ಮವು ಕರ್ನಾಟಕದಲ್ಲಿ ಅತ್ಯಂತ ಪ್ರಬಲವಾಗಿ ಅಲ್ಲವಾದರೂ, ಪ್ರಚಲಿತದಲ್ಲಿತ್ತು ಎಂದು ತಿಳಿಯುತ್ತದೆ.

**ಜೈನಧರ್ಮ** : ಜೈನಧರ್ಮವು ಕ್ರಿ.ಶ. 5ನೆಯ ಶತಮಾನದಿಂದ 12ನೆಯ ಶತಮಾನದ ವರೆಗೂ ಕರ್ನಾಟಕದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿತ್ತು. ಶ್ರವಣಬೆಳಗೊಳ ಮತ್ತು ಕೊಪ್ಪಳಗಳು ಕರ್ನಾಟಕದ ಬಹು ಪ್ರಾಚೀನವಾದ ಮತ್ತು ಮುಖ್ಯ ಜೈನ ಕೇಂದ್ರಗಳಾಗಿದ್ದುವು. ಕ್ರಿ.ಶ. 6ನೆಯ ಶತಮಾನದ ಹಲವು ಶಾಸನಗಳು ಶ್ರವಣಬೆಳಗೊಳದಲ್ಲಿ ದೊರೆತಿದ್ದು, ಅವುಗಳು ಜೈನ ಮುನಿಗಳು ಸಮಾಧಿ ಪಡೆದದ್ದನ್ನು ವಿವರಿಸುತ್ತವೆ. ಶ್ರವಣಬೆಳಗೊಳದ ಶಾಸನಗಳೆಂದರೆ ಜೈನ ಶಾಸನಗಳು ಶ್ರವಣಬೆಳಗೊಳದ ಇತಿಹಾಸವೆಂದರೆ ಜೈನಧರ್ಮಧ ಇತಿಹಾಸ. ಕರ್ನಾಟಕದಲ್ಲಿ ಗಂಗರು ಮತ್ತು ರಾಷ್ಟ್ರಕೂಟರು ಜೈನ ಧರ್ಮಾವಲಂಬಿಗಳಾಗಿದ್ದವರು. ಆರಂಭಕಾಲದಲ್ಲಿ ಹೊಯ್ಸಳರೂ ಸಹ ಜೈನರೇ ಆಗಿದ್ದರು. ಕನ್ನಡ ಸಾಹಿತ್ಯದ ಆರಂಭದ ಪ್ರಮುಖ ಕವಿಗಳೆಲ್ಲರೂ ಜೈನರೇ ಆಗಿದ್ದುದು ಗಮನಾರ್ಹವಾದ ವಿಷಯವಾಗಿದೆ. ಐಹೊಳೆ ಶ್ರವಣಬೆಳಗೊಳ ಕೊಪ್ಪಳಗಳಲ್ಲಿ ಪ್ರಮುಖವಾದ ಬಸದಿ ನಿರ್ಮಾಣ ಜೈನ ಧರ್ಮದವರಿಂದ ನಡೆದಿದೆ. ಕರ್ನಾಟಕದ ಅನೇಕ ಸ್ಥಳಗಳಲ್ಲಿ ಕ್ರಿ.ಶ. 12 ನೆಯ ಶತಮಾನದ ಅಂತ್ಯದವರೆಗೆ ಹಲವಾರು ಬಸದಿಗಳು ನಿರ್ಮಾಣವಾದ ದಾಖಲೆಗಳಿವೆ. ಹಲವಾರು ಬಸದಿಗಳು ಈಗಲೂ ಉಳಿದಿವೆ. ಇವೆಲ್ಲಕ್ಕೂ ಮಿಗಿಲಾಗಿ ಕರ್ನಾಟಕದಲ್ಲಿ ನಿರ್ಮಿತವಾಗಿರುವ ಏಕಶಿಲಾ ಗೊಮ್ಮಟ ಮೂರ್ತಿಗಳು ಪ್ರಪಂಚದಲ್ಲಿ ಅನೇಕರ ವಿಸ್ಮಯಕ್ಕೆ ಕಾರಣವಾಗಿವೆ. ಕ್ರಿ.ಶ. 982ರಲ್ಲಿ ಸ್ಥಾಪಿತವಾದ ಶ್ರವಣಬೆಳಗೊಳದ ಗೊಮ್ಮಟ, ಕ್ರಿ.ಶ. 1432ರಲ್ಲಿ ಕಾರ್ಕಳದಲ್ಲಿ ಸ್ಥಾಪಿತವಾದ ಗೊಮ್ಮಟ, ಕ್ರಿ.ಶ. 1603ರಲ್ಲಿ ವೇಣೂರಿನಲ್ಲಿ

ಮತ್ತು ಇತ್ತೀಚೆಗೆ ಧರ್ಮಸ್ಥಳದಲ್ಲಿ ಸ್ಥಾಪಿತವಾದ ಗೊಮ್ಮಟ ಪ್ರತಿಮೆಗಳು ಕರ್ನಾಟಕದ ಪ್ರಾಚೀನ ಮೂರ್ತಿ ಶಿಲ್ಪಗಳು. ಇವುಗಳಲ್ಲಿ ಶ್ರವಣಬೆಳಗೊಳದ ಗೊಮ್ಮಟ ಪ್ರತಿಮೆಯಂತೂ ಅನನ್ಯ, ಅಪೂರ್ವ, ಅಮೋಘ, ಸುಂದರ – ಇತ್ಯಾದಿ ಏನೆಲ್ಲ ಗುಣವಾಚಕಗಳಿಗೆ ಭಂಗ ತರುವುದಿಲ್ಲ.

**ಅದ್ವೈತ ಮತ** : ಕ್ರಿ.ಶ. 8ನೆಯ ಶತಮಾನಾನಂತರ ಆದಿಶಂಕರರು ಪ್ರತಿಪಾದಿಸಿದ ಅದ್ವೈತ ಧರ್ಮವು ಕರ್ನಾಟಕದಲ್ಲಿ ಪ್ರಬಲವಾಯಿತು. ಅವರ ಹೆಸರಿನಲ್ಲಿ ಅನೇಕ ಮಠಗಳು, ಗುರುಪೀಠಗಳು ಸ್ಥಾಪನೆಯಾದವು. ಅವುಗಳಲ್ಲಿ ಶೃಂಗೇರಿಯ ಗುರುಪೀಠವು ಪ್ರಮುಖವಾದುದು. ಇದು ಶೈವ ಧರ್ಮಪರವಾದುದು.

**ವಿಶಿಷ್ಟಾದ್ವೈತ** : ಕ್ರಿ. ಶ 11ನೆಯ ಶತಮಾನದಲ್ಲಿ ಶ್ರೀರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ಸಿದ್ಧಾಂತದ ಪ್ರವರ್ತಕರಾದರು. ಅವರು ಹೊಯ್ಸಳ ವಿಷ್ಣುವರ್ಧನನ ಆಶ್ರಯದಲ್ಲಿದ್ದು, ಮೇಲುಕೋಟೆಯಲ್ಲಿ ವಾಸವಾಗಿದ್ದರು. ಇವರ ಅನುಯಾಯಿಗಳನ್ನು ಶ್ರೀ ವೈಷ್ಣವರು ಎಂದು ಕರೆಯಲಾಗುತ್ತದೆ. ವಿಷ್ಣುವರ್ಧನನ ನಂತರ ಹೊಯ್ಸಳರು, ವಿಜಯನಗರದ ಸಾಳುವರು, ತುಳುವರು ಮತ್ತು ಮೈಸೂರು ಅರಸರು ಶ್ರೀ ವೈಷ್ಣವ ಪಂಥಕ್ಕೆ ಸೇರಿದವರು.

**ದ್ವೈತಮತ** : ಕ್ರಿ.ಶ. 13ನೆಯ ಶತಮಾನದಲ್ಲಿ ಜನ್ಮತಾಳಿದ ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನು ಬೋಧಿಸಿದರು. ಇವರ ಪ್ರಭಾವದಿಂದಲೇ ಹರಿದಾಸ ಪಂಥವೊಂದು ಕರ್ನಾಟಕದಲ್ಲಿ ಜನ್ಮತಾಳಿ ದಾಸಸಾಹಿತ್ಯ ಪುಷ್ಟಿಗೊಂಡಿತು.

**ಶೈವಧರ್ಮ** : ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದ ಅತ್ಯಂತ ಪ್ರಾಚೀನ ಧರ್ಮವೆಂದರೆ ಶೈವಧರ್ಮ. ಇದರಲ್ಲಿ ಅನೇಕ ಪ್ರಭೇದಗಳಿದ್ದು, ಅವುಗಳಲ್ಲಿ ಬಹುಮುಖ್ಯವಾದುವೆಂದರೆ ಲಾಕುಳೀಶ, ಕಾಪಾಲಿಕ, ಪಾಶುಪತ, ಕಾಳಾಮುಖ, ಮಾಹೇಶ್ವರ. ಈ ಎಲ್ಲ ವರ್ಗಗಳ ಶೈವರೂ ಮುಖ್ಯವಾಗಿ ವೇದಾಗಮಗಳನ್ನು ಅನುಸರಿಸುತ್ತಿದ್ದವರು. ಕ್ರಿ.ಶ. 9ರಿಂದ 12ನೆಯ ಶತಮಾನದ ಅಂತರದಲ್ಲಿ ಲಾಕುಳೀಶರು, ಕಾಪಾಲಿಕರು ಪಾಶುಪತರು ಮತ್ತು ಕಾಳಾಮುಖರು– ಎಲ್ಲರೂ ಕರ್ನಾಟಕದಲ್ಲಿ ಅತ್ಯಂತ ಪ್ರಭಾವಿಗಳಾಗಿದ್ದರು. ಶೈವಧರ್ಮದ ದೇವಸ್ಥಾನಗಳು ಪ್ರಾಚೀನ ಕರ್ನಾಟಕದ ವಿದ್ಯಾಕೇಂದ್ರಗಳು, ಅನಾಥರಿಗೆ ಆಶ್ರಯ ಸ್ಥಾನಗಳೂ, ರೋಗಿಗಳಿಗೆ ಔಷಧಿಯನ್ನು ಕೊಡುವ ಸಾರ್ವಜನಿಕ ಕೇಂದ್ರಗಳೂ ಆಗಿದ್ದವು.

**ವೀರಶೈವ ಧರ್ಮ** : ಜಾತಿ, ವರ್ಗಗಳ ಕಟ್ಟು–ಕಟ್ಟಳೆಗಳನ್ನು ಮೀರಿ ರೂಪುಗೊಂಡ ವೀರಶೈವ ಧರ್ಮವು 12ನೆಯ ಶತಮಾನದ ನಂತರ ಕರ್ನಾಟಕದ ಬಹು ಜನಪ್ರಿಯ ಧರ್ಮವಾಯಿತು. ಅದರ ರೂವಾರಿ ಬಸವೇಶ್ವರರು. ಕಾಯಕಕ್ಕೆ ಪ್ರಾಶಸ್ತ್ಯ ನೀಡಿದ ಕ್ರಾಂತಿಕಾರಿಗಳಾಗಿ ವಿಶ್ವಮಾನ್ಯರಾಗಿದ್ದಾರೆ. ಕಾಯಕಕ್ಕೆ

ಮತ್ತು ಭಕ್ತಿಗೆ ಮಹತ್ವ ನೀಡಿದರು. ಇವರ ಕಾಲದಲ್ಲಿ ಅಭಿವ್ಯಕ್ತಿಗೊಂಡ ವಚನ ಪ್ರಕಾರ ಶ್ರೇಷ್ಠವಾದ ಪರ್ಯಾಯ ಸಾಹಿತ್ಯವಾಯಿತು. ಅನೇಕ ಕೆಳವರ್ಗದವರಿಗೆ ಧಾರ್ಮಿಕ ಅಭಿವ್ಯಕ್ತಿ, ಆಚರಣೆ ಈ ಕಾಲದಲ್ಲಿ ಸಾಧ್ಯವಾಯಿತು.

**ಇಸ್ಲಾಂ ಧರ್ಮ** : ವಿಜಯನಗರ ಕಾಲದಲ್ಲಿ ಇಸ್ಲಾಂ ಧರ್ಮವು ಕರ್ನಾಟಕವನ್ನು ಪ್ರವೇಶಿಸಿತು. ಅಂದಿನಿಂದ ಇಂದಿನವರೆಗೆ ಇಸ್ಲಾಂ ಧರ್ಮವು ಕರ್ನಾಟಕದಲ್ಲಿ ವಿಶಿಷ್ಟ ಸ್ವರೂಪದಲ್ಲಿ ಬೆಳೆದು, ಕನ್ನಡಿಗರ ಪ್ರೀತಿ ವಿಶ್ವಾಸಗಳನ್ನೂ ಗಳಿಸಿದೆ. ಅಷ್ಟೇ ಅಲ್ಲದೆ ಇಸ್ಲಾಂ ಧರ್ಮವು ಕರ್ನಾಟಕದ ಉಳಿದ ಎಲ್ಲಾ ಧರ್ಮಗಳೊಂದಿಗೆ ಪ್ರೀತಿ, ವಿಶ್ವಾಸ ಮತ್ತು ಅಭಿಮಾನಗಳೊಂದಿಗೆ ಬೆರೆತು ಹೋಗಿದೆ.

**ಕ್ರಿಶ್ಚಿಯನ್ ಧರ್ಮ** : ಪೋರ್ಚುಗೀಸರೊಂದಿಗೆ ಕರ್ನಾಟಕವನ್ನು ಪ್ರವೇಶಿಸಿದ ಕ್ರಿಶ್ಚಿಯನ್ ಧರ್ಮವು, ಕೆಳದಿ ಮತ್ತು ಮೈಸೂರು ಅರಸರ ಕಾಲದಲ್ಲಿ ಪ್ರೋತ್ಸಾಹವನ್ನೂ ಪಡೆಯಿತು. ಕರ್ನಾಟಕದ ಎಲ್ಲೆಡೆಯಲ್ಲಿ ಹಬ್ಬಿರುವ ಕ್ರಿಶ್ಚಿಯನ್ ಧರ್ಮವು ಪರಕೀಯ ಎಂಬ ಭಾವನೆಯನ್ನೇ ಬೆಳೆಸಿಲ್ಲ. ಈಗಂತೂ ಕ್ರಿಶ್ಚಿಯನ್ನರನ್ನು ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವೇ ಆಗದ ಪರಿಸ್ಥಿತಿ ಉಂಟಾಗಿದೆ; ಏಂದರೆ ಅವರು ಮೂಲ ಪ್ರವಾಹದ ಜೊತೆಗೇ ಸೇರಿ ಹೋಗಿದ್ದಾರೆ.

ಕರ್ನಾಟಕದಲ್ಲಿ ವಿವಿಧ ಧರ್ಮಗಳಿದ್ದರೂ, ಆಗೊಮ್ಮೆ ಈಗೊಮ್ಮೆ ಅಪರೂಪಕ್ಕೆ ವಿರಸ ಕಂಡಿರಬಹುದಾದರೂ, ಒಟ್ಟಾರೆ ಗಮನಿಸಿದಾಗ ಪರಸ್ಪರ ವಿಶ್ವಾಸ ಮತ್ತು ಮೈತ್ರಿಯನ್ನು ಕಾಣಬಹುದಾಗಿದೆ. ಸರ್ವಧರ್ಮ ಸಮನ್ವಯತೆಗೆ ಕರ್ನಾಟಕವು ಸಲ್ಲಿಸಿರುವ ಕಾಣಿಕೆ ಅಪಾರ. ಬುಕ್ಕರಾಯನ ಕಲ್ಯ ಮತ್ತು ಶ್ರವಣಬೆಳಗೊಳದ ಶಾಸನ, ಹೊಯ್ಸಳರ ಕಾಲದ 'ಯಂ ಶೈವಾಃ ಸಮುಪಾಸತೇ'–ಉಲ್ಲೇಖವಿರುವ ಶಾಸನ– ಮತ್ತಿನ್ನೂ ಹಲವು ಶಾಸನಗಳು, ಸಾಹಿತ್ಯ ಕೃತಿಗಳು, ರಾಜಮಹಾರಾಜಗಳ ಬದುಕಿನಲ್ಲಿ ಘಟಿಸಿ, ಇತಿಹಾಸದಲ್ಲಿ ಸೇರಿ ಹೋಗಿರುವ ಘಟನೆಗಳು ಕರ್ನಾಟಕವು ಸರ್ವಧರ್ಮ ಸಮನ್ವಯದ ಭೂಮಿ ಎಂಬುದನ್ನು ಸಾರುತ್ತಿವೆ.

## ಕರ್ನಾಟಕ ವಾಸ್ತುಶಿಲ್ಪ – ಸ್ಥೂಲ ಪರಿಚಯ

ಯಾವುದೇ ದೇಶ ಹೆಮ್ಮೆಪಡುವಂತಹ ವಾಸ್ತುಶಿಲ್ಪಕಲೆಯು ಕರ್ನಾಟಕದ ಪಾಲಿಗೆ ದಕ್ಕಿದೆ. ವಿವಿಧ ಶೈಲಿಯ ವಾಸ್ತುಶೈಲಿಯನ್ನು ಕರ್ನಾಟಕದಲ್ಲಿ ಕಾಣಬಹುದಾಗಿದೆ. ದ್ರಾವಿಡ, ನಾಗರ, ವೇಸರ ಶೈಲಿಗಳಲ್ಲದೆ, ಇಂಡೋ ಸಾರ್ಸೆನಿಕ್ ಶೈಲಿ, ಗಾಥಿಕ್ ಶೈಲಿ ಎಲ್ಲ ಶೈಲಿಗಳಿಗೂ ಕರ್ನಾಟಕದಲ್ಲಿ ಉದಾಹರಣೆಗಳುಂಟು. ಮೂರ್ತಿ ಶಿಲ್ಪದ ವಿಷಯ ಬಂದಾಗ ಶ್ರವಣಬೆಳಗೊಳದ $57^1/_2$ ಅಡಿ ಎತ್ತರ ಗೊಮ್ಮಟೇಶ್ವರ ಶಿಲ್ಪವೊಂದನ್ನು ಉದಾಹರಿಸಿದರೆ ಸಾಕು; ಕ್ರಿ.ಶ. 982ರ ವೇಳೆಗಾಗಲೇ ಕರ್ನಾಟಕವು ಮೂರ್ತಿ ಶಿಲ್ಪಕಲೆಯಲ್ಲಿ ಸಾಧಿಸಿದ ಅದ್ಭುತ ಪ್ರಗತಿಯನ್ನು ತಿಳಿದು ಕೇಳಿದವರಿಗೆ ವಿಸ್ಮಯವಾಗಬೇಕು.

ಕದಂಬರ ಕಾಲದ ಉದಾಹರಿಸಬಹುದಾದ ವಾಸ್ತುಶಿಲ್ಪಗಳು ನಮಗೆ ಸದ್ಯಕ್ಕೆ ದೊರೆತಿಲ್ಲವಾದರೂ, ಅವರ ಕಾಲಕ್ಕಾಗಲೇ ತಾಳಗುಂದದ ಪ್ರಣವೇಶ್ವರ ದೇವಾಲಯವಿತ್ತು ಎಂದು ತಿಳಿಯುತ್ತದೆ. ಆದರೆ ಆ ದೇವಾಲಯವು ಈಗ ಅಂದಿನ ಸ್ವರೂಪದಲ್ಲಿ ಉಳಿದಿಲ್ಲ. ಗಂಗರ ಕಾಲದಲ್ಲಿ ಮಣ್ಣೆ ನರಸಮಂಗಲ, ಗಂಗವಾರ, ಶ್ರವಣಬೆಳಗೊಳ ಇತ್ಯಾದಿ ಸ್ಥಳಗಳಲ್ಲಿ ದೇವಾಲಯಗಳು ಮತ್ತು ಬಸದಿಗಳು ನಿರ್ಮಾಣವಾಗಿರುವುದನ್ನು ಕಾಣಬಹುದು.

ಬಾದಾಮಿ ಚಾಲುಕ್ಯರ ಕಾಲದ ಗುಹಾಲಯಗಳು, ಪಟ್ಟದ ಕಲ್ಲಿನ ಹಲವಾರು ದೇವಾಲಯಗಳು, ಐಹೊಳೆಯ ಅನೇಕ ದೇವಾಲಯಗಳು ಅತ್ಯಂತ ಮಹತ್ವಪೂರ್ಣ ದಾಖಲೆಗಳಾಗಿವೆ. ಪಟ್ಟದಕಲ್ಲಿನಲ್ಲಿ ದ್ರಾವಿಡ, ನಾಗರ, ವೇಸರ–ಮೂರು ಶೈಲಿಯ ದೇವಾಲಯಗಳನ್ನು ಒಂದೇ ಆವರಣದಲ್ಲಿ ಕಾಣಬಹುದು. ಪಟ್ಟದ ಕಲ್ಲನ್ನು ವಾಸ್ತುಶಿಲ್ಪದ ತೊಟ್ಟಿಲು ಎಂದೇ ಕರೆಯಲಾಗುತ್ತಿದೆ; ವಾಸ್ತುಶಿಲ್ಪದಲ್ಲಿ ಪ್ರಯೋಗದ ಕೇಂದ್ರವಾಗಿತ್ತೆಂದು ಭಾವಿಸಲಾಗಿದೆ.

ರಾಷ್ಟ್ರಕೂಟರ ಒಂದನೆಯ ಕೃಷ್ಣನ ಕಾಲದಲ್ಲಿ ನಿರ್ಮಾಣವಾದ ಎಲ್ಲೋರದ ಕೈಲಾಸದೇವಾಲಯವು ವಾಸ್ತುಶಿಲ್ಪದಲ್ಲಿ ಒಂದು ಅದ್ಭುತವೆಂದು ಭಾವಿಸಲಾಗಿದೆ. ದ್ರಾವಿಡ ಶೈಲಿಯಲ್ಲಿ ನಿರ್ಮಾಣವಾಗಿರುವ ಈ ದೇವಾಲಯವು ಒಂದೇ ಬಂಡೆಯನ್ನು ಕೊರೆದು ನಿರ್ಮಿಸಿದ ದೇವಾಲಯವಾಗಿದೆ. ಗುಹಾ ದೇವಾಲಯಗಳನ್ನು ನಿರ್ಮಿಸುವ ರೀತಿಯಲ್ಲೇ ಈ ದೇವಾಲಯವನ್ನು ಕೊರೆದು ನಿರ್ಮಿಸಲಾಗಿದೆ. ಇಲ್ಲಿನ ವೈಶಿಷ್ಟ್ಯವೆಂದರೆ ಹೊರಗಿನ ಭಿತ್ತಿಯನ್ನೂ ಕೊರೆದು ನಿರ್ಮಿಸಿರುವುದು. ಗೊಮ್ಮಟನ ಮೂರ್ತಿ ಶಿಲ್ಪದಂತೆಯೇ ಎಲ್ಲೋರದ ಕೈಲಾಸ ದೇವಾಲಯವೂ ಒಂದು ಅದ್ಭುತ ಕಲಾಕೃತಿ. ಕಲ್ಯಾಣ ಚಾಲುಕ್ಯರು ಮತ್ತು ಹೊಯ್ಸಳರ ಕಾಲದಲ್ಲಿ ವಾಸ್ತು ಶಿಲ್ಪವು ತನ್ನ ಪರಾಕಾಷ್ಠ ಸ್ಥಿತಿಯನ್ನು ತಲುಪಿತೆಂದು ಭಾವಿಸಬಹುದಾಗಿದೆ. ವಿಸ್ತಾರವಾದ ದೇವಾಲಯಗಳೊಳಗೆ ಮುಖಮಂಟಪ, ನವರಂಗ, ಸುಖನಾಸಿ, ಗರ್ಭಗೃಹಗಳು ಪ್ರತ್ಯೇಕವಾಗಿ ನಿರ್ಮಾಣವಾಗಿವೆ. ಕಂಬಗಳ ಸಂಖ್ಯೆ ಹೆಚ್ಚು. ಅವುಗಳ ಎತ್ತರವೂ ಹೆಚ್ಚು. ದ್ವಾರಬಂಧಗಳ ಕುಸುರಿಕೆಲಸದ ಸೂಕ್ಷ್ಮತೆ, ಹೊರಭಿತ್ತಿಯ ಅಲಂಕರಣ, ಭಿತ್ತಿಗಳಲ್ಲಿ ಮೂರ್ತಿ ಶಿಲ್ಪಗಳು– ಇವುಗಳೆಲ್ಲವನ್ನೂ ಲಕ್ಕುಂಡಿ, ಡಂಬಳ, ಗದಗ, ಕುರುವತ್ತಿ, ಬಾಗಲಿ, ಬಳ್ಳಿಗಾವೆ ಮತ್ತಿನ್ನೂ ಅನೇಕ ಸ್ಥಳಗಳಲ್ಲಿ ಉಳಿದಿರುವ ದೇವಾಲಯಗಳಲ್ಲಿ ನೋಡಬಹುದಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲೇ ನಿರ್ಮಾಣವಾದ ಹೊಯ್ಸಳ ದೇವಾಲಯಗಳದು ವಿಶಿಷ್ಟ ಶೈಲಿ, ಇವುಗಳ ಎತ್ತರ ಕಡಿಮೆ. ಗೋಡೆಗಳ ದಪ್ಪ ಹೆಚ್ಚು. ಹೊರಭಿತ್ತಿಗಳಲ್ಲಿ ಕುಸುರಿಯ ಅಲಂಕರಣ ಹೆಚ್ಚು. ಮೂರ್ತಿಶಿಲ್ಪಗಳೂ ಅತ್ಯಂತ ಅಲಂಕೃತವಾಗಿರುವಂತಹವು. ಬೇಲೂರು, ಹಳೇಬಿಡು, ಸೋಮನಾಥಪುರ ಇತ್ಯಾದಿ ಸ್ಥಳಗಳಲ್ಲಿ ಹೊಯ್ಸಳ ಶೈಲಿಯ ಅತ್ಯಂತ ಉತ್ತಮ ಮಾದರಿಗಳನ್ನು

ಕಾಣಬಹುದು. ಈ ದೇವಾಲಯಗಳಲ್ಲಿ ಹೊರಭಾಗವಾಗಲೀ, ಒಳಭಾಗವಾಗಲೀ ಕೆತ್ತನೆ ಕಾಣದೆ, ಸೂಕ್ಷ್ಮ ಕೆತ್ತನೆಯಿಲ್ಲದೆ, ಅಲಂಕರಣವಿಲ್ಲದೆ ಇರುವುದೇ ಇಲ್ಲ. ಈ ನಿಟ್ಟಿನಲ್ಲಿ ಹೊಯ್ಸಳ ಶಿಲ್ಪಿಗಳ ಸಾಧನೆ ಅತ್ಯಂತ ವೈಶಿಷ್ಟ್ಯಪೂರ್ಣವಾದುದು.

ವಿಜಯನಗರ ಕಾಲದ ದೇವಾಲಯಗಳು ವಿಸ್ತಾರದಲ್ಲಿ ಮತ್ತಷ್ಟು ಬೆಳೆದಿವೆ. ಮುಖ್ಯ ದೇವಾಲಯದ ಜೊತೆಗೇ ಕಲ್ಯಾಣಮಂಟಪ, ಯಾಗಮಂಟಪ ಇತ್ಯಾದಿಗಳೆಲ್ಲ ಸೇರಿ ಎತ್ತರವನ್ನು ಹೆಚ್ಚಿಸಿಕೊಂಡಿವೆಯಾದರೂ ಆ ಹಿಂದಿನ ದೇವಾಲಯಗಳ ಸೂಕ್ಷ್ಮತೆ, ಸೌಂದರ್ಯಗಳು ಕಡಿಮೆಯಾಗಿವೆ. ಇವರ ಕಾಲದ ದೇವಾಲಯಗಳಿಗೆ ಪ್ರಾಕಾರ, ಎತ್ತರದ ಗೋಪುರಗಳ ಸೇರ್ಪಡೆಯಾಗಿವೆ. ಹಂಪೆಯಲ್ಲೇ ಅನೇಕ ದೇವಾಲಯಗಳು, ಈ ಮಾದರಿಗೆ ಉದಾಹರಣೆಯಾಗಿ ಸಿಗುತ್ತವೆ.

ವಿಜಯನಗರ ಕಾಲದಲ್ಲಿ ಮುಸ್ಲಿಮರ ಪ್ರಭಾವದಿಂದ ಬೆಳೆದು ಬಂದ ವಿಶಿಷ್ಟವಾದ ಇಂಡೋ ಸಾರ್ಸೆನಿಕ್ ಶೈಲಿಯ ನಿರ್ಮಾಣಕ್ಕೆ ಹಂಪೆಯ ಕಮಲಮಹಲ್, ಬಿಜಾಪುರದ ಗೋಲಗುಂಬಜ್, ಬಿಜಾಪುರದ ಮತ್ತು ಶ್ರೀರಂಗಪಟ್ಟಣದ ಮಸೀದಿಗಳು ಉದಾಹರಣೆಯಾಗಿವೆ. ಇಲ್ಲಿ ಗಾರೆಯ ಬಳಕೆ ಹೆಚ್ಚಿದೆ.

ಬ್ರಿಟಿಷರ ಕಾಲದಲ್ಲಿ ವಿಶೇಷವಾಗಿ ಗಾಥಿಕ್ ಶೈಲಿಯ ಎತ್ತರದ ಕಟ್ಟಡಗಳು ನಿರ್ಮಾಣವಾಗಿವೆ. ಅವುಗಳಲ್ಲಿ ಬಹು ಮುಖ್ಯವಾದುವು ಮೈಸೂರಿನ ಸೆಂಟ್ ಫಿಲೋಮಿನಾ ಚರ್ಚ್, ಬೆಂಗಳೂರಿನ ಸೆಂಟ್ ಮೇರೀ ಚರ್ಚ್ ಮುಖ್ಯವಾದವು.

ಸ್ವಾತಂತ್ರ್ಯಾನಂತರ ನಿರ್ಮಾಣವಾದ ಬೆಂಗಳೂರಿನ ವಿಧಾನಸೌಧ, ಇತ್ತೀಚಿನ ಜನರಲ್ ಪೋಸ್ಟ್ ಆಫೀಸ್ ಕಟ್ಟಡಗಳು ಹಳೆಯ ಮತ್ತು ಹೊಸ ವಾಸ್ತುಶಿಲ್ಪಗಳ ಮಿಶ್ರಶೈಲಿಗೆ ಒಳ್ಳೆಯ ಮಾದರಿಗಳಾಗಿವೆ.

ಬಹುಮಹಡಿ ಕಟ್ಟಡಗಳು, ಫ್ಲಾಟ್ ಮಾದರಿಯ ಮನೆಗಳು ನಿರ್ಮಾಣವಾಗುತ್ತಿರುವ ಈ ಸಂದರ್ಭದಲ್ಲಿ ಆಧುನಿಕ ವಾಸ್ತುಶಿಲ್ಪವೂ ವರ್ತಮಾನ ಪರಿಸ್ಥಿತಿಗೆ ತಕ್ಕಂತೆ ಸ್ಪಂದಿಸುತ್ತಿದೆ ಎಂಬುದು ಸತ್ಯ. ಇವೆಲ್ಲವುಗಳ ಹಿನ್ನೆಲೆಯಲ್ಲಿ ನಮ್ಮ ಪ್ರಾಚೀನ ವಾಸ್ತು ಶಿಲ್ಪಕೃತಿಗಳ ಭವ್ಯತೆ, ಸೌಂದರ್ಯ ಪ್ರಜ್ಞೆ, ಅಲಂಕರಣ, ಉಪಯುಕ್ತತೆ, ಕಟ್ಟಡದ ಪ್ರತಿಯೊಂದು ಭಾಗದ ಸದುಪಯೋಗ–ಇವುಗಳನ್ನು ಗಮನಿಸಿದಾಗ ಅವರ ಸಾಧನೆಯ ಬಗೆಗೆ ಅಸೂಯೆ ಹುಟ್ಟುವುದು ಸಹಜ.

## ಕರ್ನಾಟಕ ಪ್ರೇಕ್ಷಣೀಯ ಸ್ಥಳಗಳು : ಸ್ಥೂಲ ಪರಿಚಯ

**ಬೆಂಗಳೂರು** : 'ಉದ್ಯಾನನಗರ' ಎಂದು ಕರೆಯಲ್ಪಡುವ ಬೆಂಗಳೂರು ಕರ್ನಾಟಕದ ರಾಜಧಾನಿ. ಪ್ರಮುಖ ವಾಣಿಜ್ಯ ಮತ್ತು ಉದ್ಯಮಗಳ ಜೊತೆಗೆ, ಸರ್ಕಾರದ ಎಲ್ಲಾ ಎಲ್ಲಾ ಪ್ರಮುಖ ಕಛೇರಿಗಳು, ಎಲ್ಲಾ ಹಂತದ ಶಾಲಾ,

ಕಾಲೇಜುಗಳು ಇರುವ ನಗರ. ಇಲ್ಲಿನ ಕಬ್ಬನ್ ಪಾರ್ಕ್ (1864 ರಲ್ಲಿ ಸ್ಥಾಪಿತವಾದ 300 ಎಕರೆಗಳ ನಿರ್ಮಾಣವಾಗಿರುವ ಶಾಸಕಾಂಗ ಕಾರ್ಯಾಲಯ ಕಟ್ಟಡ) ಲಾಲ್‌ಬಾಗ್ (200 ವರ್ಷಗಳ ಹಿಂದೆ ಹೈದರ್‌ಅಲಿ ಮತ್ತು ಟಿಪ್ಪು ಅವರ ಕಾಲದಲ್ಲಿ ಆರಂಭಗೊಂಡ 240 ಎಕರೆ ವಿಸ್ತೀರ್ಣದ ಉದ್ಯಾನ), ಸರ್ಕಾರೀ ವಸ್ತು ಸಂಗ್ರಹಾಲಯ (ಕಸ್ತೂರಿಬಾ ರಸ್ತೆಯಲ್ಲಿರುವ 1865 ರಲ್ಲಿ ಸ್ಥಾಪಿತವಾದ ಹಳೆಯ ವಸ್ತು ಸಂಗ್ರಹಾಲಯ) ಟಿಪ್ಪುವಿನ ಅರಮನೆ ಮತ್ತು ಕೋಟೆಗಳು ಇಲ್ಲಿನ ಪ್ರಮುಖ ಆಕರ್ಷಣೆಗಳು.

**ಹೆಸರುಘಟ್ಟ** : ಬೆಂಗಳೂರಿನಿಂದ 29 ಕಿ.ಮೀ. ದೂರದಲ್ಲಿದೆ. ಇಲ್ಲಿನ ವಿಶಾಲವಾದ ಕೆರೆ ಮತ್ತು ಅದಕ್ಕೆ ಹೊಂದಿಕೊಂಡಂತಿರುವ ಇಂಡೋಡೆನಿಷ್ ಪ್ರಾಜೆಕ್ಟ್‌ಗಳು ಮುಖ್ಯ ಆಕರ್ಷಣೆ.

**ಮುತ್ಯಾಲಮಡುವು** : ಬೆಂಗಳೂರಿನಿಂದ 44 ಕಿ.ಮೀ. ಇಲ್ಲಿ 300 ಅಡಿಯ ಒಂದು ಜಲಪಾತವಿದೆ. ಸುಂದರ ಪ್ರಾಕೃತಿಕ ಸನ್ನಿವೇಶ.

**ಶಿವಗಂಗೆ** : ಬೆಂಗಳೂರಿನಿಂದ 60 ಕಿ.ಮೀ. ಸಮುದ್ರಮಟ್ಟದಿಂದ 4599 ಅಡಿ ಎತ್ತರದ ಕಡಿದಾದ ಬೆಟ್ಟವಿದೆ. ಇದರ ಮೇಲೆ ಗಂಗಾಧರೇಶ್ವರ ಮತ್ತು ಹೊನ್ನಾದೇವಿಯರ ಗುಹಾದೇವಾಲಯಗಳಿವೆ. ಹಲವಾರು ಸಹಜ ನೀರಿನ ಚಿಲುಮೆಗಳಿವೆ. (ತೀರ್ಥಗಳು)

**ದೇವರಾಯನದುರ್ಗ** : ಬೆಂಗಳೂರಿನಿಂದ 79 ಕಿ.ಮೀ. 3,940 ಅಡಿ ಎತ್ತರ (ಸಮುದ್ರಮಟ್ಟದಿಂದ) ಬೆಟ್ಟದ ಮೇಲೆ ಉಗ್ರನರಸಿಂಹನ ದೇವಾಲಯವೂ, ನಾಮದ ಚಿಲುಮೆ ಎಂಬ ತೀರ್ಥವೂ ಇವೆ. ಕೆಳಗೆ ಊರಿನಲ್ಲಿ ಭೋಗಾನರಸಿಂಹ ದೇವಾಲಯವಿದೆ.

**ಮೇಕೆದಾಟು** : ಬೆಂಗಳೂರಿನಿಂದ 98 ಕಿ. ಮೀ. ಅರ್ಕಾವತಿ ಮತ್ತು ಕಾವೇರಿನದಿಗಳ ಸಂಗಮದ ನಂತರ ಸುಮಾರು 3 ಕಿ.ಮೀ. ದೂರದಲ್ಲಿ ನದಿಯನ್ನೂ ಮೇಕೆದಾಟಿದ ಸ್ಥಳವೆಂದು ತೋರಿಸುತ್ತಾರೆ. ಪ್ರಕೃತಿಯ ಸೌಂದರ್ಯ ಮತ್ತು ರೌದ್ರತೆಗಳ ವೀಕ್ಷಣೆಗೆ ಒಳ್ಳೆಯ ಸ್ಥಳ.

**ಬನ್ನೇರುಘಟ್ಟ** : ಬೆಂಗಳೂರಿನಿಂದ 22 ಕಿ.ಮೀ. 100 ಕಿ.ಮೀ. ವಿಸ್ತೀರ್ಣದಲ್ಲಿ ವನ್ಯ ಪ್ರಾಣಿಧಾಮವಿದೆ.

**ನಂದಿಬೆಟ್ಟ** : ಬೆಂಗಳೂರಿನಿಂದ 59 ಕಿ.ಮೀ. ಪ್ರಸಿದ್ಧವಾದ ಗಿರಿಧಾಮ.

**ಮೈಸೂರು** : ಒಡೆಯರ ಕಾಲದಲ್ಲಿ ಮೈಸೂರಿನ ರಾಜಧಾನಿ. ಅರಮನೆಗಳ ನಗರ. ಹಲವಾರು ಅರಮನೆಗಳಿವೆ. ದಸರಾ ಉತ್ಸವದ ಕಾಲದಲ್ಲಿ ಆಕರ್ಷಣೆ ಹೆಚ್ಚು. ಇಲ್ಲಿನ ಇತರ ಪ್ರೇಕ್ಷಣೀಯ ಸ್ಥಳಗಳೆಂದರೆ ಚಾಮುಂಡಿ ಬೆಟ್ಟ.

ಸಮೀಪದ ಕೃಷ್ಣರಾಜಸಾಗರ ಅಥವಾ ಬೃಂದಾವನ ತೋಟಗಳು, ಪ್ರಾಣಿ ಸಂಗ್ರಹಾಲಯ – ಇತ್ಯಾದಿ.

**ಶ್ರೀರಂಗಪಟ್ಟಣ** : ಮೈಸೂರಿನಿಂದ 16 ಕಿ.ಮೀ. ಟಿಪ್ಪುಸುಲ್ತಾನನ ಕೋಟೆ ಇದೆ. ಕಾವೇರಿಯ ನಡುವಿನ ದ್ವೀಪ. ಇಲ್ಲಿನ ದರಿಯಾ ದೌಲತ್, ಟಿಪ್ಪು ಮತ್ತು ಹೈದರ್ ಅಲಿಯ ಸಮಾಧಿಗಳು, ಶ್ರೀರಂಗನಾಥನ ದೇವಾಲಯಗಳು ಪ್ರಮುಖ ಆಕರ್ಷಣೆ.

**ರಂಗನತಿಟ್ಟು** : ಶ್ರೀರಂಗಪಟ್ಟಣಕ್ಕೆ ಸಮೀಪ, ಬೆಂಗಳೂರು–ಮೈಸೂರು ರಸ್ತೆಯಲ್ಲಿದೆ. ಅನೇಕ ಪಕ್ಷಿಗಳು ಇಲ್ಲಿಗೆ ವಲಸೆ ಬರುತ್ತವೆ. – ಇದೊಂದು ಉತ್ತಮ ಪಕ್ಷಿಧಾಮ.

**ಬಂಡೀಪುರ** : ಮೈಸೂರಿನಿಂದ 80 ಕಿ.ಮೀ. ವನ್ಯ ಪ್ರಾಣಿಧಾಮವಿದೆ. ಇಲ್ಲಿ ಹುಲಿಗಳ ಸಂರಕ್ಷಣಾ ಕಾರ್ಯ ನಡೆದಿದೆ. ಆನೆ, ಜಿಂಕೆ, ನವಿಲು, ಕಾಡೆಮ್ಮೆಗಳು ಇಲ್ಲಿ ಅಧಿಕ ಸಂಖ್ಯೆಯಲ್ಲಿವೆ.

**ನಾಗರಹೊಳೆ** : ಮೈಸೂರಿನಿಂದ 93 ಕಿ.ಮೀ. ಇಲ್ಲಿನ ರಾಷ್ಟ್ರೀಯ ಉದ್ಯಾನವನದಲ್ಲಿ ಆನೆ, ಕಾಡೆಮ್ಮೆ, ಚಿರತೆ, ನವಿಲು, ಮತ್ತು ಮೊಸಳೆಗಳು ಅಧಿಕವಾಗಿವೆ.

**ಶಿಂಷಾ** : ಮೈಸೂರಿನಿಂದ 80 ಕಿ.ಮೀ. ಇಲ್ಲಿ ಕಾವೇರಿನದಿಯು ಗಗನಚುಕ್ಕಿ ಮತ್ತು ಭರಚುಕ್ಕಿ ಎಂಬ ಹೆಸರಿನಿಂದ 91 ಅಡಿ ಎತ್ತರದಿಂದ ಧುಮುಕಿ ಸೃಷ್ಟಿತವಾಗಿರುವ ಜಲಪಾತ ಮನೋಹರ. ಇಲ್ಲಿ ಕರ್ನಾಟಕದ ಮೊದಲ ಜಲವಿದ್ಯುತ್ ಉತ್ಪಾದನಾ ಕೇಂದ್ರವಿದೆ.

**ಬೇಲೂರು** : ಹಾಸನದಿಂದ 38 ಕಿ. ಮೀ. ಇಲ್ಲಿನ ಹೊಯ್ಸಳ ಕಾಲದ ಚೆನ್ನಕೇಶವ ದೇವಾಲಯ ಮತ್ತು ಅವುಗಳೊಳಗಿನ ಸುಂದರ ಕೆತ್ತನೆ ಶಿಲಾಬಾಲಿಕೆಯರು ಬಹುಮುಖ್ಯ ಆಕರ್ಷಣೆ.

**ಹಳೇಬೀಡು** : ಬೇಲೂರಿನಿಂದ 17 ಕಿ. ಮೀ. ಹೊಯ್ಸಳರ ಕಾಲದ ದ್ವಾರಸಮುದ್ರ. ಇಲ್ಲಿನ ಹೊಯ್ಸಳೇಶ್ವರ, ಶಾಂತಲೇಶ್ವರ ದೇವಾಲಯಗಳು ಹೊಯ್ಸಳರ ಕಾಲದ ನಿರ್ಮಾಣಗಳು. ಇವುಗಳೇ ಇಲ್ಲಿನ ಬಹುಮುಖ್ಯ ಆಕರ್ಷಣೆ.

**ಶ್ರವಣಬೆಳಗೊಳ** : ಬೆಂಗಳೂರಿನಿಂದ 160 ಕಿ. ಮೀ. ಬಹಳ ಪ್ರಸಿದ್ಧವಾದ ಜೈನ ಯಾತ್ರಾಸ್ಥಳ. ಇಲ್ಲಿನ ದೊಡ್ಡಬೆಟ್ಟದ ಮೇಲೆ ಕೆತ್ತಿರುವ ಗೊಮ್ಮಟನ $57^1/_2$ ಅಡಿ ಎತ್ತರ ಏಕಶಿಲಾ ವಿಗ್ರಹವು ಬಹುಮುಖ್ಯ ಆಕರ್ಷಣೆ.

**ಸೋಮನಾಥಪುರ** : ಮೈಸೂರಿನಿಂದ 48 ಕಿ.ಮೀ. ಇಲ್ಲಿನ ಹೊಯ್ಸಳ ಶೈಲಿಯ ಕೇಶವ ದೇವಾಲಯವು ಅತ್ಯಂತ ಸುಂದರವಾಗಿದೆ.

**ಜೋಗ್‌ಫಾಲ್ಸ್** : ಬೆಂಗಳೂರಿನಿಂದ 377 ಕಿ. ಮೀ. ಇಲ್ಲಿನ ಜೋಗ್ ಜಲಪಾತವು ನಯನಮನೋಹರ. ಶರಾವತಿಯು ಇಲ್ಲಿ 272 ಮೀಟರ್ ಆಳಕ್ಕೆ ಧುಮುಕಿ ಜಲಪಾತವಾಗಿದೆ. ಇಲ್ಲಿಯೂ ಜಲವಿದ್ಯುತ್ ಉತ್ಪಾದನಾ ಕೇಂದ್ರಗಳಿವೆ.

**ಚಿತ್ರದುರ್ಗ** : ಬೆಂಗಳೂರಿನಿಂದ 260 ಕಿ.ಮೀ. ಇಲ್ಲಿನ ಪಾಳೆಯಗಾರರ ಕಾಲದ ಕೋಟೆಗಳು ಸುಪ್ರಸಿದ್ಧ. ಇತಿಹಾಸ ಪ್ರಸಿದ್ಧ ಸ್ಥಳ. ಇಲ್ಲಿಗೆ ಸಮೀಪದ ಚಂದ್ರವಳ್ಳಿ ಪ್ರಾಚೀನ ಸ್ಥಳ .

ಧರ್ಮಸ್ಥಳ : ನೇತ್ರಾವತಿ ನದಿಯಿಂದ ಸುತ್ತುವರಿದಿರುವ ಧರ್ಮಸ್ಥಳವು ಇಲ್ಲಿನ ಮಂಜುನಾಥ ಸ್ವಾಮಿಯಿಂದಾಗಿ ಸುಪ್ರಸಿದ್ಧ. ಇಲ್ಲಿಯೂ ಒಂದು ಬಾಹುಬಲಿಯ ವಿಗ್ರಹದ ಪ್ರತಿಷ್ಠಾಪನೆಯಾಗಿದೆ.

**ಬಿಜಾಪುರ** : ಆದಿಲ್ ಷಾಹಿ ಸುಲ್ತಾನರ ಕಾಲದಲ್ಲಿ ವಿಶೇಷ ಮಹತ್ವ ಪಡೆದಿದ್ದ ಬಿಜಾಪುರದಲ್ಲಿ ಈಗ ಕೋಟೆ, ಮತ್ತು ಮುಸ್ಲಿಂ ವಾಸ್ತುಶೈಲಿಯಲ್ಲಿ ನಿರ್ಮಾಣವಾಗಿರುವ ಹಲವಾರು ಮಸೀದಿಗಳು ಮತ್ತು ಗೋರಿಗಳು ಕಾಣುತ್ತವೆ. ಪ್ರಪಂಚದಲ್ಲಿ ಎರಡನೆಯ ಅತಿ ವಿಸ್ತಾರವಾದ ಬುರುಜಿನ ಗೋಲ್ ಗುಂಬಜ್ ಬಿಜಾಪುರದ ಪ್ರಮುಖ ಆಕರ್ಷಣೆ. ಇದು ಬಿಜಾಪುರದ ಆದಿಲ್‌ಷಾನ ಗೋರಿ. ಇಲ್ಲಿನ ಇಬ್ರಾಹಿಂ ರೋಜಾ, ಬಾರಾಕಮಾನ್ ಇತ್ಯಾದಿಗಳು ವೀಕ್ಷಣಾರ್ಹವಾದುವು.

**ಬಾದಾಮಿ, ಐಹೊಳೆ, ಪಟ್ಟದಕಲ್ಲು** : ಬೆಂಗಳೂರಿನಿಂದ 499 ಕಿ.ಮೀ. ದೂರದಲ್ಲಿ ಬಾದಾಮಿ ಇದೆ. ಇದಕ್ಕೆ ಸಮೀಪದಲ್ಲೇ ಐಹೊಳೆ ಮತ್ತು ಪಟ್ಟದಕಲ್ಲುಗಳಿವೆ. ಬಾದಾಮಿಯು ಬಾದಾಮಿ ಚಾಲುಕ್ಯರ ಕಾಲದ ರಾಜಧಾನಿ. ಇಲ್ಲಿನ ಗುಹಾದೇವಾಲಯಗಳು, ಅವುಗಳೊಳಗಿನ ಶಿಲ್ಪ ಮತ್ತು ಇನ್ನಿತರ ದೇವಾಲಯಗಳು ನೋಡಲೇ ಬೇಕಾದುವು. ಬಾದಾಮಿಯಿಂದ ಸು. 12 ಕಿಮೀ. ದೂರದಲ್ಲಿರುವ ಐಹೊಳೆಯಲ್ಲಿ ಬಾದಾಮಿ ಚಾಲುಕ್ಯರ ಕಾಲದ 70ಕ್ಕೂ ಹೆಚ್ಚು ದೇವಾಲಯಗಳಿವೆ. ದುರ್ಗಾದೇವಾಲಯ, ಗೌಡರ ಗುಡಿ, ಲಾಡ್‌ಖಾನ್, ಮೇಗುತಿ ಮತ್ತಿತರ ದೇವಾಲಯಗಳು ಇಲ್ಲಿ ಬಹಳ ಮುಖ್ಯವಾದುವು.

ಬಾದಾಮಿಯಿಂದ 16 ಕಿ.ಮೀ. ದೂರದಲ್ಲಿರುವ ಪಟ್ಟದಕಲ್ ಮಲಪ್ರಭಾನದಿಯ ದಂಡೆಯ ಮೇಲಿದೆ. ಇಲ್ಲಿಯೂ ಬಾದಾಮಿ ಚಾಲುಕ್ಯರ ಕಾಲದ ಅನೇಕ ದೇವಾಲಯಗಳಿವೆ. ಅದರಲ್ಲೂ ಲೋಕೇಶ್ವರ, ವಿರೂಪಾಕ್ಷ ಇತ್ಯಾದಿ ದೇವಾಲಯಗಳು ವಾಸ್ತುಶಿಲ್ಪದ ಅಪೂರ್ವ ಸಾಧನೆಗಳು. ಇದನ್ನು ಕರ್ನಾಟಕದ ವಾಸ್ತುಶಿಲ್ಪದ ತೊಟ್ಟಿಲು ಎನ್ನುತ್ತಾರೆ.

**ಬೀದರ್** : ಬೆಂಗಳೂರಿನಿಂದ 669 ಕಿ. ಮೀ. ಹಿಂದೆ ಬಹಮನಿ ಸುಲ್ತಾನರ ರಾಜಧಾನಿಯಾಗಿತ್ತು. ಇಲ್ಲಿನ ಕೋಟೆಗಳು, ಮಹಮದ್‌ಗವಾನನ ಮದ್ರಸಾ, ಬಹಮನಿ ಮತ್ತು ಬರೀದ್ ಷಾಹಿಗಳ ಗೋರಿಗಳು, ನರಸಿಂಹ ದೇವಾಲಯ ವೀಕ್ಷಣಾರ್ಹ ಸ್ಥಳಗಳು.

**ಬಸವಕಲ್ಯಾಣ** : ಬೆಂಗಳೂರಿನಿಂದ 680 ಕಿ.ಮೀ. ಕಲ್ಯಾಣ ಚಾಲುಕ್ಯರ ಕಾಲದ ರಾಜಧಾನಿ.

**ರಾಯಚೂರು** : ಬೆಂಗಳೂರಿನಿಂದ 415 ಕಿ.ಮೀ. ಕಾಕತೀಯರ ಆಳ್ವಿಕೆಗೆ ಸೇರಿದ್ದ ಪ್ರದೇಶ. ಇಲ್ಲಿನ ಕೋಟೆ ಬಹುಮುಖ್ಯ ಆಕರ್ಷಣೆ. ಜುಮ್ಮಾ ಮಸೀದಿ, ಏಕ್‌ಮಿನಾರ್ ಮಸೀದಿಗಳು ಇಲ್ಲಿ ಪ್ರೇಕ್ಷಣೀಯ ಸ್ಥಳಗಳು.

**ತುಂಗಭದ್ರಾ ಅಣೆಕಟ್ಟು** : ಹೊಸಪೇಟೆಯಿಂದ 6 ಕಿ.ಮೀ. ತುಂಗಭದ್ರೆಗೆ ಇಲ್ಲಿ ಹಾಕಿರುವ ಅಣೆಕಟ್ಟು ದಕ್ಷಿಣ ಇಂಡಿಯಾದಲ್ಲಿ ಅತ್ಯಂತ ಉದ್ದವಾದುದು.

**ಹಂಪಿ** : ಹೊಸಪೇಟೆಯಿಂದ 11 ಕಿ.ಮೀ. ವಿಜಯನಗರ ಅರಸರ ಕಾಲದ ರಾಜಧಾನಿ. ಈಗ ಹಾಳು ಬಿದ್ದಿದೆ. ಇಲ್ಲಿನ ಪಂಪಾ ವಿರೂಪಾಕ್ಷ ದೇವಾಲಯ ಅತ್ಯಂತ ಪ್ರಾಚೀನ. ಅಲ್ಲೆ ಕೃಷ್ಣದೇವಾಲಯ, ವಿಜಯ ವಿಠಲ ದೇವಾಲಯ, ಹಜಾರ ರಾಮಸ್ವಾಮಿ ದೇವಾಲಯ ಮತ್ತಿನ್ನೂ ಅನೇಕ ದೇವಾಲಯಗಳು ಇಲ್ಲಿ ಗತವೈಭವದ ಸಾಕ್ಷಿಗಳಾಗಿವೆ. ಅಲ್ಲದೆ ಇಲ್ಲಿನ ನರಸಿಂಹ, ಕಡಲೆಕಾಳು ಗಣಪತಿ, ಸಾಸಿವೆಗಣಪತಿಗಳ ಏಕಶಿಲಾ ವಿಗ್ರಹಗಳು, ಮಹರ್ನವಮಿ ದಿಬ್ಬ, ಇಂಡೋಸಾರ್ಸೆನಿಕ್ ಶೈಲಿಯ ಕಮಲ ಮಂದಿರ, ರಾಣಿಯರ ಸ್ನಾನಗೃಹ, ಆನೆಗಳ ಲಾಯ ಇತ್ಯಾದಿಗಳು ಗತಿಸಿದ ಸಾಮ್ರಾಜ್ಯವೊಂದರ ಸ್ಮಾರಕಗಳಾಗಿ ಉಳಿದಿವೆ. ಇಲ್ಲಿನ ಕಲ್ಲಿನ ರಥ, ವಿಜಯ ವಿಠ್ಠಲ ದೇವಾಲಯದ ಸಂಗೀತ ಕಂಬಗಳೂ ಸಹ ಪ್ರಮುಖ ಆಕರ್ಷಣೆಗಳು.

**ಬನವಾಸಿ** : ಬೆಂಗಳೂರಿನಿಂದ 384 ಕಿ. ಮೀ. ಇದು ಕದಂಬರ ರಾಜಧಾನಿಯಾಗಿತ್ತು. ವರದಾನದಿಯ ದಂಡೆಯ ಮೇಲಿರುವ ಬನವಾಸಿಯ ಮಧುಕೇಶ್ವರ ದೇವಾಲಯ ವೀಕ್ಷಣಾರ್ಹ. ಕನ್ನಡದ ಆದಿಕವಿ ಪಂಪ ಹೊಗಳಿರುವ ಈ ಬನವಾಸಿಯು ಅತ್ಯಂತ ಪ್ರಾಚೀನ ಸಾಂಸ್ಕೃತಿಕ ಕೇಂದ್ರ.

**ಬಳ್ಳಿಗಾವೆ** : ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯು ಕರ್ನಾಟಕದ ಪ್ರಾಚೀನ ಶಿಕ್ಷಣ ಮತ್ತು ಸಾಂಸ್ಕೃತಿಕ ಕೇಂದ್ರ. ಕಲ್ಯಾಣ ಚಾಲುಕ್ಯರ ಕಾಲದ ಕೇದಾರೇಶ್ವರ, ತ್ರಿಪುರಾಂತಕೇಶ್ವರ ಮತ್ತಿನ್ನೂ ಅನೇಕ ದೇವಾಲಯಗಳು ವಾಸ್ತುಶಿಲ್ಪದ ಮಹತ್ವದ ಉದಾಹರಣೆಗಳಾಗಿ ಉಳಿದಿವೆ. ಇದು 10 ರಿಂದ 12ನೆಯ ಶತಮಾನಗಳವರೆಗೆ ಬಹಳ ಪ್ರಸಿದ್ಧಿ ಪಡೆದ ಧಾರ್ಮಿಕ, ಸಾಂಸ್ಕೃತಿಕ ಮತ್ತು ವಿದ್ಯಾಕೇಂದ್ರವಾಗಿತ್ತು.

**ಭಟ್ಕಳ** : ಬೆಂಗಳೂರಿನಿಂದ 452 ಕಿ. ಮೀ. ವಿಜಯನಗರ ಅರಸರ ಕಾಲದಿಂದಲೂ ಇದೊಂದು ಪ್ರಮುಖ ಬಂದರು. ಅಲ್ಲದೆ ಐತಿಹಾಸಿಕವಾಗಿ ಸಂಘರ್ಷಗಳನ್ನು ಕಂಡ ಸ್ಥಳವೂ ಹೌದು. ಇಲ್ಲಿ ಹಲವಾರು ದೇವಾಲಯಗಳು, ಜೈನ ಬಸದಿಗಳು ಮತ್ತು ಮಸೀದಿಗಳಿವೆ.

**ಶೃಂಗೇರಿ** : ಬೆಂಗಳೂರಿನಿಂದ 334 ಕಿ.ಮೀ. ಇಲ್ಲೊಂದು ಶಂಕರಾಚಾರ್ಯರಿಂದ ಸ್ಥಾಪಿತವಾಯಿತೆನ್ನಲಾದ ಮಠವಿದೆ. ಈ ಮಠದ ಆವರಣದಲ್ಲಿಯೇ ಇರುವ ವಿದ್ಯಾಶಂಕರ ದೇವಾಲಯವು ವಾಸ್ತುಶಿಲ್ಪದ ಒಂದು ಸುಂದರ ಕೃತಿ.

**ಇಕ್ಕೇರಿ** : ಕೆಳದಿ ನಾಯಕರ ರಾಜಧಾನಿಯಾಗಿತ್ತು. ವಿದೇಶಿ ಪ್ರವಾಸಿಗರು ಈ ಸ್ಥಳವನ್ನು ಪ್ರಶಂಸಿಸಿದ್ದಾರೆ. ಇಲ್ಲಿ ಅಘೋರೇಶ್ವರ ದೇವಾಲಯ ವೀಕ್ಷಣಾರ್ಹ.

**ಕಾರ್ಕಳ** : ಬೆಂಗಳೂರಿನ 384 ಕಿ.ಮೀ. ಕ್ರಿ.ಶ. 1432 ರಲ್ಲಿ ಇಲ್ಲಿ ಸ್ಥಾಪಿತವಾಗಿರುವ ಗೊಮ್ಮಟ ವಿಗ್ರಹ ಇಲ್ಲಿನ ಆಕರ್ಷಣೆ, ಚತುರ್ಮುಖ ಬಸದಿ ಮತ್ತು ತ್ರಿಭುವನ ತಿಲಕ ಚೂಡಾಮಣಿ ಅಥವಾ 'ಸಾವಿರ ಕಂಬದ' ಬಸದಿಗಳೂ ವಿಜಯನಗರ ಕಾಲದ ನಿರ್ಮಿತಿಗಳಾಗಿವೆ.

**ನಂಜನಗೂಡು** : ಮೈಸೂರಿನಿಂದ 23 ಕಿ. ಮೀ. ಅತ್ಯಂತ ಪ್ರಾಚೀನ ತೀರ್ಥಕ್ಷೇತ್ರ. ಇಲ್ಲಿನ ನಂಜುಂಡೇಶ್ವರ ದೇವಾಲಯವು ಮೈಸೂರು ಒಡೆಯರ ಮತ್ತು ಟಿಪ್ಪುವಿನ ಕಾಲದಿಂದ ಬಹಳ ಮಹತ್ವ ಪಡೆದಿತ್ತು.

**ಉಡುಪಿ** : ಬೆಂಗಳೂರಿನಿಂದ 422 ಕಿ.ಮೀ. ಬಹುಮುಖ್ಯ ತೀರ್ಥಕ್ಷೇತ್ರ.

**ಕುಕ್ಕೆ** : ದ. ಕ. ಜಿಲ್ಲೆಯ ಇದು ಅತ್ಯಂತ ಪ್ರಸಿದ್ಧ ನಾಗಕ್ಷೇತ್ರ.

**ಕೊಲ್ಲೂರು** : ದ. ಕ. ಜಿಲ್ಲೆ ಈ ಸ್ಥಳವು ಇಲ್ಲಿನ ಮೂಕಾಂಬಿಕೆಯಿಂದಾಗಿ ಪ್ರಸಿದ್ಧ.



ಕರ್ನಾಟಕ
ಪ್ರೇಕ್ಷಣೀಯ ಸ್ಥಳಗಳು
ಸೂಚಿ
ಜಿಲ್ಲಾ ಕೇಂದ್ರ
ಪ್ರೇಕ್ಷಣೀಯ ಸ್ಥಳಗಳು
ಜಿಲ್ಲಾ ಗಡಿ
ರಾಷ್ಟ್ರೀಯ ಹೆದ್ದಾರಿ
ಇತರ ರಸ್ತೆಗಳು
ರೈಲ್ವೆ ಮಾರ್ಗಗಳು
ಅರಬ್ಬೀ ಸಮುದ್ರ
ಗೋವ
ಕಾರವಾರ
ಬೆಳಗಾವಿ
ಧಾರವಾಡ
ಚಿತ್ರದುರ್ಗ
ಶಿವಮೊಗ್ಗ
ಚಿಕ್ಕಮಗಳೂರು
ಕೋಲಾರ

# ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಆರಂಭ

**ಬಸವರಾಜ ಕಲ್ಗುಡಿ**

ಹಂಪಿಯ ಕನ್ನಡ ವಿಶ್ವವಿದ್ಯಾಲಯ 23–10–1991 ರಂದು ವಿದ್ಯುಕ್ತವಾಗಿ ಆರಂಭವಾಯಿತು. ಕರ್ನಾಟಕ ಸರಕಾರದ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಬಂಗಾರಪ್ಪನವರು ಈ ಮುಂಚೆ ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆಯನ್ನು ಪ್ರಕಟಿಸಿದ್ದರು. 23–10–91ರಂದು ಡಾ. ಕಂಬಾರರನ್ನು ವಿಶೇಷ ಆಡಳಿತ ಅಧಿಕಾರಿಯನ್ನಾಗಿ ನೇಮಿಸುವ ಮೂಲಕ ಕನ್ನಡ ವಿಶ್ವವಿದ್ಯಾಲಯದ ಆರಂಭವೂ, ಚಟುವಟಿಕೆಗಳೂ ಪ್ರಾರಂಭವಾದವು. ಆದರೆ ಈ ಸ್ಥಾಪನೆ ಹಾಗೂ ಪ್ರಾರಂಭಕ್ಕೆ ಸರಕಾರದ ಒತ್ತಾಸೆಯೂ, ಜನತೆಯ ಆಶೋತ್ತರವೂ ಒಟ್ಟಾಗಿಯೇ ಕೂಡಿ ಪ್ರೇರಕವಾದವು.

## ಸ್ಥಾಪನೆಯ ಮುನ್ನಾ ಇತಿಹಾಸ

1985ರಲ್ಲಿ ಮೈಸೂರಿನಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದಲ್ಲಿ ಕನ್ನಡ ವಿಶ್ವವಿದ್ಯಾಲಯ ಕಲ್ಪನೆ ಪ್ರಾರಂಭವಾಯಿತು. ಇದನ್ನು ಕಾರ್ಯರೂಪಕ್ಕೆ ತರುವ ಭರವಸೆಯನ್ನು ಆಗಿನ ಸರ್ಕಾರ ನೀಡಿತು. ಈ ಕುರಿತು ಸೂಚನೆಗಳನ್ನು ನೀಡಲು ಮತ್ತು ಆ ಬಗ್ಗೆ ವಿವಿಧ ವ್ಯವಸ್ಥೆ ರೂಪಿಸಲು ಸರ್ಕಾರವು ಡಿಸೆಂಬರ್ 31, 1985 ರಂದು ಕರ್ನಾಟಕ ವಿಶ್ವವಿದ್ಯಾಲಯದ ಮಾಜಿ ಕುಲಪತಿಗಳಾದ ಶ್ರೀ ಎಸ್.ಎಸ್. ಒಡೆಯರ್ ಅವರನ್ನು ಕೇಳಿಕೊಂಡಿತು.

ಶ್ರೀ ಒಡೆಯರ್ ಅವರು ರಾಜ್ಯದ ಒಳಗೆ ಹಾಗೂ ಹೊರಗೆ ಅನೇಕ ಸಾಹಿತಿಗಳನ್ನು ಶಿಕ್ಷಣ ತಜ್ಞರನ್ನು ಹಾಗೂ ಅನೇಕ ವಿಶ್ವವಿದ್ಯಾಲಯಗಳನ್ನೂ ಭೇಟಿ ಮಾಡಿ ವರದಿಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಒಪ್ಪಿಸಿದರು. "ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ವಿಭಿನ್ನ ಮಗ್ಗಲುಗಳ ಉನ್ನತ ಅಧ್ಯಯನ ಮಾಡುವುದು ಕನ್ನಡ ವಿಶ್ವವಿದ್ಯಾಲಯದ ಉದ್ದೇಶ. ಈ ವ್ಯಾಪಕವಾದ ಕೆಲಸ ಮಾಡುವುದು ಇದಕ್ಕಾಗಿಯೇ ಮೀಸಲಾದ ಒಂದು ವಿಶ್ವವಿದ್ಯಾಲಯದ ಮೂಲಕವೇ ಸಾಧ್ಯ. ಯಾವುದೇ ಒಂದು ಸಂಶೋಧನಾ ಸಂಸ್ಥೆಗೆ ಇಷ್ಟು ದೊಡ್ಡ ಪ್ರಮಾಣದಲ್ಲಿ ಮತ್ತು ಹೆಚ್ಚಿನ ಗುಣಮಟ್ಟದಲ್ಲಿ ಸಂಶೋಧನೆ ಕೈಗೊಳ್ಳಲಿಕ್ಕೆ ಅಸಾಧ್ಯವಾಗುತ್ತದೆ. ಮತ್ತು ಅಂಥ ಸಂಶೋಧನೆಯನ್ನು ತೀವ್ರವವಾಗಿ ಕೈಗೊಳ್ಳಲು

ಮತ್ತು ಪೂರ್ಣಗೊಳಿಸಲು ಒಬ್ಬ ಕುಲಪತಿಯ ಸ್ಥಾನಮಾನ ಮತ್ತು ಅಧಿಕಾರ ಬಲ ಅವಶ್ಯಕವಾಗಿದೆ'' ಎಂದು ಒಡೆಯರ ಆಯೋಗವು ಸ್ಪಷ್ಟವಾದ ಮಾತುಗಳಲ್ಲಿ ಹೇಳಿತು.

ದಿನಾಂಕ 21-2-91ರಂದು ಮಾನ್ಯ ಶಿಕ್ಷಣ ಸಚಿವರಾದ ಶ್ರೀ ವೀರಪ್ಪ ಮೊಯಿಲಿಯವರು ಕನ್ನಡ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಬಗ್ಗೆ ಶಿಕ್ಷಣ ತಜ್ಞರ ಅಭಿಪ್ರಾಯಗಳನ್ನು ಪಡೆದು ಆಂಧ್ರ ಪ್ರದೇಶದಲ್ಲಿ ತೆಲುಗು ವಿಶ್ವವಿದ್ಯಾಲಯ, ಮತ್ತು ತಮಿಳು ನಾಡಿನಲ್ಲಿ ತಮಿಳು ವಿಶ್ವವಿದ್ಯಾಲಯ ಸ್ಥಾಪಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಕನ್ನಡ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಉದ್ದೇಶಿಸಿರುವುದಾಗಿ ತಿಳಿಸಿದರು.

ಒಡೆಯರ ವರದಿಯು ಹೊಸ ವಿಶ್ವವಿದ್ಯಾಲಯ ಮಾಡಬೇಕಾದ ಇಪ್ಪತ್ತನಾಲ್ಕು ಕೆಲಸಗಳನ್ನು ವಿವರಿಸಿ, 'ಇತರ ವಿಶ್ವವಿದ್ಯಾಲಯಗಳಲ್ಲಿ ನಡೆಯುತ್ತಿರುವಂಥ ಕಾರ್ಯದ ಪುನಾರಾವರ್ತನೆ ನಡೆಯುವುದಿಲ್ಲ' ಎಂದು ಹೇಳಿತು.

ಈ ವಾದದ ಮೇಲೆ ನಂತರ ಪರ-ವಿರೋಧಗಳು ಸಾಕಷ್ಟು ಸಂಖ್ಯೆಯಲ್ಲಿ ಪತ್ರಿಕೆಯಲ್ಲಿ ಚರ್ಚೆಯಾದವು. ಎಲ್ಲ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಅಧ್ಯಯನಕ್ಕೆ ಕೇಂದ್ರಗಳು ಇರುವಾಗ ಕನ್ನಡಕ್ಕೇ ಹೊಸ ವಿಶ್ವವಿದ್ಯಾಲಯ ಏಕೆ ಎನ್ನುವ ಪ್ರಶ್ನೆಗಳನ್ನು ಎತ್ತಿದರು. ಕನ್ನಡ ವಿಶ್ವವಿದ್ಯಾಲಯದ ಅವಶ್ಯಕತೆ ಯಾಕೆ ಎನ್ನುವುದರ ಬಗ್ಗೆ ಅನೇಕ ಅರ್ಥಪೂರ್ಣ ಚರ್ಚೆಗಳೂ ಬೆಳೆದವು. "ಕನ್ನಡ-ಭಾಷೆ-ಸಾಹಿತ್ಯ-ಸಂಸ್ಕೃತಿಗಳ ಬಗ್ಗೆ ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಳ್ಳುವ ಒಂದು ಸಂಯೋಜನಾ ವೇದಿಕೆಯಾಗಿ ರೂಪಿಸುವಂತಿದ್ದರೆ ತಕ್ಕ ಹಾಗೆ ಸ್ವರೂಪ, ವ್ಯಾಪ್ತಿ, ವಿಧಾನಗಳನ್ನು ರೂಪಿಸಬೇಕಾಗುತ್ತದೆ. ಆದ್ದರಿಂದ "ದೂರಗಾಮಿಯಾದ ಯೋಜನೆಗಳನ್ನು ರೂಪಿಸಿ, ಸಾಮೂಹಿಕ ಹಾಗೂ ಸಾಮುದಾಯಿಕ ಪ್ರತಿಭೆಯನ್ನು ಬಳಸಿ ಜಾರಿಗೊಳಿಸುವ ಹೊಣೆಯನ್ನು ಹೊರಬಲ್ಲ ಮತ್ತು ಸಂಯೋಜನಾ ವೇದಿಕೆಯೊಂದರ ಅವಶ್ಯಕತೆ ಈಗ ತೀವ್ರವಾಗಿದೆ'' ಎನ್ನುವಂಥ ವಿಚಾರಗಳು ಹೊಸ ವಿಶ್ವವಿದ್ಯಾಲಯದ ಉದ್ದೇಶ, ವ್ಯಾಪ್ತಿಯನ್ನು ಕುರಿತು ನೋಡುವ ಕ್ರಮವೊಂದರ ಕಡೆಗೆ ಗಮನ ಸೆಳೆದವು.

ಕನ್ನಡ ವಿಶ್ವವಿದ್ಯಾಲಯದ ಅಗತ್ಯದ ಬಗ್ಗೆ ತೀವ್ರವಾಗಿ ವಾದಿಸಿದವರಲ್ಲಿ ಚಿದಾನಂದಮೂರ್ತಿಯವರೂ ಒಬ್ಬರು. ಅದಕ್ಕೆ ಅನೇಕ ಅಕಾಡೆಮಿಕ್ ಮತ್ತು ಸಾಂಸ್ಕೃತಿಕ ಕಾರಣಗಳನ್ನು ಅವರು ಕೊಟ್ಟರು. "ನಮ್ಮಲ್ಲಿ ಭಾಷಾ ವಿಜ್ಞಾನಿಗಳ ಸಂಖ್ಯೆ ತೀರ ಕಡಿಮೆ. ಕನ್ನಡ ಭಾಷೆಯ ಬಗ್ಗೆ ಆಗಬೇಕಾದ ವಿಶ್ಲೇಷಣೆ ಆಗಿಲ್ಲ, ಅಷ್ಟೇ ಅಲ್ಲ ಕನ್ನಡ ಭಾಷೆಯ ಸ್ಥೂಲ ಸಮೀಕ್ಷೆಯೂ ಆಗಿಲ್ಲ. ಇತಿಹಾಸ ವಿಭಾಗದಲ್ಲಿ ಅಮೆರಿಕನ್, ಬ್ರಿಟಿಷ್ ಚರಿತ್ರೆಯ ಜೊತೆ ಕರ್ನಾಟಕದ ಚರಿತ್ರೆಯನ್ನು ಓದುತ್ತಾರೆ-ಒಂದರಡು ಪತ್ರಿಕೆಗಳಾಗಿ. ಕರ್ನಾಟಕದ ಮತ್ತು ಕರ್ನಾಟಕದ ಆಚೆ

ಹೊರಗುಳಿದಿರುವ, ಹದಿನೈದು ಹದಿನಾರು ಅಚ್ಚಗನ್ನಡ ಜಿಲ್ಲೆಗಳಲ್ಲಿ ಸೂಕ್ಷ್ಮ ಸಂಶೋಧನೆಗಳು ನಡೆದಿಲ್ಲ. ಸಮಾಜ ವಿಜ್ಞಾನ ವಿಭಾಗಗಳಲ್ಲಿ ಕರ್ನಾಟಕದ ಅಧ್ಯಯನಗಳಿಗೆ ಮಹತ್ವ ಕಡಿಮೆ. ಕರ್ನಾಟಕವನ್ನು ಅಧ್ಯಯನ ಕಾರ್ಯಕ್ರಮಗಳಲ್ಲಿ ಕೇಂದ್ರದಲ್ಲಿಟ್ಟುಕೊಂಡು ಸಂಶೋಧನೆಗೇ ಮೀಸಲಾದ ಕನ್ನಡ ವಿಶ್ವವಿದ್ಯಾಲಯವೊಂದು ಅಗತ್ಯವಾಗಿ ಬೇಕಾಗಿದೆ''

ಕರ್ನಾಟಕ ಕೇಂದ್ರದಲ್ಲಿದ್ದು ಇಲ್ಲಿಯ ನಾಡು, ನುಡಿ, ಸಂಸ್ಕೃತಿ, ಪರಂಪರೆ, ಸಾಹಿತ್ಯ–ಮೊದಲಾದವುಗಳನ್ನು ಕುರಿತಾದ ಸಾಂಘಿಕ ಸಂಶೋಧನೆ, ಅಂತರ ಶಿಸ್ತೀಯ ಅಧ್ಯಯನ–ಇವುಗಳು ಪ್ರಮುಖ ಆಶಯಗಳಾಗಿರುವುದರ ಬಗ್ಗೆ ಒತ್ತಿ ಹೇಳಲಾಯಿತು.

## ಕನ್ನಡ ವಿಶ್ವವಿದ್ಯಾಲಯ ಸ್ಥಾಪನೆ

ಮುಖ್ಯಮಂತ್ರಿ ಮಾನ್ಯಶ್ರೀ ಎಸ್. ಬಂಗಾರಪ್ಪನವರು ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆಯನ್ನು ನವೆಂಬರ್‌ನಲ್ಲಿ ಪ್ರಕಟಿಸಿದರು. ಕನ್ನಡದ ಅನೇಕ ಸಾಹಿತಿಗಳು, ಕಲಾವಿದರು ಮೆಚ್ಚುಗೆಯನ್ನು ವ್ಯಕ್ತಪಡಿಸಿ ಈ ನಿರ್ಣಯವನ್ನು ಸ್ವಾಗತಿಸಿದರು. ನವೆಂಬರ್ 23, 1991ರಂದು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಪ್ರಾಧ್ಯಾಪಕರಾಗಿದ್ದ, ಜಾನಪದ ತಜ್ಞರೂ, ಸಾಹಿತ್ಯ, ನಾಟಕ, ರಂಗಭೂಮಿ, ಸಿನಿಮಾ ಮುಂತಾದ ಕ್ಷೇತ್ರಗಳಲ್ಲಿ ತಮ್ಮದೇ ಆದ ವಿಶಿಷ್ಟ ಸೃಜನಶೀಲ ವ್ಯಕ್ತಿತ್ವವನ್ನು ಕರ್ನಾಟಕ ಸಂಸ್ಕೃತಿಗೆ ನೀಡಿರುವ ಡಾ. ಚಂದ್ರಶೇಖರ ಕಂಬಾರ ಅವರನ್ನು ಕನ್ನಡ ವಿಶ್ವವಿದ್ಯಾಲಯದ ವಿಶೇಷ ಆಡಳಿತ ಅಧಿಕಾರಿಯನ್ನಾಗಿ ನೇಮಿಸಲಾಯಿತು.

## ವಿಶೇಷ ಅಧಿಕಾರಿಯವರ ಕಾರ್ಯಾಲಯ ಉದ್ಘಾಟನೆ :

ಕನ್ನಡ ರಾಜ್ಯೋತ್ಸವ ದಿನವಾದ ನವೆಂಬರ್ 1991ರಂದು ಹಂಪಿ–ಬಳಿಯ ಕಮಲಾಪುರದಲ್ಲಿ ಸ್ವತಃ ಲೇಖಕರಾದ ಹಾಗೂ ಕರ್ನಾಟಕ ಸರ್ಕಾರದ ಶಿಕ್ಷಣ ಸಚಿವರಾದ ಮಾನ್ಯಶ್ರೀ ಎಂ. ವೀರಪ್ಪ ಮೊಯಿಲಿಯವರು ಕನ್ನಡ ವಿಶ್ವವಿದ್ಯಾಲಯದ ವಿಶೇಷ ಆಡಳಿತ ಅಧಿಕಾರಿಯವರ ಕಾರ್ಯಾಲಯವನ್ನು ಉದ್ಘಾಟಿಸಿದರು. ಕಮಲಾಪುರ ಲೋಕೋಪಯೋಗಿ ಇಲಾಖೆಯ ಪ್ರವಾಸಿ ಮಂದಿರವನ್ನು ತಾತ್ಕಾಲಿಕವಾಗಿ ವಿಶೇಷಾಧಿಕಾರಿಗಳ ಕಾರ್ಯಾಲಯವನ್ನಾಗಿ ಪರಿವರ್ತಿಸಲಾಗಿದೆ. ಈ ಸಂದರ್ಭದಲ್ಲಿ ಮಾನ್ಯ ಶಿಕ್ಷಣ ಸಚಿವರು "ಕನ್ನಡ ಸಾಂಸ್ಕೃತಿಕ ಸಾಮ್ರಾಜ್ಯ ಸ್ಥಾಪನೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯ ಒಂದು ಅಡಿಗಲ್ಲು. ಕನ್ನಡ ಭವ್ಯ ಪರಂಪರೆಯನ್ನು ವಿಶ್ವಮಟ್ಟಕ್ಕೆ ಒಯ್ಯುವುದು ಇದರ ಪ್ರಧಾನ ಗುರಿ. ಉನ್ನತ ಮಟ್ಟದ ಶಿಕ್ಷಣ ಬಹುಜನರ ಪಾಲಿಗೂ ದಕ್ಕಬೇಕು. ಕನ್ನಡ ವಿಶ್ವವಿದ್ಯಾಲಯ ವಿಶ್ವಮಟ್ಟದಲ್ಲಿ ವಿಶ್ವಸ್ವರೂಪ ಹೊಂದಿ ದೀಪಸ್ತಂಭದ ರೀತಿಯಲ್ಲಿ ಹಂಪಿಯಲ್ಲಿ ಎದ್ದು ನಿಂತು ಬೆಳಕು ಚೆಲ್ಲುವಂತಾಗಬೇಕು'' ಎಂದು ಹಾರೈಸಿದರು.

ಪ್ರಸಕ್ತ ವರ್ಷ ಕನ್ನಡ ವಿಶ್ವವಿದ್ಯಾಲಯಕ್ಕೆ ಸರ್ಕಾರವು 80 ಲಕ್ಷ ರೂಪಾಯಿ ಅನುದಾನ ನೀಡಿದ್ದು, 8ನೆಯ ಯೋಜನೆಯಲ್ಲಿ 5 ಕೋಟಿ ರೂಪಾಯಿಗಳನ್ನು ವಿಶ್ವವಿದ್ಯಾಲಯದ ಅಭಿವೃದ್ಧಿಗೆ ಒದಗಿಸಲಾಗುವುದು ಎಂದು ಅವರು ತಿಳಿಸಿದರು. ಈ ಸಮಾರಂಭದ ಅಧ್ಯಕ್ಷತೆಯನ್ನು ಅರಣ್ಯ ಖಾತೆಯ ಸಹಾಯಕ ಸಚಿವ ಶ್ರೀ ಈ.ಟಿ. ಶಂಭುನಾಥ ಅವರೂ, ಮುಖ್ಯ ಅತಿಥಿಯಾಗಿ ವಿದ್ಯುತ್ ಖಾತೆಯ ಸಹಾಯಕ ಸಚಿವ ಶ್ರೀ ಎಂ. ರಾಮಪ್ಪನವರೂ ಉಪಸ್ಥಿತರಿದ್ದರು. ಹೊಸಪೇಟೆಯ ಶಾಸಕರಾದ ರತನ್‌ಸಿಂಗ್, ಜಿಲ್ಲಾ ಪರಿಷತ್ ಅಧ್ಯಕ್ಷ ಶ್ರೀಬಾವಿ ಬೆಟ್ಟಪ್ಪ, ವಿಧಾನ ಪರಿಷತ್ ಸದಸ್ಯ ಶ್ರೀ ನಾರಾಯಣದಾಸ, ಶ್ರೀಮಲ್ಲಿಕಾರ್ಜುನ ಹಾಗೂ ಕಮಲಾಪುರದ ಹಲವಾರು ಗಣ್ಯರು ಸಮಾರಂಭದಲ್ಲಿ ಹಾಜರಿದ್ದರು.

ವಿಶೇಷ ಆಡಳಿತ ಅಧಿಕಾರಿಯಾಗಿ ಅಧಿಕಾರ ಸ್ವೀಕರಿಸಿದ ತಕ್ಷಣ ಚಂದ್ರಶೇಖರ ಕಂಬಾರರು ರಾಜ್ಯದ ಒಳಗೆ ಹಾಗೂ ಹೊರಗೆ ಅನೇಕ ವಿಶ್ವವಿದ್ಯಾಲಯಗಳಿಗೆ ಭೇಟಿ ಕೊಟ್ಟು ವಿವಿಧ ಕ್ಷೇತ್ರಗಳ ಗಣ್ಯರ ಜೊತೆ ಸಮಾಲೋಚಿಸಿ, ಕನ್ನಡ ವಿಶ್ವವಿದ್ಯಾಲಯದ ರೂಪುರೇಷಗಳನ್ನು ಒಳಗೊಂಡ ಒಂದು ವರದಿಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಿದರು. ಈ ವರದಿಯಲ್ಲಿ ವಿಶ್ವವಿದ್ಯಾಲಯದ ಸಂಶೋಧನೆಯ ಕಾರ್ಯ ಚಟುವಟಿಕೆಯನ್ನು ಕುರಿತಂತೆ ವಿವರವಾದ ಆಲೋಚನೆ ಇದೆ. (ಇದರ ಮುಖ್ಯ ಭಾಗವನ್ನು ಮುಂದೆ ಕೊಡಲಾಗಿದೆ).

## ವಿಶ್ವವಿದ್ಯಾಲಯಕ್ಕೆ ಅಗತ್ಯವಾದ ಭೂಮಿಯ ಸ್ವಾಧೀನ :

ಆಡಳಿತ ಅಧಿಕಾರಿಯಾಗಿ ನೇಮಕಗೊಂಡ ಕೂಡಲೇ ಡಾ. ಚಂದ್ರಶೇಖರ ಕಂಬಾರರು ವಿಶ್ವವಿದ್ಯಾಲಯ ಸ್ಥಾಪನೆಗೆ ಅಗತ್ಯವಾದ ಭೂಮಿಯನ್ನು ವಶಪಡಿಸಿಕೊಳ್ಳಲು ಕಾರ್ಯಪ್ರವೃತ್ತರಾದರು. ಹೊಸಪೇಟೆ ತಾಲ್ಲೂಕಿನ ಕಮಲಾಪುರದ ಗ್ರಾಮಕ್ಕೆ ಸೇರಿದ 560.37 ಎಕರೆ ಸರ್ಕಾರಿ ಭೂಮಿಯನ್ನು ವಿಶ್ವವಿದ್ಯಾಲಯದ ವಶಕ್ಕೆ ತೆಗೆದುಕೊಳ್ಳುವ ಸಲುವಾಗಿ ಬಳ್ಳಾರಿ ಜಿಲ್ಲಾಧಿಕಾರಿ, ಹೊಸಪೇಟೆ ಹಾಗೂ ಸರ್ಕಾರದ ಕಂದಾಯ ಇಲಾಖೆಯ ಕಾರ್ಯದರ್ಶಿಗಳ ಜೊತೆಗೆ ಪತ್ರವ್ಯವಹಾರ ನಡೆಸಲಾಯಿತು. ಸರ್ಕಾರವು ಪ್ರತಿ ಎಕರೆಗೆ 1 ರೂ. ನಂತೆ ಮಾರುಕಟ್ಟೆ ಬೆಲೆಯನ್ನು ಸಂದಾಯ ಮಾಡಿ ವಶಕ್ಕೆ ತೆಗೆದುಕೊಳ್ಳುವಂತೆ ಆದೇಶ ನೀಡಿತು. ವಿಶ್ವವಿದ್ಯಾಲಯ ಹಣವನ್ನು ಸರ್ಕಾರಕ್ಕೆ ಸಂದಾಯ ಮಾಡಿ ಸ್ವಾಧೀನಕ್ಕೆ ತೆಗೆದುಕೊಂಡು, ಸದರಿ ಜಮೀನಿಗೆ ಮೋಜಣಿದಾರರಿಂದ ಅಳತೆ ಮಾಡಿಸಿ, ಹದ್ದುಬಸ್ತು ಗುರ್ತಿಸಿತು.

ಈ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರದ ಕಂದಾಯ ಸಚಿವರಾದ ಮಾನ್ಯಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ ಅವರು ವಿಶೇಷ ಆಸಕ್ತಿ ತೋರಿದರು.

ವಿಶ್ವವಿದ್ಯಾಲಯದ ಆರಂಭಕ್ಕೆ ಈ ರೀತಿಯಲ್ಲಿ ಅಲ್ಪಾವಧಿಯಲ್ಲಿ ತ್ವರಿತ ಚಟುವಟಿಕೆಗಳು 1991ರಲ್ಲಿ ಪ್ರಾರಂಭವಾದವು.

## ಕನ್ನಡ ವಿಶ್ವವಿದ್ಯಾಲಯದ ಉದ್ದೇಶ ಕುರಿತು ಆಡಳಿತ ಅಧಿಕಾರಿಗಳ ವರದಿಯ ಮುಖ್ಯ ಭಾಗ:

ಕರ್ನಾಟಕದಲ್ಲಿ ಈಗಾಗಲೇ ಬೇರೆ ಬೇರೆ ಕಡೆಗಳಲ್ಲಿ ಐದು ವಿಶ್ವವಿದ್ಯಾಲಯಗಳು ತಮ್ಮ ತಮ್ಮ ರೀತಿಯಲ್ಲಿ ಸಮರ್ಪಕವಾದ ಕಾರ್ಯವನ್ನು ನಿರ್ವಹಿಸುತ್ತಿರುವಾಗ, ಈಗ ಹಂಪೆಯಲ್ಲಿರುವ ವಿಶ್ವವಿದ್ಯಾಲಯ, ಕೇವಲ ಕನ್ನಡ ಅಭಿಮಾನದ ದ್ಯೋತಕವಾಗಿ ಮಾತ್ರ ನಿರ್ಮಾಣಗೊಳ್ಳುವುದೇ ಎಂಬ ಸಂಶಯ ಅನೇಕ ವಿದ್ವಾಂಸರಿಗೆ ಬಂದಿರಬಹುದು. ಆದರೆ, ಹಂಪೆಯ ವಿಶ್ವವಿದ್ಯಾಲಯ ಒಂದು ಸಾಂಸ್ಕೃತಿಕ ಅವಶ್ಯಕತೆಯನ್ನು ಪೂರೈಸಲು ಮಾತ್ರ ಜನ್ಮ ತಳೆದಿದೆ. ಅದಕ್ಕೂ ಉಳಿದ ವಿಶ್ವವಿದ್ಯಾಲಯಗಳಿಗೂ ಯಾವುದೇ ರೀತಿಯ ಸ್ಪರ್ಧಾತ್ಮಕ ಸಂಬಂಧವಿಲ್ಲ. ಉಳಿದ ವಿಶ್ವವಿದ್ಯಾಲಯಗಳಲ್ಲಿ ನಡೆದಿರುವ ಸಂಶೋಧನಾ ಕಾರ್ಯ ಇಲ್ಲಿ ಪುನರುಕ್ತವಾಗುವುದಿಲ್ಲ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುವ ಸಂಶೋಧನೆಯ ಧ್ಯೇಯ ಸಂಪೂರ್ಣ ತಿಳುವಳಿಕೆಯ ಕಡೆಗೆ ಇರುತ್ತದೆ. ನಾವು ಯಾವುದೋ ಕಾರಣಕ್ಕಾಗಿ ನಿರ್ಲಕ್ಷ್ಯ ಮಾಡಿದ ತಿಳುವಳಿಕೆಯ ಕಡೆಗೆ ಇರುತ್ತದೆ. ನಾವು ಯಾವುದೋ ಕಾರಣಕ್ಕಾಗಿ ನಿರ್ಲಕ್ಷ್ಯ ಮಾಡಿದ ತಿಳುವಳಿಕೆಯ ಹೊಸ ಹೊಸ ದಿಗಂತಗಳ ಶೋಧನೆಯ ಕಡೆಗಿರುತ್ತದೆ. ಉಳಿದ ವಿಶ್ವವಿದ್ಯಾಲಯಗಳು ಈ ಮಾದರಿಯನ್ನು ಅನುಸರಿಸಬೇಕಾಗಿಲ್ಲ. ಆದರೆ, ಇಲ್ಲಿ ನಡೆಯುವ ಸಂಶೋಧನೆ ಉನ್ನತ ಮಟ್ಟದಾಗಿರಬೇಕಲ್ಲದೆ, ಉತ್ಕೃಷ್ಟವೂ ಆಗಿರಬೇಕೆಂಬ ಕಳಕಳಿ ಈ ವಿಶ್ವವಿದ್ಯಾಲಯಕ್ಕಿದೆ. ಕರ್ನಾಟಕ ಸರ್ಕಾರ ಈ ಕೊರತೆಯನ್ನು ತುಂಬಲು ಮುಂದೆ ಬಂದಿದ್ದು, ನಾಡಿನ ಭಾಗ್ಯೋದಯ.

ಹಂಪೆಯ ವಿಶ್ವವಿದ್ಯಾಲಯದ ಮುಂದಿರುವ ಧ್ಯೇಯ, ಕನ್ನಡವನ್ನು ಬಲಗೊಳಿಸುವುದು. ಹನ್ನೆರಡನೆಯ ಶತಮಾನದ ವಚನಕಾರರು ತಮ್ಮ ಆಧ್ಯಾತ್ಮಿಕ ಅನುಭವದ ಅಭಿವ್ಯಕ್ತಿಗೆ ಕನ್ನಡವನ್ನು ಉಪಯೋಗಿಸಿ, ಅದಕ್ಕೊಂದು ಅಪೂರ್ವವಾದ ಶಕ್ತಿಯನ್ನು ತಂದುಕೊಟ್ಟರು. ಸಂಸ್ಕೃತದ ಹಂಗಿಲ್ಲದೆ, ಕನ್ನಡ ಆಧ್ಯಾತ್ಮಿಕ ಅನುಭವವನ್ನು ಅಭಿವ್ಯಕ್ತಿಗೊಳಿಸುವ ಸಾಮರ್ಥ್ಯವನ್ನು ಪಡೆಯಿತು. ಇಂದು ಮತ್ತೆ ಕನ್ನಡಕ್ಕೆ ವಿಷಮ ಕಾಲ. ವಿಜ್ಞಾನ, ಎಂಜಿನಿಯರಿಂಗ್, ಆಧುನಿಕ ತಂತ್ರವಿಜ್ಞಾನ ಇವನ್ನೆಲ್ಲ ಇಂಗ್ಲಿಷ್ ಭಾಷೆಯ ಮೂಲಕ ಕಲಿಯುತ್ತಿದ್ದೇವೆ. ಸಾಹಿತ್ಯ, ಕಲೆ, ತತ್ವಜ್ಞಾನ ರಾಜಕೀಯ ಸಮಾಜಶಾಸ್ತ್ರಗಳಿಗೆ ಇಂಗ್ಲಿಷ್‌ನ ಜೊತೆಗೆ ಕನ್ನಡವನ್ನು ಉಪಯೋಗಿಸಲು ಕಲಿಯುತ್ತಿದ್ದೇವೆ. ಆದರೆ, ಬೇರೆ ಭಾಷೆಯ ಮಾಧ್ಯಮದಿಂದ ಕೇವಲ ತಿಳುವಳಿಕೆಯಷ್ಟೇ ದೊರೆಯುವುದಿಲ್ಲ. ತಿಳುವಳಿಕೆಯ ವಿಧಾನಗಳೂ

ಬಂದುಬಿಡುತ್ತವೆ. ಕನ್ನಡ ತನ್ನ ಶಾಸ್ತ್ರ ವಿಧಾನಗಳನ್ನು ರೂಪಿಸಲು ಕಲಿಯಬೇಕಾಗಿದೆ. ಆಗಲೇ ತಿಳುವಳಿಕೆ ನಮ್ಮದಾಗುವುದು. ಭೌತಶಾಸ್ತ್ರ, ರಸಾಯನದಂಥ ಶುದ್ಧ ಶಾಸ್ತ್ರಗಳಿಗೆ ಪರಂಪರೆ ಪ್ಲೇಟೋ, ಅರಿಸ್ಟಾಟಲರಿಂದ ಬಂದರೆ ಅದು ನಮ್ಮದಾಗುವುದೇ ಇಲ್ಲ. ಅದ್ಭುತ ದೇವಾಲಯಗಳನ್ನು ನಿರ್ಮಿಸಿದ್ದ ನಮ್ಮ ಪೂರ್ವಜರ ತಂತ್ರವಿಜ್ಞಾನ ಯಾವುದಿತ್ತು ಎಂದು ಯೋಚಿಸಲು ಕೂಡ ನಾವು ಪ್ರಯತ್ನ ಮಾಡಿಲ್ಲ. ಸುಯೇಜ್ ಕಾಲುವೆಯ ಮೂಲಕ ಹರಿದು ಬಂದ ತಿಳುವಳಿಕೆಯ ಪ್ರವಾಹದಿಂದ ನಮ್ಮ ಹೊಲಗಳಲ್ಲಿಯ ತಿಳುವಳಿಕೆಯ ಕೃಷಿ ಸಾಗಬೇಕಾಗಿದೆ. ಇದು ನಮ್ಮ ಸಾಂಸ್ಕೃತಿಕ ಹಿತ ದೃಷ್ಟಿಯಿಂದ ನಾವಿಟ್ಟ ತಪ್ಪು ಹೆಜ್ಜೆಯಾಗಿದೆ.

ಮುಖ್ಯವಾಗಿ, ಕನ್ನಡ ತನ್ನ ಪರಂಪರೆಯನ್ನು ಪರೀಕ್ಷಿಸಬೇಕಾಗಿದೆ, ಶೋಧಿಸಬೇಕಾಗಿದೆ. ಕನ್ನಡದಿಂದಲೇ ನಮ್ಮ ಮಕ್ಕಳ ತಿಳುವಳಿಕೆ ಅರಳಬೇಕಾಗಿದೆ. ಅವರು ಕನ್ನಡದಲ್ಲಿಯೇ ಸ್ವತಂತ್ರವಾಗಿ ಆಲೋಚನೆ ಮಾಡುವ, ಅಭಿವ್ಯಕ್ತಿಸುವ ಸಾಮರ್ಥ್ಯ ಪಡೆಯಬೇಕಾಗಿದೆ. ಆದ್ದರಿಂದ ಈ ವಿಶ್ವವಿದ್ಯಾಲಯ ಕನ್ನಡದ ಕೆಲಸ ಮಾಡುವ ಯಾರೊಂದಿಗೂ ಸ್ಪರ್ಧೆಗಿಳಿಯುವುದಿಲ್ಲ. ಕನ್ನಡದ ಎಲ್ಲ ಒಳ ಮತ್ತು ಹೊರಗಿನ ಮನಸ್ಸುಗಳೊಂದಿಗೆ ಸಂಪರ್ಕ ಏರ್ಪಡಿಸಿಕೊಂಡು ಸಹಕರಿಸುತ್ತದೆ ಮತ್ತು ಸಂವಾದ ಮಾಡುತ್ತದೆ. ಉನ್ನತ ಸಂಶೋಧನೆ, ಅಧ್ಯಯನಗಳನ್ನು ನಡೆಸುತ್ತಾ, ಕನ್ನಡದ ಮಾನಸಿಕ, ಸಾಂಸ್ಕೃತಿಕ ಹಾಗೂ ವ್ಯಾವಹಾರಿಕ ಅಗತ್ಯಗಳನ್ನು ಪೂರೈಸುತ್ತಾ ಇರುತ್ತದೆ. ಈ ಧ್ಯೇಯ ಮತ್ತು ಗುರಿಸಾಧನೆಯ ವಿಧಾನಗಳೇ ಈ ವಿಶ್ವವಿದ್ಯಾಲಯುವನ್ನು ಬೇರೆ ವಿಶ್ವವಿದ್ಯಾಲಯಗಳಿಂದ ಭಿನ್ನ ಮತ್ತು ಹೆಚ್ಚು ಅರ್ಥಪೂರ್ಣವಾಗಿ ಮಾಡುತ್ತವೆ ಎಂದು ನಂಬಿದ್ದೇನೆ. ಇಂಥ ಸಾಂಸ್ಕೃತಿಕ ಅಗತ್ಯವನ್ನು ಮನಗಂಡ ಸರ್ಕಾರವನ್ನು ಕನ್ನಡಿಗರೆಲ್ಲ ಹೃತ್ಪೂರ್ವಕವಾಗಿ ಅಭಿನಂದಿಸಬೇಕಾಗಿದೆ.

ಲಭ್ಯವಿರುವ ಸೌಲಭ್ಯಗಳನ್ನು ಗಮನದಲ್ಲಿಟ್ಟುಕೊಂಡು ಈ ವರ್ಷ ಈ ಕೆಳಗಿನ ಯೋಜನೆಗಳನ್ನು ಸುರು ಮಾಡಬಹುದು.

1) ಗ್ರಂಥಾಲಯ
2) ಜಾನಪದ ಮತ್ತು ಭಾಷಾ ಶಾಸ್ತ್ರ
3) ಚೆಲುವ ಕನ್ನಡ ನಾಡು
4) ಶಾಸನ ಹಾಗೂ ಸ್ಮಾರಕಗಳ ಅಧ್ಯಯನ
5) ಸಂಶೋಧನೆಗಳು
6) ಶಿಬಿರಗಳು

7) ಪ್ರಕಟಣೆಗಳು

8) ಅಂತರ ರಾಷ್ಟ್ರೀಯ ಕನ್ನಡ ಸಂಸ್ಥೆ

9) ಲೋಕ ಕರ್ನಾಟಕ

## 1) ಗ್ರಂಥಾಲಯ

ಕನ್ನಡ ವಿಶ್ವವಿದ್ಯಾಲಯ ತುರ್ತಾಗಿ ಪ್ರಾರಂಭಿಸಬೇಕಾದ ಮೊಟ್ಟಮೊದಲನೆಯ ಕೆಲಸ ಕನ್ನಡ ಗ್ರಂಥಾಲಯ; ಇದು ಕಟ್ಟಡಗಳಿಗಿಂತ ಮುಂಚೆಯೇ ಪ್ರಾರಂಭವಾಗಬೇಕು. ನಿಯೋಜಿತ ಗ್ರಂಥಾಲಯದಲ್ಲಿ 5 ವಿಭಾಗಗಳು ಇರುತ್ತವೆ ಎಂದು ಭಾವಿಸಿ, ಅದಕ್ಕೆ ಅನುಗುಣವಾಗಿ ಈಗಲೇ ಗ್ರಂಥ ಸಂಗ್ರಹದ ಕಾರ್ಯ ಶುರುವಾಗಬೇಕು. ಮುಂದೆ ಕನ್ನಡದ ಬಗ್ಗೆ ಸಂಶೋಧನೆ ಕೈಗೊಳ್ಳುವ ವಿಶ್ವದ ಯಾರಿಗೇ ಆಗಲಿ ಈ ಗ್ರಂಥಾಲಯದಲ್ಲಿ ಸಂಪೂರ್ಣ ಮಾಹಿತಿ ಸಿಕ್ಕುವಂತಿರಬೇಕು ಮತ್ತು ಇದು ಆಧುನಿಕವಾದ ಎಲ್ಲಾ ಸೌಲಭ್ಯ ಸಲಕರಣೆಗಳಿಂದ ಕೂಡಿದ್ದಾಗಿರಬೇಕು.

ಇದರಲ್ಲಿ ಮುಖ್ಯವಾಗಿ ಐದು ಭಾಗಗಳು ಇರುತ್ತವೆ:

**ಕನ್ನಡ ಗ್ರಂಥಗಳು :**

(ಅ) ಕನ್ನಡದಲ್ಲಿ ಈವರೆವಿಗೆ ಸುಮಾರು ನಲವತ್ತೈದು ಸಾವಿರ ಪುಸ್ತಕಗಳು ಪ್ರಕಟವಾಗಿದ್ದು ಅವೆಲ್ಲವೂ ಇಲ್ಲಿ ಲಭ್ಯವಾಗಿರಬೇಕು. ಮೂಲ ರೂಪದಲ್ಲಿ ಸಿಕ್ಕದ ಗ್ರಂಥಗಳು ಜೆರಾಕ್ಸ್ ಅಥವಾ ಮೈಕ್ರೋಫಿಲಂ ರೂಪದಲ್ಲಾದರೂ ಇಲ್ಲಿ ಸಿಕ್ಕಬೇಕು.

**ಬೇರೆ ಭಾಷಾ ಕೃತಿಗಳು :**

ಅ) ಕನ್ನಡ ಮತ್ತು ಕರ್ನಾಟಕದ ಬಗ್ಗೆ ಬಂದ ದೇಶೀಯ ಅಥವಾ ವಿದೇಶೀಯ ಭಾಷೆಗಳ ಎಲ್ಲಾ ಗ್ರಂಥಗಳು.

ಇ) ಬೇರೆ ಭಾಷೆಗಳಿಗೆ ಅನುವಾದಗೊಂಡ ಕನ್ನಡದ ಪುಸ್ತಕಗಳು.

**ಹಸ್ತಪ್ರತಿಗಳು :**

ಅ) ಕನ್ನಡ ಲಿಪಿಯಲ್ಲಿರುವ ಹಸ್ತಪ್ರತಿಗಳು.

ಆ) ಬೇರೆ ಲಿಪಿಗಳಲ್ಲಿಯ ಕನ್ನಡದ ಹಸ್ತಪ್ರತಿಗಳು.

ಕರ್ನಾಟಕದಲ್ಲಿ ಲಭ್ಯವಿರುವ ಎಲ್ಲಾ ಹಸ್ತಪ್ರತಿಗಳು ಮಾತ್ರವಲ್ಲದೆ, ಬೇರೆ ಕಡೆಗೆ ಸಿಕ್ಕುವ ಉದಾ: ಕಾಶಿ, ತಂಜಾವೂರ್, ನೇಪಾಳ, ಇತ್ಯಾದಿ ಆದರೆ ಸಂಸ್ಕೃತ ಲಿಪಿಯಲ್ಲಿರುವ ಹಸ್ತಪ್ರತಿಗಳೂ ಈ ವಿಭಾಗದಲ್ಲಿರುತ್ತವೆ.

**ಪತ್ರಿಕೆಗಳು :**

ಉ) ಕನ್ನಡದ ಈ ಹಿಂದಿನ ಪ್ರಸಿದ್ಧ ವಾರ, ಮಾಸ, ದ್ವೈಮಾಸಿಕ, ತ್ರೈಮಾಸಿಕ ಹಾಗೂ ವಾರ್ಷಿಕ ಪತ್ರಿಕೆಗಳು ಅಥವಾ ಅವುಗಳ ಪ್ರತಿಗಳು.

**ಹಸ್ತಾಕ್ಷರಗಳು :**

ಊ) ಲಭ್ಯವಿರುವ ಎಲ್ಲಾ ಕನ್ನಡ ಸಾಹಿತಿಗಳ ಧ್ವನಿ ಮುದ್ರಣ, ಹಸ್ತಾಕ್ಷರ ಸಂಗ್ರಹ, ಅವರ ಕೃತಿಗಳ ಮೂಲ ಹಸ್ತಾಕ್ಷರ, ಕೃತಿಗಳ ಸಂಗ್ರಹ ಮತ್ತು ಅವರ ಬಗೆಗಿನ ಸಾಕ್ಷ್ಯ ಚಿತ್ರಗಳ ಸಂಗ್ರಹ ಇರುತ್ತದೆ.

ಇನ್ನು ಮುಂದೆ ಕನ್ನಡದ ಎಲ್ಲಾ ಪ್ರಕಾಶಕರುಗಳು ನ್ಯಾಷನಲ್ ಲೈಬ್ರರಿಗೆ ಕಳುಹಿಸಿದಂತೆ, ತಮ್ಮ ಎಲ್ಲಾ ಪ್ರಕಾಶನದ ಎರಡು ಪ್ರತಿಗಳನ್ನು ಕಡ್ಡಾಯವಾಗಿ, ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯಕ್ಕೆ ಕೊಡುವಂತೆ ಕಾನೂನು ಮಾಡಲು ಸರ್ಕಾರಕ್ಕೆ ಮನವಿ ಸಲ್ಲಿಸುವುದು.

**2) ಜಾನಪದ ಮತ್ತು ಭಾಷಾಶಾಸ್ತ್ರ :**

ಕರ್ನಾಟಕ ಈವರೆಗೆ ಜಾನಪದದ ಬಗ್ಗೆ ಆಗಿರುವ ಕೆಲಸ ಏನೇನೂ ಸಾಲದು. ವಿದೇಶೀ ಸಂಸ್ಕೃತಿ ಹಾಗೂ ನಾಗರಿಕತೆಯ ಸಂಪರ್ಕದಿಂದ ಜಾನಪದ ರೂಪಗಳು ಭರದಿಂದ ನಶಿಸುತ್ತವೆ. ಅವು ಪೂರ್ತಿ ನಾಶವಾಗುವ ಮೊದಲೇ ದೊಡ್ಡ ಪ್ರಮಾಣದಲ್ಲಿ ಮತ್ತು ಸಾಧ್ಯವಾದಷ್ಟು ಬೇಗನೆ ಅವನ್ನು ಸಂಗ್ರಹಿಸುವ, ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಕೆಲಸ ಸಾಗಬೇಕಾಗಿದೆ. ಇದಕ್ಕಾಗಿ "ಕರ್ನಾಟಕದ ಜಾನಪದ ಸರ್ವೆ"ಯಂಥ ದೊಡ್ಡ ಯೋಜನೆ ಹಾಕಿಕೊಂಡು ಮುಂದುವರಿಯಬೇಕು. ಇಂಥ ಸರ್ವೆಯನ್ನು ಜಿಲ್ಲಾವಾರು ಮಾಡುವುದು ಸೂಕ್ತ ಮತ್ತು ಬಳ್ಳಾರಿ ಜಿಲ್ಲೆಯ ಸರ್ವೆಯಿಂದಲೇ ಈ ಕೆಲಸ ಸುರು ಮಾಡಬಹುದು.

ಇದರಿಂದ ಸಾಂಸ್ಕೃತಿಕವಾಗಿ ಮಹತ್ವದ ನಾಲ್ಕು ಕೆಲಸಗಳನ್ನು ಏಕ ಕಾಲಕ್ಕೆ ಮಾಡಿದಂತಾಗುತ್ತದೆ.

ಅ) ಸಿಕ್ಕುವ ಎಲ್ಲ ಮಾಹಿತಿಯನ್ನು ಶಾಸ್ತ್ರೀಯವಾಗಿ ವಿಂಗಡಿಸಿ, ಅಧ್ಯಯನ ಮಾಡಿ, ಜಿಲ್ಲಾವಾರು ಪ್ರಕಟಿಸಬಹುದು.

ಆ) ಜಿಲ್ಲೆಯ ಸ್ಥಳನಾಮ ಕೋಶವನ್ನು ಸಿದ್ಧಪಡಿಸಬಹುದು.

ಇ) ಹಳ್ಳಿ ಹಳ್ಳಿಯ ಜನಪದ ಪುರಾಣ ಸಂಗ್ರಹಿಸಿ ಪ್ರಕಟಿಸಬಹುದು.

ಈ ಯೋಜನೆಯ ಜೊತೆಗೇ ಕನ್ನಡ ಉಪ ಭಾಷೆಗಳ ಸರ್ವೆ ಕಾರ್ಯವನ್ನು ಮಾಡಬಹುದು. ಅದನ್ನೂ ಬಳ್ಳಾರಿಜಿಲ್ಲೆಯ ಉಪ ಭಾಷೆಗಳ ಅಧ್ಯಯನದಿಂದಲೇ ಸುರು ಮಾಡಬಹುದು. ಕನ್ನಡವನ್ನು ಆಧುನಿಕಗೊಳಿಸುವ ಪ್ರಕ್ರಿಯೆಗೆ ಇದು ಅಗತ್ಯವಾಗಿ ಆಗಲೇಬೇಕಾದ ಕೆಲಸ.

## 3) ಚೆಲುವ ಕನ್ನಡ ನಾಡು :

ಹೀಗೇ ಮೇಲಿನ ಕಾರ್ಯವನ್ನು ಮಾಡುತ್ತಲೇ ಹಳ್ಳಿಗಳಲ್ಲಿ ಸಿಕ್ಕುವ ಜಾನಪದ ಮತ್ತು ಕನ್ನಡ ಸಂಸ್ಕೃತಿಗೆ ಸಂಬಂಧಪಟ್ಟ ವಸ್ತುಗಳನ್ನು ಸಂಗ್ರಹಿಸಿ "ಚೆಲುವ ಕನ್ನಡ ನಾಡು" ಎಂಬ ವಸ್ತು ಸಂಗ್ರಹಾಲಯವೊಂದನ್ನು ಮಾಡಬಹುದು.

ಕನ್ನಡ ಸಂಸ್ಕೃತಿಯನ್ನು ಆದರ ಸಮಗ್ರತೆಯಲ್ಲಿ ಅಭಿವ್ಯಕ್ತಿಸುವ ಸಾವಿರಾರು ವಸ್ತುಗಳು ನಮ್ಮ ನಾಡಿನಲ್ಲಿವೆ. ಸಾಮಾನ್ಯ ಉಪಯೋಗದ ವೀಳ್ಯದೆಲೆ ಚೀಲದಿಂದ ಹಿಡಿದು ಶಿಲ್ಪ, ವಿಜ್ಞಾನದವರೆಗೆ ಇವುಗಳ ವ್ಯಾಪ್ತಿಯಾಗಿದೆ. ಇಂಥ ವಸ್ತು ಸಂಗ್ರಹಾಲಯಗಳು ನಾಡಿನಲ್ಲಿ ಕೆಲವು ಕಡೆಗಿವೆ. ಆದರೆ ಹಂಪಿಯ ಸಂಗ್ರಹಾಲಯದ ವೈಶಿಷ್ಟ್ಯವೆಂದರೆ, ಇದು ಕನ್ನಡ ನಾಡು, ನುಡಿ, ಸಂಸ್ಕೃತಿ, ಇತಿಹಾಸ, ಜಾನಪದ, ವಿಜ್ಞಾನ ಬುಡಕಟ್ಟು ಜನಾಂಗಗಳು—ಹೀಗೆ ಸಮಗ್ರ ಕನ್ನಡ ಜೀವನ ಇತಿಹಾಸದ ಆರಂಭದಿಂದ ಇಲ್ಲಿಯ ತನಕ ವಿಕಾಸವಾದ ವಿಧಾನವನ್ನು ತೋರಿಸುವಂತಾಗಬೇಕು.

## 4) ಶಾಸನ ಹಾಗೂ ಸ್ಮಾರಕಗಳ ಅಧ್ಯಯನ :

ಹಿಂದೆ ಲುಯಿಸ್ ರೈಸ್ ಅವರು ದಕ್ಷಿಣ ಕರ್ನಾಟಕದ ಶಾಸನಗಳನ್ನು ಹಾಗೂ ಶ್ರೀ ಎಂ.ಎಚ್. ಕೃಷ್ಣರವರು ಸ್ಮಾರಕಗಳನ್ನು ಸಂಗ್ರಹಿಸಿ, ಪ್ರಕಟಿಸಿ, ಕನ್ನಡಕ್ಕೆ ಉಪಕಾರ ಮಾಡಿದ್ದಾರೆ. ಆದರೆ, ಈ ಕೆಲಸವನ್ನು ಅವರು ಉತ್ತರ ಕರ್ನಾಟಕಕ್ಕೆ ವಿಸ್ತರಿಸಲೇ ಇಲ್ಲ. ಹೀಗಾಗಿ ನಮ್ಮ ಚರಿತ್ರೆಯ ಅರ್ಧಭಾಗ ಇನ್ನೂ ಕತ್ತಲಲ್ಲೇ ಇದೆ. ಇತಿಹಾಸದ ಗುಟ್ಟುಗಳನ್ನು ಒಡಲಲ್ಲಿ ಅಡಗಿಸಿಕೊಂಡಿರುವ ಈ ಎಲ್ಲಾ ಶಾಸನಗಳ ಹಾಗು ಸ್ಮಾರಕಗಳ ಅಧ್ಯಯನದ ಅಗತ್ಯ ಈಗ ಹಿಂದೆಂದಿಗಿಂತ ಹೆಚ್ಚಾಗಿದೆ. ಈ ಕೆಲಸ ಕೇವಲ ಸಂಗ್ರಹಕ್ಕೆ ಸೀಮಿತವಾಗಿರಬಾರದು. ಜಿಲ್ಲಾವಾರು ವಿಂಗಡಿಸಿ ಪ್ರಕಟಿಸಲೂಬೇಕು. ಬೇಕಾದರೆ ಈ ವರ್ಷ ಬಳ್ಳಾರಿ ಜಿಲ್ಲೆಯ ಶಾಸನ ಹಾಗೂ ಸ್ಮಾರಕಗಳ ಸಂಗ್ರಹ

ಮಾಡಬಹುದು. ಹೊಸಗನ್ನಡ ಅನುವಾದದೊಂದಿಗೆ ಪ್ರಕಟಿಸುವ ಕಾರ್ಯವನ್ನು ಆಮೇಲೆ ಕೈಗೆತ್ತಿಕೊಳ್ಳಬಹುದು.

## 5) ಸಂಶೋಧನೆಗಳು :

ಸಂಶೋಧನೆ ಮೇಲೆ ಹೇಳಿದ ಜಾನಪದ ಮತ್ತು ಭಾಷಾಶಾಸ್ತ್ರಗಳಲ್ಲಿಯಂತೆ ಗುಂಪುಗಳಲ್ಲಿ ನಡೆಯಬಹುದು ಅಥವಾ ವೈಯಕ್ತಿಕವಾಗಿಯೂ ನಡೆಯಬಹುದು. ಪಿಎಚ್‌ಡಿ ಪದವಿಗಾಗಿ ಸಂಶೋಧನೆ ಕೈಗೊಳ್ಳುವ ವಿದ್ವಾಂಸರಿಗೆ ಯಾವುದೇ ವಿದ್ವತ್ ಸಂಸ್ಥೆಯಲ್ಲಿರುವ ಪಂಡಿತರು ಗೈಡ್‌ಗಳಾಗಿ ಕೆಲಸ ಮಾಡಬಹುದು. ವಿದ್ವಾಂಸರು ತಮ್ಮ ವೈಯಕ್ತಿಕ ಸಂಶೋಧನೆಯ ಯೋಜನೆಯನ್ನು ಕೊಟ್ಟರೆ ಅದನ್ನು ಪರಿಶೀಲನೆಗೆ ಒಳಪಡಿಸಿ, ಒಪ್ಪಿಗೆಯಾದರೆ ಪ್ರಾರಂಭಿಸಬಹುದು. ವಿದ್ವಾಂಸರಿಗೆ ಅಗತ್ಯವಾದರೆ ಧನಸಹಾಯವನ್ನು ಮಾಡಬಹುದು. ನಾಡಿನ ಅನೇಕ ಮಹಾನ್ ವಿದ್ವಾಂಸರನ್ನು ಭೇಟಿಯಾದಾಗ ಇದರ ಅಗತ್ಯವನ್ನು ಒತ್ತಿ ಹೇಳಿದರು ಮತ್ತು ಹಾಗೇ ಅಗತ್ಯವಾಗಿ, ಕೂಡಲೇ ಕೈಗೊಳ್ಳಬಹುದಾದ ಸಂಶೋಧನೆಯ ಕೆಲವು ವಿಷಯಗಳನ್ನು ಕೊಟ್ಟರು.

## 6) ಅಲ್ಪಾವಧಿಯ ಶಿಬಿರಗಳು :

ಅ) ವಿಜ್ಞಾನ ವಿಷಯವನ್ನು ಕನ್ನಡದಲ್ಲಿ ಬೋಧಿಸುವ ಬಗ್ಗೆ ಅಧ್ಯಾಪಕರಿಗೆ ಶಿಬಿರಗಳು.

ಆ) ವಿಜ್ಞಾನ ವಿಷಯಗಳ ಬಗ್ಗೆ ಪಠ್ಯ ರಚನೆಯ ಶಿಬಿರಗಳು.

ಇ) ಕನ್ನಡ ಬಾರದವರಿಗೆ ಕನ್ನಡ ಕಲಿಸುವ ಶಿಬಿರಗಳು.

ಈ) ಕರ್ನಾಟಕ ಶಿಲ್ಪ, ಚಿತ್ರ, ನಾಟಕ, ಕರಕುಶಲ ಕಲೆ, ಸಂಗೀತ, ಯಕ್ಷಗಾನ ಮುಂತಾದವುಗಳ ಬಗ್ಗೆ ಶಿಬಿರಗಳು.

## 7) ಪ್ರಕಟಣೆಗಳು

"ಕನ್ನಡ ವಾರ್ಷಿಕ" ಇದನ್ನು ಪ್ರತಿ ವರ್ಷ ಪ್ರಕಟಿಸಬೇಕು. ಆಯಾ ವರ್ಷ ಪ್ರಕಟವಾದ ಸಾಹಿತ್ಯ ಕೃತಿಗಳ ಬಗ್ಗೆ ಪರಿಚಯಾತ್ಮಕ ಮಾಹಿತಿ, ಆಯಾ ವರ್ಷ ರಾಜ್ಯದ ಒಳ ಮತ್ತು ಹೊರಗಿನ ಕನ್ನಡಿಗರ ಸಾಧನೆಗಳು, ಅವರಿಗೆ ಸಿಕ್ಕ ರಾಷ್ಟ್ರೀಯ ಹಾಗೂ ರಾಜ್ಯ ಪ್ರಶಸ್ತಿಗಳು, ಆಯಾ ವರ್ಷದಲ್ಲಿ ರಾಜ್ಯದಲ್ಲಿ ನಡೆದ ಮಹತ್ವದ ಘಟನೆಗಳು ಕಾಯ್ದೆ ಕಾನೂನುಗಳು, ಮಹತ್ವದ ವಿವಾದಗಳು (ಉದಾ: ಕಾವೇರಿ) –ಇವೆಲ್ಲವುಗಳ ದಾಖಲೆ.

ವಿಜ್ಞಾನದ ಪಠ್ಯಗಳು, ಸ್ಥಳನಾಮ ಕೋಶ, ವೃತ್ತಿ ಪದಕೋಶ, ಕೊಡಗು ಕೋಶ ಇತ್ಯಾದಿ.

## 8) ಅಂತರ ರಾಷ್ಟ್ರೀಯ ಕನ್ನಡ ಸಂಸ್ಥೆ :

ನಾಡಿನ ಹೊರಗಿನ ಎಲ್ಲ ರಾಷ್ಟ್ರೀಯ ಹಾಗೂ ರಾಷ್ಟ್ರ ಹೊರಗಿನ ಕನ್ನಡ ಸಂಘ ಸಂಸ್ಥೆಗಳ ಜೊತೆಗೆ ಹಾಗೂ ಕನ್ನಡ ಮತ್ತು ಕನ್ನಡ ಸಂಸ್ಕೃತಿಯನ್ನು ಅಧ್ಯಯನ ಮಾಡುವ ಎಲ್ಲಾ ವಿದ್ಯಾಸಂಸ್ಥೆಗಳ ಜೊತೆಗೆ ನಿರಂತರ ಸಂಪರ್ಕ ವಿಟ್ಟುಕೊಳ್ಳುವ ಸಂಸ್ಥೆಯಿದು. ಮತ್ತು ಆ ಎಲ್ಲ ಸಂಸ್ಥೆಗಳೂ ಕನ್ನಡದ ಸಾಂಸ್ಕೃತಿಕ ರಾಯಭಾರಿಗಳಾಗುವ ಹಾಗೆ ಮಾಡುವುದು. ಸದ್ಯಕ್ಕೆ ಪತ್ರ ವ್ಯವಹಾರವನ್ನೇ ಮುಖ್ಯವಾಗಿ ಅವಲಂಬಿಸುವ ಈ ಕಾರ್ಯವನ್ನೂ ಕೂಡಲೇ ಕೈಗೆತ್ತಿಕೊಳ್ಳಬಹುದು. ಇದರ ಭಾಗವಾಗಿ "ಲೋಕ ಕರ್ನಾಟಕ" ಎಂಬ ಹೆಸರಿನಲ್ಲಿ ಜಗತ್ತಿನ ಎಲ್ಲ ಕರ್ನಾಟಕ ತಜ್ಞರ ಜಾಗತಿಕ ಸಮಾವೇಶವನ್ನು ಕರೆಯಬಹುದು.

## 9) ಲೋಕ ಕರ್ನಾಟಕ

ಕರ್ನಾಟಕದಿಂದ ಹೊರಗೆ ಕನ್ನಡ ಭಾಷೆ, ಸಂಸ್ಕೃತಿ, ನೆಲ, ಜಲ, ಸಂಪನ್ಮೂಲಗಳ ಬಗ್ಗೆ ಆಳವಾದ ಅಧ್ಯಯನ ಮಾಡಿ, ವಿದ್ವತ್ಪೂರ್ಣವಾದ ಗ್ರಂಥಗಳನ್ನು ಬರೆದು ಖ್ಯಾತರಾದ ತಜ್ಞರನ್ನು ಹಂಪಿಯಲ್ಲಿ ಒಂದು ವಾರ ಸೇರಿಸುವುದು. ಅವರೊಂದಿಗೆ ಸ್ಥಳೀಯ ತಜ್ಞರನ್ನು ಸೇರಿಸಿ ಕನ್ನಡ ಭಾಷೆ ಸಂಸ್ಕೃತಿಗಳ ಬಗ್ಗೆ ಇನ್ನೂ ಆಗಬೇಕಾದ ಕಾರ್ಯದ ಬಗ್ಗೆ ವಿಚಾರ ಸಂಕಿರಣ ಏರ್ಪಡಿಸುವುದು. ಇದು ಕನ್ನಡ ವಿಶ್ವವಿದ್ಯಾಲಯವು ವರ್ಷಂಪ್ರತಿ ನಡೆಸಬೇಕಾದ ಜಾಗತಿಕ ಸಮಾವೇಶ.



ವಿಶೇಷ ಆಡಳಿತ ಅಧಿಕಾರಿಯವರ ಕಛೇರಿಯ ಉದ್ಘಾಟನೆ

# ಕನ್ನಡ ವಿಶ್ವವಿದ್ಯಾಲಯದ ಉದ್ದೇಶಗಳು

* ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಿ ಉನ್ನತ ಮಟ್ಟದ ಸಂಶೋಧನಾ ಕೇಂದ್ರವಾಗಿ ಪ್ರಕಾರ್ಯ ನಡೆಸುವುದು.
* ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ಅಧ್ಯಯನ ಮಾಡಲು ಅಪೇಕ್ಷಿಸುವ ಭಾರತದೊಳಗೆ ಅಥವಾ ಹೊರಗೆ ವಾಸಿಸುತ್ತಿರುವವರಿಗೆ ತರಬೇತಿ ನೀಡುವುದು.
* ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ಆಧರಿಸಿ ಬೆಳೆದ ಕಲೆ, ಸಂಸ್ಕೃತಿ, ಸಂಗೀತ, ರಂಗನಾಟಕಗಳು, ಜಾನಪದ ಕಲೆ, ವರ್ಣಚಿತ್ರ, ಶಿಲ್ಪಶಾಸ್ತ್ರ, ವಾಸ್ತುಶಿಲ್ಪ, ಸಾಹಿತ್ಯ, ವ್ಯಾಕರಣಶಾಸ್ತ್ರ, ಭಾಷಾಶಾಸ್ತ್ರ, ಇತಿಹಾಸ, ಧರ್ಮ, ತತ್ವಶಾಸ್ತ್ರ, ಭೂಗೋಳಶಾಸ್ತ್ರ, ಮಣ್ಣಿನ ವಿಜ್ಞಾನ, ಖಗೋಳಶಾಸ್ತ್ರ, ನೌಕಾಗತಿ ಮತ್ತು ನೌಕಾಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ಸಿದ್ಧವೈದ್ಯ, ಇಂಜಿನಿಯರಿಂಗ್ ವಿಜ್ಞಾನ ಮತ್ತು ಕರಕುಶಲತೆಯಂಥ ಕ್ಷೇತ್ರಗಳಲ್ಲಿ ಉಚ್ಚ ಶಿಕ್ಷಣ ಮತ್ತು ಸಂಶೋಧನೆಗೆ ಅನುಕೂಲ ಕಲ್ಪಿಸುವುದು ಮತ್ತು ಕ್ರಮಬದ್ಧಗೊಳಿಸುವುದು.
* ವಿಶ್ವವಿದ್ಯಾಲಯದ ಉದ್ದೇಶಗಳಿಗೆ ಹೊಂದಿಕೊಳ್ಳುವಂತೆ, ಅಗತ್ಯಕ್ಕನುಗುಣವಾಗಿ ಇತರ ಭಾಷೆಗಳಲ್ಲಿರುವ ಪುಸ್ತಕಗಳನ್ನು ಕನ್ನಡಕ್ಕೆ ಭಾಷಾಂತರಿಸುವುದು ಮತ್ತು ಕನ್ನಡದಲ್ಲಿರುವ ಪುಸ್ತಕಗಳನ್ನು ಇತರ ಭಾಷೆಗಳಿಗೆ ಸಹ ಭಾಷಾಂತರಿಸುವುದು.
* ತಾಳೆಗರಿಯಲ್ಲಿರುವ ಹಸ್ತಪ್ರತಿಗಳು ಮತ್ತು ಪ್ರಾಚೀನವಾದ ಅಪೂರ್ವ ಪುಸ್ತಕಗಳನ್ನು ಸಂರಕ್ಷಿಸಿಡುವುದು ಮತ್ತು ಪ್ರಕಟಿಸುವುದು.
* ಕನ್ನಡ ಭಾಷೆ ಮತ್ತು ಸಾಹಿತ್ಯ, ಕನ್ನಡ ಸಂಸ್ಕೃತಿ ಮತ್ತು ಕನ್ನಡಿಗರ ಇತಿಹಾಸಕ್ಕೆ ಸಂಬಂಧಿಸಿದ ಶಾಸನಗಳಿಗಾಗಿ ಶೋಧನೆ ನಡೆಸುವುದು ಮತ್ತು ಅವುಗಳನ್ನು ಸಂಗ್ರಹಿಸುವುದು ಮತ್ತು ಅದರ ಸಂಶೋಧನೆಯ ಆಧಾರದ ಮೇಲಣ ನಿರ್ಣಯಗಳೊಂದಿಗೆ ಅವುಗಳನ್ನು ಪ್ರಕಟಿಸುವುದು.
* ಕರ್ನಾಟಕದಲ್ಲಿರುವ ಕನ್ನಡಿಗರಿಂದ ಮತ್ತು ಭಾರತದ ಇತರ ಭಾಗಗಳಲ್ಲಿರುವ ಮತ್ತು ಇತರ ದೇಶಗಳಲ್ಲಿ ವಾಸಿಸುವ ಕನ್ನಡಿಗರಿಂದ ಬಳಸಲಾದ ಕನ್ನಡ ಪದಗಳು, ಅಭಿವ್ಯಕ್ತಿಗಳು, ಆಡು ನುಡಿಗಳು, ಕೈಗಾರಿಕೆಗಳು ಮತ್ತು ಕೃಷಿಗೆ ಸಂಬಂಧಪಟ್ಟ ವಿಶಿಷ್ಟ ಪದಗಳನ್ನು ಸಂಗ್ರಹಿಸುವುದು ಮತ್ತು ಪ್ರಕಟಿಸುವುದು.

* ಮುಂದಿನ ವೈಜ್ಞಾನಿಕ ಬೆಳವಣಿಗೆಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಪ್ರಾಚೀನ ಕಾಲದಲ್ಲಿನ ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಿ ಸಂಶೋಧನೆಗಾಗಿ ಏರ್ಪಾಟು ಮಾಡುವುದು.

* ಅಭಿವೃದ್ಧಿಶೀಲ ವಿಶ್ವದಲ್ಲಿರುವ ಎಲ್ಲ ಶೈಕ್ಷಣಿಕ ಕ್ಷೇತ್ರಗಳನ್ನು ತನ್ನಲ್ಲಿ ಅಡಕ ಮಾಡಿಕೊಂಡಿರುವ ಕನ್ನಡ ಭಾಷೆ ಮತ್ತು ಸಾಹಿತ್ಯದ ಬೆಳವಣಿಗೆಗೆ ಸಂಬಂಧಪಟ್ಟಂತೆ ಸಂಶೋಧನೆಗೆ ಏರ್ಪಾಟು ಮಾಡುವುದು ಮತ್ತು ಆ ಬಗ್ಗೆ ಕಾರ್ಯ ವಿಧಾನವನ್ನು ನಿರ್ಧರಿಸುವುದು ಮತ್ತು ಅದಕ್ಕಾಗಿ ಸೂಕ್ತ ಮಾರ್ಗವನ್ನು ಕಂಡುಕೊಳ್ಳುವುದು.

* ಇತರ ಭಾರತೀಯ ಸಂಸ್ಕೃತಿಗೆ ಸಂಬಂಧಪಟ್ಟಂತೆ, ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಿ ಅಧ್ಯಯನವನ್ನು ಪ್ರಾರಂಭಿಸುವುದು.

* ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಿ ಪ್ರವೃತ್ತಿಗಳ ಆಳವಾದ ತಿಳಿವಳಿಕೆಯ ಆಧಾರದ ಮೇಲೆ ಉಚ್ಚ ಶಿಕ್ಷಣ ಮತ್ತು ಸಂಶೋಧನಾ ಕಾರ್ಯಕ್ರಮಗಳನ್ನು ಸಂಘಟಿಸುವುದು.

* ಪ್ರಾಚೀನ ಕನ್ನಡ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸುವ ಮತ್ತು ಪುನರ್ ಶೋಧನೆ ಮಾಡುವ ದೃಷ್ಟಿಯಿಂದ ಪುರಾತತ್ವಶಾಸ್ತ್ರವನ್ನು ಅದರ ಎಲ್ಲ ವಿವಿಧ ಅಂಶಗಳ ಬಗ್ಗೆ ಉತ್ತೇಜನ ನೀಡುವುದು.

* ಮುಂದಿನ ಸಂಶೋಧನೆಗೆ ಅನುಕೂಲ ಮಾಡಿಕೊಡುವುದಕ್ಕಾಗಿ ರಾಜ್ಯದಲ್ಲಿಯ ಸ್ಮಾರಕಗಳನ್ನು ಕಾಪಾಡುವುದು.

* ಕಲೆ, ವಾಸ್ತುಶಿಲ್ಪ, ಶಿಲ್ಪಕಲೆ, ವರ್ಣಚಿತ್ರ, ಪ್ರತಿಮಾಶಾಸ್ತ್ರ, ಶಾಸನಶಾಸ್ತ್ರ, ರಂಗಭೂಮಿ, ನೃತ್ಯ, ಸಂಗೀತ, ಗುಡ್ಡಗಾಡಿನವರ ಕಲೆ, ಧರ್ಮ, ಜೀವನ ತತ್ವಜ್ಞಾನ, ಸಾಮಾಜಿಕ ಆಂದೋಲನ ಮುಂತಾದವುಗಳ ಮೂಲಕ ವ್ಯಕ್ತವಾಗಿರುವ ಕನ್ನಡ ಸಂಸ್ಕೃತಿಯನ್ನು ಸಂಯೋಜಿಸುವುದು.

* ಸಾಂಪ್ರದಾಯಿಕ, ಗುಡ್ಡಗಾಡು ಜನಪದ ಕಲೆ ಮತ್ತು ಪ್ರಸಕ್ತ ಕಲೆಗಳನ್ನು ದಾಖಲಿಡುವುದು, ವಿಶ್ಲೇಷಿಸುವುದು ಮತ್ತು ಸಂರಕ್ಷಿಸುವುದು.

* ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿನ ಆಧುನಿಕ ಮುನ್ನಡೆಗಳಿಗೆ ಸಂಬಂಧಪಟ್ಟಂತೆ ಕನ್ನಡವನ್ನು ಶಿಕ್ಷಣ ಮಾಧ್ಯಮವನ್ನಾಗಿ ಅಭಿವೃದ್ಧಿಗೊಳಿಸುವುದು.

* ಇತರ ದ್ರಾವಿಡ ಮತ್ತು ಆರ್ಯ ಭಾಷೆಗಳೊಂದಿಗೆ ಕನ್ನಡ ತೌಲನಿಕ ಅಧ್ಯಯನವನ್ನು ಬೆಳೆಸುವುದು.
* ಉತ್ಕೃಷ್ಟ ಮಾದರಿಯ ವಸ್ತುಗಳು ಮತ್ತು ಕರ್ನಾಟಕದ ಕಲಾಕೃತಿಗಳನ್ನು ಸಂಗ್ರಹಿಸಿಡಲು ಒಂದು ಸಂಗ್ರಹಾಲಯವನ್ನು ನಿರ್ಮಿಸುವುದು.

* * *



ಹಂಪಿ ಕನ್ನಡ ವಿಶ್ವವಿದ್ಯಾಲಯದ
ಕುಲಾಧಿಪತಿಗಳಾದ
ಮಾನ್ಯ ಶ್ರೀ ಬಂಗಾರಪ್ಪನವರು



ವಿದ್ಯಾಮಂತ್ರಿಗಳಾದ
ಮಾನ್ಯ ಶ್ರೀ ವೀರಪ್ಪಮೊಯಿಲಿ



ಹಂಪಿ ಕನ್ನಡ ವಿಶ್ವವಿದ್ಯಾಲಯದ
ವಿಶೇಷ ಆಡಳಿತ ಅಧಿಕಾರಿ
ಡಾ. ಚಂದ್ರಶೇಖರ ಕಂಬಾರ

# ಕರ್ನಾಟಕ ಅಕಾಡೆಮಿ ಅಧ್ಯಕ್ಷರುಗಳ ನೇಮಕ

ಕರ್ನಾಟಕ ಸರ್ಕಾರ ಅಕ್ಟೋಬರ್ 29, 1991 ರಂದು ಅಕಾಡೆಮಿ ಅಧ್ಯಕ್ಷರ ನೇಮಕ ಮಾಡಿತು. ಬಹಳ ದಿನಗಳಿಂದ ನೆನೆಗುದಿಗೆ ಬಿದ್ದಿದ್ದ ಈ ನೇಮಕಾತಿ ಕೊನೆಗೂ ಅಕ್ಟೋಬರ್ ತಿಂಗಳು ನಡೆಯಿತು. ಅಕಾಡೆಮಿಗಳ ಚಟುವಟಿಕೆಗಳಿಗೆ ಒಂದು ಚಾಲನೆ ಈ ನೇಮಕಾತಿಯಿಂದ ದೊರೆತಂತಾಯ್ತು.

**ಕರ್ನಾಟಕ ಸಾಹಿತ್ಯ ಅಕಾಡೆಮಿ**ಗೆ ಬರಗೂರು ರಾಮಚಂದ್ರಪ್ಪನವರು ಅಧ್ಯಕ್ಷರಾಗಿ ನೇಮಕಗೊಂಡರು. 'ಬರಗೂರರು' ಎಂದೇ ಖ್ಯಾತಿಯಾಗಿರುವ ಇವರು ಕರ್ನಾಟಕದಲ್ಲಿ ಬಂಡಾಯ ಸಾಹಿತ್ಯ ಚಳುವಳಿಯನ್ನು ನಡೆಸಿದವರಲ್ಲಿ ಮುಖ್ಯರಾಗಿದ್ದಾರೆ. ಕಥೆ, ಕಾವ್ಯ, ಕಾದಂಬರಿ ವಿಚಾರ, ವಿಮರ್ಶೆ – ಈ ಪ್ರಕಾರಗಳಲ್ಲೆಲ್ಲ ಅನೇಕ ಕೃತಿಗಳನ್ನು ಬರಗೂರರು ಹೊರತಂದಿದ್ದಾರೆ. ಇವರ ಸಾಹಿತ್ಯದಲ್ಲಿ ಸಾಮಾಜಿಕ ಬದಲಾವಣೆಯ ಆಶಯ, ಶೋಷಿತ, ದುರ್ಬಲ ವರ್ಗಗಳ ನೋವು, ಪ್ರಧಾನ ಆಶಯಗಳಾಗಿವೆ. ಈ ತಾತ್ವಿಕತೆಯ ಹಿನ್ನೆಲೆಯಲ್ಲಿಯೇ ಇವರು ಪ್ರಾಚೀನ ಸಾಹಿತ್ಯವನ್ನು ವಿವರಿಸುವ ಒಳನೋಟಗಳು ಗಮನಾರ್ಹವಾಗಿವೆ. ಸಾಹಿತ್ಯವಲ್ಲದೆ ಚಲನಚಿತ್ರ ನಿರ್ದೇಶನವನ್ನು ಮಾಡಿದ ಬರಗೂರರು ನಾಲ್ಕು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. 1975 ರಲ್ಲಿ 'ಸುಂಟರಗಾಳಿ' ಕಥಾಸಂಕಲನಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಬರಗೂರರು, ಚಲನಚಿತ್ರ ರಂಗದಲ್ಲಿ ನಿರ್ದೇಶನ, ಕಥಾರಚನೆ, ಸಂಭಾಷಣೆ, ಗೀತರಚನೆ ಈ ಎಲ್ಲ ವಿಭಾಗಗಳಲ್ಲೂ ಪ್ರಶಸ್ತಿಯನ್ನು ಗಳಿಸಿದ್ದಾರೆ. ಅಕಾಡೆಮಿಗೆ ಅಧ್ಯಕ್ಷರಾದ ಕೂಡಲೇ ಅನೇಕ ಶ್ರೇಷ್ಠ ಸಾಹಿತಿಗಳನ್ನು ಕುರಿತಂತೆ ವಿಚಾರ ಸಂಕಿರಣಗಳನ್ನು ಮಾಡಬೇಕೆನ್ನುವ ಯೋಜನೆಯನ್ನು ಹಾಕಿಕೊಂಡಿದ್ದಾರೆ. ಸಾಮಾಜಿಕ ಕಳಕಳಿ, ಶೋಷಿತ ವರ್ಗಗಳ ಪರವಾದ ಸಹಾನುಭೂತಿ ಇವುಗಳೆಲ್ಲ ಕಾರಣವಾಗಿ ಅಕಾಡೆಮಿಯಲ್ಲಿ ಕನ್ನಡ ಸಾಹಿತ್ಯವನ್ನು ಗ್ರಹಿಸುವ ಹೊಸ ನೋಟಗಳು– ತೀವ್ರವಾಗಿ ನಡೆಯುವವು ಎನ್ನುವುದರಲ್ಲಿ ಸಂದೇಹವಿಲ್ಲ.

**ಕರ್ನಾಟಕ ಲಲಿತ ಕಲಾ ಅಕಾಡೆಮಿ**ಗೆ ಶ್ರೀ ಹಿ. ಆರ್. ತಿಪ್ಪೇಸ್ವಾಮಿಯವರು ಅಧ್ಯಕ್ಷರಾಗಿದ್ದಾರೆ. ಚಿತ್ರದುರ್ಗದ ಹರ್ತಿಕೋಟೆಯ ತಿಪ್ಪೇಸ್ವಾಮಿಯವರು,

ಹುಟ್ಟು ಕಲಾವಿದರು – ಚಿತ್ರದುರ್ಗದ ಕೋಟೆ ಕೊತ್ತಲಗಳು, ಕಲ್ಲು ಕೊರಡುಗಳು ಅವರಿಗೆ ಚಿಕ್ಕಂದಿನಿಂದಲೇ ಸ್ಫೂರ್ತಿ ನೀಡಿವೆ. ಮೈಸೂರಿನ ಚಾಮರಾಜ ಕಲಾಶಾಲೆಯಲ್ಲಿ ತೈಲವರ್ಣ, ಜಲವರ್ಣ, ಚಿತ್ರರಚನೆಯನ್ನು ತಿಪ್ಪೇಸ್ವಾಮಿ ಸಿದ್ಧಗೊಳಿಸಿದ್ದಾರೆ. ಜನಪದ ಗೀತೆಗಳ ಬಗೆಯೂ ಅಪಾರ ಆಸಕ್ತಿ ಇರುವ ತಿಪ್ಪೇಸ್ವಾಮಿ – ಮೈಸೂರು ವಿಶ್ವವಿದ್ಯಾಲಯದ ಜಾನಪದ ವಸ್ತು ಸಂಗ್ರಹಾಲಯವನ್ನು ಕಟ್ಟುವುದಕ್ಕೆ ಊರೂರು ಅಲೆದಿದ್ದಾರೆ. ರಾಜ್ಯಪ್ರಶಸ್ತಿ ಅಕಾಡೆಮಿ ಪ್ರಶಸ್ತಿ ಪಡೆದ ತಿಪ್ಪೇಸ್ವಾಮಿಯವರು ಅನೇಕ ಸಂಘ ಸಂಸ್ಥೆಯನ್ನು ಕಟ್ಟಿದ್ದಾರೆ. ಅಧ್ಯಕ್ಷರಾಗಿ ಅನೇಕ ಯೋಜನೆಗಳನ್ನು ಮಾಡುವ ಉದ್ದೇಶವನ್ನು ಇವರು ಹೊಂದಿದ್ದಾರೆ. ಭಿತ್ತಿಚಿತ್ರಗಳ ನಕಲು, ಚಿತ್ರ, ಶಿಲ್ಪಕಲೆಯ ಪುಸ್ತಕಗಳಿಗೆ ಬಹುಮಾನ, ಹೊರಗೆ ಖಾಸಗಿ ಕಲಾಶಾಲೆಗಳಲ್ಲಿ ಕಲಿಯುವವರಿಗೆ ವಿದ್ಯಾರ್ಥಿವೇತನ, ಬೇರೆ ಬೇರೆ ಕಲಾಶೈಲಿಯನ್ನು ಕುರಿತಂತೆ ಕಮ್ಮಟಗಳು – ಇವೆಲ್ಲವನ್ನು ನಡೆಸುವ ಯೋಜನೆ ಅವರದು.

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಗೆ ಜೀ. ಶಂ.ಪರಮಶಿವಯ್ಯನವರು ಆಯ್ಕೆಯಾಗಿದ್ದಾರೆ. ಜಾನಪದ ಕ್ಷೇತ್ರದಲ್ಲಿ ಜೀ. ಶಂ. ಎಂದೇ ಖ್ಯಾತಿಪಡೆದ ಇವರು ಆ ಕ್ಷೇತ್ರದಲ್ಲಿ ಸುಮಾರು ಮೂವತ್ತು ದಶಕಗಳಿಗೂ ಮೀರಿ ಸೇವೆಯನ್ನು ಸಲ್ಲಿಸಿದವರು. ಅನೇಕ ಅಪರೂಪದ ಜಾನಪದ ಪ್ರಕಾರಗಳು ಜೀ. ಶಂ. ಪ ಅವರ ಪ್ರಯತ್ನದಿಂದ ದಾಖಲಾಗಿವೆ; ರಕ್ಷಿಸಲ್ಪಟ್ಟಿವೆ. ಮೈಸೂರು ವಿಶ್ವವಿದ್ಯಾಲಯದ ಜಾನಪದ ವಿಭಾಗದ ಮುಖ್ಯಸ್ಥರೂ ಆಗಿರುವ ಜೀ. ಶಂ. ಪ ತಮ್ಮ ಪಾಂಡಿತ್ಯ, ಅನುಭವಗಳ ಫಲವನ್ನು ಅಕಾಡೆಮಿಯ ಮೂಲಕ ಸಮೂಹ ಕ್ರಿಯೆಯಲ್ಲಿ ಮಾಡುವ ಉತ್ಸಾಹ ತೋರಿದ್ದಾರೆ. ಜಾನಪದ ಪರಂಪರೆಯ ಶ್ರೀಮಂತಿಕೆಯನ್ನು ಗುರುತಿಸುವ ಅನೇಕ ಯೋಜನೆಗಳನ್ನು ಅವರು ಹಾಕಿಕೊಂಡಿದ್ದಾರೆ.

ಕರ್ನಾಟಕ ನಾಟಕ ಅಕಾಡೆಮಿಗೆ ಶ್ರೀಮತಿ ಚಿಂದೋಡೀ ಲೀಲಾ ಅವರು ಅಧ್ಯಕ್ಷರಾಗಿದ್ದಾರೆ. ವೃತ್ತಿರಂಗಭೂಮಿಯ ಹಿರಿಯ ಕಲಾವಿದರಾದ ಇವರಿಗೆ ಅಧ್ಯಕ್ಷಸ್ಥಾನ ಸಂದಿರುವ ಗೌರವವೆನ್ನಬಹುದು. ವೃತ್ತಿರಂಗಭೂಮಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಅದರ ಪುನರುಜ್ಜೀವನಕ್ಕೆ ಸಾಕಷ್ಟು ಶ್ರಮಿಸಿದವರು ಇವರು. ಕರ್ನಾಟಕದ ಎಲ್ಲೆಡೆ ಜನರ ಗಮನವನ್ನು ತಮ್ಮ ನಾಟಕಗಳೆಡೆ ಸೆಳೆದು ವೃತ್ತಿರಂಗಭೂಮಿಯ ಶ್ರೀಮಂತಿಕೆ ಮತ್ತು ಗಮನ ಹರಿಸುವಂತೆ ಮಾಡಿದವರು ಇವರು. ರಾಷ್ಟ್ರಪತಿಯವರಿಂದ ಪ್ರಶಸ್ತಿಯನ್ನು ತಮ್ಮ ಸಾಧನೆಗಾಗಿ ಇವರು ಪಡೆದಿದ್ದಾರೆ. ರಂಗ ಚಟುವಟಿಕೆಯನ್ನು ಅಖಿಲ ಭಾರತ ವ್ಯಾಪ್ತಿಯಲ್ಲಿ ನಡೆಸುವ, ಕಾರ್ಯಾಗಾರಗಳನ್ನು ಮಾಡುವ ಯೋಜನೆಗಳನ್ನು ಅವರು ಹಾಕಿಕೊಂಡಿದ್ದಾರೆ.

**ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಗೆ** ಪಂಡಿತ ಶೇಷಾದ್ರಿ ಗವಾಯಿಯವರು ಅಧ್ಯಕ್ಷರಾಗಿದ್ದಾರೆ. ಹಿಂದೂಸ್ಥಾನಿ ಸಂಗೀತವನ್ನು ಮೈಸೂರು ಸಂಸ್ಥಾನದಲ್ಲಿ ಪ್ರಚಲಿತಗೊಳಿಸಿದ ಮೊದಲಿಗರಲ್ಲಿ ಶೇಷಾದ್ರಿಗವಾಯಿಯವರ ಹೆಸರು ಮೊದಲನೆಯದಾಗಿ ನಿಲ್ಲುತ್ತದೆ. ಶಿವಶರಣರ ವಚನಗಳು, ದಾಸರ ಪದಗಳನ್ನು ಹಿಂದೂಸ್ತಾನಿ ರಾಗಗಳ ಚೌಕಟ್ಟಿಗೆ ಅಳವಡಿಸಿ ಹಾರ್ಮೋನಿಯಂನೊಂದಿಗೆ ಕೂಡಿಸಿ–ಕಛೇರಿಗಳನ್ನು ಮಾಡಿ– ಜನಪ್ರಿಯಗೊಳಿಸಿದವರು ಇವರು. ಶ್ರೀ ಶೇಷಾದ್ರಿ ಗವಾಯಿಯವರು 1944 ರಲ್ಲಿ ಸ್ಥಾಪಿಸಿದ ಶ್ರೀ ಅರವಿಂದ ಸಂಗೀತ ವಿದ್ಯಾಲಯದ ಮೂಲಕ ಸಂಗೀತ ಕ್ಷೇತ್ರವನ್ನು ಸಾಮೂಹಿಕವಾಗಿ ವಿಸ್ತರಿಸಲು ಇವರು ಶ್ರಮಿಸಿದರು. ಉತ್ತರಾದಿ ಶೈಲಿ ಜನತೆಯಲ್ಲಿ ಜನಪ್ರಿಯವಾಗಲು ಇದು ಕಾರಣವಾಯಿತು. 1958 ರಲ್ಲೇ 'ಗಾಯನಗಂಗಾ' ಎಂಬ ಸಂಗೀತ ಮಾಸಿಕವನ್ನು ತರುವ ಸಾಹಸಕ್ಕೆ ಇವರು ಕೈ ಹಾಕಿದರು. ಆ ಪತ್ರಿಕೆ ಇನ್ನೂ ಸಂಗೀತ ವಿಷಯಕ ವಿವರಗಳನ್ನು ಕೊಡುತ್ತ ಹೊರಬರುತ್ತಿದೆ. ಸಂಗೀತವನ್ನೇ ಉಸಿರಾಗಿ ಮಾಡಿಕೊಂಡು ಶೇಷಾದ್ರಿಗವಾಯಿಯವರು, ಅದರ ಒಂದು ಅಂಗವಾದ ಭಕ್ತಿ, ಭಾವ ವೈರಾಗ್ಯ ವಿನಯಗಳನ್ನು ವ್ಯಕ್ತಿತ್ವದ ಭಾಗವನ್ನಾಗಿಸಿಕೊಂಡವರು. ರಾಜ್ಯಪ್ರಶಸ್ತಿಯನ್ನು ಸೇರಿಸಿ ಅನೇಕ ಬಿರುದು ಬಾವಲಿಗಳನ್ನು ಸಹೃದಯದಿಂದ ಪಡೆದವರು. ಸಂಗೀತ, ನೃತ್ಯ ಚಟುವಟಿಕೆಗಳು ಇವರ ಅಧ್ಯಕ್ಷಸ್ಥಾನದ ಅವಧಿಯಲ್ಲಿ ಹೆಚ್ಚು ಕ್ರಿಯಾಶೀಲವಾಗುತ್ತವೆ ಎನ್ನುವ ಭರವಸೆ ಮೂಡಿಸುತ್ತಾರೆ ಶೇಷಾದ್ರಿ ಗವಾಯಿಯವರು.

**ಕರ್ನಾಟಕದ ಉರ್ದು ಸಾಹಿತ್ಯ ಅಕಾಡೆಮಿಗೆ** ಶ್ರೀ ಮಹಮೂದ್ ಆಯಾಜ್ ಅವರು ಅಧ್ಯಕ್ಷರಾಗಿದ್ದಾರೆ. ಉರ್ದು ಸಾಹಿತ್ಯ ಮತ್ತು ಪತ್ರಿಕೋದ್ಯಮದಲ್ಲಿ ಅಪಾರ ಸೇವೆಯನ್ನು ಇವರು ಸಲ್ಲಿಸಿದ್ದಾರೆ. ಆಧುನಿಕ ಉರ್ದು ಸಾಹಿತ್ಯ ರಚನೆಗೆ ವೇದಿಕೆಯನ್ನು ದೊರಕಿಸಿಕೊಟ್ಟ ಹಿರಿಮೆ ಆಯಾಜ್ ಅವರದು. ಇವರು ಸಂಪಾದಿಸಿ ಪ್ರಕಟಿಸಿದ 'ಸೌಗಾತ್' ಸಾಹಿತ್ಯಕ ಪತ್ರಿಕೆ ಭಾರತ–ಪಾಕ್ ಉಪಖಂಡದಲ್ಲಿ ಉತ್ತಮ ಉರ್ದು ನಿಯತಕಾಲಿಕೆ ಎಂದು ಹೆಸರು ಪಡೆದಿದೆ. ಇವರು ಸಂಪಾದಕರಾಗಿ 1964 ರಲ್ಲಿ ಪ್ರಾರಂಭಿಸಿದ 'ಡೈಲಿ ಸಾಲಾರ್' ದಿನಪತ್ರಿಕೆ ದಕ್ಷಿಣ ಭಾರತದ ಪ್ರಮುಖ ಉರ್ದು ದೈನಿಕ. ಆಯಾಜ್ ಅವರು ಎರಡು ಬಾರಿ ಅಕಾಡೆಮಿಯ ಅಧ್ಯಕ್ಷರಾಗಿದ್ದರು. ಕವಿಗಳಾಗಿರುವ ಆಯಾಜ್ ಅವರು ಸುಮಾರು 40 ವರ್ಷಗಳಿಂದ ಕಾವ್ಯ ಕೃಷಿಯಲ್ಲಿ ತೊಡಗಿದ್ದಾರೆ. ಇಂಗ್ಲಿಷ್ ಸೇರಿದಂತೆ ಅನೇಕ ಭಾಷೆಗಳಿಗೆ ಇವರ ಕವನಗಳು ಅನುವಾದವಾಗಿವೆ.



ಬರಗೂರು ರಾಮಚಂದ್ರಪ್ಪ



ಕಿ. ಆರ್. ತಿಪ್ಪೇಸ್ವಾಮಿ



ಶ್ರೀಮತಿ ಚೆಂದೋಡಿ ಲೀಲಾ



ಪಂ. ಶೇಷಾದ್ರಿ ಗವಾಯಿ

# ಕಾವೇರಿ ನದಿ ನೀರಿನ ಚಳುವಳಿ

*ಸಿ.ವಿ. ರಾಜಗೋಪಾಲ*

ಹೊಳೆ ನೀರಿಗೆ ದೊಡ್ಡ ನಾಯಕನ ಅಪ್ಪಣೆಯೇ? ನೂರು ವರ್ಷಕ್ಕೆ ಹಿಂದೆ (1892) ಕರ್ನಾಟಕದಲ್ಲಿಯಂತೂ ಹೊಳೆ ನೀರು ಬಳಸಲು ಯಾರ ಅಪ್ಪಣೆಯೂ ಬೇಕಾಗಿರಲಿಲ್ಲ. ಈಗ?

ನೀರಿಗಾಗಿ ಕಾನೂನು ಸಮರವೇ ನಡೆದಿದೆ. ಈ "ಸಮರ" ಹದಿನೆಂಟು ವರ್ಷಗಳಿಂದ ನಡೆದಿದ್ದು ಎರಡು ರಾಜ್ಯಗಳ ಪರಸ್ಪರ ಸಂಬಂಧವನ್ನೇ ಹುಳಿಯಾಗಿಸಿದೆ. ಮೂರನೆಯವರ "ಪಂಚಾಯತಿ" ಈ ವಿರಸವನ್ನು ಕೊನೆಗೊಳಿಸುವ ಬದಲು ಉಲ್ಬಣಗೊಳಿಸಿದೆ.

ಕಾವೇರಿ ನೀರು ಹಂಚಿಕೆ ಪ್ರಶ್ನೆ ತಮಿಳುನಾಡು ಮತ್ತು ಕರ್ನಾಟಕದ ನಡುವೆ ಒಂದು ವಿವಾದವಾಗಿ ದೂರದ ದಿಲ್ಲಿಯಲ್ಲಿ ಪರಿಹಾರಕ್ಕಾಗಿ ಕಾದು ಕುಳಿತಿದೆ. ಪರಿಹಾರ ದೊರಕಿಸುವ ರೀತಿ ನೀತಿಗಳೇ ವಿವಾದಕ್ಕೊಳಗಾಗಿರುವುದರಿಂದ ವಿವಾದ ಜಟಿಲವಾಯಿತು.

ಈ ಜಲ ಹಂಚಿಕೆ ಪ್ರಶ್ನೆಗೆ ಶತಮಾನದಷ್ಟು ದೀರ್ಘ ಇತಿಹಾಸವಿದ್ದು ಈ ಪ್ರಶ್ನೆ ಎರಡು ರಾಜ್ಯಗಳ ಸಂಬಂಧದಲ್ಲಿ ಈಗಿನಂಥ ಬಿಕ್ಕಟ್ಟನ್ನು ಹಿಂದೆಂದೂ ಸೃಷ್ಟಿಸಿರಲಿಲ್ಲ. ಅದೃಷ್ಟವಶಾತ್ ಕರ್ನಾಟಕ ಮತ್ತು ತಮಿಳುನಾಡಿನ ಸಂಬಂಧದಲ್ಲಿನ ಕಹಿ ಸಾರ್ವತ್ರಿಕವಾದುದಲ್ಲ. ಕಾವೇರಿ ನೀರು ಹಂಚಿಕೆಗಷ್ಟೇ ಸೀಮಿತವಾದದ್ದು, ಅದು ಈವರೆಗೆ. ಕಾವೇರಿ ನೀರು ಹಂಚಿಕೆ ವಿವಾದದ ಇತ್ಯರ್ಥ ವಿಳಂಬವಾದರೆ ಏನಾಗಬಹುದು ಎಂಬುದರ ಮುನ್ಸೂಚನೆ 1991ರ ಡಿಸೆಂಬರ್‌ನಲ್ಲಿ ಬೆಂಗಳೂರಿನಲ್ಲಿ ನಡೆದ ಗಲಭೆಗಳು ಮತ್ತು ಅದಕ್ಕೆ ತಮಿಳುನಾಡಿನಲ್ಲಿ ಪ್ರತಿಕ್ರಿಯೆ.

ಆ ಗಲಭೆಗಳು ಕರ್ನಾಟಕ ಮತ್ತು ತಮಿಳುನಾಡು ಎರಡು ರಾಜ್ಯಗಳಿಗೂ ಎಚ್ಚರಿಕೆ ನೀಡಿವೆ. ಇತ್ಯರ್ಥ ವಿಳಂಬವಾದಷ್ಟೂ ವಿವಾದ ಹೊಸ ಹೊಸ ಆಯಾಮಗಳನ್ನು ಪಡೆಯುವ ಅಪಾಯವಿದೆ. ಬೆಂಗಳೂರಿನ ಡಿಸೆಂಬರ್ ಗಲಭೆಗಳ ಬಗೆಗೆ ವಿಚಾರಣೆ ನಡೆಸಲು ನ್ಯಾಯಮೂರ್ತಿ ಎನ್.ಡಿ.ವೆಂಕಟೇಶ್ ಅವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ವಿಚಾರಣಾ ಆಯೋಗದ ಮುಂದೆ ನೀಡಲಾದ

ಹೇಳಿಕೆಗಳು ಅಪಾಯದ ಸೂಚಿ. ಜಲ ವಿವಾದ ನೆಪವಷ್ಟೇ ಆಗಿ ಸುಪ್ತ ಭಾವನೆಗಳು ಕೆರಳುತ್ತಿವೆ.

ಕನ್ನಡ ಶಕ್ತಿ ಕೇಂದ್ರದ ಅಧ್ಯಕ್ಷ ಶ್ರೀ ಚಿದಾನಂದ ಮೂರ್ತಿಯವರು ವಿಚಾರಣಾ ಆಯೋಗಕ್ಕೆ ಸಲ್ಲಿಸಿದ ಹೇಳಿಕೆಯಲ್ಲಿ ಕನ್ನಡಿಗರ "ದೀರ್ಘಕಾಲದ" ಅಭದ್ರತೆಯ ಭಾವನೆ ಮತ್ತು ಭಯವನ್ನು ವ್ಯಕ್ತಪಡಿಸಲು ಕಾವೇರಿ ವಿವಾದದ ಸಂದರ್ಭ ನೆಪವಾಯಿತಷ್ಟೆ ಎಂದು ತಿಳಿಸಿದ್ದಾರೆ. ಅಭದ್ರತೆ ಮತ್ತು ಭಯ ಏಕೆ? ಕರ್ನಾಟಕಕ್ಕೆ ವಲಸೆ ಬಂದ ತಮಿಳರು "ಕನ್ನಡಿಗರ ಮೇಲೆ ಪ್ರಭುತ್ವ ನಡೆಸಲು ಪ್ರಯತ್ನಿಸುತ್ತಿರುವುದರಿಂದ". ಇದರಿಂದಾಗಿ ಕನ್ನಡಿಗರು ಆರ್ಥಿಕ ಮತ್ತು ಸಾಮಾಜಿಕ ಸೌಲಭ್ಯಗಳಿಂದ ವಂಚಿತರಾಗುತ್ತಿದ್ದಾರೆಂದು ಅಸಮಾಧಾನ. ಡಿಸೆಂಬರ್ ಬಂದ್ ಸಮಯದಲ್ಲಿ ಆದ ಗಲಭೆಗಳಿಂದ ಕನ್ನಡಿಗರು ಮತ್ತು ತಮಿಳರು ಇಬ್ಬರಿಗೂ ಹಾನಿಯಾಯಿತು.

ತಮಿಳು ಸಂಘದ ಪ್ರಕಾರ ಗಲಭೆ ನಡೆದಾಗ ರಾಜ್ಯದ ಭದ್ರತಾ ಪಡೆಯವರು "ತಟಸ್ಥ ಪ್ರೇಕ್ಷಕರಾಗಿದ್ದರು".

ಆಯೋಗದ ಮುಂದಿನ ಈ ಎರಡು ಹೇಳಿಕೆಗಳು ಎರಡು ಭಾಷಾ ಸಮೂಹಗಳಲ್ಲಿ ಬೆಳೆದಿರುವ ಆದರೆ ಗುಪ್ತಗಾಮಿಯಾಗಿದ್ದ ಭಯ, ಸಂಶಯಗಳ ದ್ಯೋತಕ. ಭಾಷೆ ಪರಸ್ಪರ ಅರ್ಥಮಾಡಿಕೊಳ್ಳಲು ಸಾಧನ. ಅದೇ ಭಯದ ಮೂಲವಾದರೆ ಹೇಗೆ?

ಕಾವೇರಿ ಜಲ ವಿವಾದ ಇಂದಲ್ಲ ನಾಳೆ ಶಾಶ್ವತವಾಗಿ ಬಗೆ ಹರಿಯಲೇ ಬೇಕಾಗುತ್ತದೆ. ಭಾರತ ರಾಜ್ಯಗಳ ಒಂದು ಒಕ್ಕೂಟ. ಆದ್ದರಿಂದಲೇ ವಿವಾದದ ಇತ್ಯರ್ಥದಲ್ಲಿ ಕೇಂದ್ರ ಸರಕಾರದ ಪಾತ್ರ ದೊಡ್ಡದು. ವಿವಾದದ ಇತ್ಯರ್ಥಕ್ಕೆ ಕೇಂದ್ರ ಸರಕಾರ ನ್ಯಾಯ ಮಂಡಲಿಯನ್ನು ರಚಿಸಿದುದರಿಂದ ವಿವಾದದ ಇತ್ಯರ್ಥ ತೊಡಕಾಯಿತು. ನ್ಯಾಯಮಂಡಲಿಯು 1991ರ ಜೂನ್ ತಿಂಗಳಿನಲ್ಲಿ ಮಧ್ಯಂತರ ಆಜ್ಞೆಯನ್ನು ಹೊರಡಿಸಿತು. ಆ ಆಜ್ಞೆಗೆ ಕರ್ನಾಟಕದಲ್ಲಿ ವಿರೋಧವಿದೆ. ತಮಿಳುನಾಡು ಆ ಆಜ್ಞೆಯನ್ನು ಕಾರ್ಯಗತ ಮಾಡುವಂತೆ ಕೇಂದ್ರ ಸರಕಾರವನ್ನು ಒತ್ತಾಯ ಪಡಿಸುತ್ತಿದೆ. ನ್ಯಾಯಮಂಡಳಿಯ ಹೊರಗೆ ಸಂಬಂಧಪಟ್ಟ ರಾಜ್ಯಗಳ ಮುಖ್ಯ ಮಂತ್ರಿಗಳು ಸಭೆ ಸೇರಿ ಸೌಹಾರ್ದಯುತವಾಗಿ ಜಲಹಂಚಿಕೆ ಒಡಂಬಡಿಕೆಯಾಗಬೇಕೆನ್ನುವುದು ಕರ್ನಾಟಕದ ನಿಲುವು. ನ್ಯಾಯ ಮಂಡಳಿಯ ಮಧ್ಯಂತರ ಆಜ್ಞೆ ತನಗೆ ಅನುಕೂಲವಾಗಿರುವುದರಿಂದ ಅದನ್ನು ಕಾರ್ಯಗತ ಮಾಡಬೇಕೆಂದು ತಮಿಳುನಾಡಿನ ಹಟ.

ಕರ್ನಾಟಕಕ್ಕೆ "ಆಗಿರುವ ಅನ್ಯಾಯವನ್ನು" ಸ್ವಾತಂತ್ರ್ಯ ಪೂರ್ವದಿನಗಳಿಂದಲೂ ಗುರುತಿಸಲಾಗುತ್ತಿದೆ. "ಐತಿಹಾಸಿಕವಾಗಿ ಆದ ಅನ್ಯಾಯವನ್ನು" ಪರಿಹರಿಸಬೇಕೆನ್ನುವುದು ಕರ್ನಾಟಕದ ನಿಲುವು.

ಮೊದಲೇ ಹೇಳಿದಂತೆ ಕಾವೇರಿ ಜಲವಿವಾದ ಧೀರ್ಘಕಾಲದ್ದು. ಹಂಚಿಕೆ ಪ್ರಶ್ನೆ ಮೊದಲು ಉದ್ಭವವಾದದ್ದು ಹತ್ತೊಂಬತ್ತನೇ ಶತಮಾನದ ಕೊನೆಯ ಭಾಗದಲ್ಲಿ. ಮೊದಲು ಒಪ್ಪಂದವಾದದ್ದು 1892ರಲ್ಲಿ. ಅಲ್ಲಿಂದೀಚೆಗೆ ಕಾವೇರಿಯಲ್ಲಿ ಬೇಕಾದಷ್ಟು ನೀರು ಹರಿದು ಹೋಗಿದೆ. ಆದರೆ ವಿವಾದ ಬಗೆ ಹರಿದಿಲ್ಲ. ವಿವಾದದ ಸ್ವರೂಪ ನೋಡಿದರೆ ಪರಿಹಾರ ಅಸಾಧ್ಯವಲ್ಲ ಎನ್ನುವುದು ಸ್ಪಷ್ಟ.

ಕಾವೇರಿ ನದಿ ಅದು ಹುಟ್ಟುವ ಕೊಡಗಿನ ತಲಕಾವೇರಿಯಿಂದ ಬಂಗಾಳಕೊಲ್ಲಿ ಸೇರುವ ವರೆಗೆ 802 ಕಿಲೋಮೀಟರ್ ಉದ್ದವಿದೆ. ಕರ್ನಾಟಕದಲ್ಲಿ 381 ಕಿಲೋಮೀಟರ್ ನಷ್ಟು ದೂರ ಹರಿದರೆ ತಮಿಳುನಾಡಿನಲ್ಲಿ ಹರಿಯುವುದು 357 ಕೈಲೋಮೀಟರ್‌ನಷ್ಟು ಉದ್ದ. 64 ಕಿಲೋಮೀಟರ್ ದೂರ ನದಿಯೇ ಎರಡು ರಾಜ್ಯಗಳ ನಡುವೆ ಗಡಿ.

ಕರ್ನಾಟಕದ ಆರು ಜಿಲ್ಲೆಗಳಾದ ಕೊಡಗು, ಮೈಸೂರು, ಮಂಡ್ಯ, ಹಾಸನ, ತುಮಕೂರು ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ನೀರಾವರಿ ಇಲ್ಲವೆ ಕುಡಿಯುವ ನೀರಿಗೆ ಕಾವೇರಿ ಪ್ರಧಾನ ಮೂಲ.

ಕಾವೇರಿಗೆ ಕರ್ನಾಟಕದಲ್ಲಿ ಪ್ರಮುಖ ಉಪನದಿಗಳೆಂದರೆ ಹಾರಂಗಿ, ಹೇಮಾವತಿ, ಲಕ್ಷ್ಮಣತೀರ್ಥ, ಕಬಿನಿ, ಸುವರ್ಣಾವತಿ, ಶಿಂಷಾ, ಅರ್ಕಾವತಿ. ತಮಿಳುನಾಡಿನಲ್ಲಿ ಕಾವೇರಿ ಸೇರುವ ಪ್ರಮುಖ ಉಪನದಿಗಳೆಂದರೆ ಭವಾನಿ, ಸೊಯಿಲ್ ಮತ್ತು ಪೊನ್‌ನೀರ್.

ಕರ್ನಾಟಕದ ಕಾವೇರಿ ಬಯಲಿನಲ್ಲಿ ಒಟ್ಟು 28 ನೀರಾವರಿ ಯೋಜನೆಗಳನ್ನು ಕೈಗೊಳ್ಳಲಾಗಿದೆ. ಕೆಲವು ಮುಗಿದಿವೆ. ಕೆಲವು ನಿರ್ಮಾಣದ ಬೇರೆ ಬೇರೆ ಹಂತಗಳಲ್ಲಿವೆ.

ಕಾವೇರಿ ಬಯಲಿನಲ್ಲಿ ಪೂರ್ಣಗೊಂಡಿರುವ ಯೋಜನೆಗಳೆಂದರೆ ಅಣೆಕಟ್ ನಾಲೆಗಳು, ಕೃಷ್ಣರಾಜ ಸಾಗರ, ಕಣ್ವ, ಬೈನಮಂಗಳ, ಮಾರ್ಕೋನಹಳ್ಳಿ ಜಲಾಶಯ, ಹೆಬ್ಬಹಳ್ಳ, ನುಗು, ಚಿಕ್ಕಹೊಳೆ, ಮಂಗಳ, ಸುವರ್ಣಾವತಿ, ಗುಂಡ್ಲು, ನಲ್ಲೂರು ಅಮಾನಿಕೆರೆ ಮತ್ತು ಸಣ್ಣ ನೀರಾವರಿಗಳು. ಈ ಯೋಜನೆಗಳಡಿಯಲ್ಲಿ ಬೇಸಾಯಕ್ಕೊಳಗಾದ ಭೂವಿಸ್ತೀರ್ಣ ಒಟ್ಟು 323.4 ಸಾವಿರ ಹೆಕ್ಟೇರ್‌ಗಳು.

ನಿರ್ಮಾಣವಾಗುತ್ತಿರುವ ಯೋಜನೆಗಳು : ಕಾಮ ಸಮುದ್ರ ಲಿಫ್ಟ್ ಇರಿಗೇಷನ್,. ಹುಚ್ಚನಕೊಪ್ಪಲು ಲಿಫ್ಟ್ ಇರಿಗೇಷನ್, ಹೇಮಾವತಿ, ವೋಟೆಹೊಳೆ, ಯುಗಚಿ, ಕಬಿನಿ, ಹಾರಂಗಿ, ಚಿಕ್ಲಿಹೊಳೆ, ಮಂಚನ ಬೆಲೆ, ತಾರಕ, ಅರ್ಕಾವತಿ, ಇಗ್ಗಲೂರು, ಶ್ರೀ ದೇವರಾಜ ಅರಸು ವರುಣ ನಾಲೆ, ಉಡುತೊರೆ ಹಳ್ಳ ಮತ್ತು

ಆಧುನೀಕರಣ ಕಾಮಗಾರಿಗಳು. ಈ ಯೋಜನೆಗಳಿಂದ ನೀರಾವರಿ ಸೌಲಭ್ಯ ದೊರಕುವುದು 526.3 ಸಾವಿರ ಹೆಕ್ಟೇರುಗಳಿಗೆ.

1974ರ ವರೆಗೆ ಕರ್ನಾಟಕದಲ್ಲಿ ಕಾವೇರಿ ಬಯಲಿನಲ್ಲಿ ನೀರಾವರಿಯಾಗಿದ್ದುದ್ದು ಆರುಲಕ್ಷ ಎಂಬತ್ತಾರು ಸಾವಿರ ಎಕರೆಗಳು. ಈಗ ಹನ್ನೊಂದು ಲಕ್ಷ ಇಪ್ಪತ್ತು ಸಾವಿರ ಎಕರೆಗೆ ಕಾವೇರಿ ನೀರು ಹರಿಯುತ್ತಿದೆ.

ತಮಿಳುನಾಡು ಸರಕಾರದ ಹೇಳಿಕೆ ಪ್ರಕಾರ ತಮಿಳುನಾಡಿನ ಕಾವೇರಿ ಬಯಲಿನಲ್ಲಿ ಕೃಷಿಗೆ ನೀರೊದಗುತ್ತಿರುವುದು 29 ಲಕ್ಷ 80 ಸಾವಿರ ಎಕರೆಗೆ. ಕಾವೇರಿ ವಿವಾದದಲ್ಲಿ ಮೊದಲಿನಿಂಲೂ ತೀವ್ರಾಸಕ್ತಿ ವಹಿಸಿರುವ ಮಾಜಿ ನೀರಾವರಿ ಸಚಿವ ಎಚ್. ಎಸ್. ನಂಜೇಗೌಡರು ಹೇಳುವಂತೆ ತಮಿಳುನಾಡು ಸರಕಾರ ಉತ್ಪ್ರೇಕ್ಷಿತ ಅಂಕೆ, ಸಂಖ್ಯೆಗಳನ್ನು ನೀಡಿದೆ. ನ್ಯಾಯಮಂಡಲಿ ಈ ಹೇಳಿಕೆ ಬಗ್ಗೆ ತಾನಾಗಿಯೇ ತನಿಖೆ ನಡೆಸುವುದಿಲ್ಲ ಎಂದು ಕೂಡ ಗೌಡರು ಆಕ್ಷೇಪಿಸುತ್ತಾರೆ.

ಕಾವೇರಿ ನೀರನ ಬಳಕೆಗೆ ಕರ್ನಾಟಕಕ್ಕೆ ಸಹಜವಾದ ಹಕ್ಕಿದೆ. ಈ ಹಕ್ಕನ್ನು ಈಗ ಕಾವೇರಿ ನ್ಯಾಯ ಮಂಡಲಿಯ ಮುಂದೆ ಪ್ರತಿಪಾದಿಸಲಾಗುತ್ತಿದೆಯಾದರೂ ಇದನ್ನು ಮೊದಲು ಪ್ರತಿಪಾದಿಸಿದವರು ಆಗ ದಿವಾನರಾಗಿದ್ದ ಸರ್.ಕೆ. ಶೇಷಾದ್ರಿ ಅಯ್ಯರ್ ಅವರು. ನೂರು ವರ್ಷಗಳ ಹಿಂದೆಯೇ ಆಗಿನ ಮೈಸೂರು ಸಂಸ್ಥಾನದಲ್ಲಿ ಕಾವೇರಿ ನೀರನ್ನು ಬಳಸುವ ನೀರಾವರಿ ಯೋಜನೆಗಳನ್ನು ಕೈಗೊಳ್ಳುವುದಕ್ಕೆ ಬ್ರಿಟಿಷರ ಆಡಳಿತದಲ್ಲಿದ್ದ ಆಗಿನ ಮದ್ರಾಸ್ ಪ್ರಾಂತ್ಯ ಆಕ್ಷೇಪಿಸುತ್ತಿತ್ತು.

ದಿವಾನ ಸರ್ ಶೇಷಾದ್ರಿ ಅಯ್ಯರ್ ಅವರು 1899ರ ಸೆಪ್ಟಂಬರ್ 7 ರಂದು ಸಲ್ಲಿಸಿದ ಮನವಿಯಲ್ಲಿ ಮೈಸೂರು ಸಂಸ್ಥಾನದ ನೆಲದ ಮೇಲೆ ಕಾವೇರಿ ನೀರನ್ನು ಸಂಗ್ರಹಿಸಲು ಮತ್ತು ಉಪಯೋಗಿಸಲು ಮೈಸೂರು ಸಂಸ್ಥಾನಕ್ಕಿರುವ "ಸಹಜ ಹಕ್ಕನ್ನು'' ನೆನಪು ಮಾಡಿಕೊಟ್ಟಿದ್ದರು. ಮದ್ರಾಸ್ ಸರಕಾರಕ್ಕೆ ಮುಂಚೆಯೇ ತಿಳಿಸದೆ ಮೈಸೂರು ಸಂಸ್ಥಾನದಲ್ಲಿ ನೀರಾವರಿ ಕಾಮಗಾರಿಗಳನ್ನು ಕೈಗೊಳ್ಳುವುದಕ್ಕೆ ಮದ್ರಾಸ್ ಸರಕಾರ ಆಕ್ಷೇಪಣೆ ಸೂಚಿಸಿತ್ತು. ಅದಕ್ಕೆ ಉತ್ತರವಾಗಿ ಶೇಷಾದ್ರಿ ಅಯ್ಯರ್ ಅವರು ಮೈಸೂರು ಸಂಸ್ಥಾನದ ನೆಲದ ಮೇಲಿನ ನೀರಿನ ಮೇಲೆ ಸಹಜವಾಗಿಯೇ ಮೈಸೂರು ಸಂಸ್ಥಾನಕ್ಕೆ ಹೆಚ್ಚಿನ ಅಧಿಕಾರವಿದೆ ಎಂದು ವಾದಿಸಿದ್ದರು.

ಇದಕ್ಕೆ ಮುಂಚೆ ಮೈಸೂರು ಸಂಸ್ಥಾನ ಮತ್ತು ಮದ್ರಾಸ್ ಪ್ರಾಂತ್ಯದ ನಡುವೆ 1892ರಲ್ಲಿ ಒಂದು ಒಪ್ಪಂದವಾಗಿತ್ತು. ಅದಕ್ಕೆ ಮುಂಚೆ ಕಾವೇರಿ ನೀರು ಹಂಚಿಕೆ ಬಗೆಗೆ ಉದ್ಭವಿಸಿದ್ದ ವಿವಾದವನ್ನು ಆ ಒಪ್ಪಂದದ ಮೂಲಕ ಇತ್ಯರ್ಥಪಡಿಸಲಾಗಿತ್ತು. ಮದ್ರಾಸ್ ಸರಕಾರಕ್ಕೆ ತಿಳಿಸದೆ ಮೈಸೂರು ಸರಕಾರ ಹೊಸ ನೀರಾವರಿ

ಯೋಜನೆಗಳನ್ನು ಕೈಗೊಳ್ಳಬಾರದೆಂಬ ನಿಯಮವನ್ನು ಆ ಒಪ್ಪಂದದಂತೆ ರೂಪಿಸಲಾಗಿತ್ತು. ಆ ನಿಯಮದ ಸ್ಪಷ್ಟೀಕರಣ ನೀಡುತ್ತಲೇ ಶೇಷಾದ್ರಿ ಅಯ್ಯರ್ ಅವರು ಮೈಸೂರು ಸಂಸ್ಥಾನದ ಸಹಜ ಹಕ್ಕನ್ನು ಪ್ರಸ್ತಾಪಿಸಿದ್ದು.

"ಕನ್ನಂಬಾಡಿ ಕಟ್ಟೆ'' ಎಂದು ಕರೆಯಲಾಗುತ್ತಿದ್ದ ಕೃಷ್ಣರಾಜಸಾಗರವನ್ನು ನಿರ್ಮಿಸುವ ಆಲೋಚನೆಯನ್ನು ಸರ್ ಮೋಕ್ಷಗೊಂಡಂ ವಿಶ್ವೇಶ್ವರಯ್ಯನವರು ಮಾಡಿದಾಗ ಮದ್ರಾಸ್ ಸರಕಾರ ಆಕ್ಷೇಪಣೆ ಎತ್ತಿತ್ತು. ದೀರ್ಘ ಮಾತುಕತೆ, ಪತ್ರ ವ್ಯವಹಾರ, ಪಂಚಾಯಿತಿ ಎಲ್ಲ ನಡೆದ ಮೇಲೆ 1924ರ ಫೆಬ್ರವರಿ 18ರಂದು ಮದ್ರಾಸ್ ಮತ್ತು ಮೈಸೂರು ಸರಕಾರಗಳ ನಡುವೆ ಒಪ್ಪಂದವಾಯಿತು. 50 ವರ್ಷದ ಅವಧಿಯ ಆ ಒಪ್ಪಂದಕ್ಕೆ 1929 ರ ಜೂನ್ 17ರಂದು ಪೂರಕ ಒಪ್ಪಂದ ಒಂದಾಯಿತು. 1924ರ ಒಪ್ಪಂದದಿಂದ ಮೈಸೂರು ಸಂಸ್ಥಾನಕ್ಕೆ ಅನ್ಯಾಯವಾಯಿತೆಂದು ಡಿ. ವಿಶ್ವೇಶ್ವರಯ್ಯನವರೇ ಅಸಮಾಧಾನಗೊಂಡಿದ್ದರಂತೆ.

1972 ಮೇ 29 ರಂದು ತಮಿಳುನಾಡು, ಮೈಸೂರು ಮತ್ತು ಕೇರಳ ರಾಜ್ಯಗಳ ಪ್ರತಿನಿಧಿಗಳ ಸಮ್ಮೇಳನ ಒಂದು ನಡೆದು ಅವಧಿ ಮುಗಿದಿದ್ದ 1924ರ ಒಪ್ಪಂದಕ್ಕೆ ಬದಲು ಸಂಬಂಧಪಟ್ಟ ಎಲ್ಲ ರಾಜ್ಯಗಳೂ ಸೌಹಾರ್ದಯುತವಾದ ಪರಿಹಾರವನ್ನು ಕಂಡು ಹಿಡಿಯಲು ಒಪ್ಪಲಾಯಿತು.

ಆ ನಿರ್ಧಾರವಾಗಿ ಇಪ್ಪತ್ತು ವರ್ಷವಾದರೂ ಇನ್ನೂ ಸರ್ವಸಮ್ಮತ ಪರಿಹಾರವನ್ನು ಕಂಡು ಹಿಡಿದಿಲ್ಲ. ಈ ಮಧ್ಯೆ 1983 ರಲ್ಲಿ ತಮಿಳುನಾಡಿನ ಸಂಘ ಒಂದು ಸರ್ವೋಚ್ಚ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿ ಕಾವೇರಿ ನೀರು ಹಂಚಿಕೆ ಪ್ರಶ್ನೆಯನ್ನು ನ್ಯಾಯ ಮಂಡಲಿಗೆ ಒಪ್ಪಿಸುವಂತೆ ಕೇಂದ್ರ ಸರ್ಕಾರಕ್ಕೆ ಆದೇಶ ನೀಡಬೇಕೆಂದು ಕೇಳಿತು. ಈ ರಿಟ್ ಅರ್ಜಿಗೆ ತಮಿಳುನಾಡು ಸರ್ಕಾರವೂ ಭಾಗಿಯಾಯಿತು. 1990 ರ ಮೇ 4 ರಂದು ಸರ್ವೋಚ್ಚ ನ್ಯಾಯಾಲಯ ತೀರ್ಪು ನೀಡಿ ಕಾವೇರಿ ನ್ಯಾಯಮಂಡಲಿ ರಚಿಸುವಂತೆ ಕೇಂದ್ರ ಸರ್ಕಾರಕ್ಕೆ ಆದೇಶ ನೀಡಿತು. 1956ರ ಅಂತರ ರಾಜ್ಯ ಜಲವಿವಾದ ಶಾಸನದಂತೆ ಭಾರತ ಸರ್ಕಾರ ಕಾವೇರಿ ನ್ಯಾಯಮಂಡಲಿಯನ್ನು ರಚಿಸಿತು.

ಭಾರತದಲ್ಲಿ ರಾಷ್ಟ್ರೀಯ ಜಲನೀತಿಯೊಂದನ್ನು ರೂಪಿಸಿಲ್ಲ. 1987ರಲ್ಲಿ ಕೇಂದ್ರ ಸರ್ಕಾರ ರಾಷ್ಟ್ರೀಯ ಜಲನೀತಿಯ ದಾಖಲೆಯೊಂದನ್ನು ತಯಾರಿಸಿತಾದರೂ ಅದು ಶಾಸನವಾಗಲಿಲ್ಲ. ಈ ಕಾರಣದಿಂದ ಮತ್ತು ನ್ಯಾಯಮಂಡಳಿಗೆ ಮಾರ್ಗ ಸೂಚಿಗಳನ್ನು ನೀಡಿಲ್ಲ ಎನ್ನುವ ಕಾರಣದಿಂದ ನ್ಯಾಯಮಂಡಲಿ ರಚನೆಯನ್ನೇ ಕರ್ನಾಟಕದಲ್ಲಿ ವಿರೋಧಿಸಲಾಯಿತು. ಕರ್ನಾಟಕದ ನೀರಾವರಿ ಹಿತವನ್ನು ರಕ್ಷಿಸಲು ಕರ್ನಾಟಕ ಸರಕಾರ ಸುಗ್ರೀವಾಜ್ಞೆಯೊಂದನ್ನು ಹೊರಡಿಸಿತು. ಅದನ್ನು ಸರ್ವೋಚ್ಚ ನ್ಯಾಯಾಲಯ ತಳ್ಳಿ ಹಾಕಿತು.

1991ರ ಜೂನ್ 25ರಂದು ನ್ಯಾಯ ಮಂಡಲಿ ಹಂಗಾಮಿ ಆಜ್ಞೆಯೊಂದನ್ನು ಹೊರಡಿಸಿ ಕರ್ನಾಟಕ ತನ್ನ ಜಲಾಶಯಗಳಿಂದ ಜೂನ್‌ನಿಂದ ಮೇ ತಿಂಗಳವರೆಗೆ 205 ಟಿ. ಎಂ. ಸಿ.ಎಫ್.ಟಿ. (ಸಾವಿರ ದಶಲಕ್ಷ ಘನ ಅಡಿ) ನೀರನ್ನು ತಮಿಳುನಾಡಿನ ಮೆಟ್ಟೂರು ಅಣೆಕಟ್ಟಿಗೆ ಬಿಡುವಂತೆ ಆದೇಶ ನೀಡಿತು. ಅಲ್ಲದೆ ಕರ್ನಾಟಕ 11 ಲಕ್ಷ ಇಪ್ಪತ್ತು ಸಾವಿರ ಎಕರೆಗಿಂತ ಹೆಚ್ಚಿನ ವಿಸ್ತೀರ್ಣಕ್ಕೆ ಕಾವೇರಿ ನೀರನ್ನು ಬಳಸಕೂಡದೆಂದೂ ನ್ಯಾಯಮಂಡಲಿ ಆಜ್ಞೆ ಮಾಡಿತು.

ನ್ಯಾಯಮಂಡಲಿಯ ಈ ಆಜ್ಞೆ ಕರ್ನಾಟಕದಲ್ಲಿ ಭಾರಿ ಆಕ್ರೋಶದ ಅಲೆಯನ್ನು ಎಬ್ಬಿಸಿತು. ಪ್ರತಿಭಟನೆಗಳು ನಡೆದವು. ಸರ್ವ ಪಕ್ಷಗಳ ಕಾವೇರಿ ಸಮನ್ವಯ (ಮುಂದೆ ಕೃಷ್ಣವನ್ನು ಸಮಿತಿಯ ಹೆಸರಿಗೆ ಸೇರಿಸಲಾಯಿತು) ಸಮಿತಿಯೊಂದನ್ನು ರಚಿಸಲಾಯಿತು. ನ್ಯಾಯ ಮಂಡಲಿಯಿಂದ ನ್ಯಾಯ ದೊರಕುವುದಿಲ್ಲ ಎನ್ನುವ ಟೀಕೆಗಳು ಕೇಳಿ ಬಂದವು. ಕೊನೆಗೆ ನ್ಯಾಯಮಂಡಲಿಯನ್ನೇ ರಾಜ್ಯ ಸರಕಾರ ಬಹಿಷ್ಕರಿಸಬೇಕೆಂದು ಸಮನ್ವಯ ಸಮಿತಿ ಜುಲೈ ತಿಂಗಳಲ್ಲಿ ಕರೆ ನೀಡಿತು. ಬಹಿಷ್ಕರಿಸಿದ್ದರೆ ಚಳವಳಿಯ ಬೆದರಿಕೆಯನ್ನೂ ಒಡ್ಡಿತ್ತು. ಅಧಿಕಾರಿಗಳ ತಂಡ ಒಂದು ಕಾವೇರಿ ಬಯಲಿಗೆ ಭೇಟಿ ನೀಡಿ ಪರಿಶೀಲಿಸುವುದೆಂದು ಪ್ರಧಾನಿ ಭರವಸೆ ನೀಡಿದುದರಿಂದ ಚಳವಳಿಯ ಬೆದರಿಕೆ ಕಾರ್ಯಗತವಾಗಲಿಲ್ಲ. ಅಲ್ಲದೆ ಆ ವೇಳೆ ಕರ್ನಾಟಕದಲ್ಲಿ ಭಾರಿ ರಾಜಕೀಯ ಬೆಳವಣಿಗೆಗಳೂ ಆದವು.

ಇದಕ್ಕೂ ಮುಂಚೆ ಸಮನ್ವಯ ಸಮಿತಿ ಕಾವೇರಿ ಬಯಲಿನ ಶಾಸಕರ ರಾಜೀನಾಮೆ ಬೆದರಿಕೆಯನ್ನು ಒಡ್ಡಿದ್ದುದರಿಂದ ಪ್ರಧಾನಿಯವರು ಈ ವರ್ಷದ ಫೆಬ್ರವರಿ 17 ರಂದು ದೆಹಲಿಯಲ್ಲಿ ಸಂಬಂಧಪಟ್ಟ ರಾಜ್ಯಗಳ ಮುಖ್ಯಮಂತ್ರಿಗಳ ಸಭೆಯೊಂದನ್ನು ಕರೆದಿದ್ದರು. ಆ ಸಭೆಯಿಂದ ಪರಿಸ್ಥಿತಿ ಏನು ಬದಲಾಗಲಿಲ್ಲ. ವಾಸ್ತವವಾಗಿ ಕರ್ನಾಟಕದಲ್ಲಿ ಹತಾಶೆ ತೀಕ್ಷ್ಣಗೊಂಡಿತು. ಆ ಹತಾಶೆಯ ಫಲಶೃತಿ ಜುಲೈನಲ್ಲಿ ಮಂಡ್ಯದ ರ್‍ಯಾಲಿ.

ರ್‍ಯಾಲಿಯೇನೋ ನ್ಯಾಯ ಮಂಡಲಿಯ ಬಹಿಷ್ಕಾರಕ್ಕೆ ಒತ್ತಾಯಪಡಿಸಿತು. ಆದರೆ ರಾಜ್ಯ ಸರಕಾರ ಬಹಿಷ್ಕರಿಸುವುದು ಸುಲಭವಾಗಿರಲಿಲ್ಲ. ರಾಜಕೀಯವಾಗಿ ಕೇಂದ್ರ ಸರಕಾರಕ್ಕೆ ತುಂಬ ಸಂದಿಗ್ಧವಾಗುತಿತ್ತು. ಅಲ್ಲದೆ ಪೂರ್ವ ನಿದರ್ಶನ ಒಂದನ್ನು ಕರ್ನಾಟಕ ಸರಕಾರ ನಿರ್ಮಿಸಿರುತ್ತಿತ್ತು. ಕರ್ನಾಟಕ ಮತ್ತು ಕೇಂದ್ರ ಎರಡೂ ಕಡೆ ಒಂದೇ ಪಕ್ಷದ ಸರಕಾರಗಳಿವೆ.

ನ್ಯಾಯಮಂಡಲಿಯ ಹಂಗಾಮಿ ಆಜ್ಞೆಯ ವಿರೋಧಕ್ಕೆ ಕಾರಣ ಆ ಆಜ್ಞೆ ಪಕ್ಷಪಾತದಿಂದ ಕೂಡಿದೆ, ಕಾರ್ಯಗತ ಮಾಡಲು ಸಾಧ್ಯವಲ್ಲದ್ದು ಎನ್ನುವುದು.

ಈಗ ಕಾವೇರಿ ನೀರು ಬಳಸಿ ನೀರಾವರಿ ಬೇಸಾಯವಾಗುತ್ತಿರುವ 11 ಲಕ್ಷ 20 ಸಾವಿರ ಎಕರೆಗೆ ನೀರು ಪೂರೈಸಲು ಕರ್ನಾಟಕಕ್ಕೆ 312 ಟಿ.ಎಂ.ಸಿ.ಎಫ್.ಟಿ. ನೀರು ಬೇಕು. ಕೇವಲ 7 ಟಿ.ಎಂ.ಸಿ.ಎಫ್.ಟಿ. ನೀರು ಉಪಯೋಗಿಸುತ್ತಿದೆ.

ನ್ಯಾಯಮಂಡಲಿಯ ಹಂಗಾಮಿ ಆಜ್ಞೆಯಂತೆ ತಮಿಳುನಾಡಿಗೆ 205 ಸಿ.ಎಂ.ಟಿ.ಎಫ್.ಟಿ. ನೀರು ಬಿಡಬೇಕಾದರೆ ಮೆಟ್ಟೂರು ಜಲಾನಯನ ಭೂಮಿಯಲ್ಲಿ 312 + 7 + 205 ಒಟ್ಟು 524 ಸಿ. ಎಂ. ಟಿ. ಎಫ್. ಟಿ. ನೀರು ಲಭ್ಯವಾಗಬೇಕು ಎಂದು ಲೆಕ್ಕ ಹಾಕುವವರು ರಾಜ್ಯದ ಜಲಾಶಯಗಳಲ್ಲಿ 524 ಸಿ.ಎಂ.ಟಿ.ಎಫ್.ಟಿ. ಗಿಂತ ಕಡಿಮೆ ನೀರಿದ್ದರೆ ಏನು ಮಾಡಬೇಕು ಎನ್ನುವುದನ್ನು ನ್ಯಾಯಮಂಡಲಿ ತಿಳಿಸಿಲ್ಲ ಎನ್ನುವುದರತ್ತ ಗಮನ ಸೆಳೆಯುತ್ತಾರೆ. 1976–77ರಲ್ಲಿ ಒಟ್ಟು ಲಭ್ಯವಾದ ನೀರಿನ ಪ್ರಮಾಣವೇ 333 ಸಿ.ಎಂ.ಟಿ.ಎಫ್.ಟಿ. ಅಂಥ ಸಮಯದಲ್ಲಿ ನ್ಯಾಯ ಮಂಡಲಿಯ ಆಜ್ಞೆಯಂತೆ 205 ಸಿ.ಎಂ.ಟಿ.ಎಫ್.ಟಿ. ನೀರನ್ನು ತಮಿಳುನಾಡಿಗೆ ಬಿಟ್ಟು ಕೇರಳ 7 ಸಿ.ಎಂ.ಟಿ.ಎಫ್.ಟಿ. ನೀರು ಬಳಸಿದರೆ ಕರ್ನಾಟಕಕ್ಕೆ ಉಳಿಯುವುದು 121 ಸಿ.ಎಂ.ಟಿ.ಎಫ್.ಟಿ. ನೀರು ಮಾತ್ರ. ಆದರೆ ನ್ಯಾಯ ಮಂಡಲಿಯ ಮುಂದೆ ಮಂಡಿಸಲಾಗಿರುವ ದಾಖಲೆಯಂತೆ ಕಾವೇರಿ ಬಯಲಿನಲ್ಲಿ ನೀರಾವರಿಗೊಳಗಾಗಿರುವ 11 ಲಕ್ಷ 20 ಸಾವಿರ ಎಕರೆಗೆ ನೀರು ಪೂರೈಸಲು 302 ಸಿ.ಎಂ.ಸಿ.ಎಫ್.ಟಿ. ನೀರು ಬೇಕು. ಆದರೆ ನ್ಯಾಯ ಮಂಡಳಿಯ 1992ರ ಏಪ್ರಿಲ್ 3ರ ಆಜ್ಞೆಯಂತೆ ಕರ್ನಾಟಕ ಹಾಲಿ ಬಳಸುತ್ತಿರುವುದು 248 ಟಿ.ಎ.ಸಿ.ಎಫ್. ಟಿ. ನೀರು ಮಾತ್ರ. ನ್ಯಾಯ ಮಂಡಲಿಯ ಈ ಲೆಕ್ಕ ತಪ್ಪು ಎನ್ನುತ್ತಾರೆ ನಂಜೇಗೌಡರು. ಪರಸ್ಪರ ಅಸಂಬದ್ಧವಾದ ಎರಡು ಮಾಹಿತಿಗಳನ್ನು ನ್ಯಾಯಮಂಡಲಿ ಅವಲಂಬಿಸಿದೆ ಎನ್ನುವುದು ಅವರ ವಾದ. "ಬಿಳಿಗುಂಡ್ಲು ಮತ್ತು ಮೆಟ್ಟೂರುಗಳಲ್ಲಿ ಲಭ್ಯವಾದ ಮಾಹಿತಿಯಲ್ಲಿ ಪರಸ್ಪರ ಹೋಲಿಕೆ ಇಲ್ಲ". ಮಧ್ಯಂತರ ಆಜ್ಞೆ ವಿರುದ್ಧ ಮತ್ತೊಂದು ಆಕ್ಷೇಪಣೆಯೆಂದರೆ ಕರ್ನಾಟಕದಲ್ಲಿ ನೀರಾವರಿ ಸೌಲಭ್ಯ ವಿಸ್ತರಿಸುವುದನ್ನು ನಿಯಂತ್ರಿಸಿದ ನ್ಯಾಯ ಮಂಡಲಿ ಅಂಥದೇ ನಿಯಂತ್ರಣವನ್ನು ತಮಿಳುನಾಡಿಗೆ ವಿಧಿಸಿಲ್ಲ ಎನ್ನುವುದು.

ನ್ಯಾಯಮಂಡಲಿಯ ನೇಮಕಕ್ಕೇ ಕರ್ನಾಟಕದ ವಿರೋಧವಿತ್ತು. 1924ರ ಒಪ್ಪಂದದಿಂದಲೇ ತನಗೆ ಅನ್ಯಾಯವಾಯಿತೆಂದು ಭಾವಿಸಿದ್ದ ಕರ್ನಾಟಕ ನೀರು ಹಂಚಿಕೆ ವಿವಾದ ಮಾತುಕತೆಯ ಮೂಲಕವೇ ಇತ್ಯರ್ಥವಾಗಬೇಕೆನ್ನುವ ನಿಲುವನ್ನು ಮೊದಲಿನಿಂದಲೂ ತಳೆದಿತ್ತು. ನ್ಯಾಯಮಂಡಲಿಯ ಮಧ್ಯಕಾಲಿನ ಆಜ್ಞೆ ಹೊರಡಿಸಿದ ಮೇಲಂತೂ ಕರ್ನಾಟಕಕ್ಕೆ ನ್ಯಾಯಮಂಡಲಿಯಲ್ಲಿ ವಿಶ್ವಾಸ ಪೂರ್ಣವಾಗಿ ನಾಶವಾಯಿತು. ನ್ಯಾಯ ಮಂಡಲಿಯ ಸದಸ್ಯರುಗಳು ತಮಿಳುನಾಡಿನ ಆತಿಥ್ಯ ಸ್ವೀಕರಿಸಿದ ವೀಡಿಯೋ ಚಿತ್ರವನ್ನು ಮಾಜಿ ಲೋಕೋಪಯೋಗಿ ಸಚಿವ ಹಾಗೂ ಲೋಕಸಭೆ ಸದಸ್ಯ ದೇವೆಗೌಡರು ಪ್ರದರ್ಶಿಸಿದ ಮೇಲೆ ಕರ್ನಾಟಕದಲ್ಲಿ ನ್ಯಾಯ ಮಂಡಲಿಯ ವಿರುದ್ಧ ಭಾವನೆ ತೀಕ್ಷ್ಣಗೊಂಡಿತು. ಒಂದು ಕಡೆ ನ್ಯಾಯಮಂಡಲಿಯನ್ನು ಬಹಿಷ್ಕರಿಸುವಂತೆ ರಾಜ್ಯ ಸರ್ಕಾರದ ಮೇಲೆ ಒತ್ತಡ ತಂದರೆ ಮತ್ತೊಂದು ಕಡೆಯಿಂದ ಮಂಡಲಿ ಸದಸ್ಯತ್ವಕ್ಕೆ ರಾಜೀನಾಮೆ ಕೊಡುವಂತೆ ಮಂಡಲಿಯ ಸದಸ್ಯರ ಮೇಲೆ ಒತ್ತಡ ತರಲಾಯಿತು. ಈ ಎರಡೂ

ಒತ್ತಡಗಳೂ ಗುರಿಸಾಧಿಸಲಿಲ್ಲವಾದರೂ ನ್ಯಾಯ ಮಂಡಲಿಯ ವಿರುದ್ಧ ಕರ್ನಾಟಕದಲ್ಲಿ ಭಾವನೆ ಮತ್ತಷ್ಟು ಗಟ್ಟಿಯಾಯಿತು.

ಈ ವಿವಾದದಲ್ಲಿ ರಾಜಕೀಯವೂ ಬೆರೆಯಿತು. ಆದರಿಂದಾಗಿ ಕಾವೇರಿ ಬಯಲಿನ ಕ್ಷೇತ್ರಗಳಿಂದ ವಿಧಾನಸಭೆಗೆ ಮತ್ತು ಸಂಸತ್ತಿಗೆ ಚುನಾಯಿತರಾಗಿರುವವರು ಭಾರಿ ಸಂದಿಗ್ಧವನ್ನು ಎದುರಿಸಬೇಕಾಯಿತು. ಸಮನ್ವಯ ಸಮಿತಿಯ ಅಧ್ಯಕ್ಷ ಶ್ರೀ ಮಾದೇಗೌಡರೇ ಕಾಂಗ್ರೆಸ್‌ನವರಾದರೂ ಸಮನ್ವಯ ಸಮಿತಿಯಲ್ಲಿ ಕಾಂಗ್ರೆಸ್ ಅಧಿಕೃತವಾಗಿ ಭಾಗಿಯಲ್ಲ. ಅಲ್ಲದೆ ಸಮನ್ವಯ ಸಮತಿ ರಾಜ್ಯ ಸರಕಾರವನ್ನು ಟೀಕಿಸಿದ ಮೇಲೆ ಸಮನ್ವಯ ಸಮಿತಿಯ ಸಭೆಗಳಲ್ಲಿ ಭಾಗವಹಿಸುವುದರ ವಿರುದ್ಧ ತಮ್ಮ ಸಹ ಸಚಿವರಿಗೆ ಮುಖ್ಯಮಂತ್ರಿ ಬಂಗಾರಪ್ಪನವರು ಸೂಚನೆ ನೀಡಿದರು. ಆದರೆ ಕಾವೇರಿ ಬಯಲಿನ ಜನರ ಒತ್ತಡ ಎಷ್ಟಿತ್ತೆಂದರೆ ಸಚಿವ ಶ್ರೀ ಆತ್ಮಾನಂದ ಅವರು ಮುಖ್ಯಮಂತ್ರಿಯ ಸೂಚನೆಯನ್ನು ಉಲ್ಲಂಘಿಸಿ ಮಂಡ್ಯ ರ‍್ಯಾಲಿಯಲ್ಲಿ ಭಾಗವಹಿಸಿದರು. ಸಾಮಾನ್ಯವಾಗಿ ರಾಜಕೀಯ ಚಟುವಟಿಕೆಗಳಿಂದ ದೂರವಿರುವ ವಿಧಾನ ಸಭೆ ಅಧ್ಯಕ್ಷ ಶ್ರೀ ಎಸ್.ಎಂ. ಕೃಷ್ಣ ಅವರು ಕೂಡಾ ರಾಜಕೀಯ ಸ್ವರೂಪದ ಮಂಡ್ಯ ರ‍್ಯಾಲಿಯಲ್ಲಿ ಭಾಗವಹಿಸಬೇಕಾಯಿತೆಂದರೆ ನ್ಯಾಯ ಮಂಡಲಿಯ ಮಧ್ಯಕಾಲೀನ ಆಜ್ಞೆ ವಿರುದ್ಧ ಕರ್ನಾಟಕ ಅದರಲ್ಲಿಯೂ ಕಾವೇರಿ ಬಯಲಿನ ಜನರ ಭಾವನೆ ಎಷ್ಟು ತೀವ್ರವಾಗಿದೆ ಎಂಬುದನ್ನು ಗ್ರಹಿಸಬಹುದು.

ಈ ಮಧ್ಯೆ ಕೇಂದ್ರದ ಜನ ಸಂಪನ್ಮೂಲ ಮಂತ್ರಿ ಶ್ರೀ ವಿದ್ಯಾಚರಣ ಶುಕ್ಲ ಅವರ ಒಂದು ಹೇಳಿಕೆಯೂ ಕರ್ನಾಟಕ ಸರ್ಕಾರವನ್ನು ರಾಜಕೀಯವಾಗಿ ಭಾರಿ ಸಂದಿಗ್ಧಕ್ಕೀಡು ಮಾಡಿತು. ಮಧ್ಯಕಾಲೀನ ಆಜ್ಞೆಯಂತೆ ತಮಿಳು ನಾಡಿಗೆ ಕರ್ನಾಟಕದ ಜಲಾಶಯಗಳಿಂದ ನೀರು ಬಿಟ್ಟಿಲ್ಲ ಎನ್ನುವುದು ರಾಜ್ಯ ಸರ್ಕಾರದ ನಿಲುವು. ಆದರೆ ಕರ್ನಾಟಕ ಸರಕಾರ ಮಧ್ಯಕಾಲೀನ ಆಜ್ಞೆಯನ್ನು ಕಾರ್ಯಗತ ಮಾಡಿದೆ ಎನ್ನುವ ಅರ್ಥದ ಹೇಳಿಕೆಯನ್ನು ಶುಕ್ಲ ಅವರು ನೀಡಿದರು. ಕರ್ನಾಟಕದಲ್ಲಿ ಸರಕಾರ ಮತ್ತು ಅದರ ಟೀಕಾಕಾರರ ನಡುವೆ ಅದೇ ಒಂದು ದೊಡ್ಡ ವಿವಾದವಾಯಿತು.

ನ್ಯಾಯಮಂಡಲಿಯ ವಿರುದ್ಧ ಹೆಜ್ಜೆ ಹೆಜ್ಜೆಗೂ ಹೋರಾಡುತ್ತಿರುವ ಕರ್ನಾಟಕ ನ್ಯಾಯ ಮಂಡಲಿಯ ಮಧ್ಯಕಾಲೀನ ಆಜ್ಞೆಯನ್ನು ಗೆಜೆಟ್‌ನಲ್ಲಿ ಪ್ರಕಟಿಸುವುದನ್ನು ವಿರೋಧಿಸಿತು. ಗೆಜೆಟ್‌ನಲ್ಲಿ ಪ್ರಕಟಿಸದೆ ಕೇಂದ್ರ ಸರಕಾರಕ್ಕೆ ಬೇರೆ ಮಾರ್ಗವೇ ಇರಲಿಲ್ಲ. ವಿವಾದದಲ್ಲಿ ಮತ್ತೊಬ್ಬ ಕಕ್ಷಿಗಾರನಾದ ತಮಿಳುನಾಡು ಗೆಜೆಟ್ ಪ್ರಕಟಣೆಗೆ ಒತ್ತಾಯ ಪಡಿಸುತ್ತಿತ್ತು. ನಿಧಾನವಾಗಿ ಪ್ರಕಟಿಸಬಹುದಾಗಿತ್ತಾದರೂ ತಮಿಳುನಾಡಿನಿಂದಲೂ ರಾಜಕೀಯ ಒತ್ತಡವಿತ್ತು.

ತಮಿಳುನಾಡು ನ್ಯಾಯ ಮಂಡಲಿಯ ಹೊರಗೆ ಮಾತುಕತೆಯ ಮೂಲಕ ವಿವಾದ ಇತ್ಯರ್ಥಕ್ಕೆ ಒಲವು ತೋರಿದ್ದರೆ ಗೆಜೆಟ್ ಪ್ರಕಟಣೆಯನ್ನು ಮುಂದೂಡಬಹುದಾಗಿತ್ತು. ಇಲ್ಲವೇ ಅದೇ ಅಸಂಬದ್ಧವಾಗುತ್ತಿತ್ತು. ಪ್ರಕಟಿಸಿದ ಮೇಲೆ ಕಾನೂನಿನಂತೆ ಅದನ್ನು ವಾಪಸ್ಸು ಪಡೆಯುವಂತೆಯೂ ಇಲ್ಲ.

ಮಧ್ಯಕಾಲೀನ ಅನುಷ್ಠಾನಕ್ಕೆ ತಮಿಳುನಾಡು ಒತ್ತಾಯಿಸುತ್ತಿದ್ದರೆ ಆ ಆಜ್ಞೆ ನೀಡಿದ ನ್ಯಾಯ ಮಂಡಲಿಯ ಅಸ್ತಿತ್ವಕ್ಕೆ ಕರ್ನಾಟಕದಲ್ಲಿ ವಿರೋಧವಿದೆ. ಮೇಲ್ನೋಟಕ್ಕಾದರೂ ಪರಸ್ಪರ ಹೊಂದಾಣಿಕೆಗೆ ಅವಕಾಶವೇ ಇಲ್ಲದ ಬಿಗಿನಿಲುವುಗಳಿವು. ಇಂತಹ ಸ್ಥಿತಿಯಲ್ಲಿ ಕೇಂದ್ರಸರ್ಕಾರದ ಕೆಲಸ ಸುಲಭವಲ್ಲ. ಶ್ರೀ ಶುಕ್ಲಾರವರೆ ಒಪ್ಪಿಕೊಂಡಂತೆ ಕೇಂದ್ರ ಸರ್ಕಾರ ನ್ಯಾಯಮಂಡಲಿಯ ಮಧ್ಯಕಾಲಿನ ಆಜ್ಞೆಯನ್ನು ಗಜೆಟ್‌ನಲ್ಲಿ ಪ್ರಕಟಿಸುವುದನ್ನು ಕರ್ನಾಟಕ ಒಪ್ಪುವುದಿಲ್ಲ ಎನ್ನುವುದು ಕೇಂದ್ರ ಸರ್ಕಾರಕ್ಕೆ ಗೊತ್ತಿತ್ತು. "ಆದರೆ ಕಾನೂನು ಪ್ರಕಟಣೆಯನ್ನು ಅನಿವಾರ್ಯಗೊಳಿಸಿತು."

ಕಾನೂನು ಮೂಲಕ ಮಾತ್ರವೇ ಕಾವೇರಿ ಜಲವಿವಾದವನ್ನು ಪರಿಹರಿಸಬೇಕೆ? ಹಾಗೇನಲ್ಲ. ನ್ಯಾಯಮಂಡಲಿಯ ಮಧ್ಯಕಾಲೀನ ಆಜ್ಞೆಯ ಗೆಜೆಟ್ ಪ್ರಕಟಣೆಯ ನಂತರ ಕೂಡ ಪ್ರಧಾನಿ ಶ್ರೀ ನರಸಿಂಹರಾವ್ ಅವರು ಸಂಬಂಧಪಟ್ಟ ಮುಖ್ಯಮಂತ್ರಿಗಳ ಸಭೆಯನ್ನು ಕರೆಯುವ ಮಾತನಾಡುತಿದ್ದರೆನ್ನುವುದೇ ಬೇರೇ ಮಾರ್ಗಗಳೂ ಇವೆ ಎನ್ನುವುದರ ಸ್ಪಷ್ಟ ಸೂಚನೆ.

ಸೌಹಾರ್ದಯುತ ಒಪ್ಪಂದವೆಂದರೆ ಸ್ವಪ್ರೇರಣೆಯಿಂದ ಪರಸ್ಪರ ಕಲೆತು ಇತ್ಯರ್ಥಕ್ಕೆ ಬರುವುದು. ಬೇರೆಯವರ ಪ್ರೇರಣೆಯಿಂದ ಮುಖ್ಯಮಂತ್ರಿಗಳು ಮಾತುಕತೆ ನಡೆಸಿದರೂ ಸೌಹಾರ್ದಯುತ ಒಪ್ಪಂದ ಸಾಧ್ಯ. ದುರದೃಷ್ಟದ ಸಂಗತಿಯೆಂದರೆ, ಎರಡೂ ರಾಜ್ಯಗಳ ನಾಯಕರಿಗೆ ಕೆಲವು ರಾಜಕೀಯ ಅನಿವಾರ್ಯಗಳಿವೆ ಎನ್ನುವುದು. ಆದ್ದರಿಂದಲೇ ಈ ಬಿಗಿ ಮುಷ್ಟಿ.

ಜಲ ಮತ್ತು ನೆಲದ ಪ್ರಶ್ನೆಗಳು ಸುಲಭವಾಗಿ ಭಾವುಕತೆಯನ್ನು ಕೆರಳಿಸುವಂತಹ ಪ್ರಶ್ನೆಗಳು. ಆದ್ದರಿಂದಲೇ ಆ ಪ್ರಶ್ನೆಗಳನ್ನು ರಾಜಕೀಯಕ್ಕೆ ಬಳಸಿಕೊಳ್ಳುವ ಚಪಲವಾಗುತ್ತವೆ. ಏನೇ ಆದರೂ ಕರ್ನಾಟಕ ಮತ್ತು ತಮಿಳುನಾಡಿನ ಭೌಗೋಳಿಕ ಸ್ಥಿತಿಯನ್ನು ಬದಲಾಯಿಸಲು ಸಾಧ್ಯವಿಲ್ಲ. ಸದಾಕಾಲಕ್ಕೂ ಈ ಎರಡೂ ರಾಜ್ಯಗಳು ಪರಸ್ಪರ ನೆರೆಯಾಗಿಯೇ ಬಾಳಬೇಕು. ವಾಸ್ತವವಾಗಿ, ಇದೇ ನಿಜವಾದ ಅನಿವಾರ್ಯ. ಇದನ್ನು ಎರಡು ರಾಜ್ಯಗಳಲ್ಲಿನ ಎಲ್ಲಾ ರಾಜಕೀಯ ಪಕ್ಷಗಳೂ ಗ್ರಹಿಸಿದರೆ ಈಗಿಗಿಂತ ಭಿನ್ನರೀತಿಯಲ್ಲಿ ಸ್ಪಂದಿಸಬೇಕಾಗುತ್ತದೆ.

ಸದ್ಯಕ್ಕಂತೂ ಆ ರೀತಿಯ ಸ್ಪಂದನದ ಸೂಚನೆ ಎರಡೂ ರಾಜ್ಯಗಳಲ್ಲಿ ಕಾಣಿಸುತ್ತಿಲ್ಲ. ತಮಿಳುನಾಡಿನ ಮುಖ್ಯಮಂತ್ರಿ ಡಾ. ಜಯಲಲಿತ ಅವರು

ರಾಜಕೀಯವಾಗಿ ಹೆಚ್ಚು "ಸ್ವತಂತ್ರ" ಆಗಿದ್ದರೆ ನ್ಯಾಯಮಂಡಲಿಯ ಹೊರಗೆ ಇತ್ಯರ್ಥಕ್ಕೆ ಈಗಿಗಿಂತ ಹೆಚ್ಚು ಅನುಕೂಲಕರ ಪ್ರತಿಕ್ರಿಯೆಯನ್ನು ತೋರಿಸುತ್ತಿದ್ದರೋ ಏನೋ. ಅವರು ನ್ಯಾಯಮಂಡಲಿಯ ಮಧ್ಯಕಾಲೀನ ಆಜ್ಞೆಗೆ ಅಂಟಿಕೊಂಡಿರುವುದನ್ನು ನೋಡಿದರೆ ಅವರು ಪರಿಸ್ಥಿತಿಯ ಬಂಧಿ ಎನ್ನಿಸುತ್ತದೆ.

ಕರ್ನಾಟಕದಲ್ಲಿ ಕೂಡ ಮುಖ್ಯಮಂತ್ರಿ ಶ್ರೀ ಬಂಗಾರಪ್ಪನವರು ಒತ್ತಡದಿಂದ ಮುಕ್ತರಾಗಿ ಇರಲಿಲ್ಲ. ಗುಟ್ಟಾಗಿ ತಮಿಳುನಾಡಿಗೆ ಕರ್ನಾಟಕ ಸರ್ಕಾರ ನೀರು ಬಿಟ್ಟಿತು ಎನ್ನುವ ಆಪಾದನೆ ಮುಖ್ಯಮಂತ್ರಿಯವರಿಗೆ ಭಾರಿ ಸಂದಿಗ್ಧವಾಯಿತು. ಮಂಡ್ಯದ ರ್‍ಯಾಲಿಯ ನಿರ್ಧಾರಕ್ಕೆ ರಾಜಕೀಯ ಉದ್ದೇಶಗಳನ್ನು ಆರೋಪಿಸುವುದು ಉಚಿತವಾಗದಿರಬಹುದು. ಆಡಳಿತ ಪಕ್ಷದವರೂ ಸೇರಿ ಸರ್ವಪಕ್ಷಗಳವರೂ ಭಾಗವಹಿಸಿದ್ದ ಸಭೆ ಅದು. ಆದರೂ ಮಂಡ್ಯ ರ್‍ಯಾಲಿಯ ರಾಜಕೀಯ ಆಯಾಮವನ್ನು ಬಂಗಾರಪ್ಪರವರು ನಿರ್ಲಕ್ಷಿಸುವಂತಿರಲಿಲ್ಲ. ಅದು ರಾಜಕೀಯವಾಗಿ ತುಂಬ ಸೂಕ್ಷ್ಮವಾದ ಪ್ರಶ್ನೆ.

ಕಳೆದ ಒಂದು ವರ್ಷದ ವಿದ್ಯಮಾನಗಳನ್ನು ನೋಡಿದರೆ ಈ ರಾಜಕೀಯ ಅಂಶಗಳಿಂದಾಗಿಯೋ ಏನೋ ಕೇಂದ್ರದ ಅಂದರೆ ಪ್ರಧಾನಿಯ ಪ್ರಭಾವವೂ ಈ ವಿಷಯದಲ್ಲಿ ಸೀಮಿತವಾದಂತೆ ಕಂಡುಬರುತ್ತದೆ. ಕಳೆದ ಫೆಬ್ರವರಿ 17ರಂದು ಸಂಬಂಧಪಟ್ಟ ಮುಖ್ಯಮಂತ್ರಿಗಳ ಸಭೆಯೇನೋ ಪ್ರಧಾನಿ ಶ್ರೀ ನರಸಿಂಹರಾವ್ ಅವರ ಪ್ರಯತ್ನದಿಂದಾಗಿ ನಡೆಯಿತು. ಆದರೆ ಆ ಸಭೆಯಲ್ಲಿ ಪರಿಹಾರ ಕಂಡುಹಿಡಿಯಲು ಗಂಭೀರವಾದ ಪ್ರಯತ್ನವೇ ನಡೆಯಲಿಲ್ಲ. ತಮಿಳುನಾಡಿನ ಮುಖ್ಯಮಂತ್ರಿ ಆ ಸಭೆಯನ್ನು ವ್ಯರ್ಥ ಎಂದು ಬಣ್ಣಿಸುವಷ್ಟು ದೂರ ಹೋದರು. ಆ ಸಭೆ ನಡೆದ ಹಿನ್ನೆಲೆಯೇ ಆ ಸಭೆಯನ್ನು ವ್ಯರ್ಥಗೊಳಿಸಿತ್ತು.

ಕಾವೇರಿ ಸಮನ್ವಯ ಸಮಿತಿಯು ಒಡ್ಡಿದ್ದ ರಾಜೀನಾಮೆಯ ಬೆದರಿಕೆಯ ನೆರಳಿನಲ್ಲಿ ಫೆಬ್ರವರಿ ಸಭೆ ನಡೆಯಿತು. ಫೆಬ್ರವರಿ ಹತ್ತೊಂಬತ್ತರೊಳಗೆ ಕಾವೇರಿ ಜಲ ವಿವಾದಕ್ಕೆ ಪರಿಹಾರ ಕಂಡುಹಿಡಿಯಲು ಪ್ರಯತ್ನ ನಡೆಯದಿದ್ದರೆ ಶಾಸಕರು ರಾಜೀನಾಮೆ ನೀಡುವ ಬೆದರಿಕೆಯನ್ನು ಸಮನ್ವಯ ಸಮಿತಿ ಒಡ್ಡಿತ್ತು. ಅಂಥ ಸಾಧ್ಯತೆಯನ್ನು ತಪ್ಪಿಸಲು, ಬೀಸುವ ದೊಣ್ಣೆಯನ್ನು ತಪ್ಪಿಸಿಕೊಳ್ಳಲು ಗಡುವು ಮುಗಿಯುವುದಕ್ಕೆ ಎರಡು ದಿನ ಮುಂಚೆ ಆ ಸಭೆಯನ್ನು ನಡೆಸಲಾಯಿತು. ಆದೊಂದು ಶಾಸ್ತ್ರವಷ್ಟೇ ಆಯಿತು.

ಸಂಬಂಧಪಟ್ಟವರೆಲ್ಲರ ಧೋರಣೆ ಬದಲಾದ ಹೊರತು ನೈಜವಾದ, ಪರಿಣಾಮಕಾರಿಯಾದ ಪರಿಹಾರ ಸಾಧ್ಯವೇ ಇಲ್ಲ. ಕೊಟ್ಟು ತೆಗೆದುಕೊಳ್ಳುವ ಪರಿಹಾರವೇ ಆಗಬೇಕು.

ಅಂಥ ಪರಿಹಾರಕ್ಕಾಗಿ ಪ್ರಧಾನಿ ಶ್ರೀ ನರಸಿಂಹರಾವ್ ಅವರು ಪ್ರಯತ್ನ ನಡೆಸಿದ್ದರು. ಮುಂದಿನ ವಾರಗಳು ಅಥವಾ ತಿಂಗಳುಗಳಲ್ಲಿ ಸರ್ವ ಸಮ್ಮತ ಪರಿಹಾರ ಸಾಧ್ಯವಾಗುತ್ತೆನ್ನುವ, ನಿರೀಕ್ಷೆ ಈ ಲೇಖನ ಬರೆದ ಸೆಪ್ಟಂಬರ್ ತಿಂಗಳಿನಲ್ಲಿ ಇತ್ತು.

* * *

## ಕರ್ನಾಟಕಕ್ಕೆ ಕಾಲಾನುಗತಿಕವಾಗಿ ಕಾವೇರಿ ನೀರಿನ ಒಪ್ಪಂದಗಳಿಂದ ಆಗಿರುವ ಅನ್ಯಾಯವನ್ನು ಕುರಿತು ಅಂಕಿಅಂಶಗಳ ವಿವರ

### ತಮಿಳುನಾಡಿನ ಲಭ್ಯವಿರುವ ಜಲಸಂಪನ್ಮೂಲಗಳು.

ಕರ್ನಾಟಕದ ಜಲಾಶಯಗಳಿಂದ ಬಿಡುಗಡೆಯಾಗುವ ನೀರು ಹಾಗೂ ಮೆಟ್ಟೂರು ಅಣೆಕಟ್ಟೆಯ ಮೇಲ್ ಪ್ರಾಂತ್ಯದಿಂದ ಹರಿದು ಬರುವ ನೀರಿನ ಜೊತೆಗೆ, ತಮಿಳುನಾಡಿಗೆ ಕೊಲೆರೂನ್ ನದಿಯ ಕೆಳ ಅಣೆಕಟ್ಟೆಯವರೆಗಿನ ತನ್ನದೇ ಆದ ಜಲಾನಯನ ಪ್ರದೇಶಗಳಿಂದ 252 ಟಿ.ಎಂ.ಸಿ. ನೀರು ಹರಿದುಬರುತ್ತದೆ. ಕೊಲೆರೂನ್ ಅಣೆಕಟ್ಟಿನ ದಕ್ಷಿಣ ಭಾಗದಲ್ಲಿನ ನದಿ ಮುಖಜ ಭೂಮಿಯಲ್ಲಿ 129 ಟಿ.ಎಂ.ಸಿ. ಅಂತರ್ಜಲ ದೊರೆಯುತ್ತದೆಂದು ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮ ವರದಿಯಲ್ಲಿ ಅಂದಾಜು ಮಾಡಿದೆ. ಕೊಲೆರೂನ್‌ನಿಂದ ಉತ್ತರಕ್ಕಿರುವ ನದಿ ಮುಖಜ ಭೂಮಿಯಲ್ಲಿ 21 ಟಿ.ಎಂ.ಸಿ. ಅಂತರ್ಜಲ ದೊರೆಯುತ್ತದೆ ಎಂದು ಅಂದಾಜು ಮಾಡಲಾಗಿದೆ. ಈ ಮೇಲಿನ ಮೂಲಗಳಲ್ಲದೆ, ತಮಿಳುನಾಡಿನ ನದಿ ಮುಖಜ ಭೂಮಿಯ ಮೇಲೆ ಸುಮಾರು 328 ಟಿ.ಎಂ.ಸಿ. ಯಷ್ಟು ಮಳೆ ಬೀಳುತ್ತದೆ. ಈ ಮಳೆ ನೀರನ್ನು ಆಧುನಿಕ ಕೃಷಿ ವಿಧಾನಗಳ ಅಳವಡಿಕೆ ಹಾಗೂ ಅಂತರ್ಜಲದ ಸೂಕ್ತ ಬಳಕೆಯಿಂದ ಮುಂಗಾರು ಮಳೆಯನ್ನು ಅವಲಂಬಿಸಿದ್ದರೆ, ತಮಿಳುನಾಡು ಈಶಾನ್ಯ ಮುಂಗಾರು ಮಳೆಯ ಏಕೈಕ ಫಲಾನುಭವಿ. ಆದುದರಿಂದ ಕಾವೇರಿ ಕಣಿವೆಯ ಮೇಲ್ಗಡೆ ಇರುವ ಕರ್ನಾಟಕಕ್ಕಿಂತಲೂ ತಮಿಳುನಾಡು ಹೆಚ್ಚಿನ ಜಲಸಂಪನ್ಮೂಲವನ್ನು ಪಡೆದಿದೆ.

### ಕಾವೇರಿ ಕಣಿವೆಯಲ್ಲಿನ ಬರಪೀಡಿತ ಪ್ರದೇಶಗಳು

1972ರ ನೀರಾವರಿ ಆಯೋಗದ ವರದಿಯು ಕಾವೇರಿ ಕಣಿವೆಯ ಪ್ರದೇಶಗಳಲ್ಲಿನ ಬರಪೀಡಿತ ಪ್ರದೇಶಗಳನ್ನು ಗುರುತಿಸಿದೆ. ಈ ವರದಿಯು ಕರ್ನಾಟಕದ ಕಾವೇರಿ ಕಣಿವೆಯ ಪ್ರದೇಶದಲ್ಲಿನ ಇಪ್ಪತ್ತೆಂಟು ತಾಲೂಕುಗಳ 21,870 ಚದರ ಕಿ.ಮೀ. ಪ್ರದೇಶವು ಬರಪೀಡಿತ ಪ್ರದೇಶವೆಂದು ಉಲ್ಲೇಖಿಸಿದೆ. ಅಂದರೆ ಇದು ಕಾವೇರಿ ಕಣಿವೆಯ ಪ್ರದೇಶದಲ್ಲಿ ಶೇ. 63.8 ಭಾಗ. ಇದೇ ಆಯೋಗವು ತಮಿಳುನಾಡಿನ

ಕಾವೇರಿ ಕಣಿವೆಯ ಪ್ರದೇಶದಲ್ಲಿ ಬರುವ ಹದಿನಾಲ್ಕು ತಾಲೂಕುಗಳ 12,790 ಚದರ ಕಿ.ಮೀ. ಭಾಗವನ್ನು ಬರಪೀಡಿತ ಎಂದು ಗುರುತಿಸಿದೆ. ಆದುದರಿಂದ ತಮಿಳುನಾಡಿಗೆ ಹೋಲಿಸಿದರೆ ಕರ್ನಾಟಕದಲ್ಲಿ ಆ ರಾಜ್ಯದ ಎರಡರಷ್ಟು ಬರಪೀಡಿತ ಪ್ರದೇಶಗಳು ಇವೆ. ಬರಪೀಡಿತ ಪ್ರದೇಶದ ಜನರನ್ನು ಸಂಕಷ್ಟದಿಂದ ಪಾರುಮಾಡಲು ಆಗತ್ಯವಾದ ಎಲ್ಲಾ ನೀರಾವರಿ ಸೌಲಭ್ಯವನ್ನು ಒದಗಿಸುವುದು ಯಾವುದೇ ರಾಜ್ಯದ ಮೂಲಭೂತ ಕರ್ತವ್ಯ.

## ತಮಿಳುನಾಡು ಪೋಲು ಮಾಡುತ್ತಿರುವ ನೀರು

ಪುರಾತನ ಕಾಲದ ನೀರಾವರಿ ಪದ್ಧತಿಗಳನ್ನು ಅನುಸರಿಸುತ್ತಾ ತಮಿಳುನಾಡು ನದಿ ಮುಖಜ ಭೂಮಿಯಲ್ಲಿನ ಸಾಕಷ್ಟು ಪ್ರಮಾಣದ ನೀರನ್ನು ವ್ಯರ್ಥಆಗಿ ಸಮುದ್ರ ಸೇರುವಂತೆ ಮಾಡುತ್ತಿದೆ. ಇದರಿಂದಾಗಿ ನೀರನ ಸದುಪಯೋಗದಿಂದ ಕರ್ನಾಟದ ರೈತರನ್ನು ವಂಚಿಸಿದಂತಾಗಿದೆ. ಕಾವೇರಿ ಸತ್ಯಶೋಧನಾ ಸಮಿತಿ ಹಾಗೂ ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮ ವರದಿ ನೀಡಿರುವ ಮಾಹಿತಿಯ ಪ್ರಕಾರ ತಮಿಳುನಾಡಿನಲ್ಲಿ 340 ಟಿ.ಎಂ.ಸಿ. ನೀರು ವ್ಯರ್ಥವಾಗಿ ಸಮುದ್ರ ಸೇರುತ್ತಿದೆ. ಆದರ ವಿವರಗಳು ಇಂತಿವೆ:

| | |
|---|---|
| 1. ಕೊಲೆರೂನ್ ಕೆಳ ಅಣೆಕಟ್ಟಿನಿಂದ ಹರಿದು ಹೋಗುವ ಹೆಚ್ಚುವರಿ ನೀರು | 102 ಟಿ.ಎಂ.ಸಿ. |
| 2. ಟೈಲ್ ಎಂಡ್ ರೆಗ್ಯುಲೇಟರ್‌ಗಳಿಂದ ಆಗುವ ಸೋರಿಕೆ | 88 * |
| 3. ನದಿ ಮುಖಜ ಭೂಮಿಯಲ್ಲಿನ ಅಂತರ್ಜಲ | 150 ಟಿ.ಎಂ.ಸಿ. |
| ಒಟ್ಟು | 340 ಟಿ.ಎಂ.ಸಿ. |

* (ಟಿಪ್ಪಣಿ : ನದಿ ಮುಖಜ ಭೂಮಿಯಲ್ಲಿನ 36 ಪ್ರಧಾನ ಶಾಖೆಗಳಿದ್ದು ಆ ಪೈಕಿ 28 ಟೈಲ್ ಎಂಡ್ ರೆಗ್ಯುಲೇಟರ್‌ಗಳಲ್ಲಿ ಆಗುವ ಸೋರಿಕೆಯನ್ನು ಮಾತ್ರ ಅಳತೆ ಮಾಡಲಾಗಿದೆ. ಉಳಿದ ಅಳತೆ ಮಾಡದ ಶಾಖೆಗಳ ಸೋರಿಕೆಯನ್ನು ಸೇರಿಸಿದರೆ ಅದು 117 ಟಿ.ಎಂ.ಸಿ. ಯಷ್ಟಾಗುತ್ತದೆ.)

ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮ ವರದಿ ಹಾಗೂ ಕಾವೇರಿ ಸತ್ಯಶೋಧನಾ ಸಮಿತಿಯು (ಭಾರತ ಸರ್ಕಾರದಿಂದ ರಚಿತವಾದ) ನೀಡಿರುವ ವರದಿ, ಇವುಗಳಲ್ಲಿ ತಮಿಳುನಾಡು ಪೋಲು ಮಾಡುತ್ತಿರುವ ನೀರಿನ ಬಗ್ಗೆ ಸಾಕ್ಷ್ಯಾಧಾರಗಳಿವೆ. ಪೋಲಾಗುತ್ತಿರುವ ಈ ನೀರಿನ ಪ್ರಮಾಣ ತಗ್ಗಿಸಲು ತಜ್ಞ ಪ್ರಾಧಿಕಾರಗಳು ಅನೇಕ ಸಲಹೆಗಳನ್ನು ನೀಡಿವೆ. ಆದರೆ ಅವುಗಳನ್ನು ತಮಿಳುನಾಡು ಈಗಲೂ ಜಾರಿಮಾಡುತ್ತಿಲ್ಲ. ತಮಿಳುನಾಡು ಪೋಲು ಮಾಡುತ್ತಿರುವ ನೀರಿನ ಪ್ರಮಾಣ ಕಾವೇರಿ ಕಣಿವೆಯ ಮೇಲಿನ ರಾಜ್ಯವಾದ ಕರ್ನಾಟಕಕ್ಕೆ ಮಾರಕವಾಗಿದೆ.

**ನೀರು ಪೋಲು ಮಾಡುವುದನ್ನು ಕಡಿಮೆ ಮಾಡಲು ಸೂಚಿಸಲಾದ ಕ್ರಮಗಳು.**

ಅ. ನಾಲೆ ವ್ಯವಸ್ಥೆಯನ್ನು ಆಧುನಿಕಗೊಳಿಸುವುದು ಹಾಗೂ ವೈಜ್ಞಾನಿಕ ನಿರ್ವಹಣೆ.

ಆ. ನದಿ ಮುಖಜ ಭೂಮಿಯಲ್ಲಿ ಮೇಲ್ಮೈ ನೀರು ಹಾಗೂ ಅಂತರ್ಜಲದ ಸೂಕ್ತ ಸಂಯುಕ್ತ ಬಳಕೆ.

ಇ. ಕಾವೇರಿ ಹಾಗೂ ಅದರ ಉಪನದಿಗಳ ನದಿ ಮುಖಜ ಭೂಮಿಯಲ್ಲಿ ಕೊನೆಯ ಕವಲಿನವರಿಗೂ ಜಲಾಗಾರಗಳ ನಿರ್ಮಾಣ.

ಈ. ಜಲಾಶಯಗಳ ಸಮಗ್ರ ನಿರ್ವಹಣೆ

ಉ. ಗರಿಷ್ಠ ಬೆಳೆ ವಿಧಾನದ ಆಧಾರದ ಮೇಲೆ ನೀರಾವರಿ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸುವುದು.

* * *

ಹತ್ತೊಂಬತ್ತನೇ ಶತಮಾನದಲ್ಲಿ ಮಾಡಿಕೊಂಡ ಒಪ್ಪಂದಗಳ ಷರತ್ತುಗಳನ್ನು ಪೂರೈಸಬೇಕೆಂದು ಒತ್ತಾಯಿಸುತ್ತಾ ತಮಿಳುನಾಡು ಆಗಾಗ್ಗೆ ಅಡ್ಡಗಾಲು ಹಾಕುತ್ತಿದ್ದುದರಿಂದ, ಕರ್ನಾಟಕದಲ್ಲಿ ನೀರಾವರಿ ಕಾರ್ಯಕ್ರಮ ಕುಂಟುತ್ತಾ ಸಾಗಿತು. ಇದರ ಪರಿಣಾಮವಾಗಿ 1924ರಲ್ಲಿ ಕರ್ನಾಟಕದಲ್ಲಿದ್ದ 3.15 ಲಕ್ಷ ಎಕರೆಗಳ ನೀರಾವರಿ ಪ್ರದೇಶವು 1972ರ ವೇಳೆಗೆ 6.6 ಲಕ್ಷ ಎಕರೆಗಳಿಗೆ ಮಾತ್ರ ವಿಸ್ತಾರವಾಯಿತು. ಕರ್ನಾಟಕದ ಈ ನಿಧಾನಗತಿಯ ಪ್ರಗತಿಗೆ ವ್ಯತಿರಿಕ್ತವಾಗಿ ಕಾವೇರಿ ಕಣಿವೆ ಪ್ರದೇಶದಲ್ಲಿ ಶೇ. 31.9 ರಷ್ಟು ನೀರನ್ನು ಮಾತ್ರ ಒದಗಿಸುವ ತಮಿಳನಾಡು 1924 ರಲ್ಲಿ 14.5 ಲಕ್ಷ ಎಕರೆ ಇದ್ದ ತನ್ನ ನೀರಾವರಿ ಭೂಮಿಯನ್ನು 1972ರ ವೇಳೆಗೆ 22 ಲಕ್ಷ ಎಕರೆಗಳಿಗೆ ವಿಸ್ತರಿಸಿತು. ಇದರಿಂದಾಗಿ ಅದರ ಬೆಳೆ ಪ್ರದೇಶ 28.0 ಲಕ್ಷ ಎಕರೆಗಳಷ್ಟಾಗಿತ್ತು.

1974 ರಲ್ಲಿ ಭಾರತ ಸರ್ಕಾರದ ಅಡಿಷನಲ್ ಕಾರ್ಯದರ್ಶಿ ಶ್ರೀ ಸಿ. ಸಿ. ಪಟೇಲ್ ಅವರು ನಡೆಸಿದ ಅಧ್ಯಯನದ ಪ್ರಕಾರ 1972ರ ವೇಳೆಗೆ ತಮಿಳುನಾಡು 489 ಟಿ.ಎಂ.ಸಿ. ನೀರನ್ನು ಬಳಸಿಕೊಳ್ಳುತ್ತಿದ್ದರೆ, ಕರ್ನಾಟಕವು 177 ಟಿ.ಎ.ಸಿ. ನೀರನ್ನು ಮಾತ್ರ ಬಳಸಿಕೊಳ್ಳುತ್ತಿತ್ತು. ಈ ರೀತಿ ಕಾವೇರಿ ಕಣಿವೆಗೆ ಶೇ. 50ಕ್ಕೂ ಹೆಚ್ಚು ನೀರನ್ನು ಸಲ್ಲಿಸುವ ಕರ್ನಾಟಕವು 1972ರಲ್ಲಿ ಕೇವಲ ಶೇ. 20ರಷ್ಟು ನೀರನ್ನು ಮಾತ್ರ ಬಳಸಿಕೊಳ್ಳುತ್ತಿತ್ತು.

ಕರ್ನಾಟಕ ರಾಜ್ಯದಲ್ಲಿ ಉಂಟಾದ ನಿಧಾನಗತಿಯ ನೀರಾವರಿ ಅಭಿವೃದ್ಧಿಗೆ ಅಂದಿನ ಮೈಸೂರು ಸಂಸ್ಥಾನ ಮತ್ತು ಬ್ರಿಟಿಷ್ ಪ್ರೆಸಿಡೆನ್ಸಿ ಆಫ್ ಮದ್ರಾಸ್ ಆಡಳಿತಕ್ಕೊಳಪಟ್ಟಿದ್ದ ಮದರಾಸು ಇವುಗಳ ನಡುವೆ ಆಯಿತೆಂದು ಹೇಳಲಾದ 1924ರ ಒಪ್ಪಂದಗಳೇ ನೇರ ಕಾರಣ.

ಈ ಒಪ್ಪಂದಗಳ ಹೇರಿಕೆ ಕರ್ನಾಟಕದ ಅಂದಿನ ಸಾಮಂತ ರಾಜರ ಮೇಲೆ ಸೇಡು ತೀರಿಸಿಕೊಳ್ಳಲು ಬ್ರಿಟಿಷ್ ಸರ್ಕಾರ ನಿಯೋಜಿಸಿದ ತಂತ್ರ ಎಂಬುದು ಸ್ಪಷ್ಟವಾಗುತ್ತದೆ. ಬ್ರಿಟಿಷ್ ಸರ್ಕಾರವು ಕರ್ನಾಟಕ ಸಂಸ್ಥಾನದ ಮೇಲೆ ಮೇಲಿನ ಒಪ್ಪಂದಗಳನ್ನು ಹೇರಿದ್ದರಿಂದ ಕಾವೇರಿ ನೀರಿನಲ್ಲಿ ನ್ಯಾಯೋಚಿತ ಪಾಲನ್ನು ಬಳಸಿಕೊಳ್ಳುವ ತಮ್ಮ ನ್ಯಾಯಬದ್ಧ ಹಕ್ಕಿನಿಂದ ಕರ್ನಾಟಕ ರೈತರನ್ನು ವಂಚಿಸಿದಂತಾಯಿತು. ಆದ್ದರಿಂದ ಸದರಿ ಒಪ್ಪಂದಗಳು ಮೊದಲಿನಿಂದಲೂ ಊರ್ಜಿತವಾದುದಾಗಿರಲಿಲ್ಲ ಮತ್ತು 1924 ರ ಒಪ್ಪಂದ 1974ಕ್ಕೆ ಮುಗಿದಿರುವ ಕಾರಣ ಆ ತರುವಾಯ ಯಾವುದೇ ಸಂದರ್ಭದಲ್ಲೂ ಪಾಲಿಸುವಂಥದ್ದಾಗಿಲ್ಲ.

ಅಂದಿನ ಸಾಮಂತ ಸಂಸ್ಥಾನದ ರಾಜಕೀಯ ಮತ್ತು ಆರ್ಥಿಕ ದೌರ್ಬಲ್ಯಗಳನ್ನು ವಸಾಹತುಶಾಹಿ ಸರ್ಕಾರದ ಮೂಲಕ ಅಸ್ವಾಭಾವಿಕ ನಿಬಂಧನೆಗಳನ್ನು ಹೇರಿ ತಮಿಳುನಾಡು ಮೊದಲಿನಿಂದಲೂ ಹೆಚ್ಚು ನೀರನ್ನು ಬಳಸಿಕೊಳ್ಳುತ್ತಾ ಬಂದಿದೆ. ಇದರಿಂದಾಗಿ 1971ರ ವೇಳೆಗೆ ತಮಿಳುನಾಡಿನಲ್ಲಿ ಕರ್ನಾಟಕದ ನೀರಾವರಿ ಪ್ರದೇಶದ ನಾಲ್ಕರಷ್ಟು ಅಭಿವೃದ್ಧಿಯಾಗಿತ್ತು. ನೀರಾವರಿ ಅಭಿವೃದ್ಧಿಯಲ್ಲಿ ಕರ್ನಾಟಕಕ್ಕೆ ಆಗಿರುವ ಅನ್ಯಾಯವನ್ನು ಕೆಳಗಿನ ಕೋಷ್ಟಕದಲ್ಲಿರುವ ಅಂಕಿ–ಅಂಶಗಳು ಸ್ಪಷ್ಟಪಡಿಸುತ್ತವೆ.

## ಕೋಷ್ಟಕ

### ಕಾವೇರಿ ಕಣಿವೆ ಪ್ರದೇಶದ ವಿವಿಧ ರಾಜ್ಯಗಳಲ್ಲಿ ಅಭಿವೃದ್ಧಿಯಾಗಿರುವ ನೀರಾವರಿ ತುಲನಾತ್ಮಕ ಪಟ್ಟಿ

(ಸಾವಿರ ಹೆಕ್ಟೇರುಗಳಲ್ಲಿ ಆಯಕಟ್ಟು)

| ವರ್ಷ | ರಾಜ್ಯದ ಹೆಸರು | | | |
|---|---|---|---|---|
| | ಕರ್ನಾಟಕ | ಕೇರಳ | ತಮಿಳುನಾಡು | ಪಾಂಡಿಚೆರಿ |
| 1901 | 124.0 | – | 577.2 | 11 |
| 1928 | 126.0 | – | 578.0 | 11 |
| 1956 | 197.2 | 1.0 | 776.0 | 11 |
| 1971 | 273.0 | 2.1 | 884.0 | 11 |
| 1990 | 453.4 | ಎನ್.ಎ. | 918.0 | 11 |

**ನ್ಯಾಯಪಂಚಾಯಿತಿಯು 25.6.1991ರ ತನ್ನ ಆದೇಶದಲ್ಲಿ ನೀಡಿದ ನಿರ್ದೇಶನ :**

1. ವರ್ಷದ ಜೂನ್‌ನಿಂದ ಮೇ ವರೆಗೆ ತಮಿಳುನಾಡಿನ ಮೆಟ್ಟೂರು ಜಲಾಶಯದಲ್ಲಿ 205 ಟಿ.ಎಂ.ಸಿ. ನೀರು ಇರುವಂತೆ, ಕರ್ನಾಟಕವು ತನ್ನ ಜಲಾಶಯಗಳಿಂದ ನೀರು ಬಿಡುಗಡೆ ಮಾಡಬೇಕು.

2. ನ್ಯಾಯಪಂಚಾಯಿತಿಯು ಪ್ರತಿ ತಿಂಗಳೂ ಬಿಡಬೇಕಾದ ನೀರಿನ ಪ್ರಮಾಣವನ್ನು ಸೂಚಿಸಿದೆ.

3 ನೀರನ್ನು ನಾಲ್ಕು ಸಮಾನ ಕಂತುಗಳಲ್ಲಿ ನಾಲ್ಕು ವಾರಗಳಲ್ಲಿ ಬಿಡಬೇಕು.

4. ಯಾವುದೇ ವಾರದಲ್ಲಿ ನಿರ್ದಿಷ್ಟ ಪ್ರಮಾಣಕ್ಕಿಂತ ಕಡಿಮೆ ನೀರು ಬಿಟ್ಟರೆ ಆ ಕೊರತೆಯನ್ನು ಮುಂದಿನ ವಾರದಲ್ಲಿ ತುಂಬಬೇಕು.

5. ಕರ್ನಾಟಕವು ತನ್ನ ನೀರಾವರಿ ಭೂಮಿಯನ್ನು 11.2 ಲಕ್ಷ ಹೆಕ್ಟೇರುಗಳಿಗಿಂತ ಹೆಚ್ಚಿಸಬಾರದು.

6. ತಮಿಳುನಾಡು ಸರ್ಕಾರವು ಪಾಂಡಿಚೇರಿಗೆ 6 ಟಿ.ಎಂ.ಸಿ. ನೀರನ್ನು ಬಿಡಬೇಕು.

7. ಈ ಆದೇಶವು ನ್ಯಾಯಪಂಚಾಯಿತಿ ನೀಡುವ ಅಂತಿಮ ತೀರ್ಪಿನವರೆಗೂ ಜಾರಿಯಲ್ಲಿರುತ್ತದೆ.

ನ್ಯಾಯ ಪಂಚಾಯಿತಿ ಹೊರಡಿಸಿದ ಈ ಮಧ್ಯಂತರ ಆದೇಶವು ಕಾನೂನು ಹಾಗೂ ತಾಂತ್ರಿಕ ಲೋಪಗಳಿಂದ ಕೂಡಿದೆಯೆಂದು ಕರ್ನಾಟಕ ಸರ್ಕಾರವು ಭಾವಿಸಿತು.

**ಕಾನೂನು ಲೋಪಗಳು**

* ಈ ಆದೇಶವನ್ನು ಯಾವುದೇ ಸಮರ್ಥನೆ ಇಲ್ಲದೆ ಹೊರಡಿಸಲಾಗಿದೆ.

* ಕರ್ನಾಟಕದ ಯೋಜನೆಗಳಿಗೆ ಸಂಬಂಧಿಸಿದಂತೆ ಸೂಕ್ತ ಹಾಗೂ ನಿರ್ಣಾಯಕ ಕಾನೂನು ವಿವರಗಳನ್ನು ಪರಿಗಣಿಸದೆಯೇ ಆದೇಶವನ್ನು ನೀಡಲಾಗಿದೆ.

* ಇದು ಜಲವಿವಾದ ಕಾಯ್ದೆಗೆ ಅನುಗುಣವಾದ ಆದೇಶವಲ್ಲ.

* ಕಣಿವೆ ಪ್ರದೇಶದಲ್ಲಿನ ನೀರಿನ ಲಭ್ಯತೆ, ಕಣಿವೆ ಪ್ರದೇಶದ ಅಗತ್ಯತೆ, ಬಳಕೆ ಹಾಗೂ ಇತರ ಸುಸಂಗತ ವಿಷಯಗಳನ್ನು ಗಣನೆಗೆ ತೆಗೆದುಕೊಳ್ಳದೇ ನೀಡಿರುವ ಮಧ್ಯಂತರ ಪರಿಹಾರ ಆದೇಶವು ಸ್ವೇಚ್ಛಾಚಾರಿಯಾಗಿದೆ.

* ಕರ್ನಾಟಕದಲ್ಲಿ ಲಭ್ಯವಾಗುವ ನೀರಿನ ಪ್ರಮಾಣವನ್ನು ಗಣನೆಗೆ ತೆಗೆದುಕೊಂಡಿಲ್ಲವಾದ್ದರಿಂದ ಇದು ಸ್ವೇಚ್ಛಾಚಾರಿ ಆದೇಶವಾಗಿದೆ.

* ನೀರನ್ನು ಬಿಡುಗಡೆ ಮಾಡುವುದು ಪ್ರಾಯೋಗಿಕವಲ್ಲದ ಹಾಗೂ ಅವಾಸ್ತವ ವೇಳಾ ಪಟ್ಟಿಯನ್ನು ಆಧರಿಸಿದೆ.

ಕರ್ನಾಟಕದಲ್ಲಿ ಇಲ್ಲ. ಆದರೆ ತಮಿಳುನಾಡಿನ ಮೆಟ್ಟೂರು ಜಲಾಶಯ ಹೆಚ್ಚುವರಿ ನೀರನ್ನು ಸಂಗ್ರಹಿಸಿಟ್ಟುಕೊಳ್ಳುವ ಸಾಮರ್ಥ್ಯ ಪಡೆದಿದೆ.

* ಮೆಟ್ಟೂರು ಜಲಾಶಯದಿಂದ ಕೆಳಗಡೆ ಲಭ್ಯವಾಗುವ ಹೆಚ್ಚುವರಿ ನೀರನ್ನು ಮತ್ತು ಪೋಲಾಗುವ ನೀರನ್ನು ಗಣನೆಗೆ ತೆಗೆದುಕೊಂಡಿಲ್ಲ. ಮಳೆಗಾಲಗಳಲ್ಲಿ ಮೆಟ್ಟೂರು ಜಲಾಯದ ಮೇಲ್ಭಾಗದ ಜಲಾನಯನ ಪ್ರದೇಶದಲ್ಲಿ ವಿಫುಲವಾಗಿ ಅದರ ಕೆಳಗಿನ ಪ್ರದೇಶದಲ್ಲಿ ಒಳ್ಳೆ ಮಳೆಯಾಗುವ ಸಂದರ್ಭಗಳೂ ಉಂಟು.

* ಕರ್ನಾಟಕದ ನೀರಾವರಿ ಭೂಮಿಯ ಮೇಲೆ ಷರತ್ತು ವಿಧಿಸಿರುವುದರಿಂದ ಬರಪೀಡಿತ ಪ್ರದೇಶಗಳ ಅಭಿವೃದ್ಧಿ ಮತ್ತು ಈಗಾಗಲೇ ಕೈಗೊಂಡಿರುವ ಯೋಜನೆಗಳನ್ನು ಉಪೇಕ್ಷಿಸಿದಂತಾಗಿದೆ. 1990 ರಂದು ಇದ್ದಂತೆ 11.2 ಲಕ್ಷ ಎಕರೆಗಳಿಗೆ ನಿರ್ಬಂಧಿಸಲಾಗಿದೆ. ಜಲಾಶಯಗಳು ಬಾಗೂರು—ನವಿಲೆ ಸುರಂಗ ನಾಲೆ, ಕಣಿವೆ ಮೇಲ್ಗಾಲುವೆ ಮುಂತಾದ ಉದ್ದನೆಯ ನಾಲೆಗಳ ಕಾಮಗಾರಿಗಳು ಪೂರ್ಣಗೊಂಡ ನಂತರ ಇನ್ನಷ್ಟು ಪ್ರದೇಶಗಳು ನೀರಾವರಿ ಸೌಲಭ್ಯ ಪಡೆಯುತ್ತವೆ. ನೀರಾವರಿ ಸೌಲಭ್ಯ ಪಡೆಯುವ ಎಲ್ಲಾ ಪ್ರದೇಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿತ್ತು.

* ರಾಜ್ಯಗಳ ಯಥಾಸ್ಥಿತಿಯನ್ನು ಕಾಯ್ದಿಡುವ ಹಾಗೂ ರಾಜ್ಯಗಳ ನಡುವಿನ ಸಮತೋಲವನ್ನು ಕಾಪಾಡುವ ವಿಶಾಲ ಆಧಾರದ ಮೇಲೆ ರಚಿತವಾಗಿರುವ ನ್ಯಾಯ ಪಂಚಾಯ್ತಿಯು ತನ್ನ ಆದೇಶದ ಮೂಲಕ ಮೂಲತತ್ವಗಳಿಗೆ ಬದ್ಧವಾಗಿಲ್ಲ.

* ಲಭ್ಯವಾಗುವ ನೀರು, ಉಪಯೋಗ ಮತ್ತು ಅಗತ್ಯಗಳನ್ನು ಪರಿಗಣಿಸದೆಯೇ ಆದೇಶ ಹೊರಡಿಸಲಾಗಿದೆ.

**ತೊಡಕುಗಳು –**

* ನೀರನ್ನು ಬಿಡುಗಡೆ ಮಾಡುವುದು ಸಾಧ್ಯವಾಗದು. ಏಕೆಂದರೆ ಅದು ಜಲಾಶಯಕ್ಕೆ ಹರಿದು ಬರುವ ನೀರಿನ ಪ್ರಮಾಣಕ್ಕೆ ಅನುಗುಣವಾಗಿಲ್ಲ.

* ನೀರಿನ ಬಿಡುಗಡೆ ಕರ್ನಾಟಕದ ಈಗಿರುವ ನೀರಾವರಿ ಭೂಮಿಯ ವಿಸ್ತೀರ್ಣವನ್ನು ಕುಗ್ಗಿಸುತ್ತದೆ.

* ಮೆಟ್ಟೂರಿಗೆ 205 ಟಿ.ಎಂ.ಸಿ. ನೀರು ಬಿಡುವುದರಿಂದ––

| ತಮಿಳುನಾಡಿಗೆ ಸಿಗುವ ನೀರು | | ಕರ್ನಾಟಕ ಮತ್ತು ಕೇರಳಕ್ಕೆ ಸಿಗುವ ನೀರು |
|---|---|---|
| ಮೆಟ್ಟೂರು ವರೆಗೆ | 205 ಟಿ.ಎಂ.ಸಿ. | ವರ್ಷಂಪ್ರತಿ ಸರಾಸರಿ 327 ಟಿ.ಎಂ.ಸಿ. |
| ಮೆಟ್ಟೂರಿನಿಂದ ಕೆಳಭಾಗದಲ್ಲಿ | 258 ಟಿ.ಎಂ.ಸಿ. | |
| ಅಂತರ್ಜಲ | 150 ಟಿ.ಎಂ.ಸಿ. | |
| ನದಿ ಮುಖಜ ಭೂಮಿಯ ಮಳೆಯಿಂದ | 50 ಟಿ.ಎಂ.ಸಿ. | ಅನಾವೃಷ್ಟಿ ವರ್ಷದಲ್ಲಿ 199 ಟಿ.ಎಂ.ಸಿ. |
| (ಅಂದಾಜು) ಒಟ್ಟು | 663 ಟಿ.ಎಂ.ಸಿ. | |

* ಕರ್ನಾಟಕದಲ್ಲಿ ನೀರಾವರಿ ಭೂಮಿಯ ಮೇಲೆ ನಿರ್ಬಂಧ ಹೇರುವುದು ಮಾರಕ ಪರಿಣಾಮಗಳನ್ನು ಬೀರುತ್ತದೆ.

* ಈ ವಿವಾದದ ಬಗ್ಗೆ ಅಂತಿಮ ತೀರ್ಪು ಬರುವವರೆಗೂ ಕರ್ನಾಟಕದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳು ಸ್ಥಗಿತವಾಗುತ್ತವೆ.

* ರೈತ ಸಮುದಾಯದ ಮೇಲೆ ಮಾರಕ ಪರಿಣಾಮ ಬೀರುತ್ತದೆ.

— ಕೃಪೆ

**ಕಾವೇರಿ ಜಲವಿವಾದ**
**ನೀರಾವರಿ ಇಲಾಖೆ**
**ಬೆಂಗಳೂರು**

# ತಿರುವಳ್ಳುವರ್ ಪ್ರತಿಮೆಯ ಘಟನೆ

– ಬಸವರಾಜ ಕಲ್ಗುಡಿ

ಕಾವೇರಿ ಜಲವಿವಾದದ ಘಟನೆಯ ಜೊತೆಯಲ್ಲೇ ಈ ವರ್ಷ ವಿವಾದಕ್ಕೆ ಸಿಲುಕಿದ ಇನ್ನೊಂದು ಮುಖ್ಯ ಘಟನೆಯೆಂದರೆ 'ತಿರುವಳ್ಳುವರ್' ಪ್ರತಿಮೆಯ ಸ್ಥಾಪನೆ ಕುರಿತದ್ದು. ಬೆಂಗಳೂರಿನ ಅಲಸೂರು ಕೆರೆಯ ಬಳಿ ತಿರುವಳ್ಳುವರ್ ಕವಿಯ ಮೂರ್ತಿ ಸ್ಥಾಪನೆಯಾಗಿ ಅದು ಅನಾವರಣಗೊಳ್ಳುವಾಗ ಅದಕ್ಕೆ ತೀವ್ರವಾದ ವಿರೋಧವು ಬಂತು. ಅನೇಕ ಕನ್ನಡ ಸಂಘ ಸಂಸ್ಥೆಗಳು, ಕನ್ನಡ ಶಕ್ತಿಕೇಂದ್ರ – ಮುಖ್ಯವಾಗಿ ತಿರುವಳ್ಳುವರ್ ಪ್ರತಿಮೆಯ ಅನಾವರಣದ ಬಗ್ಗೆ ತೀವ್ರ ವಿರೋಧವನ್ನು ವ್ಯಕ್ತಪಡಿಸಿದವು. ಕನ್ನಡಿಗರ ಉದ್ಯೋಗವಾಕಾಶಗಳನ್ನು ಕಸಿದು ತಮಿಳರು ಬೆಂಗಳೂರಿನಲ್ಲಿ ತಮ್ಮ ಬಲವನ್ನು ಹೆಚ್ಚಿಸುತ್ತಿರುವುದರ ಸಂಕೇತವೆಂದು ಇವು ಭಾವಿಸಿದವು. ಮಹಾನಗರ ಪಾಲಿಕೆಯಲ್ಲಿ ಈ ಪ್ರತಿಮೆಯ ಅನಾವರಣಕ್ಕೆ ತೋರಿದ ತೀವ್ರ ಕುತೂಹಲ, ಅತ್ಯಲ್ಪ ಸಮಯದಲ್ಲಿ ಅನುಮತಿಯನ್ನು ನೀಡಿದುದರ ಹಿನ್ನೆಲೆಯ ರಾಜಕಾರಣದ ಬಗ್ಗೆಯೂ ತೀವ್ರವಾದ ಆಕ್ಷೇಪಣೆಗಳು, ವಿಮರ್ಶೆಗಳು ಪ್ರಾರಂಭವಾದವು.

ಕೆಲವು ರಾಷ್ಟ್ರನಾಯಕರ, ಸಾಂಸ್ಕೃತಿಕ ವ್ಯಕ್ತಿಗಳ ಪ್ರತಿಮೆಯ ಆವರಣ ನಮ್ಮಲ್ಲಿ ಹಿಂದಾಗಲೀ, ಬಹುಶಃ ಮುಂದೆಯಾಗಲೀ ಗೊಂದಲವನ್ನಾಗಲೀ, ಗಲಭೆಯನ್ನಾಗಲೀ ಹುಟ್ಟಿಸುವುದಿಲ್ಲ. ಮಹಾತ್ಮಗಾಂಧಿ, ರವೀಂದ್ರನಾಥ ಠಾಗೂರ್, ರಾಜಾರಾಮ್‌ಮೋಹನ್‌ರಾಯ್ – ಮೊದಲಾದ ಸಾಂಸ್ಕೃತಿಕ ವ್ಯಕ್ತಿಗಳ ಮೂರ್ತಿಯ ಸ್ಥಾಪನೆಯ ಬಗ್ಗೆ ವಿರೋಧವಿರದೆ ಬೆಂಗಳೂರಿನಲ್ಲಿ 'ತಿರುವಳ್ಳುವರ್' ಪ್ರತಿಮೆ ಸ್ಥಾಪನೆಯ ಬಗ್ಗೆ ವಿರೋಧವು – ಒಂದು ಅಂಶವನ್ನು ಸ್ಪಷ್ಟಪಡಿಸುತ್ತದೆ. ತಮಿಳು ಭಾಷಿಕರು ಬೆಂಗಳೂರು ಬದುಕಿನ ಒಂದು ಅಂಗವಾಗಿದ್ದಾರೆ. ಆದರೆ ಕನ್ನಡ ಸಂಸ್ಕೃತಿಯ ಜೊತೆಗಿನ ವಿಲೀನತೆಯಲ್ಲಿ ತೀವ್ರವಾದ ಉತ್ಸಾಹವು ಕಂಡುಬರುತ್ತಿಲ್ಲ.

ಕನ್ನಡ ಬದುಕಿನ ಮುಖ್ಯ ಪ್ರವಾಹದಲ್ಲಿ ತಮಿಳರು ಒಂದಾಗಿಲ್ಲ, ಅವರು ಒಂದು ದ್ವೀಪದಂತೆ ತೋರುತ್ತಾರೆ ಎನ್ನುವುದನ್ನು ವಾದಕ್ಕಾಗಿ ಎತ್ತಿಕೊಂಡರೂ – ಈ ಸಮಸ್ಯೆಯನ್ನು ಇಷ್ಟು ಸರಳವಾಗಿ ತೀರ್ಮಾನಿಸುವಂತಿಲ್ಲ. 'ತಿರುವಳ್ಳುವರ್' ಘಟನೆ ನಮ್ಮ ಬದುಕಿನ ಸುತ್ತಲೂ ಕನ್ನಡ ಬಳಕೆಯ ಬಯಕೆಯ ಬಗ್ಗೆ ಇರುವ

ದಿಷ್ಟ ನಿರ್ಲಕ್ಷ್ಯವನ್ನೇ ಅದು ತೋರುತ್ತದೆ. ಕನ್ನಡ ಭಾಷೆಯ ಬಳಕೆ ದಿನನಿತ್ಯದ ಸಹಜ ವ್ಯವಹಾರವಾಗುವ ಲಯವು – ನಮ್ಮ ಬದುಕಿನ ಅನೇಕ ಪ್ರಮುಖ ಘಟ್ಟಗಳಲ್ಲಿ ಮಾಯವಾಗುತ್ತಿದೆ. ಸರ್ಕಾರಿ, ಅರೆ ಸರ್ಕಾರಿ ಆಡಳಿತದ ವ್ಯವಹಾರ ಪ್ರಧಾನವಾಗಿ ಇಂಗ್ಲಿಷ್ ಆಗಿದೆ. ದಿನನಿತ್ಯದ ಬಳಕೆಗೆ ಇಂಗ್ಲಿಷ್ ಅಗತ್ಯ ಮತ್ತು ಅನಿವಾರ್ಯವೆಂಬ ವಾತಾವರಣ, ನವವಸಾಹತುಶಾಹಿ ಸಂಸ್ಕೃತಿಯೊಂದರ ಪ್ರಾಬಲ್ಯಕ್ಕೆ ಕಾರಣವಾಗಿದೆ. ನಮ್ಮ ಮಧ್ಯಮವರ್ಗ ಇಂಗ್ಲಿಷ್ ಸಂಸ್ಕೃತಿಯೊಂದಕ್ಕೆ ಮಾರುಹೋಗಿರುವುದರ ಕಾರಣ – ಅದು ನಮ್ಮ ಜೀವನದ ಉತ್ಪಾದನಾ ವ್ಯವಸ್ಥೆಯಲ್ಲಿ ಬಯಕೆ ಮತ್ತು ವಿತರಣೆಯ ಮುಖ್ಯ ಅಂಗವಾಗಿದೆ. ಹೀಗಾಗಿ ನಮ್ಮ ಕನ್ನಡಪರ ಚಳುವಳಿಗಳಲ್ಲಿ ಗಲಾಟೆ, ಹಿಂಸೆಗಳು ನಡೆದಿದ್ದರೆ ಅದು ಬಹುಪಾಲು ಇಂಗ್ಲಿಷ್‌ನ ವಿರುದ್ಧವಾಗಿರುತ್ತದೆ. ಕಾವೇರಿ ಜಲವಿವಾದದ ಹಿಂದೆ ಎದ್ದ ಆಕ್ರೋಶದಲ್ಲಿ ಜನರ ತೀವ್ರವಾದ ಪ್ರತಿಕ್ರಿಯೆಯು ಇಂಗ್ಲಿಷ್‌ನ ವಿರುದ್ಧವೂ ಇತ್ತು ಎನ್ನುವುದನ್ನು ಗಮನಿಸಬೇಕು. ಕನ್ನಡಿಗರಲ್ಲೇ ಉದ್ಭವವಾಗಿರುವ ಇಂಗ್ಲಿಷ್ ವಸಾಹತು ಸಂಸ್ಕೃತಿಯ ವಿರುದ್ಧ ನಡೆದ ಪ್ರತಿಕ್ರಿಯೆ ಎಂದು ಇದನ್ನು ಹೇಳಬಹುದು. ಹೀಗಾಗಿ ಕರ್ನಾಟಕದ ತಮಿಳರು ಕನ್ನಡ ಸಂಸ್ಕೃತಿ, ಭಾಷೆಯ ಪ್ರವಾಹಕ್ಕೆ ಸೇರಬೇಕು ಎನ್ನುವಾಗ ಇಂಗ್ಲಿಷ್‌ನ ಮೂಲಕ ಕನ್ನಡ ಕಳೆದುಕೊಳ್ಳುತ್ತಿರುವ ಕನ್ನಡ ಜನತೆಯ ಬಗ್ಗೆಯೂ ಈ ಮಾತು ಅನ್ವಯವಾಗುತ್ತದೆ. ವಾಸ್ತವವಾಗಿ ಕರ್ನಾಟಕದಲ್ಲಿ ವ್ಯವಹಾರದೊಳಗೆ ಕನ್ನಡ ಕಣ್ಮರೆಯಾಗುತ್ತಿರುವಷ್ಟು ಬೇರೆ ರಾಜ್ಯಗಳಲ್ಲಿ ಎಲ್ಲೂ ಆಯಾ ರಾಜ್ಯಭಾಷೆಗಳು ಆಗುತ್ತಿಲ್ಲ. ಏಕೆಂದರೆ ಆಧುನಿಕ ಬದುಕಿನ ಜೀವನಾಡಿಯಾದ ದಿನನಿತ್ಯದ ವ್ಯವಹಾರ, ಆಡಳಿತವೆಲ್ಲವೂ ಆಯಾ ರಾಜ್ಯಭಾಷೆಯಲ್ಲಿಯೇ ನಡೆಯುತ್ತದೆ. ತಮಿಳ್ನಾಡಿನಲ್ಲಾಗಲೀ, ಮಹಾರಾಷ್ಟ್ರದಲ್ಲಾಗಲೀ, ದೆಹಲಿಯಲ್ಲಾಗಲೀ, ವ್ಯವಹಾರ ಮತ್ತು ಆಡಳಿತವು ಆಯಾ ರಾಜ್ಯಭಾಷೆಯದೇ ಆಗಿದೆ. ಹೀಗಾಗಿ ಇಂಗ್ಲಿಷ್ ಮತ್ತು ಪ್ರಾದೇಶಿಕ ಭಾಷೆಗಳ ಬಳಕೆ ಅಲ್ಲಿ ಭಿನ್ನ ವರ್ಗಗಳ ಜನಸಮುದಾಯದ ನಡುವೆ ಆಗುತ್ತಿರುವ ಸ್ವರೂಪವನ್ನು ಕುರಿತು ಅಧ್ಯಯನದ ಆವಶ್ಯಕತೆ ನಮಗಿದೆ.

'ತಿರುವಳ್ಳುವರ್' ಪ್ರತಿಮೆಯ ಸ್ಥಾಪನೆಯ ಘಟನೆಯ ಹಿಂದೆ ನಡೆದ ಚರ್ಚೆ ಮತ್ತು ಪ್ರತಿಭಟನೆಗಳು ಕನ್ನಡ ಭಾಷೆಯನ್ನು ನಮ್ಮ ಜನ ಬದುಕಿನ ಮುಖ್ಯ ಪ್ರವಾಹದಲ್ಲಿ ತೊಡಗಿಸಬೇಕು ಎನ್ನುವ ಪ್ರಶ್ನೆಯನ್ನೇ ಮತ್ತೆ ಮತ್ತೆ ಎತ್ತುತ್ತಿವೆ. ಕನ್ನಡ ಭಾಷೆ ಹಾಗೂ ತನ್ಮೂಲಕ ಸಂಸ್ಕೃತಿಯ ಸಂದಿಗ್ಧ ನೆಲೆಗಳನ್ನೇ ಇದು ತೋರುತ್ತಿದೆ.

ತಿರುವಳ್ಳುವರ್ ಪ್ರತಿಮೆಯ ಘಟನೆಗೆ ವಿವಿಧ ರೀತಿಯ ಪ್ರತಿಕ್ರಿಯೆಗಳನ್ನು ಕರ್ನಾಟಕದ ಜನತೆ ತೋರಿದೆ.

ಒಂದು ಬಗೆಯ ಪ್ರತಿಕ್ರಿಯೆ : 'ಭಾರತದ ಶ್ರೇಷ್ಠ ಪ್ರಜ್ಞಾಸ್ತರಗಳಾದ ಬಸವ, ಗುರುನಾನಕ, ತುಳಸಿದಾಸ, ಗಾಂಧಿ, ತಿರುವಳ್ಳುವರ್ ಮುಂತಾದವರು ಯಾವ

ಭಾಷೆ, ಮತಕ್ಕೂ ಸೇರದವರು. ಪ್ರತಿಮೆಗಳ ಮೂಲಕ ಗೌರವ ತೋರಬಯಸುವವರಿಗೆ ಭಾರತದಲ್ಲಿ ಎಲ್ಲಿ ಬೇಕಾದರೂ ಸ್ಥಾಪಿಸಲು ಅವಕಾಶವಿರಬೇಕು. ಕನ್ನಡನಾಡು ಎಲ್ಲ ಸತ್ವವನ್ನು ತನ್ನಲ್ಲಿರಿಸಿಕೊಂಡು, ತನ್ನತನವನ್ನು ಕಳೆದುಕೊಳ್ಳದೇ ಬೆಳೆದಿದೆ. ಕರ್ನಾಟಕ ಒಂದು ಸಂಕ್ಷಿಪ್ತ ಭಾರತವೆನ್ನಬಹುದು. ನಮ್ಮ ಸೋದರ ತಮಿಳರೆಲ್ಲರೂ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡೇ ಕನ್ನಡಿಗರಾಗುವ ಪ್ರಕ್ರಿಯೆಯನ್ನು ನಾವು ಬೆಂಬಲಿಸಬೇಕು. ಈ ಪ್ರಕ್ರಿಯೆಯನ್ನು ತಡೆಯುವ ಎಲ್ಲ ಪ್ರಯತ್ನಗಳಿಗೆ ನಮ್ಮ ವಿರೋಧವಿದೆ.

ಇನ್ನೊಂದು ಬಗೆಯ ಪ್ರತಿಕ್ರಿಯೆ : 'ತಿರುವಳ್ಳುವರ್ ಪ್ರತಿಮೆ ಸ್ಥಾಪನೆ ಕನ್ನಡೇತರ ಆರ್ಥಿಕ, ಭಾಷಿಕ, ಹಾಗೂ ಸಂಸ್ಕೃತಿಯ ಧಾಳಿಯ ಸಂಕೇತವಾಗಿದೆ. ಆದ್ದರಿಂದ ಅದರ ಸ್ಥಾಪನೆಯನ್ನು ನಾವು ವಿರೋಧಿಸುತ್ತೇವೆ. ನಮಗೆ ಕನ್ನಡದ ಪಂಪ, ಬಸವ, ಕುಮಾರವ್ಯಾಸ ಸರ್ವಜ್ಞರಂತೆ – ತಿರುವಳ್ಳುವರ್ ಬಗ್ಗೆ, ಅವರ ಸಾಹಿತ್ಯದ ಬಗ್ಗೆ ಗೌರವವಿದೆ. ಆದರೆ ಈಗಿನ ಪ್ರತಿಮೆಯ ಸ್ಥಾಪನೆ – ಕನ್ನಡ ಸಂಸ್ಕೃತಿಯಲ್ಲಿ ಒಂದಾಗದ ಪರಕೀಯ ದಬ್ಬಾಳಿಕೆ ನಮ್ಮ ಬದುಕಿನಲ್ಲಿ ಆಗುತ್ತಿರುವುದನ್ನು ತೋರುತ್ತಿದೆ. ಆದ್ದರಿಂದ ನಮ್ಮ ತೀವ್ರ ವಿರೋಧವಿದೆ.'

ಇನ್ನೂ ಒಂದು ಬಗೆಯ ಪ್ರತಿಕ್ರಿಯೆ : 'ಪ್ರತಿಮೆ ಏಕಕಾಲಕ್ಕೆ ನಡೆಯಲಿ. "ಮದ್ರಾಸಿನಲ್ಲಿ ಸರ್ವಜ್ಞರ ಪ್ರತಿಮೆ ಸ್ಥಾಪಿಸಲು ಅವಕಾಶ ಕೊಟ್ಟರೆ ಬೆಂಗಳೂರಿನಲ್ಲಿ ತಿರುವಳ್ಳುವರ್ ಪ್ರತಿಮೆ ಸ್ಥಾಪನೆಗೆ ಅವಕಾಶ ಕೊಡುತ್ತೇವೆ'' ಎಂಬ ಪುಲಿಕೇಶಿ ಕನ್ನಡ ಸಂಘದವರು ಹೇಳಿಕೆ ಸ್ವಾಗತಾರ್ಹ ವಿಚಾರ. ಸರ್ವಜ್ಞ ಕರ್ನಾಟಕಕ್ಕೇ ಅಲ್ಲ, ಇಡೀ ಭಾರತಕ್ಕೆ ಪ್ರಸಿದ್ಧನಾದವನು. ಆದ್ದರಿಂದ ಮದ್ರಾಸಿನಲ್ಲಿ ಸರ್ವಜ್ಞನ ಪ್ರತಿಮೆ ಸ್ಥಾಪಿಸುವುದಾದರೆ, ಬೆಂಗಳೂರಿನಲ್ಲಿ ತಿರುವಳ್ಳುವರ್ ಪ್ರತಿಮೆ ಸ್ಥಾಪನೆ ಮಾಡಬಹುದು. ಆದರೆ ಎರಡೂ ಕಡೆ ಸ್ಥಾಪನೆ ಕಾರ್ಯ ಏಕಕಾಲಕ್ಕೆ ನಡೆಯಬೇಕು.

ಪ್ರತಿಮೆ ಇರಲಿ – ಎನ್ನುವ ಅಭಿಪ್ರಾಯದ ಇನ್ನೊಂದು ಮುಖ ಹೀಗಿದೆ: 'ತಿರುವಳ್ಳುವರ್ ಹಾಗೂ ಸರ್ವಜ್ಞ ಹೇಗಿದ್ದರು? ನಮಗೆ ಗೊತ್ತಿಲ್ಲ. ಒಂದೇ ದೊಡ್ಡ ಕಲ್ಲಿನಲ್ಲಿ ಒಂದು ಭಾಗಕ್ಕೆ ಒಂದು ಮೂರ್ತಿಯನ್ನೂ, ಇನ್ನೊಂದು ಭಾಗಕ್ಕೆ ಇನ್ನೊಂದು ಮೂರ್ತಿಯನ್ನೂ ಕೆತ್ತಿಸಿ ಒಂದಕ್ಕೆ ಸರ್ವಜ್ಞ ಎಂದೂ; ಇನ್ನೊಂದಕ್ಕೆ ತಿರುವಳ್ಳುವರ್ ಎಂದೂ ಕರೆಯೋಣ.

'ಪ್ರತಿಮೆ ಬೇಡ; ತತ್ವ ಬೇಕು' ಎನ್ನುವ ಪ್ರತಿಕ್ರಿಯೆಗಳೂ, ಮುಖ್ಯವಾದ ನೆಲೆಯ ಅಭಿವ್ಯಕ್ತಿಗಳೇ ಆಗಿದ್ದವು. 'ತಿರುವಳ್ಳುವರ್ ಪ್ರತಿಮೆ ಸ್ಥಾಪನೆ ಮಾಡುತ್ತೇವೆ ಎನ್ನುವವರು ಅದರ ಬದಲು ಕನ್ನಡದಲ್ಲಿ ಅವನ ಸಾಹಿತ್ಯವನ್ನು ಅನುವಾದಿಸಿಕೊಟ್ಟರೆ, ಅದು ದೊಡ್ಡ ಕಾರ್ಯವಾಗುತ್ತದೆ. ಶ್ರೇಷ್ಠ ವ್ಯಕ್ತಿಗಳು ಜೀವಂತವಾಗಿರುವುದು, ಪ್ರತಿಮೆಗಳ ಮೂಲಕ ಅಲ್ಲ – ಅವರ ವಿಚಾರಗಳ ಮೂಲಕ' ಎನ್ನುವ ಅಭಿಪ್ರಾಯಗಳನ್ನೂ ವ್ಯಕ್ತಪಡಿಸಿದವರುಂಟು.

ಹೀಗೆ – ಪ್ರತಿಮೆಯ ಘಟನೆಯನ್ನು ಅವರಣದಿಂದ ಹಿಡಿದು – ನಮ್ಮ ಬದುಕು, ಸಂಸ್ಕೃತಿಯ ಅನೇಕ ಆಯಾಮಗಳನ್ನು ಹುಡುಕಿ–ವಿವರಿಸುವವರೆಗೆ – ಕನ್ನಡ ಜನರ ಪ್ರತಿಕ್ರಿಯೆಯನ್ನು ಗುರುತಿಸಬಹುದು. ಪ್ರಾದೇಶಿಕ ಸಂಸ್ಕೃತಿಯನ್ನು ಉಳಿಸಿ, ಬೆಳೆಸುವ ವಿಧಾನವನ್ನು ಈ ಪ್ರತಿಕ್ರಿಯೆಗಳ ಒಟ್ಟು ವಿನ್ಯಾಸದಲ್ಲಿರುವ ವಿಶಾಲ ಹರಹಿನಲ್ಲಿ ನಾವು ಗಮನಿಸಬಹುದು.

ವಾಸ್ತವವಾಗಿ 'ತಿರುವಳ್ಳುವರ್' ಎನ್ನುವುದು ವ್ಯಕ್ತಿನಾಮವಲ್ಲ ಎಂದು ತಮಿಳು ಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ. ಅದು ವಂಶನಾಮವಿರಬಹುದೆನ್ನುವ ಅಭಿಪ್ರಾಯವಿದೆ. ಈ ವಂಶಜರು – ಸನ್ಮಾರ್ಗದಲ್ಲಿ ನಡೆದು ಜೀವನದ ಮೌಲ್ಯಗಳನ್ನು ಎತ್ತಿ ಹಿಡಿದವರು. ಇವರು ಮೋಕ್ಷದ ಬಗ್ಗೆ ಹೆಚ್ಚು ಚಿಂತಿಸದೆ ಜೀವನದ ಮುಖ್ಯ ಮೌಲ್ಯಗಳಾದ ಧರ್ಮ, ಅರ್ಥ, ಕಾಮದ – ಆದರ್ಶ ನೆಲೆಗಳನ್ನು ವಿವರಿಸಿದವರು. ಈ ವಿವರಣೆ 'ಕುರಳ್' ಪದ್ಯಗಳಲ್ಲಿ ವಿವರವಾಗಿದ್ದು ಇದನ್ನೇ 'ತಿರುಕ್ಕುರಳ್' ಎನ್ನುತ್ತಾರೆ.

ಮತಸಂಬಂಧವಾದ ಯಾವ ನಡವಳಿಕೆಯನ್ನು ತಿರುಕ್ಕುರಳ್ ಒಪ್ಪುವುದಿಲ್ಲ. ತಿರುಕ್ಕುರಳ್‌ನ ವಿಚಾರಗಳು ಮುಖ್ಯವಾಗಿ ಧರ್ಮ ನಡವಳಿಕೆಗಳಿಗೆ, ಲೋಕ ವ್ಯವಹಾರದಲ್ಲಿನ ಆದರ್ಶಕ್ಕೆ ಜೀವನದಲ್ಲಿ ಮನುಷ್ಯ ಪ್ರೇಮಕ್ಕೆ – ಸಂಬಂಧಿಸಿದ್ದಾಗಿವೆ.

ಕ್ರಿ.ಶ. ಒಂದರಿಂದ ಐದನೆಯ ಶತಮಾನದೊಳಗೆ ಬಹುಶಃ ರಚನೆಯಾಗಿದ್ದಿರಬಹುದಾದ ಈ ಕಾವ್ಯವು ಶುದ್ಧ ಮಾನವ ಪ್ರೀತಿಗೆ ಕೊಡುವ ಒತ್ತು ಗಮನಾರ್ಹವಾದುದು. ತಿರುವಳ್ಳುವರ್ ಪ್ರತಿಮೆಯ ಘಟನೆ, ಮನುಷ್ಯ ಸಂಬಂಧವನ್ನು ಕಡಿಸದೆ ಹೋಗಬಹುದಾಗಿತ್ತು ಎನ್ನುವುದನ್ನು ಅನೇಕರು ಯೋಚಿಸಿದ್ದಾರೆ. ಅನಂತಮೂರ್ತಿಯವರು ಶತಮಾನೋತ್ಸವ ಅಧಿವೇಶನದಲ್ಲಿ ಹೇಳಿದ ಮಾತು ಗಮನಾರ್ಹ. "ತಮಿಳಿನ ಅಧಿಕ ಸಂಖ್ಯೆಯಲ್ಲಿರುವ ಜಾಗದ ಬದಲು ಕನ್ನಡ ಸಾಹಿತ್ಯದೊಳಗೆ ಯಾವತ್ತೂ ಕ್ರಿಯಾಶೀಲವಾಗಿ ಸ್ಪಂದಿಸುವ ವಿಶ್ವಭಾವನೆಗೆ ದ್ಯೋತಕವಾಗಿ ಕನ್ನಡ ಸಾಹಿತ್ಯವನ್ನು ಗೌರವಿಸುವ ಜಾಗದಲ್ಲಿ ತಿರುವಳ್ಳುವರ್ ಪ್ರತಿಮೆ ಸ್ಥಾಪನೆ ಮಾಡಬೇಕಿತ್ತು. ನಾವು ಕೊಡುಕೊಳ್ಳುವ ಸರಿಯಾದ ವಿಧಾನವೆಂದರೆ ಇದು. ತಮಿಳರು ಕೇವಲ ರಾಜಕೀಯವಾಗಿ ಯೋಚಿಸಿದ್ದರಿಂದ ಒಬ್ಬ ಹಿರಿಯ ಕನ್ನಡ ಸಾಹಿತಿಯನ್ನು ಪ್ರತಿಮೆ ಅನಾವರಣಕ್ಕೆ ಕರೆಯಬೇಕೆಂದು ಕೂಡ ಅವರಿಗೆ ತೋಚದ್ದು ದುರದೃಷ್ಟಕರ. ಇಲ್ಲಿರುವ ತಮಿಳರು ಕನ್ನಡಕ್ಕೆ ಸ್ಪಂದಿಸಿದಲ್ಲಿ ತಮಿಳು ಕೂಡ ಬೆಳೆದೀತು. ಕನ್ನಡದವರು ತಮ್ಮ ಔದಾರ್ಯ ಕಳೆದುಕೊಳ್ಳಬಾರದು'.

ತಿರುವಳ್ಳುವರ್ ಕವಿಯ ಕಾವ್ಯದಲ್ಲಿ ಮನುಷ್ಯ ಸಂಬಂಧದ ಬೆಳವಣಿಗೆಯ ಒಳಗುಟ್ಟು ಹೀಗೆ ಅರ್ಥಪೂರ್ಣ ಸಂಬಂಧ ಸಾಧಿಸುವಲ್ಲೇ ಅಡಗಿತ್ತು.

# ಜಾತಿ ಮತ್ತು ಕೋಮು ಕಲಹದ ಸ್ವರೂಪ :

ಬರಗೂರು ರಾಮಚಂದ್ರಪ್ಪ

ಕರ್ನಾಟಕದ ಕರುಳನ್ನು ಕತ್ತಲು ಕಿತ್ತು ತಿನ್ನುತ್ತಿದೆಯೇ ? ವಿವೇಕವೇ ಹೊಗೆಯಾಗಿ ಒಳಗೆಲ್ಲ ಉಸಿರುಕಟ್ಟುವಂತೆ ಮಾಡುತ್ತಿದೆಯೇ? ಕಣ್ಣುಗಳು ಕ್ರೂರವಾಗುತ್ತ, ಕಿವಿಗಳು ಕರ್ಕಷವಾಗುತ್ತ, ನಾಲಗೆ ನಾಗರವಾಗುತ್ತ ನಾವು ನೆತ್ತರಲ್ಲಿ ಉತ್ತರ ಹುಡುಕುತ್ತಿದ್ದೇವೆಯೆ?

ಇಂಥ ಪ್ರಶ್ನೆಗಳು ಹೆಡೆಯೆತ್ತಿ ಕಾಡುವ ಮನಸ್ಥಿತಿ ಉಂಟಾದದ್ದೇ ೧೯೯೧ರ ಜಾತಿ ವೈಷಮ್ಯ ಮತ್ತು ಕೋಮುಗಲಭೆಗಳ ಒಂದು ವ್ಯಾಖ್ಯಾನ. ನನ್ನನ್ನು ಕಾಡಿಸುವ ಈ ಪ್ರಶ್ನೆಗಳು ಪ್ರತೀಕವಾಗಿ ಪೀಡಿಸುತ್ತವೆ. ಈ ನೆಲದಲ್ಲಿ ಪ್ರತೀಕಾರವೇ ಪ್ರತೀಕವಾಗುತ್ತಿದೆಯೆ ಎಂಬ ಪ್ರಶ್ನೆಯನ್ನೂ ಹಾಕುತ್ತವೆ.

೧೯೯೧ರಲ್ಲಿ ದಾವಣಗೆರೆಯಲ್ಲಿ ನಡೆದ ಕೋಮು ಗಲಭೆಗಳನ್ನೇ ಜ್ಞಾಪಿಸಿಕೊಳ್ಳೋಣ. ಹಾಗೆ ನೋಡಿದರೆ ದಾವಣಗೆರೆಯು ರಾಜಕೀಯವಾಗಿ ಕೆಂಪಾದ ಕ್ಷೇತ್ರವೆಂದೇ ಹೆಸರುವಾಸಿ. ಕೆಂಪುಬಾವುಟ ಹಾರಿಸುತ್ತ ಮತ ಪೆಟ್ಟಿಗೆಯಲ್ಲಿ ಮತೀಯ ಭಾವನೆಗಳನ್ನು ನುಚ್ಚುನೂರು ಮಾಡುವ ಶಕ್ತಿ ಪಡೆಯುತ್ತ ಬಂದ ಊರೆಂದೇ ಪ್ರಸಿದ್ಧಿ. ಆದರೆ ಇಲ್ಲಿಗೂ ಕೋಮು ಕರಾಳತೆ ಕತ್ತಿ ಹಿಡಿದು ನುಗ್ಗಿತು. ಸಾವು–ನೋವುಗಳಿಗೆ ಕಾರಣವಾಯಿತು. ದಾವಣಗೆರೆಯು ಸಮತಾವಾದದ ಗಟ್ಟಿನೆಲವಾಗುತ್ತಿದೆಯೆಂಬ ಭಾವನೆಯೇ ಒಂದು 'ಭ್ರಮೆ' ಯಾಗಿತ್ತೇ ಎಂಬ ಆತಂಕ ಮೂಡಿಸಿತು. ಕೋಮುಭ್ರಮೆ ಮನಸ್ಸುಗಳಿಗೆ ಕೊಳ್ಳಿಯಿಟ್ಟು ಕುಣಿಯುವುದೇ ವಾಸ್ತವವೆಂಬ ವೈರುದ್ಯದ ನೆಲೆ ನಿರ್ಮಾಣವಾಯಿತು. ಆದ್ದರಿಂದ ದಾವಣಗೆರೆಯು ಇಡೀ ನಮ್ಮ ದೇಶದ ಕೋಮು ಸಮಸ್ಯೆಯ ವ್ಯಾಪಕತೆಯ ಸಂಕೇತ ಎಂದು ನನಗನ್ನಿಸುತ್ತದೆ.

ಕೆಂಪು ಕೇಸರಿಯಾಗುವುದು ಎಂಥ ವಿಪರ್ಯಾಸ! ಹಾಗಾದರೆ ಕೆಂಪಾಗಿದ್ದದ್ದೇ ಸುಳ್ಳೆ? ಕೇಸರಿ ಕೇವಲ ಬಣ್ಣವಾಗದೆ ಮನೋಧರ್ಮವಾಗುತ್ತಿದೆಯೇ? ಗರ್ಜಿಸುವ ಕೇಸರಿಯೇ ಆಗುತ್ತಿದೆಯೇ? ಹೀಗೆ ಗೊಂದಲ ಹುಟ್ಟಿಸುವ ಸನ್ನಿವೇಶವೇ

ಆತಂಕಕಾರಿಯಾಗಿದೆ. ಎಡಪಂಥೀಯ ಪಕ್ಷದ ಅಭ್ಯರ್ಥಿಯೊಬ್ಬರು ಗೆದ್ದು ಬರುತ್ತಿದ್ದ ಕ್ಷೇತ್ರದಲ್ಲೂ ಮನಸ್ಸಿನಾಳದಲ್ಲಿ ಕೋಮು ಭಾವನೆ ಮೀಸಲು ಸ್ಥಾನವಲ್ಲಿತ್ತೆ ಎಂಬ ಕಾಡಿಸುವಿಕೆ ಉಂಟಾಗುತ್ತದೆ. ಕೋಮು ಗಲಭೆಗಳು ಉಂಟಾದಾಗ ಎಡಪಕ್ಷದ ಅಭ್ಯರ್ಥಿ ಶಾಸಕರಾಗಿರಲಿಲ್ಲ. ಸೋತಿದ್ದರು– ಎಂಬುದು ಒಂದು ವ್ಯಾಖ್ಯಾನವಾಗಬಹುದು. ಈ ಸೋಲು ಎಡಪಂಥೀಯ ಭಾವನೆಗಳ ಬಗ್ಗೆ ತೋರಿದ ಪ್ರತಿಕ್ರಿಯೆಯೇ? ಅಭ್ಯರ್ಥಿಯ ಬಗ್ಗೆ ತೋರಿದ ಅನಾದರವೊ? ಎಡಪಂಥ ಎನ್ನುವುದು ಒಟಿನ ರಾಜಕೀಯವಾಗಿ ಪರಿವರ್ತಿತವಾಗುತ್ತ ತನ್ನ ಮೂಲಶಕ್ತಿಯನ್ನು ನರನಾಡಿಗಳಿಗೆ ಇಳಿಸಲು ಸಾಧ್ಯವಾಗದೆ ಹೋಗುತ್ತಿದೆಯೊ? ನಮ್ಮ ಚುನಾವಣೆಗಳು ಇಂಥ ಪ್ರಶ್ನೆಗಳಿಗೆ ಕಾರಣವಾಗುತ್ತಿವೆ. ವಿವಿಧ ಕೋನಗಳಿಂದ ನೋಡಿದಾಗ ವಿವಿಧ ಉತ್ತರಗಳು ಕಾಣಬಹುದಾದರೂ ಒಂದಂತೂ ನಿಜ : ಸೈದ್ಧಾಂತಿಕ ರಾಜಕಾರಣ ಬೇರು ಬಿಡದೆ ಇದ್ದಾಗ ಭಾವನಾತ್ಮಕ ರಾಜಕೀಯ ತನ್ನ ಕ್ಷುದ್ರರೂಪದಲ್ಲಿ ಕಾಣಿಸಕೊಳ್ಳಲು ಸಾಧ್ಯ. ಕೋಮು ಭಾವನೆಯು ಇಂದು ಕೇವಲ ಭಾವನೆಯಾಗದೆ ಅದೂ ಒಂದು ರಾಜಕೀಯವೇ ಆಗಿದೆ. ನಮ್ಮ ದೇಶದಲ್ಲಿ ರಾಜಕೀಯ ಎನ್ನುವುದು ಒಂದು ಬೌದ್ಧಿಕ ಗ್ರಹಿಕೆಯಾಗಿ ಬೆಳೆಯದೆ ಬಹುಪಾಲು ಭಾವನಾತ್ಮಕ ಪ್ರತಿಕ್ರಿಯೆಯಾಗುತ್ತಿದೆಯೇನೊ ಎಂಬ ಅನುಮಾನ ಹೆಚ್ಚುತ್ತಿದೆ. ರಾಜಕೀಯದಂತೆ ಧರ್ಮವೂ ಭಕ್ತಿಯ ನೆಲೆಗಳು ಬತ್ತಿದ ಭಾವೋದ್ರೇಕದ ಸಾಧನವಾಗುತ್ತಿದೆ. ಧರ್ಮಗಳೆಲ್ಲ ಸಾಮರಸ್ಯವನ್ನೇ ಸಾರುತ್ತವೆಯೆಂದು ಸಾವಿರಾರು ವರ್ಷಕ್ಕೆ ಕೊರಳಾಗಿ ಸಾರುತ್ತಿರುವ ಮಠಾಧಿಪತಿಗಳೂ ಪೀಠಾಧಿಪತಿಗಳಾಗಿ ಮಾತ್ರ ಕಾಣಿಸುತ್ತಿದ್ದಾರೆ.! ಧರ್ಮವೂ ಕುರ್ಚಿಯಲ್ಲಿ ಕೂತು ಕುಬ್ಜವಾಗಿದೆ! ಆದ್ದರಿಂದ ಧರ್ಮವನ್ನು ರಾಜಕೀಯದಲ್ಲಿ ಬೆರಸಬಾರದು ಎಂದು ಎಷ್ಟೇ ಹೇಳಿದರೂ ಧರ್ಮವೇ ರಾಜಕೀಯವಾಗುತ್ತ ಬಂದ ಇತಿಹಾಸವನ್ನೂ ನಾವು ಮರೆಯಬಾರದು. ಚರಿತ್ರೆಯಲ್ಲಿ ಧರ್ಮ ಒಂದು ಜಡನೆಲೆಯೂ ಆಗಿದೆ; ಜಡನೆಲೆಯನ್ನು ಕಾಡಿಸುವ ಹೊಸನೆಲೆಯೂ ಆಗಿದೆ. ಈಗ ಕೋಮುನೆಲೆಯನ್ನು ಪಡೆಯುತ್ತಿದೆ! ಧರ್ಮನಿರಪೇಕ್ಷತೆಯನ್ನು ಪ್ರತಿಪಾದಿಸುವ ಸಂವಿಧಾನದತ್ತ ಸನ್ನಿವೇಶಕ್ಕೆ ವ್ಯಂಗವೆಂಬಂತೆ ಕೋಮು ಸಮಸ್ಯೆ ಕಾಣಿಸುತ್ತದೆ. ಕರ್ನಾಟಕದ ದಾವಣಗೆರೆಯು ಇಷ್ಟೆಲ್ಲ ಪ್ರಶ್ನೆ, ಆತಂಕ, ಅನುಮಾನಗಳನ್ನು ಹುಟ್ಟು ಹಾಕಿದೆ.

ಇದು ಒಂದು ಕಡೆಗಾದರೆ, ಇನ್ನೊಂದು ಕಡೆ ನಮ್ಮ ಜಾತಿ ವೈಷಮ್ಯ ಕರುಳು ಕಿತ್ತು ಕೊರಳಹಾರ ಮಾಡಿಕೊಂಡು ಕುಣಿಯುತ್ತಿದೆ. ಜಾತಿ ಸಮಸ್ಯೆ ಎಂದ ಕೂಡಲೆ ಬ್ರಾಹ್ಮಣ–ಶೂದ್ರ ಪರಿಕಲ್ಪನೆಯೇ ಪ್ರಧಾನವಾಗಿರುವುದನ್ನು ನಮ್ಮ ಚಿಂತನೆಗಳಲ್ಲಿ ಕಾಣುತ್ತೇವೆ. ಆದರೆ ನಾನು ಮೊದಲಿಂದಲೂ ಪ್ರತಿಪಾದಿಸುತ್ತ ಬಂದಿರುವ ಒಂದು ಸಂಗತಿಯೆಂದರೆ ಕರ್ನಾಟಕದ ಸಮಕಾಲೀನ ಸಾಮಾಜಿಕ ಸಂದರ್ಭದಲ್ಲಿ ಮಧ್ಯಮ ಜಾತಿಗಳೇ ಹೆಚ್ಚು ಅಪಾಯಕಾರಿಯಾಗುತ್ತಿವೆ. ಇಲ್ಲಿ ಮಧ್ಯಮ ಜಾತಿಗಳು ಅಪಾಯಕಾರಿ ಎಂದಾಗ ಅಂಥ ಜಾತಿ ಭಾವನೆಯುಳ್ಳ

ವಲಯಕ್ಕೆ ಮಾತ್ರ ಮಿತಿಗೊಳಿಸಿಕೊಳ್ಳಬೇಕು, ಒಂದು ನಿರ್ದಿಷ್ಟ ಜಾತಿಯಲ್ಲಿ ಹುಟ್ಟಿದವರೆಲ್ಲ ಈಗ ಆಯಾ ಜಾತಿಯ ಭಾವನೆಗಳನ್ನು ಮಾತ್ರ ಪ್ರತಿನಿಧಿಸುತ್ತಾರೆಂದೇನೂ ಅಲ್ಲ.

ಬ್ರಾಹ್ಮಣರು ಸಾಮಾಜಿಕವಾಗಿ ಸಾವಿರಾರು ವರ್ಷದ ಸ್ಥಾನಮಾನದ ಚರಿತ್ರೆಯನ್ನು ಪಡೆದು ಮೇಲುಗೈ ಸಾಧಿಸಿದ್ದರ ಬಗ್ಗೆ ಅನುಮಾನವೇ ಇಲ್ಲ. ಅಕ್ಷರ ಸ್ವಾಮ್ಯದ ಫಲವಾಗಿ ಇಂದೂ ಶಿಕ್ಷಿತರ ಸಂಖ್ಯೆ ಬ್ರಾಹ್ಮಣರಲ್ಲೇ ಹೆಚ್ಚು. ನೌಕರಿಶಾಹಿಯಲ್ಲೂ ಬ್ರಾಹ್ಮಣರದೇ ಹಿಡಿತ. ಆದರೆ ಬ್ರಾಹ್ಮಣ ಎನ್ನುವುದು ಬ್ರಾಹ್ಮಣ್ಯವಾಗಿ ಶೂದ್ರರಲ್ಲೂ ನವ ಬ್ರಾಹ್ಮಣರು ಹುಟ್ಟುತ್ತಿರುವುದನ್ನು ನಾವು ಮರೆಯುವಂತಿಲ್ಲ. ಅಂತೆಯೇ ಇತಿಹಾಸದ ತಪ್ಪುಗಳಿಗೆ 'ಸೇಡು' ಪರಿಹಾರವಲ್ಲ. ಈ ಚರ್ಚೆಯೇ ಬೇರೆ; ಸದ್ಯಕ್ಕೆ ಕರ್ನಾಟಕದಲ್ಲಿ ಮಧ್ಯಮಜಾತಿಗಳು ಮತ್ತು ಹಿಂದುಳಿದ ಕೆಳಜಾತಿವರ್ಗಗಳ ನಡುವೆ ಹುಟ್ಟುತ್ತಿರುವ ವೈಷಮ್ಯ ಒಂದು ಆತಂಕಕಾರಿ ಬೆಳವಣಿಗೆಯಾಗಿದೆ. ವೈದಿಕರ ವಿರುದ್ಧ ನಿಲ್ಲುವಾಗ ಮಧ್ಯಮಜಾತಿಗಳಿಗೆ ಕೆಳಜಾತಿ–ವರ್ಗಗಳು ಬೇಕಾದಷ್ಟು ಪ್ರಮಾಣದಲ್ಲಿ ಆನಂತರ ಬೇಕಾಗುವುದಿಲ್ಲ. ವಾಸ್ತವ ಸಂಗತಿಯೆಂದರೆ, ಗ್ರಾಮೀಣ ಭಾರತದಲ್ಲಿ – ಅದರಲ್ಲೂ ಕರ್ನಾಟಕದಲ್ಲಿ – ಮಧ್ಯಮಜಾತಿಗಳು ಮತ್ತು ಕೆಳಜಾತಿ–ವರ್ಗಗಳು ದಿನ ಬೆಳಗ್ಗೆ ಎದ್ದರೆ ಪರಸ್ಪರ ಮುಖದರ್ಶನ ಮಾಡಬೇಕಾಗುತ್ತದೆ.. ಬದುಕಿನ ಎಲ್ಲ ಸುಳಿಗಳಲ್ಲಿ ಸಿಕ್ಕಿಕೊಳ್ಳಬೇಕಾಗುತ್ತದೆ. ಬಿಗಿಮುಖ ಮತ್ತು ದೀನ ಮುಖಗಳು ನಗೆ ಮುಖಗಳಾಗುವುದು ಅಪರೂಪ. ಇಂದು ಬೆಳೆಯುತ್ತಿರುವ ಸಾಮಾಜಿಕ ಆರ್ಥಿಕ ಒತ್ತಡಗಳ ನಡುವೆ 'ಮುಖಾಮುಖಿ' ಯ ಸ್ಥಿತಿಯೇ ಮೇಲುಗೈ ಪಡೆಯುತ್ತಿದೆ.

ಕರ್ನಾಟಕ ಮಧ್ಯಮ ಜಾತಿಗಳು ಕೇವಲ ಜಾತಿಗಳಷ್ಟೇ ಆಗದೆ ವರ್ಗ ಸ್ವರೂಪವನ್ನು ಪಡೆದಿವೆ. ಹೆಚ್ಚು ಮಠಮಾನ್ಯಗಳನ್ನು ಪಡೆದು ಧಾರ್ಮಿಕ ಪ್ರಭುತ್ವಕ್ಕೂ ಇವು ದಾಪುಗಾಲು ಹಾಕಿವೆ. ಆದರೆ ಅದಕ್ಕಿಂತ ಮುಖ್ಯವಾಗಿ ಈ ಮಧ್ಯಮ ಜಾತಿಗಳ ಪ್ರಮುಖರು ಭೂಮಾಲಿಕ ವರ್ಗಕ್ಕೆ ಸೇರುತ್ತಾರೆ. ಭೂಮಾಲಿಕ ವರ್ಗವು ಫ್ಯೂಡಲ್ ಪ್ರವೃತ್ತಿಯ 'ಪ್ರಭು' ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಒಂದು ಜಾತಿಯಾಗಿ ಕೆಳಜಾತಿಗಳ ಬಗೆಗೆ, ಅಸ್ಪೃಶ್ಯರ ಬಗ್ಗೆ ಅಸಹನೆ ಬೆಳೆಸಿಕೊಳ್ಳುವ ಈ ಮಧ್ಯಮ ಜಾತಿಗಳು ಒಂದು ವರ್ಗವಾಗಿ ಕೀಳುಜಾತಿಗಳನ್ನಷ್ಟೇ ಅಲ್ಲ, ತಂತಮ್ಮ ಜಾತಿಯ ಬಡವರನ್ನೂ ದೂರವಿಡುತ್ತಾರೆ. ಇದು ಫ್ಯೂಡಲ್ ಪ್ರಭುತ್ವದ ಒಂದು ಲಕ್ಷಣವೇ ಆಗಿದೆ. ಹಾಗೆ ನೋಡಿದರೆ, ಸಂಖ್ಯೆಯಲ್ಲಿ ಕಡಿಮೆಯಾದರೂ ಕೆಳಜಾತಿಗಳಲ್ಲೂ ಅಲ್ಲೊಬ್ಬ ಇಲ್ಲೊಬ್ಬ ಫ್ಯೂಡಲ್‌ಗಳು ಕಾಣಿಸಿಕೊಳ್ಳುತ್ತಿದ್ದು ಪುಢಾರಿತನದಲ್ಲಷ್ಟೇ ಪ್ರಕಟವಾಗುತ್ತಿದ್ದಾರೆ. ಆದರೆ ನನಗಿಲ್ಲಿ ಮುಖ್ಯವಾದದ್ದು ಮಧ್ಯಮಜಾತಿಗಳಲ್ಲಿರುವ ಜಾತಿ ಮತ್ತು ವರ್ಗ ಭಾವನೆಗಳು ಮೇಲುಗೈ ಪಡೆದು ಕೆಳಜಾತಿವರ್ಗಗಳೊಂದಿಗೆ ನಡೆಸುವ

ಸೆಣಸಿನ ಸಮಸ್ಯೆ. ಈ ಸಮಸ್ಯೆಗೆ ಇನ್ನೊಂದು ಮುಖವೂ ಇದೆ. ಬದಲಾಗುತ್ತಿರುವ ಸನ್ನಿವೇಶದಲ್ಲಿ ಕೆಳಜಾತಿ–ವರ್ಗಗಳು ಹಕ್ಕುಗಳಾಗಿ ಪರಿವರ್ತಿತವಾಗುತ್ತಿದ್ದಾರೆ. ಅವರಲ್ಲಿ ಮನೆ ಮಾಡಿದ್ದ ದೈನ್ಯತೆಯ ಜಾಗದಲ್ಲಿ ಧೈರ್ಯ ಕಾಣಿಸಿಕೊಳ್ಳುತ್ತಿದೆ. ಈ ಸ್ಥಿತ್ಯಂತರ ಅನಿವಾರ್ಯ. ಆದರೆ ಯಾವುದೇ ಸಂಕ್ರಮಣ ಸಂದರ್ಭದಲ್ಲಿ ಆಗುವಂತೆ ಆಂತಕ ಮತ್ತು ಅನುಮಾನದ ಸನ್ನಿವೇಶ ಇಲ್ಲೂ ನಿರ್ಮಾಣವಾಗಿದೆ. ಕೆಳ ಜಾತಿ–ವರ್ಗಗಳ ಹಕ್ಕಿನ ಹೋರಾಟ ಮತ್ತು ಮನೋಧರ್ಮವನ್ನು ಫ್ಯೂಡಲ್ ಜಾತಿ–ವರ್ಗಗಳು ಸಹಿಸುವ ಮನಸ್ಥಿತಿಯಲ್ಲಿರುವುದಿಲ್ಲ. ಈ ಅಸಹನೆಗೆ ಆರ್ಥಿಕ ಹಾಗೂ ಸಾಮಾಜಿಕ ನೆಲೆಗಳೆರಡೂ ಇವೆ. ಅದರಂತೆಯೇ ಕೆಳ ಜಾತಿ–ವರ್ಗಗಳ ಹಕ್ಕಿನ ಹೋರಾಟಗಳು ಕೆಲವೊಮ್ಮೆ ಶಂಕಾಸ್ಪದ ಸ್ಫೋಟವಾಗುತ್ತವೆ. ಆದರೆ ಸಂಘರ್ಷದ ಸ್ಥಿತಿ ಬಂದಾಗ ಸ್ವಾಭಾವಿಕವಾಗಿ ಕೆಳಜಾತಿ–ವರ್ಗಗಳಲ್ಲೇ ಸಾವು–ನೋವು ಹೆಚ್ಚಾಗುತ್ತದೆ.

ನನ್ನ ಮೇಲಿನ ವಿಶ್ಲೇಷಣೆಗೆ ತಕ್ಕ ಉದಾಹರಣೆಯಾಗಿ ಒತ್ತಾಸೆ ನೀಡಿದ್ದು – ೧೯೯೧ ರ ಅಕ್ಟೋಬರ್‌ನಲ್ಲಿ ಹೆಗ್ಗಡದೇವನಕೋಟೆ ತಾಲ್ಲೂಕಿನ ಸರಗೂರಿನಲ್ಲಿ ನಡೆದ ಘರ್ಷಣೆ. ಲಿಂಗಾಯಿತರು ಮತ್ತು ದಲಿತರ ನಡುವೆ ಸಂಭವಿಸಿದ ಈ ಘರ್ಷಣೆಯಲ್ಲಿ ಕಬಿನಿ ನಾಲೆಯಲ್ಲಿ ಕಂಡ ದಲಿತರ ಹೆಣಗಳು ಸಾಕ್ಷಿ ಹೇಳುತ್ತಿದ್ದವು! ಇದಲ್ಲದೆ ಕಲ್ಬುರ್ಗಿ ಜಿಲ್ಲೆಯ ಭೂಸನೂರು ಗ್ರಾಮದ ದಲಿತ ಮಲಕಪ್ಪನ ಮೇಲೆ ನವೆಂಬರ್ ೧೪–೧೯೯೧ ರಲ್ಲಿ ಭೂಮಾಲಿಕ ವರ್ಗ ನಡೆಸಿತೆನ್ನಲಾದ ದೌರ್ಜನ್ಯದ ವರದಿಯೂ ಇಲ್ಲಿ ಉಲ್ಲೇಖನೀಯ.

ಇಷ್ಟೆಲ್ಲ ಹೇಳುವಾಗ ಯಾವುದೇ ಒಂದು ಜಾತಿ ಅಥವಾ ಜಾತಿಗಳನ್ನು ಹೀಗಳೆಯುವ ಉದ್ದೇಶ ನನಗಿಲ್ಲ. ಸಮಕಾಲೀನ ಬೆಳವಣಿಗೆಯನ್ನು ಚಾರಿತ್ರಿಕವಾಗಿ ವಿಶ್ಲೇಷಿಸುವ ಒಂದು ಪ್ರಯತ್ನವನ್ನಷ್ಟೇ ನಾನಿಲ್ಲಿ ಮಾಡುತ್ತಿದ್ದೇನೆ. ಜಾತಿವ್ಯವಸ್ಥೆಯು ನಮ್ಮಲ್ಲಿ ಪ್ರಬಲವಾಗಿದ್ದರೂ ಅದರಲ್ಲಿರುವ ವರ್ಗ ವೈಲಕ್ಷಣ್ಯಗಳು ಮೇಲುಗೈ ಪಡೆದು ಗಲಭೆಗಳ ಹಿಂದಿನ ಮನೋಭಾವವಾಗಿ ಕೆಲಸ ಮಾಡಿರುವುದನ್ನೂ ಇಲ್ಲಿ ಕಾಣಬಹುದು. ಅದೇ ಸಂದರ್ಭದಲ್ಲಿ ವರ್ಗ ವೈಲಕ್ಷಣ್ಯಗಳನ್ನು ಕೆರಳಿಸಲು ಜಾತಿಯೂ ಸಾಧನವಾಗಿ ಕೆಲಸ ಮಾಡುತ್ತಿರುವ ವಿಪರ್ಯಾಸವನ್ನೂ ಗುರುತಿಬಹುದು. ಇದೇ ನಮ್ಮ ದೇಶದ ಸಾಮಾಜಿಕ ಸಂರಚನೆಯ ವಿಚಿತ್ರ ಸ್ವರೂಪ.

ಹಕ್ಕಿನ ಹೋರಾಟಗಳು ಬೆಳೆಯುತ್ತ ಪ್ರಬಲ ಜಾತಿ–ವರ್ಗಗಳಲ್ಲಿ ಹುಟ್ಟುವ ಅಸಹನೆಯನ್ನು ಗುರುತಿಸುವುದು ಒಂದು ಕಡೆಗಾದರೆ, ಇನ್ನೊಂದು ಕಡೆಗೆ ಹಕ್ಕಿನ ಹೋರಾಟಗಳು ನಿರ್ದಿಷ್ಟ ವ್ಯವಸ್ಥೆಯೊಳಗೆ ವರ್ತಿಸಬೇಕಾದ ಕಾರ್ಯತಂತ್ರವನ್ನು ತಮ್ಮ ತಾತ್ವಿಕತೆಯನ್ನು ಬಿಟ್ಟುಕೊಡದೆ ರೂಪಿಸಿಕೊಳ್ಳಬೇಕಾದ ಅಗತ್ಯವನ್ನೂ ಕರ್ನಾಟಕದ ಗಲಭೆಗಳು ಹೇಳುತ್ತವೆಯೆಂದು ನಾನು ಭಾವಿಸುತ್ತೇನೆ. ಹಳ್ಳಿಗಾಡಿನ ಹಕ್ಕಿನ ಹೋರಾಟಗಳಿಗೂ ನಗರಗಳ ಕಾರ್ಮಿಕ ಸಂಘಟನೆಯ ಹೋರಾಟಗಳಿಗೂ

ಸಾಕಷ್ಟು ವ್ಯತ್ಯಾಸವಿದೆಯೆಂಬುದನ್ನು ಹೋರಾಟಕ್ಕೆ ಒತ್ತಾಸೆಯಾಗುವ ಸಂಘಟನೆಗಳು ಗಮನಿಸಬೇಕು. ಹೋರಾಟದ ಹೆಸರಿನಲ್ಲಿ ಕೇವಲ ಹುಚ್ಚೆಬ್ಬಿಸಿ ಕೆಳಜಾತಿ–ವರ್ಗದ ದೀನರನ್ನು ದಮನಕ್ಕೆ ಈಡುಮಾಡುವ ಸ್ಥಿತಿಯೊಂದು ಈ ಸ್ಥಿತ್ಯಂತರದ ಸಂದರ್ಭದಲ್ಲಿ ಕಾಣಿಸುತ್ತಿದೆ. ಇದು ಇಂದಿನ ಸನ್ನಿವೇಶದಲ್ಲಿ ಸ್ವಾಭಾವಿಕವೇ ಇರಬಹುದು. ನಾನು ಇಲ್ಲವೆನ್ನುವುದಿಲ್ಲ. ಆದರೆ ಇದಿಷ್ಟೇ ಮುಂದುವರೆದರೆ ಕಡೆಗೆ ವೈಷಮ್ಯವೇ ಹೋರಾಟವೂ ಉತ್ತರವೂ ಆಗುವ ಅಪಾಯವೂ ಇದೆ. ಕೆಳ ಜಾತಿ–ವರ್ಗಗಳ ನಡುವೆಯೇ ಒಗ್ಗಟ್ಟು ಇಲ್ಲದ ಇಂದಿನ ಸ್ಥಿತಿಯಲ್ಲಿ ಹೋರಾಟದ ವಿಧಾನಗಳನ್ನು ಪುನರ್ ಪರಿಶೀಲಿಸಿ ಅನಗತ್ಯ 'ಬಲಿ'ಗಳನ್ನಾದರೂ ನಾವು ತಪ್ಪಿಸಬೇಕಾಗಿದೆ. ಇದು ಹೋರಾಟದ ಹೊಣೆಗಾರಿಕೆಯೂ ಹೌದು. ಈ ಹೊಣೆಗಾರಿಕೆಯು ಹೋರಾಟದ ನೆಲೆಯಿಂದಲೇ ಹುಟ್ಟಬೇಕು. ಯಾಕೆಂದರೆ ಫ್ಯೂಡಲ್‌ಗಳ ನೆಲೆಯಿಂದ ಹುಟ್ಟುವ ಹೊಣೆಗಾರಿಕೆಯ ಕಲ್ಪನೆ ಮತ್ತೆ ದೀನಾವಸ್ಥೆಗೇ ತಳ್ಳುತ್ತದೆ. ಆದ್ದರಿಂದ ನಾನು ಹೊಣೆಗಾರಿಕೆ ಎನ್ನುವಾಗ–ಹೋರಾಟದ ಸೈದ್ಧಾಂತಿಕ ನೆಲೆಯನ್ನು ಗಟ್ಟಿಗೊಳಿಸುವ ಅರಿವಿನ ಸ್ಥಿತಿ ಎಂದು ಭಾವಿಸಿ ಹೇಳುತ್ತಿದ್ದೇನೆ.

ಒಟ್ಟಿನಲ್ಲಿ ಹಿಂದಿನಿಂದ ಹಾಗೂ 1991 ರಲ್ಲಿ ನಡೆದ ಕೋಮುಗಲಭೆಗಳ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ನಡೆದ ಜಾತಿ ಸ್ವರೂಪದ ಘರ್ಷಣೆ ಮತ್ತು ಕೋಮುಗಲಭೆಗಳು ಎತ್ತುವ ಪ್ರಶ್ನೆಗಳನ್ನು ನನ್ನ ಈ ಬರಹದಲ್ಲಿ ಪ್ರಸ್ತಾಪಿಸಿದ್ದೇನೆ. ಮೇಲ್ಜಾತಿಯ ಸಾಮಾಜಿಕ ಸ್ವಾಮ್ಯವನ್ನು ಮೀರಿ ಕರ್ನಾಟಕದ ಮಧ್ಯಮ ಜಾತಿಗಳು ತಮ್ಮ ವರ್ಗ ವೈಷಮ್ಯವನ್ನು ಹೊರಹಾಕುತ್ತಿರುವ ವಿಧಾನದ ಬಗ್ಗೆ ನಾವು ಗಂಭೀರವಾಗಿ ಚಿಂತನೆ ಮಾಡಬೇಕಾಗಿದೆ. ಅಂತೆಯೇ ಹಳ್ಳಿಗಾಡಿನ ಹಕ್ಕಿನ ಹೋರಾಟಗಳು ನಿರ್ದಿಷ್ಟ ವ್ಯವಸ್ಥೆಯ ಇತಿಮಿತಿಗಳನ್ನು ಮನಗಾಣುತ್ತಲೇ ಹೊಸ ವಿಧಾನಗಳನ್ನು ಹುಡುಕುವ ಹೊಣೆಗಾರಿಕೆಯನ್ನೂ ತೋರಬೇಕಾಗಿದೆ. ಈ ಎಲ್ಲ ಅಪೇಕ್ಷೆಗಳ ನಡುವೆ ಚಾರಿತ್ರಿಕ ಅನಿವಾರ್ಯತೆ ಎನ್ನುವುದೊಂದು ಇದ್ದೇ ಇದೆ.



# ಕನ್ನಡದ ಪ್ರಯೋಗಶೀಲ ಪ್ರತಿಭೆ —ಗೋಕಾಕ್

ಜಿ.ಎಸ್. ಶಿವರುದ್ರಪ್ಪ

ಪ್ರತಿಷ್ಠಿತ ಜ್ಞಾನಪೀಠ ಪ್ರಶಸ್ತಿ ಕನ್ನಡ ಸಾಹಿತಿಗಳಿಗೆ ದೊರೆತಿರುವುದು ಇದು ಐದನೆಯ ಸಲ. ಈ ಬಾರಿ ಈ ಗೌರವ ದೊರೆತಿರುವುದು ನಮ್ಮ ಹಿರಿಯ ಸಾಹಿತಿ ವಿನಾಯಕ ಕೃಷ್ಣ ಗೋಕಾಕರಿಗೆ. ಸಾಹಿತ್ಯವನ್ನು ಒಂದು ಕಾಯಕದಂತೆ ಅವಿರತವಾಗಿ ನಡೆಸಿಕೊಂಡು ಬಂದಿರುವ ಗೋಕಾಕರ ಸಾಹಿತ್ಯ ನಿರ್ಮಿತಿಯ ಹರಹು ತುಂಬಾ ದೊಡ್ಡದು. ಅದರ ಆಳ, ಅಗಲಗಳ ಒಂದು ವಿವೇಚನೆ ಇಲ್ಲಿದೆ.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ 'ಸಮುದ್ರವ ಸೆರೆಹಿಡಿವರುಂಟೆ?' ಎಂಬ ಪ್ರಶ್ನೆಗೆ 'ಉಂಟು' ಎಂದು ಉತ್ತರ ಕೊಡಬಲ್ಲವರು, ಕವಿ ರತ್ನಾಕರವರ್ಣಿಯೊಬ್ಬನನ್ನು ಹೊರತುಪಡಿಸಿದರೆ, ಶ್ರೀ ವಿನಾಯಕ ಕೃಷ್ಣ ಗೋಕಾಕರೊಬ್ಬರೇ ಎಂದು ಹೇಳಬಹುದು. ಕನ್ನಡದ ಇನ್ನೊಬ್ಬ ಶ್ರೇಷ್ಠ ಕಾದಂಬರಿಕಾರರಾದ ಶಿವರಾಮ ಕಾರಂತರು ಕಡಲ ತೀರದಗಲಕ್ಕೂ ಹರಹಿಕೊಂಡ ದಕ್ಷಿಣ ಕನ್ನಡ ಜಿಲ್ಲೆಯ ಬದುಕನ್ನು ಅನನ್ಯವಾಗಿ ಚಿತ್ರಿಸಿದರೂ, ಕಡಲನ್ನು ಕುರಿತು ಅದರ ದಿವ್ಯ ಸೌಂದರ್ಯವನ್ನು ಕುರಿತು ಅವರಿಗಾಗಲೀ ಅವರ ಕಥಾ ಪಾತ್ರಗಳಿಗಾಗಲೀ ಅಂತಹ ತನ್ಮಯತೆಯೇ ಇಲ್ಲ. ಆದರೆ ಕಡಲನ್ನೂ ಅದರ ಅಸಂಖ್ಯ ವೈವಿಧ್ಯಗಳನ್ನೂ ಕುರಿತು ತಕ್ಕ ಉತ್ಸಾಹ–ತನ್ಮಯತೆಯಿಂದ ಬರೆದವರು ಬಹುಶಃ– ಗೋಕಾಕರೊಬ್ಬರೇ. ಕನ್ನಡ ಕಾವ್ಯಾಸಕ್ತರು ಗೋಕಾಕರ ಕವಿತೆಯ ಬಗ್ಗೆ ಆಸಕ್ತಿಯನ್ನೂ ಉತ್ಸಾಹವನ್ನು ಮೊದಲು ತಾಳಿದ್ದು ಅವರು 1936–37ರಷ್ಟು ಹಿಂದೆಯೆ ಬರೆದು, 1940ರ ವೇಳೆಗೆ ಪ್ರಕಟಿಸಿದ 'ಸಮುದ್ರಗೀತೆಗಳು' ಸಂಗ್ರಹದಿಂದಲೇ.

## ಪ್ರವಾಸಿ ಮನೋಧರ್ಮ

ವಾಸ್ತವವಾಗಿ ಗೋಕಾಕರ 'ಸಮುದ್ರ ಗೀತಗಳು' ಅವರ ಕಾವ್ಯದ ನಿಲುವುಗಳನ್ನು ಅರ್ಥಮಾಡಿಕೊಳ್ಳಲು ಅಗತ್ಯವಾದ ಹಲವು ಮೂಲ ಮಾನಗಳನ್ನು ಒದಗಿಸುವ ಕೃತಿಯಾಗಿದೆ. ಈ ಕೃತಿ, ಅವರು ಇಂಡಿಯಾದಿಂದ ಇಂಗ್ಲೆಂಡಿಗೆ ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಹಡಗಿನ ಮೇಲೆ ಪ್ರಯಾಣ ಹೊರಟಾಗ ಅವರು ಕಂಡುಂಡ ಅನುಭವಗಳನ್ನು ಕುರಿತದ್ದು. ಅಂದರೆ ಇದು ಒಬ್ಬ ಪ್ರವಾಸಿಯಾಗಿ ಗೋಕಾಕರು ಹಡಗಿನಲ್ಲಿ ಹೊರಟಾಗ, ಕಡಲಪಯಣದ ಉದ್ದಕ್ಕೂ ಅವರು ವಿವಿಧ ಋತುಮಾನಗಳಲ್ಲಿ ಕಂಡ ಕಡಲಿನ ದೃಶ್ಯವೈವಿಧ್ಯಗಳನ್ನೂ ಪಯಣದ ಹಾದಿಯೊಳಗಿನ ಹಲವು ದೇಶಗಳ ಇತಿಹಾಸ–ನಾಗರಿಕತೆಗಳ ಬಗ್ಗೆ ತೋರಿದ ಪ್ರತಿಕ್ರಿಯೆಗಳನ್ನೂ, ಹಡಗಿನ ಹೊರಭಾಗದ ಹಾಗೂ ಹಡಗಿನ ಒಳಭಾಗದ ಬದುಕನ್ನೂ–ಕುರಿತ ನಿರೂಪಣೆಯಾಗಿದೆ. ಮತ್ತು ಈ ಬಗೆಯ ಬರಹ ಕನ್ನಡದಲ್ಲಿ ಅವರಿಗೆ ಇರಲಿಲ್ಲವೆಂಬುದನ್ನು ನೆನೆದರೆ, ಪ್ರವಾಸಾನುಭವದಂಥ ವಸ್ತುವೊಂದು ಕನ್ನಡ ಕಾವ್ಯದೊಳಕ್ಕೆ ಗೋಕಾಕರ ಮೂಲಕ ಬಂದಿತೆಂಬುದು ವಿಶೇಷವಾದ ಸಂಗತಿಯಾಗಿದೆ. ಅಷ್ಟೇ ಅಲ್ಲ ಅವರ ಮುಂದಿನ ಬರವಣಿಗೆಯನ್ನು ನೋಡಿದರೆ, ಅವರ ಬರಹದ ಬಹುಪಾಲು ಈ ಬಗೆಯ ಪ್ರವಾಸಾನುಭವಗಳಿಂದ ತುಂಬಿಕೊಂಡಿದೆ ಎನ್ನುವುದು ಸ್ವಾರಸ್ಯದ ವಿಷಯವಾಗಿದೆ. ಅಷ್ಟೇ ಅಲ್ಲ ಅವರೇ ತಮ್ಮದು ಮೂಲತಃ ಪ್ರವಾಸಿಯ ಮನೋಧರ್ಮವೆಂದು ಹೇಳಿಕೊಂಡಿದ್ದಾರೆ. 'ನಾನು ಪಯಣಿಗ, ಎಲ್ಲಿ ನೆಲ ನೀರ್ ಗಾಳಿ ನನ್ನನ್ನು ಸೆಳೆವುವೋ (ಕಾಶ್ಮೀರ) ಎಂದು ತಮ್ಮನ್ನು ವರ್ಣಿಸಿಕೊಂಡಿದ್ದಾರೆ. ಮತ್ತು ಅವರ ಬರಹವೆಲ್ಲ ಬಹುಮಟ್ಟಿಗೆ ಈ ಪಯಣಿಗನ ಮನೋಧರ್ಮವನ್ನೇ ಅಭಿವ್ಯಕ್ತಿಸುತ್ತವೆ.

ಅವರ 'ದ್ಯಾವಾಪೃಥಿವೀ' 'ತ್ರಿಶಂಕುವಿನ ಪ್ರಜ್ಞಾ ಪ್ರಭಾತ', 'ಸಮುದ್ರದೀಚೆಯಿಂದ', 'ಇಂದಲ್ಲ ನಾಳೆ', 'ಸಿಮ್ಲಾ ಸಿಂಫನಿ', 'ಕಾಶ್ಮೀರ' 'ಉಗಮ' ಇಂಥ ಕೃತಿಗಳು ಅವರು ನೀರಮೇಲೂ, ನಭದ ಮೇಲೂ, ನೆಲದ ಮೇಲೂ ಕೈಕೊಂಡ ಪ್ರವಾಸಾನುಭವಗಳನ್ನೂ, ದೇಶ–ವಿದೇಶಗಳ ನಾಗರಿಕತೆ–ಇತಿಹಾಸ–ಸಂಸ್ಕೃತಿಗಳಿಗೆ ಹಾಗೂ ವಿವಿಧ ನಿಸರ್ಗ ರಮ್ಯಾದ್ಭುತಗಳಿಗೆ ಅವರು ಸ್ಪಂದಿಸಿದ ಪರಿಯನ್ನೂ ತುಂಬ ಸ್ವಾರಸ್ಯವಾಗಿ ವರ್ಣಿಸುತ್ತವೆ. ಈ ಅರ್ಥದಲ್ಲಿ ಗೋಕಾಕರ ಸಾಹಿತ್ಯ ಮುಖ್ಯ ಆಶಯವೇ 'ಪ್ರವಾಸ' ವಾಗಿದೆ. ಅವರ ನಿಲುವು ಮೂಲತಃ ಪ್ರವಾಸಿಯದಾಗಿದೆ. ಅವರ ಸಾಹಿತ್ಯ ಪ್ರವಾಸಸ್ಫೂರ್ತ ಸಾಹಿತ್ಯವಾಗಿದೆ. ಆದರೆ ಪ್ರವಾಸಿಯ ಮನೋಧರ್ಮ ಕಲೋಪಾಸಕನ ಮತ್ತು ಮಾನವೀಯ ಕಾಳಜಿಗಳನ್ನುಳ್ಳ ಗಂಭೀರ ಚಿಂತಕನ ನಿಲುವುಗಳನ್ನು ಒಳಗೊಂಡದ್ದಾಗಿದೆ. 'ಸಮುದ್ರಗೀತಗಳು' (1940) ಸಂಕಲನಕ್ಕೆ ಮೊದಲು ಪ್ರಕಟವಾದ 'ಪಯಣ' (1937) ಮತ್ತು ಅದಕ್ಕೂ ಮುನ್ನ ಪ್ರಕಟವಾದ ಅವರ ಪ್ರಪ್ರಥಮ ಕವನ ಸಂಗ್ರಹವಾದ 'ಕಲೋಪಾಸಕ' (1934)

ಇವುಗಳನ್ನು ಗಮನಿಸಿದರೆ, ಅವುಗಳ ಹಣೆ ಹೆಸರುಗಳೇ ಒಂದು ರೀತಿಯಲ್ಲಿ ಗೋಕಾಕರ ಮನೋಧರ್ಮದ ಸಂಕೇತಗಳಂತೆ ತೋರುತ್ತವೆ. ಅವರ 'ಸಮುದ್ರ ಗೀತಗಳು' ಮತ್ತು 'ದ್ಯಾವಾಪೃಥುವೀ' – ಈ ಎರಡೂ ಕೃತಿಗಳಲ್ಲಿ ನೀರಮೇಲೂ, ನಭದ ಮೇಲೂ ಅವರು ಕೈಕೊಂಡ ಪ್ರವಾಸಾನುಭವದ ದೃಶ್ಯ ವೈವಿಧ್ಯಗಳು ವರ್ಣೋಜ್ವಲವಾಗಿ ನಿರೂಪಿತವಾಗಿವೆ. ಸಮುದ್ರಗೀತಗಳಲ್ಲಿ ಅಪರಂಪಾರ ಪಾರವಾರದ ಜಲದ ತಾಳ ಲಯಛಂದೋಗತಿಗಳನ್ನು ಕಂಡ ಮನಸ್ಸು 'ದ್ಯಾವಾಪೃಥವೀ' ಯಲ್ಲಿ ವಿಮಾನಯಾನದ ಸಂದರ್ಭದಲ್ಲಿ ಕಂಡ ನಭೋ ವಿಸ್ತಾರದ ನೀರದ ಲೋಕದ ದೃಶ್ಯ ವೈಭವಗಳನ್ನು ವರ್ಣಿಸುತ್ತದೆ. ಹಾಗೆಯೇ 'ಉಗಮ', 'ಸಿಮ್ಲಾ ಸಿಂಫನಿ', 'ಕಾಶ್ಮೀರ' ಇಂಥ ಕೃತಿಗಳಲ್ಲಿ ಈ ಇಳೆಯ ಛಂದೋಲಯ ವಿನ್ಯಾಸಗಳನ್ನು, ಅದರ ಗಿರಿ–ದರಿ ನದಿ ಸರೋವರಗಳ ಸೊಗಸುಗಳನ್ನು ತಕ್ಕ ತನ್ಮಯತೆಯಿಂದ ಚಿತ್ರಿಸುತ್ತದೆ.

## ಪುರಾಣ – ಇತಿಹಾಸ

ಅವರ 'ತ್ರಿಶಂಕುವಿನ ಪ್ರಜ್ಞಾ ಪ್ರಭಾತ' ಮಹಾಕಾವ್ಯದ ಮಿಡಿ ಎಂದು ಅವರೇ ಕರೆದು ಕೊಂಡಿರುವ ಪೌರಾಣಿಕ ಕೃತಿ. ಅವರು ಗಗನಯಾನದ ವಿಸ್ಮಯಾದ್ಭುತಗಳನ್ನು ಅನುಭಾವಿಕ ಸಂಕೇತ ನಿರ್ಮಿತಿಗೆ ಬಳಸಿಕೊಂಡಿರುವ ಕ್ರಮವು ವಿಶಿಷ್ಟವಾದುದಾಗಿದೆ. ಈ ಎಲ್ಲ ಪ್ರವಾಸಾನುಭವ ನಿರ್ಮಿತಿಗಳಲ್ಲಿ ಸೌಂದರ್ಯದ ಯಥಾ ಸ್ವರೂಪ ಕಥನದ ಜತೆಜತೆಗೇ, ಭಾರತೀಯ ಪೌರಾಣಿಕ ಸಂಕೇತ–ಪ್ರತೀಕಗಳ ಸಂಯೋಜನೆಯ ಕ್ರಮವೂ ಬೆಸೆದುಕೊಂಡಿದೆ. ಹೀಗಾಗಿ ಸಮುದ್ರ ಗೀತಗಳು ಮತ್ತು ದ್ಯಾವಾಪೃಥವಿಯ ವಿಸ್ತಾರ ಹಾಗೂ ನಭೋ ಮಂಡಲದ ಅನುಭವಗಳು ಪುರಾಣ ಸ್ಮರಣೆಯ ಶಬ್ದ ಚಿತ್ರಗಳ ಮೂಲಕ ಅಭಿವ್ಯಕ್ತಿಯನ್ನು ಪಡೆದುಕೊಂಡಿವೆ. ಸಮುದ್ರ ಕೇವಲ ಸಮುದ್ರ ರಾಜನಾಗಿ ಕಾಣುವುದಿಲ್ಲ. 'ಗೋಪುರಗಳ ಕಟ್ಟಿ ಗೋಪುರಗಳ ನಳಿಸುವ ರುದ್ರ ಪುರುಷನಂತೆ, 'ನಟಸಾಮ್ರಾಟ'ನಂತೆ, 'ಮಾರುತಿ ಬಲಭೀಮ'ನಂತೆ ಕಾಣುತ್ತದೆ. ಕಡಲ ತೆರೆಗಳು 'ಅರುಣನ ಕುದುರೆಗಳಂತೆ' ಕಾಳ ರಕ್ಕಸರ ಕೋರೆ ಹಲ್ಲುಗಳ ಹೊಳಪಿನಂತೆ 'ಹೆಡೆಯಲ್ಲಿ ಪುಷ್ಪರಾಗವಿಹ ಕಾಳ ಸರ್ಪಗಳಂತೆ'' ಕಾಣುತ್ತದೆ. ಆಕಾಶದ ತುಂಬ ತುರುಗಿದ ತುಂಡು ಮುಗಿಲುಗಳು ಗಾಳಿ ಕುರುಬ ತುರುಬಿದ ಉಣ್ಣೆ ಕುರಿಮರಿಗಳಂತೆ ಕಾಣುವುದಷ್ಟೆ ಅಲ್ಲ, ನೀರದಗಳು ನಾರದನಂತೆ ತೋರುತ್ತವೆ. ವೀಣಾಪಾಣಿಯ ಮಯೂರಗಳಂತೆ ತೋರುತ್ತವೆ: ದುರ್ಗಿಯ ವಾಹನವಾದ ಪಂಚಾನನ (ಸಿಂಹ)ದಂತೆ ಕಾಣುತ್ತದೆ: ಗೋಕಾಕರ ಒಟ್ಟು ಕಾವ್ಯವನ್ನು ಗಮನಿಸಿದರೆ, ಅವರ ಮನಸ್ಸು ಪುರಾಣ ಹಾಗೂ ಇತಿಹಾಸಗಳನ್ನು ತನ್ನ ಕಲ್ಪನೆಗೆ ಹಾಗೂ ಚಿಂತನೆಗೆ ಅಳವಡಿಸಿಕೊಳ್ಳುವ ಸಾಹಸಕ್ಕೆ ಒಲಿದದ್ದು ಎಂಬ ಸಂಗತಿ ಸ್ಪಷ್ಟವಾಗುತ್ತದೆ

## ಕೇಡಿನ ಜಾಲ

ಈ ಸಂದರ್ಭದಲ್ಲಿ 'ಊರ್ಣನಾಭಾವತಾರ' ಎಂಬ ಅವರ, ಅತ್ಯಂತ ವಿಶಿಷ್ಟವಾದ ಕವಿತೆಯೊಂದು ನೆನಪಿಗೆ ಬರುತ್ತದೆ. 'ಊರ್ಣನಾಭ' ಎಂದರೆ ಜೇಡ. ಗೋಕಾಕರು ಈ ಕವಿತೆಯಲ್ಲಿ ದೈತ್ಯ ಜೇಡವೊಂದನ್ನು ಕವಿತೆಯ ಕೇಂದ್ರವನ್ನಾಗಿ ವರ್ಣಿಸುತ್ತಾರೆ. ಈ ದೈತ್ಯಗಾತ್ರದ ಜೇಡ ಇಲ್ಲಿ ಕೇಡಿನ (Evil) ನ ಒಂದು ಪ್ರತೀಕವಾಗಿದೆ. ಇದು ಅನಾದಿ ಕಾಲದಿಂದಲೂ, ಶೇಷಶಾಯಿ ತಲ್ಪವಾದ ಆದಿಶೇಷನ ಕೆಳಗೇ, ಹಾಲ್ಕಡಲಿನ ತಳದೊಳಗೆ ಪಾಚಿಕಟ್ಟಿರುವ ಒಂದೆಡೆ ಮನೆ ಮಾಡಿಕೊಂಡಿದೆ. ಈ ಆದಿಜೇಡ ಸಮಯ ಕಾದು ಮೇಲೆ ಬಂದು ತನ್ನ ಬಲೆಗಳನ್ನು ಹರಡುತ್ತದೆ. ಗಂಗಾಪಾನದಲ್ಲಿ ದೈನಂದಿನ ಉಣಿಸಿನಲ್ಲಿ, ಧ್ಯಾನದಲ್ಲಿ, ನೀತಿ ನಿಯಮಗಳಲ್ಲಿ ತನ್ನ ಬಲೆ ಹರಡಿ ಎಲ್ಲವನ್ನೂ ಭ್ರಷ್ಟಗೊಳಿಸುತ್ತದೆ. ಇಂಥ ಜೇಡನು ಹರಡುವ ಜಾಲದ ವರ್ಣನೆಯನ್ನು ಗೋಕಾಕರು ಈ ಕವಿತೆಯೊಳಗೆ ವಿವಿಧ ಪ್ರತೀಕಗಳಲ್ಲಿ ಚಿತ್ರಿಸಿ, ಕವಿತೆಯ ಕೊನೆಯಲ್ಲಿ ಪ್ರಶ್ನೆಯೊಂದನ್ನು ಎತ್ತುತ್ತಾರೆ– 'ಯಾರು ಜಗತ್ತಿನ ಒಡೆಯ? ಪದ್ಮನಾಭನೋ, ಊರ್ಣನಾಭನೊ?' ಎಂದು. ಆದರೆ ಕವಿತೆ ಇಲ್ಲಿಗೇ ನಿಲ್ಲುವುದಿಲ್ಲ. ಸತ್‌ಶಕ್ತಿಯಂತೆ ಅಸತ್ ಶಕ್ತಿಯೂ ಅನಾದಿಯಾದುದು ಹಾಗೂ ಸಮಾನಾಂತರವಾದದ್ದು ಎಂಬುದು ನಿಜವಾದರೂ, ಸತ್‌ಶಕ್ತಿಯ ಬಗ್ಗೆ ಶ್ರದ್ಧೆಯನ್ನು ಕಳೆದುಕೊಳ್ಳಬಾರದು – ಎಂಬ ಸೂಚನೆಯನ್ನು ಈ ಕವಿತೆ ನೀಡುತ್ತದೆ. ಅದೇ ಹಾಲ್ಕಡಲಿನ ಶೇಷಶಾಯಿಯ ಅಂಕಿತದಲ್ಲಿರುವ ವಾಯುದೇವನು ಬಂದು, ಆದಿಜೇಡನೆಯ್ದ ಬಲೆಗಳನ್ನು ಚಲ್ಲಾಪಿಲ್ಲಿಯನ್ನಾಗಿ ಮಾಡಿದಂತೆ, ಮತ್ತೆ ಆದಿಜೇಡ ಹಾಲುಗಡಲಿನ ತಳದಲ್ಲಿ ಪಾಚಿಗಟ್ಟಿಕೊಂಡ ನೆಲೆಗೆ ಹಿಂದಿರುಗಿದಂತೆ ಈ ಕವಿತೆಯ ವರ್ಣನೆ ಮುಂದುವರಿಯುತ್ತದೆ. ಕೊನೆಯದಾಗಿ 'ಮತ್ತದಕೌತಣ ವಿತ್ತಿರಬೇಡ ತಪ್ಪುದಾರಿ ಹಿಡಿದು' ಎಂಬ ಎಚ್ಚರಿಕೆಯ ದನಿಯಿಂದ ಈ ಕವಿತೆ ಮುಕ್ತಾಯವಾಗುತ್ತದೆ ಎಂದರೆ ಕೇಡಿಗೆ ಆಹ್ವಾನ ಕೊಡುವವರು ಕೊನೆಗೂ ನಾವೇ: ಆದ ಕಾರಣ ತಪ್ಪುದಾರಿ ನಡೆದು ಮತ್ತೆ ಮತ್ತೆ ಕೇಡಿಗೆ ಔತಣ ಕೊಡುವುದು ಬೇಡ ಎಂಬ ಎಚ್ಚರವೆ ನಮಗೆ ರಕ್ಷೆಯಾಗಬೇಕು. ಕೇಡನ್ನು ಕುರಿತು, ಹೊಸ ಪುರಾಣ (myth) ವೊಂದನ್ನು ಗೋಕಾರು ಈ ಕವಿತೆಯಲ್ಲಿ ನಿರ್ಮಿಸಿರುವ ಕ್ರಮ, ಅತ್ಯಂತ ವಿಶಿಷ್ಟವಾಗಿದೆ. ಮತ್ತು ಇದು ಗೋಕಾಕರ ತಾತ್ವಿಕ ನಿಲುವನ್ನು ಸಮರ್ಥವಾಗಿ ಪ್ರತಿಪಾದಿಸುವಂಥದಾಗಿದೆ.

ಅವರ 'ಉಗಮ'ವೆಂಬ ಕವನ ಸಂಗ್ರಹದೊಳಗಿನ ಕವಿತೆಗಳು, ಪರ್ವತಾರಣ್ಯಗಳ ಉತ್ತುಂಗ ಶೃಂಗಗಳಲ್ಲಿ, ನಿಬಿಡಾರಣ್ಯಗಳ ರುದ್ರ ರಮಣೀಯತೆಯಲ್ಲಿ ಆ ಎಲ್ಲ ಸೌಂದರ್ಯದ ವ್ಯಕ್ತ ರಹಸ್ಯದಂತೆ ಹರಿಯುವ ಹೊಳೆಯೊಂದರ ಉಗಮವನ್ನು ಗುರುತಿಸುವ ಅನ್ವೇಷಕನ ಪ್ರತೀಕದಲ್ಲಿ, ಬದುಕಿನ ಮೂಲ ಸೆಲೆಗಳನ್ನು ಹುಡುಕುವ

ಹಂಬಲದ ಅಭಿವ್ಯಕ್ತಿಯಾಗಿದೆ. ಅವರ ಮಹತ್ವಾಕಾಂಕ್ಷೆಯ ಕೃತಿಯಾದ 'ಭಾರತ ಸಿಂಧು ರಶ್ಮಿ' ಋಗ್ವೇದದಿಂದ ತನ್ನ ವಸ್ತುವನ್ನು ಆಯ್ದುಕೊಂಡ, ಸುಮಾರು ಕ್ರಿಸ್ತ ಪೂರ್ವದ ಎರಡು ಸಾವಿರ ವರ್ಷಗಳ ಕಾಲಮಾನದ ಭಾರತೀಯ ಸಂಸ್ಕೃತಿಯ ಒಂದು ವ್ಯಾಖ್ಯಾನವಾಗಿದೆ. ಹೀಗೆ, ವರ್ತಮಾನದ ವ್ಯಾಖ್ಯಾನಕ್ಕೆ ಪುರಾಣವನ್ನು ಬಳಸಿಕೊಳ್ಳುವ ಮತ್ತು ಹೊಸ ಪುರಾಣಗಳನ್ನು ನಿರ್ಮಾಣ ಮಾಡುವ ಕೆಲಸ ಸಾಮಾನ್ಯವಾದದ್ದಲ್ಲ.

ಪುರಾಣದಂತೆ ಇತಿಹಾಸವೂ ಗೋಕಾಕರ ಪ್ರವಾಸ ಪ್ರತಿಭೆಯ ವಸ್ತುವಾಗಿದೆ. 'ಸಮುದ್ರ ಗೀತೆಗಳು' ಕೃತಿಯ ಸಂದರ್ಭದಲ್ಲಿ ಹೇಳುವುದಾದರೆ, ಇಂಡಿಯಾದಿಂದ ಇಂಗ್ಲೆಂಡಿಗೆ ಪ್ರಯಾಣ ಮಾಡುವ ಕುರಿತು ಅವರು ತೋರುವ ಪ್ರತಿಕ್ರಿಯೆ ಅವರ ಇತಿಹಾಸ ಪ್ರಜ್ಞೆಗೆ ಸಾಕ್ಷಿಯಾಗಿದೆ. ಏಡನ್ನಿನ ಹಾಳು ಬೀಳಿನ ನಡುವೆ ಆ ನಾಡಿನ ಜನಕ್ಕೆ ಬೆಳಕು ತಂದ ಪ್ರವಾದಿ ಪೈಗಂಬರ್‌ನ ಸ್ಮರಣೆ : ಆಫ್ರಿಕಾವನ್ನು ಕಂಡಾಗ, ಅದು ಬಿಳಿಯರ ದಬ್ಬಾಳಿಕೆಗೆ ತುತ್ತಾಗಿ ಪಟ್ಟ ಪಾಡುಗಳ ನೆನಪು ಮತ್ತು 'ಹೆದರಬೇಡ ಆಫ್ರಿಕವೇ, ಬರಬಹುದು ನಿನ್ನ ಹುಣ್ಣಿಮೆ ನಾಳೆ' ಎಂಬ ಆಶ್ವಾಸನೆ. ಕ್ರೀಟ್ ಅನ್ನು ಕಂಡಾಗ ಹೋಮರ್ ಕವಿಯ ನೆನಪು; ಕೋರ್ಸಿಕಾ ದ್ವೀಪವನ್ನು ಕಂಡಾಗ ನೆಪೋಲಿಯನ್ನನ ವೀರ ಜೀವನದ ಸ್ಮರಣೆ ಇತ್ಯಾದಿಗಳೂ ಗೋಕಾಕರ ಕಾವ್ಯಾಭಿವ್ಯಕ್ತಿಯ ಒಂದು ಭಾಗವಾಗುತ್ತವೆ. ಹಾಗೆಯೇ ಇವರು ಇಂಗ್ಲೆಂಡನ್ನು ತಲುಪಿದ ನಂತರ ವಸಾಹತುಷಾಹಿ ಸಂದರ್ಭದಲ್ಲಿ ಆಳರಸರ ನಾಡಿನಲ್ಲಿ, ಅಸ್ವತಂತ್ರ ಭಾರತದ ಪ್ರಜೆಯಾಗಿ ತಾವು ಅನುಭವಿಸಿದ 'ಅನಾಥ ಪ್ರಜ್ಞೆ'ಯ ಕಿರಿಕಿರಿಗಳನ್ನು 'ಸಮುದ್ರ ಗೀತಗಳು' 'ಸಮುದ್ರದಾಚೆಯಿಂದ' ಎಂಬ ಕೃತಿಗಳಲ್ಲಿ ದಾಖಲು ಮಾಡುತ್ತಾರೆ. ಹೀಗೆಯೆ 'ಇಂದಲ್ಲ ನಾಳೆ' ಎಂಬ ಕೃತಿಯಲ್ಲಿ ಅಮೆರಿಕಾವನ್ನು ಕಂಡಾಗ ಅದರ ಸಂಪತ್ ಸಮೃದ್ಧಿ ಮತ್ತು ಯಂತ್ರ ವಿಜ್ಞಾನ ಪ್ರಗತಿಯನ್ನು ಅವರು ಮೆಚ್ಚಿಕೊಂಡರೂ, ಅದು ಅನುಸರಿಸುವ ವರ್ಣಭೇದ ನೀತಿಯನ್ನು ಕಂಡು ಮನನೊಂದು ತಮ್ಮ ಪ್ರತಿಕ್ರಿಯೆಗಳನ್ನು ಅಭಿವ್ಯಕ್ತಪಡಿಸುತ್ತಾರೆ. ಇಲ್ಲೆಲ್ಲ ಅವರ ಮಾನವೀಯ ಕಾಳಜಿಗಳು ತುಂಬ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತವೆ. ಒಟ್ಟಿನಲ್ಲಿ, ಗೋಕಾಕರ ಕಾವ್ಯಪ್ರಜ್ಞೆಯಲ್ಲಿ ವಸ್ತುವೊಂದು ಅದರ ಐತಿಹಾಸಿಕ ಪೌರಾಣಿಕ ಸಾಂಸ್ಕೃತಿಕ ಹಿನ್ನೆಲೆಯ ಸಮೇತವಾಗಿ ಅಖಂಡವಾಗಿ ಗೃಹೀತ ವಾಗುತ್ತದೆಯಾದರೂ, ಎಷ್ಟೋ ವೇಳೆ ಈ ಐತಿಹಾಸಿಕ ನೆನಕೆಗಳು, ಪೂರ್ವಸಿದ್ಧವೂ, ಕೃತಕ ಸಂಯೋಜನೆಗೆ ಒಳಪಟ್ಟವೂ ಆದಂತೆ ತೋರುತ್ತವೆ.

ಗೋಕಾಕರ ಕಾವ್ಯ ಪ್ರತಿಭೆಯ ವಿಶೇಷವೆಂದರೆ, ಅದು ಸದಾ ಪ್ರಯೋಗ ಶೀಲವಾದದ್ದು. ಈ ಮಾತನ್ನು ಮತ್ತೆ 'ಸಮುದ್ರ ಗೀತಗಳು' ಕೃತಿಯ ಮೂಲಕವೇ ಪರಿಶೀಲಿಸಬಹುದು.

## ಮುಕ್ತ ಛಂದಸ್ಸು

'ಸಮುದ್ರಗೀತೆಗಳು ರಚಿತವಾದದ್ದು 1936–37ರ ಸಾಲಿನಲ್ಲಿ, ಅದು 'ನವೋದಯ ಕಾವ್ಯ'ವು ತನ್ನ ಉತ್ಸಾಹ ಹಾಗೂ ರಭಸಗಳ ಮೂಲಕ ಉತ್ಕರ್ಷವನ್ನು ಪಡೆದುಕೊಳ್ಳುತ್ತಿದ್ದ ಕಾಲ. ಆಗ ಧಾರವಾಡದಲ್ಲಿ ಬೇಂದ್ರೆಯವರ ಗೆಳೆಯರ ಗುಂಪಿನ ಬೆಳಕಿನಲ್ಲಿ ಕಾವ್ಯ ಕಾಯಕದಲ್ಲಿ ತೊಡಗಿದ್ದ ಗೋಕಾಕರು, ಅಂದು ಸಾಕಷ್ಟು ಪ್ರಚಲಿತವಾದ ಭಾವಗೀತಾತ್ಮಕ ಪದ್ಯ ಬಂಧಗಳ ಸಮೃದ್ಧಿಯ ನಡುವೆ, 'ಸಮುದ್ರ ಗೀತಗಳು' ಮೂಲಕ ಮಕ್ತ ಛಂಧೋ ರೂಪವೊಂದನ್ನು ಆವಿಷ್ಕಾರ ಮಾಡಿಕೊಂಡದ್ದು ತೀರಾ ಆಶ್ಚರ್ಯದ ಸಂಗತಿಯಾಗಿದೆ. ಮೂಲತಃ ಗೋಕಾಕರ ಸಮುದ್ರ ಗೀತಗಳ ಮುಕ್ತ ಛಂದೋ ರೂಪಗಳ ಹಿಂದೆ, ಹನ್ನೆರಡನೆ ಶತಮಾನದ ಶಿವಶರಣರ ವಚನಗಳ ಪ್ರೇರಣೆಯಿದೆ ಎಂಬುದನ್ನು ಗುರುತಿಸುವುದು ಕಷ್ಟವೇನಲ್ಲ, ವಾಸ್ತವವಾಗಿ ಗೆಳೆಯರ ಗುಂಪಿನ ಕಾವ್ಯ ಮಾರ್ಗವು ಉತ್ತರ ಕರ್ನಾಟಕದ ಸಂತ ಸಾಹಿತ್ಯದಿಂದ ಹಾಗೂ ಅರವಿಂದರಿಂದ ಸಾಕಷ್ಟು ಪ್ರೇರಣೆಯನ್ನು ಪಡೆದುಕೊಂಡದ್ದು ನಿಜ. ಆದರೆ ಗೋಕಾಕರು ಆ ಗುಂಪಿನ ಅನೇಕರಂತೆ ಅರವಿಂದರ ಆಧ್ಯಾತ್ಮಿಕತೆಯನ್ನೂ, ಪೂರ್ಣ ಮಾನವತ್ವದ ಕಲ್ಪನೆಯನ್ನೂ ಒಪ್ಪಿಕೊಂಡರೂ, ಕರ್ನಾಟಕದ ಶಿವಶರಣರ ವಚನ ಸಾಹಿತ್ಯದ ಮುಕ್ತ ಛಂದೋ ರೂಪವನ್ನು, ಹೊಸ ಕಾಲದ ಅಗತ್ಯಗಳಿಗೆ ಅಳವಡಿಸುವ ಪ್ರಯೋಗದಲ್ಲಿ ತೊಡಗಿದ್ದರಿಂದ. ಅವರು ಬರೆದ 'ಸಮುದ್ರ ಗೀತೆಗಳು' ವಸ್ತು ಹಾಗೂ ಅಭಿವ್ಯಕ್ತಿಯ ದೃಷ್ಟಿಯಿಂದ ಒಂದು ಬಗೆಯ ಹೊಸತನವನ್ನು ಪಡೆದುಕೊಂಡಿವೆ. ಅವುಗಳ ಹೊಸತನ ಇಂದಿಗೂ ಮಾಸದಿದೆ.

ಈ ಮುಕ್ತ ಛಂದೋಭಿವ್ಯಕ್ತಿಗಳು ಅವತ್ತಿನ ಇಡೀ ನವೋದಯ ಕಾವ್ಯದ ಪದ್ಯ ಬಂಧಗಳ ಬಾಹುಳ್ಯದ ನಡುವೆ ತೀರಾ ವಿಶಿಷ್ಟವಾಗಿಯೆ ಕಂಡಿರಬೇಕು. ಆದರೆ ಹೊಸಗನ್ನಡದಲ್ಲಿ ಮುಕ್ತ ಛಂದಸ್ಸನ್ನು ಮೊದಲಿಗೆ ತಂದ ಯಶಸ್ಸು ಗೋಕಾಕರಿಗೇ ಸಲ್ಲಬೇಕು. ವಾಸ್ತವಾಗಿ ಮುಕ್ತ ಛಂದಸ್ಸು ಅದರ ಸಮಸ್ತ ಸಾಧ್ಯತೆಗಳೊಂದಿಗೆ ವೈವಿಧ್ಯತೆಯನ್ನು ಪಡೆದದ್ದು ಐವತ್ತರ ದಶಕದ ನವ್ಯ ಕಾವ್ಯ ಸಂದರ್ಭದಲ್ಲಿಯೇ. ಈ ದೃಷ್ಟಿಯಿಂದ ನವ್ಯ ಕಾವ್ಯದಲ್ಲಿ ಪ್ರಯೋಗಗೊಂಡ, ಈ ನೂತನ ಛಂದೋಭಿವ್ಯಕ್ತಿಯ ಪ್ರೇರಣೆ ನವ್ಯರಿಗೆ ದೊರೆತದ್ದು ಬಹುಶಃ– ಗೋಕಾಕರ ಸಮುದ್ರ ಗೀತಗಳಿಂದಲೇ ಎಂದು ಕಾಣುತ್ತದೆ. ಅಲ್ಲದೆ ನವೋದಯ ಕಾವ್ಯವು ತನ್ನ ಪ್ರಕರ್ಷಾವಸ್ಥೆ ತಲುಪಿತೆಂದು ಹೇಳಲಾದ ಐವತ್ತರ ದಶಕದಲ್ಲಿ, ಗೋಪಾಲಕೃಷ್ಣ ಅಡಿಗರು ಮತ್ತಿತರ ಕಾವ್ಯದಲ್ಲಿ ಬೇರೊಂದು ಬದಲಾವಣೆಗೆ ಪ್ರಯತ್ನಿಸುತ್ತಿದ್ದ ಸಂದರ್ಭದಲ್ಲಿ ಗೋಕಾಕರು ಸಮುದ್ರ ಗೀತಗಳಲ್ಲಿಯದಕ್ಕಿಂತ ಕೊಂಚ ಬೇರೆಯಾಗಿ ತೋರುವಂತೆ ಮುಕ್ತ ಛಂದಸ್ಸಿನಲ್ಲಿ ಬರೆದ 'ನವ್ಯ ಕವಿತೆಗಳು' (1930) ಎಂಬ ಸಂಗ್ರಹವನ್ನು ಪ್ರಕಟಿಸಿ, ಅದಕ್ಕೆ ಹಿನ್ನೆಲೆಯಾಗಿ

ಮುಂಬೈ ಸಾಹಿತ್ಯ ಸಮ್ಮೇಳನದಲ್ಲಿ ಅವರ ಕಲ್ಪನೆಯ 'ನವ್ಯಕಾವ್ಯ'ದ ಘೋಷಣೆಯನ್ನು ಮಾಡಿಬಿಟ್ಟರು. ಈ ಕಾರಣದಿಂದಾಗಿ ಗೋಕಾಕರನ್ನು ಚಾರಿತ್ರಿಕವಾಗಿ ನವ್ಯ ಸಾಹಿತ್ಯದ ಪ್ರವರ್ತಕರೆಂದು ತಿಳಿಯಲಾಗಿದೆ.

## 'ನವ್ಯ'ದ ಮೊದಲಿಗ

ನವೋದಯದ ನಂತರ ಬದಲಾಗಬೇಕಾಗಿದ್ದ ಕಾವ್ಯಕ್ಕೆ ಅಗತ್ಯವಾದ ಛಂದೋ ರೂಪವನ್ನೂ, 'ನವ್ಯಕಾವ್ಯ' ಎಂಬ ಹೆಸರನ್ನೂ, ಮತ್ತು ನವ್ಯತೆಯನ್ನು ಕುರಿತ ಕೆಲವು ಚಿಂತನೆಗಳನ್ನೂ ಕೊಟ್ಟ ಕಾರಣದಿಂದ ಗೋಕಾಕರನ್ನು ನವ್ಯದ ಮೊದಲಿಗರೆಂದು ಹೇಳಲಾಗಿದೆ. ಅವರು ಬದಲಾಗಬೇಕಾದ ಕಾವ್ಯ ಮಾರ್ಗಕ್ಕೆ ಇಟ್ಟ 'ನವ್ಯ' ಎಂಬ ಹೆಸರೇನೋ ಗಟ್ಟಿಯಾಗಿ ಉಳಿಯಿತು. ಆದರೆ ಅವರ ನವ್ಯತೆಯ ಕಲ್ಪನೆ ಮಾತ್ರ ಅಸ್ವೀಕೃತವಾಯಿತು. ಯಾಕೆಂದರೆ, ನವ್ಯಕಾವ್ಯ ಎಂದರೇನು ಎಂಬುದನ್ನು ಕುರಿತು 'ವ್ಯಕ್ತಿ ನಿಷ್ಠವಾಗಿ ಅದು ನಿರೂಪಿತವಾಗಿದ್ದರೆ ಕಾವ್ಯವು ರೊಮ್ಯಾಂಟಿಕ್ ಮಾದರಿಯದಾಗುತ್ತದೆ : ವಸ್ತುನಿಷ್ಠವಾಗಿ, ನಿರಾಭರಣವಾಗಿ, ನೇರವಾಗಿ ಅದು ವ್ಯಕ್ತವಾಗಿದ್ದರೆ ಕಾವ್ಯವು ನವ್ಯವಾಗುತ್ತದೆ'' ( 1955) ಎಂಬ ಅವರ ಸೂತ್ರೀಕರಣವನ್ನು, ನವ್ಯಕಾವ್ಯವೆಂದರೇನೆಂಬುದನ್ನು ಬಲ್ಲ ಈ ಹೊತ್ತಿನಲ್ಲಿ, ಯಾರಾದರೂ ಒಪ್ಪುವುದು ಕಷ್ಟವಾಗಿದೆ. ಆದರೂ ನವ್ಯ ಕಾವ್ಯದ ಚರಿತ್ರೆಯಲ್ಲಿ ಗೋಕಾಕರಿಗೆ 'ಆದ್ಯ'ರ ಸ್ಥಾನವನ್ನಂತೂ ನಿರಾಕರಿಸುವ ಹಾಗಿಲ್ಲ.

ವಚನ ಸಾಹಿತ್ಯದ ಪ್ರೇರಣೆಯಿಂದ ಸಮುದ್ರಗೀತಗಳ ಅಭಿವ್ಯಕ್ತಿಯನ್ನು ರೂಪಿಸಿಕೊಂಡ ಗೋಕಾಕರು, ಹಿಂದಿನ ಚಂಪೂಕಾವ್ಯದ ತಂತ್ರವನ್ನು ಹೊಸಗನ್ನಡ ಕವಿತೆಗೆ ಅಳವಡಿಸಲು ಪ್ರಯತ್ನಿಸಿದ್ದಾರೆಂಬುದು ಕುತೂಹಲದ ಸಂಗತಿಯಾಗಿದೆ. ಅವರ 'ತ್ರಿವಿಕ್ರಮದ ಆಕಾಶಗಂಗೆ' (1945) ಮತ್ತು 'ಇಂದಲ್ಲನಾಳೆ' (1965) – ಈ ಎರಡೂ ಹೊಸ ಬಗೆಯ ಚಂಪೂಕಾವ್ಯಗಳೆಂದು ಕರೆಯಲ್ಪಟ್ಟಿವೆ. ಇವುಗಳಲ್ಲಿ ಮೊದಲನೆಯದು ಸೌಂದರ್ಯ ಗೆಳತನಗಳ ಆಳವಾದ ಅನುಭವಗಳ ಕಥನ. ಇಲ್ಲಿ ಪದ್ಯ ಭಾಗ ಸರಳ ರಗಳೆಯಲ್ಲಿದ್ದರೆ, ಗದ್ಯಭಾಗ ಹೊಸಗನ್ನಡದಲ್ಲಿದೆ. 'ಇಂದಲ್ಲನಾಳೆ' ಮೂಲತಃ ಇಂಡಿಯಾದಿಂದ ವಿಮಾನದಲ್ಲಿ ಹೊರಟು ವಿವಿಧ ದೇಶಗಳನ್ನು ನೋಡಿಕೊಂಡು ಅಮೆರಿಕಾವನ್ನು ತಲುಪಿದ ಒಂದು ಪ್ರವಾಸ ಕಥನ. ಇಲ್ಲಿ ಪದ್ಯಗಳು ವಿವಿಧ ಛಂದೋ ರೂಪಗಳಲ್ಲಿವೆ. ಗದ್ಯ ಹೊಸಗನ್ನಡದಲ್ಲಿದೆ. ಹಿಂದಿನ ಕಂದ ವೃತ್ತ– ಗದ್ಯ ಸಮ್ಮಿಶ್ರವಾದ ಚಂಪುವಿಗೆ ಪ್ರತಿಯಾಗಿ ಹೊಸಕಾಲದ ಗದ್ಯ ಸಮ್ಮಿಶ್ರವಾದ ಚಂಪುವಿಗೆ ಪ್ರತಿಯಾಗಿ ಹೊಸಕಾಲದ ಗದ್ಯ ಪದ್ಯಗಳ ಅಳವಡಿಕೆಯಿಂದ ಮೂಡುವ ಕಾವ್ಯವು ಹೇಗೆ ತೋರಬಹುದು ಎಂಬ ಕುತೂಹಲವೆ ಈ ಪ್ರಯೋಗಕ್ಕೆ ಪ್ರೇರಣೆಯಾಗಿರಬಹುದು. ಹೀಗೆಯೇ ಗೋಕಾಕರ 'ಬಾಳದೇಗುಲದಲ್ಲಿ' (1955) ಎಂಬ 'ಕಾವ್ಯ ಗುಚ್ಛ'ವು ಮಾನವ ಜೀವನದ ವ್ಯಕ್ತಿತ್ವದ ವಿವಿಧ ಮಾದರಿಗಳನ್ನು ಕುರಿತ ಚಿಂತನೆಯ ಶಿಲ್ಪವಾಗಿ, ಮಾಸ್ತಿಯವರ

'ನವರಾತ್ರಿ'ಯನ್ನು ಸ್ವಲ್ಪ ಮಟ್ಟಿಗೆ ಹೋಲುತ್ತದೆ. ಈ ಎಲ್ಲವೂ ಗೋಕಾಕರ ಪ್ರಯೋಗ ಪರಿಣತಮತಿಗೆ ಸಾಕ್ಷಿಯಾಗಿವೆ.

ಇದು ಮುಖ್ಯವಾಗಿ ಗೋಕಾಕರ ಪ್ರಯೋಗ ಪ್ರಪಂಚ. ಅದೇ ಅವರ ಸಾಹಿತ್ಯ ನಿರ್ಮಿತಿಯ ಬಹುಪಾಲನ್ನು ಒಳಗೊಳ್ಳುತ್ತದೆ. ಅವರು ಬಹು ಹಿಂದೆಯೇ ಬರೆದ, 1268 ಪುಟಗಳಷ್ಟು ಸುದೀರ್ಘವಾದ ಕಾದಂಬರಿ 'ಸಮರಸವೇ ಜೀವನ' ಎನ್ನುವುದು, ಬಹುಶಃ ಕನ್ನಡದಲ್ಲಿಯೇ ಬೃಹದ್ಗಾತ್ರದ ಕೃತಿ. ಕಾವ್ಯ ಮೀಮಾಂಸೆ, ಸಾಹಿತ್ಯ ವಿಮರ್ಶೆಯನ್ನು ಕುರಿತು ಇಂಗ್ಲೀಷ್ ಮತ್ತು ಕನ್ನಡದಲ್ಲಿ ಬರೆದ ಕೆಲವು ಕೃತಿಗಳು, ಪಶ್ಚಿಮದ ಕಾವ್ಯ ತತ್ವಗಳ ಗಾಢವಾದ ತಿಳಿವಳಿಕೆಯನ್ನೂ, ಭಾರತೀಯ ಕಾವ್ಯ ಮೀಮಾಂಸೆ ಹಾಗೂ ಅರವಿಂದರ ವಿಚಾರಧಾರೆಗಳನ್ನೂ ಪ್ರಕಟಿಸುತ್ತವೆ. ಅವರ 'ಭಾರತ ಸಿಂಧುರಶ್ಮಿ' ಸುಮಾರು ಇಪ್ಪತ್ತು ನಾಲ್ಕು ಸಾವಿರ ಪಂಕ್ತಿಗಳಷ್ಟು ಸುದೀರ್ಘವಾಗಿ, ಸಂಕೀರ್ಣ ಛಂದೋ ರೂಪದಲ್ಲಿರುವ, ಋಗ್ವೇದದಿಂದ ಆಯ್ದ ವಸ್ತುವನ್ನೊಳಗೊಂಡ ಇಡೀ ಭಾರತೀಯ ಭಾಷೆಗಳಲ್ಲಿ ಈವರೆಗೆ ನಿರ್ವಹಿತವಾಗದ ಮತ್ತು ಕನ್ನಡದಲ್ಲಿ ಮೊಟ್ಟ ಮೊದಲಿಗೆ ನಿರ್ಮಿತಿಯಾದ ಒಂದು ಮಹಾಕಾವ್ಯ. ಸಾಹಿತ್ಯವನ್ನು ಒಂದು ಕಾಯಕದಂತೆ ಅವಿರತವಾಗಿ ನಡೆಯಿಸಿಕೊಂಡು ಬಂದಿರುವ ಗೋಕಾಕರ ಸಾಹಿತ್ಯ ನಿರ್ಮಿತಿಯ ಹರಹು ತುಂಬ ದೊಡ್ಡದು.

ಕೃಪೆ –

ಪ್ರಜಾವಾಣಿ

## ‘ಭಾಗತ ಸಿಂಧು ರಶ್ಮಿ’ ಕಾವ್ಯದ ಉದ್ದೇಶ, ಕುರಿತ ಕವಿಯ ಆಶಯ

ಅಗ್ನಿಹೋತ್ರವನಿಡದ ವೈದಿಕ, ಸಂಪ್ರದಾಯಗಳ
ಅರಿವಿರದೆ ಯೋಗದಲಿ ಧುಮುಕಿರುವ ಸಾಧಕನು,
ನಗರಮಧ್ಯದಿ ತಪಶ್ಚರಣ ಗೆಯ್ವ ತಪಸ್ವಿ,
ಅದೃಶ್ಯವಿಹ ದೈವತಗಳ ಆರಾಧಕನು:
ದಿವ್ಯ ಗುರುಗಳ ಕೃಪೆಯ ದೃಷ್ಟ ಲಭಿಸಿರಲೆನಗೆ,
ಭವ್ಯ ಕೃತಿಸೃಷ್ಟಿ ಸಂಕಲ್ಪ ಕಿರೆ ವರದಾನ,
ಇಳಿದಿರೆ ಬಾಳಿನೊಳು ತಿರುಳು, ತಿರುಳಿಗಿರುವನಿಕೇತ,
ಪರಂಪರೆಯ ಸಂಕೇತ, ನುಡಿಗಡಣದೊಳಗಿಳಿದು,
ಪುರಾಣವಿರಲಿಂದಿನ ಪ್ರಾಣ, ಕಾಣ್ಕೆಯು ಪುನರ್ನವ,
ಮಹಾಕಾವ್ಯವನೊರೆವ: ಸ್ವಾಂತದಾನಂದಾಬ್ಧಿ
ರಸಿಕರಲಿ ಹೊರಹೊಮ್ಮಿಸಲಿ ಸಪ್ತ ಸಿಂಧುಗಳ!

ವಿಶ್ವಮೈತ್ರಿಯ ಉಷಃಕಾಲದ ಸ್ವರ್ಣ ಕಾಂತಿಜಲ
ಬಾನಂಚಿನಲಿ ತಂದ ಮಿಳಿರು, ಇಮ್ಮಾವಿನಲ್ಲಿ
ಪುಷ್ಪಚಯ–ಫಲಭಾರಗಳ ಸಮಯ ದೂರವಿರೆ
ವಸಂತಋತು ತಂದ ಚಿಗುರುಗೆಂಪಿನ ತಳಿರು;
ಗುಡುಗು ಮೋಡಗಳೆಲ್ಲ ಮಿಂಚಿನೋಡಗಳಾಗಿ
ಕಾರ್ಗಾಲ ಕರೆವ ವರ್ಷಾಧಾರೆ ಬಹ ಮುನ್ನ
ಬೀಳುತಿಹ ಜಿನುಗುಮಳೆ ಹಸನುಗೊಳಿಸುತಿಹ ಇಳೆ:
ಭಾರತದ ಬೆಳಗಿನೈತಿಹ್ಯ ಚಿತ್ರಣವಿಂತು:
ಅಂತೆಯೆ ಕಾವ್ಯ, ಹಂತಹಂತದಲೊರೆವೆ ಘಟನೆಗಳ.

ಜನಾಂಗಗಳೆರಡು ಆರ್ಯ–ದಸ್ಯುಗಳೆಂದು
ಸಂಗ್ರಾಮಿಸುತ ಮುಂದ ಸಂಗಮಿಸಿರುವ ಕೈವಾಡ,
ಪವಾಡದ ಕಥನವಿದು, ಮೂಲಸಂಸ್ಕೃತಿ ಮಥನ !
ಮಾನವಕುಲದೈಕ್ಯತೆಗೆ ವೀಳ್ಯವೆತ್ತಿದ ನಾಡು,
ವರ ಚೇತನದ ಬೀಡು! ಸಂಘಟಿಸಿದವಿಲ್ಲಿ
ಜಾನಪದಗಳು ನೂರು : ಅಗಣಿತ ರಾಜವಂಶಗಳು
ಸಂಗಚ್ಛಿಸಿದವು : ಮಲೆತವು ಮುಂದೆ ಕಲೆತವೀ
ನೆಲದಿ ನಾನಾ ವರ್ಣ, ನಾನಾ ರೀತಿ– ನೀತಿಗಳು!
ಸಂಕೀರ್ಣ ಪೂರ್ಣತೆಯ ಜಗಲಿ ಆಹುದೀ ನಾಡು.

ವಸ್ತುಸ್ಥಿತಿಯ ನಿರಭ್ರ ಕಾಂತಪಟಗಳ ಮೇಲೆ
ರೋಮಾಂಚವನು ತರುವ ವರ್ಣವೈಖರಿ ಮೂಡಿ
ಅಧಿದೈವ–ಅಧ್ಯಾತ್ಮ ವಸ್ತೂತ್ಥಾಪನೆಯೆಲ್ಲ
ಅಧಿಭೌತ ವೃತ್ತರೇಖೆಗಳಲ್ಲಿ ಸಂಗಮಿಸಿ
ಆರ್ಷೇಯ, ಧೀರ, ಧೀರೋದಾತ್ತ, ಲಲಿತಮಯ,
ನೀಚ, ದುರ್ವೃತ್ತ, ನಿರ್ಘೃಣ, ಆಸುರ, ದುಷ್ಕೃತಮ,
ಅಧಮ, ಹಾಸಕ, ಕಿಂಚಿದೂನವಿಹ ಸಂಯಮದ
ತವಸಿಗಳು ಜನ್ಮಿಸಿಹರಿಲ್ಲಿ ಕೂಟದಿ ನೆರೆದು
ತೀರ್ಥಂಕರರೋಳಿ ರನ್ನಬಸದಿಯೊಳಂತೆ ;
ದೇಗುಲದ ಜಂತಿ– ಭಿಂತಿಗಳು ಬಾಹ್ಯಾಂತರದಿ
ಶಿಲೆಯಲ್ಲಿ, ಪಡಿಮೂಡಿಸಿರಲೋರ್ವ ಪ್ರತಿಬ್ರಹ್ಮ,
ರಾರಾಜಿಸುವ ಶಿಲ್ಪಪ್ರಪಂಚದೈಸಿರಿಯಂತೆ !
ಅಲ್ಲವಿದು ವಿಶ್ವಾಮಿತ್ರನಭಿಮಾನದುದ್ರೇಕ
ಸೃಷ್ಟಿಸಿದ ತ್ರಿಶಂಕುಲೋಕ, ಮಾಯಾಮೃಗವು!
ಶುದ್ಧ ಚೇತನ, ವಿಪ್ರಭಾವಕೇತನನಾಗಿ
ವಿಶ್ವಾಮಿತ್ರನನೆ ಪುನರ್ನಿರ್ಮಿಸಿದ ಕೃತಿಯಲ್ಲಿ,
ಸತ್ಯವಿರೆ ಸತ್ಯವನು, ಮಾಯೆಯಿರೆ ಮಾಯೆಯನು !
ಪ್ರಶಾಂತ ಸ್ಮೃತಿ ಬಿಂಬಿಸಿದೆ ರಶ್ಮಿದರ್ಶನವ :
ಅದಕಂತೆ ಪ್ರಪೂರ್ಣ ಚಂದ್ರಿಕಾವೃಷ್ಟಿಯಿದು!
ಸೂರ್ಯಕಾಂತವು ರಶ್ಮಿವಿತರಣವ ಗೆಯ್ಯುತಿದೆ;
ಅದಕಂತೆ ಸೌಮ್ಯೋಜ್ವಲ ಸೌರ ಕಾಂತಿಯಿದು!
ರಸದ ಹವಣರಿಯುತ್ತ ಪವಣಿಸಿಹವೀ ಶಬ್ದ–
ಹೊಮ್ಮುತ್ತ, ಚಿಮ್ಮುತ್ತ, ಒಮ್ಮೊಮ್ಮೆ ಬಿಮ್ಮುತ್ತ,
ಯುಗಮಾನಸಮುಚಿತವು, ವಸ್ತುವಾಸ್ತವಹುದು
ಘಟಪ್ರಭೆಯಂತಿರುವ ವಾಗ್‌ಝರಿ ಲಹರಿ ಲಹರಿ!
ಅಲ್ಲ ಹಳಗನ್ನಡವು; ಅಲ್ಲ ನಡುಗನ್ನಡವು;
ಸಂಸ್ಕೃತವಿಕೃತ ಕನ್ನಡವಲ್ಲ; ವಿಕಲಾಂಗ, ಭಂಗೀಭೂತ
ಆಂಗ್ಲಗನ್ನಡವಲ್ಲ; ಉಪಪ್ರಾಂತ ಕನ್ನಡವಲ್ಲ
ಬಳಕೆನ್ನಡವಲ್ಲ, ಮೊಳಕೆಗನ್ನಡವಲ್ಲ
ಹಳುಕುಗನ್ನಡವಲ್ಲ; ಥುಳುಕುಗನ್ನಡವಲ್ಲ;
ಮೆಚ್ಚುಗನ್ನಡದಲ್ಲಿ ನಾನೂರೆದನೀ ಕೃತಿಯು.
ಸೆಳೆವ ಪ್ರೌಢಿಮೆಯೊಮ್ಮೆ; ಹೊಳೆವ ತಿರುಳ್ನುಡಿಯೊಮ್ಮೆ;
ಹೊಸತು ಪಡೆನುಡಿಯೊಮ್ಮೆ; ಪಳಮೆ – ಪಳವಾತೊಮ್ಮೆ;
ಅಂಕಿತನಾಮ, ಸೃಷ್ಟಪದ, ಪಾರಿಭಾಷಕ ಒಮ್ಮೆ:
ತಮ್ಮಳವಿನೊಳು ನೆಗದು, ತಮ್ಮ ಹವಣನು ಬಗೆದು
ಬಿಡಿಬಿಡಿ ಪದ ಹದಗೊಂಡು ಸ್ವಪದವಾಗಿಹವಿಲ್ಲಿ!

## ‘ಭಾರತ ಸಿಂಧುರಶ್ಮಿ’ ವಸ್ತು–ವಿಸ್ತಾರ–ದರ್ಶನ

ವಿನಾಯಕರ ‘ಭಾರತ ಸಿಂಧುರಶ್ಮಿ’ ಪೂರ್ವ–ಪಶ್ಚಿಮ ಉಭಯ ಮಹಾಕಾವ್ಯಗಳ ಸಮಯ ಸಂಪ್ರದಾಯಗಳನ್ನೂ ಅಳವಡಿಸಿಕೊಂಡು ಅರಳಿರುವ ಆಧುನಿಕ ಮಹಾಕಾವ್ಯ. ಒಂದು ಜನಾಂಗದ ಸಂಸ್ಕೃತಿ, ದೇಶದ ಇತಿಹಾಸ, ಯುಗದ ಧರ್ಮ, ಜಗದ ಪ್ರಜ್ಞೆ, ಇದರಲ್ಲಿ ಪಡಿಮೂಡಿವೆ. ಕಾವ್ಯ ವಸ್ತುವಿನಲ್ಲಿ ಒಂದಾಗಿ ಒಡಮೂಡಿವೆ.

ತ್ರಿಶಂಕುವಿನ ಕಥೆ ‘ಭಾರತ ಸಿಂಧುರಶ್ಮಿ’ ಯಾಗಿ ಬೆಳೆದ ಭೂಮಿಕೆ ಬೆರಗಿನ ಕಥೆಯಾಗಿದೆ. ಋಗ್ವೇದದ ಯುಗವನ್ನು ಕುರಿತ ಕಾವ್ಯ ಇದೊಂದೇ. ಈ ವಾಕ್ಯದಲ್ಲಿ ಎರಡು ಮಾತಿರಲಿಕ್ಕೆ ಶಕ್ಯವಿಲ್ಲ. ಕ್ರಿ.ಪೂ. 2000 ವರ್ಷಗಳ ಹಿಂದಿನ ಭಾರತದ ಭೂಗೋಳವನ್ನು ಇತಿಹಾಸವನ್ನು ಪುರಾಣವನ್ನು, ಒಂದು ಕ್ರಾಂತದೃಷ್ಟಿಯಿಂದ ಕಂಡು ಅದನ್ನೂ ಮಹಾಕಾವ್ಯವಾಗಿ ಪುನಾರಚಿಸಿ ಅದರಲ್ಲಿ ಇನ್ನೂರಕ್ಕೆ ಮಿಕ್ಕ ರಕ್ತಮಾಂಸಗಳ ಜೀವಂತ ಪಾತ್ರಗಳನ್ನು ಓಡಾಡಿಸಿ ಅದಿತಿ–ಪುರುಷೋತ್ತಮರನ್ನೂ ಮೊದಲ್ಗೊಂಡು ದೇವ–ದೇವತೆಗಳನ್ನೂ, ದುಷ್ಟ–ದೈತ್ಯಶಕ್ತಿಗಳನ್ನೂ ಮನುಗಳನ್ನು, ಹಿರಣ್ಯ ಗರ್ಭ, ನಾರದ, ವಾಮದೇವ ಬ್ರಹ್ಮಣಸ್ಪತಿ ಮೊದಲಾದ ಮಹಾಮುನಿಗಳನ್ನೂ ವಸಿಷ್ಠ–ವಿಶ್ವಾಮಿತ್ರರಂತಹ ಋಷಿವರ್ಯರನ್ನೂ ನಿರ್ಮಿಸಿದ ಕಾವ್ಯ ಶಕ್ತಿಯಿಂದಲೇ ದೀನ–ದಲಿತರನ್ನೂ ಆದಿ ಮಾನವರನ್ನೂ ಚಿತ್ರಿಸಿದ ಪ್ರತಿಭೆಯಿಂದ ಶಿಖರಪ್ರಾಯವಾಗಿ ಮೆರೆದ ಕಾವ್ಯ ತನ್ನ ಎತ್ತರ ಬಿತ್ತರಗಳಿಂದ ಮೇರು ಸಮಾನವೇಕಲ್ಲ’.

ಭಾರತ ಸಿಂಧುರಶ್ಮಿಯ ವಸ್ತು ಪುರಾತನ, ಅದರ ವ್ಯಂಜನ ಸಮಕಾಲೀನ; ಅದರ ಸಂದೇಶ ಸರ್ವಕಾಲೀನ. ವೈದಿಕ ಪ್ರಜ್ಞೆಯಲ್ಲಿ ಆಧುನಿಕ ಸಂವೇದನೆ ಇದರ ಗುಣವಿಶೇಷ. ಮುಖ್ಯವಾಗಿ ‘ಭಾರತ ಸಿಂಧುರಶ್ಮಿ, ವಿಶ್ವಾಮಿತ್ರರ ಹಿರಿಮೆಗರಿಮೆಗಳನ್ನೂ ಘೋಷಿಸುವ ಮಹಾಕಾವ್ಯ. ಇದು ವಿಶ್ವಾಮಿತ್ರನ ಕಥೆಯಾಗಿರುವಂತೆ ವೈದಿಕಯುಗದ ಪುನರುಜ್ಜೀವನದ ಕಥೆಯೂ ಹೌದು. ಎಂದರೆ ಆರ್ಯ–ದ್ರಾವಿಡರ ಸಮಾಗಮ, ಸಂಘರ್ಷ, ಸಂಗಮದ ಕಥೆ. ಆರ್ಯ–ದ್ರಾವಿಡ ಸಂಸ್ಕೃತಿಗಳ ಸಮ್ಮಿಳನದ ಕಥೆ. ಈ ಕಾವ್ಯದಲ್ಲಿ ವಿಶ್ವಾಮಿತ್ರರ ಸಂಕೀರ್ಣ ಪಾತ್ರವು ವಿನಾಯಕ ಕಲ್ಪನಾಶಕ್ತಿಯನ್ನೂ ಸೆಳೆದಿದೆ. ಕ್ಷತ್ರಿಯನಾಗಿ ಮಹಾಬ್ರಾಹ್ಮಣನಾಗಬೇಕೆಂಬ ಆತನ ಆಕಾಂಕ್ಷೆ, ಅದನ್ನು ಸಾಧಿಸಿದ ಸ್ಥೈರ್ಯ, ಆರ್ಯ–ದ್ರಾವಿಡ ಮಿಶ್ರಣದ ಸತ್ತ್ವಯ ಸುದಾಸನನ್ನು ಭರತ ಚಕ್ರವರ್ತಿಯನ್ನಾಗಿ ಮಾಡಿದ ಆತನ ಉದ್ಧಾರಕ ಸದ್ವೃತ್ತಿ; ದಾಸ ಜನಾಂಗದ ಸಾಂಕೃತಿಯನ್ನು ಮದುವೆಯಾಗಿ ಆರ್ಯ ಸಮಾಜದಲ್ಲಿ ಉಂಟುಮಾಡಿದ ಕ್ರಾಂತಿಮಯ ಬದಲಾವಣೆ; ದಾಶರಾಜ್ಞ ಯುದ್ಧದಲ್ಲಿ ಸುದಾಸನ ಪಕ್ಷವಹಿಸಿ ಆತನಿಗೆ ಚಕ್ರವರ್ತಿ ಪಟ್ಟವನ್ನೂ ದೊರಕಿಸಿಕೊಟ್ಟ ದಿಟ್ಟ ದಿನದ ಸಾಧನೆ; ಎಲ್ಲಕ್ಕೂ ಹೆಚ್ಚಾಗಿ ತಂದೆಯಿಂದ ಸಮಾಜದಿಂದ ತಿರಸ್ಕೃತನಾದ ತ್ರಿಶಂಕುವಿನ ಪಕ್ಷವಹಿಸಿ ತನ್ನ ತಪಃಫಲವನ್ನು ಪಣಕ್ಕೆ ಹಚ್ಚುವುದು: ಹೀಗೆ ಬಹುಮುಖ ವ್ಯಕ್ತಿತ್ವದ ಸಂಕೀರ್ಣತೆ ವಿನಾಯಕರು ವಿಶ್ವಾಮಿತ್ರನ ಕಥೆ ಹೇಳುವುದಕ್ಕೆ ಪ್ರೇರಕ. ಒಂದು ವೈಶಿಷ್ಟ್ಯ ಪೂರ್ಣ ಪಾತ್ರವನ್ನೂ ವಿನಾಯಕರು ಮುಖ್ಯವಾಗಿ ಋಗ್ವೇದದ ಋಚೆಗಳ ಆಧಾರದ

ಮೇಲೆ ರಚಿಸಿದ್ದಾರೆ. ಪ್ರಥಮತಃ ವಿಶ್ವಾಮಿತ್ರರಲ್ಲಿ ಸಂಕೀರ್ಣತೆ ಮತ್ತು ಬಹುಮುಖ ಕ್ರಿಯಾಶಕ್ತಿಗಳನ್ನೂ ಕವಿಗೆ ಇಲ್ಲಿ ಚಿತ್ರಿಸಬೇಕಿದೆ. ಅಲ್ಲದೆ ತಮ್ಮ ಸ್ವಂತಿಕೆಯಿಂದ, ಸ್ವಕಲ್ಪನೆಯಿಂದ ವಿಶ್ವಾಮಿತ್ರ ಪಾತ್ರದಲ್ಲಿ ಅಂತಿಮ ಸನ್ನಿವೇಶದಲ್ಲಿ ಒಂದು ಪರಿಪೂರ್ಣತೆಯನ್ನು ಕವಿ ಕಂಡಿದ್ದಾರೆ.

ಈ ಮಹಾಕಾವ್ಯದ ರಸರಚನೆ 'ವೇದಪುರಾಣೋಪನಿಷದಾಗಮ ಸೃಷ್ಟಿ' ಪರಂಪರೆಯನ್ನು ತೀಡಿದ ಸರ್ಗಶಿಲ್ಪವಾದರೂ ಇದರಲ್ಲಿ ಸರ್ಗಕ್ಕೆ ಪ್ರತಿಸರ್ಗವಿಲ್ಲ. ಆದರೆ, ಈ ಪುನರ್‍ರಚನೆಯಲ್ಲಿ ಎಲ್ಲವೂ ನಿಸರ್ಗದಂತೆ ನವೀನ. ಈ ಸಪ್ತರಶ್ಮಿಯ ಕಾವ್ಯ ಕಾಮನಬಿಲ್ಲು ವರ್ಣರಂಜಿತವಾಗಿರುವುದಕ್ಕೆ ಇಲ್ಲಿಯ ಛಂದೋವೈವಿಧ್ಯದಂತೆ ಕನ್ನಡ ಭಾಷಾ ಶೈಲಿಯೂ ತನ್ನ ಬೆಡಗನ್ನೂ ನೀಡಿದೆ. ದ್ವಾದಶಕಾಂಡಗಳ ಕಥಾವಸ್ತು ಇರುವ ಈ ಮಹಾಕಾವ್ಯದಲ್ಲಿ ಇಡಿಯ ಕಾವ್ಯಕ್ಕೆ ಹತ್ತನೆಯ 'ತ್ರಿಶಂಕು ಪ್ರಜ್ಞಾಕಾಂಡ'ವು ಜೀವಾಳದ ಭಾಗವಾಗಿದೆ. ಕಥೆಯ ನಿರೂಪಣೆಯಲ್ಲಿ ಪ್ರತಿಮೆ, ಪ್ರತೀಕಗಳ ಬಳಕೆಯಿಂದಾಗಿ ಒಂದು ಬಿಗುವು ಬಂದಿದೆ. ಈ ಮಹಾಕಾವ್ಯದ ರಸಸ್ಥಾನಗಳನ್ನೂ ··· ರೀತಿಯಲ್ಲಿ ಗುರುತಿಸಬಹುದು. ಭಾವಗೀತಾತ್ಮಕತೆ, ದೃಶ್ಯಕಾವ್ಯಾತ್ಮಕತೆ, ಕಥನಾತ್ಮಕತೆ, ಹಾಗೂ ದಾರ್ಶನಿಕತೆ, ಈ ಚತುರ್ಮುಖ ರಸಸ್ಥಾನಗಳು ಇಲ್ಲಿಯ ಹನ್ನೆರಡೂ ಕಾಂಡಗಳಲ್ಲಿ ವಿಜೃಂಭಿಸಿವೆ. ಶೈಲಿಯ ದೃಷ್ಟಿಯಿಂದ ಎತ್ತಿ ತೋರುವಂತಹ ಮಹತಿಯ ಅಂಶಗಳೆಂದರೆ ಮಹೋಪಮೆಗಳು ಮತ್ತು ಭಾಷಾ ಶೈಲಿ. ಇಲ್ಲಿ ಅವುಗಳು ಹೇರಳವಾಗಿಯಾಗಿ ಬಂದಿವೆ.

ಹೀಗೆ ಮಹೋಪಮೆ, ಮಹಾಪಾತ್ರಗಳು, ಪ್ರತಿಮೆ–ಪ್ರತೀಕಗಳ ಮೂಲಕ ಕವಿ ವಿನಾಯಕರು ತಮ್ಮ ಈ ಸರ್ವಕಾಲ ಸತ್ವವುಳ್ಳ ಮಹಾಕಾವ್ಯದ ಪ್ರಸ್ತುತಿಯನ್ನು ಪ್ರಸ್ತಾಪಿಸಿದ್ದಾರೆ

– 'ವಿನಾಯಕ ಮಹಾದರ್ಶನ' ಎನ್ನೆ ಈ ಕೃತಿಯಿಂದ ಆಯ್ದ ಭಾಗ।
ಪ್ರ. ಐ.ಬಿ.ಎಚ್. ಗಾಂಧಿನಗರ, ಬೆಂಗಳೂರು, 1986

(ವಿನಾಯಕರ ಸೃಜನಶೀಲತೆಯ ಸಾಧನೆಯನ್ನು ಮುಖ್ಯವಾಗಿ ಕನ್ನಡ ಸಹೃದಯಿಗಳು ಗುರುತಿಸುವುದು ಅವರ ಎರಡು ಕ್ರಿಯೆಗಳಲ್ಲಿ ಒಂದು–ಆಧುನಿಕ ಕಾವ್ಯಕ್ಕೆ ಪ್ರಾರಂಭಾವಸ್ಥೆಯ ಚೈತನ್ಯವನ್ನು ಹಾಗೂ ಮುನ್ನಡೆಸುವಿಕೆಯನ್ನೂ ಮಾಡಿದರು ಎನ್ನುವ ಅಂಶ ಗಮನಾರ್ಹವಾದುದು. ಎರಡನೆಯದು– ' ಇಜ್ಜೋಡು' ನಂತರ – ಸಮರಸವೇ ಜೀವನ' ಮುಂತಾದ ಕಾದಂಬರಿಗಳಲ್ಲಿ ಆಧುನಿಕ ವಾತಾವರಣ ನಮ್ಮ ಸಂಸ್ಕೃತಿಯೊಳಗೆ ಬೀಸಿದ ಚಿತ್ರದ ಸ್ವರೂಪಗಳನ್ನು ಸಮೃದ್ಧವಾಗಿ ಹಿಡಿಯಲು ಪ್ರಯತ್ನಿಸಿದರು ಎನ್ನುವ ಕಾರಣಕ್ಕಾಗಿ)



# ಕೆ. ವಿ. ಸುಬ್ಬಣ್ಣ

ಟಿ. ಪಿ. ಅಶೋಕ

1991ರಲ್ಲಿ ಫಿಲಿಪ್ಪೈನ್ಸ್ ದೇಶ ನೀಡುವ ಏಷ್ಯಾ ಖಂಡದ ಅತ್ಯಂತ ಪ್ರತಿಷ್ಠಿತ ಪ್ರಶಸ್ತಿಯು ಕೆ.ವಿ. ಸುಬ್ಬಣ್ಣನವರಿಗೆ ಸಿಕ್ಕಿದೆ. ಹೆಗ್ಗೋಡನ್ನು ಅಂತರ ರಾಷ್ಟ್ರೀಯ ಮಟ್ಟದ ಖ್ಯಾತಿಗೆ ಏರಿಸಿದ ಕೀರ್ತಿ ಕೆ.ವಿ. ಸುಬ್ಬಣ್ಣನವರು ಕಟ್ಟಿ ಬೆಳೆಸಿದ 'ನೀನಾಸಂ'ದ್ದಾಗಿದೆ. ಒಂದು ಅರ್ಥದಲ್ಲಿ ಈ ಪ್ರಶಸ್ತಿಯು ಹಳ್ಳಿಯ ರಂಗ ಚಳುವಳಿಗಳಿಗೆ ಸಂದ ಗೌರವವೆಂದೇ ಹೇಳಬೇಕು. ಸುಮಾರು ನಲವತ್ತು ವರ್ಷಗಳ ಕಾಲ ಹೆಗ್ಗೋಡನ್ನು ರಂಗನಾಟಕಗಳ ಪ್ರಾತಿನಿಧಿಕ ಚಟುವಟಿಕಾ ಕೇಂದ್ರವನ್ನಾಗಿ ಮಾಡಲು ಸುಬ್ಬಣ್ಣನವರು ಅಗಾಧವಾಗಿ ಶ್ರಮಿಸಿದ್ದಾರೆ.

ಸಾಂಸ್ಕೃತಿಕ ಕ್ಷೇತ್ರದಲ್ಲಿ ಪರ್ಯಾಯ ನೆಲೆಗಳನ್ನು ರೂಪಿಸುವಲ್ಲಿ ಸುಬ್ಬಣ್ಣನವರ ಹೆಗ್ಗೋಡು ವಹಿಸಿರುವ ಪಾತ್ರವು ಮಹತ್ವದ್ದಾಗಿದೆ. ಗ್ರಾಮೀಣ ಪರಿಸರದಲ್ಲಿ ಅಭಿರುಚಿಯ ಶ್ರೇಷ್ಠತೆಯನ್ನು ಸಹಜವಾಗಿಯೇ ಮೈತಳೆಯುವಂತೆ ಮಾಡಿದ ಅಗಾಧ ಪರಿಶ್ರಮ ಸುಬ್ಬಣ್ಣ ಮತ್ತು ನೀನಾಸಂ ಗುಂಪಿನದಾಗಿದೆ. ಪರಿಸರ, ಸಾಂಸ್ಕೃತಿಕ ಅಭಿವ್ಯಕ್ತಿ ಮತ್ತು ಸೃಜನಶೀಲತೆ ಇವು ಮುಪ್ಪುರಿಗೊಂಡು ಒಂದು ಹೊಸ ಲೋಕ ಸೃಷ್ಟಿಯಾದಂತೆ ಹೆಗ್ಗೋಡು ರೂಪುಗೊಂಡಿದೆ.

ಸುಬ್ಬಣ್ಣನವರು ಬದುಕಿನಲ್ಲಿ ತಾವು ನಂಬಿದ ತತ್ವಗಳನ್ನು ಒಟ್ಟು ತಾವು ಕಟ್ಟುವ ವಾತಾವರಣದಲ್ಲಿಯೂ ಕ್ರಿಯಾತ್ಮಕವಾಗಬೇಕೆಂದು ನಂಬಿದವರು. ವಿಕೇಂದ್ರೀಕರಣ, ಸರ್ವಧರ್ಮ ಸಮಾನತೆ, ಸಾಮಾನ್ಯ ಜನರ ಅಂತಃಸತ್ವದಲ್ಲಿ ನಂಬುಗೆ, ಸಮೂಹ ಸೃಜನಶೀಲ ಕ್ರಿಯೆಯಲ್ಲಿ ಗಾಢ ನಂಬಿಕೆ—ಇವೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ನೀನಾಸಂ ಕಟ್ಟುವಲ್ಲಿ ಪ್ರಧಾನ ಮೌಲ್ಯಗಳಾಗಿವೆ.

ನಾಟಕ, ಸಿನಿಮಾ ಮತ್ತು ಸಾಹಿತ್ಯ ಈ ಮೂರು ಕಲಾಮಾಧ್ಯಮಗಳಿಂದ ಸಾಂಸ್ಕೃತಿಕ ಅನ್ವೇಷಣೆಯನ್ನು, ಹೊಸ ಅರಿವುಗಳನ್ನು ಪಡೆದುಕೊಳ್ಳುವ ಸಾಧ್ಯತೆಗಳನ್ನು ಸುಬ್ಬಣ್ಣ ಪ್ರಯತ್ನಿಸುತ್ತಿದ್ದಾರೆ. ಬದುಕನ್ನು ಅರಿಯುವ ತೀವ್ರತೆ ಸುಬ್ಬಣ್ಣನವರಲ್ಲಿ ಹಲವಾರು ಶೋಧನೆಯ ಆಯಾಮಗಳನ್ನು ಹುಟ್ಟಿಸಿದೆ. ಈ ಕಾರಣದಿಂದಲೇ ಎಲೆ ಅಡಿಕೆ ಬಾಯಿಯ, ಸದಾ ಹಸನ್ಮುಖನಾದ ಸುಬ್ಬಣ್ಣ ನಿಗರ್ವಿಯಾದ, ಸಾಮಾನ್ಯರಲ್ಲಿ ಸಾಮಾನ್ಯನಂತೆ ಕಾಣುವ ಒಂದು ವಿಶೇಷತೆಯನ್ನು ಪಡೆದಿದ್ದಾರೆ.

ಕಲಾ ಮಾಧ್ಯಮಗಳಿಂದ ಹೊರಡುವ ಹೊಸ ಸಾಮಾಜಿಕ ಜವಾಬ್ದಾರಿಯ ಅರಿವಿನ ಗ್ರಹಿಕೆಗಳು ಸುಬ್ಬಣ್ಣನವರ ಪ್ರಯತ್ನಗಳ ಹಿಂದೆ ಇರುವ ಕಾಳಜಿಗಳಾಗಿರುವುದರಿಂದಲೇ ಅವರಿಗೆ ಸಂದ ಈ ಪ್ರಶಸ್ತಿ ಅತ್ಯಂತ ಸೂಕ್ತವಾದದ್ದಾಗಿದೆ.

## ನೀನಾಸಂ ಸುಬ್ಬಣ್ಣ

ಕಳೆದ ವರ್ಷ ಬಾಳಪ್ಪ ಹುಕ್ಕೇರಿ ಅವರು ಹೆಗ್ಗೋಡಿಗೆ ಬಂದು ನೀನಾಸಂ ಆಶ್ರಯದಲ್ಲಿ ಹಾಡಿನ ಕಾರ್ಯಕ್ರಮವೊಂದನ್ನು ನೀಡಿದರು. ಎಂಭತ್ತರ ಪಕ್ವ ಜೀವ, ಹಾಡಿನಷ್ಟೇ ಮಾತು ಸೊಗಸು, ಹಾಡು, ಮಾತು, ಹಾಡು–ಹೀಗೇ ಸಾಗಿದ್ದಾಗ ಕಂಚಿನ ಕಂಠದಲ್ಲಿ ತಮಗೇ ವಿಶಿಷ್ಟವಾದ ಉತ್ತರ ಕರ್ನಾಟಕದ ಸೊಗಡಿನ ಧ್ವನಿಯಲ್ಲಿ ಹೇಳಿದರು; "ನೀನಾಸಮ ಅಂದ್ರೆ ಏನಪಾ? ನೀನಾಸಮ ಅಂದ್ರೆ ಏನಪಾ? ನೀನಾಸಮ ಅಂದ್ರ ನೀ ನಾ ಸಮ. ಅರ್ಥಾತ್ ನೀನು ನಾನು ಸಮಾನರು. ಅದಾ ನೀನಾಸಮದ ಸತ್ವ, ಅದಾ ನೀನಾಸಮದ ತತ್ವ.'' ದೇಶ ವಿದೇಶಗಳ ಹಲವು ಗಣ್ಯರು ನೀನಾಸಂ ಬಗ್ಗೆ ಬರೆದಿದ್ದಾರೆ. ಆದರೆ ನೀನಾಸಂ ಚಟುವಟಿಕೆಗಳ ಹಿಂದಿನ ಸಿದ್ಧಾಂತ ಮತ್ತು ಧೋರಣೆಗಳನ್ನು ಬಾಳಪ್ಪ ಹುಕ್ಕೇರಿಯವರಷ್ಟು ಸಾಂದ್ರವಾಗಿ ಸಂಗ್ರಹವಾಗಿ ನಿರೂಪಿಸಿದವರು ಮತ್ತೊಬ್ಬರಿಲ್ಲ.

ಖ್ಯಾತ ರಂಗ ತಜ್ಞ ಡಾ. ರುಸ್ತುಂ ಭರೂಚ ಅವರು ಈಚೆಗೆ theatre and the world ಎಂಬ ಪುಸ್ತಕ ಪ್ರಕಟಿಸಿದ್ದಾರೆ. ಜಗತ್ತಿನ ಹಲವು ಪ್ರತಿಷ್ಠಿತ ರಂಗ ಚಟುವಟಿಕೆಗಳ ಬಗ್ಗೆ ಅಪಾರವಾದ ವಿದ್ವತ್ತು, ಒಳನೋಟಗಳ ಹಲವು ಮೌಲಿಕ ಲೇಖನಗಳನ್ನು ಭರೂಚ ಬರೆದಿದ್ದಾರೆ. Ninasam : a cultural alternative ಎಂಬ ದೀರ್ಘ ಲೇಖನವೊಂದನ್ನು ಈ ಪುಸ್ತಕದಲ್ಲಿ ಕಾಣಬಹುದು. ಪ್ರಾಯಶಃ ನೀನಾಸಂ ಬಗ್ಗೆ ಇದುವರೆಗೆ ಪ್ರಕಟವಾಗಿರುವ ಲೇಖನಗಳಲ್ಲಿ ಭರೂಚ ಅವರದು ಅತ್ಯಂತ ದೀರ್ಘವಾದದ್ದು ಮತ್ತು ವಿಮರ್ಶಾತ್ಮಕವಾದದ್ದು. ಒಂದು ಹಂತದಲ್ಲಿ ಭರೂಚ ಹೇಳುತ್ತಾರೆ: "ಸುಬ್ಬಣ್ಣನವರ ಕಾರ್ಯ ಸ್ವರೂಪವನ್ನು ಗಾಂಧಿವಾದಿ ಕ್ರಮವೆಂದು ಬಣ್ಣಿಸಲು ಆಸೆಯಾಗುತ್ತದೆ ..... ವಿಕೇಂದ್ರೀಕರಣಕ್ಕೆ ಬದ್ಧತೆ, ಆರ್ಥಿಕ ಶಿಸ್ತು, ಸರಳತೆ–ಎಲ್ಲಕ್ಕಿಂತ ಹೆಚ್ಚಾಗಿ ಗ್ರಾಮವೊಂದನ್ನು ಮೂಲಭೂತ ಸಾಮಾಜಿಕ ಘಟಕವೆಂದು ಭಾವಿಸುವ ದೃಷ್ಟಿ ಇವೆಲ್ಲ ಗಾಂಧಿಗೆ ಪ್ರಿಯವಾದ ಗುಣಗಳು. ಧರ್ಮ ನಿರಪೇಕ್ಷ ಸಮಾಜವೊಂದರಲ್ಲಿ ನೀನಾಸಂನ್ನು ಆಶ್ರಮವೆಂದು ಕರೆಯುವುದು

ಆಭಾಸವಾಗಬಹುದು. ಆದರೆ ಇಲ್ಲಿನ ಶಿಸ್ತು, ಬದ್ಧತೆ, ಸರಳ ಜೀವನ ಶೈಲಿ, ಸತತ ದುಡಿಮೆ ಇವುಗಳಿಂದಾಗಿ ನೀನಾಸಂನ್ನು ಒಂದು 'ರಂಗಭೂಮಿ–ಆಶ್ರಮ' ಎಂದು ಕರೆಯುವುದು ಅಷ್ಟೇನೂ ಅನುಚಿತವಾಗಲಾರದು.''

ಹಳ್ಳಿಗೇ ದಿಳ್ಳಿಯನ್ನು ಕರೆಸಿಕೊಂಡ ಮನಶಾ ಎಂದು ಬಾಳಪ್ಪ ಹುಕ್ಕೇರಿ ಅವರಿಂದ, ವಿನಯಶೀಲ ದಾರ್ಶನಿಕ ಎಂದು ರುಸ್ತುಂ ಭರೂಚ ಅವರಿಂದ ಮೂಡಿ ಬಂದ ಹೇಳಿಕೆಗಳು ಎರಡು ತುತ್ತ ತುದಿಯಲ್ಲಿ ನೀನಾಸಂ ಮತ್ತು ಕೆ.ವಿ. ಸುಬ್ಬಣ್ಣ ಅವರ ಬಗ್ಗೆ ಒಂದೇ ಸತ್ಯವನ್ನು ಮಂಡಿಸುತ್ತವೆ.

ನೀನಾಸಂ ಮತ್ತು ಕೆ.ವಿ. ಸುಬ್ಬಣ್ಣನವರ ಸಂಬಂಧ ಎಷ್ಟು ಅಭಿನ್ನವಾದದ್ದೆಂದರೆ ಒಂದನ್ನು ಬಿಟ್ಟು ಮತ್ತೊಂದನ್ನು ಯೋಚಿಸಲೂ ಸಾಧ್ಯವಿಲ್ಲ. ಸುಬ್ಬಣ್ಣ ವಿದ್ವತ್ಪೂರ್ಣ ಲೇಖನಗಳನ್ನು ಬರೆದಿದ್ದಾರೆ. ನಾಟಕಗಳನ್ನು ಬರೆದು, ಅನುವಾದಿಸಿ, ನಿರ್ದೇಶಿಸಿದ್ದಾರೆ. ಆದರೆ ನೀನಾಸಂ ಸಂಸ್ಥೆಗಳೇ ಸುಬ್ಬಣ್ಣನವರ ಅತ್ಯಪೂರ್ವ ಕಲಾಕೃತಿಗಳೆಂದು ಹೇಳಿದರೆ ಅದನ್ನು ವ್ಯಂಗ್ಯವೆಂದು ಯಾರೂ ಭಾವಿಸಬಾರದು. ದೈನಂದಿನ ಕಾಯಕವನ್ನೇ ಕಲೆಯಾಗಿ ಮಾರ್ಪಡಿಸಬಲ್ಲ ಚೈತನ್ಯವಿರುವುದು ಸುಬ್ಬಣ್ಣನವರಂಥ ವಿರಳರಲ್ಲಿ ಮಾತ್ರ. ಸುಬ್ಬಣ್ಣ ಏನು ಮಾಡಿದರೂ ಅದರಲ್ಲಿ ಒಂದು ಪ್ರೌಢಿಮೆ, ಒಂದು ಸೌಂದರ್ಯ ಇದ್ದೇ ಇರುತ್ತದೆ. ಉದಾಹರಣೆಗೆ ಅವರು ತಮ್ಮ ಕೆಲವು ಸಂಸ್ಥೆಗಳಿಗೆ ಕೊಟ್ಟಿರುವ ಹೆಸರುಗಳನ್ನು ನೋಡಿ, ಪ್ರಕಾಶನ ಸಂಸ್ಥೆ: ಅಕ್ಷರ ಪ್ರಕಾಶನ, ಮುದ್ರಣಾಲಯ: ಅಚ್ಚುಮೆಚ್ಚು, ಮುದ್ರಣಾಲಯದ ಬೈಂಡಿಂಗ್ ವಿಭಾಗ: ಅಚ್ಚುಕಟ್ಟು, ಹಳ್ಳಿಯ ಒಂದು ಗ್ರಂಥಾಲಯ ಕಟ್ಟಡಕ್ಕೆ ಕೊಟ್ಟ ಹೆಸರು: ವಚನ ವಾಸ್ತು. ನೀನಾಸಂ ರೆಪರ್ಟರಿಯ ಹೆಸರು: ತಿರುಗಾಟ, ಎಷ್ಟು ಧ್ವನಿಪೂರ್ಣವಾಗಿದೆ. ಅಂದರೆ ಸುಬ್ಬಣ್ಣ ಶಬ್ದಾಲಂಕಾರ ಪ್ರಿಯರೆಂದೇನೂ ಅಲ್ಲ, ತೀರಾ ಸಾಮಾನ್ಯವೆನ್ನಿಸುವ ಅಂಶಗಳಲ್ಲೂ ಅವರ ಸೌಂದರ್ಯಪ್ರಜ್ಞೆ ಹೇಗೆ ಮಿಂಚುತ್ತದೆ ಎಂಬುದನ್ನು ಸೂಚಿಸಲು ಈ ಉದಾಹರಣೆ ಅಷ್ಟೆ. ಸುಬ್ಬಣ್ಣನವರು ವೇದಿಕೆಯ ಮೇಲೆ ನಿಂತು ಪ್ರಾಸ್ತಾವಿಕ ಭಾಷಣಗಳನ್ನು ಮಾಡಲಿ, ವಿದ್ವತ್ ಸಭೆಗಳಲ್ಲಿ ವಿಶ್ಲೇಷಣಾತ್ಮಕ ಪ್ರಬಂಧಗಳನ್ನು ಮಂಡಿಸಲಿ, ಕೊನೆಗೆ ಬ್ಲರ್ಬ್, ಪಾಂಫ್ಲೆಟ್‌ಗಳನ್ನು ಬರೆಯಲಿ, ಅಲ್ಲಿ ಅವರ ಭಾಷಾ ಬಳಕೆಯ ವಿಶಿಷ್ಟ ಮುದ್ರೆ ಬಿದ್ದಿರುತ್ತದೆ. ಭಾಷೆಯ ಬಳಕೆಯ ಬಗ್ಗೆ ಸುಬ್ಬಣ್ಣನವರಿಗೆ ಇದೊಂದು ಕೇವಲ ವ್ಯಾಮೋಹವಲ್ಲ ಎಂಬುದು ಅವರ ಪ್ರೌಢ ಬರಹಗಳನ್ನು ಮತ್ತೆ ಮತ್ತೆ ಓದುತ್ತಿದ್ದಂತೆ ಕ್ರಮೇಣ ಅರಿವಾಗತೊಡಗುತ್ತದೆ. ಮಾತು ಸಂಪರ್ಕ ಸಾಧನವಾದ್ದರಿಂದ ಯಾವ ಮಾತು, ಯಾವ ಧಾಟಿ, ಯಾವ ನಿರ್ದಿಷ್ಟ ವಿಚಾರ, ಭಾವ, ಅನ್ನಿಸಿಕೆಗಳನ್ನು ಹೇಗೆ ಅಭಿವ್ಯಕ್ತಿಸುತ್ತದೆ ಎಂಬುದು ಅವರಿಗೆ ಮುಖ್ಯವಾಗುತ್ತದೆ. ಮನುಷ್ಯನ ಸಮಸ್ಯೆಗಳಲ್ಲೆಲ್ಲ ಈ ಸಂಪರ್ಕದ, ಅಭಿವ್ಯಕ್ತಿಯ ಸಮಸ್ಯೆಯೇ ಮುಖ್ಯವಾದದ್ದು ಎಂದು ಅವರು ಭಾವಿಸುವಂತೆ ಕಾಣುತ್ತದೆ. ನಾವು ನಮ್ಮನ್ನೂ ಇತರರನ್ನೂ ಹೆಚ್ಚು ಹೆಚ್ಚು ಆಳವಾಗಿ, ಅರ್ಥಪೂರ್ಣವಾಗಿ

ಅರಿಯುತ್ತ ಹೋದಂತೆ, ಮಾನವೀಯ ಸಂಬಂಧಗಳು ಗಾಢವಾಗಿ, ನಮ್ಮನ್ನು ಕಟ್ಟಿಕೊಂಡಿರುವ ಕಗ್ಗಂಟುಗಳು ನಿಧಾನವಾಗಿ ಬಿಚ್ಚಿಕೊಳ್ಳುತ್ತಾ ಹೋಗಿ ನಾವು ಹೆಚ್ಚು ಹೆಚ್ಚು ಸ್ವತಂತ್ರರೂ ಪ್ರಬುದ್ಧರೂ ಆಗಿ ನಮ್ಮ ಬದುಕು ಈಗಿರುವುದಕ್ಕಿಂತ ಸುಂದರವೂ ಅರ್ಥಪೂರ್ಣವೂ ಆಗುತ್ತದೆ ಎಂಬುದು ಅವರ ಗಾಢ ನಂಬಿಕೆಯಾಗಿದೆ ಎನಿಸುತ್ತದೆ. ಹೀಗಾಗಿ ಎಲ್ಲ ಸಂವಹನ ಮಾಧ್ಯಮಗಳ ಸ್ವರೂಪ ಮತ್ತು ಸಾಧ್ಯತೆಗಳ ಬಗ್ಗೆ ಸುಬ್ಬಣ್ಣನವರಿಗೆ ಅಪಾರವಾದ ಆಸಕ್ತಿ, ಕಾಳಜಿ, ಕೇಳುವ-ಕೇಳಿಸುವ, ಕಾಣುವ-ಕಾಣಿಸುವ, ಎಲ್ಲ ಚಟುವಟಿಕೆಗಳನ್ನೂ ಅವರು ತುಂಬಾ ಗಂಭೀರವಾಗಿ ಪರಿಗಣಿಸುವುದು ಇದೇ ಕಾರಣಕ್ಕಾಗಿ. ಸಾಹಿತ್ಯದಂತೆ ರಂಗಭೂಮಿ, ಚಲನಚಿತ್ರಗಳೂ ಸುಬ್ಬಣ್ಣನವರಿಗೆ ಏಕೆ ಮುಖ್ಯವಾಗುತ್ತವೆ. ಎಂಬುದು ಈಗ ಹೊಳೆಯುತ್ತ ಹೋಗುತ್ತವೆ. ಕೇಳುವ-ಕೇಳಿಸುವ. ಕಾಣುವ-ಕಾಣಿಸುವ ಚಟುವಟಿಕೆಗಳು ಬೇರ ಎಲ್ಲ ರೀತಿಯ ರಾಜಕೀಯ ವ್ಯವಸ್ಥೆಗಳಿಗಿಂತ ಹೆಚ್ಚಾಗಿ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಮುಕ್ತವಾಗಿಯೂ. ವ್ಯಾಪಕವಾಗಿಯೂ ಇರುವುದರಿಂದ ಅವರು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ರಾಜಕೀಯವಾಗಿ ಎತ್ತಿ ಹಿಡಿಯುತ್ತಾರೆ. ಪರ್ಯಾಯವಾಗಿ, ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಗಟ್ಟಿಗೊಳಿಸುವುದೆಂದರೆ ಕೇಳುವ-ಕೇಳಿಸುವ, ಕಾಣುವ-ಕಾಣಿಸುವ ಚಟುವಟಿಕೆಗಳನ್ನು ಅವುಗಳ ಎಲ್ಲ ಸ್ತರಗಳಲ್ಲಿ ವಿಸ್ತರಿಸಿಕೊಳ್ಳುತ್ತ. ಗಟ್ಟಿಗೊಳಿಸಿಕೊಳ್ಳುತ್ತ ಹೋಗುವುದೇ ಆಗುತ್ತದೆ. ಎಲ್ಲ ಬಗೆಯ ಸಂವಹನ ಮಾಧ್ಯಮಗಳು ಎಲ್ಲರಿಗೂ ಸಿಗಬೇಕಾದ್ದು ಈ ಕಾರಣದಿಂದ ಮುಖ್ಯವಾಗುತ್ತದೆ. ನೀನಾಸಂ ಮತ್ತು ಅಕ್ಷರ ಪ್ರಕಾಶನಗಳಂಥ ಸಂಸ್ಥೆಗಳ ಹಿಂದಿನ ಪ್ರೇರಣೆಗಳು ಇವೇ. ನೀನಾಸಂ ಸ್ವತಃ ನಾಟಕ ಪ್ರದರ್ಶನಗಳನ್ನು ನೀಡುವಂತೆ ಉಳಿದ ತಂಡಗಳನ್ನೂ ಅಷ್ಟೇ ಆಸ್ಥೆಯಿಂದ ಏಕೆ ಬರಮಾಡಿಕೊಳ್ಳುತ್ತದೆ; ಚಲನಚಿತ್ರ ಪ್ರದರ್ಶನಗಳನ್ನು ಏಕೆ ನಿಯೋಜಿಸುತ್ತದೆ; ಸಂಗೀತ, ಯಕ್ಷಗಾನ,, ವಿಚಾರ ಸಂಕೀರ್ಣಗಳನ್ನಷ್ಟೇ ಅಲ್ಲದೆ ಮಕ್ಕಳ ನಾಟಕ, ಮಕ್ಕಳ ಯಕ್ಷಗಾನ, ಮಕ್ಕಳ ಪುಸ್ತಕಗಳ ಗ್ರಂಥ ಭಂಡಾರ-ಇಲ್ಲೆಲ್ಲ ಏಕೆ ತೊಡಗಿಕೊಳ್ಳುತ್ತದೆ ಎಂಬ ಪ್ರಶ್ನೆಗಳಿಗೆ ಈಗ ಉತ್ತರಗಳು ಹೊಳೆಯುತ್ತವೆ. ಅಕ್ಷರ ಪ್ರಕಾಶನ ಪ್ರಕಟಿಸಿರುವ ಪುಸ್ತಕಗಳ ವೈವಿಧ್ಯ ಈ ಮಾತನ್ನು ಪುಷ್ಟೀಕರಿಸುತ್ತದೆ. ನಾಡಿನಲ್ಲೆಲ್ಲ ರಂಗ ಮತ್ತು ಚಲನಚಿತ್ರ ಚಟುವಟಿಕೆಗಳನ್ನು ಹಬ್ಬುವಂತ ನೀನಾಸಂ ಮಾಡುತ್ತಿರುವ ಪ್ರಯತ್ನಗಳ ಹಿಂದಿನ ತಾತ್ವಿಕತೆ ಇದು, ಮೂರು ತಿಂಗಳಿಗೊಮ್ಮೆ ಪ್ರಕಟಗೊಳ್ಳುವ ನೀನಾಸಂ ಸುದ್ದಿ ಪತ್ರಿಕೆಯ ಹೆಸರೇ 'ಮಾತುಕತೆ.'

ನೀನಾಸಂ ರಾಜಕೀಯ ಧೋರಣೆಗೂ ನೀನಾಸಂ ಕಲಾಮೀಮಾಂಸೆಗೂ ಇರುವ ನಿಕಟ ಸಂಬಂಧ ಕೂಡ ಕುತೂಹಲಕಾರಿಯಾಗಿದೆ. ನೀನಾಸಂ ಕಲೆಯೊಂದಿಗೆ ರಾಜಿ ಮಾಡಿಕೊಳ್ಳುವುದಿಲ್ಲ. ತನ್ನ ಮಿತಿಯಲ್ಲಿ ಮತ್ತು ಪ್ರದರ್ಶಕ ಕಲೆಗಳ ಚೌಕಟ್ಟಿನ ಮಿತಿಯಲ್ಲಿ ಅದು ಶ್ರೇಷ್ಠತೆಯನ್ನು ಸಾಧಿಸಲು ಸದಾ ಹೆಣಗುತ್ತದೆ. ಆದರೆ ಶ್ರೇಷ್ಠತೆಯನ್ನು ಒಂದು ವ್ಯಸನವನ್ನಾಗಿ ಮಾಡಿಕೊಳ್ಳುವುದಿಲ್ಲ. ಶ್ರೇಷ್ಠತೆ ಮತ್ತು

ಸಮಾನತೆ ಎರಡೂ ಒಟ್ಟೊಟ್ಟಿಗೇ ಹೋಗಬೇಕೆಂಬುದು ಸುಬ್ಬಣ್ಣನವರ ಯಾವತ್ತೂ ಅಪೇಕ್ಷೆಯಾಗಿದೆ. ಒಂದನ್ನು ಮತ್ತೊಂದಕ್ಕೆ ಬಲಿ ಕೊಡಬಾರದು. ಆದ್ದರಿಂದಲೇ ಗಣ್ಯರು ಜನಸಾಮಾನ್ಯರು ಎನ್ನುವಂಥ ಸರಳೀಕೃತ ವಿಂಗಡಣೆಗಳನ್ನು ಸುಬ್ಬಣ್ಣ ಒಪ್ಪುವುದಿಲ್ಲ. ಶ್ರೇಷ್ಠತೆಯ ಆದರ್ಶವನ್ನೇ ಅವರು ನಿರಾಕರಿಸುವುದಿಲ್ಲ. ಆದರೆ ಕೇವಲ ಶ್ರೇಷ್ಠತೆಯ ಬೆನ್ನು ಹತ್ತಿ ಗಣ್ಯ ಅಲ್ಪಸಂಖ್ಯೆಯ ವರ್ಗವೊಂದನ್ನು ಸೃಷ್ಟಿಸಿಕೊಂಡು ಸುತ್ತಲ ಜನರಿಂದ ದೂರವಾಗಿ ದಂತ ಗೋಪುರದಲ್ಲಿ ಕುಳಿತುಕೊಳ್ಳುವುದನ್ನು ಅವರು ವಿರೋಧಿಸುತ್ತಾರೆ. ಜನಸಾಮಾನ್ಯರು ಒಳ್ಳೆಯ ಕಲೆಯನ್ನು ಅರ್ಥ ಮಾಡಿಕೊಳ್ಳಲಾರರು, ಅನುಭವಿಸಲಾರರು ಎಂಬ ಹುಸಿ ವಾದಗಳನ್ನು ಅವರು ಕಟುವಾಗಿ ಟೀಕಿಸುತ್ತಾರೆ. ಎಲ್ಲ ಮನುಷ್ಯರೂ ಸಮಾನರು. ಆದರೆ ಎಲ್ಲ ಮನುಷ್ಯರೂ ಸಮಾನ ಸ್ತರದಲ್ಲಿ ವ್ಯವಹರಿಸಲು ಸಾಧ್ಯವಾಗುತ್ತಿಲ್ಲ ಎಂದರೆ ಅದಕ್ಕೆ ಮನುಷ್ಯ ನಡುವಣ ಕೃತಕ ಅಡೆತಡೆಗಳು, ಭೌತಿಕ ಅಡಚಣೆಗಳಷ್ಟೇ ಕಾರಣ. ಈ ಮನುಷ್ಯ ನಿರ್ಮಿತ ಗೋಡೆಗಳನ್ನು ಕೆಡವಿದರೆ ಎಲ್ಲರೂ ಅರಳಲು ಸಾಧ್ಯ ಎಂಬುದು ಸುಬ್ಬಣ್ಣನವರ ಗಾಢ ನಂಬಿಕೆ. ಉದಾಹರಣೆಗೆ ಸತ್ಯಜಿತ್‌ರಾಯ್ ಚಿತ್ರಗಳು ಜನಸಾಮಾನ್ಯರಿಗೆ ಅರ್ಥವಾಗುವುದಿಲ್ಲ ಎಂಬ ಕಲ್ಪನೆಯೇ ಹುಸಿಯಾದದ್ದು. ಈ ಚಿತ್ರಗಳು ಎಲ್ಲರಿಗೂ ಸಿಕ್ಕುತ್ತಿಲ್ಲ ಎಂಬುದಷ್ಟೇ ನಿಜ. ಆದ್ದರಿಂದ ನಮಗೆ ಸತ್ಯಜಿತ್ ರಾಯ್ ಚಿತ್ರಗಳು ನಿಜಕ್ಕೂ ಅರ್ಥಪೂರ್ಣವೆನ್ನಿಸಿದರೆ ಅವುಗಳು ಇತರರಿಗೂ ಸಿಗುವಂತೆ ಮಾಡಬೇಕು. ಪರೋಪಕಾರ, ಸಮಾಜೋದ್ಧಾರ, ಕಲಾ ಸೇವೆ ಮುಂತಾದ ಠಕ್ಕಿನ ಮಾತುಗಳಿಗೆ ಇಲ್ಲಿ ಅವಕಾಶವೇ ಇಲ್ಲ. ನಮಗೆ ಪ್ರಿಯವಾದುದನ್ನು ಇತರರೊಂದಿಗೆ ಹಂಚಿಕೊಳ್ಳುವ ಸಹಜ ಮನುಷ್ಯ ಪ್ರವೃತ್ತಿ ಒಂದು ಚಳುವಳಿಯನ್ನು ಕಟ್ಟುವುದು ಹೀಗೆ ವಿನಯ, ಸಜ್ಜನಿಕೆ ತಾವಾಗಿ ಇಂಥ ಚಳುವಳಿಗೆ ಬಂದು ಬಿಡುತ್ತವೆ. ಇತರರಿಗೆ ಕಲಿಸುತ್ತಿದ್ದೇವೆ ಎಂಬ ಅಹಂಕಾರಕ್ಕೆ ಇಲ್ಲಿ ಸ್ಥಾನವಿಲ್ಲ. ಸುಬ್ಬಣ್ಣನವರ ನೇತೃತ್ವದ ನೀನಾಸಂ ಸಾಂಸ್ಕೃತಿಕ ಚಳುವಳಿಗಳ ನೈತಿಕ ಸಮರ್ಥನೆ ಕೂಡ ಇದೇ. ಹುಸಿ ಪ್ರಗತಿಪರ ಸಂಘಟನೆಗಳಿಗೂ ನೀನಾಸಂಗೂ ಇರುವ ಮುಖ್ಯ ವ್ಯತ್ಯಾಸವೂ ಇದೇ.

### ಹೊಸ ಹುಡುಕಾಟ

ನೀನಾಸಂನ ಮತ್ತೊಂದು ವೈಶಿಷ್ಟ್ಯವೆಂದರೆ ಅದು ಸಂಸ್ಕೃತಿಯನ್ನು ಹೆಗ್ಗೋಡು ಗ್ರಾಮದ ಮೇಲೆ ಹೊರಗಿನಿಂದ ಬಲವಾಗಿ ಹೇರಲಿಲ್ಲ. ಅದು ಒಳಗಿನಿಂದ ಸಹಜವಾಗಿ ಅರಳಿ ಬೆಳೆದು ನಿಂತಿರುವ ಸಂಸ್ಥೆ. ಭೂಪಾಲದ ಭಾರತ ಭವನ್‌ಗಿಂತಲೂ ನೀನಾಸಂ ತುಂಬಾ ಭಿನ್ನವಾದ ಸಂಸ್ಥೆ. ಭಾರತ್ ಭವನವನ್ನು ಅನಗತ್ಯವಾಗಿ ಟೀಕಿಸಲು ಈ ಮಾತು ಬರೆಯುತ್ತಿಲ್ಲ. ಆದರೆ ಅದು ಮಧ್ಯಪ್ರದೇಶದ ಸ್ಥಳೀಯ ಸಂಸ್ಕೃತಿಯಿಂದಲೇ ಸಹಜವಾಗಿ ವಿಕಸಿತಗೊಂಡ ಸಂಸ್ಥೆಯಲ್ಲ. ಸರ್ಕಾರದ ನೆರವಿನಿಂದ ಒಮ್ಮೆಲೇ ಧುತ್ತೆಂದು ಎದ್ದುಬಿಟ್ಟಿತು. ಭಾರತ್ ಭವನ್ ಅನೇಕ

ವಿಶ್ಲೇಷಿಸಿ ಚರ್ಚಿಸುವ ಪ್ರವೃತ್ತಿ ನಿಧಾನವಾಗಿ ಬೆಳೆಯಿತು. ಒಂದು ಚಿತ್ರವನ್ನು ಅದರ ಎಲ್ಲ ವಿವರಗಳೊಂದಿಗೆ, ಎಲ್ಲ ಹಿನ್ನೆಲೆಗಳೊಂದಿಗೆ ಪರಿಶೀಲಿಸುವ ಆಸ್ಥೆ ತೀವ್ರಗೊಳ್ಳುತ್ತಿದ್ದಂತೆ 'ಚಲನಚಿತ್ರ ಮಹಾನೌಕೆ' "ರಶೊಮಾನ್" "ಹಿರೊಶಿಮಾ" ಮುತಾದ ಪುಸ್ತಕಗಳು ಸಿದ್ಧವಾದವು. ಈ ಚಲನಚಿತ್ರಗಳ ಬಗ್ಗೆ ಸುಬ್ಬಣ್ಣನವರು ಬರೆದಿರುವ ವಿಮರ್ಶೆ ಆ ಕಲಾಕೃತಿಗಳ ಬಗ್ಗೆ ಈವರೆಗೆ ಬರೆದಿರುವ ಅತ್ಯುತ್ತಮ ವಿಮರ್ಶೆಯ ಸಾಲಿಗೆ ಸೇರುತ್ತದೆ.

ಸುಸಜ್ಜಿತ ರಂಗಮಂದಿರವನ್ನು ಕಟ್ಟಿಕೊಂಡ ನಂತರ ಅದರ ಪೂರ್ಣ ಪ್ರಯೋಗವನ್ನು ಪಡೆಯದೇ ಇರಲು ಸಾಧ್ಯವಿರಲಿಲ್ಲ. ಸ್ಥಳೀಯ ಚಟುವಟಿಕೆಗಳು ಬೆಳೆಯುತ್ತಿದ್ದಂತೆ ಈ ಪ್ರಾಂತ್ಯದ ಹಲವು ತರುಣರು ದೆಹಲಿಯ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾದಲ್ಲಿ ವಿಶೇಷ ಅಧ್ಯಯನವನ್ನೂ ಮಾಡಿಬಂದರು. ರಂಗ ಕಮ್ಮಟಗಳಿಗಿಂತ ಹೆಚ್ಚು ವಿಸ್ತೃತವಾದ ಶೈಕ್ಷಣಿಕ ಚಟುವಟಿಕೆಗಳಿಗಾಗಿ ಬೇಡಿಕೆ ಇತ್ತು. ಈ ಹಿನ್ನೆಲೆಯಲ್ಲಿ 1980ರಲ್ಲಿ ನೀನಾಸಂ ರಂಗ ಶಿಕ್ಷಣ ಕೇಂದ್ರ ಆರಂಭಗೊಂಡಿದ್ದು ನೀನಾಸಂನ ಸಹಜ ವಿಕಾಸಕ್ರಮಕ್ಕೆ ಪೂರಕವಾಗಿಯೂ ಇದೆ. ಇಲ್ಲಿ ಕನ್ನಡದಲ್ಲಿ ಶಿಕ್ಷಣ ನೀಡುವುದರಿಂದ ಹೊಸದಾಗಿ ಕನ್ನಡದಲ್ಲಿ ರಂಗಭೂಮಿ ಕುರಿತ ಪಠ್ಯ ಪುಸ್ತಕಗಳು, ಆಕರಗ್ರಂಥಗಳನ್ನು ಪ್ರಕಟಿಸಿದೆ. ಪ್ರತಿವರ್ಷ ಹತ್ತಾರು ವಿದ್ಯಾರ್ಥಿಗಳು ರಂಗಶಿಕ್ಷಣ ಪಡೆಯಲು ಪ್ರಾರಂಭಿಸಿದ ಮೇಲೆ ಇವರ ಚಟುವಟಿಕೆಗಳಿಗೆ ಒಂದು ವ್ಯವಸ್ಥಿತ, ಸಂಘಟಿತ ರೂಪ ನೀಡಲು 1985ರಲ್ಲಿ "ನೀನಾಸಂ ತಿರುಗಾಟ" ಪ್ರಾರಂಭವಾಯಿತು, ನೀನಾಸಂ ರಂಗಶಿಕ್ಷಣ ಕೇಂದ್ರದ ಹಳೆಯ ವಿದ್ಯಾರ್ಥಿಗಳೇ ಹೆಚ್ಚು ಮಂದಿ ಇರುವ ಈ ರಂಗತಂಡ ಪ್ರತಿ ವರ್ಷ ನಾಲ್ಕು ನಾಟಕಗಳನ್ನು ಸಿದ್ಧಪಡಿಸಿಕೊಂಡು ರಾಜ್ಯಾದ್ಯಂತ ಪ್ರದರ್ಶಿಸುತ್ತದೆ. ಈ ಕಲಾವಿದರು ಮಾಸಿಕ ವೇತನ ಪಡೆಯುತ್ತಾರೆ. ರಂಗಶಿಕ್ಷಣ ಕೇಂದ್ರದ ಪ್ರತಿ ವಿದ್ಯಾರ್ಥಿಗೂ ಸ್ಟೈಪೆಂಡ್ ದೊರೆಯುತ್ತದೆ.

ಈ ಮಧ್ಯೆ 1983ರಲ್ಲಿ ನೀನಾಸಂ ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ರಂಗಭೂಮಿ–ಚಲನಚಿತ್ರ ಸಂಸ್ಕೃತಿಯ ಶಿಕ್ಷಣ ಮತ್ತು ಪ್ರಸಾರಕ್ಕೆ 'ಜನಸ್ಪಂದನ' ಎಂಬ ವಿಶೇಷ ಯೋಜನೆಯೊಂದನ್ನು ಸಿದ್ಧಪಡಿಸಿತು. ಈ ಯೋಜನೆಯಲ್ಲಿ 1983–85ರ ಅವಧಿಯಲ್ಲಿ ನೀನಾಸಂ ಆರು ವಾರದ ಅವಧಿಯಲ್ಲಿ 37 ರಂಗಭೂಮಿ ಶಿಬಿರಗಳನ್ನೂ, ಸುಮಾರು 75 ಚಲನಚಿತ್ರೋತ್ಸವಗಳನ್ನೂ, 35 ಚಲನಚಿತ್ರ ರಸಗ್ರಹಣ ಶಿಬಿರಗಳನ್ನೂ ನಾಡಿನಾದ್ಯಂತ ನಡೆಸಿಕೊಟ್ಟಿತು. ಒಂದು ಲಕ್ಷಕ್ಕೂ ಹೆಚ್ಚಿನ ಗ್ರಾಮೀಣ ಪ್ರೇಕ್ಷಕರು ಇವುಗಳಲ್ಲಿ ಪಾಲ್ಗೊಂಡಿದ್ದರು. ಈ ಯೋಜನೆಗೆ ಫೋರ್ಡ್ ಫೌಂಡೇಶನ್ ಸುಮಾರು ಹತ್ತು ಲಕ್ಷ ರೂಪಾಯಿಗಳ ಆರ್ಥಿಕ ನೆರವು ನೀಡಿತು. ಈ ನೆರವನ್ನು ಪಡೆಯುವಾಗ ಎರಡು ಶರತ್ತುಗಳನ್ನು ನೀನಾಸಂ ತನಗೆ ತಾನು ಹಾಕಿಕೊಂಡಿತ್ತು. ಭಾರತೀಯ ಆರ್ಥಿಕ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಈ

ಹಣವನ್ನು ಎಚ್ಚರಿಕೆಯಿಂದ ಮಿತವಾಗಿ ಬಳಸಿಕೊಳ್ಳುವುದು. ಎರಡನೆಯದಾಗಿ ನೀನಾಸಂನ ಸಕ್ರಿಯ ಕಾರ್ಯಕರ್ತರು ಈ ಯೋಜನೆಯಡಿಯಲ್ಲಿ ಗೌರವಧನ ಪಡೆಯಬಾರದು. ಇಡೀ ಇಂಡಿಯಾದಲ್ಲಿಯೇ ಒಂದು ವಿಶಿಷ್ಟ ಯೋಜನೆ ಎಂಬ ಹೆಗ್ಗಳಿಕೆಯನ್ನು 'ಜನಸ್ಪಂದನ' ಪಡೆದುಕೊಂಡಿತು.

ಎರಡನೆಯ ಗ್ರಾಂಟ್ ನೀಡಲು ಫೋರ್ಡ್ ಫೌಂಡೇಶನ್ ಮುಂದೆ ಬಂದಾಗ ನೀನಾಸಂ ಅದನ್ನು ವಿನಯದಿಂದಲೇ ನಿರಾಕರಿಸಿತು. ಹೀಗೆ ಎರಡನೇ ಗ್ರಾಂಟ್ ಕೊಡಲು ತಾವೇ ಮುಂದಾದರೂ no, thank you ಎಂದು ಹೇಳಿದ ಸಂಸ್ಥೆ ಇಡೀ ಇಂಡಿಯಾದಲ್ಲಿ ನೀನಾಸಂ ಒಂದೇ ಎಂದು ಫೌಂಡೇಶನ್ ಮೂಲಗಳೇ ಹೇಳುತ್ತವೆಯಂತೆ. ನೀನಾಸಂ ಜನಸ್ಪಂದನ ಯೋಜನೆ ಫೋರ್ಡ್ ಫೌಂಡೇಶನ್ ಚಟುವಟಿಕೆಗಳ ಕಾರ್ಯಸ್ವರೂಪದ ಬಗ್ಗೆಯೇ ಗಾಢವಾದ ಪ್ರಭಾವ, ಪರಿಣಾಮ ಬೀರಿದೆಯಂತೆ. ಫೋರ್ಡ್ ಹಣ ಇಷ್ಟು ಸಂಯಮ, ಅರ್ಥವಂತಿಕೆಯಿಂದ ಬಳಕೆಯಾದದ್ದು ತೀರಾ ವಿರಳವೆಂದು ಅಲ್ಲಿನ ಅಧಿಕಾರ ವರ್ಗ ಹೇಳುತ್ತದೆ. ಈ ಹಣದ ಬಗ್ಗೆ ನೀನಾಸಂಗೆ ಮಡಿವಂತಿಕೆಯೇನೂ ಇಲ್ಲ. ಮುಂದೆ ಅಗತ್ಯ ಬಿದ್ದರೆ ಇಂಥ ನೆರವುಗಳನ್ನು ಮತ್ತೆ ಪಡೆಯಲೂಬಹುದು. ಹಣವನ್ನು ಸಂಗ್ರಹವಾಗಿಟ್ಟುಕೊಳ್ಳುವುದು ನೀನಾಸಂ ಜಾಯಮಾನಕ್ಕೆ ಹೊರತು. ಉದ್ದೇಶ ಒಳ್ಳೆಯದಾಗಿದ್ದಲ್ಲಿ ಹಣ ತಾನಾಗಿಯೇ ಬರುತ್ತದೆ ಎಂಬ ತಾತ್ವಿಕ ನಂಬಿಕೆ ಅದರದು. ಸುತ್ತಮುತ್ತಲ ಜನ ನೀಡುವ ಚಿಕ್ಕ ದೇಣಿಗೆ, ರಂಗ ಪ್ರದರ್ಶನಗಳಿಂದ ಬರಬಹುದಾದ ಅಲ್ಪ ಸ್ವಲ್ಪ ಹಣ, ಸರ್ಕಾರ ಅಥವಾ ಇನ್ನಿತರ ಸಂಸ್ಥೆಗಳಿಂದ ಸಿಗಬಹುದಾದ ನೆರವು, ಎಲ್ಲವನ್ನೂ ತನ್ನ ಮೂಲ ಉದ್ದೇಶಗಳಿಗೆ ಭಂಗ ಬಾರದ ರೀತಿಯಲ್ಲಿ ನೀನಾಸಂ ಸ್ವೀಕರಿಸುತ್ತದೆ.

ಕೆ.ವಿ. ಸುಬ್ಬಣ್ಣ ಮತ್ತು ನೀನಾಸಂ ಬಗ್ಗೆ ಒಂದೇ ಉಸಿರಿನಲ್ಲಿ ಮಾತನಾಡುವಾಗ ಸುಬ್ಬಣ್ಣ ಅಂದರೆ ನೀನಾಸಂ, ನೀನಾಸಂ ಅಂದರೆ ಸುಬ್ಬಣ್ಣ ಎಂಬ ಕ್ಲೀಶೆಯಲ್ಲಿ ಹೊಗಳು ಭಟ್ಟಂಗಿತನ ಪ್ರದರ್ಶಿಸುವುದು ತುಂಬಾ ಸುಲಭ, ಆದರೆ ಅಪಾಯಕಾರಿ ನಿಜ. ಸುಬ್ಬಣ್ಣ ನೀನಾಸಂನ ಪ್ರೇರಕ ಮತ್ತು ಚಾಲಕ ಶಕ್ತಿ. ಆದರೆ ಅವರೊಬ್ಬರೇ ಎಲ್ಲವೂ ಅಲ್ಲ. ಒಂದು ಗ್ರಾಮೀಣ ಜನಸಮೂಹದ ಪ್ರತಿನಿಧಿ ಅವರು, ಅವರ ಮೂಲಕ ಅವರ ಸುತ್ತಲ ಜನರ ಸದಭಿರುಚಿ, ಸಜ್ಜನಿಕೆ ವ್ಯಕ್ತವಾಗುತ್ತಿದೆ ಅಷ್ಟೆ. ಅಂದರೆ ನೀನಾಸಂನ ನಿಜವಾದ ಶಕ್ತಿ ಹೆಗ್ಗೋಡು ಸುತ್ತಮುತ್ತಲ ಹಳ್ಳಿಗಳ ಜನರಿಂದಲೇ ಬರುವಂಥದ್ದು. ಈ ಜನರ ಉತ್ಸಾಹ , ಪ್ರೀತಿ, ಸಹಕಾರಗಳ ಬಗ್ಗೆ ಎಷ್ಟು ಬರೆದರೂ ಕಡಿಮೆಯೇ. ತಮ್ಮ ಪರಿಸರದಿಂದ ಪಡೆದ ಶಕ್ತಿಯನ್ನೇ ಸುಬ್ಬಣ್ಣ ನೀನಾಸಂ ಸಂಸ್ಥೆಯ ರೂಪದಲ್ಲಿ ಒಂದು ಸಂಸ್ಕೃತಿಯ ಪ್ರಕ್ರಿಯೆಯಾಗಿ ಪರಿವರ್ತಿಸಿದ್ದಾರೆ. ಸ್ಥಳೀಯ ಜನರಂತೆ ಈ ನಾಡಿನ ಸಮಾನ ಮನಸ್ಕರು ನೀಡಿರುವ ಉತ್ತೇಜನವೂ ಕಡಿಮೆಯದಲ್ಲ. ಇಲ್ಲಿನ ರಂಗಭೂಮಿ ಚಟುವಟಿಕೆಗಳ ಹಿಂದೆ ಶಿವರಾಮ ಕಾರಂತ, ಬಿ.ವಿ. ಕಾರಂತ, ಪ್ರಸನ್ನ ಮುಂತಾದ ಧೀಮಂತರಿದ್ದಾರೆ. ಚಲನಚಿತ್ರ ಚಟುವಟಿಕೆಗಳ

ಹಿಂದೆ ಸತೀಶ್ ಬಹಾದೂರ್ ಅಂಥವರು ಇದ್ದಾರೆ. ಇಕ್ಬಾಲ್ ಅಹಮದ್, ಏಣಗಿ ನಟರಾಜ್, ಕೆ.ಜಿ. ಕೃಷ್ಣಮೂರ್ತಿ, ಎ.ಸಿ. ಕಾರ್ಯಪ್ಪ ಮುಂತಾದ ನವಪ್ರತಿಭೆಗಳು ನೀನಾಸಂನಿಂದ ಹೊರಬಂದಿವೆ. ಒಂದು ಉತ್ಸಾಹಿ ಎಳೆಯರ ತಂಡವೇ ತಮ್ಮ ಹಿರಿಯರ ಕನಸುಗಳನ್ನು ನನಸು ಮಾಡುವಲ್ಲಿ ಕ್ರಿಯಾಶೀಲವಾಗಿದೆ. ಅಂತೆಯೇ ನೀನಾಸಂ ಎಂದರೆ ಒಬ್ಬ ವ್ಯಕ್ತಿಯಲ್ಲ; ಕೇವಲ ಒಂದು ಸಂಸ್ಥೆಯೂ ಅಲ್ಲ. ಈ ನಾಡಿನ ಹಲವು ಮನಸ್ಸುಗಳ ಹಂಬಲ, ಆದರ್ಶ ನೀನಾಸಂ,. ಅದರ ಮನುಷ್ಯರೂಪ ಕೆ.ವಿ. ಸುಬ್ಬಣ್ಣ.

* * *

### ನೀನಾಸಂ

ಸುಬ್ಬಣ್ಣನವರ ತಂದೆ 1949ರಲ್ಲಿ 'ನೀನಾಸಂ' ಆರಂಭಿಸಿದರು. ಹೊಸಬಗೆಯ ನಾಟಕಗಳನ್ನು ಆಡಬೇಕು ಎನ್ನುವ ಸಹಜವಾದ ಆಶೆಯಿಂದ ಉದ್ಭವವಾದದ್ದು ಅದು, ಹವ್ಯಾಸಿ ರಂಗಚಟುವಟಿಕೆಗಳು ಕ್ರಮೇಣ ಹೆಚ್ಚು ಸಂಖ್ಯೆಯಲ್ಲಿ ಆಗಲು 'ಶಿವರಾಮ ಕಾರಂತ ರಂಗಮಂದಿರ' ಹೆಸರಿನ ಸುಸಜ್ಜಿತವಾದ ರಂಗಂದಿರವು 1971ರಲ್ಲಿ ಸಿದ್ಧವಾಯಿತು. ಇದಕ್ಕೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ನೆರವೂ, ಸ್ಥಳೀಯ ಜನರ ಸಹಕಾರವೂ ಕಾರಣವಾಗಿತ್ತು. 1973ರಲ್ಲಿ ನೀನಾಸಂ 'ಚಿತ್ರ ಸಮಾಜ'ವೂ ಆರಂಭವಾಗಿತ್ತು. ಸಾಗರದಲ್ಲಿ ಪ್ರಾರಂಭವಾಗಿದ್ದ ಫಿಲ್ಮ ಸೊಸೈಟಿಯ ಪ್ರತಿನಿಧಿಯಾಗಿ ಸುಬ್ಬಣ್ಣ ಪುಣೆಗೆ 1967ರಲ್ಲಿ ಹೋಗಿ ಬಂದಿದ್ದರು. 1978ರಲ್ಲಿ ಚಿತ್ರಸಮಾಜವು ಮೊದಲ ಗ್ರಾಮೀಣ ಚಿತ್ರೋತ್ಸವವನ್ನು ಆಚರಿಸಿತು. ಹತ್ತು ದಿನಗಳ ಈ ಕಾರ್ಯಕ್ರಮದಲ್ಲಿ ಸ್ಥಳದ ಜನ ಖುರೋಸೋವಾ ಬರ್ಗಮನ್, ರೇ ಮುಂತಾದ ಖ್ಯಾತಿವಂತ ನಿರ್ದೇಶಕರ ಚಿತ್ರಗಳನ್ನು ನೋಡಿದರು. ಈಗ ಇದು ವಾರ್ಷಿಕ ಕಾರ್ಯಕ್ರಮವಾಗಿ ರೂಪುಗೊಂಡಿದೆ. ಚಿತ್ರ ಆಸ್ವಾದನೆಯ ತರಗತಿಯೂ ಸಹ ಪ್ರಾರಂಭವಾಗಿದೆ.

'ನೀನಾಸಂ' ರಂಗಮಂದಿರದ ಬೆಳವಣಿಗೆಯಲ್ಲಿ ಹತ್ತು–ಹಲವು ಪ್ರಜ್ಞಾವಂತರ ಕ್ರಿಯಾಶೀಲತೆ ಕಾರಣವಾಗಿದೆ. ಇದರ ಮೊದಲ ಚಟುವಟಿಕೆಯನ್ನು ಬಿ.ವಿ. ಕಾರಂತರು 'ಪಂಜರ ಶಾಲಾ' 'ಹೆಡ್ಡಾಮಣಿ' ಎಂಬ ಮಕ್ಕಳ ನಾಟಕಗಳನ್ನು ಆಡಿಸುವುದರ ಮೂಲಕ ಪ್ರಚೋದನೆ ಕೊಟ್ಟರು. ನೀನಾಸಂನ ರಂಗ ಚಟುವಟಿಕೆ ಈಗ ಪೂರ್ಣ ರೀತಿಯ ಸಂಸ್ಥೆಯಾಗಿ ಬೆಳೆದಿದೆ. ಹತ್ತು ತಿಂಗಳ ತೀವ್ರ ರೀತಿಯ ಪರಿಣತಿಯನ್ನು ಕೊಡುವ ತರಗತಿ ಸಹ ಪ್ರಾರಂಭವಾಗಿದೆ. ಜಂಬೆ, ಕೃಷ್ಣಮೂರ್ತಿ, ಅಕ್ಷರ ಮುಂತಾದವರ ಕೈಕೆಳಗೆ–ಅನನ್ಯ ರೀತಿಯಲ್ಲಿ ವಿದ್ಯಾರ್ಥಿಗಳು–ರಂಗತತ್ವವನ್ನು ಅರಿಯುತ್ತಾರೆ.

ನೀನಾಸಂ ರಂಗ ಚಟುವಟಿಕೆಯ ಪ್ರಯೋಗಗಳು ಕೇವಲ ಅಕೆಡೆಮಿಕ್ ಶಿಸ್ತಿಗಾಗಿ ಮಾತ್ರವಲ್ಲದೆ–ತೀವ್ರವಾದ ಸಾಮಾಜಿಕ ಕಳಕಳಿಯಿಂದ ಪ್ರೇರಿತವೂ

ಆಗಿವೆ, ಅಕ್ಷರ ಮತ್ತು ಜಂಬೆ, ಇವರು ಕ್ರಮವಾಗಿ ಗಾರ್ಕಿಯ 'ಮದರ್' ನಾಟಕ, ಹಾಗೂ ಚಿನುವಾ ಅಚೆಬೆಯ 'ಥಿಂಗ್ಸ್ ಫಾಲ್ಸ್ ಅಪಾರ್ಟ್' ಈ ಕೃತಿಗಳನ್ನು ಆಧರಿಸಿ ಮಾಡಿದ ನಾಟಕ ಪ್ರಯೋಗಗಳಾಗಲೀ, ಜಯತೀರ್ಥ ಜೋಶಿ, ದೇವನೂರರ 'ಮಾರಿಕೊಂಡವರು' ಕಥೆಯನ್ನು ನಾಟಕಕ್ಕೆ ಪ್ರಯೋಗಿಸಿದ ರೀತಿಯಾಗಲೀ ತೀವ್ರವಾದ ಸಾಮಾಜಿಕ ಕಳಕಳಿಯಿಂದ ಪ್ರೇರಿತವಾದವುಗಳಾಗಿವೆ. ಕಾರ್ಮಿಕರನ್ನಾಗಲೀ, ಕೂಲಿಕಾರರಾದ ಸಿದ್ದಿಗಳನ್ನಾಗಲೀ, ಅಸ್ಪೃಶ್ಯರನ್ನಾಗಲೀ ನಾಟಕ ಕ್ರಿಯೆಗೆ ತರುವ ಮೂಲಕ ಮಹತ್ವದ ಸಾಂಸ್ಕೃತಿಕ, ಸಾಮಾಜಿಕ ಅರಿವು ಸಮಾಜದಲ್ಲಿ ಬೆಳೆಯುವಂತೆ ಮಾಡುವುದೂ ಇಲ್ಲಿಯ ಮುಖ್ಯ ಕ್ರಿಯೆಯಾಗಿತ್ತು. ಆಯಾ ವರ್ಗದ (ಅವರು ನಿರಕ್ಷರಸ್ಥರೂ, ಗ್ರಾಮೀಣರೂ, ಕೆಳವರ್ಗ–ಜಾತಿಗೆ ಸೇರಿದವರು ಆಗಿದ್ದರೆನ್ನುವುದು ಇಲ್ಲಿ ಗಮನಾರ್ಹ) ಸಂದರ್ಭದಲ್ಲಿ ಸೃಜನಶೀಲತೆಯ ಸ್ವರೂಪವನ್ನು ಶೋಧಿಸುವ ಕ್ರಿಯೆಯನ್ನು ಈ ನಾಟಕ ಅಭ್ಯಾಸದ ಚಟುವಟಿಕೆ ಮಾಡುತ್ತಿತ್ತು. ಸೃಜನಶೀಲತೆಯ ಪಾರಂಪರಿಕ ನಂಬಿಕೆಗಳನ್ನೇ ಕರ್ನಾಟಕ ಅಭ್ಯಾಸಿಗಳು ತಿರುಗು ಮುರುಗು ಮಾಡುತ್ತಿದ್ದುದುಂಟೆಂದು ನಿರ್ದೇಶಕರ ಅನುಭವಗಳೇ ಹೇಳುತ್ತವೆ. ಅಭಿನಯ ಮತ್ತು ಅಭಿವ್ಯಕ್ತಿಯ ಮೂಲಕ ವ್ಯಕ್ತಿತ್ವದಲ್ಲಿ ಒಂದು ದೃಢವಾದ ನಂಬಿಕೆಯನ್ನು ಇವು ಆಯಾ ವರ್ಗಗಳಲ್ಲಿ ಎಷ್ಟೇ ಮಿತಿಯಲ್ಲಿಯಾದರೂ ಹೆಚ್ಚಿಸಿದವು. ಜೀವನದ ಮುಖ್ಯ ಪ್ರವಾಹಕ್ಕೆ ಒಯ್ಯುವಂತೆ ಮಾಡುವಲ್ಲಿ ಎಷ್ಟೇ ಸಣ್ಣ ಹೆಜ್ಜೆಯಾದರೂ ಈ ಪ್ರಯತ್ನಗಳು ಗಮನಾರ್ಹವಾದವುಗಳೇ ಆಗಿವೆ.

ನೀನಾಸಂ ಈಗ ರಂಗಚಟುವಟಿಕೆಗಳಿಂದ, ಚಿತ್ರಸಮಾಜದಿಂದ, ತಿರುಗಾಟದಿಂದ, ಜನಸ್ಪಂದನದಿಂದ ತನ್ನ ಕಾರ್ಯಚಟುವಟಿಕೆಯ ಬಾಹುಗಳನ್ನು ಅನೇಕ ದಿಕ್ಕುಗಳಿಗೆ ವಿಸ್ತರಿಸಿಕೊಂಡಿದೆ. ಈ ಚಟುವಟಿಕೆಗಳು ಮುಖ್ಯವಾಗಿ ಗ್ರಾಮೀಣ ಬದುಕಿನಲ್ಲಿ ಹೊಸ ಸಾಂಸ್ಕೃತಿಕ ಚೈತನ್ಯವನ್ನು ಮೂಡಿಸುವ ಆಶಯವನ್ನು ಮುಖ್ಯ ಭಿತ್ತಿಯನ್ನಾಗಿ ಹೊಂದಿವೆ ಎನ್ನುವುದು ಗಮನಿಸಬೇಕಾದ ಸಂಗತಿ.

ಮ್ಯಾಗ್ಸೇಸ ಪ್ರಶಸ್ತಿಯಿಂದ ಬಂದ ಹಣದಲ್ಲಿ ಈಗ ಅನೇಕ ಭಿನ್ನ ಚಟುವಟಿಕೆಗಳ ನಡುವೆ ನೀನಾಸಂ ಪ್ರತಿಷ್ಠಾನವನ್ನು ಸ್ಥಾಪಿಸುವ ಮುಖ್ಯ ಉದ್ದೇಶವಿದೆ. ರಂಗ ಸಂಶೋಧನ ಹಾಗೂ ಜಿಲ್ಲಾವಾರು ರಂಗಚಟುವಟಿಕೆಗಳು ಈ ಪ್ರತಿಷ್ಠಾನದಿಂದ ಇನ್ನೂ ಹೆಚ್ಚು ವಿಸ್ತಾರವಾಗುವುದರಲ್ಲಿ ಸಂದೇಹವಿಲ್ಲ.

## ನೀನಾಸಂ 'ತಿರುಗಾಟ'

ಸುಬ್ಬಣ್ಣನವರ ಕಲ್ಪನೆಯಿಂದ ನೀನಾಸಂಗೆ ಒಂದು ಹೊಸ ಆಯಾಮವಿತ್ತ ರಂಗ ಚಟುವಟಿಕೆ ಇದು. ಕರ್ನಾಟಕದ ಉದ್ದಗಲಗಳಲ್ಲಿ ನಾಟಕ ಸಂಸ್ಕೃತಿಯೊಂದರ ಪ್ರಸಾರದ ಉದ್ದೇಶ ಇದರ ಮುಖ್ಯ ಆಶಯ. 'ನೀನಾಸಂ'ನಿಂದ ಹತ್ತು ಹಲವು ಶಾಖೆಗಳಾಗಿ ನಾಟಕ ಕ್ರಿಯೆ ಈ ಮೂಲಕ ಪ್ರಸರಣಗೊಳ್ಳಬೇಕು ಎನ್ನುವ ಆಶಯವೇ ತಿರುಗಾಟದ ಪ್ರೇರಣೆಯನ್ನಬೇಕು. 'ತಿರುಗಾಟ' ಈ ರೆಪರ್ಟರಿ ಕಂಪನಿ 1985ರಿಂದ

1988 ರ ವರೆಗೆ ಸುಮಾರು ಹನ್ನೊಂದು ನಾಟಕಗಳ ನಾಲ್ಕು ನೂರ ಮೂವತ್ತು ಪ್ರದರ್ಶನಗಳನ್ನು ಕರ್ನಾಟಕದಾದ್ಯಂತ ಮಾಡಿದೆ. ಮುಖ್ಯವಾದ ನಾಟಕಗಳಲ್ಲಿ ಮೃಚ್ಛಕಟಿಕ, ಮೂರು ಪೆನ್ನಿಒಪೆರಾ, ಅಲಿಬಾಬಾ, ಮ್ಯಾಕ್‌ಬೆತ್ ಮೊದಲಾದವು ಇವೆ. ಗ್ರಾಮೀಣ ಪರಿಸರದವರೇ ಮುಖ್ಯ ಪ್ರೇಕ್ಷಕರಾದ ಈ ತಿರುಗಾಟ ಅದ್ಭುತವಾದ ಯಶಸ್ಸನ್ನು ಪಡೆದಿದೆ. ತಿರುಗಾಟ ಹೋದಲ್ಲೆಲ್ಲ ಆಯಾ ಪ್ರದೇಶದ ಸಂಯೋಜಕರಿಂದಲೇ ಊಟ, ವಸತಿಯ ಏರ್ಪಾಟನ್ನು ಮಾಡಿಸುತ್ತ, ಪ್ರದರ್ಶನಕ್ಕಾಗುವಷ್ಟು ಮಾತ್ರ ಸುಮಾರು ರೂ. 1000–1500 ರಷ್ಟು ವೆಚ್ಚವನ್ನು ತೆಗೆದುಕೊಳ್ಳುತ್ತ, ಪ್ರದರ್ಶನ ಮಾಡಿದೆ. ಸಂಗೀತ ನಾಟಕ ಅಕಾಡೆಮಿ ಹಾಗೂ ದೆಲ್ಲಿಯ ಸಂಸ್ಕೃತಿ ವಿಭಾಗಗಳು ಸ್ವಲ್ಪ ಸಹಾಯವನ್ನು ಮಾಡಿವೆ. ನಾಟಕದ ಈ ಸಂಸ್ಕೃತಿಯ ಹೊಸತನವನ್ನು ವಿಮರ್ಶಕರೊಬ್ಬರು 'ಇಂಥ ಸಂಘಟನೆಯ ದೃಷ್ಟಿಯಿಂದಲೇ ಹೇಳುವುದಾದರೂ ಇದೊಂದು ಚೈತನ್ಯದಾಯಕ ಸಾಹಸ' ವೆಂದು ಕರೆದಿದ್ದಾರೆ. ಗ್ರೀನ್‌ರೂಮು ಸಿದ್ಧಪಡಿಸುವುದರಿಂದ ಹಿಡಿದು, ಬೆಳಕು ಸಯೋಜನೆ, ನಾಟಕವಾಡುವ ಸ್ಥಳವನ್ನು ಸಿದ್ಧಪಡಿಸಿಕೊಳ್ಳುವಿಕೆ, ಉಡುಪನ್ನು ಹೊಂದಿಸಿಕೊಳ್ಳುವುದು, ಮೇಕಪ್ಪು, ಇವೆಲ್ಲವನ್ನು ಹೋದೆಡೆಗೆ ಸಿದ್ಧಮಾಡಿಕೊಳ್ಳುತ್ತಾ ಇನ್ನೊಂದು ಕಡೆಗೆ ಮತ್ತೆ ಹೊತ್ತು ಸಾಗುವುದು– ಈ ಎಲ್ಲ ಜವಾಬ್ದಾರಿಯನ್ನು ತಿರುಗಾಟದ ಸಂಘಟನೆ ವಹಿಸಿಕೊಳ್ಳುತ್ತದೆ. ಇಷ್ಟೇ ಅಲ್ಲದೆ ಹೋದ ಕಡೆಯಲ್ಲೆಲ್ಲ ಭಿನ್ನ ಜನಸಮುದಾಯದ ಜೊತೆಗೆ ತನ್ನ ನಾಟಕಗಳ ಮೂಲಕ ಹೊಂದುವ ಸಾಮಾಜಿಕ ಸಂಬಂಧಗಳ ಮೂಲಕವೂ ತಿರುಗಾಟ ತನ್ನನ್ನು ತಾನು ಕಂಡುಕೊಳ್ಳಲು ಪ್ರಯತ್ನಿಸುತ್ತದೆ. 'ತಿರುಗಾಟ'ದ ಪ್ರಯೋಗವು– ಕೇವಲ ನಾಟಕ ಪ್ರಯೋಗ ಮಾತ್ರವಾಗದೇ ಬದುಕಿನ ವಿನ್ಯಾಸಗಳನ್ನು ಅರಿಯುವ, ಮತ್ತು ಅವುಗಳನ್ನು ಸಂಯೋಜಿಸುವ ಹಾಗೂ ಹೊಸ ಅರಿವನ್ನು ಹುಟ್ಟಿಸುವ ಕಾರ್ಯವನ್ನು ಮಾಡುತ್ತಿದೆ ಎಂದರೆ ಅತಿಶಯೋಕ್ತಿಯೇನಲ್ಲ.

## ಅಕ್ಷರ ಪ್ರಕಾಶನ

ನವ್ಯಕಾವ್ಯದ ಪ್ರಾರಂಭ ಕಾಲದಲ್ಲಿ ಹೊಸ ಕಾವ್ಯ ಮತ್ತು ಕವಿಗಳನ್ನು ಅಕ್ಷರ ಪ್ರಕಾಶನದ ಮೂಲಕ ಬೆಳಕಿಗೆ ತಂದದ್ದು ಸುಬ್ಬಣ್ಣನವರು ಪ್ರಾರಂಭಿಸಿದ ಅಕ್ಷರ ಪ್ರಕಾಶನ. ಅಕ್ಷರ ಪ್ರಕಾಶ ಈಗ ಬಹಳ ದೂರದ ಹಾದಿ ಸಾಗಿ ಬಂದಿದೆ. ಸುಮಾರು ನಾಲ್ಕು ನೂರು–ಕಾವ್ಯ, ವಿಮರ್ಶೆ, ಪ್ರಬಂಧ, ನಾಟಕ, ರಂಗಭೂಮಿ ಮತ್ತು ಸಿನಿಮಾಕ್ಕೆ ಸಂಬಂಧಿಸಿದ ಪುಸ್ತಕಗಳು ಅಕ್ಷರ ಪ್ರಕಾಶನದಿಂದ ಹೊರಬಂದಿವೆ. 'ಅಕ್ಷರ ಹೊಸ ಕಾವ್ಯ'ದಂಥ ಹೊಸಕಾವ್ಯದ ಪ್ರಥಮ ಸಂಕಲನ ಪ್ರಕಟವಾದದ್ದು ಕಾವ್ಯದ ಬಗ್ಗೆ ಆಗ ಹೊಸ ಆಲೋಚನಾ ಕ್ರಮ ಬೆಳೆಸಲು ಸಹಾಯವಾಯಿತು. ಆಧುನಿಕ ಕನ್ನಡ ಕಾವ್ಯದ ಮುಖ್ಯ ಹೆಸರುಗಳು ಬಹುಪಾಲು ತಮ್ಮ ಸಾಹಿತ್ಯದ ಮೊದಲ ಪ್ರಕಟಣೆಯನ್ನು ತಂದದ್ದು ಅಕ್ಷರದ ಮೂಲಕವೇ.

ನವ್ಯ ಕಾವ್ಯ ಗ್ರಹಿಕೆ ಹಾಗೂ ವಿಮರ್ಶೆಗೆ ಒಂದು ಭದ್ರ ನೆಲೆಗಟ್ಟನ್ನು 'ಅಕ್ಷರ ಪ್ರಕಾಶನ'ದ 'ಸಾಕ್ಷಿ' ತ್ರೈಮಾಸಿಕ ಪತ್ರಿಕೆ ಕೊಟ್ಟಿತು. ಅಡಿಗರ ಸಂಪಾದಕತ್ವದಲ್ಲಿ ಪ್ರಭಾವಶಾಲಿಯಾದ ನವ್ಯಕಾವ್ಯದ ನೆಲೆಗಟ್ಟನ್ನು ರೂಪಿಸುವಲ್ಲಿ ಸಾಕ್ಷಿ ಮುಖ್ಯಪಾತ್ರ ವಹಿಸಿತು.

ಅಕ್ಷರ ಪ್ರಕಾಶನವು 'ನೀನಾಸಂ' ರಂಗಚಟುವಟಿಕೆಯ ಜೊತೆಗೆ ಗಾಢ ಸಂಬಂಧವನ್ನು ಹೊಂದಿದ್ದು ಇದೆ. ನೀನಾಸಂ ರಂಗಚಟುವಟಿಕೆಯ ಅನೇಕ ನಾಟಕಗಳು, ಸಾಹಿತ್ಯ ಕೃತಿಗಳಿಂದ ಪ್ರೇರಿತವಾದವುಗಳು. ಇಲ್ಲಿ ಪ್ರಕಟಗೊಂಡ ನಾಟಕಗಳು, ಕಥೆಗಳು ನೇರವಾಗಿ ಇಲ್ಲಾ ಪರೋಕ್ಷವಾಗಿ ನೀನಾಸಂ ನಾಟಕಗಳಿಗೆ ಧಾತುವಾದವು. ಸಿನಿಮಾ ರಸಗ್ರಹಣ ಪದ್ಧತಿಗೆ ಸಂಬಂಧಿಸಿದಂತ ಅಕ್ಷರ ಪ್ರಕಾಶನ ಅನೇಕ ಗ್ರಂಥಗಳನ್ನು ಹೊರತಂದಿದೆ.

## ಸುಬ್ಬಣ್ಣನವರು ಪ್ರಶಸ್ತಿ ಸ್ವೀಕರಿಸಿದಾಗ ಫಿಲಿಫೈನ್ಸ್‌ನ ಮನಿಲಾದಲ್ಲಿ ಮಾಡಿದ ಭಾಷಣದ ಆಯ್ದಭಾಗ

ಪ್ರಜಾಪ್ರಭುತ್ವ ಜೀವನ ಪದ್ಧತಿಯ ಚೌಕಟ್ಟಿನಲ್ಲಿ ಪ್ರಶಸ್ತಿಗಳನ್ನು ಕೊಡುವುದು ಅಥವಾ ಕೊಳ್ಳುವುದು ಸೂಕ್ತವೇ ಎನ್ನುವ ಬಗ್ಗೆ ನನಗೆ ಸಂದೇಹಗಳಿವೆ. ಹಾಗಿರುವಾಗಲೂ ಈ ಪ್ರಶಸ್ತಿಯು ನನಗೆ ಮಹತ್ತರವಾದ ಸಂತೋಷವನ್ನು ತಂದುಕೊಟ್ಟಿದೆ. ಅದಕ್ಕೆ ಕಾರಣಗಳನ್ನು ಹೇಳುತ್ತೇನೆ.

ಪ್ರಶಸ್ತಿಯು ನನ್ನ ಹೆಸರಿಗೆ ಸಂದಿದೆಯಾದರೂ ಇದು ನನಗೆ ವೈಯಕ್ತಿಕವಾಗಿ ಸಂದಿದ್ದಲ್ಲ ಎನ್ನುವುದು ನಿಶ್ಚಿತ.ಒಂದು ವೇಳೆ, ಇದಕ್ಕಿಂತ ಸಣ್ಣ ಪ್ರಶಸ್ತಿಯಾಗಿದ್ದರೆ ಇದು ನನಗೇ ಎಂದು ನಾನು ಭ್ರಮೆಗೊಳ್ಳುವ ಸಾಧ್ಯತೆ ಇರಬಹುದಿತ್ತು. ಆದರೆ, ಇದು ಬಹು ದೊಡ್ಡ ಪ್ರಶಸ್ತಿ; ಉಳಿದವರಿರಲಿ, ಸ್ವತಃ ನಾನೇ ನನ್ನ ಕಟ್ಟೇಕಾಂತದಲ್ಲಿ ಕೂತು ಯೋಚಿಸುವಾಗಲೂ ಇದು ನನಗೆ ವೈಯಕ್ತಿಕವಾಗಿ ಸಿಕ್ಕಿದ್ದು ಎಂದು ಭ್ರಮೆಗೊಳ್ಳಲು ಸಾಧ್ಯವಾಗುವುದಿಲ್ಲ– ಅಷ್ಟು ದೊಡ್ಡದು. ನನ್ನ ಹೆಸರಿನ ಸುತ್ತ ನೀನಾಸಮ್, ಅಕ್ಷರ ಪ್ರಕಾಶನ ಸಂಸ್ಥೆಗಳು, ಹೆಗ್ಗೋಡು, ಕರ್ನಾಟಕ ಪ್ರದೇಶಗಳು ಸುತ್ತಿಕೊಂಡಿವೆ. ಪ್ರಶಸ್ತಿ ಸಂದಿರುವುದು ನಿಜವಾಗಿ ಅವಕ್ಕೆ ಮತ್ತು–ಕನ್ನಡದಲ್ಲೇ ನಾಲ್ಕು ದಶಕಕ್ಕೆ ಮೊದಲು ನಮ್ಮ ಮಹಾವ್ಯಕ್ತಿ ಶಿವರಾಮ ಕಾರಂತರು ಒಂದು ಚಿಕ್ಕ ಪಟ್ಟಣದಲ್ಲಿ ಇಂಥದೇ ಸಾಂಸ್ಕೃತಿಕ ಆಂದೋಲನ ನಡೆಸಿದ್ದರು. ಅದಕ್ಕೆ ಮೊದಲು ನಮ್ಮ ಇನ್ನೊಬ್ಬ ಮಹಾವ್ಯಕ್ತಿ ಕುವೆಂಪು ಸಾಹಿತ್ಯಕವಾಗಿ ಇಂಥದೊಂದು ಕನಸು ಕಟ್ಟಿಕೊಟ್ಟಿದ್ದರು. ಪ್ರಶಸ್ತಿಯ ಪಾಲು ಹಾಗೆ ಅನೇಕರಿಗೆ ಸಲ್ಲುತ್ತದೆ. ನನ್ನ ಅಹಂಕಾರವನ್ನು ಪೊಳ್ಳಾಗಿ ಊದಿ ಉಬ್ಬಿಸದೆ, ನನಗೆ ಸಂತೋಷ ಕೊಡುವ ಪ್ರಶಸ್ತಿ ಇದು.

ಕರ್ನಾಟಕದ ಪಶ್ಚಿಮದಲ್ಲಿ ಪಶ್ಚಿಮ ಘಟ್ಟಗಳಿವೆ. ಅಲ್ಲಿ ಮಳೆ ಸಮೃದ್ಧವಾಗಿ ಸುರಿಯುತ್ತದೆ; ನಿತ್ಯಹಸಿರಾಗಿರುವ ಕಾಡುಗಳು ಬೆಟ್ಟಗಳು ಹಬ್ಬಿಕೊಂಡು ನಿಂತಿವೆ. ಘಟ್ಟದ ಏರುವೆಯಲ್ಲಿ, ನಗರಕೇಂದ್ರಗಳಿಂದ ಬಹುದೂರವಾಗಿ, ಕಾಡಿನ ಮಡಿಲಲ್ಲಿರುವ ಒಂದು ಚಿಕ್ಕ ಹಳ್ಳಿ ಹೆಗ್ಗೋಡು. ಈ ಚಿಕ್ಕ ಹಳ್ಳಿಯ ಜನಸಂಖ್ಯೆ ಐದುನೂರು ಕೂಡ ಇಲ್ಲ. ಇದರ ಸುತ್ತ ಇರುವ ಇದಕ್ಕಿಂತಲೂ ಚಿಕ್ಕದಾದ ಹತ್ತಾರು ಹಳ್ಳಿಗಳು ಕೂಡಿ ಒಂದು ಗ್ರಾಮೀಣ ಜನಪದ ಎನ್ನಬಹುದು. ಈ ಗ್ರಾಮೀಣ ಜನಪದ ಹೊಸ ಇಂಡಿಯಾದ ಕನಸು ಕಾಣುತ್ತ ಅದನ್ನು ತನ್ನ ನೆಲದಲ್ಲಿ ಮೂರ್ತಗೊಳಿಸಿಕೊಳ್ಳಲು ಹೆಣಗಾಡಿಕೊಳ್ಳುತ್ತಿರುವುದಕ್ಕೆ ನೀನಾಸಮ್ ರಂಗಸಂಸ್ಥೆ ಒಂದು ಸಾಕ್ಷಿ ಎನ್ನಬಹುದು.

ಇಂಗ್ಲೆಂಡ್ ಶತಮಾನಗಳ ಕಾಲ ನಮ್ಮ ದೇಶವನ್ನು ಭೌತಿಕವಾಗಿ ಆಕ್ರಮಿಸಿಕೊಂಡದ್ದು ಮಾತ್ರವಲ್ಲ. ಈ ಅವಧಿಯ ಉದ್ದಕ್ಕೂ ಮತ್ತು ಅದರಿಂದ ಮುಂದೆ ಈಗ ಇವತ್ತಿನ ತನಕವೂ ಉತ್ತರ ಗೋಲದ ವಿಜ್ಞಾನ ನಾಗರಿಕತೆ ನಮ್ಮ ಮೇಲೆ ಆಕ್ರಮಣ ನಡೆಸುತ್ತಲೇ ಇದೆ. ಅಥವಾ—ಇದನ್ನು ಭೌತಿಕ ಆಕ್ರಮಣದ ಧರದಲ್ಲಿ 'ಆಕ್ರಮಣ' ಎಂದು ನಿಶ್ಚಿತವಾಗಿ ಹೇಳುವುದೂ ಕಷ್ಟವೇ. ಅದು ಆಕ್ರಮಣವೂ ಹೌದು, ಆಕರ್ಷಣೆಯೂ ಹೌದು, ಸಂಘರ್ಷವೂ ಹೌದು, ಸಮ್ಮೇಳನವೂ ಹೌದು, ಮಂಥನವೂ ಹೌದು, ಮೈಥುನವೂ ಹೌದು.

ವಿಜ್ಞಾನ ನಾಗರಿಕತೆಗೆ ಪ್ರತಿಯಾಗಿ ತೃತೀಯ ಜಗತ್ತಿನ ರಾಷ್ಟ್ರಗಳು ವಿವಿಧ ರೀತಿಗಳಲ್ಲಿ ಪ್ರತಿಭಟನೆಯನ್ನು ಒಡ್ಡಿದ್ದರೂ ಒಟ್ಟಿನಲ್ಲಿ, ಈ ಕೆಲವು ಶತಮಾನಗಳ ಕಾಲ ವಿಜ್ಞಾನ ನಾಗರಿಕತೆಯೇ ಮನುಷ್ಯ ಕುಲದ ಇತಿಹಾಸವನ್ನು ಮುನ್ನಡೆಸುವ ನಾಯಕ ಶಕ್ತಿಯಾಯಿತು ಎನ್ನುವುದು ಸುಳ್ಳಲ್ಲ. ವಿಜ್ಞಾನ, ಯಂತ್ರ ಸಾಧನೆಗಳು ಮುಂತಾದವುಗಳಲ್ಲದೆ ಸಮಾನತೆ, ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಮುಂತಾದ ಹೊಸ ಮೌಲ್ಯಗಳನ್ನು ಕೂಡ ಅದು ಸೃಷ್ಟಿಸಿಕೊಟ್ಟಿತು. ನಮ್ಮ ದೇಶದ್ದೇ ಉದಾಹರಣೆ. ದೀರ್ಘ ಸಾಂಸ್ಕೃತಿಕ ಇತಿಹಾಸದ ಮೂಲಕ ನಾವು ಪರಂಪರೆಯ ಸಮೃದ್ಧಿಯನ್ನು ಪಡೆದುಕೊಂಡಿದ್ದೆವು. ಆದರೆ ಅದೇ ಪರಂಪರೆಯು ನಮ್ಮಲ್ಲಿ ಜಾತಿಭಿನ್ನತೆ, ವೈಷಮ್ಯ, ಪಕ್ಷಪಾತಗಳ ಹೀನ ಪಾಪಪಾತಕಗಳನ್ನೂ ಸೃಷ್ಟಿಸಿ ನಮ್ಮ ಸಂಸ್ಕೃತಿಯನ್ನು ಅಮಾನವೀಯವಾಗಿಸಿತ್ತು. ನಮ್ಮದೇ ಸಂಸ್ಕೃತಿಯ ಈ ಅಮಾನವೀಯತೆಯನ್ನು ಕಣ್ಣು ಬಿಚ್ಚಿಸಿ ನಮಗೆ ಕಾಣಿಸಿಕೊಟ್ಟದ್ದು ವಿಜ್ಞಾನ ನಾಗರಿಕತೆಯೇ.

ಅಂಥ ವಿಜ್ಞಾನ ನಾಗರಿಕತೆಗೆ ಇದೀಗ ದುರಂತ ಪ್ರಾಪ್ತವಾಗಿರುವಂತೆ ಕಾಣುತ್ತದೆ. ಇದಕ್ಕೆ ಕಾರಣ ಪ್ರಾಯಶಃ ಅದು ತನ್ನಲ್ಲಿ ಬೆಳೆಯಗೊಟ್ಟ ವಿಕೃತಿಗಳು. ಜಗತ್ತಿನ ದೊಡ್ಡ ಭಾಗವನ್ನು ಹೊರಗಿಟ್ಟು ಪ್ರತ್ಯೇಕವಾಗಿ ತಾನೇ ತಾನಾಗಿ ರೂಪುಗೊಂಡದ್ದು ವಿಜ್ಞಾನ ನಾಗರಿಕತೆಯ ವಿಕೃತಿಗಳಿಗೆ ಬಹುಶಃ ಕಾರಣವಿದ್ದಿರಬಹುದು. ಸ್ವಾತಂತ್ರ್ಯ, ಸಮಾನತೆಗಳನ್ನು ಕೊರಳೆತ್ತಿ ಉದ್ಘೋಷಿಸಿದ ವಿಜ್ಞಾನ ನಾಗರಿಕತೆಯು ಕ್ರಮೇಣ ಅವೆರಡನ್ನೂ ಕಳೆದುಕೊಳ್ಳುತ್ತ ನಡೆದಿರುವುದನ್ನು ಕಾಣುತ್ತೇವೆ.

ವಿಜ್ಞಾನ ನಾಗರಿಕತೆಯ ಒಂದು ಬಣ (ಬಂಡವಾಳ ಆಧಾರಿತ–ಸ್ವತಂತ್ರ) ಸ್ವಾತಂತ್ರ್ಯಕ್ಕೆ ಒತ್ತುಕೊಟ್ಟಿತು. ಇನ್ನೊಂದು ಬಣ (ಶ್ರಮಗಾರ ಕೇಂದ್ರಿತ–ಸಮಾನತೆ) ಸಮಾನತೆಗೆ ಒತ್ತುಕೊಟ್ಟಿತು. ಆದರೆ ಈಗ ನೋಡುವಾಗ, ಎರಡೂ ಬಣದ ಜನತೆ ಸ್ವಾತಂತ್ರ್ಯ-ಸಮಾನತೆಗಳೆರಡನ್ನೂ ನಾಶಪಡಿಸಿಕೊಂಡಿರುವುದನ್ನು ಕಾಣುತ್ತೇವಲ್ಲವೆ? ಸ್ವತಂತ್ರ ಬಣದಲ್ಲಿ ಅತಿಕೇಂದ್ರಿತ ಬಂಡವಾಳಶಾಹಿ ಉದ್ಯಮ ಸಂಘಟನೆಯು ಜನರ ಉಡುಗೆತೊಡುಗೆ, ಅನ್ನಾಹಾರಗಳಿಂದ ಹಿಡಿದು ಸಮಸ್ತವನ್ನೂ ಕ್ಲುಪ್ತವಾಗಿ ನಿಯಂತ್ರಿಸುತ್ತ ಅವರನ್ನು ಅತಿದಾಸ್ಯಕ್ಕೆ ತಳ್ಳಿದೆ. ಸಮಾನತೆಯ ಬಣದಲ್ಲಿ ಅತಿಕೇಂದ್ರಿತ ಅಧಿಕಾರಶಾಹಿ ಆಡಳಿತ ಸಂಘಟನೆಯು ಜನರನ್ನು ಅತಿ ಅಸಮಾನತೆಗೆ ತಳ್ಳಿದೆ. ಎರಡೂ ಬಣಗಳೂ ಪ್ರಜಾಪ್ರಭುತ್ವ, ಜನಪ್ರಭುತ್ವಗಳ ಮಾತು ಜಪಿಸುತ್ತ ತದ್ವಿರುದ್ಧವಾದ ದಾರಿಯಲ್ಲಿ ಧಾವಿಸುತ್ತಿವೆ. ಈ ಹಂತದಲ್ಲಿ ತೃತೀಯ ಜಗತ್ತಿನ ಚಿಂತನೆ, ಪ್ರಯೋಗಗಳು ಮುಖ್ಯವಾಗಬಹುದು. ಉದಾಹರಣೆಗೆ– ಎಂಗೆಲ್ಸನಂಥ ಮಹಾಚಿಂತಕ ಕೂಡ ಮನುಷ್ಯನ ಪ್ರಗತಿಗೆ ಕೆಲವೊಮ್ಮೆ ಆತನ ದುರಾಕಾಂಕ್ಷೆಗಳೇ ಕಾರಣವಾಗಿರಬಹುದು ಎಂದು ಅನುಮಾನಿಸುತ್ತಾನೆ. ಆದರೆ, ನಮಗೆ ಇಂಡಿಯಾದವರಿಗೆ, ಆಸೆಯೇ ದುಃಖಕ್ಕೆ ಮೂಲ ಎಂದು ಎರಡೂವರೆ ಸಾವಿರ ವರ್ಷಗಳ ಹಿಂದೆಯೇ ಪ್ರತಿಪಾದಿಸಿದ ಬುದ್ಧದೇವನ ಮಾತು ಮತ್ತು ಹಿಂದೂ ಸಂಸ್ಕೃತಿ ಪ್ರತಿಪಾದಿಸಿದ ಸಂಯಮ ಮುಂತಾದವು ಇನ್ನೂ ಪೂರ್ತಿ ಮರೆತಿಲ್ಲ. ಜನರು ಹಳ್ಳಿಹಳ್ಳಿಯ ಸ್ವಯಮಾಡಳಿತ ವ್ಯವಸ್ಥೆಯಲ್ಲಿ ಹೆಚ್ಚು ಸ್ವತಂತ್ರರಾಗಿ ಬದುಕುತ್ತಿದ್ದರೆಂಬುದು ಮರೆತಿಲ್ಲ. ಈ ಪರಂಪರೆಯ ವಿವೇಕದಿಂದ ನಾವು ವಿಜ್ಞಾನ, ಯಂತ್ರಜ್ಞಾನಗಳನ್ನು ನಮ್ಮ ಪ್ರಯೋಜನಕ್ಕೆ ಪಳಗಿಸಿಕೊಳ್ಳಲು ಪ್ರಾಯಶಃ ಹೆಣಗುತ್ತಿದ್ದೇವೆ. ತೃತೀಯ ಜಗತ್ತಿನ ಇಂಥ ಪ್ರಯೋಗಗಳಿಗೆ ಮಹಾತ್ಮಾಗಾಂಧಿ ಹರಳುಗಟ್ಟಿದ ಅಭಿವ್ಯಕ್ತಿಯಾಗಿ ಬಂದರು.

ಗಾಂಧೀಜಿ ಸರ್ವತ್ರ ವಿಕೇಂದ್ರೀಕರಣ ಮತ್ತು ಆಸೆಯ ಸಂಯಮ ಇವುಗಳನ್ನು ಕೇಂದ್ರವಾಗಿ ಪರಿಗಣಿಸಿದರು. ಪರಸ್ಪರ ಸ್ಪರ್ಧೆಗೆ ಬದಲಾಗಿ ಪ್ರೀತಿ ಸಹಕಾರಗಳನ್ನು ಪ್ರತಿಪಾದಿಸಿದರು. ಅಭಿವೃದ್ಧಿ ಅಥವಾ ಪ್ರಗತಿಯೆನ್ನುವುದನ್ನು ರೇಖಾಗತಿಯಾಗಿ ಪರಿಗಣಿಸಲಿಲ್ಲ; ಬದಲು, ಒಬ್ಬೊಬ್ಬ ವ್ಯಕ್ತಿಯೂ ತನ್ನ ಮಿತಿಯಲ್ಲಿ ಇಡೀ ಅರಳಿಕೊಳ್ಳುತ್ತ ಅಂತಿಮವಾಗಿ ಇಡೀ ಜನಪದ ತನ್ನ ಕಾಲ ದೇಶಗಳ ಚೌಕಟ್ಟಿನಲ್ಲಿ ಸಂಪೂರ್ಣ ಅರಳಿಕೊಳ್ಳುವುದೇ ಪ್ರಗತಿಯೆಂದು ಪ್ರತಿಪಾದಿಸಿದರು. ಆ ಪ್ರಕ್ರಿಯೆಯನ್ನು 'ಸರ್ವೋದಯ' ಎಂದು ಸಂಕೇತಿಸಿದರು.

ನಮ್ಮ ಸಂಸ್ಕೃತಿಯ ಶತಮಾನದ ಜಾತಿ ವೈಷಮ್ಯದ ಕತ್ತಲ ಗರ್ಭದಿಂದ ಸೀಳಿಕೊಂಡು ಬಂದ ನರಸಿಂಹ ವ್ಯಕ್ತಿ ಡಾ. ಅಂಬೇಡ್ಕರ. ರಾಷ್ಟ್ರದ ಹೊಸ ರಾಜ್ಯಾಂಗವನ್ನು ರೂಪಿಸಲಿಕ್ಕೆ ನಮ್ಮ ಜನ ಅವರಿಗೆ ನಾಯಕತ್ವ ಕೊಟ್ಟರು. ನಮ್ಮ ಕರ್ನಾಟಕದಲ್ಲಿ ತೀರ ಸಾಮಾನ್ಯರಿಂದ ಮೇಲೆದ್ದು ಬಂದ ಗೋಪಾಲ ಗೌಡ ಎನ್ನುವವರು ಅಷ್ಟಾಗಿ ಇಂಗ್ಲೀಷ್ ಕೂಡ ಬಲ್ಲವರಲ್ಲ. ಕರ್ನಾಟಕದ ಹೊರಗೆ ಹೋಗಿದ್ದೂ ಅಪರೂಪ. ತನ್ನ ಸ್ಥಳದಲ್ಲೇ ಅಲ್ಲಿದ್ದ ಕೃಷಿಗೇಣಿದಾರರನ್ನು

ಸಂಘಟಿಸಿ ರಾಷ್ಟ್ರಕ್ಕೇ ಮಹತ್ವವೆನಿಸಿದ ಪ್ರಕ್ರಿಯೆಯೊಂದನ್ನು ಪ್ರಾರಂಭಗೊಳಿಸಿದರು. ನಮ್ಮ ರಾಜ್ಯ ಅವರನ್ನೇ ಅತ್ಯಂತ ಶ್ರೇಷ್ಠ ನಾಯಕನೆಂದು ಪರಿಗಣಿಸುತ್ತದೆ. ರಾಜಕಾರಣದಲ್ಲಿ ನಾವು ಹೊಸ ದಾರಿ ಕಂಡುಕೊಳ್ಳುತ್ತಿರುವುದಕ್ಕೆ ಇವೆಲ್ಲ ಸಾಕ್ಷಿಗಳು.

ಇಂಡಿಯಾ ಮಾತ್ರವಲ್ಲ, ತೃತೀಯ ಜಗತ್ತಿನ ಎಲ್ಲಾ ಭಾಗಗಳಲ್ಲಿ, ಬೇರೆ ಬೇರೆ ಅಸಂಖ್ಯಾತ ಕ್ಷೇತ್ರಗಳಲ್ಲಿ, ಮೂಲೆ ಮೂಲೆಗಳಲ್ಲಿ ಇಂಥ ಪ್ರಯೋಗವು ವಿವಿಧ ಹಂತಗಳಲ್ಲಿ ನಡೆದಿದೆ ಎನ್ನುವುದು ನನ್ನ ನಂಬಿಕೆ. ಚೀನಾದ ನಾಯಕ ಮಾವೊತ್ಸೆ ತುಂಗ್ ಸೋವಿಯತ್ ಬಣದ ರಾಜಕೀಯ ಸಿದ್ಧಾಂತವನ್ನು ಒಪ್ಪಿಕೊಂಡಿದ್ದರು. ಆದರೂ ಅವರು ವಿಶೇಷವಾಗಿ ಶ್ರಮಿಸಿದ್ದು ಸರಕು ಸಂಸ್ಕೃತಿಗೆ ಪರ್ಯಾಯವಾಗಿ ಸಮಸ್ತರಿಗೂ ಲಭ್ಯವಾಗಬಲ್ಲ ಸರಳ ಜೀವನ ಕ್ರಮವನ್ನು ರೂಪಿಸಲಿಕ್ಕಾಗಿ.

ನಮ್ಮ ಸಹೋದರ ರಾಷ್ಟ್ರವಾದ ನಿಮ್ಮ ಫಿಲಿಪ್ಪೀನ್ಸ್ ಪಶ್ಚಿಮಕ್ಕಿಂತ ಭಿನ್ನವಾದ ಹೊಸ ಪ್ರಜಾಪ್ರಭುತ್ವ ಪದ್ಧತಿಯನ್ನು ರೂಪಿಸಿಕೊಳ್ಳಲು ಹಲವು ಬಗೆಯ ಪ್ರಯತ್ನ ನಡೆಸಿರುವುದನ್ನೂ, ಮುಖ್ಯವಾಗಿ, ನಿಮ್ಮ ಗ್ರಾಮಾಡಳಿತ (ಬರಾಂಗೆ ಕೌನ್ಸಿಲ್) ಪ್ರಯೋಗಗಳನ್ನೂ ನಾನು ಕೇಳಿದ್ದೇನೆ. ನಮ್ಮಲ್ಲಿ ಕೂಡ, ಪ್ರಾಥಮಿಕ ಆಡಳಿತ ಘಟಕವಾಗಿ ಗ್ರಾಮ ಪಂಚಾಯಿತಿಗಳನ್ನು ಸ್ಥಾಪಿಸಿ ರಾಜಕೀಯದಲ್ಲಿ ಆತ್ಯಂತಿಕ ವಿಕೇಂದ್ರೀಕರಣವನ್ನು ಸಾಧಿಸುವ ಪ್ರಯತ್ನಗಳು ಪ್ರಾರಂಭವಾಗಿವೆ. ನಮ್ಮ ಹಳೆಯ ಗ್ರಾಮ ಪಂಚಾಯಿತಿಗಳು ಆಡಳಿತ ಘಟಕಗಳಾಗಿ ಮತ್ತು ನಾವು ಹೊಸದಾಗಿ ತಂದುಕೊಂಡ ಪಾರ್ಲಿಮೆಂಟ್ ರಾಷ್ಟ್ರೀಯ ಸಹಕಾರ ಘಟಕಗಳಾಗಿ ಎರಡೂ ಒಗ್ಗೂಡಿಕೊಂಡು ಒಂದು ಹೊಸ ಬಗೆಯ ಆಡಳಿತ ವ್ಯವಸ್ಥೆಯನ್ನು ರೂಪಿಸುವುದು ಸಾಧ್ಯವಾದೀತೆ? ಅರ್ಥಾತ್, ಆಡಳಿತದ ವಿಕೇಂದ್ರೀಕರಣ ಮತ್ತು ಸಹಕಾರ ಕೇಂದ್ರೀಕರಣಗಳನ್ನು ಸಾಧಿಸಲಿಕ್ಕಾದೀತೆ ಎಂದು ನಾನು ಆಸೆಯಿಂದ ನಿರೀಕ್ಷಿಸುತ್ತೇನೆ.

ಒಟ್ಟಿನಲ್ಲಿ, ಈ ಇಡೀ ಪ್ರಕ್ರಿಯೆಯನ್ನು ಹೀಗೆ ಹೇಳಬಹುದು: ನಮ್ಮ ನಮ್ಮ ವಿವಿಧ ಪರಂಪರೆಯ ಗತಿ (ಥೆಸಿಸ್) ವಿಜ್ಞಾನ ಸಂಸ್ಕೃತಿಯ ವಿಗತಿ (ಆಂಟಿಥೆಸಿಸ್) ಯೊಡನೆ ಸಂಘರ್ಷಿಸಿ ಹೊಸ ಸಂಗತಿ (ಸಿಂಥೆಸಿಸ್) ಯನ್ನು ಸೃಜಿಸುವ ಪ್ರಕ್ರಿಯೆ ಇದು ಎನ್ನಬಹುದು.

ನಮ್ಮ ರಾಷ್ಟ್ರದ ಒಂದು ಮೂಲೆಯ ಬಹು ಪುಟ್ಟ ಹಳ್ಳಿಯೊಂದರಲ್ಲಿ ಅಲ್ಲಿನ ಜನ ನಡೆಸಿರುವ ಪುಟ್ಟದೊಂದು ಪ್ರಯೋಗವನ್ನು ಹುಡುಕಿ ಕಂಡು ಅದಕ್ಕೆ ನನ್ನ ಹೆಸರಲ್ಲಿ ಈಗ ಪ್ರಶಸ್ತಿ ನೀಡುತ್ತಿದ್ದೀರಲ್ಲ, ಇದು ಪ್ರಾಯಶಃ ತೃತೀಯ ಜಗತ್ತಿನ ಹೊಸ ಸಂಗತಿ (ಸಿಂಥೆಸಿಸ್)ಯ ಪ್ರಕ್ರಿಯೆಗೆ ಸಂದ ಪ್ರಶಸ್ತಿ.

ಮೇಲಿನ ಕೆಲವು ಮಾತುಗಳನ್ನು ಹೇಳುತ್ತಿದ್ದ ಹಾಗೆ ಅವೇ ಮಾತುಗಳು ಇನ್ನೊಂದು ಮುಖದಿಂದ ನನ್ನನ್ನು ಅಣಕಿಸಿ ತಿವಿದು ಕಾಡುತ್ತಿವೆ. ಅವನ್ನೂ ಹೇಳಿಕೊಳ್ಳಬೇಕು. ಇಂಡಿಯಾದ ಅಥವಾ ತೃತೀಯ ಜಗತ್ತಿನ ಇವತ್ತಿನ ದೈನಂದಿನ

ಜೀವನದಲ್ಲಿ ವಾಸ್ತವವಾಗಿ ಕಾಣುತ್ತಿರುವುದೇನು? ನಾವೆಲ್ಲ ಏನನ್ನು ಅನುಭವಿಸುತ್ತಿದ್ದೇವೆ? ಹಣ, ಅಧಿಕಾರಲಾಲಸೆ, ಭ್ರಷ್ಟಾಚಾರ, ಅಮಾನವೀಯತೆ ಕೇವಲ ಇವೇ. ಒಂದೇ ಮಾತಿನಲ್ಲಿ ಹೇಳುವುದಾದರೆ ನಾವೆಲ್ಲರೂ ಇವತ್ತು ನಮ್ಮ ನೆಲವನ್ನು ಅಸಹ್ಯ ನರಕವನ್ನಾಗಿ ಮಾಡಿಕೊಂಡು ಅಮಾನವೀಯವಾಗಿ ಬದುಕುತ್ತಿದ್ದೇವೆ. ತೀರ ಎದುರಿನ ಈ ವಾಸ್ತವದ ಜತೆ ನಮ್ಮ ಸಮಸ್ತ ಸತ್ತ್ವವನ್ನೂ ಬಳಸಿ ಹೋರಾಡಬೇಕಾದ್ದು ನಮ್ಮ ಪ್ರಪ್ರಥಮ ಕರ್ತವ್ಯವಾಗಿದೆ. ಅದನ್ನು ಕೊಂಚ ಮರೆತರೂ ನಮ್ಮ ದೇಶಗಳಿಗೆ ಭವಿಷ್ಯವೆಂಬುದೇ ಇಲ್ಲ. ಹಾಗೆ ಹೋರಾಡುವಾಗ, ಈ ನಮ್ಮ ನರಕ ಜೀವನದ ಆಳದ ಸ್ತರದಲ್ಲಿ ಮೇಲೆ ಹೇಳಿದ ಸೃಜನ ಪ್ರಕ್ರಿಯೆಯೊಂದು ಸುವರ್ಣ ರೇಖೆಯಂತೆ ಮಿಂಚುತ್ತಿರುವುದನ್ನು ಗಮನಿಸದೆ ಹೋಗಬಾರದು. ಒಂದನ್ನು ಮರೆತರೆ ನಾವು ಭೋಳೆಗಳಾಗುತ್ತೇವೆ; ಬೊಗಳೆಗಳಾಗುತ್ತೇವೆ. ಇನ್ನೊಂದನ್ನು ಮರೆತರೆ ಬರೀ ಸಿನಿಕರಾಗುತ್ತೇವೆ.

ಹಾಗೆ ಭವಿಷ್ಯದಲ್ಲಿ ಭರವಸೆ ಕಂಡುಕೊಂಡು ಅದರ ಸಾಧನೆಗಾಗಿ ಕಲುಷಿತ ವರ್ತಮಾನದಲ್ಲಿ ತೀವ್ರವಾದ ಹೋರಾಟ ನಡೆಸಿದಂಥವರಿಗೇ ಹೆಚ್ಚಾಗಿ ನಿಮ್ಮ ಗೌರವಯುತ ಪ್ರಶಸ್ತಿ ಈ ಹಿಂದೆ ಸಂದಿದೆ. ಅದರಿಂದಾಗಿ ಈ ಪ್ರಶಸ್ತಿ ನಮ್ಮ ಹೊಸ ನಾಯಕತ್ವವನ್ನು ರೂಪಿಸುತ್ತಿದೆ, ನಿರ್ದೇಶಿಸುತ್ತಿದೆ.

ಮ್ಯಾಗ್‌ಸೆಸೆ ಪ್ರಶಸ್ತಿಯನ್ನು ನೊಬೆಲ್ ಬಹುಮಾನಕ್ಕೆ ಹೋಲಿಸಿ ಇದು ಏಷ್ಯಾದ ನೊಬೆಲ್ ಬಹುಮಾನ ಎಂದು ಹೆಸರಿಸುವುದುಂಟು. ನೊಬೆಲ್ ಬಹುಮಾನ ನೀಡುವುದು ಹೆಚ್ಚಾಗಿ ಯಾವುದೊಂದು ಕ್ಷೇತ್ರದಲ್ಲಿ ಯಾವನೊಬ್ಬ ವ್ಯಕ್ತಿ ಸಾಧಿಸಿದ ಪರಮಶ್ರೇಷ್ಠತೆಗಾಗಿ. ಆದರೆ ಮ್ಯಾಗ್‌ಸೆಸೆ ಪ್ರಶಸ್ತಿಯು, ನೊಬೆಲ್‌ಗೆ ಪರ್ಯಾಯವಾಗಿ, ಯಾವುದೊಂದು ಸಾಧನೆಯ ಮಾರ್ಗವನ್ನು, ಅದರ ಸಾಮಾಜಿಕ ವ್ಯಾಪ್ತಿಯನ್ನು ಹೆಚ್ಚಾಗಿ ಪರಿಗಣಿಸುತ್ತದೆ ಎಂದು ನನ್ನ ಅನಿಸಿಕೆ.

ಹಿಂದೆ ಈ ಪ್ರಶಸ್ತಿ ಪಡೆದುಕೊಂಡ ನಮ್ಮ ದಿ. ಕಮಲಾದೇವಿ ಚಟ್ಟೋಪಾಧ್ಯಾಯರನ್ನೇ ತೆಗೆದುಕೊಳ್ಳಿ. ಅವರು ಯಾವುದೇ ಒಂದು ಕ್ಷೇತ್ರದಲ್ಲಿ ಪರಮ ಶ್ರೇಷ್ಠತೆಯನ್ನು ಸಾಧಿಸಿದವರಲ್ಲ. ಅವರಿಗಿಂತ ಮಿಗಿಲಾದ ರಾಜಕಾರಣಿ, ಸಮಾಜ ಸುಧಾರಕಿ, ಕಲಾವಿದೆ, ಸಂಘಟನಕಾರ್ತಿ ಇತ್ಯಾದಿ ಬೇಕಷ್ಟಿದ್ದರು. ಆದರೆ ಈ ಎಲ್ಲಾ ಒಗ್ಗೂಡಿರುವ ವ್ಯಕ್ತಿ ಮತ್ತು ತನ್ನ ಸಮಸ್ತವನ್ನೂ ಪ್ರಸ್ತುತ ಸಮಾಜಕ್ಕೆ ಸಂಬದ್ಧಗೊಳಿಸಿದ ವ್ಯಕ್ತಿ ಇನ್ನೊಬ್ಬರಿಲ್ಲ. ಶತಮಾನಗಳ ಕಾಲ ಇಂಡಿಯಾದ ಕವಿಗಳು, ಕಲಾವಿದರು ಯಾವ ಧೀರ ಸುಂದರ ಪ್ರೇಮಲ ಸ್ತ್ರೀಮೂರ್ತಿಯನ್ನು ತಮ್ಮ ಕನಸಿನಲ್ಲಿ ತಿದ್ದಿತಿದ್ದಿ ರೂಪಿಸಿದರೋ ಅದು ಜೀವಗೊಂಡು ಬಂದವರು ಆಕೆ.

ಈ ಪ್ರಶಸ್ತಿ ಪಡೆದ ಜಪಾನಿನ ಫುಕುವೊಕ ಕೃಷಿಕಾರರು, ನನ್ನ ವೃತ್ತಿಯೂ ಕೃಷಿಯೇ. ನಾನು ಅವರ ಸಹೋದ್ಯೋಗಿ ಎನ್ನುವುದು ನನಗೆ ಹೆಮ್ಮೆ. ಪಾಶ್ಚಾತ್ಯ ವಿಜ್ಞಾನ ನಾಗರಿಕತೆಯಲ್ಲಿ ಅವರು ಒಬ್ಬ ಶ್ರೇಷ್ಠ ಕೃಷಿ ವಿಜ್ಞಾನಿಯಾಗುತ್ತಿದ್ದರೇನೋ.

ಆದರೆ ಪೌರ್ವಾತ್ಯ ಸಂಸ್ಕೃತಿಯಲ್ಲಿ ಅವರು ತಾತ್ತ್ವಿಕರಾದರು; ಕೃಷಿಯ ಉದ್ಯೋಗದಲ್ಲಿ ವಿಶ್ವ ಉದ್ಯೋಗವನ್ನು ಸಾಕ್ಷಾತ್ಕರಿಸಿಕೊಂಡ 'ಋಷಿ' ಯಾದರು.

ಹೀಗೆ, ಈ ಪ್ರಶಸ್ತಿಯು ಪಶ್ಚಿಮದ ವಿಜ್ಞಾನದ ದೃಷ್ಟಿಗೆ ಪರ್ಯಾಯವಾದ ಸಮ್ಯಕ್ ದೃಷ್ಟಿಯೊಂದನ್ನು ಹುಡುಕಲು, ಹುಡುಕಿ ಗುರುತಿಸಲು, ಗುರುತಿಸಿ ಹೊಗಳಲು ಮೀಸಲಾಗಿದೆ.

ಏಷ್ಯಾದಲ್ಲಿ ವಸಾಹತುಶಾಹಿಯನ್ನು ಮೊತ್ತ ಮೊದಲಿಗೆ ಕಿತ್ತೆಸೆದ ನಿಮ್ಮ ಧೀರ ಜನತೆಗೂ ಬೆಳಿಗ್ಗೆ ಪ್ರಪ್ರಥಮವಾಗಿ ಸೂರ್ಯ ಕಿರಣಗಳನ್ನು ಮೈದುಂಬಿಕೊಳ್ಳುವ ನಿಮ್ಮ ನೆಲ ಕಾಡು–ಕಡಲುಗಳಿಗೂ ತಲೆಬಾಗಿ ನಮಸ್ಕರಿಸಿ ಈ ಪ್ರಶಸ್ತಿಯನ್ನು ಸ್ವೀಕರಿಸುತ್ತೇನೆ.

## ಸುಬ್ಬಣ್ಣನವರಿಗೆ ಮ್ಯಾಗ್ಸೇಸೆ ಪ್ರಶಸ್ತಿ ಬಂದಾಗ ನಡೆಸಿದ ಸಂದರ್ಶಗಳ ಆಯ್ದ ಭಾಗಗಳು

### 'ನೀನಾಸಂಗೆ ಬಂದ ಪ್ರಶಸ್ತಿ' – ಸುಬ್ಬಣ್ಣ

* ಈ ಪ್ರಶಸ್ತಿಯಿಂದ ನಿಮಗೆ ಸಂತೋಷವಾಗಿದೆಯೆ?

ತುಂಬಾ ಸಂತೋಷವಾಗಿದೆ. ಇದು ಒಬ್ಬ ವ್ಯಕ್ತಿಗೆ ಕೊಟ್ಟಿರುವ ಪ್ರಶಸ್ತಿ ಅಂತ ನನಗೆ ಅನ್ನಿಸ್ತಾನೇ ಇಲ್ಲ. ಇದು ನೀನಾಸಂ ಸಂಸ್ಥೆಗೆ ಬಂದ ಪ್ರಶಸ್ತಿ. ನಮ್ಮ ಊರಿಗೆ ಬಂದ ಪ್ರಶಸ್ತಿ. ಇವುಗಳನ್ನು ಹೊರತುಪಡಿಸಿ ಬರೇ ಒಬ್ಬ ವ್ಯಕ್ತಿಯಾಗಿ ನನ್ನನ್ನ ಕಲ್ಪಿಸಿಕೊಳ್ಳೋದಕ್ಕೇ ನನಗೆ ಸಾಧ್ಯವಿಲ್ಲ.

* ಈ ಪ್ರಶಸ್ತಿಯ ಜೊತೆ ಸಾಕಷ್ಟು ದೊಡ್ಡ ಮೊತ್ತದ ಹಣ ಕೂಡಾ ನಿಮಗೆ ಸಿಗುತ್ತೆ. ಆ ಹಣವನ್ನ ಹೇಗೆ ವಿನಿಯೋಗಿಸಬೇಕು ಅಂತ ಅಂದ್ಕೊಂಡಿದೀರಿ?

ಒಬ್ಬ ವ್ಯಕ್ತಿಯಾಗಿ ನನಗೇ ಅಷ್ಟೊಂದು ಹಣ ಯಾರಾದರೂ ಕೊಡುತ್ತಿದ್ರೆ ನನಗೆ ನಿಜಕ್ಕೂ ಅದು ಸಮಸ್ಯೆಯಾಗಿ ಬಿಡೋದು; ಹೇಗಪ್ಪಾ ಇದನ್ನ ಖರ್ಚು ಮಾಡೋದು ಅಂತ. ಆದ್ರೆ, ಆಗ್ಲೇ ಹೇಳಿದ್ನಲ್ಲ, ಸುಬ್ಬಣ್ಣ ಅನ್ನೋ ವ್ಯಕ್ತಿಗೆ ಈ ಪ್ರಶಸ್ತಿ ಕೊಟ್ಟಿದಾರೆ ಅಂತ ಅನ್ನಿಸ್ತಲೇ ಇಲ್ಲ. ಇದು ನಮ್ಮ ಸಂಸ್ಥೆಗೆ, ನಮ್ಮ ಊರಿಗೆ ಸಂದ ಗೌರವ. ಹಣಾನೂ ಅಷ್ಟೆ. ಈ ಹಣವನ್ನ ಹೇಗೆ ಖರ್ಚು ಮಾಡಬೇಕು ಅನ್ನೋದನ್ನ ನೀನಾಸಂ ನಿರ್ಧರಿಸುತ್ತೆ. ಹೆಗ್ಗೋಡು ಏನು ನಿರ್ಧಾರ ತಗೊಳ್ಳುತ್ತೊ ಹಾಗೆ ಈ ಹಣವನ್ನು ಖರ್ಚು ಮಾಡ್ತೀವಿ. ಇಷ್ಟಂತೂ ನಿಜ; ಸಾರ್ವಜನಿಕ ಹಣ ಸಾರ್ವಜನಿಕ ಉದ್ದೇಶಗಳಿಗಾಗಿ ಬಳಕೆಯಾಗುತ್ತೆ. ನೀನಾಸಂ ಸಂಸ್ಥೆ, ಹೆಗ್ಗೋಡು ಪ್ರಾಂತ್ಯದ ಜನತೆ ಇಂಥ ಜವಾಬ್ದಾರಿಗಳನ್ನ ಈ ಹಿಂದೆ ಯಶಸ್ವಿಯಾಗಿ ನಿಭಾಯಿಸಿದ್ದುಂಟು. ಮುಂದೆ ಕೂಡಾ ಹಾಗೇ ಆಗುತ್ತೆ ಅನ್ನೋ ನಂಬಿಕೆ ನನ್ನದು.

* ಸುಬ್ಬಣ್ಣ, ಈ ಹಿಂದೆ ನೀವು ಅನೇಕ ಬಹುಮಾನಗಳನ್ನ, ಪ್ರಶಸ್ತಿಗಳನ್ನ ಪಡೆದಿದ್ದೀರಿ, ಹಲವನ್ನು ತಿರಸ್ಕರಿಸಿದ್ದೀರಿ, ಈಗ ನಿಮಗೆ ಮ್ಯಾಗ್‌ಸೆಸೆ ಪ್ರಶಸ್ತಿ ಬಂದಿದೆ. ಇದೊಂದು ಅರ್ಥಪೂರ್ಣವಾದ ಪ್ರಶಸ್ತಿ ಅಂತ ಅನ್ನಿಸುತ್ತಾ?

ನೋಡಿ, ನಾನು ಸ್ವೀಕರಿಸಿದ ಪ್ರಶಸ್ತಿಗಳ ಬಗ್ಗೆ ಮಾತ್ರ ನನಗೆ ಗೌರವ ಇದೆ, ಉಳಿದವುಗಳ ಬಗ್ಗೆ ಗೌರವ ಇಲ್ಲ ಅಂತೇನೂ ಇಲ್ಲ. ಕೆಲವನ್ನ ತಗೊಂಡಿದ್ರೆ ಕೆಲವನ್ನ ತಗೊಳ್ಳದೇ ಇದ್ರೆ ಅದಕ್ಕೆ ವೈಯಕ್ತಿಕವಾದ, ಸಾಂದರ್ಭಿಕವಾದ ಕಾರಣಗಳಿದ್ದಿರಬಹುದೇ ಹೊರತು ಸೈದ್ಧಾಂತಿಕ ಕಾರಣ ಅನ್ನೋದೇನೂ ಇಲ್ಲ. ಈಗ ಈ ಮ್ಯಾಗ್‌ಸೆಸೆ ಪ್ರಶಸ್ತಿ ನಾವು ನಂಬಿಕೊಂಡಿರುವ ಅನೇಕ ಮೌಲ್ಯಗಳನ್ನ, ತೊಡಗಿಕೊಂಡಿರುವ ಚಳುವಳಿಗಳನ್ನ, ಒಟ್ಟಿನಲ್ಲಿ ಸದ್ಯದ ಒಂದು ಸಾಂಸ್ಕೃತಿಕ ಪ್ರಕ್ರಿಯೆಯನ್ನೇ ಗುರುತಿಸುತ್ತಿದೆ ಅಂತ ಅನ್ನಿಸಿದ್ದಕ್ಕೆ ಈ ಪ್ರಶಸ್ತಿಯನ್ನ ಒಪ್ಪಿಕೊಂಡೆ ಅಷ್ಟೆ. ಸ್ವಲ್ಪ ವಿವರಿಸೋದಾದ್ರೆ ಏಷ್ಯಾ ಖಂಡದ ವಿಶಿಷ್ಟ ಚಟುವಟಿಕೆಗಳನ್ನು ಗುರುತಿಸೋದಕ್ಕೆ ಮ್ಯಾಗ್‌ಸೇಸೆ ಪ್ರಶಸ್ತಿ ಸ್ಥಾಪಿತವಾಯ್ತು ಅಂತ ಕೇಳಿದೇನೆ. ನೀವು ಗಮನಿಸಿರಬಹುದು, ಇವತ್ತು ತೃತೀಯ ಜಗತ್ತು ಪಾಶ್ಚಾತ್ಯ ನಾಗರಿಕತೆಗಿಂತ ಭಿನ್ನವಾದ ನಾಗರಿಕತೆಯೊಂದನ್ನ ಕಟ್ಟಿಕೊಳ್ಳಲು ಹೆಣಗಾಡ್ತಾ ಇದೆ. ಸಂಪ್ರದಾಯ ಹಾಗೂ ಪಾಶ್ಚಾತ್ಯ ಆಧುನಿಕತೆ ಎರಡನ್ನೂ ಕುರುಡಾಗಿ ಅನುಕರಿಸದ ಪರ್ಯಾಯ ನಾಗರಿಕತೆಯೊಂದರ ಶೋಧನೆ ನಡೀತಾ ಇದೆ. ಇಲ್ಲಿಯ ಜನಗಳಿಗೆ ತಮ್ಮದೇ ಆದ ಆಶೋತ್ತರಗಳಿವೆ; ಸಂಪನ್ಮೂಲಗಳಿವೆ; ಸಾಧ್ಯತೆಗಳಿವೆ. ಇವುಗಳನ್ನ ಅರ್ಥಪೂರ್ಣವಾಗಿ ದುಡಿಸಿಕೊಳ್ಳೋದಕ್ಕೆ ನಾವು ಪ್ರಯತ್ನಪಡ್ತಿದ್ದೇವೆ. ಈ ಬಗ್ಗೆ ನಮ್ಮ ನಮ್ಮಲ್ಲೇ ಮಾತನಾಡಿಕೊಳ್ಳೋದಕ್ಕೆ ಪ್ರಾರಂಭ ಮಾಡಿದೇವೆ. ನೀನಾಸಂ ಚಟುವಟಿಕೆಗಳ ಹಿಂದಿನ ತುಡಿತ ಇದು ಅಂತ ನಾನು ನಂಬ್ಕೊಂಡಿದೀನಿ. this is our ideology. this is our politics. ಇದನ್ನ ಮ್ಯಾಗ್‌ಸೆಸೆ ಪ್ರಶಸ್ತಿ ಗುರುತಿಸಿರೋದ್ರಿಂದ ನನಗೆ ಹೆಚ್ಚಿನ ಸಂತೋಷವಾಗಿದೆ.

* ನೀನಾಸಂ ಒಂದು ವಿಶಿಷ್ಟ ಸಂಸ್ಥೆ, ಅದು ಒಂದು ರೀತಿಯಲ್ಲಿ ಪರ್ಯಾಯ ಸಾಂಸ್ಕೃತಿಕ ಶಿಕ್ಷಣ ನೀಡುತ್ತಿದೆ ಎಂದು ಹೇಳಬಹುದು. ನೀವು ಅದರ ಸ್ಥಾಪಕರಲ್ಲಿ ಒಬ್ಬರು. ಹಾಗೆಯೇ ನೀವು ಸಾಗರದ ಪ್ರಥಮ ದರ್ಜೆ ಕಾಲೇಜಿನ ಸ್ಥಾಪಕರಲ್ಲೂ ಒಬ್ಬರಾಗಿದ್ದೀರಿ. ಪದಾಧಿಕಾರಿಗಳೂ ಆಗಿದ್ದಿರಿ. ಈಗ ನೀವು ಆ ಸಂಸ್ಥೆಯೊಡನೆ ಸಕ್ರಿಯವಾದ ಸಂಬಂಧವನ್ನು ಇಟ್ಕೊಂಡಿಲ್ಲ. ಇದರರ್ಥ ನಿಮಗೆ ಸಾಂಪ್ರದಾಯಿಕ ಸಾಮಾನ್ಯ ಶಿಕ್ಷಣದ ಪ್ರಸ್ತುತತೆಯಲ್ಲಿ ನಂಬಿಕೆಯಿಲ್ಲ ಅಂತಲಾ?

ಹಾಗೇನೂ ಇಲ್ಲ, ಇಂಡಿಯಾದ ಇವತ್ತಿನ ಸಂದರ್ಭದಲ್ಲಿ ಸಾಂಪ್ರದಾಯಿಕ ಸಾಮಾನ್ಯ ಶಿಕ್ಷಣ, ತಾಂತ್ರಿಕ ಶಿಕ್ಷಣ ಮತ್ತು ನೀನಾಸಂ ಪ್ರಯತ್ನಿಸುತ್ತಿರುವ ಜನ ಶಿಕ್ಷಣ ಈ ಮೂರಕ್ಕೂ ಪ್ರಸ್ತುತತೆ ಇದೆ. ಅಷ್ಟೇ ಅಲ್ಲ, ಈ ಮೂರೂ ಒಟ್ಟೊಟ್ಟಿಗೇ ಹೋಗಬೇಕು. ಇವುಗಳಲ್ಲಿ ಸಮತೋಲನ ಸಾಧಿಸೋದಕ್ಕೆ ಒಂದು ಜನ ಸಮೂಹವಾಗಿ ನಮಗಿನ್ನೂ ಸಾಧ್ಯವಾಗದೇ ಇರೋದ್ರಿಂದ ಸ್ವಲ್ಪ ಗೊಂದಲ

ಆಗ್ತಿದೆ ಅಷ್ಟೆ. ಇನ್ನು ನಿಮ್ಮ ಸಂಸ್ಥೆಯಲ್ಲಿ ಈಗ ಪದಾಧಿಕಾರಿ ಆಗಿಲ್ಲ ಅಂದ ಮಾತ್ರಕ್ಕೆ ನೀವೆಲ್ಲ ನನಗೆ ದೂರದವರಾಗಿಲ್ವಲ್ಲ! (ನಗು) ನಮ್ಮ ದೇಶದ ವೈಶಿಷ್ಟ್ಯವೇ ಅದು. ಪಶ್ಚಿಮದಲ್ಲಿ ಎಲ್ಲರಿಗೂ ತಾಂತ್ರಿಕ ಶಿಕ್ಷಣ ಒಟ್ಟು ಕೆಲವು ಮಂದಿಗೆ ಮಾತ್ರ "ಶುದ್ಧ" ಶಿಕ್ಷಣ ಕೊಡ್ತಾರಂತೆ. ನಾನು ಹೇಳ್ತೀನೆ, ಅಗತ್ಯ ಇರೋರಿಗೆ ಮಾತ್ರ ತಾಂತ್ರಿಕ ಶಿಕ್ಷಣ ಕೊಡಿ ಅಂತ. ಇನ್ನು ನಮ್ಮ ಸಾಮಾನ್ಯ ಬುದ್ಧಿಮಟ್ಟ, ಸಂವೇದನೆ ಹೆಚ್ಚಿಸೋದಕ್ಕೆ ಬಿ.ಎ., ಎಂ.ಎ., ಅಂತ ಇದ್ರೆ ಎಲ್ಲರಿಗೂ ಆ ಶಿಕ್ಷಣ ಸಿಗಬೇಕು. ದಲಿತನೊಬ್ಬ ಪದವೀಧರ ಆದಾಗ ಅವನಲ್ಲಿ ಎಂತ ಆತ್ಮವಿಶ್ವಾಸ ಬಂದುಬಿಡತ್ತೆ ನೋಡಿ, ಅಥವಾ ಅನಕ್ಷರಸ್ಥನೊಬ್ಬ ಅಕ್ಷರಸ್ಥನಾದಾಗ ಅವನಿಗೆ ದೊರಕುವ ಬಿಡುಗಡೆ! ಹಾಗಾಗಿ ಮೇಲುನೋಟಕ್ಕೆ ಅಕ್ಷರಾಭ್ಯಾಸ, ಡಿಗ್ರಿ ತಗೊಳ್ಳೋದು ಇವೆಲ್ಲ ನಿರುಪಯುಕ್ತ ಅನ್ನಿಸಿದರೂ ಅವುಗಳ ಬಗ್ಗೆ ನಾವು ಸಿನಿಕಲ್ ಆಗಬಾರದು. ಸಂಸ್ಕೃತಿ ಶಿಕ್ಷಣವೂ ಅಷ್ಟೆ, ನಿಮಗೆ ಷೇಕ್ಸ್‌ಪಿಯರ್, ಸತ್ಯಜಿತ್‌ರಾಯ್, ಟಿ.ಎಸ್. ಎಲಿಯಟ್ ಬೇಕಾದರೆ ಇತರರಿಗೆ ಬೇಡವೋ? ಎಲ್ಲರಿಗೂ ಅವಕಾಶ ಕೊಡಿ. ಆಮೇಲೆ ಬೇಕು ಬೇಡಗಳನ್ನ ಅವರವರೇ ನಿರ್ಧರಿಸಿಕೊಳ್ಳಲಿ.

* ಸುಬ್ಬಣ್ಣ, ನೀವು ಮಹಾರಾಜ ಕಾಲೇಜಿನಲ್ಲಿ ಓದಿ ಮೈಸೂರಿನಲ್ಲಿಯೇ ಉಳಿಯದೆ ನಮ್ಮ ಹಳ್ಳಿಗೆ ವಾಪಸಾದಿರಿ. ಈ ನಾಡಿಗೇ ವಿಶಿಷ್ಟವಾದ ಚಟುವಟಿಕೆಗಳಲ್ಲಿ ತೊಡಗಿಕೊಂಡಿರಿ, ನಿಮ್ಮ ಪ್ರೇರಣೆಯ ಮೂಲ ಏನು?

ಮುಖ್ಯವಾಗಿ ನನ್ನ ಊರು ಮತ್ತು ಪರಿಸರ. ನನಗೆ ಪ್ರೇರಣೆ ನೀಡಿದವರು ನನ್ನ ಸುತ್ತಲ ಹಿರಿಯರು, ಸ್ನೇಹಿತರು. ಅವರೆಲ್ಲರ ಹೆಸರುಗಳ ಪಟ್ಟಿ ಇಲ್ಲಿ ಬೇಡ. ಆದರೂ ಅವರೆಲ್ಲರ ತಡವಿಕೊಂಡರೆ ಇಬ್ಬರು ವ್ಯಕ್ತಿಗಳಿಂದ ನಾನು ತುಂಬಾ ಪ್ರಭಾವಿತನಾಗಿದ್ದೇನೆ ಅಂತ ಅನ್ಸತ್ತೆ. ಗೋಪಾಲಗೌಡರು ಮತ್ತು ಅನಂತಮೂರ್ತಿ. ಗೋಪಾಲಗೌಡರಿಗೆ ರಾಷ್ಟ್ರಮಟ್ಟದ ಅಷ್ಟೇಕೆ ರಾಜ್ಯಮಟ್ಟದ ನಾಯಕರಾಗಿ ಬಿಡಬೇಕೆಂಬ ಆಸೆಗಳೇನೂ ಇರಲಿಲ್ಲ. ತಮ್ಮ ಜನಗಳ ನಡುವೆ ಬೇರುಬಿಟ್ಟು ಅವರೊಂದಿಗಿನ ಕೊಂಡುಕೊಳ್ಳುವಿಕೆಯಲ್ಲೇ ತಮ್ಮ ಜೀವನವನ್ನೂ, ರಾಜಕೀಯವನ್ನೂ ರೂಪಿಸಿಕೊಂಡವರು ಅವರು. ಚುನಾವಣಾ ಪ್ರಚಾರ ಮಾಡುವಷ್ಟೇ ತೀವ್ರವಾಗಿ ಅವರು ಕಿಕ್ಕಿರಿದ ಸಭೆಗಳಲ್ಲಿ ಕುಮಾರವ್ಯಾಸನ ಬಗ್ಗೆ, ಡಾರ್ವಿನ್ ಬಗ್ಗೆ ಮಾತನಾಡುತ್ತಿದ್ದರು. ಮನುಷ್ಯನಾಗಿ ತನಗೆ ಮುಖ್ಯವಾದದ್ದು, ಅರ್ಥಪೂರ್ಣವಾದದ್ದು ಇತರ ಮನುಷ್ಯರಿಗೂ ಮುಖ್ಯವಾಗಿ ಅರ್ಥಪೂರ್ಣವಾಗಿರಬಹುದು ಎಂಬ ವಿನಯ ಅವರಲ್ಲಿತ್ತು. ಇನ್ನು ಅನಂತಮೂರ್ತಿ. ನನ್ನ ಅನಂತಮೂರ್ತಿಯ ಸ್ನೇಹ ಎಷ್ಟು ಆಳವಾದದ್ದೆಂದರೆ ನನ್ನ ವಿಚಾರಗಳಲ್ಲಿ ನನ್ನದು ಎಷ್ಟು ಅನಂತಮೂರ್ತಿಯದ್ದೆಷ್ಟು ಅಂತ ನಾನು ಖಚಿತವಾಗಿ ಹೇಳಲಾರೆ. ಹಾಗಾಗಿ ನನ್ನಿಂದ ಏನಾದರೂ ಒಂದೆರಡು ಒಳ್ಳೆಯ ಕೆಲಸಗಳಾಗಿದ್ದರೆ ಆ ಗೌರವದಲ್ಲಿ ಸಾಕಷ್ಟು ಪಾಲು ಅವನಿಗೂ ಸಲ್ಲಬೇಕು. ಇಂದಿಗೂ ಅವನು ಭೌತಿಕವಾಗಿ ಎಷ್ಟೇ ದೂರದಲ್ಲಿದ್ದರೂ ನನ್ನ ಸಂವೇದನೆಯ ಒಂದು ಭಾಗವೇ ಆಗಿ ಹೋಗಿದ್ದಾನೆ. ಅವನೊಂದಿಗೆ ಜಗಳವಾಡುತ್ತಿದ್ದಾಗಲೂ ನನ್ನೊಂದಿಗೇ ಮಾತನಾಡಿಕೊಂಡಂತೆ ಇರುತ್ತದೆ.

* 'ಪಂಪನ ಕವಿತೆ–ಅನುಸಂಧಾನಕ್ಕೆ ಹೊಸ ಮಾರ್ಗ' ಎಂಬ ನಿಮ್ಮ ಲೇಖನವನ್ನು ನೆನಪಿಸಿಕೊಂಡು ಈ ಪ್ರಶ್ನೆ. ನಮ್ಮ ಸಾಕಷ್ಟು ವಿಮರ್ಶೆಯಲ್ಲಿರುವ ಮಿಥ್ಯಾನುಸಂಧಾನಗಳು ಯಾವುದು?

ನಮ್ಮ ಇತ್ತೀಚಿನ ವಿಮರ್ಶೆಯ ಪರಿಭಾಷೆ ಹೊರಗಿನಿಂದ ಬಂತು. ಕಣ್ಣಿಗೆ ಕಾಣುವಂಥದ್ದು ಮಾತ್ರ ಸತ್ಯ ಎಂಬ ಫಿಸಿಕ್ಸ್‌ನ ನಂಬಿಕೆ ನಮ್ಮ ಪೋಯೆಟ್ರಿಗೂ ಬಂತು. ನಮ್ಮ ಮೂಲಭೂತ ನಂಬಿಕೆ–ರಸ ಸಹೃದಯದಲ್ಲಿದೆ, ರಸಾನುಭವ ನೀಡುವ ಸಾಧನ ಕಾವ್ಯ ಎಂದಿತ್ತು. ಕೃತಿಯನ್ನು ಕೊಚ್ಚೋದು, ಅಳೆಯೋದು, ತೂಕ ಮಾಡೋದು, ಈ ಪೋಯಮ್ಮನ್ನು ಆ ಪೋಯಮ್ಮನ್ನು ಇಟ್ಕೊಂಡು ತೂಕ ಮಾಡೋದು ಪಾಶ್ಚಾತ್ಯರಿಂದ ಬಂತು. ಕಾವ್ಯವನ್ನು ತೂಕ ಮಾಡುವ ವಿಧಾನ ವಿಮರ್ಶೆಯನ್ನು ಹಾಳು ಮಾಡ್ತು. ಇಲ್ಲಿಯ ರೋಮ್ಯಾಂಟಿಕ್ ಕವಿ, ಇಲ್ಲಿಯ ಸೀತೆ–ಅಲ್ಲಿಯ ಡೆಸ್ಡಿಮೋನಾ–ಇಂಥ ವಿಮರ್ಶೆಯಿಂದ ಏನು ಪ್ರಯೋಜನ?

* 'ಹೂವಯ್ಯನನ್ನು ಜಗತ್‌ಸಾಹಿತ್ಯದ ಸ್ಪರ್ಧೆಯಲ್ಲಿ ನಿಲ್ಲಿಸುವುದು ನನಗೆ ಅಗತ್ಯವಿಲ್ಲ' ಎಂದು ಇದೇ ಅರ್ಥದಲ್ಲಿ ಹೇಳಿದಿರಲ್ಲವೇ?

'ರಿಯಲಿಸಂ'ನ ಕಲ್ಪನೆ ನಮ್ಮಲ್ಲಿ ಇರಲಿಲ್ಲ. ರಿಯಲಿಸಂನ ಕಣ್ಣಿನಲ್ಲಿ 'ಕಾನೂರು ಹೆಗ್ಗಡಿತಿ'ಯ ಹೂವಯ್ಯ ಅನ್‌ರಿಯಲ್. ಇಂಡಿಯಾ ಕ್ರಿಯೇಟ್ ಮಾಡಿದ ಗ್ರೇಟೆಸ್ಟ್ ಇಮೇಜ್ ಹೂವಯ್ಯ; ಠಾಗೋರರ 'ಗೋರಾ'ನ್ನ ಮೀರಿಸಿದ ಇಮೇಜ್.

ಅನಂತಮೂರ್ತಿಯವರ ಒಂದೊಂದೇ ಕಾದಂಬರಿ ತಗೊಂಡು ಎ. ಕೆ. ರಾಮಾನುಜನ್. ಎರಿಕ್ ಎರಿಕ್‌ಸನ್ ಎಲ್ಲ ವಿಮರ್ಶೆ ಮಾಡಿದ್ದಾರೆ. ಇಂಡಿಯಾದ ಡೆವಲಪ್‌ಮೆಂಟ್‌ನ ರಿಯಾಲಿಟಿಗಳ ಮೂರು ಹಂತಗಳನ್ನು ಅನಂತಮೂರ್ತಿ ಮೂರು ಕಾದಂಬರಿಗಳಲ್ಲಿ ಹೇಳಿದ್ದಾರೆ. ಇದು ಈ ವಿಮರ್ಶಕರಿಗೆ ಗೊತ್ತಾಗೋದಿಲ್ಲ. ಇ. ಎಮ್. ಫಾರ್ಸ್ಟರ್‌ನ ಒಂದು ಪಾತ್ರ, ಅನಂತಮೂರ್ತಿಯ ಒಂದು ಪಾತ್ರ ಹೀಗೆ ತುಲನೆ ಮಾಡಿದ್ರೆ ಏನು ಪ್ರಯೋಜ್ನ? ನನಗೆ, ನಮ್ಮ ಹಿಂದಿನವರ ಜೀವನ ಹೇಗಿತ್ತು? ಗಾಂಧೀಜಿ ಏನು ಹೇಳಿದರು? ಅಂಬೇಡ್ಕರ್ ಏನು ಹೇಳಿದರು? ಯಾಕೆ ಅವ್ರು ಜಗಳ ಮಾಡಿಕೊಂಡರು? ಗಾಂಧೀಜಿ ವಿರುದ್ಧವಾಗಿ ಠಾಗೋರ್ ಯಾಕೆ 'ಈ ಮುದುಕ ಇಂಟರ್‌ನ್ಯಾಷನಲ್ ಅಲ್ಲ' ಅಂದರು? ಯಾಕೆ 'ಇವರು ಕಪಿ ಇದ್ದ ಹಂಗಿದಾನೆ' ಅಂತ ಸರೋಜಿನಿ ನಾಯ್ಡು ಗಾಂಧೀಜಿ ಬಗ್ಗೆ ಹೇಳಿದ್ರು?–ಈ ಕಾಂಪ್ಲೆಕ್ಸಿಟಿ ಗೊತ್ತಿಲ್ದೆ ವಿಮರ್ಶೆ ಮಾಡೋದು ಹೇಗೆ? ಕೇರಳದಲ್ಲಿ ನಾರಾಯಣಗುರು ತತ್ವ–ಕಮ್ಯುನಿಸಮ್ ಎರಡೂ ಯಾಕೆ ಜನ ಪ್ರಿಯವಾದುವು ಅನ್ನೋದು ಗೊತ್ತಿಲ್ದೆ ಕೇರಳದ ಮುಖ್ಯ ಕಾದಂಬರಿಗಳ ವಿಮರ್ಶೆ ಹೇಗ ಸಾಧ್ಯ? ವೈಜ್ಞಾನಿಕ ನಾಗರಿಕತೆಯ ಎರೋಗೆನ್ಸನ್ನು, ವಿಮರ್ಶಕ ಅನ್ನುವವ ಕೂತ್ಕೊಂಡು ತಕ್ಕಡಿ ಹಾಕಿ ತೂಗಬಲ್ಲ ಎನ್ನು ಭ್ರಮೆಗಳನ್ನೆಲ್ಲ ಬಿಟ್ಟು 'ನನಗೆ ಹೀಗೆ ಅರ್ಥವಾಗುತ್ತೆ' ಅನ್ನುವ ವಿನಯದ ವಿಮರ್ಶೆ ಬರಬೇಕು.

* 'ಅಕ್ಷರ ಪ್ರಕಾಶನ'ದ ಪ್ರಕಾಶಕರಾಗಿ ನಿಮ್ಮ ಅನುಭವ ತೃಪ್ತಿಕರವೇ?

ಪ್ರಕಾಶನವನ್ನು ನಾನು ಬ್ಯುಸಿನೆಸ್‌ಗಾಗಿ ಮಾಡ್ತಿಲ್ಲ. ಅದು ನನ್ನ ಸಾಮಾಜಿಕ ಸಂಬಂಧಗಳು ವ್ಯಕ್ತವಾಗುವ ಒಂದು ವಿಧಾನ. ಕಂಬಾರರಂಥೋರು ಏನು ಬರೆದ್ರೂ ನಾನು ಪಬ್ಲಿಷ್ ಮಾಡ್ತೀನಿ. ನಮ್ಮಲ್ಲಿರುವುದ ಪುಸ್ತಕದ ಡಿಸ್ಟ್ರಿಬ್ಯೂಶನ್‌ನ ಸಮಸ್ಯೆ. ಅನಂತಮೂರ್ತಿ ಹೇಳಿದ್ರು–ಯೂರೋಪಿನಲ್ಲಿ ಯೂನಿವರ್ಸಿಟಿ ಪಠ್ಯವಾಗಿ ಮಾತ್ರ ಸಾಹಿತ್ಯ ಕೃತಿಗಳನ್ನು ಓದ್ತಾರೆಂತ. ನಮ್ಮ ಜನರ ಅಭಿರುಚಿ ಆರೋಗ್ಯಕರವಾಗಿದೆ. ನಮ್ಮಲ್ಲಿ ಬಹಳ ಜನ ಕಾರಂತರನ್ನು ಓದ್ತಾರೆ.

* ಪ್ರಜಾಸತ್ತಾತ್ಮಕ ಪ್ರಕ್ರಿಯೆ ಮತ್ತು ರಂಗಭೂಮಿಯನ್ನು ನೀವು ಹೇಗೆ ಸರಿದೂಗಿಸುತ್ತೀರಿ? ವ್ಯಕ್ತಿಯ ಸಾಂಸ್ಕೃತಿಕ ಸ್ವಾತಂತ್ರ್ಯವನ್ನೇ ಹರಣಗೈಯುವ ಮತೀಯ ಅಥವಾ ಕೋಮುವಾದಿ ಶಕ್ತಿಗಳು ಪ್ರಬಲಗೊಳ್ಳುತ್ತಿರುವ ಪ್ರಸಕ್ತ ಸನ್ನಿವೇಶದಲ್ಲಿ ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಜನ ಏನು ಮಾಡಬೇಕು?

ನಾವು ನಾಟಕ ಆಡುವ, ಆಡಿಸುವ ಜನ ಜನರನ್ನು ಕನ್ವಿನ್ಸ್ ಮಾಡಬೇಕು. ಜನರಿಗೆ ತಿಳಿಯ ಹೇಳಬೇಕು. 'ದಂಗೆಯ ಮುಂಚಿನ ದಿನಗಳು' ನಾಟಕ ಆಗ್ತಿರೋವಾಗ ಒಂದೆರಡು ಕಡೆ ಪ್ರೇಕ್ಷಕರಲ್ಲಿ ಕೆಲವರು ಗಲಾಟೆ ಮಾಡಿದ್ರು; ನಾಟಕ ನಿಲ್ಸೋಕೂ ಪ್ರಯತ್ನಪಟ್ರು, ನಿಜ. ಆದ್ರೆ ಈ ರೀತಿ ನಾಟಕ ಆಡುವುದೇ ಅಸಾಧ್ಯ ಅಂತಾದಾಗ ನಾವು ರಾಜಕೀಯವಾಗಿ ಚಳುವಳಿ ಮಾಡಬೇಕು. ಆಗ ನಾಟಕ ರಾಜಕೀಯ ಆಗ್ಬೇಕಾಗುತ್ತೆ. ನಾವು ಪ್ರಾಯಶಃ ಜಪಾನೀ ಕೃಷಿಕ (ಮ್ಯಾಗ್‌ಸೇಸೆ ಪ್ರಶಸ್ತಿ ವಿಜೇತ) ಫುಕೋಕನ ತರಹ ನಮ್ಮನ್ನು ತೊಡಗಿಸಿಕೊಳ್ಳಬೇಕು: ಫುಕೋಕ ಕೇವಲ ಬೇಸಾಯಗಾರನಾಗಿರಲಿಲ್ಲ. ಬೇಸಾಯ ಅವನ ಫಿಲಾಸಫಿಯ ಒಂದು ಅಂಗ ಆಗಿತ್ತು. ಮಧ್ಯಪ್ರದೇಶದ ಭೋಪಾಲ್‌ನ ಭಾರತ್‌ಭವನವನ್ನು ಅಲ್ಲಿಯ ಬಿಜೆಪಿ ಸರಕಾರ, ಕೋಮುವಾದಿ ಶಕ್ತಿಗಳು ತಮ್ಮ ವಶ ತೆಗೆದುಕೊಂಡಾಗ ಯಾರು ಏನೂ ಮಾಡಿಲ್ಲ. ಅಲ್ಲದೆ ಭಾರತ್‌ಭವನ ತಮ್ಮದು ಅಂತ ಅಲ್ಲಿಯ ಸ್ಥಳೀಯ ಜನರಿಗೆ ಅನ್ನಿಸಲಿಲ್ಲ.

* ರಂಗಭೂಮಿ ಮತ್ತು ಸಮೂಹ ಮಾಧ್ಯಮವನ್ನು ನೀವು ಯಾವ ದೃಷ್ಟಿಯಿಂದ ನೋಡುತ್ತೀರಿ?

ಸಮೂಹ ಮಾಧ್ಯಮ ಒಂದು ಹದದಲ್ಲಿದ್ರೆ ಎಲ್ಲವೂ ಸರಿಹೋಗುತ್ತೆ. ಅದು ಜವಾಬ್ದಾರಿಯುತವಾಗಿ ನಡೆದುಕೊಂಡಾಗ, ರೆಸ್ಪಾನ್ಸಿಬಲ್ ಆದಾಗ ಇಂಡಿಯನ್ ಆಗುತ್ತೆ. ಇತ್ತೀಚೆಗೆ ಇಂಗ್ಲಿಷ್ ಪತ್ರಿಕೆಯಲ್ಲಿ ನಾನೊಂದು ಲೇಖನ ಓದಿದೆ. ಟಾಟಾ ಹೇಗೆ ಹಪ್ಪಳ ಸಂಡಿಗೆ ತಯಾರಿಸಿ ಮಾರಾಟ ಮಾಡ್ತಾನೆ ಅನ್ನೋದನ್ನ ವಿವರಿಸುವ ಲೇಖನ ಅದು. ನಮ್ಮ ಹಳ್ಳಿಗಳಲ್ಲಿ ಸಣ್ಣ ಪುಟ್ಟ ಊರುಗಳಲ್ಲಿ ಹೆಂಗಸರು, ವಿಧವೆಯರು ಅಲ್ಲಲ್ಲಿ ತಯಾರಿಸಿ ತಿನ್ತಾ ಇದ್ದ ಹಪ್ಪಳ ಸಂಡಿಗೆಯನ್ನು ಕೂಡ ಟಾಟಾನಂತಹ ಬಂಡವಾಳಶಾಹಿ ಉತ್ಪಾದಿಸಿ ವಿತರಣೆ ಮಾಡೋದು ಒಂದು

horror. ಆ ಪತ್ರಿಕೆಯಲ್ಲಿ ಲೇಖನ ಬರೆದ ಪತ್ರಕರ್ತನಿಗೆ ತಾನು ಆ ಲೇಖನವನ್ನು ಎಷ್ಟು ಚೆನ್ನಾಗಿ ಪ್ರೆಸೆಂಟ್ ಮಾಡ್ಬೇಕು ಅನ್ನೋದೇ ಎಷ್ಟೊಂದು ಮುಖ್ಯವಾಗಿತ್ತು ಅಂದ್ರೆ ಅವನಿಗೆ ಹೀಗೆ ಟಾಟಾ ಹಪ್ಪಳ ಸಂಡಿಗೆಯಲ್ಲೂ ಕೇಂದ್ರೀಕರಣ ಮಾಡೋದು ಒಂದು ಹಾರರ್ ಅಂತ ಅನ್ನಿಸ್ಲೇ ಇಲ್ಲ. ಇದು ರಿಯಾಕ್ಷನರಿ. ಸಮೂಹ ಮಾಧ್ಯಮ ಹೀಗಾಗಬಾರದು.

* ರಾಜ್ಯ ನಾಟಕ ಅಕಾಡಮಿ ಪ್ರಶಸ್ತಿ ಮತ್ತು ರಾಜ್ಯ ಸರಕಾರದ ಯಾವುದೇ ಗೌರವವನ್ನು ನಿರಾಕರಿಸಿದ ನೀವು ಈಗ ಮ್ಯಾಗ್‌ಸೇಸೆ ಪ್ರಶಸ್ತಿಯನ್ನು ಸ್ವೀಕರಿಸಿದ್ದೀರಿ. ಹಾಗಾದರೆ ಪ್ರಶಸ್ತಿಗಳ ಬಗ್ಗೆ ನಿಮ್ಮ ಧೋರಣೆ ಏನು?

ಅಕಾಡಮಿ ಪ್ರಶಸ್ತಿ ಬಂದಾಗ ಕೂಡ ನಾನು ತುಂಬ ವಿನಯದಿಂದ ನಿರಾಕರಿಸಿ ಇದು ನನ್ನ ವೈಯಕ್ತಿಕ ಪ್ರತಿಕ್ರಿಯೆ ಅಂತಷ್ಟೇ ಹೇಳಿದ್ದೆ. ಮ್ಯಾಗ್‌ಸೇಸೆ ಪ್ರಶಸ್ತಿಯನ್ನ ಯಾಕೆ ಸ್ವೀಕರಿಸಿದೆ ಅಂದ್ರೆ ಅದು ನನ್ನ ವೈಯಕ್ತಿಕ ಸಾಧನೆಗೆ ಕೊಟ್ಟ ಪ್ರಶಸ್ತಿ ಅಲ್ಲ; ಒಂದು ಕಮ್ಯುನಿಟಿಗೆ, ಒಂದು ಸಮುದಾಯದ ಪ್ರಯತ್ನಕ್ಕೆ ಕೊಟ್ಟ ಪ್ರಶಸ್ತಿ ಅನ್ನಿಸ್ತು. ಎಲ್ಲಾ ಮನುಷ್ಯರ ದೌರ್ಬಲ್ಯಗಳನ್ನು ಗಮನದಲ್ಲಿಟ್ಟುಕೊಂಡೇ ಈ ಮಾತನ್ನು ಹೇಳ್ತಾ ಇದ್ದೀನಿ. ನನ್ನ ಅಹಂಕಾರಾನೂ ಇಲ್ಲಿ ಕೆಲ್ಸ ಮಾಡಿರ್ಬಹುದು. ಬಹಳ ದೊಡ್ಡ ಸಾಧನೆ ಮಾಡಿದವರಿಗೇ ಮ್ಯಾಗ್‌ಸೇಸೆ ಅವಾರ್ಡ್ ಕೊಡ್ತಾರೆ ಅಂತ ನನಗೆ ಅನ್ನಿಸೋದಿಲ್ಲ. ನೊಬೆಲ್ ಬಹುಮಾನ ಕೊಡೋದು ಎಕ್ಸಲೆನ್ಸ್‌ಗೆ. ಆದ್ರೆ ಯಾವುದೋ ಒಂದು ದಿಕ್ಕಿನಲ್ಲಿ ಒಂದು ಗುಂಪು, ಒಂದಷ್ಟು ಜನ ಕೆಲ್ಸ ಮಾಡ್ತಾ ಇದ್ದಾರೆ. ಅವರ ಕೆಲ್ಸದಿಂದ ಈಗಾಗಲೇ ಬಹಳಷ್ಟು ಸಾಧನೆ ಆಗ್ದೆ ಇದ್ರೂ ಭವಿಷ್ಯದಲ್ಲಿ ಏನೋ ಸಾಧ್ಯ ಆಗ್ಬಹುದು ಅಂತ ಮ್ಯಾಗ್‌ಸೇಸೆ ಕೊಡ್ತಾರೆ ಅಂತ ನನಗೆ ತೋರುತ್ತೆ. ಯಾಕಂದ್ರೆ ನಾನ್ಮಾಡ್ತಿರೋ ಕೆಲ್ಸ ಶಿವರಾಮ ಕಾರಂತರಂಥವ್ರು ಮಾಡಿದ ಕೆಲ್ಸದ ಮೂರನೆಯ ಒಂದಂಶ. ಅಮೆರಿಕದ ಸರಕು ಸಂಸ್ಕೃತಿ ಮತ್ತು ರಷ್ಯಾದ ಕಮ್ಯುನಿಸಂ—ಇವೆರಡರಿಂದಲೂ ತೃತೀಯ ಜಗತ್ತಿಗೆ ನ್ಯಾಯ ಸಿಗ್ತಾ ಇಲ್ಲ. ಇವೊತ್ತು ಭರವಸೆ ಉಳಿದಿರೋದು ತೃತೀಯ ಜಗತ್ತಿನ ದೇಶಗಳಲ್ಲಿ ಮಾತ್ರ. ಅಧಿಕಾರದ ಕೇಂದ್ರೀಕರಣವನ್ನು ಪ್ರತಿನಿಧಿಸುವ ಯುರೋಪಿಯನ್ ಸಂಸ್ಕೃತಿ ಮತ್ತು ಸರಕು ಸಂಸ್ಕೃತಿ ಸಂತೃಪ್ತ ಬಿಂದುವನ್ನು ತಲುಪಿಯಾಗಿದೆ. ಹೀಗಿರೋವಾಗ ತೃತೀಯ ಜಗತ್ತಿನ ಸಾಧನೆಗಳನ್ನು ಗುರುತಿಸುವ ಆದರದ್ದೇ ಆದ ಮತ್ತು ನೊಬೆಲ್ ಬಹುಮಾನಕ್ಕೆ ಸಮಾನವಾದ ಒಂದು ಪ್ರಶಸ್ತಿ ಬೇಕು ಅನಿಸಿದ್ದು ಸಹಜ. ಈ ಪ್ರಶಸ್ತಿ ಇಡೀ ನೀನಾಸಂ ತಂಡದ ಪ್ರಯತ್ನಕ್ಕೆ ಸಿಕ್ಕಿದ್ದು ಅನ್ನಿಸಿದ್ರಿಂದ ನಾನು ಇದನ್ನು ತಕೊಳ್ಳೋಕೆ ಒಪ್ಕೊಂಡೆ ಅಂತ ಕಾಣಿಸುತ್ತೆ.

* ನಿಮ್ಮ ಭವಿಷ್ಯದ ಯೋಜನೆಗಳೇನು?

ಕರ್ನಾಟಕದ ಐದಾರು ಕಡೆಗಳಲ್ಲಿ ಸುಮಾರು ಐದು ಲಕ್ಷ ರೂಪಾಯಿ ಖರ್ಚಿನಲ್ಲಿ ರಂಗಮಂದಿರಗಳನ್ನ ಕಟ್ಟುವ ಒಂದು ಯೋಜನೆ ಇದೆ. ರಂಗಮಂದಿರ

ಅಂದ್ರೆ ಪೂರ್ಣ ಪ್ರಮಾಣದ ಥಿಯೇಟರ್ ಏನೂ ಅಲ್ಲ. ಒಂದು ಊರಿನಲ್ಲಿ ರಂಗಾಸಕ್ತರ ಒಂದು ತಂಡ ಇದ್ರೆ ಮತ್ತು ಆ ತಂಡ ಕನಿಷ್ಟ ಮುಂದಿನ 20 ವರ್ಷಗಳವರೆಗಾದರೂ ನಾಟಕ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಉಳಿಯುತ್ತೆ ಅಂತ ಮನವರಿಕೆಯಾದ್ರೆ ಅಂತಹ ಊರಿನಲ್ಲಿ 'ಆ್ಯಕ್ಟಿಂಗ್ ಸ್ಪೇಸ್' ಒದಗಿಸೋದು ಈ ಯೋಜನೆಯ ಉದ್ದೇಶ. ಆ ಸ್ಪೇಸ್ ನಾಟಕ ಆಡೋದಲ್ಲದೆ ಇತರ ಸಮುದಾಯ ಚಟುವಟಿಕೆಗಳಿಗೂ ಉಪಯೋಗ ಆಗೋ ಹಾಗೆ ಇರುತ್ತೆ. ಈಗಾಗಲೇ ವಾಸ್ತುಶಿಲ್ಪಿಯೊಬ್ಬರು ನಮ್ಮ ದೇಶದಲ್ಲಿರುವ ಎಲ್ಲ ಥಿಯೇಟರ್‌ಗಳನ್ನು ನೋಡಿಕೊಂಡು ಬಂದಿದ್ದಾರೆ. ಅವರು ಒಂದು ಊರಿನ ಪರಿಸರಕ್ಕೆ ಹೊಂದುವಂತಹ ಥಿಯೇಟರನ್ನ ವಿನ್ಯಾಸಗೊಳಿಸಿಕೊಡ್ತಾರೆ. ಈಗಾಗಲೇ ಇಂತಹ ಯೋಜನೆಯ ವಿವರಗಳನ್ನು ಫೋರ್ಡ್ ಫೌಂಡೇಶನ್‌ಗೆ ಕಳಿಸಿದ್ದೇವೆ. ಅವರು ಒಪ್ಪಬಹುದು ಅನ್ನಿಸುತ್ತೆ. ಒಪ್ಪಿದ್ರೆ ಇಂಥ ಐದಾರು ಆ್ಯಕ್ಟಿಂಗ್ ಸ್ಪೇಸ್ ಕಟ್ಟಿಸೋದು ನೀನಾಸಂ ಸದ್ಯದ ಯೋಜನೆ. ಅಲ್ಲದೆ ಸೆಪ್ಟಂಬರ್ ತಿಂಗಳಲ್ಲಿ ಪ್ರಸಿದ್ಧ ರಂಗತಜ್ಞ ಬೆನೆವಿಟ್ ಹೆಗ್ಗೋಡಿಗೆ ಬರ್‍ತಿದ್ದಾರೆ. ಅವರು ಈ ಸಲದ ನೀನಾಸಂ ತಿರುಗಾಟಕ್ಕೆ ಶೇಕ್ಸ್‌ಪಿಯರ್‌ನ 'ಟ್ವೆಲ್ಫ್ತ್ ನೈಟ್' ನಾಟಕವನ್ನು ನಿರ್ದೇಶಿಸುವವರಿದ್ದಾರೆ.

ನಾವು ಲೋ ಬಜೆಟ್ ನಾಟಕಗಳ ಹಾಗೂ ರಂಗ ಭೂಮಿಯ ಮೂಲಕ ನಮ್ಮ ಪರಿಸರದ ರೂಟ್ಸ್‌ಗೆ ಹೋಗ್ಬೇಕು. ಈ ಪ್ರಯತ್ನ ಮುಂದುವರಿಯುತ್ತೆ. ಕಲೆಯಲ್ಲಿ ವಿಕೇಂದ್ರೀಕರಣ ಆಗ್ಲೇಬೇಕು. ಜನರ ಅಭಿರುಚಿಯನ್ನ ತಿದ್ಬೇಕು. ಇವತ್ತು ಏನಾಗ್ತಿದೆ ಅಂದ್ರೆ ಜನ ಇಷ್ಟಪಡ್ತಾರೆ ಅಂತ ಅವ್ರಿಗೆ ಬೇಕಾದ್ದನ್ನೆ ಕೊಡೋ ಪ್ರಯತ್ನ ನಡೀತಿದೆ. ಅವ್ರಿಗೆ ಬೇಕಾದ್ದನ್ನ ಕೊಟ್ಟಾಗ ಅವ್ರು ಅದನ್ನೇ ನೋಡ್ತಾರೆ. ಇದೊಂದು ಥರ ವಿಸಿಯಸ್ ಸರ್ಕಲ್ (ವಿಷವರ್ತುಲ). ಹೀಗಾಗ್‌ಕೂಡ್ದು.

(ಸಂದರ್ಶಕರು : ಟಿ. ಪಿ. ಅಶೋಕ, ಮುರಳೀಧರ ಉಪಾಧ್ಯ, ಹಿರಿಯಡಕ, ಎಸ್. ನಿತ್ಯಾನಂದ ಪತ್ರೆ, ಸಂತೋಷಕುಮಾರ ಗುಲ್ವಾಡಿ, ಬಿ. ಬಾಸ್ಕರರಾವ್. (ಆಯ್ಕೆ 'ನಮ್ಮ ಸುಬ್ಬಣ್ಣ' ಪುಸ್ತಕದಿಂದ.)



# ಭೀಮಸೇನ ಜೋಶಿ

ಸದಾನಂದ ಕನವಳ್ಳಿ

ಸಂಗೀತದ ಪ್ರತಿಷ್ಠಿತ ಪ್ರಶಸ್ತಿಯಾಗಿರುವ ತಾನಸೇನ ಪ್ರಶಸ್ತಿ ೧೯೯೧ರಲ್ಲಿ ಭೀಮಸೇನ ಜೋಶಿಯವರಿಗೆ ಪ್ರಾಪ್ತವಾಯಿತು. ಹಿಂದುಸ್ತಾನಿ ಸಂಗೀತದ ಧ್ರುವತಾರೆ ಸಂಗೀತ ಸಾಮ್ರಾಟ ತಾನಸೇನನ ಸ್ಮರಣಾರ್ಥ ಪ್ರತಿ ವರ್ಷ ಶ್ರೇಷ್ಠ ಸಂಗೀತಗಾರರೊಬ್ಬರಿಗೆ ತಾನಸೇನ ಪ್ರಶಸ್ತಿ ನೀಡಲಾಗುತ್ತಿದೆ. ಸಂಗೀತ ಸಾಧನೆಗೆ ಭೀಮಸೇನ ಜೋಶಿ ಪಟ್ಟ ಪರಿಶ್ರಮ, ಕಷ್ಟ ಅಷ್ಟಿಷ್ಟಲ್ಲ. ಅದೆಲ್ಲವನ್ನು ಲೆಕ್ಕಿಸದೆ ನೇರ ಗುರಿಯಿಟ್ಟು ಛಲದಂಕಮಲ್ಲನಂತೆ ಭೀಮಸೇನ ಜೋಶಿ ದೈತ್ಯಸಾಧನೆಗೈದ ಧೀರರು.

ಭೀಮಸೇನ ಜೋಶಿ ಹುಟ್ಟಿದ್ದು ಫೆಬ್ರುವರಿ ೧೪, ೧೯೨೨ ರಂದು ಸೂರ್ಯದೇವನ ದಿನ ರಥಸಪ್ತಮಿಯಂದು, ಗದುಗಿನಲ್ಲಿ. ಅಜ್ಜ ಭೀಮಾಚಾರ್ಯ ಪ್ರಸಿದ್ಧ ಕೀರ್ತನಕಾರ, ಸಂಗೀತಗಾರ, ರಾಗಬದ್ಧವಾಗಿ ಭಾಗವತ ಪುರಾಣ ಹೇಳುತ್ತ ಶ್ರೋತೃಮನ ಸೆರೆಹಿಡಿಯುತ್ತಿದ್ದ. ತಂದೆ ಗುರುರಾಜ ನಿಷ್ಠಾವಂತ ಶಿಕ್ಷಕ, ಹೈಸ್ಕೂಲು ಮುಖ್ಯೋಪಾಧ್ಯಾಯ. ಕನ್ನಡ, ಸಂಸ್ಕೃತ, ಇಂಗ್ಲೀಷ್ ಪಂಡಿತ, ಹಲವಾರು ಗ್ರಂಥಗಳ ಕರ್ತೃ, ಕಕ್ಕ ಗೋವಿಂದಾಚಾರ್ಯ–ಧಾರವಾಡದ ಮನೋಹರ ಗ್ರಂಥಮಾಲೆಯ ಜಿ.ಬಿ. ಜೋಶಿ (ಜಡಭರತ)–ಪ್ರಖ್ಯಾತ ಲೇಖಕ, ನಾಟಕಕಾರ, ಪ್ರಕಾಶಕ. ತಾಯಿ ಗೋದಾವರಿಬಾಯಿಯವರದು ಸುಶ್ರಾವ್ಯ ಕಂಠ. ಪೂಜೆಯ ಕಾಲಕ್ಕಲ್ಲದೆ ಮಗನನ್ನು ಮಲಗಿಸುವಾಗಲೂ ದೇವರನಾಮ ಹಾಡುವ ಭಕ್ತಿವಂತೆ.

ಭೀಮಸೇನನಿಗೆ ಬುದ್ಧಿ ತಿಳಿದಾಗಿನಿಂದಲೂ ಸಂಗೀತದ್ದೇ ಗೀಳು. ಭೀಮಸೇನ ಶಾಲೆಗೇನೋ ಹೋಗುತ್ತಿದ್ದ. ಆದರೆ ಅವನ ಮನಸ್ಸೆಲ್ಲ ನೆಟ್ಟಿಮ ದಾರಿಯಲ್ಲಿದ್ದ

ಭೂಸದ ಅವರ ಗ್ರಾಮೊಫೋನು ಅಂಗಡಿಯಲ್ಲಿ. ಬಾಗಿಲಲ್ಲಿ ನಿಂತು ದಿನಾಲು ಧ್ವನಿಮುದ್ರಿಕೆಗಳ ಶ್ರವಣ, ಅನುಕರಣ, ಕೆಲವು ಕನ್ನಡ ಭಜನೆಗಳನ್ನು ಕಲಿತ. ಪ್ರತಿ ಗುರುವಾರ ಗುಡಿಯಲ್ಲಿ ನಡೆಯುತ್ತಿದ್ದ ಭಜನೆ ಕಾರ್ಯಕ್ರಮದಲ್ಲಿ ಹಾಡಲಾರಂಭಿಸಿದ. ಭಾವನಾಪೂರ್ಣ ಹಾಡಿಕೆಯಿಂದ ಶ್ರೋತೃಗಳ ಮೆಚ್ಚುಗೆ ಸಂಪಾದಿಸಿದ.

ಮಗನ ಅಭಿರುಚಿ ತಿಳಿದ ಗುರುರಾಜರು ಅಗಸರ ಚನ್ನಪ್ಪನನ್ನು ಸಂಗೀತ ಶಿಕ್ಷಕನೆಂದು ಗೊತ್ತುಮಾಡಿದರು. ಚನ್ನಪ್ಪ ಇನಾಯತಖಾನರಲ್ಲಿ ಸ್ವಲ್ಪ ಕಲಿತಿದ್ದ. ಏಳು ತಿಂಗಳಲ್ಲಿ ಭೈರವ, ಭೀಮಪಲಾಸಿ ರಾಗಗಳನ್ನು, ಹಾರ್ಮೋನಿಯಂ ಮಿಡಿಸುವುದನ್ನು ಕಲಿಸಿದ. ಶಿಷ್ಯ ಗುರುವಿನ ಸಾಮರ್ಥ್ಯ ಮೀರಿ ಬೆಳೆಯುತ್ತಿದ್ದ.

ಒಂದು ದಿನ ಭೀಮಸೇನ ತನ್ನ ಪ್ರೀತಿಯ ಗ್ರಾಮೊಫೋನು ಅಂಗಡಿಯಲ್ಲಿ ಅಬ್ದುಲ್ ಕರೀಮ್‌ಖಾನರ ಬಸಂತ (ಫಗವಾ ಬ್ರಿಜ ದೇಖನ ಕೊ) ಮತ್ತು ಝಿಂಝೋಟಿ ಠುಮರಿ (ಪಿಯಾ ಬಿನಾ ನಹಿ ಆವತ ಚೈನ) ಕೇಳಿ ಹುಚ್ಚಾದ. ಖಾನಸಾಹೇಬರಂತೆಯೆ ಹಾಡಲು ಕಲಿಯಲು ನಿರ್ಧರಿಸಿದ. ಮುಂದೆ ಒಂದು ದಿನ ತಂದೆಯ ಜೊತೆಗೆ ಕುಂದಗೋಳದಲ್ಲಿ ಸವಾಯಿ ಗಂಧರ್ವರ ಗಾಯನ ಕೇಳಿದ ಮೇಲಂತೂ ಅವರನ್ನೇ ಗುರುವನ್ನಾಗಿಸುವ ಆಸೆ. ಭೀಮಸೇನನಿಗೆ ಇನ್ನೂ ಹನ್ನೊಂದು ವರ್ಷ. ಆಗ ಅದು ಈಡೇರದ ಮಾತು.

ಗುರುವನ್ನು ಹುಡುಕುವ ಅದಮ್ಯ ಬಯಕೆ. ತೊಟ್ಟ ಬಟ್ಟೆಯ ಮೇಲೆ ಮನೆಯಿಂದ ಪರಾರಿ. ತಾಯಿ ಇನ್ನಷ್ಟು ತುಪ್ಪ ನೀಡಲಿಲ್ಲ ಎನ್ನುವದು ನೆಪವಾಯಿತು, ಅಷ್ಟೆ. ಭೀಮಸೇನ ಸೀದಾ ಗದಗ ರೈಲ್ವೆ ನಿಲ್ದಾಣಕ್ಕೆ ಬಂದ. ಬಂದ ಗಾಡಿ ಏರಿದ, ಟಿಕೆಟಿಲ್ಲದೆ ಪಯಣ. ಅಭಂಗ, ಭಜನ ಹಾಡುತ್ತ ಟಿಕೇಟು ಪರೀಕ್ಷಕನ ಮನಗೆದ್ದ. ಸಹ ಪ್ರಯಾಣಿಕರೆ ಊಟ, ತಿಂಡಿ ಕೊಟ್ಟರು. ವಿಜಾಪುರ ಬಂತು ಇಳಿದ. ಕೆಲವು ವಾರ ಹಾಡುತ್ತ ಊರೆಲ್ಲ ಸುತ್ತಿದ ಯಾರೂ ಪುಡಿಗಾಸು, ಇನ್ಯಾರೊ ಆಹಾರ ನೀಡಿದರು. ಬಯಲಿನಲ್ಲಿ ಯಾರದೊ ಹಿತ್ತಲದಲ್ಲಿ ಮಲಗಿದ. ಸಂಗೀತಪ್ರಿಯ ದಾರಿಹೋಕನೊಬ್ಬ “ಏ ತಮ್ಮಾ, ಸಂಗೀತ ಕಲಿಯಬೇಕಿದ್ದರೆ ಗ್ವಾಲಿಯರಿಗೆ ಹೋಗು” ಎಂದು ಸಲಹೆ ನೀಡಿದ.

ಸರಿ, ಭೀಮಸೇನ ಹೊರಟ. ಪುಣೆಯಲ್ಲಿ ಇಳಿದ. ಹಾಡುತ್ತ ಪುಡಿಗಾಸು ಸಂಪಾದಿಸುತ್ತ ದಿನಗಳೆದ. ಯಾರೊ ಹೇಳಿದರು, “ಮಾಸ್ಟರ ಕೃಷ್ಣರಾವ ಪುಲಂಬ್ರಿಕರ ಅವರಲ್ಲಿ ಕಲಿ” ಎಂದು. ಅವರು ಭಾಸ್ಕರಬುವಾ ಬಖಲೆ ಅವರ ಶಿಷ್ಯ. ಗಾಯಕ, ನಟ, ಸಂಗೀತ ನಿರ್ದೇಶಕ. ತಿಂಗಳಿಗೆ ನೂರು ರೂಪಾಯಿ ಕೊಟ್ಟರೆ ಕಲಿಸುವದಾಗಿ ಉತ್ತರ. ಒಪ್ಪತ್ತಿನ ಕೂಳಿಗೂ ಗತಿಯಿಲ್ಲದ ಭೀಮಸೇನ ಎಲ್ಲಿಂದ ತರಬೇಕು! ನಿರಾಶನಾಗಿ ಆದರೆ ಹತಾಶನಾಗದೆ ದಿಲ್ಲಿ ಗಾಡಿ ಏರಿದ. ರೈಲ್ವೆ ಸಿಬ್ಬಂದಿ ಕಣ್ಣು ತಪ್ಪಿಸಿ ಅಲ್ಲಿಳಿದು ಇಲ್ಲಿಳಿದು ಮೂರು ತಿಂಗಳ ನಂತರ ಗ್ವಾಲಿಯರ ತಲುಪಿದ.

ವಿಜಾಪುರ ಶೈಲಿಯ ಜೀವನ. ಗತ್ಯಂತರವಿಲ್ಲ. ಪ್ರಸಿದ್ಧ ಮಾಧವ ಸಂಗೀತ ವಿದ್ಯಾಲಯ. ಅಲ್ಲಿ ರಾಜಾಭಯ್ಯಾ ಪೂಛವಾಲೆ, ಕೃಷ್ಣರಾವ ಪಂಡಿತ, ಸರೋದವಾದಕ ಹಾಫಿಜ ಅಲಿಖಾನ (ಅಮಜದ ಅಲಿಖಾನರ ತಂದೆ) ಶಿಕ್ಷಕರು. ವಿದ್ಯಾಲಯವನ್ನು ಸೇರುವದೆಂತು? ಹಾಫಿಜ ಅಲಿಖಾನರನ್ನು ಭೇಟ್ಟಿಯಾಗಿ ಅರಿಕೆ. ಅವರ ಶಿಫಾರಸು ಪತ್ರ. ಮಹಾನ್ ಸಂಸ್ಥೆಗೆ ಸೇರ್ಪಡೆ ೩೦–೪೦ ವಿದ್ಯಾರ್ಥಿಗಳು. ಕ್ಲಾಸ್‌ರೂಮು ಪಾಠ ಭೀಮಸೇನನಿಗೆ ಹಿಡಿಸಲಿಲ್ಲ. ಆದರೂ ತಪ್ಪದೆ ಹಾಜರ. ಏಕೆಂದರೆ, ಹಾಜರಿದ್ದರೆ ಮಧ್ಯಾಹ್ನದ ಊಟ ಉಚಿತ. ಗ್ವಾಲಿಯರ ವಾಸ್ತವ್ಯದುದ್ದಕ್ಕೂ ದಿನಾಲು ಅದೊಂದೇ ಊಟ. ಸಾಧ್ಯವಿದ್ದ ಪ್ರಯೋಜನ ಪಡೆಯಲೆತ್ನ. ಖಯಾಲ ನಿರೂಪಣೆಯ ತಾಂತ್ರಿಕ ಅಂಶ ಕರಗತ.

ದಿನಾಲು ಕೆಲ ಗಂಟೆ ಹಾಫಿಜ ಅಲಿಖಾನರಿಂದ ಮಾರ್ಗದರ್ಶನ. ಮಾರವಾ ಮತ್ತು ಪೂರಿಯಾ ರಾಗಗಳ ವ್ಯತ್ಯಾಸದ ಸ್ಪಷ್ಟ ಕಲ್ಪನೆ. ಅವೆರಡೂ ರಾಗಗಳು ಇಂದಿಗೂ ಭೀಮಸೇನ ಜೋಶಿ ಅವರ ಅಚ್ಚುಮೆಚ್ಚಿನ ರಾಗಗಳು. ಅದರ ಶ್ರೇಯಸ್ಸು ಹಾಫಿಜ ಅಲಿಖಾನರದು.

ಕ್ಲಾಸ್‌ರೂಮ್ ಪಾಠದಿಂದ ಭೀಮಸೇನನಿಗಾದ ಅತೃಪ್ತಿ ರಾಜಾಭಯ್ಯಾ ಪೂಛವಾಲೆ ಅವರಿಗೆ ವೇದ್ಯ. ಅವರು ಉದಾರ ಹೃದಯಿ. ಖರಗಪುರ (ಬಂಗಾಲ)ದ ಕೇಶವ ಮುಕುಂದ ಲುಖೆ ಅವರಲ್ಲಿ ವಿದ್ಯೆ ಸಂಪಾದಿಸಲು ಉಪದೇಶ. ಶಿಫಾರಸು ಪತ್ರ. ಲುಖೆ ಕರುಣಾಮಯಿ. ಆದರೆ ವೈಯಕ್ತಿಕ ಟ್ಯೂಶನ್‌ಗಳ ಬಿಡುವಿಲ್ಲದ ಸರಣಿ. ಮನೆಗೆ ಬಂದಾಗ ತೀರ ಬಳಲಿಕೆ. ತಿಂಗಳುಗಟ್ಟಲೆ ಹೀಗೆಯೆ. ಕೊನೆಗೆ ಕಲಕತ್ತಾದ ಭೀಷ್ಮದೇವ ಚಟರ್ಜಿ ಅವರಲ್ಲಿ ಕಲಿಯಲು ಶಿಫಾರಸು ಪತ್ರ. ಭೀಮಸೇನ ಮೊದಲು ನ್ಯೂಥಿಯೆಟರ್ಸ್‌ನ ಪಹಾರಿ ಸನ್ಯಾಲರನ್ನು ಭೆಟ್ಟಿಯಾದ ಅವರು ಹಾಡಿಸಿ ಕೇಳಿ ಮೆಚ್ಚಿದರು. “ನನ್ನ ಹತ್ತಿರ ಇರು. ಚಟರ್ಜಿಯಿಂದ ನಿನಗೆ ಸಂಗೀತ ಶಿಕ್ಷಣ ಕೊಡಿಸುವೆ”. ಆರು ತಿಂಗಳು ಕಸ ತೆಗೆಯುವಿಕೆ, ಮುಸುರೆ ತೊಳೆಯುವಿಕೆ. ಏತನ್ಮಧ್ಯೆ ಲುಖೆ ಅವರ ಪತ್ರ, ಪಹಾರಿ ಸನ್ಯಾಲರ ಶಿಫಾರಸ್ಸಿನಿಂದಾಗಿ ಚಟರ್ಜಿ ಅವರಲ್ಲಿ ಶಿಕ್ಷಣ ಆರಂಭ. ಕಲಿಸಿದ್ದು ಗಾಂಧಾರಿ ರಾಗವೊಂದೆ. “ಮಾಲನಿಯಾ ಅಬಗೂಂದ ಲಾವೊ’ ಎಂಬ ಚೀಜು. ಬೋಧನ ಗೊತ್ತುಗುರಿಯಿಲ್ಲದೆ ಸಾಗಿತ್ತು. ಚಟರ್ಜಿ ಬಿಡುವಿಲ್ಲದ ಮನುಷ್ಯ. ಒಮ್ಮೆ “ಈಗೊಂದು ಚಿತ್ರ ಸಿದ್ಧಗೊಳ್ಳುತ್ತಿದೆ. ನಟಿಸಲು ಇಷ್ಟವೆ? ದೃಶ್ಯಗಳ ಚಿತ್ರೀಕರಣ ಮಧ್ಯೆ ಗಾಯನವನ್ನೂ ಕಲಿಸುವೆ” ಎಂದು ಕೇಳಿದುದಕ್ಕೆ “ನಾನಿಲ್ಲಿಗೆ ಬಂದುದು ಗಾಯಕನಾಗಲು, ನಟನಾಗಲಲ್ಲ” ಎಂದು ಭೀಮಸೇನನ ಬಾಣದಂಥ ಉತ್ತರ. ಚಟರ್ಜಿ ಜೇಬಿನಿಂದ ಐವತ್ತು ರೂಪಾಯಿ ತೆಗೆದು ಭೀಮಸೇನನ ಕೈಯಲ್ಲಿಟ್ಟು “ಇಲ್ಲಿಂದ ತೊಲಗಾಚೆ” ಎಂದು ಕಿರುಚಿದ.

ಭೀಮಸೇನ ಹೌರಾ ನಿಲ್ದಾಣಕ್ಕೆ ಬಂದ. ದಿಲ್ಲಿ ಗಾಡಿ ಏರಿದ. ಚಾಂದಖಾನರಲ್ಲಿ ಶಿಷ್ಯತ್ವ ಪಡೆಯಲೆತ್ನ. ದೊರಕಲಿಲ್ಲ, ಜಲಂಧರಿಗೆ ಹೋಗಲು ಯಾರಿಂದಲೂ

ಸಲಹೆ. ಎಲ್ಲಾದರೇನು? ಗುರು ಸಿಕ್ಕರೆ ಸಾಕು ಎಂದು ಜಲಂಧರಿಗೆ ಪಯಣ. ಪ್ರತಿ ಡಿಸೆಂಬರಿನಲ್ಲಿ ಮೂರು ದಿನ ಜರಗುವ ಪ್ರಸಿದ್ಧ ಹರಿವಲ್ಲಭ ಸಂಗೀತ ಸಮ್ಮೇಳನ ಅದೇ ತಾನೇ ಮುಗಿದಿತ್ತು. ಜಲಂಧರಿನಲ್ಲಿ ದಿಲೀಪಚಂದ್ರವೇದಿ, ಮಾಸ್ಟರ ಮದನ, ಮಂಗತರಾಮ (ಅಂಧ ಧ್ರುಪದ ಗಾಯಕ) ಅವರ ಕಚೇರಿಗಳಿಗೆ ಭೀಮಸೇನ ತಪ್ಪದೆ ಹಾಜರ.

ಮಂಗತರಾಮರ ಆರ್ಯ ಸಂಗೀತ ವಿದ್ಯಾಲಯಕ್ಕೆ ಸೇರ್ಪಡೆ. ಬರಿ ಧ್ರುಪದ ಧಮಾರ ಶಿಕ್ಷಣ, ಖಾಯಲ ಕಲಿಯುವ ಹಂಬಲ ಸ್ಥಗಿತ.

ಮರುವರ್ಷದ ಹರಿವಲಭ ಸಮ್ಮೇಳನ ಬಂತು. ಖಯಾಲ ಗಾಯನವನ್ನು ಮನದಣಿಯೆ ಕೇಳುವ ಅವಕಾಶ. ವಿನಾಯಕರಾವ್ ಪಟವರ್ಧನರ ಭೆಟ್ಟಿ.. ಆಶ್ಚರ್ಯಚಕಿತರಾದ ಪಟವರ್ಧನರು "ಇಷ್ಟು ದೂರ ಏಕೆ ಬಂದೆ? ಅಲ್ಲೇ ಹತ್ತಿರದಲ್ಲಿ ಸವಾಯಿ ಗಂಧರ್ವರಿದ್ದಾರಲ್ಲ!'' ಎಂದರು. ಮನೆಗೆ ವಾಪಸು.

೧೯೩೬ರಲ್ಲಿ ಹುಬ್ಬಳ್ಳಿ ರೈಲ್ವೆ ನಿಲ್ದಾಣದಲ್ಲಿ ಗುರುರಾಜ ಜೋಶಿ ಅವರಿಗೆ ಸವಾಯಿ ಗಂಧರ್ವರ (ರಾಮಭಾವು ಕುಂದಗೋಳಕರ್) ಆಕಸ್ಮಿಕ ಭೆಟ್ಟಿ. "ನನ್ನ ಮಗ ಚೆನ್ನಾಗಿ ಹಾಡತಾನ ಅಂತ ಮಂದಿ ಅಂತಾರ. ಅಂವಗ ಕಲಿಸತೀರಾ?'' ಎಂದು ವಿಚಾರಿಸಿದ್ದಕ್ಕೆ "ಈ ಉತ್ತರ ಮಂದಿ ಏನು? ಗೌರೀ ಹಾಡು ಹೇಳಿದರೂ ಚೆನ್ನಾಗಿ ಹಾಡತಾನ ಅಂತಾರ. ಹುಡುಗನ್ನ ಕರಕೊಂಡ ಬರ್ರಿ, ಕೇಳಿ ಹೇಳತೀನಿ'' ಭೀಮಸೇನ ಐದು ನಿಮಿಷ ಹಾಡಿರಬಹುದು, ಮಧ್ಯದಲ್ಲಿಯೇ ನಿಲ್ಲಿಸಿ "ಇಂವಾ ಕಲಿತದ್ದೆಲ್ಲ ಮರತರ ನಾ ಕಲಿಸ್ತೀನಿ'' ಎಂದರು. ತಂದೆ ಮಗನಿಗೆ ಸ್ವರ್ಗಕ್ಕೆ ಒಂದೇ ಗೇಣು ಉಳಿಯಿತು.

ಒಂದೂವರೆ ವರ್ಷ ಕಲಿಸುವ ಸುದ್ದಿಯಿಲ್ಲ. ಶಿಷ್ಯನ ಕಷ್ಟ ಸಹಿಷ್ಣುತೆ, ಛಲಗಳ ಸತ್ವಪರೀಕ್ಷೆ, ಸತ್ವಪರೀಕ್ಷೆ ಮುಗಿದ ನಂತರ ಪಾಠ ಆರಂಭ. ಬೆಳಗಿನ ನಾಲ್ಕು ಗಂಟೆಗೆ ಎದ್ದು ಎರಡು ತಾಸು ಮಂದ್ರ–ಸಾಧನೆ ಮಾಡಬೇಕು. ತದನಂತರ ಮೂರು ತಾಸು ಗುರುಗಳು ತೋಡಿ ರಾಗ ಕಲಿಸುತ್ತಿದ್ದರು. ಮಧ್ಯಾಹ್ನ ನಾಲ್ಕು ಗಂಟೆಗೆ ಮುಲ್ತಾನಿ ರಾಗ. ಕೊನೆಯ ಸರದಿ ಮಧ್ಯ ರಾತ್ರಿಯವರೆಗೆ ಪೂರಿಯಾ ರಾಗದ ಪಾಠ. ಕೆಲವು ದಿನ ಗುರುಗಳು ಶಿಷ್ಯನಿಗಾಗಿ ಹಾಡುತ್ತಿದ್ದರು. ಶಿಷ್ಯ ಬರಿ ಕೇಳುತ್ತ ಮನನ ಮಾಡಬೇಕಿತ್ತು. ಕಲಿಸುವ ಮೂಡಿನಲ್ಲಿದ್ದರೆ ಒಮ್ಮೊಮ್ಮೆ ಗುರುಗಳು ರಾತ್ರಿ ಎರಡು ಗಂಟೆಗೂ ಎಬ್ಬಿಸುತ್ತಿದ್ದರು. ಒಂದೊಂದು ಪಲ್ಟಾ ಬಿಟ್ಟೂ ಬಿಡದೆ ಎರಡು ಮೂರು ತಾಸು ಅಭ್ಯಾಸ ಮಾಡಿಸುತ್ತಿದ್ದುದೂ ಉಂಟು. ಶಿಷ್ಯನಿಗೆ ತಮ್ಮ ಮನೆಯಲ್ಲಿಯೆ ಉಣ್ಣಲು, ಇರಲು ಹೇಳಿದರು.

ಹೀಗೆ ಸರಾಗವಾಗಿ ಸಂಗೀತ ಶಿಕ್ಷಣ ಸಾಗಿರುವಾಗ ಸಿಡಿಲೆರಗಿತು. ಒಂದು ದಿನ ಹಠಾತ್ತನೆ ಸವಾಯಿ ಗಂಧರ್ವರು ಹಳೆಪ್ಪನವರ ಎಂಬಾತನನ್ನು ಗದಗಿಗೆ ಕಳಿಸಿ

“ಭೀಮಸೇನನಿಗೆ ಇನ್ನು ಕಲಿಸಲು ಸಾಧ್ಯವಿಲ್ಲ ಅವನನ್ನು ಕರೆದುಕೊಂಡು ಹೋಗಿರಿ’’ ಎಂದು ಇಳಿಸಿದರು. ಏಕೆ? ಏನು? ಯಾವುದೂ ತಿಳಿಯದಾಯಿತು. ಮತ್ತೆ ಗಾಡಿ ಹಳಿ ತಪ್ಪಿತು. ಮುಂದೇನು?

ತಂದೆಯ ಉಪದೇಶದಂತೆ ಮಂತ್ರಾಲಯದಲ್ಲಿ ಗುರು ರಾಘವೇಂದ್ರ ಸ್ವಾಮಿಗಳ ನಾದೋಪಾಸನೆಗೆ ಭೀಮಸೇನ ಅಣಿಯಾದ. ಎರಡು ತಿಂಗಳು ಸಂಗೀತ ಸೇವೆಗೈದ. ರಾತ್ರಿ ಕನಸಿನಲ್ಲಿ ಸಂಗೀತ ಪಾಠವಾದಂತಾಗುತ್ತಿತ್ತು. ಅದನ್ನೇ ದಿನವಿಡೀ ಅಭ್ಯಾಸ ಮಾಡುವ. ಪ್ರತಿ ರಾತ್ರಿ ಒಂಭತ್ತು ಗಂಟೆಗೆ ನದೀತಟದಲ್ಲಿ ಹಾಡುತ್ತ ಕುಳಿತಾಗ ಒಂದು ಕರಿ ನಾಯಿ ಬಂದು ಆಲಿಸುತ್ತಿತ್ತು. ಹಗಲು ಅದು ಎಲ್ಲಿಯೂ ಕಣ್ಣಿಗೆ ಬೀಳುತ್ತಿರಲಿಲ್ಲ. ರಾಯರೆ ಆ ರೂಪದಲ್ಲಿ ಬಂದು ಅನುಗ್ರಹ ದಯಪಾಲಿಸಿದರೆಂಬುದು ಭೀಮಸೇನನ ನಂಬಿಕೆ.

ವಾಪಸು ಗದಗಿಗೆ ಬಂದು ದಿನಕ್ಕೆ ಹದಿನಾರು ತಾಸು ಭೀಮಪರಿಶ್ರಮಗೈದ. ತಂದೆ ತಿಂಗಳಿಗ ತಲಾ ೨೫ ರೂ. ಕೊಟ್ಟು ಹಾರ್ಮೋನಿಯಂ, ತಬಲಾ, ತಂಬೂರಿ ಬಾರಿಸಲು ನಾಲ್ವರನ್ನು ನಿಯಮಿಸಿದರು. ಅಲ್ಲಲ್ಲಿ ಚಿಕ್ಕಪುಟ್ಟ ಕಚೇರಿಗಳು ಏರ್ಪಟ್ಟವು.

೧೯೪೨ರಲ್ಲಿ ಸವಾಯಿ ಗಂಧರ್ವರಿಗೆ ಪಾರ್ಶ್ವವಾಯು ಬಡಿಯಿತು. ಆದಷ್ಟು ಬೇಗ ಬೇಗೆ ತಮ್ಮಲ್ಲಿದ್ದ ವಿದ್ಯೆಯನ್ನು ನೀಡಬೇಕೆಂಬ ಮನಸ್ಥಿತಿಯಲ್ಲಿದ್ದರು. “ನಿಮ್ಮ ಘರಾಣೆಯ ಗಾಯಕಿ ಉಳಿಸಬಲ್ಲ ಸಾಮರ್ಥ್ಯ ಭೀಮಸೇನನಲ್ಲಿದೆ’’ ಎಂದು ಹಿತೈಷಿಗಳ ಒತ್ತಾಸೆ ಬೇರೆ. ಹುಬ್ಬಳ್ಳಿಯಲ್ಲಿ ಒಬ್ಬರ ಮನೆಯಲ್ಲಿ ಭೀಮಸೇನನ ಗಾಯನ ಏರ್ಪಡಿಸಿ ಸವಾಯಿ ಗಂಧರ್ವರನ್ನು ಮರೆಯಲ್ಲಿ ಕೂಡಿಸಿ ಕೇಳಿಸಿದರು. ಹಿತೈಷಿಗಳ ಮಾತು ನಿಜವಾಗಿತ್ತು. ಹಿಂದಿನ ಸಿಟ್ಟು ಅಳಿದು ಸವಾಯಿ ಗಂಧರ್ವರು ಭೀಮಸೇನನನ್ನು ಪುನಃ ಶಿಷ್ಯನನ್ನಾಗಿಸಿಕೊಳ್ಳಲು ಒಪ್ಪಿದರು. ಈ ಶ್ರೇಯಸ್ಸಿನಲ್ಲಿ ನಾಥ ವಕೀಲರು, ದತ್ತೋಪಂತ ದೇಸಾಯಿ, ಹರಿಯಪ್ಪ, ಗಂಗೂಬಾಯಿ ಹಾನಗಲ್ಲರದು ಸಿಂಹಪಾಲು.

ಮಧ್ಯಾಂತರವೂ ಸೇರಿದಂತೆ ಒಟ್ಟು ಐದು ವರ್ಷ ಭೀಮಸೇನ ಜೋಶಿ ಸವಾಯಿ ಗಂಧರ್ವರಿಂದ ಶಿಕ್ಷಣ ಪಡೆದರು, ಕಲಿಸಿದುದು ಮೂರೇ ರಾಗಗಳು; ತೋಡಿ, ಮುಲ್ತಾನಿ, ಪೂರಿಯಾ, ಇವುಗಳ ಮೇಲೆ ಪ್ರಭುತ್ವ ಪಡೆದರೆ ಯಾವ ರಾಗವನ್ನಾದರೂ ಸುಲಭವಾಗಿ ಹಾಡಬಹುದೆಂಬುದು ಗುರುಗಳ ನಂಬಿಕೆ. ಗುರುಗಳು ತಮ್ಮ ಸಂಗೀತ ಕಚೇರಿಗಳಿಗೂ ಭೀಮಸೇನನ್ನು ಕರೆದೊಯ್ಯುತ್ತಿದ್ದರು. ಇದರಿಂದಾಗಿ ಇತರ ರಾಗಗಳು, ಅವುಗಳ ಚೀಜುಗಳು, ಸ್ವರೂಪ, ರಚನೆ ಹಾಡುವ ಢಂಗ್ ಇತ್ಯಾದಿಗಳ ಜ್ಞಾನ.

ಭೀಮಸೇನರಿಗೆ ತಮ್ಮ ಸಾಧನೆ ತೃಪ್ತಿ ತಂದಿತ್ತು. ಆತ್ಮವಿಶ್ವಾಸ ಮೂಡಿಸಿತ್ತು. ಆದರೆ, ಸಂಗೀತ ಸಾಗರದಂತೆ ಅನಂತ, ಈಜಿದಷ್ಟೂ ಈಜುವದು ಇದ್ದೇ ಇದೆ. ಸಂಗೀತದ ಪ್ರಸಿದ್ಧ ಕೇಂದ್ರಗಳಾಗಿದ್ದ ಮುಂಬಯಿ, ಪುಣೆ, ನಾಗಪುರಗಳಿಗ

ಪಯಣ. ಈಗ ಟಿಕೇಟು ಕೊಂಡು. ಮುಂಬಯಿಯಲ್ಲಂತೂ ದೊಡ್ಡ ದೊಡ್ಡ ಮಹಫಿಲುಗಳು. ಬನಾರಸದ ರಸೂಲಬಾಯಿ ಮತ್ತು ಸಿದ್ದೇಶ್ವರಿದೇವಿ, ಲಕ್ನೋದ ಬೇಗಂ ಅಖ್ತರ, ರಾಮಪುರದ ಮುಸ್ತಾಕ ಹುಸೇನಖಾನರ ಗಾಯನ ಕೇಳುವ ಅವಕಾಶ, ಮೂವರೂ ಗಾಯಕಿಯರ ಪೂರಬಿ ಶೈಲಿಯಿಂದ ಪ್ರಭಾವಿತ. ಎಲ್ಲಕ್ಕಿಂತ ಮುಸ್ತಾಕಹುಸೇನರ ಸರ್ವಾಂಗೀಣ ಗಾಯನದ ಮೋಡಿಗೆ ಮರಳು. ಅವರನ್ನರಸಿ ರಾಮಪುರಕ್ಕೆ (ಉತ್ತರ ಪ್ರದೇಶ) ಪಯಣ. ಉಸ್ತಾದರಲ್ಲಿ ಆರು ತಿಂಗಳು ವಾಸ್ತವ್ಯ, ಕಠಿಣ ಸೇವೆ. ಅವರು ಕಲಿಸಿದ್ದು ನಟಮಲ್ಹಾರ ಒಂದೇ.

ಜನವರಿ ೧೯೪೬ ಸವಾಯಿ ಗಂಧರ್ವರ ಷಷ್ಟ್ಯಬ್ಧ. ಅವರ ಕರ್ಮಭೂಮಿ ಪುಣೆಯಲ್ಲಿ ಕಿರಾಣಾ ಘರಾಣೆಯ ಅಧ್ವರ್ಯರಿಗೆ ಗೌರವಾಭಿಮಾನ. ಸ್ವಪ್ರತಿಷ್ಠೆ, ಘರಾಣೆಗಳ ಎಲ್ಲೆ ಮೀರಿ ಅನೇಕಾನೇಕ ಸಂಗೀತಗಾರರು ಪಾಲ್ಗೊಂಡಿದ್ದರು. ಪುಣೆಯ ಸಂಗೀತದ ಇತಿಹಾಸದಲ್ಲಿ ಅದೊಂದು ಮೈಲುಗಲ್ಲು.

ಭೀಮಸೇನ ಜೋಶಿ ಅವರಿಗೆ ಆಹ್ವಾನ. ೨೪ರ ಹರೆಯ ಗುರುಸಮ್ಮುಖದಲ್ಲಿ ಪ್ರಥಮ ಗಾಯನ ಕಾರ್ಯಕ್ರಮ. ಗುರುಗಳಿಂದ ನೇರವಾಗಿ ಕಲಿಯದ, ಆದರೆ ಅವರು ರಿಯಾಜ ಮಾಡುವಾಗ ಕೇಳಿ ಕಲಿತಿದ್ದ ಮಿಂಯಾ ಮಲ್ಹಾರ ಪ್ರಸ್ತುತಪಡಿಸಿದರು. ಆರುಭಕ್ಕ ಷಡ್ಜ ಹಚ್ಚುತ್ತಲೆ ಶ್ರೋತೃಗಳು ಮಂತ್ರಮುಗ್ಧ. "ಇಂಥ ಚಿಕ್ಕ ವಯಸ್ಸಿನಲ್ಲಿ ಎಂಥ ದೊಡ್ಡ ಸಾಧನೆ!" ಅಬ್ದುಲ್ ಕರೀಮಖಾನ ಹಾಗೂ ಸವಾಯಿ ಗಂಧರ್ವರ ಸಂಗೀತವನ್ನು ನವಸ್ಫೂರ್ತಿಯೊಂದಿಗೆ ಮುಂದುವರಿಸಬಲ್ಲ ಯೋಗ್ಯ ಶಿಷ್ಯ!" ಇತ್ಯಾದಿ ಉದ್ಗಾರಗಳೆ ಎಲ್ಲರ ಬಾಯಲ್ಲಿ. ಮಿಂಯಾ ಮಲ್ಹಾರ ನಂತರ ಖಾಡಿಲಕರರ "ಮಾನಾಪಮಾನ" ನಾಟಕದ ಖಾಯಂ ಆಕರ್ಷಣೆಯ "ಚಂದ್ರಿಕಾ ಹಿ ಜಣೂ" ನಾಟ್ಯಗೀತ. ಅದನ್ನು ಕೇಳಿಯಂತೂ ಜನಕ್ಕೆ ಆನಂದಾವೇಶ. ಮುಂಬೈ ಅಹಮದನಗರ, ಸೊಲ್ಲಾಪುರ ಮೊದಲಾದೆಡೆಗಳ ದೊಡ್ಡ ಸಂಸ್ಥೆಗಳಿಂದ ಆಮಂತ್ರಣಗಳ ಸುರಿಮಳೆ.

೧೯೬೪–೮೨ರ ಮಧ್ಯೆ ಹಲವಾರು ಬಾರಿ ವಿದೇಶ ಪಯಣ ಮಾಡಿದ್ದಾರೆ. ಇಟಲಿ, ಅಮೇರಿಕ, ಇಂಗ್ಲೆಂಡ್, ಕೆನಡಾಗಳಲ್ಲಿ ಕಚೇರಿ ನೀಡಿದ್ದಾರೆ. ವಿದೇಶಗಳಲ್ಲೂ ಅವರು ಅತ್ಯಂತ ಜನಪ್ರಿಯ ಹಿಂದುಸ್ತಾನಿ ಗಾಯಕ. ನ್ಯೂಯಾರ್ಕನಂತಹ ನಗರಗಳಲ್ಲಿ ಭಿತ್ತಿಪತ್ರಗಳ ಮೂಲಕ ಪ್ರಚಾರ ಮಾಡಿ ಕಚೇರಿ ನೀಡಿದ ಪ್ರಥಮ ಗಾಯಕರವರು. ಇಪ್ಪತ್ತು ಡಾಲರ್ ಟಿಕೆಟ್ ಕೊಂಡು ಎರಡೆರಡು ಸಾವಿರ ಶ್ರೋತೃಗಳು ಕಚೇರಿಗೆ ಬಂದಿದ್ದಾರೆ.

೧೯೬೪ರಲ್ಲಿ ಕಾಬೂಲದ ದೊರೆ ಝಾಹಿರ ಶಾಹನಿಂದ ಆಮಂತ್ರಣ. ಅವನ ಮಗಳು ಆಕ್ಸ್‌ಫರ್ಡ್‌ನಲ್ಲಿ ಕಲಿಯುತ್ತಿದ್ದಾಗ ಲಂಡನ್ ಅಂಗಡಿಯೊಂದರಲ್ಲಿ ಭೀಮಸೇನ ಜೋಶಿ ಅವರ ಲಲಿತ ಮತ್ತು ಶುದ್ಧ ಕಲ್ಯಾಣ ರಾಗಗಳ ಧ್ವನಿಮುದ್ರಿಕೆ ಕೇಳಿದಂದಿನಿಂದ ಅವರನ್ನು ಕರೆಸಲು ತಂದೆಗೆ ದುಂಬಾಲು ಬಿದ್ದಿದ್ದಳು. ಪ್ರತಿಷ್ಠಿತ

ಆಮಂತ್ರಿತರ ಸಮ್ಮುಖದಲ್ಲಿ ಕಚೇರಿ. ದೊರೆ ಹಿಂದುಸ್ತಾನಿ ಸಂಗೀತದ ಗುಣಗ್ರಾಹಿ, ಅಬ್ದುಲ್ ಕರೀಮಖಾನರ ಅಭಿಮಾನಿ.

೧೯೬೩ರಲ್ಲಿ ಎಸ್. ಲೂಯಿಸ್ ಎಂಬ ಡಚ್ ಚಲನಚಿತ್ರ ತಯಾರಕ ಹಾಗೂ ನಿರ್ದೇಶಕ ಪ್ಯಾಂಕೊಟರ್‌ನ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಆಕಸ್ಮಿಕವಾಗಿ ಭೀಮಸೇನ ಜೋಶಿ ಅವರ ತೋಡಿ ಧ್ವನಿಮುದ್ರಿಕೆ ಕೇಳಿದ. ಕೂಡಲೆ ಭೀಮಸೇನ ಜೋಶಿ ಅವರಿಗೆ ಬರೆದು ಭಾರತಕ್ಕೆ ಬಂದ. ಅವರ ಸಂಗೀತ ಕುರಿತು ಚಲನಚಿತ್ರ ತಯಾರಿಸಿದ. ಪಾಶ್ಚಿಮಾತ್ಯ ದೇಶಗಳಲ್ಲೆಲ್ಲ ಪ್ರದರ್ಶಿಸಿದ.

ಕೆನಡಾದ ವಾಣಿಜ್ಯಪಟು ಜೇಮ್ಸ್ ಬೆವರಿಜ್ ಕೂಡ ಸಂಗೀತದಲ್ಲಿ ಆಸಕ್ತ. ಲೂಯಿಸ್ ಬಂದು ಹೋದ ಕ್ಷಿಪ್ರದಲ್ಲಿಯೆ ಪುಣೆಗೆ ಬಂದು ಭೀಮಸೇನ ಜೋಶಿ ಅವರ ಬಗೆಗೆ ೨೦ ನಿಮಿಷದ ಸಾಕ್ಷ್ಯ ಚಿತ್ರ ತಯಾರಿಸಿದ. ಅದಕ್ಕೆ "ರಾಗ ಮಿಂಯಾ ಮಲ್ಹಾರ" ಎಂದು ಹೆಸರಿಟ್ಟ.

ಶಾಸ್ತ್ರೀಯ ಗಾಯನವಲ್ಲದೆ ಭೀಮಸೇನ ಜೋಶಿ ದಾಸರ ಪದಗಳನ್ನು ತಮ್ಮ ಸುಶ್ರಾವ್ಯ ಕಂಠದಲ್ಲಿ ಹಾಡಿ ಜನಪ್ರಿಯಗೊಳಿಸಿದ್ದಾರೆ. ಭೀಮಸೇನ ಜೋಶಿ ಅವೆಲ್ಲವುಗಳಿಗೆ ಕರ್ನಾಟಕ ಸಂಗೀತದ ಛಾಯೆ ನೀಡಿ ಹಾಡಿರುವದೊಂದು ವಿಶೇಷ. ಭೀಮಸೇನ ಜೋಶಿ ಪ್ರಖ್ಯಾತಿ ಹಾಗೂ ಜನಪ್ರಿಯತೆಗೆ ಇನ್ನೊಂದು ಹೆಸರು. ಅವರದು ಬಹುಶ್ರುತ ಪ್ರತಿಭೆ. ಸಂತವಾಣಿ (ಕನ್ನಡ, ಮರಾಠಿ, ಹಿಂದಿ ಭಜನೆಗಳು), ನಾಟ್ಯಗೀತ, ಚಲನಚಿತ್ರಗಳಿಗೆ ಹಿನ್ನೆಲೆ ಗಾಯನ. ಬೇಂದ್ರೆ, ಕುವೆಂಪುರವರ ಗೀತಗಳ ಧ್ವನಿಮುದ್ರಿಕೆಗಳನ್ನು ನೀಡಿದ್ದಾರೆ.



# ಬಾಳಪ್ಪ ಹುಕ್ಕೇರಿ

ಕೆ. ರಾ. ನಾಗರಾಜ

ಮಧ್ಯಪ್ರದೇಶ ಸರ್ಕಾರ ಮಲ್ಲಿಕಾರ್ಜುನ ಮನಸೂರ, ಗಂಗೂಬಾಯಿ ಹಾನಗಲ್ಲ, ಭೀಮಸೇನಜೋಷಿ ಅವರಿಗೆ 'ಕಾಳಿದಾಸ ಸಮ್ಮಾನ' ಪ್ರಶಸ್ತಿ ಕೊಟ್ಟು, ಅಡಿಗರಿಗೆ 'ಕಬೀರ್ ಸಮ್ಮಾನ್' ಪ್ರಶಸ್ತಿ ನೀಡಿ ಗೌರವಿಸಿದೆ. ಈಗ ಮಧ್ಯಪ್ರದೇಶದ ಮೂರನೇ ಸಮ್ಮಾನ್ 'ತುಳಸಿ ಸಮ್ಮಾನ್' ಅದನ್ನು ಬಾಳಪ್ಪ ಹುಕ್ಕೇರಿ ಪಡೆದ ಗೌರವಕ್ಕೆ ಪಾತ್ರರಾಗಿದ್ದಾರೆ.

ಬಾಳಪ್ಪ ಹುಕ್ಕೇರಿ– ಕನ್ನಡ ಹಾಡುಗಳನ್ನು ಕಳೆದ ಅರವತ್ತು ವರ್ಷಗಳಿಂದ ಹಾಡುತ್ತ ಬಂದಿದ್ದಾರೆ. ಅವರ ಗಾಯನಕಲೆ ನಾಡಿನ ಎಲ್ಲ ಭಾಗಗಳಲ್ಲಿಯೂ ಪಸರಿಸಿದೆ. ಹುಕ್ಕೇರಿಯವರ – ಗಾಯನ ತನ್ನದೇ ಆದ ಹಾವಭಾವ, ಧಾಟಿ, ವಿನ್ಯಾಸಗಳನ್ನು ಪಡೆದುಕೊಂಡದ್ದು. ಕನ್ನಡ ಹಾಡುಗಳ ಸೊಗಸು, ವೈವಿಧ್ಯಗಳನ್ನು ಎಲ್ಲ ಸೂಕ್ಷ್ಮಗಳೊಂದಿಗೆ ಕೇಳುಗ ಸಮ್ಮುಖವನ್ನಾಗಿ ಮಾಡುವುದು ಅವರ ಗಾಯನದ ವೈಶಿಷ್ಟ್ಯ. ಒಂದೊಂದು ಪ್ರದೇಶದಲ್ಲಿಯೂ ಅವರ ಪೇಟೆಂಟ್ ಹಾಡುಗಳಿಗೆ ಬೇಡಿಕೆ ಇದೆ. ಕೇಳುಗರ ಬೇಡಿಕೆಯನ್ನು ಬಾಳಪ್ಪ ಮಾನ್ಯ ಮಾಡುತ್ತಾರೆ. ಕೇಳುಗರ ಬಗೆಗೆ ತುಂಬು ಪ್ರೀತಿಯನ್ನು ತೋರುವ ಗಾಯಕರಲ್ಲಿ ಬಾಳಪ್ಪ ಹುಕ್ಕೇರಿ ಅಗ್ರಗಣ್ಯರು. ಅವರ 'ಗಾಯಕ ಧಿಮಾಕು ತೋರುವವನಲ್ಲ – ಕೇಳುಗರ ಪ್ರೀತಿಗೆ ತಲೆಬಾಗುವವನು' ಎಂದು ವಿನಯದಿಂದ ಹೇಳುತ್ತಾರೆ. ಈಗ ಬಾಳಪ್ಪ ಹುಕ್ಕೇರಿಯವರಿಗೆ ಎಂಬತ್ತು ವರ್ಷ. ಆದರೆ ಅವರ ಗಾಯನದ ಮೇಲೆ ಮುಪ್ಪಿನ ಛಾಯೆ ಬಿದ್ದಿಲ್ಲ. ಎಂದಿನ ಹುರುಪು, ತೀವ್ರತೆಗಳಿಂದ ತನ್ಮಯರಾಗಿ ಹಾಡುತ್ತಾರೆ.

ಕೇಳುಗರೊಂದಿಗೆ ಅವರು ಬೆಳೆಸುವ ಜೀವಂತ ಸಂಬಂಧವನ್ನು ಹುಕ್ಕೇರಿಯವರ ಗಾಯನ ಸಭೆಗಳನ್ನು ನೋಡಿಯೇ ತಿಳಿಯಬೇಕು. ಇಡೀ ಸಭೆಗೆ ಹಾಡುವಂತೆ ತೋರಿದರೂ ಒಬ್ಬೊಬ್ಬ ಕೇಳುಗನನ್ನು ಉದ್ದೇಶಿಸಿ ಹಾಡಿದಂತೆ ತೋರುವ ಬಗೆ ತುಂಬ ಆಶ್ಚರ್ಯವನ್ನು ಉಂಟುಮಾಡುಂಥದ್ದು. ಹಾಡುವ ಹಾಡಿಗೆ ಸೂಕ್ತ ವಿವರಣೆ, ವ್ಯಾಖ್ಯಾನವನ್ನು ಮಾಡುವ ಕೆಲವೇ ಹಾಡುಗಾರರ ಪೈಕಿ ಬಾಳಪ್ಪ ಹುಕ್ಕೇರಿಯವರು ಮುಖ್ಯರು. ವ್ಯಾಖ್ಯಾನದಲ್ಲಿ ಲಘು ಹಾಸ್ಯ, ದೃಷ್ಟಾಂತ ಇವುಗಳು ಸಾಂದರ್ಭಿಕವಾಗಿ ಸೇರಿ ಗಾಯನದ ಗೋಷ್ಠಿಗೆ ವಿಶೇಷ ಕಲೆ ಒದಗಿ ಬರುತ್ತದೆ. ಜನಪದ ಗಾಯಕನ ಎಲ್ಲ ಗತ್ತು, ಶೈಲಿಗಳು ಬಾಳಪ್ಪ ಹುಕ್ಕೇರಿಯವರಲ್ಲಿ ಮೈಗೂಡಿವೆ. ಆದರೆ ಇವರು ಕೇವಲ ಜನಪದ ಗಾಯಕರಲ್ಲ. ಕನ್ನಡ ಕವಿತೆಯ ಎಲ್ಲ ಬಗೆಗಳೂ ಇವರ ಗಾಯನದಲ್ಲಿ ಸ್ಥಾನ ಗಳಿಸಿಕೊಂಡಿವೆ. ವಚನ, ಕೀರ್ತನೆ, ತತ್ತ್ವಪದ, ಜನಪದ ಗೀತೆ, ಆಧುನಿಕ ಕವಿಗಳ ರಚನೆ ಹೀಗೆ ಅವರ ಹಾಡಿನ ಕೋಶ ಸಮೃದ್ಧವಾದದ್ದು. ಅಲ್ಲದೆ ಬಾಳಪ್ಪ ತಾವೇ ರಚಿಸಿದ ಹಾಡುಗಳನ್ನು ಹಾಡುತ್ತಾರೆ. ಎಲ್ಲ ಮಟ್ಟದ ಕೇಳುಗರಿಗೂ ಅವರಲ್ಲಿ ಹಾಡುಗಳಿವೆ.

ತಾಯಿಯ ತೊಡೆಯ ಮೇಲೆ ಆಡುತ್ತಿದ್ದಾಗಲೇ ಗಾಯನದ ಲಯಗಳತ್ತ ಮನಸ್ಸು ಕೊಟ್ಟವರು – ಬಾಳಪ್ಪ ಹುಕ್ಕೇರಿ. ಕನ್ನಡ ಶಾಲೆಯ ಮಾಸ್ತರ್ ನೀಲಕಂಠರಾವ್ ಅವರ ಕವಿತೆಯ ವಾಚನ ಶೈಲಿ, ಹಾಗೂ ಗಮಕ ಇವರಲ್ಲಿ ಆಸಕ್ತಿ ಬೆಳೆಯಲು ಕಾರಣವಾಯಿತು. ನೀಲಕಂಠರಾವ್ – 'ತುಂಬ ಚೆಂದದಿಂದ ಕನ್ನಡ ಕವಿತಾ ಹೇಳ್ತಿದ್ದು' ಎಂದು ಬಾಳಪ್ಪ ಪ್ರೀತಿಯಿಂದ ಅವರನ್ನು ನೆನೆಯುತ್ತಾರೆ. ಅನಂತರ ಇಂಗ್ಲಿಷ್ ಶಾಲೆಯಲ್ಲಿ ಅಭ್ಯಾಸ. ಶಾಸ್ತ್ರೀಯ ಸಂಗೀತದ ಸಾಧನೆಯನ್ನು ಶಿವಲಿಂಗಯ್ಯ ಹಾಗೂ ಮಲ್ಲಯ್ಯ ಅವರ ಬಳಿ ಮಾಡಿದರು. ಕುಟುಂಬದ ಅನೇಕ ಸಮಸ್ಯೆಗಳು ಇವರ ಸಾಧನೆಗೆ ಅಡ್ಡಿ ಬರಲಿಲ್ಲ. ಜೀವನವನ್ನು ನಡೆಸಲು ಒಂದು ಕಾಲಕ್ಕೆ – 'ಕಾಗದದ ಕಲಾತ್ಮಕ ಹೂಗಳನ್ನು ಮಾಡಿ ಮಾರುತ್ತಿದ್ದೆ' ಎಂದು ಹೇಳಿಕೊಳ್ಳುತ್ತಾರೆ. ಶಾಸ್ತ್ರೀಯ ಸಂಗೀತವನ್ನು ಅಭ್ಯಾಸ ಮಾಡಿದರೂ ಕನ್ನಡ ಹಾಡುಗಳ ಗಾಯನದತ್ತ ವಿಶೇಷ ಒಲವು ಬೆಳೆಯಿತು. ಎಲ್ಲರೂ ಗವಾಯಿಗಳಾದರೆ ಕನ್ನಡ ಹಾಡುಗಳನ್ನು ಹಾಡುವವರು ಯಾರು? ಎಂದು ಮಾರ್ಮಿಕವಾಗಿ ಪ್ರಶ್ನಿಸುತ್ತಾರೆ.

ಸ್ವಾತಂತ್ರ್ಯ ಬಂದ ವರ್ಷವೇ ಬಾಳಪ್ಪ ಹುಕ್ಕೇರಿ ವ್ಯವಸಾಯ ಇಲಾಖೆಯ ಕ್ಷೇತ್ರ ಪ್ರಚಾರಕರಾಗಿ ನೌಕರಿ ಹಿಡಿದರು. ಬೆಳಗಿನಿಂದ ಸಂಜೆಯವರೆಗೆ ಬೀಜ, ಗೊಬ್ಬರ ಹಾಗೂ ವ್ಯವಸಾಯದ ವಿಧಾನಗಳ ಬಗೆಗೆ ಮಾಹಿತಿ ನೀಡುವ ಕೆಲಸ, ರಾತ್ರೆ ಅದೇ ಹಳ್ಳಿಯಲ್ಲಿ ತಮ್ಮ ಗಾಯನದ ಸಭೆ. ಹೀಗೆ ತಿಂಗಳಿನ ಇಪ್ಪತ್ತು ದಿನ ಸಂಚಾರ, ವ್ಯವಸಾಯ ಇಲಾಖೆಯ ನೌಕರಿಯೊಂದಿಗೆ– ಗಾಯನದ

ವ್ಯವಸಾಯ ನಿರಂತರವಾಗಿ ಸಾಗಿತು. ಪ್ರತಿ ಕ್ಯಾಂಪಿನಲ್ಲೂ ನೌಕರಿಯಿಂದ ಗಾಯನ ಸಭೆ ಇದ್ದೇ ಇರುತ್ತಿತ್ತು. ಎಪ್ಪತ್ನಾಲ್ಕರಲ್ಲಿ ನಿವೃತ್ತಿ. ಮತ್ತೆ ನಾಡಿನಾದ್ಯಂತ ಸಂಚಾರ.

ಬಾಳಪ್ಪ ಹುಕ್ಕೇರಿ – ಸಾವಿರ ಹಾಡಿನ ಸರದಾರ. "ಯಾರು ಎಲ್ಲಿ ಹಾಡೆಂದರೂ ಹಾಡುವವನು ನಾನು'' ಎಂದು ತಮ್ಮನ್ನು ವರ್ಣಿಸಿ ಕೊಳ್ಳುತ್ತಾರೆ. ಕಿಕ್ಕಿರಿದ ಸಭೆ, ರೈಲ್ವೆ ನಿಲ್ದಾಣ... ಎಲ್ಲೆಂದರೆ ಅಲ್ಲಿ ಅವರಿಗೆ ಅಭಿಮಾನಿ ಕೇಳಗರು ಮುತ್ತುತ್ತಾರೆ. ತಮ್ಮ ಗಾಯನದಿಂದ ಒಳ್ಳೆಯ ಸ್ನೇಹವಲಯವನ್ನು ಬಾಳಪ್ಪ ಕಟ್ಟಿಕೊಂಡಿದ್ದಾರೆ. "ಗಾಯಕನಿಗೆ ಕೇಳುಗರ ಪ್ರೀತಿ ಬಿಟ್ಟು ಇನ್ನೇನು ತಾನೆ ಇದೆ... ಅದೇ ಗಾಯಕನ ಸಂಪತ್ತು'' ಎನ್ನುತ್ತಾರೆ ಅವರು.

ರಾಷ್ಟ್ರೀಯ ಚಳವಳಿಯಲ್ಲಿ ಪಾಲ್ಗೊಂಡ ಗಾಯಕರಲ್ಲಿ ಬಾಳಪ್ಪ ಹುಕ್ಕೇರಿ ಮುಖ್ಯರು. ಹುರುಪಿನ ಯುವಕ ಬಾಳಪ್ಪ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತ ಸಂಚರಿಸಿದರು. ಕೌಜಲಗಿ ಶ್ರೀನಿವಾಸರಾವ್, ಶ್ರೀಧರ ಖಾನೋಳ್ಕರ್, ಆನಂದಕಂದ, ಆನಂದಕವಿ, ಶಾಂತಕವಿ, ಜೊತೆಗೆ ಮರಾಠಿ, ಉರ್ದು ಹಾಡುಗಳನ್ನು ಹಾಡಿ ಸ್ವಾತಂತ್ರ್ಯ ಸಂದೇಶದ ಪ್ರಸಾರ ಮಾಡುತ್ತಿದ್ದನ್ನು ತಮ್ಮ ಸಹಜ ಸ್ಫೂರ್ತಿ ಧಾಟಿಯಲ್ಲಿ ವಿವರಿಸುತ್ತಾರೆ. "ಆಗ ಭಕ್ತಿಗೀತೆಗಳನ್ನಾಗಲಿ, ಜನಪದ ಗೀತೆಗಳನ್ನಾಗಲಿ ನಾನು ಹಾಡುತ್ತಿರಲಿಲ್ಲ. ಕೇವಲ ಹೋರಾಟದ ಹಾಡುಗಳನ್ನು ಮಾತ್ರ ಹಾಡುತ್ತಿದ್ದೆ'' ಎನ್ನುತ್ತಾರೆ. ಸ್ವಾತಂತ್ರ್ಯ ಬಂದ ಮೇಲೆ ಭಕ್ತಿ ಗೀತೆ, ಕನ್ನಡ ಗೀತೆ, ಜನಪದ ಗೀತೆ ಇವುಗಳನ್ನೆಲ್ಲ ಹಾಡಲು ಆರಂಭಿಸಿದರು. ಗಾಯಕರಾಗಿ ಚಳವಳಿಯಲ್ಲಿ ಭಾಗವಹಿಸಿದ ಬಾಳಪ್ಪ ಬ್ರಿಟಿಷ್ ಸರಕಾರದ ವಿರೋಧ ಕಟ್ಟಿಕೊಂಡರು. ಜೈಲು ಶಿಕ್ಷೆಗೆ ಗುರಿಯಾದರು. 1939ರಲ್ಲಿ ಹಿಂಡಲಗಾ ಜೈಲಿನಲ್ಲಿ ಆರು ತಿಂಗಳ ಕಠಿಣ ಶಿಕ್ಷೆ ಅನುಭವಿಸಿದರು. ಊಟ–ತಿಂಡಿಯಲ್ಲಿ ಸೊಗಸುಗಾರರಾದ ಹುಕ್ಕೇರಿ ಯವರು ಜೈಲಿನಲ್ಲಿ ಪಪ್ಪಾಯಿ ಎಲೆಯ ಪಲ್ಯ ತಿನ್ನಬೇಕಾಗಿ ಬಂತು. "ಅಂದಿನ ಜೈಲು ತುಂಬ ಕ್ರೂರವಾಗಿತ್ತು. ಇಂದಿನಂತಲ್ಲ'' ಎಂದು ಹೇಳುತ್ತಾರೆ.

ಇದೇ ಕಾಲದಲ್ಲಿ ಬಾಳಪ್ಪ ತಮ್ಮ ಗೆಳೆಯರೊಂದಿಗೆ ಸೇರಿ ನಾಟಕದ ಕಂಪನಿಯನ್ನು ಹುಟ್ಟು ಹಾಕಿದರು. ಗಾಯನ ಪ್ರಧಾನ ನಾಟಕಗಳನ್ನು ಆಡಿ ಸ್ವಾತಂತ್ರ್ಯ ಸಂಗ್ರಾಮದ ಸಂದೇಶವನ್ನು ಹರಡುವುದು ಈ ಕಂಪನಿಯ ಉದ್ದೇಶವಾಗಿತ್ತು. 'ಮಹಾತ್ಮ ಸೇವಾ ಸಂಗೀತ ನಾಟಕ ಮಂಡಲಿ' ಬಂಡವಾಳ ಇಲ್ಲದ ಬರಿಗೈ ಕಂಪನಿ. ಆದಕ್ಕೆ ಬಾಳಪ್ಪನವರ ಗಾಯನವೇ ಬಂಡವಾಳ. ಬಾಳಪ್ಪನವರು ಪಾರ್ಟ್ ಹಾಕುತ್ತಿದ್ದರು.

ಹುಕ್ಕೇರಿ ಗಾಯನವೆಂದರೆ ಅದೊಂದು ಉತ್ಸಾಹ, ಸಂಭ್ರಮದ ವಾತಾವರಣ. ಬಸವಣ್ಣ, ಅಕ್ಕಮಹಾದೇವಿ, ಮಡಿವಾಳಪ್ಪ, ಬಾಲಲೀಲ ಮಹಾಂತ ಶಿವಯೋಗಿ,

ಶಿಶುನಾಳ ಸಾಹೇಬ, ಸರ್ಪಭೂಷಣ ಶಿವಯೋಗಿ, ನಿಜಗುಣ ಶಿವಯೋಗಿ, ಕುವೆಂಪು, ಬೇಂದ್ರೆ, ಆನಂದಕಂದ– ಮುಂತಾದ ಕವಿಗಳ ರಚನೆಗಳು ಅವರಿಂದ ನಿರಂತರವಾಗಿ, ನಿರರ್ಗಳವಾಗಿ ಹೊಮ್ಮುತ್ತವೆ. 'ಅದಾವು ಜೋಳ ಉಳಿದಾವು ಹಾಡು' ಎಂಬ ಮಾತು ಇಂಥ ಗಾಯಕರನ್ನೇ ಕುರಿತದ್ದಿರಬೇಕು. ಹಾಡು ಯಾವ ಕಾಲದ್ದೇ ಇರಲಿ, ಬಾಳಪ್ಪನವರ ಗಾಯನದಿಂದ ಅದಕ್ಕೆ ಹೊಸ ಕಾಂತಿ, ಸತ್ವಗಳು ತುಂಬಿ ಬರುತ್ತವೆ. ಇವರ ಗಾಯನ ನಿರ್ದಿಷ್ಟ ಶೈಲಿಯ ಕೊರಕಲಿಗೆ ಬೀಳದೆ ಸಮೃದ್ಧತೆಯನ್ನು ಉಳಿಸಿಕೊಂಡಿದೆ. ಪ್ರತಿಯೊಂದು ಕಾರ್ಯಕ್ರಮವೂ ತನ್ನದೆ ಆದ ಹೊಳಪನ್ನು, ಆವರಣವನ್ನು ನಿರ್ಮಿಸುತ್ತದೆ. "ಬ್ರಿಟಿಷ್ ಸರ್ಕಾರ ಹಾಡುವವರನ್ನು ತುಳಿಯುತ್ತಿದ್ದರು. ಸ್ವಾತಂತ್ರ್ಯ ಬಂದ ಮೇಲೆ ಒಳ್ಳೆಯ ವಾತಾವರಣ ಬೆಳೆದಿದೆ'' ಎಂದು ಅವರು ಹೇಳುತ್ತಾರೆ. ರಾಜ್ಯ–ರಾಷ್ಟ್ರಮಟ್ಟದ ಪ್ರಶಸ್ತಿಗಳು ಹುಕ್ಕೇರಿಯವರಿಗೆ ದೊರೆತಿವೆ. ಈಗ ಮಧ್ಯಪ್ರದೇಶ ಸರ್ಕಾರದ ಪ್ರತಿಷ್ಠಿತ ತುಳಸಿ ಸಮ್ಮಾನ್ ಪ್ರಶಸ್ತಿಯನ್ನು ಪಡೆದಿದ್ದಾರೆ. 'ನಾನು ಮಾನ–ಅಪಮಾನಗಳನ್ನು ತೂಕ ಮಾಡಿದವನಲ್ಲ. ಹಾಡುವುದಷ್ಟೇ ನನ್ನ ಕೆಲಸ ಅದನ್ನು ಮುಂದುವರೆಸುತ್ತೇನೆ' – ಎಂದು ಖಚಿತವಾಗಿ ಹೇಳುತ್ತಾರೆ.

ಹುಕ್ಕೇರಿ ಶೈಲಿಯ ಗಾಯನಕ್ಕೆ ಅಲ್ಲಲ್ಲಿ ತಮ್ಮ ಶಿಷ್ಯರನ್ನು ತಯಾರು ಮಾಡಿದ್ದಾರೆ. "ನಾನು ಸದಾ ಸಂಚಾರಿ. ಹೀಗಾಗಿ ನನ್ನ ಬೆನ್ನು ಬಿದ್ದು ಕಲಿಯುವವರು ಬರಬೇಕು. ಹಾಗೆ ಬರುವವರ ಸಂಖ್ಯೆ ಕಡಿಮೆ''. ಹುಕ್ಕೇರಿಯವರ ಸಾಥಿಗಳಾದ ಮೊರಬದ್ ಹಾಗೂ ಬಸವರಾಜ ಹೂಗಾರ ಅವರ ಜೊತೆಗೆ ಕಳೆದ ಇಪ್ಪತ್ತು ವರ್ಷಗಳಿಂದ ಹಾರ್ಮೋನಿಯಂ ಹಾಗೂ ತಬಲಾ ನುಡಿಸುತ್ತಿದ್ದಾರೆ. ಮೊರಬದ್ ಹುಕ್ಕೇರಿಯವರ ಜೊತೆಗೆ ಸೊಲ್ಲು ಕೊಡುತ್ತಾರೆ. ಚೆನ್ನಾಗಿ ಹಾಡುತ್ತಾರೆ. ಹುಕ್ಕೇರಿಯವರಿಗೆ ತಬಲಾ ಹಾಗೂ ಹಿಟೀಲು ನುಡಿಸುವುದರಲ್ಲಿ ಪರಿಶ್ರಮ ಇದೆ.

ಕ್ಯಾಸೆಟ್, ಟಿ.ವಿ. ಗಾನ ತಟ್ಟೆಗಳು ಪ್ರಸಾರಗೊಳ್ಳುತ್ತಿರುವ ಈ ಕಾಲದಲ್ಲಿ ಬಾಳಪ್ಪನವರ ಗಾಯನ ಗೋಷ್ಠಿ ಅಭಿಮಾನಿಗಳಿಂದ ತುಂಬಿರುತ್ತದೆ. ಹುಕ್ಕೇರಿಯವರ ಕ್ಯಾಸೆಟ್ ಐಬಿಎಚ್ ಸಂಸ್ಥೆಯಿಂದ ಪ್ರಸಾರ ಗೊಂಡಿದೆ. "ಲೋಕ ಭಿನ್ನರುಚಿಯಿಂದ ಕೂಡಿದ್ದು. ನನ್ನ ಗಾಯನವನ್ನೂ ಜನ ಪ್ರೀತಿಸುತ್ತಾರೆ. ನನಗೆ ಎಲ್ಲ ಗಾಯಕರ ಬಗೆಗೂ ಪ್ರೀತಿ–ಸಂತೋಷ ಇದೆ''. ಹಳೆಯ ಪದ್ಧತಿಯೊಂದಿಗೆ ಹೊಸ ಅಂಶಗಳನ್ನು ಸೇರಿಸಿ ಹಾಡುವುದು, ಹೊಂದಾಣಿಕೆಗೊಳಿಸುವುದು ನಡೆದೇ ಇದೆ ಅಂದು ಅವರ ಅನ್ನಿಸಿಕೆ.

"ಗಾಯನ ಪರಂಪರೆಯಲ್ಲಿ ಅನೇಕ ಏರು–ಪೇರುಗಳು ಇವೆ. ಅದನ್ನು ವಿರೋಧಿಸುವುದು ನನ್ನ ಉದ್ದೇಶ ಅಲ್ಲ'' ಎನ್ನುತ್ತಾರೆ ಬಾಳಪ್ಪ ಹುಕ್ಕೇರಿ. ಸಿನಿಮಾ ಶೈಲಿಯ ಪ್ರಸಾರ ಎಷ್ಟೇ ಹಬ್ಬಿದರೂ ಕನ್ನಡ ಹಾಡುಗಳ ಹಾಡುವಿಕೆಗೆ ಯಾವ

ಧಕ್ಕೆಯೂ ಬಂದಿಲ್ಲ. ಹೊಸ ಪ್ರಯೋಗಗಳ ಬಗೆಗೆ ಅವರು ತುಂಬ ಸಮಾಧಾನಿಯಾಗಿದ್ದಾರೆ.

ಬಾಳಪ್ಪ ಹುಕ್ಕೇರಿ–ಕನ್ನಡ ಕಾವ್ಯದ ಕೇಳುಗ ಪರಂಪರೆಯನ್ನು ಜೀವಂತಗೊಳಿಸುತ್ತಾ ಮುನ್ನಡೆದಿರುವ ಗಾಯಕ. ಕಾಳಿಂಗರಾವ್, ಹುಕ್ಕೇರಿ ಇಂಥ ಗಾಯಕರಿಂದ ಈ ಪರಂಪರೆ ಬೆಳೆದಿದೆ.

ಈಗ ಮುರಗೋಡಿನಲ್ಲೇ ಇರುವ ಹುಕ್ಕೇರಿ ಪ್ರತಿದಿನ ಸಂಜೆ ಒಂದು ತಾಸು– ಅಲ್ಲಿನ ಮಠದಲ್ಲಿ ಹಾಡುತ್ತಾರೆ. ಹಾಡು ಕೇಳಲು ಬೇರೆ ಬೇರೆ ಊರುಗಳಿಂದ ಮುರುಗೋಡಿಗೆ ಬರುವವರ ಸಂಖ್ಯೆಯೇನೂ ಕಡಿಮೆಯಿಲ್ಲ.

* * *

### ಬಾಳಪ್ಪನವರ ಹಾಡು :

ಬಾಳಪ್ಪನರು ಹಾಡುಗಳಿಗೆ ವೈವಿಧ್ಯಮಯ ಚೈತನ್ಯವನ್ನು ತುಂಬುತ್ತಾರೆ. 'ಇನ್ನೂ ಯಾಕ ಬರಲಿಲ್ಲವ್ವಾ ಹುಬ್ಬಳ್ಳಿಯಾಂವಾ' ಹಾಡಿನಲ್ಲಿ ಆತಂಕ, ನಿರೀಕ್ಷಣೆಯನ್ನು ಹೊರಹೊಮ್ಮಿಸುವ ವಿಧಾನವಿದ್ದರೆ, 'ಬಾರಿಸು ಕನ್ನಡ ಡಿಂಡಿಮವ ಹೇ ಕರ್ನಾಟಕ ಹೃದಯ ಶಿವಾ' ಎನ್ನುವ ಹಾಡಿನ 'ಶಿವಾ' ಎನ್ನುವ ಪದದ ಪುನರಾವರ್ತನೆಯ ಮೂಲಕ ಆರ್ತತೆಯ ವಾತಾವರಣ ನಿರ್ಮಾಣವಿದೆ. ಜನಪದ ಗೀತೆಯನ್ನು ಹಾಡುವಾಗ ಸಂಭ್ರಮ, ಕರುಣೆ, ನೋವು– ಹೀಗೆ ವಸ್ತುವಿಗೆ ತಕ್ಕ ಭಾವಾಭಿನಯ ಹಾಡುಗಳ ಶೈಲಿಯಲ್ಲಿ ಹೊರಹೊಮ್ಮುತ್ತದೆ.

ಒಮ್ಮೆ ಮೈಸೂರಿಗೆ ತಾಳ ಪೇಟಿ, ತಂಬೂರಿ ಸಮೇತ ಹೋದವರು ಕುವೆಂಪು ಅವರ ಮನೆಗೆ ಹೋಗಿ 'ಬಾರಿಸು ಕನ್ನಡ ಡಿಂಡಿಮವ' ಹಾಡಲು ಶುರು ಮಾಡಿದರು. ಕವಿ ಕುವೆಂಪುಗೆ ಹಾಡು ಕೇಳಿ ಆನಂದ, ಸಂಭ್ರಮ. ಕವಿತೆಗೆ ಶ್ರವಣದ ಭಾವ, ಅಭಿನಯದ ರೀತಿ ತುಂಬಿ ಬಂದಾಗ ಕುವೆಂಪು ಹೇಳಿದರು, "ಬಾಳಪ್ಪ, ಸಾಕ್ಷಾತ್ ಮಹಾದೇವ ಹಾಡಿದಂತಾಯಿತು".

ಬೇಂದ್ರೆ, ಕುವೆಂಪು, ಬೆಟಗೇರಿ ಕೃಷ್ಣಶರ್ಮ, ಜನಪದ ಹಾಡುಗಳು– ಜನರ ಮನಸ್ಸಿನಲ್ಲಿ ಮತ್ತೆ ಮತ್ತೆ ರಿಂಗಣಗೊಡುವಂತೆ ಮಾಡುವಲ್ಲಿ ಬಾಳಪ್ಪನವರ ಪಾಲು ದೊಡ್ಡದು. ತಮ್ಮ ಹಾಡಿನ ಹಿಂದಿನ ತಾತ್ವಿಕತೆ ಬಾಳಪ್ಪನವರಿಗೆ ಬಹಳ ಸರಳ, ಆದರೆ ಅಷ್ಟೇ ಭಾವನಾತ್ಮಕವಾದದ್ದು. 'ಜನರ ಮಧ್ಯೆ ಬಾಳಿದರೆ ಅವರ ಮಟ್ಟ ಅಥವಾ ಅವರ ಬೇಕು ಬೇಡ ತಿಳಿಯುತ್ತದೆ. ಆದಕ್ಕೆ ತಕ್ಕಂತೆ ಸಾಹಿತ್ಯ ಸಂಗೀತ ಕೊಡಲು ಸಾಧ್ಯವಾಗುತ್ತದೆ. ಇಲ್ಲವಾದರೆ ನೀರಿಳಿಯದ ಗಂಟಲಿನಲ್ಲಿ ಕಡುಬು ತುರುಕಿದಂತಾಗುತ್ತದೆ' ಎಂದು ಅವರು ವಿವರಿಸುತ್ತಾರೆ.

ಹುಟ್ಟಾ ಜನಪದಕ್ಕೆ ಪ್ರತೀಕವಾದ ಬಾಳಪ್ಪನವರ ಹಾಡುಗಳನ್ನು, ಆ ಧಾಟಿಯ ವಿಶಿಷ್ಟತೆಯನ್ನು ಸಂಗ್ರಹಿಸಿ ಒಂದೆಡೆಗೆ ಜೋಡಿಸುವ ಕೆಲಸವನ್ನು ಜನಪದ ಅಕಾಡೆಮಿಗಳಾಗಲೀ, ವಿಶ್ವವಿದ್ಯಾಲಯಗಳಾಗಲೀ ಮಾಡಬೇಕಿದೆ.



# ಮಲ್ಲಿಕಾರ್ಜುನ ಮನಸೂರ

ಸದಾನಂದ ಕನವಳ್ಳಿ

ಮಲ್ಲಿಕಾರ್ಜುನ ಮನಸೂರ ಭಾರತದ ಒಬ್ಬ ಶ್ರೇಷ್ಠ ಗಾಯಕರು. ಕರ್ನಾಟಕದ ಸುಪುತ್ರ. ಅವರ ಪ್ರತಿಭೆಗೆ ಸಂದ ಗೌರವಗಳು ಹತ್ತು ಹಲವು. ಕರ್ನಾಟಕ ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್, ವಿಶ್ವಭಾರತಿ (ಶಾಂತಿನಿಕೇತನ)ಯ ದೇಶಿಕೋತ್ತಮ, ಪದ್ಮವಿಭೂಷಣ, ಪ್ರತಿಷ್ಠಿತ ಕಾಳಿದಾಸ ಸಮ್ಮಾನ ಇವುಗಳಲ್ಲಿ ಸೇರಿವೆ. ೧೯೯೧ ರಲ್ಲಿ ಪದ್ಮವಿಭೂಷಣ ಪ್ರಶಸ್ತಿ ಹಾಗೂ ಪ್ರಸಿದ್ಧ ಸರೋದವಾದಕ ಹಾಫಿಜ ಅಲಿಖಾನ ಪ್ರಶಸ್ತಿ. ಇಂದು ಮಲ್ಲಿಕಾರ್ಜುನ ಮನಸೂರ ರಾಷ್ಟ್ರಮಾನ್ಯರು.

ಮನಸೂರ, ಧಾರವಾಡದಿಂದ ಐದು ಮೈಲು ಪಶ್ಚಿಮಕ್ಕಿರುವ ಚಿಕ್ಕ ಹಳ್ಳಿ. ಅಲ್ಲಿ ಡಿಸೆಂಬರ ೩೧, ೧೯೧೦ ರಂದು ಮಲ್ಲಿಕಾರ್ಜುನನ ಜನನ. ತಂದೆ ಭೀಮರಾಯಪ್ಪರಿಗೆ ಸಂಗೀತದಲ್ಲಿ ಆಸಕ್ತಿ. ದೊಡ್ಡಾಟ ಪ್ರದರ್ಶನಗಳ ಏರ್ಪಾಟು. ತಾಯಿ ನೀಲಮ್ಮ ಹಾಡುತ್ತಿದ್ದ ಬೀಸುವ ಪದಗಳು, ಜೋಗುಳಗಳು, ಭಜನೆಗಳು ಬಾಲಕ ಮಲ್ಲಿಕಾರ್ಜುನನಲ್ಲಿ ಸಂಗೀತದ ಬೀಜ ನೆಟ್ಟವು.

ತಂದೆ ಮಲ್ಲಿಕಾರ್ಜುನನನ್ನು ಶಾಲೆ ಕಲಿಯಲೆಂದು ಧಾರವಾಡದಲ್ಲಿ ಅವನ ಮಾತಾಮಹ ಅನಾಡ ಚನವೀರಪ್ಪನವರ ಮನೆಯಲ್ಲಿ ಒಯ್ದಿಟ್ಟರು. ಆದರೆ, ಈ ಮರಿಕೋಗಿಲೆಗೆ ಶಾಲೆಯ ಶುಷ್ಕ ಪಾಠ ರುಚಿಸುವುದೆಂತು? ಧಾರವಾಡದಲ್ಲಿ ಬೀಡು ಬಿಟ್ಟಿದ್ದ ವಾಮನರಾವ ಮಾಸ್ತರರ "ವಿಶ್ವಗುಣಾದರ್ಶ ನಾಟಕ ಕಂಪನಿ"ಗೆ ಓಟ. ಅಲ್ಲಿ ಆಗಲೆ ಅಣ್ಣ ಬಸವರಾಜ ನಟನಾಗಿದ್ದ. ಬೇಡವೆಂದರೂ ತಮ್ಮ ಬಿಡ. ಕಂಪನಿಯಲ್ಲಿ ಪ್ರವೇಶ ದೊರೆತು ಮಲ್ಲಿಕಾರ್ಜುನ ಕೃಷ್ಣ, ಪ್ರಹ್ಲಾದ, ಧ್ರುವ ಮೊದಲಾದ ಬಾಲಪಾತ್ರಗಳಲ್ಲಿ ಅಭಿನಯ, ಹಾಡುಗಳಿಂದ ಪ್ರೇಕ್ಷಕರ ಮೆಚ್ಚಿಗೆ ಗಳಿಸಿದ.

ವಾಮನರಾವ ಮಾಸ್ತರರ ಕಂಪನಿ ಬಾಗಲಕೋಟೆಯಲ್ಲಿ ಕ್ಯಾಂಪ್ ಮಾಡಿತ್ತು. ಒಂದು ರಾತ್ರಿ ನೀಲಕಂಠಬುವಾ ಮಿರಜಕರ ನಾಟಕ ನೋಡಲು ಬಂದರು. ಮಲ್ಲಿಕಾರ್ಜುನ ಹಾಡು ಕೇಳಿದರು, ಮೆಚ್ಚಿದರು, ತಮ್ಮೊಂದಿಗೆ ಮಿರಜಿಗೆ ಕರೆದೊಯ್ದರು. ತಮ್ಮ ಮನೆಯಲ್ಲಿಯೆ ಇಟ್ಟುಕೊಂಡು ಸು. ೧೯೨೧ ರಿಂದ ೧೯೨೭ ರವರೆಗೆ ೬ ವರ್ಷ ವಿದ್ಯೆ ಧಾರೆಯೆರೆದರು. ನೀಲಕಂಠಬುವಾ ಗ್ವಾಲಿಯರ ಘರಾಣೆಯ ಬಾಳಕೃಷ್ಣಬುವಾ ಈಚಲ ಕರಂಜಿಕರರ ಶಿಷ್ಯರು. ಅವರದು ಮಧುರ ಕಂಠ, ಅಸಿಮ ವಿದ್ವತ್ತು, ಒಂದೊಂದು ರಾಗದಲ್ಲಿ ೩೦–೩೫ ಚೀಜು ಹಾಡಬಲ್ಲ ಸಾಮರ್ಥ್ಯ.

ಬೆಳಿಗ್ಗೆ ೪ ಘಂಟೆಗೆ ಪಾಠ ಆರಂಭ. ಎರಡು ತಾಸು ಸ್ವರ, ಅಲಂಕಾರಗಳ ಅಭ್ಯಾಸ. ಆಮೇಲೆ ಛೋಟಾ ಖಯಾಲ. ಕ್ರಮೇಣ ಬಡಾ ಖಯಾಲ ಮತ್ತು ತಾಲದರ್ಶನ. ಸಂಜೆಗೆ ಪುನಃ ಅಭ್ಯಾಸ. ಹೀಗೆ ಆರು ವರ್ಷ ಸತತ ಪರಿಶ್ರಮ. ಬಿಹಾಗ, ಮಾಲಕಂಸ, ಭೂಪ, ಕಾಮೋದ, ತೋಡಿ, ಹಮ್ಮೀರ, ದರಬಾರಿ, ಯಮನ್, ಪೂರಿಯಾ, ಮಾರವಾ, ಅಲ್ಲೈಯಾ ಬಿಲಾವಲ್, ಲಲಿತ ಮುಂತಾದ ನಲುವತ್ತು ರಾಗಗಳ ಮೇಲೆ ಪ್ರಭುತ್ವ. ಭಿನ್ನ ಭಿನ್ನ ರಾಗಗಳಲ್ಲಿ ಹಲವಾರು ಅಸ್ಥಾಯಿಗಳನ್ನು ಕಲಿಸಿದುದರಿಂದ ಗಮಕ, ಮೀರಿಡ, ಖಟ್ಕಾ ಮೊದಲಾದ ಅಂಶಗಳು ಕರಗತ. ಮಲ್ಲಿಕಾರ್ಜುನ ಮನಸೂರ ಧಾರವಾಡಕ್ಕೆ ಮರಳಿದರು. ಧ್ವನಿ ಒಡೆಯಿತು. ಇದು ಹದಿಹರೆಯದ ಸಾಮಾನ್ಯ ಪ್ರಕ್ರಿಯೆ. ಮಲ್ಲಿಕಾರ್ಜುನ ಮನಸೂರ ರಾತ್ರಿ ಹತ್ತರಿಂದ ಬೆಳಗಿನ ಆರರವರೆಗೆ ರಿಯಾಜ ಮಾಡಿದರು. ಮೂರು ವರ್ಷಗಳ ಪರಿಶ್ರಮದ ಫಲವಾಗಿ ಧ್ವನಿಯಲ್ಲಿ ಸ್ಥಿರತೆ, ಕಸುವು, ಹೊಸ ಮೆರಗು ಪ್ರಾಪ್ತವಾದವು.

ಅಲ್ಲಲ್ಲಿ ಕಚೇರಿಗಳು ಜರುಗಿ ಮೆಚ್ಚುಗೆ ಪ್ರಾಪ್ತವಾಯಿತಾದರೂ ಉದರನಿರ್ವಹಣೆಗೆ ಸಾಲುವಷ್ಟು ಸಂಪಾದನೆಯಾಗಲಿಲ್ಲ. ಈಗ ಮಲ್ಲಿಕಾರ್ಜುನ ಮನಸೂರರಿಗೆ ಮದುವೆ ಬೇರೆ ಆಗಿತ್ತು. ಧಾರವಾಡದಲ್ಲಿ ಸಂಸಾರ ಹೂಡಿದರು. ಮುಂದೆ ಗುರು ನೀಲಕಂಠಬುವಾರನ್ನು ಧಾರವಾಡಕ್ಕೆ ಕರೆಯಿಸಿಕೊಂಡು ಸಂಗೀತ ಸಾಧನೆಯನ್ನು ಮುಂದುವರಿಸಿದರು. ಹೀಗೆ ಒಂದು ವರ್ಷ ಸಂಸಾರ ರಥ ಮತ್ತು ಸಂಗೀತ ರಥ ಹೇಗೂ ಉರುಳಿದವು. ಆದರೆ ಸಂಸಾರನಿರ್ವಹಣೆ ಕಷ್ಟಕರವಾಗುತ್ತ ಸಾಗಿತು. ಸಂಗೀತವನ್ನೆ ಅವಲಂಬಿಸುವುದೆ ಮತ್ತೆ ರಂಗಭೂಮಿಯನ್ನು ಆಶ್ರಯಿಸುವುದೆ ಎಂಬ ಸಂದಿಗ್ಧ ಎದುರಾಯಿತು. ಕೆಲಕಾಲ ರಂಗಭೂಮಿ ಸೇರಿದರು. ಸಂಗೀತ, ಸಂಭಾಷಣೆ, ತಂತ್ರಗಳಿಂದ ಪರಿಪೂರ್ಣವಾಗುವಂತೆ "ವೀರ ಅಭಿಮನ್ಯು" ಎಂಬ ಹೊಸ ನಾಟಕವನ್ನು ರಂಗವೇರಿಸುವ ಸಿದ್ಧತೆ ನಡೆದಿತ್ತು. ಮಲ್ಲಿಕಾರ್ಜುನ ಮನಸೂರ ಈಗ ಪ್ರಧಾನ ನಟ, ಸಂಗೀತ ನಿರ್ದೇಶಕ. ಶಕುನಿಯ ಕುಟಿಲ ಪಾತ್ರದ ಯಶಸ್ವಿ ನಿರ್ವಹಣೆ. ದೇಸಕಾರ ರಾಗದಲ್ಲಿ "ರಣರಂಗದಿ ವೀರರಾಗಿ" ಮತ್ತು ಕಾಮೋದ ರಾಗದಲ್ಲಿ "ಅರಿಯು ಪ್ರಬಲನಾಗಿ ದ್ವಾರದಿ ಬಂದು ನಿಂತಿರುವ" ಹಾಡುಗಳು ಅರ್ಧರ್ಧ

ಘಂಟೆ ಸಾಗುತ್ತಿದ್ದವು. ಒನ್ಸ್‌ಮೋರ್‌ಗಳ ಸುರಿಮಳೆ. ನೀಲಕಂಠಬುವಾದಲ್ಲಿ ಸಂಗೀತ ಸಾಧನೆಗೈಯುತ್ತಿದ್ದಾರೆಂಬ ವಾಹಿನಿ ಹಬ್ಬಿತ್ತು. ಹುಬ್ಬಳ್ಳಿಯೊಂದರಲ್ಲೇ "ವೀರ ಅಭಿಮನ್ಯು" ಎಂಭತ್ತು ಪ್ರಯೋಗಗಳನ್ನು ಕಂಡು ಕನ್ನಡ ರಂಗಭೂಮಿ ಇತಿಹಾಸದಲ್ಲಿ ಮೈಲುಗಲ್ಲಾಯಿತು. ಈ ಶ್ರೇಯಸ್ಸಿನಲ್ಲಿ ಮನಸೂರರದೂ ಗಣನೀಯ ಪಾಲು. ಕಂಪನಿ ಹುಬ್ಬಳ್ಳಿಯಿಂದ ಧಾರವಾಡಕ್ಕೆ ಸ್ಥಳಾಂತರಗೊಂಡಾಗ ಮಲ್ಲಿಕಾರ್ಜುನ ಮನಸೂರ ರಂಗ ಕೈಂಕರ್ಯ ಬಿಟ್ಟುಕೊಟ್ಟು ಸಂಗೀತದ ಮೇಲೆ ಗಮನ ಕೇಂದ್ರೀಕರಿಸಿದರು. ಆದರದು ಅಲ್ಪ ಕಾಲ.

ಇದೇ ವೇಳೆಗೆ ಈರಾಶಿ ಭರಮಪ್ಪ ಸಾಕಷ್ಟು ಬಂಡವಾಳ ಹಾಕಿ ಮರಾಠಿಯ ಬಾಲಗಂಧರ್ವರ ನಾಟಕ ಕಂಪನಿ ಮಾದರಿಯಲ್ಲಿ ಆರಂಭಿಸಿದ್ದರು. ಭರ್ಜರಿ ಡ್ರೆಸ್ಸು, ಸೀನರಿಗಳು, ಸಾರಂಗಿ ವಾದಕರು. ಬಸವರಾಜ ಮನಸೂರ ನಾಯಕ, ಗೋಹರಬಾಯಿ ಕರ್ನಾಟಕಿ ನಾಯಕಿ ಪಾತ್ರಗಳಲ್ಲಿ. ಬಾಲಗಂಧರ್ವ, ಮಾಸ್ಟರ ಕೃಷ್ಣಾರಂಥ ಗಾಯಕರ ಕೊರತೆಯಿತ್ತು. ಭರಮಪ್ಪನವರ ಗಮನ ಸಹಜವಾಗಿಯೆ ಮಲ್ಲಿಕಾರ್ಜುನ ಮನಸೂರರತ್ತ ಹರಿಯಿತು. ಧಾರವಾಡಕ್ಕೆ ಹೋಗಿ ಅರಿಕೆ ಮಾಡಿಕೊಂಡರು. ಮನಸೂರರು ತಮ್ಮ ಸಂಬಳದೊಂದಿಗೆ ತಮ್ಮ ಗುರು ನೀಲಕಂಠಬುವಾರಿಗೆ ಗೌರವಧನವಿತ್ತು ಅವರೂ ತಮ್ಮೊಂದಿಗಿದ್ದು ಸಂಗೀತ ಸಾಧನೆಗೆ ಅವಕಾಶ ಕಲ್ಪಿಸಿಕೊಟ್ಟರೆ ಮಾತ್ರ ಒಪ್ಪುವುದಾಗಿ ಹೇಳಿದರು. ಭರಮಪ್ಪ ಸಂತೋಷದಿಂದ ಒಪ್ಪಿದರು. ಈರಾಶಿ ಭರಮಪ್ಪನವರ ವಾಣೀವಿಲಾಸ ನಾಟಕ ಮಂಡಳಿ ಕನ್ನಡ ರಂಗಭೂಮಿ ಕಂಡಿರದ ವೈಭವದ ಪ್ರಯೋಗಗಳನ್ನು ನಡೆಸಿತು. "ವತ್ಸಪ್ರಧಾನ" ನಾಟಕದಲ್ಲಿ ಮಲ್ಲಿಕಾರ್ಜುನ ಮನಸೂರ ಅವರದು ಮಾಧವಾಚಾರ್ಯರ ಪಾತ್ರ "ಕಿತ್ತೂರ ರುದ್ರಮ್ಮ" ನಾಟಕದಲ್ಲಿ ದಿಲಾವರ ಖಾನರ ಪಾತ್ರ. ವಾಣೀವಿಲಾಸ ಕಂಪನಿ ಮಿಂಚಿನಂತೆ ಮಿರುಗಿ ಮಿಂಚಿನಂತೆಯೆ ಮಾಯವಾಯಿತು. ಅಲ್ಪ ಕಾಲದಲ್ಲಿಯೆ ಅಂಕಪರದೆಗೆ ಬೆಂಕಿ ತಗಲಿ ಸುಟ್ಟು ಬೂದಿಯಾಯಿತು. ಅದಕ್ಕೂ ಮೊದಲೆ ಮಲ್ಲಿಕಾರ್ಜುನ ಮನಸೂರ ಸಂಗೀತ ಸಾಧನೆಯನ್ನು ಮುಂದುವರಿಸಲು ನಿಶ್ಚಯಿಸಿ ಕಂಪನಿಯಿಂದ ತೆರಳಿದ್ದರು.

ಈಗ ಎಂಥ ದೊಡ್ಡ ಸಭೆಯಲ್ಲಾದರೂ ಬೈಠಕ್ ಮಾಡುವ ಆತ್ಮವಿಶ್ವಾಸವನ್ನು ಮಲ್ಲಿಕಾರ್ಜುನ ಮನಸೂರ ಗಳಿಸಿಕೊಂಡಿದ್ದರು. ಅನೇಕ ಕಡೆಗೆ ಬೈಠಕುಗಳು ಜರುಗಿ ಕೀರ್ತಿ ಪಸರಿಸಿತು. ಅದು ಎಚ್.ಎಂ.ವಿ. ಕಂಪನಿಗೂ ತಲುಪಿತು. ೧೯೩೩ ರಲ್ಲಿ ಎಚ್.ಎಂ.ವಿ. ಮಲ್ಲಿಕಾರ್ಜುನ ಮನಸೂರರನ್ನು ಧ್ವನಿಮುದ್ರಣಕ್ಕೆ ಆಹ್ವಾನಿಸಿತು. ಒಂದರ ಮೇಲೊಂದರಂತೆ ಅಡಾಣಾ, ಗೌಡ ಮಲ್ಹಾರ, ಶಂಕರಾ, ಮಾಲಕಂಸ, ಕಾಲಿಂಗಡಾ, ಲಲಿತಾಗೌರಿ, ತೋಡಿ ರಾಗಗಳ ಧ್ವನಿಮುದ್ರಿಕೆಗಳು ಹೊರಬಂದವು. ಬಿಸಿ ಕೇಕಿನಂತೆ ಮಾರಾಟವಾದವು. ಇವುಗಳಲ್ಲದೆ ನಾಟ್ಯಗೀತ, ಭಾವಗೀತ, ಠುಮರಿಗಳ ಧ್ವನಿಮುದ್ರಿಕೆಗಳೂ ಹೊರಬಂದವು. ಶಿಶುನಾಳ ಶರೀಫರ "ತೇರೆಯನೆಳೆಯುತಾರ ತಂಗಿ" ಯಂತೂ ಎಲ್ಲರ ನಾಲಗೆಯ ಮೇಲೆ ನಲಿಯಿತು.

ಗಾನ ಮುದ್ರಿಕೆಗಳ ಜನಪ್ರಿಯತೆಯನ್ನು ಬೆಂಬತ್ತಿ ಮುಂಬಯಿ ಆಕಾಶವಾಣಿಯಿಂದ ಆಮಂತ್ರಣ ಬಂತು. ನಂತರ ಬೇರೆ ಬೇರೆ ಆಕಾಶವಾಣಿ ಕೇಂದ್ರಗಳಿಂದ, ಸಂಗೀತ ಸಂಸ್ಥೆಗಳಿಂದ ಕರೆ ಬಂದವು. ಸಿಂಧದಲ್ಲಿರುವ ಶಿಕಾರಿಪುರದ ಬೃಹತ್ ಸಂಗೀತ ಸಮ್ಮೇಳನಕ್ಕೂ ಆಮಂತ್ರಣ ಬಂತು. ಅಲ್ಲಿ ಭಾಗವಹಿಸಿದ್ದ ಸಂಗೀತ ದಿಗ್ಗಜಗಳ ಮಧ್ಯೆ ತಮ್ಮ ಪ್ರತಿಭೆ ಮೆರೆಸಿ ಕನ್ನಡ ನಾಡಿಗೆ ಕೀರ್ತಿ ತಂದರು. ೧೯೩೪ರಲ್ಲಿ ಮುಂಬಯಿಯಲ್ಲಿ ಗಣೇಶೋತ್ಸವದಲ್ಲಿ ಒಂದೂ ದಿನ ಬಿಡದೆ ೧೦ ಕಾರ್ಯಕ್ರಮಗಳನ್ನು ನೀಡಿದರು. ಬೇರೆಯವರಾಗಿದ್ದರೆ ಇಷ್ಟು ಯಶಸ್ಸಿನಿಂದ ಸಂತೃಪ್ತರಾಗಿ ಬಿಡುತ್ತಿದ್ದರು. ಆದರೆ, ಮಲ್ಲಿಕಾಜುನನ ಮನಸೂರರಿಗೆ ಇನ್ನೂ ಕಲಿಯುವ ತಹತಹಿಕೆ. ಸಂಗೀತಸಾಗರದಲ್ಲಿ ಮುಳುಗಿ ಮುತ್ತುರತ್ನಗಳನ್ನು ಮೇಲೆತ್ತಿಕೊಂಡು ಬರುವಾಸೆ.

ಮುಂಬಯಿ ಅಂದು ಸಂಗೀತ ಚಟುವಟಿಕೆಯ ಕೇಂದ್ರವಾಗಿತ್ತು. ತಮ್ಮ ಸಾಧನೆಗೆ ಅನುಕೂಲವಾಗಲೆಂದು ಮಲ್ಲಿಕಾರ್ಜುನ ಮನಸೂರ ಮುಂಬಯಿಯಲ್ಲಿ ವಾಸ್ತವ್ಯ ಹೂಡಿದರು. ಆರ್ಥಿಕ ತೊಂದರೆ ಹೇಳತೀರದ್ದು. ಎಚ್.ಎಂ.ವ್ಹಿ.ಯಲ್ಲಿ ಕಾರಕೂನನಾಗಿದ್ದ ತಾಯಕರ ಎಂಬ ಮಿತ್ರನ ಕೋಣೆಯಲ್ಲಿ ವಸತಿ. "ಮಾಧವಾಶ್ರಮ"ದಲ್ಲಿ ಊಟ. ಮಾಲಕರ ಔದಾರ್ಯದಿಂದ ಉದ್ರಿ. ಕಾರ್ಯಕ್ರಮದಿಂದ ಹಣ ಬಂದಾಗ ಉದ್ರಿ ತೀರಿಸುತ್ತಿದ್ದರು. ಹೀಗಿರುತ್ತ ೧೯೩೫ರ ಆರಂಭದಲ್ಲಿ ಒಂದು ಮಹತ್ತರ ಘಟನೆ ಜರುಗಿತು. ಒಂದು ಸಂಜೆ ಮಲ್ಲಿಕಾರ್ಜುನ ಮನಸೂರ ತಮ್ಮ ಮಿತ್ರ, "ಸಂತ ತುಕಾರಾಮ", "ತುಳಸೀದಾಸ" ಚಲನಚಿತ್ರಗಳಲ್ಲಿ ಅಭಿನಯಿಸಿ, ಅಭಂಗಗಳನ್ನು ಹಾಡಿ ಪ್ರಸಿದ್ಧಿ ಗಳಿಸಿದ್ದ ವಿಷ್ಣುಪಂತ ಪಾಗನಿಸರ ಅಂಗಡಿಯಲ್ಲಿ ಕುಳಿತುಕೊಂಡಿದ್ದರು. ಅಲ್ಲಿಗೆ ಮಂಜಿಖಾನರು ಆಗಮಿಸಿದರು. ಅವರು ಸಂಗೀತಸಾಮ್ರಾಟ ಅಲ್ಲಾದಿಯಾಖಾನರ ಪುತ್ರ. ಜೈಪುರ ಘರಾಣೆಯ ಔರಸ ಯುವರಾಜ.

ಮಂಜಿಖಾನರನ್ನು ಚನ್ನಾಗಿ ಬಲ್ಲ ವಿಷ್ಣುಪಂತ ಪಾಗನೀಸ ಮಲ್ಲಿಕಾರ್ಜುನ ಮನಸೂರರನ್ನು ಶಿಷ್ಯರನ್ನಾಗಿ ಸ್ವೀಕರಿಸಲು ಅರಿಕೆ ಮಾಡಿದರು. ಮಂಜಿಖಾನರು ಮನಸೂರರ ಧ್ವನಿಮುದ್ರಿಕೆ ಕೇಳಬಯಸಿದರು. ವಿಷ್ಣುಪಂತ ಅಲ್ಲಿಯೆ ಬಳಿಯಿದ್ದ ಗ್ರಾಮೊಫೋನು ಅಂಗಡಿಗೆ ಕರೆದೊಯ್ದು ಗೌಡ ಮಲ್ಹಾರ ಅಥಾಣಾ ಕೇಳಿಸಿದರು. ಮನಸೂರರ ಫಿರಟ್ ಮಂಜಿಖಾನರನ್ನು ಸಂತುಷ್ಟಗೊಳಿಸಿತು. ಶಿಷ್ಯರನ್ನಾಗಿ ಸ್ವೀಕರಿಸಿದರು. ವಾರಿಧಿ ಮೈದೆರೆದಂತಾಯಿತು. ಕಲಿಸಿದ್ದು ಒಂದೂವರೆ ವರ್ಷ. ಆದರೆ, "ಖಜಾನೆಯ ಕೀಲಿಕೈ ಕೊಟ್ಟಿರುವೆ. ಬೇಕಾದಷ್ಟು ಬಾಚಿಕೊ" ಎನ್ನುವಂತಿತ್ತು ಗುರುಗಳ ಔದಾರ್ಯ. ಹತ್ತು ವರ್ಷಗಳಲ್ಲಿ ಕಲಿಯಬಹುದಾದಷ್ಟನ್ನು ಒಂದೇ ವರ್ಷದಲ್ಲಿ ಸಾಧಿಸಿದ್ದು ಶಿಷ್ಯನ ಸಾಹಸ, ಪರಿಶ್ರಮ. ತೋಡಿ, ಅಸಾವರಿ, ಭೈರವ, ಶಿಮಮತ್ ಭೈರವ, ಲಲಿತ, ದೇಸಕಾರ, ಗೌಡ ಸಾರಂಗ, ಶುದ್ಧ ಸಾರಂಗ, ನಂದ, ಬಿಹಾಗಡಾ, ಪೂರಿಯಾ, ಮಾರವಾ, ಮಾಲಕಂಸ, ಭೀಮಪಲಾಸ, ನಟಬಿಹಾಗ,

ಸಾವನಿ, ಜೈತ ಕಲ್ಯಾಣ ಮುಂತಾದ ರಾಗಗಳು ಕರಗತ. ಅಭ್ಯಾಸದ ದಿನಗಳುದ್ದಕ್ಕೂ ಅತ್ಯಂತ ಆರ್ಥಿಕ ಅಡಚಣೆ. ಅದನ್ನು ಲೆಕ್ಕಿಸದೆ ಗುರಿಯತ್ತ ನೇರವಾಗಿ ನಡೆದುದು ಮನಸೂರರ ಹಿರಿಮೆ.

೧೯೩೭ರಲ್ಲಿ ಮಂಜಿಖಾನರು ಪೈಗಂಬರವಾಸಿಗಳಾದರು. ದಿಕ್ಕು ತೋಚದಾಯಿತು. ತಮ್ಮ ಇನ್ನೊಬ್ಬ ಮಗ ಬುರ್ಜಿಖಾನರಲ್ಲಿ ವಿದ್ಯಾರ್ಜನೆ ಮುಂದುವರಿಸುವಂತೆ ಅಲ್ಲಾದಿಯಾಖಾನ ಆಶೀರ್ವದಿಸಿದರು. ಬುರ್ಜಿಖಾನ ಕೊಲ್ಹಾಪುರದಲ್ಲಿದ್ದರು. ಮೂರು ನಾಲ್ಕು ತಿಂಗಳು ಕೊಲ್ಹಾಪುರದಲ್ಲಿ, ಒಂದು ತಿಂಗಳು ಧಾರವಾಡಕ್ಕೆ, ಹೀಗೆ ೧೯೩೭ ರಿಂದ ೧೯೫೦ ರವರೆಗೆ ನಿರಂತರವಾಗಿ ಮಲ್ಲಿಕಾರ್ಜುನ ಮನಸೂರರ ಸಂಗೀತಯಾತ್ರೆ ಸಾಗಿತು. ಇನ್ನೂ ಕಲಿಯುವಾಸೆ. ಆದರೆ, ಬುರ್ಜಿಖಾನ ೧೯೫೦ರಲ್ಲಿ ತೀರಿಕೊಂಡರು. ಖೋಕರ, ಬಸಂತಿ ಕೇದಾರ, ಬಸಂತಿ ಕಾನಡಾ, ಮಾಲವಿ, ಬಿಹಾರಿ, ಶುದ್ಧನಟ ರಾಗಗಳ ಸಿದ್ಧಿ ಮನಸೂರರಿಗೆ ಪ್ರಾಪ್ತವಾಯಿತು. ಮಂಜಿಖಾನರಿಂದ ಸಂಕೀರ್ಣ, ಸಮ್ಮಿಶ್ರ ಸ್ವರಗಳ ಅನಂತ ವೈವಿಧ್ಯವನ್ನು ಕಲಿತಿದ್ದರೆ ಬುರ್ಜಿಖಾನರಿಂದ ಚುಟುಕು ತಾನುಗಳ ಕುಸುರಿನ ಕೌಶಲವನ್ನು ಕಲಿತರು. ಇಂದು ಮಲ್ಲಿಕಾರ್ಜುನ ಮನಸೂರ ಜೈಪುರ ಘರಾಣೆಯ ಸರ್ವೋನ್ನತ ಪ್ರತಿನಿಧಿ. ಸಂಗೀತಗಾರರ ಸಂಗೀತಗಾರರೆಂದೇ ಪ್ರಖ್ಯಾತರು. ಶೈಲಿಯ ಮೌಲಿಕತೆ, ವಿಶಿಷ್ಟ ರಾಗಗಳ ಆಯ್ಕೆ, ಭಾವಾಭಿವ್ಯಕ್ತಿ ಸಾಮರ್ಥ್ಯ, ಪರಿಶುದ್ಧತೆ, ಅದಕ್ಕೆ ಚ್ಯುತಿ ಉಂಟುಮಾಡದ ಸೌಂದರ್ಯ ನಿರ್ಮಿತಿ, ಸೂಕ್ಷ್ಮಾನುಸೂಕ್ಷ್ಮ ತಾನುಗಳ ಸಾಂದ್ರತೆ, ಧ್ವನಿಯ ಉನ್ಮುಕ್ತತೆ, ನಿರಂತರ ಸೃಜನಶೀಲತೆ, ಭಾವಾತ್ಮಕ ಬೌದ್ಧಿಕ ಆಧ್ಯಾತ್ಮಿಕ ಸಮೃದ್ಧಿಗಳ ಸಮಾವೇಶ, ಇವೆಲ್ಲವುಗಳ ಜೈವಿಕ ಏಕತೆ ಮಲ್ಲಿಕಾರ್ಜುನ ಮನಸೂರರ ಗಾಯನ.

ಅ.ನ.ಕೃ. ಮಲ್ಲಿಕಾರ್ಜುನ ಮನಸೂರರ ಅಭಿಮಾನಿ. ದಾಸರ ಪದಗಳಂತೆ ಶಿವಶರಣರ ವಚನಗಳೂ ಜನಸಾಮಾನ್ಯರ ಹೃದಯ ತಲುಪಿ ವಚನಸಂಸ್ಕೃತಿ ಹಬ್ಬಬೇಕೆಂಬುದು ಅವರ ಬಯಕೆಯಾಗಿತ್ತು. ಮಲ್ಲಿಕಾರ್ಜುನ ಮನಸೂರರಂತಹ ಉನ್ನತ ಗಾಯಕ ಅವುಗಳ ವಾಹಕರಾಗಬೇಕೆಂಬುದು ಅವರ ಆಕಾಂಕ್ಷೆಯಾಗಿತ್ತು. ಮೊದಲ ಬಾರಿಗೆ ಅ.ನ.ಕೃ. ವಿಷಯ ಪ್ರಸ್ತಾಪಿಸಿದಾಗ ಮಲ್ಲಿಕಾರ್ಜುನ ಮನಸೂರ “ಅವನ್ನು ಹೇಗೆ ಶಾಸ್ತ್ರೀಯ ಸಂಗೀತಕ್ಕೆ ಅಳವಡಿಸಿ ಹಾಡೋದ್ರಿ? ಅವೇನು ಚೀಜಲ್ಲ ಪಾಜಿಲ್ಲ. ಅವುಗಳಲ್ಲಿ ರಾಗವಿಲ್ಲ, ತಾಳವಿಲ್ಲ” ಎಂದು ನಕ್ಕುಬಿಟ್ಟರು. ಆದರೆ, ಅ.ನ.ಕೃ. ಅಷ್ಟು ಸುಲಭವಾಗಿ ತಮ್ಮ ಪಟ್ಟು ಬಿಟ್ಟಾರೆಯೆ? ಒಂದು ದಿನ ಧಾರವಾಡದ ಹತ್ತಿರವಿರುವ ಅತ್ತಿಕೊಳ್ಳಕ್ಕೆ ಇಬ್ಬರೂ ಸಂಜೆಯ ತಿರುಗಾಟ ಹೋಗಿದ್ದರು. ತಂಗಾಳಿ ಬೀಸುತ್ತಿತ್ತು. ಅ.ನ.ಕೃ. ಅಷ್ಟೊಂದು ಮಧುರವಲ್ಲದ ತಮ್ಮ ದನಿಯಲ್ಲಿ ಕರ್ನಾಟಕಿ ಶೈಲಿಯಲ್ಲಿ ಬಸವೇಶ್ವರರ “ವಚನದಲ್ಲಿ ನಾಮಾಮೃತ ತುಂಬಿ” ವಚನ ಹಾಡಿ ಅದನ್ನೇ ಹಿಂದುಸ್ತಾನಿ ಶೈಲಿಯಲ್ಲಿ ಹೇಗೆ ಹಾಡಬಹುದೆಂದು ತೋರಿಸಿದರು. ಮಲ್ಲಿಕಾರ್ಜುನ ಮನಸೂರ ತಕ್ಷಣ ಪ್ರತಿಕ್ರಿಯಿಸಿದರು

: "ಅದು ಹಾಂಗಲ್ರಿ. ಅದನ್ನು ಹೀಂಗ ಹಾಡಬೇಕು''. ಪೂರ್ತಿಯಾಗಿ ಹಾಡಿಯೇಬಿಟ್ಟರು. ಮಲ್ಲಿಕಾರ್ಜುನ ಮನಸೂರ ವಚನಗಾಯನಕ್ಕೆ ಅದು ನಾಂದಿಯಾಯಿತು. ವಚನಸಾಹಿತ್ಯ ವಿದ್ವಾಂಸರಾಗಿದ್ದ ಪ್ರೊ. ಶಿ.ಶಿ. ಬಸವನಾಳ ಈ ದಿಶೆಯಲ್ಲಿ ಮಲ್ಲಿಕಾರ್ಜುನ ಮನಸೂರರನ್ನು ಪ್ರೋತ್ಸಾಹಿಸಿದರು, ಮಾರ್ಗದರ್ಶನ ಮಾಡಿದರು.

ವಚನಗಾಯನ ಮನಸೂರರ ತಲೆಯಲ್ಲಿ ಗುಂಗೀಹುಳದಂತೆ ಗುಂಯ್ಗುಟ್ಟಿತು. ವಚನಗಳ ಅರ್ಥ, ಮಹತಿ ಅರಿಯುವುದು ಉಚಿತವೆಂದು ಭಾವಿಸಿದರು. ಮಿತ್ರ ಪ್ರೊ. ಬಸವನಾಳರ ಸಹಾಯ ಕೋರಿದರು. ಅವರು ಘಂಟೆಗಟ್ಟಲೆ ವಿವರಿಸಿದರು. ವಚನಗಳ ಅನುಭಾವ ಸಿರಿ ಮಲ್ಲಿಕಾರ್ಜುನ ಮನಸೂರ ಅವರ ಮೇಲೆ ಗಾಢ ಪ್ರಭಾವ ಬೀರಿತು. ಅವುಗಳ ಸಂಗೀತಸಿರಿ ಶೋಧಿಸಲುದ್ಯುಕ್ತರಾದರು. ಅವುಗಳ ಅರ್ಥ ಚ್ಯುತಿಗೊಳ್ಳದಂತೆ ಹಾಡಲು ಮೊದಲಿಟ್ಟರು. ಅವುಗಳನ್ನು ತಾಸುಗಟ್ಟಲೆ ತನ್ನಷ್ಟಕ್ಕೆ ತಾನೆ ಹಾಡುತ್ತ ಮೈಮರೆತ ಸಂದರ್ಭಗಳಿಗೆ ಲೆಕ್ಕವಿಲ್ಲ. ಮೊದಲು ಒಂದು ವಚನವನ್ನು ರಾಗದಲ್ಲಿ ಸಂಯೋಜಿಸುವರು, ಪ್ರೊ. ಬಸವನಾಳರ ಮುಂದೆ ಹಲವು ಬಾರಿ ಹಾಡಿ ತೋರಿಸುವರು, ಆಮೇಲೆ ಧಾರವಾಡದ ಮುರುಘಾಮಠದ ಮೃತ್ಯುಂಜಯ ಸ್ವಾಮಿಗಳ ಮುಂದೆ ಹಾಡಿ ಅವರ ಅಪ್ಪಣೆ ಪಡೆಯುವರು. ನಂತರ ಕಚೇರಿಗಳಲ್ಲಿ ಹಾಡುವರು. ಹೀಗೆ ಹಾಡುತ್ತ ಹಾಡುತ್ತ ಅವುಗಳೊಂದಿಗೆ ಭಾವನಾತ್ಮಕ ತಾದಾತ್ಮ್ಯ ಸಾಧಿಸಿದರು. ಮಲ್ಲಿಕಾರ್ಜುನ ಮನಸೂರ ಅನೇಕ ವಚನಗಳನ್ನು ಹಾಡಿದ್ದಾರೆ : ಭೀಮಪಲಾಸ ರಾಗದಲ್ಲಿ "ವಚನದಲ್ಲಿ ನಾಮಾಮೃತ ತುಂಬಿ'', ಕಲ್ಯಾಣ ರಾಗದಲ್ಲಿ "ನೀನೊಲಿದರೆ ಕೊರಡು ಕೊನರುವುದಯ್ಯಾ'', ಪಟದೀಪ ರಾಗದಲ್ಲಿ "ಕಳಬೇಡ, ಕೊಲಬೇಡ'', ದುರ್ಗಾ ರಾಗದಲ್ಲಿ "ಅಂದು ಇಂದು ಮತ್ತೊಂದೆನಬೇಡ''. ಇವೆಲ್ಲವುಗಳಲ್ಲದೆ ಇನ್ನೂ ಎಷ್ಟೋ ಬಸವೇಶ್ವರರ ವಚನಗಳನ್ನು ಹಾಡಿದ್ದಾರೆ. ಹಾಗೆಯೆ, ಅಲ್ಲಮಪ್ರಭು ಮತ್ತು ಅಕ್ಕಮಹಾದೇವಿಯ ವಚನಗಳು. ಪಾಡಿ ರಾಗದಲ್ಲಿ ಹಾಡಿದ ಮಹಾದೇವಿಯ "ಅಕ್ಕ ಕೇಳವ್ವ, ನಾನೊಂದು ಕನಸು ಕಂಡೆ'' ವಚನ ಕೇಳಿ ರಾಷ್ಟ್ರಕವಿ ಕುವೆಂಪು "ಇದನ್ನು ಕೇಳುತ್ತಿದ್ದಂತೆ ಹೊಸ ಹೊಸ ಅರ್ಥಲೋಕ ತೆರೆಯುತ್ತದಲ್ಲ!'' ಎಂದು ಉದ್ಗರಿಸಿದರು. ಇವೆಲ್ಲ ಧ್ವನಿಮುದ್ರಿಕೆ ರೂಪದಲ್ಲಿ ಹೊರಬಂದು ರಸಿಕರ ಮನಗಳಲ್ಲದೆ ಜನಸಾಮಾನ್ಯರ ಮನಗಳನ್ನು ಸೂರೆಗೊಂಡವು. ಈಗೀಗ ಮಲ್ಲಿಕಾರ್ಜುನ ಮನಸೂರ ತಮ್ಮ ಕಚೇರಿಯಲ್ಲಿ ಒಂದೆರಡು ವಚನ ಹಾಡದಿರುವುದಿಲ್ಲ. ಈ ಪರಂಪರೆಯನ್ನು ಉಳಿದ ಹಲವು ಗಾಯಕರೂ ಮುಂದುವರಿಸಿದ್ದಾರೆ. ೧೯೮೮ ರಲ್ಲಿ ಇಂದಿರಾ ಗಾಂಧಿಯ ನಾಲ್ಕನೆಯ ಪುಣ್ಯತಿಥಿ ಸಂದರ್ಭದಲ್ಲಿ ದಿಲ್ಲಿಯ ಶಕ್ತಿಸ್ಥಲದಲ್ಲಿ ಮಲ್ಲಿಕಾರ್ಜುನ ಮನಸೂರ ತಮ್ಮ ಕಚೇರಿಯನ್ನು "ಅಕ್ಕ ಕೇಳವ್ವ'' ಹಾಡುವುದರೊಂದಿಗೆ ಮುಕ್ತಾಯಗೊಳಿಸಿದರು. ಅದನ್ನು ದೂರದರ್ಶನ ರಾಷ್ಟ್ರೀಯ ಪ್ರಸಾರದಲ್ಲಿ ಸಜೀವ ಬಿತ್ತರಿಸಿದಾಗ ಕನ್ನಡಿಗರೆಲ್ಲ ಪುಳಕಿತಗೊಂಡರು. ವಚನಗಾಯನ ಕನ್ನಡ ಸಂಸ್ಕೃತಿಗೆ ಮಲ್ಲಿಕಾರ್ಜುನ ಮನಸೂರರ ಮಹತ್ವದ ಕೊಡುಗೆ.

ಅಪರೂಪದ ಕಲಾವಿದ

# ಕೆರೆಮನೆ ಮಹಾಬಲಹೆಗಡೆ

> ಯಕ್ಷಗಾನದ ಯಾವುದಾದರೂ ಒಂದೊಂದು ವಿಚಾರದಲ್ಲಿ ಪರಿಣತಿ ಪಡೆದವರಿದ್ದಾರೆ. ಆದರೆ ಮಹಾಬಲ ಹೆಗಡೆ ಯಾವುದೇ ಒಂದು ವಿಚಾರಕ್ಕೆ ಸೀಮಿತವಾದವರಲ್ಲ. ಅವರೊಬ್ಬ ಅಪರೂಪದ ಕಲಾವಿದ. ಇವರಿಗೆ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಬಂದ ಕಾರಣದಿಂದ ಈ ಲೇಖನ.

**ಹಿ.ಚಿ. ಬೋರಲಿಂಗಯ್ಯ**

ಕರಾವಳಿಯ ಸದಾ ಭೋರ್ಗರೆವ ಅಗಾಧ ಕಡಲಿನಂತೆ, ಆಕಾಶದೆತ್ತರಕ್ಕೆ ತಲೆಎತ್ತಿನಿಂತ ಮಹಾಮೇರುವಿನಂತೆ ಪರಿಪೂರ್ಣತೆಗೆ ಇನ್ನೊಂದು ಹೆಸರು ಕೆರೆಮನೆ ಮಹಾಬಲಹೆಗಡೆ. ಗಂಭೀರಮುಖಭಾವ, ಎಲೆ ಅಡಿಕೆಯ ರಂಗಿನ ತುಟಿ, ಸದಾ ಶುಭ್ರ ಶ್ವೇತಧಾರಿ, ವಸ್ತ್ರ ಉಡುಪುಗಳ ಶುಭ್ರತೆ ಮನಸ್ಸಿಗೂ ಹೊರತಲ್ಲ. ಸದಾ ಒಳ್ಳೆಯದನ್ನೇ ಚಿಂತಿಸುವ, ಅನ್ಯಾಯವನ್ನು, ಅಸತ್ಯವನ್ನು ನೇರವಾಗಿ ಖಂಡಿಸುವ ಮಹಾಬಲಹೆಗಡೆ ಅಪರೂಪದ ವ್ಯಕ್ತಿ. ಕರ್ನಾಟಕದ ಉತ್ತರ ಕರಾವಳಿಯ ಹೊನ್ನಾವರ ಮತ್ತು ಭಟ್ಕಳಗಳ ನಡುವಿನ ಹೆದ್ದಾರಿಯಲ್ಲಿರುವ ಗುಣವಂತೆ. ಗುಣಕ್ಕೆ ಮತ್ತು ಕಲೆಗೆ ತವರೆನಿಸಿದ ಮನೆತನಕ್ಕೆ ಹೆಸರಾದ ಪ್ರದೇಶ. ಹೆದ್ದಾರಿಯ ಎಡಭಾಗಕ್ಕೆ ಕೆರೆಮನೆ ಶಿವರಾಮ ಹೆಗಡೆ ಹಾಗೂ ಅವರ ಮಗ ಶಂಭು ಹೆಗಡೆಯವರ ಮನೆಯಾದರೆ ಸ್ವಲ್ಪ ಮುಂದೆ ಬಲಕ್ಕೆ ಅದೇ ಹೆದ್ದಾರಿಯ ಪಕ್ಕ ಮಹಾಬಲಹೆಗಡೆಯವರ ಮನೆ. ಸಣ್ಣಗೇಟು ತೆರೆದು, ಕೊರೆದ ಮೆಟ್ಟಿಲುಗಳ ದಿಬ್ಬ ಹತ್ತಿ ಕತ್ತೆತ್ತಿದರೆ ಧುತ್ತೆಂದು ಎದುರಾಗುವ ಕುಟೀರ. ಅಡಿಕೆ, ತೆಂಗು, ಹಲಸು ಮಾವುಗಳ ಸಮೃದ್ಧಿಯ ನಡುವೆ ಪ್ರಶಾಂತತೆಯನ್ನೇ ಮೈವೆತ್ತು ನಿಂದ ಆ ಕುಟೀರದ ಒಳ ಹಜಾರ ಬಲು ವಿಶಾಲ. ಹೋದ ತಕ್ಷಣ ಬೆಲ್ಲ ನೀರು, ತಾಂಬೂಲದ ಆತ್ಮೀಯ ಸ್ವಾಗತ. ಆತ್ಮೀಯತೆ ಇದ್ದು ಸ್ವಲ್ಪ ಹೊತ್ತು ನಿಲ್ಲುವುದಾದರೆ ಹವ್ಯಕರಿಗೆ ಹೆಸರಾದ ಸೊಗಸು ಭೋಜನ. ಕರಾವಳಿಯ ಯಕ್ಷಗಾನ ಒಂದು ಸಂಕೀರ್ಣ ಕಲೆ. ಹಾಡು, ಕುಣಿತ, ಸಂಭಾಷಣೆ, ವೇಷಭೂಷಣ ಹಾಗೂ ಬಣ್ಣಗಾರಿಕೆಯೇ ಮೊದಲಾಗಿ ಕಲಾವಿದನನ್ನು ಚೆನ್ನಾಗಿ ದುಡಿಸಿಕೊಳ್ಳುವ ಕಲಾ ಪ್ರಕಾರವಿದು. ಇಂಥ ಒಂದು ಸಂಕೀರ್ಣ ಕಲೆಯಲ್ಲಿ ಉನ್ನತಿಗೇರುವುದಾಗಲೀ, ಪ್ರೌಢಿಮೆಯನ್ನು ಸ್ಥಾಪಿಸುವುದಾಗಲೀ ಸುಲಭದ ಮಾತಲ್ಲ. ಅತೀವ ಆಸಕ್ತಿ, ಸತತ ಪರಿಶ್ರಮ ಹಾಗೂ ಸಹಜ ಪ್ರತಿಭೆಗಳಿದ್ದಲ್ಲಿ ಮಾತ್ರ ಈ ಕಲೆಯನ್ನು

ತನ್ನದಾಗಿಸಿಕೊಳ್ಳಲು ಸಾಧ್ಯ. ಮಹಾಬಲಹೆಗಡೆಯವರಿಗೆ ಚಿಕ್ಕ ವಯಸ್ಸಿನಲ್ಲಿಯೇ ಯಕ್ಷಗಾನದ ನಂಟು ಅಂಟಿಸಿದವರು ತಾತ ಮಹಾಬಲೇಶ್ವರ ಅವರು. ಇವರ ಚಿಕ್ಕಪ್ಪ ಹಾಗೂ ಈಗಾಗಲೇ ರಾಷ್ಟ್ರಪ್ರಶಸ್ತಿ ಪಡೆದಿರುವ ಉನ್ನತ ಕಲಾವಿದ ಶ್ರೀ ಶಿವರಾಮಹೆಗಡೆ ಮಹಾಬಲರ ಪ್ರತಿಭೆಗೆ, ಆಸಕ್ತಿಗೆ ಪೋಷಕರಾಗಿ ನಿಂತರು. ಇಂಥ ಆತ್ಮೀಯ ಪರಿಸರದಲ್ಲಿ ಯಕ್ಷಗಾನ ಕಲೆಗೆ ತನ್ನನ್ನು ಅರ್ಪಿಸಿಕೊಂಡ ಮಹಾಬಲ ಹೆಗಡೆಯವರು ದಿಢೀರನೆ ಪ್ರಸಿದರಾದವರಲ್ಲ. ಅಗ್ಗದ ಜನಪ್ರಿಯತೆಗೆ ಅಡ್ಡದಾರಿ ಹಿಡಿದವರಲ್ಲ. ಕಲೆಯನ್ನು ಒಂದು ತಪಸ್ಸು ಎಂದು ಪರಿಗಣಿಸಿ, ಯಕ್ಷಗಾನದ ಎಲ್ಲ ಮಗ್ಗಲುಗಳನ್ನು ತಡಕಿದವರು. ಸಂಶೋಧಿಸಿ ಪರಿಶೋಧಿಸಿದವರು. ಹಾಡು, ರಾಗ, ಧಾಟಿಗಳ ಮೂಲ ತಿಳಿಯುವ ಉದ್ದೇಶಕ್ಕಾಗಿ ಅತ್ಯಂತ ಪರಿಶ್ರಮದಿಂದ ಹಿಂದೂಸ್ಥಾನಿ ಸಂಗೀತ ಕಲಿತರು. ಯಕ್ಷಗಾನದ ಧಾಟಿಗಳಲ್ಲಿ ದಕ್ಷಿಣಾದಿ, ಉತ್ತರಾದಿಗಳನ್ನು ಪತ್ತೆ ಹಚ್ಚಿ, ಯಾವ ಪಾತ್ರದ ಯಾವ ರಾಗ ಹೇಗಿರಬೇಕು ಎಂಬುದನ್ನು ಖಚಿತವಾಗಿ ಹೇಳಬಲ್ಲ ಅಪರೂಪದ ತಜ್ಞ. ಇವತ್ತಿನ ಅತ್ಯುತ್ತಮ ಭಾಗವತರಲ್ಲಿ ಒಬ್ಬರಾದ ಮಹಾಬಲಹೆಗಡೆಯವರ ಕಂಠ ಮಾಧುರ್ಯ ಕೂಡ ಅಷ್ಟೇ ಉತ್ತಮವಾದದ್ದು.

ಯಕ್ಷಗಾನದ ಯಾವುದಾದರೂ ಒಂದೊಂದು ವಿಚಾರದಲ್ಲಿ ಪರಿಣತಿ ಪಡೆದವರು ಹಲವರಿದ್ದಾರೆ. ಆದರೆ ಮಹಾಬಲ ಹೆಗಡೆ ಒಂದಕ್ಕೆ ಸೀಮಿತವಾದವರಲ್ಲ. ಇವರ ಅಭಿನಯ, ವಾಕ್‌ಪಟುತ್ವ ಆ ಮೂಲಕ ಪ್ರೇಕ್ಷಕನನ್ನು ತಟ್ಟುವ ಅನನ್ಯ ರೀತಿ ಅಸಾಧಾರಣವಾದದ್ದು. ಇವರು ಅಭಿನಯಿಸಿದ ಪಾತ್ರಗಳೂ ಒಂದೆರಡಲ್ಲ, ಸ್ತ್ರೀ ವೇಷದಿಂದ ಹಿಡಿದು ರಾಕ್ಷಸ ವೇಷದವರೆಗೆ ನೂರಾರು ಪುರಾಣ ಪಾತ್ರಗಳನ್ನು ಮೈಗೂಡಿಸಿಕೊಂಡ ಇವರು ರಾಮ, ಕೃಷ್ಣ, ಅರ್ಜುನ, ಸತ್ಯಹರಿಶ್ಚಂದ್ರರಲ್ಲದೆ, ರೌದ್ರ ಪಾತ್ರಗಳನ್ನು ಅತ್ಯಂತ ಸಮರ್ಥನೀಯವಾಗಿ ನಿರ್ವಹಿಸಿದ್ದಾರೆ. ಇಡುಗುಂಜಿ ಮೇಳದಲ್ಲಿ ಹಲವು ವರ್ಷ ದುಡಿದ ಹೆಗಡೆ ಅವರು ಅನಂತರ ಸಾಲಿಗ್ರಾಮ, ಮುಲ್ಕಿ ಹಾಗೂ ಕೊಲ್ಲೂರು ಮೇಳಗಳಿಗೆ ಸೇರಿ ಆಯಾ ಮೇಳಗಳಿಗೆ ಘನತೆ ತಂದಿದ್ದಾರೆ. ಈಗೀಗ ಇಂಥದ್ದೇ ಮೇಳವೆನ್ನದೆ ಶಿಸ್ತು ಹಾಗೂ ಗೌರವಯುತವಾದ ಯಾವುದೇ ಮೇಳದಲ್ಲೂ ಅತಿಥಿನಟರಾಗಿ ಭಾಗವಹಿಸುತ್ತಿದ್ದಾರೆ.

ಆದರೆ ಈಗೀಗ ಯಕ್ಷಗಾನದಲ್ಲಿ ಶಿಸ್ತು ಹಾಗೂ ಪ್ರಾಮಾಣಿಕತೆ ಮಾಯವಾಗುವ ಮೂಲಕ ಈ ಕಲೆ ಅವನತಿಯತ್ತ ಸಾಗುತ್ತದೆ ಎಂಬುದು ಮಹಾಬಲಹೆಗಡೆಯವರ ಕೊರಗು; ಅಗ್ಗದ ಜನಪ್ರಿಯತೆ ಹಾಗೂ ಹಣಕ್ಕಾಗಿ ಹಾತೊರೆಯುವರ ಸಂಖ್ಯೆ ಹೆಚ್ಚಾಗಿರುವುದರಿಂದ ಕಲೆಯ ಶುದ್ಧತೆಯ ಕಡೆಗೆ ಗಮನ ಕೊಡುತ್ತಿಲ್ಲ ಎಂಬುದು ಅವರ ಅನಿಸಿಕೆ. ಇಂಥ ಅಪ್ರಿಯ ಸತ್ಯಗಳನ್ನು ನೇರವಾಗಿ ಹೇಳಲು ಹೆಗಡೆಯವರು ಎಂದೂ ಹಿಂಜರಿಯಲಿಲ್ಲ. ಹಿತವಾಗಿ ಮಿತವಾಗಿ ಆದರೆ ಮುಖಕ್ಕೆ ಹೊಡೆದಂತೆ ಹೇಳುವ ಮಹಾಬಲಹೆಗಡೆಯವರ ಭಾಷಣಗಳು ಪೊಳ್ಳು ಕಲಾವಿದರು

ಹಾಗೂ ವಿದ್ವಾಂಸರಿಗೆ ಎದೆ ನಡುಕ ಹುಟ್ಟಿಸಬಲ್ಲದು. ಕೇವಲ ಹಾಡು, ಕುಣಿತ ಹೆಜ್ಜೆಗಳ ಬಗೆಗಷ್ಟೇ ಅಲ್ಲ, ಯಕ್ಷಗಾನ ಇತಿಹಾಸ, ಜಾನಪದ ಮತ್ತು ಯಕ್ಷಗಾನಗಳಿಗೆ ಇರಬಹುದಾದ ಸಾಮ್ಯ ವೈತ್ಯಾಸ, ಸಾಹಿತ್ಯ ಮತ್ತು ಯಕ್ಷಗಾನ ಸಾಹಿತ್ಯಕ್ಕಿರುವ ಅಂತರ ಅಥವಾ ಸಂಬಂಧ ಕೊನೆಗೆ ಚಂಡೆ, ಮದ್ದಳೆ ಹಾಗೂ ವೇಷಭೂಷಣಗಳನ್ನು ನಿರ್ಮಾಣ ಮಾಡುವ ವಿಚಾರ ಈ ಯಾವುದನ್ನೇ ತೆಗೆದುಕೊಂಡರೂ ಅಧಿಕೃತವಾಗಿ ಮಾತನಾಡಬಲ್ಲ ಅದ್ಭುತ ಪ್ರತಿಭೆ. ಯಕ್ಷಗಾನ ಜಾನಪದವಲ್ಲ ಎಂಬುದು ಹೆಗಡೆಯವರ ವಾದ. 'ಯಕ್ಷಗಾನ ರಾಗಗಳು ಶಾಸ್ತ್ರೀಯ ಹಾಗೂ ನಿರ್ದಿಷ್ಟವಾದವು. ಅಲ್ಲದೆ ಯಕ್ಷಗಾನದ ಪ್ರಸಂಗಕರ್ತರು ಕೂಡ ವಿದ್ಯಾವಂತರು. ಹೀಗಿರುವಾಗ ಯಕ್ಷಗಾನ ಜಾನಪದಕ್ಕೆ ಹೇಗೆ ಸೇರುತ್ತದೆ'' ಎಂಬುದು ಹೆಗಡೆಯವರ ವಿವರಣೆ.

ಯಕ್ಷಗಾನ ಶುದ್ಧವಾಗಿರಬೇಕೆಂದಾಕ್ಷಣ ಸುಧಾರಣೆ ಆಗಬಾರದು ಎಂಬುದು ಹೆಗಡೆಯವರ ಅಭಿಪ್ರಾಯವಲ್ಲ. ಡಾ. ಶಿವರಾಮ ಕಾರಂತರ ಜೊತೆ ಸೇರಿ ಸುಧಾರಣೆಗೆ ಕೈ ಹಚ್ಚಿದ ಮೊದಲ ಕಲಾವಿದ ಇವರು. ಆದರೆ ಸುಧಾರಣೆಯ ನೆಪದಲ್ಲಿ ಏನೇನೋ ತುರುಕುವುದು ಸರಿಯಲ್ಲ. ಇಡೀ ರಾತ್ರಿ ನಡೆಯುವ ಯಕ್ಷಗಾನಕ್ಕೆ ಒಬ್ಬ ಸಮರ್ಥ ನಿರ್ದೇಶಕನೂ ಇರಬೇಕೆನ್ನುವವರೆಗೆ ಹೆಗಡೆಯವರು ಈ ಕಲೆಗಾಗಿ ಹಲವು ಸುಧಾರಣೆಗಳನ್ನು ಸೂಚಿಸುತ್ತಾರೆ. ಇವತ್ತಿನ ರಾಜಕಾರಣ, ಸಂಸ್ಕೃತಿ, ಕಲೆಯ ಹೆಸರಿನಲ್ಲಿ ನಡೆಯುವ ಹಗಲು ದರೋಡೆಗಳ ಬಗ್ಗೆ ಅತ್ಯಂತ ವ್ಯಂಗ್ಯ ಭಾಷೆಯಲ್ಲಿ ಮಾರ್ಮಿಕವಾಗಿ ಪ್ರತಿಕ್ರಿಯಿಸುವ ಶ್ರೀ ಮಹಾಬಲಹೆಗಡೆ ಎಂದಿಗೂ ನೆನಪಿನಲ್ಲಿ ಉಳಿಯುವ ಸಂಮೋಹಕ ವ್ಯಕ್ತಿ. ಇಂಥ ಪ್ರಚಂಡ ಪ್ರತಿಭೆಯ ನಿಷ್ಠುರವಾದಿ ಕಲಾವಿದನಿಗೆ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಈ ವರ್ಷದ ಪ್ರಶಸ್ತಿ ನೀಡಿ ಗೌರವಿಸಿರುವುದು ಇಡೀ ಕರ್ನಾಟಕದ ಕಲಾರಂಗಕ್ಕೆ ಸಂದ ವಿಶೇಷ ಗೌರವ ಎಂದರೆ ಅತಿಶಯೋಕ್ತಿಯಲ್ಲ.



# ಜಿ. ಎಸ್. ಶಿವರುದ್ರಪ್ಪನವರು

*ಎಚ್. ಎಸ್. ವೆಂಕಟೇಶ ಮೂರ್ತಿ*

ದಾವಣಗೆರೆಯಲ್ಲಿ 1991 ಡಿಸೆಂಬರ್ 26, ರಿಂದ 29 ರಂದು ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಖ್ಯಾತ ಕವಿ ವಿಮರ್ಶಕ ಜಿ. ಎಸ್. ಶಿವರುದ್ರಪ್ಪನವರು ನಿಯೋಜಿತರಾದರು. ಕಳೆದ ನಲವತ್ತು ವರ್ಷಗಳಿಂದ ನಿರಂತರವಾಗಿ ಕಾವ್ಯ ರಚನೆ ಮಾಡುತ್ತಾ ಬಂದಿರುವ ಜಿ. ಎಸ್. ಶಿವರುದ್ರಪ್ಪನವರು ಕನ್ನಡ ವಿಮರ್ಶಾಲೋಕದ ಶ್ಲಾಘನೆ ಪಡೆದಿರುವುದರ ಜೊತೆಗೆ, ಅಸಂಖ್ಯಾತ ಓದುಗವರ್ಗದ ಪ್ರೀತಿಯ ಕವಿಯಾಗಿಯೂ ಪರಿಣಮಿಸಿರುವುದು ಅವರ ಕಾವ್ಯ ವ್ಯಕ್ತಿತ್ವದ ವೈಶಿಷ್ಟ್ಯವನ್ನು ಮಹತ್ವವನ್ನೂ ಸೂಚಿಸುತ್ತದೆ. ಜಿ. ಎಸ್. ಎಸ್. ಹೀಗೆ ಜನತೆಯ ಕವಿ. ಕನ್ನಡದಲ್ಲಿ ಇವರಂತೆ ಉತ್ತಮ ಕಾವ್ಯವನ್ನು ರಚಿಸಿ, ಜನತೆಯ ಹೃದಯವನ್ನು ಮಿಡಿದ ಕವಿಗಳ ಸಂಖ್ಯೆ ಕಡಿಮೆ ಎಂದೇ ಹೇಳಬೇಕು.

ನವೋದಯದ ಉಚ್ಛ್ರಾಯ ಕಾಲದಲ್ಲಿ ತಮ್ಮ ಕಾವ್ಯ ಸೃಷ್ಟಿಯನ್ನು ಪ್ರಾರಂಭಿಸಿ, ನವ್ಯ ಕಾವ್ಯದ ಜೊತೆ ಜೊತೆಯಲ್ಲೇ ಗಟ್ಟಿ ಕವಿಯಾಗಿ ಬೆಳೆದು, ದಲಿತ–ಬಂಡಾಯ–ನವ್ಯೋತ್ತರದ ಈವತ್ತಿನ ಸಂದರ್ಭದಲ್ಲೂ ಜಿ. ಎಸ್. ಎಸ್. ಅವರು ತಮ್ಮ ಕಾವ್ಯ ರಚನೆಯ ನಿರಂತರತೆಯನ್ನು ಕಾಪಾಡಿಕೊಂಡು ಮುನ್ನಡೆದಿದ್ದಾರೆ. ಹೀಗೆ ಅನೇಕ, ಚಳವಳಿಗಳ ಅಗ್ನಿದಿವ್ಯದಲ್ಲಿ ಹಾದು ತಮ್ಮ ಕಾವ್ಯ ವಿವೇಕ ಮತ್ತು ಸ್ವಂತಿಕೆಯ ಎಚ್ಚರದಿಂದ ತಮ್ಮದೇ ಆದ ವಿಶಿಷ್ಟ ಕಾವ್ಯ ಧ್ವನಿಯನ್ನು ಸ್ಥಾಪಿಸಿದ್ದು ಜಿ.ಎಸ್.ಎಸ್. ಅವರ ಕಾವ್ಯದ ಹೆಗ್ಗಳಿಕೆಯೆಂದು ಹೇಳಬಹುದು.

ಮಾನವ ಸಂಬಂಧಗಳ ಅನ್ವೇಷಣೆ ಜಿ. ಎಸ್. ಎಸ್. ಅವರ ಕಾವ್ಯದ ಬಹುಮುಖ್ಯವಾದ ಕಾಳಜಿಯಾಗಿದೆ. ಆದರೆ ಮಾನವ ಸಂಬಂಧವನ್ನು ಒಂದು

ನಿಶ್ಚಿತ ಕಾಲ ಮತ್ತು ಸಾಮಾಜಿಕ ಚೌಕಟ್ಟಿನಲ್ಲಿ ಇಟ್ಟು ಅವರು ನೋಡುವುದರಿಂದ ಅವರ ಕಾವ್ಯದ ವೈಯುಕ್ತಿಕತೆಗೆ, ಸಾಮಾಜಿಕತೆಯೂ, ಭಾವನಾಶೀಲತೆಗೆ ವೈಚಾರಿಕ ಎಳೆಗಳೂ ಸಹಜವಾಗಿ ಸೇರಿಕೊಳ್ಳುತ್ತದೆ. ಸುತ್ತಲ ಪರಿಸರದಲ್ಲಿನ ಅದಮ್ಯವಾದ ಸೃಷ್ಟಿಶೀಲತೆಯ ಬಗ್ಗೆ ಸ್ಥಾಯಿಯಾದ ವಿಸ್ಮಯ, ಬದುಕಿನ ಬಗ್ಗೆ ನಿತಾಂತವಾದ ಶ್ರದ್ಧೆ, ದೈವದ ಹಂಗಿಲ್ಲದೆ ಎಲ್ಲ ಹೊಣೆಗಾರಿಕೆಯನ್ನೂ ತನ್ನ ಹೆಗಲ ಮೇಲೆ ಹಾಕಿಕೊಳ್ಳುವ ಜವಾಬ್ದಾರಿಯುತ ಆತ್ಮ ವಿಶ್ವಾಸ ಇವು ಜಿ. ಎಸ್. ಎಸ್. ಅವರ ಕಾವ್ಯ ಮನೋಧರ್ಮವನ್ನು ರೂಪಿಸಿವೆ. ಸೃಷ್ಟಿಶೀಲತೆಯ ಅದಮ್ಯತೆಯನ್ನು ಆರಾಧಿಸುತ್ತಾ ಜೀವನ ಶ್ರದ್ಧೆಯ ಕಾವ್ಯವನ್ನು ಬರೆಯುವ ಈ ಕವಿಯ ಕಾವ್ಯದಲ್ಲಿ ಮತ್ತೆ ಮತ್ತೆ ಕಾಣುವ 'ಚೈತ್ರ'ವು ಅವರ ಕಾವ್ಯದ ಕೇಂದ್ರ ರೂಪಕವಾಗಿದೆ. ಹಾಗೆಂದು ಬದುಕಿನ ಚೆಲುವನ್ನು ಗುಡಿಸಿ ಹಾಕುವ 'ಮಾಗಿ'ಯ ಅರಿವು ಅವರಿಗಿಲ್ಲವೆಂದಲ್ಲ. ಆ ಅರಿವಿನೊಂದಿಗೇ ಅವರ ಚೈತ್ರದ ಕಾವ್ಯಾರಾಧನೆ ನಡೆದಿದೆ. "ಬೋಳಾದ ಎದೆಯಲ್ಲಿ ಚಿಗುರು ಹೂವನು ತೂಗಿ ನಿಲುವ ಒಂದೇ ಕನಸು ಈ ಬಾಳಿಗಾಧಾರ–" – ಎಂದು ನಂಬಿ ಬರೆಯುವ ಶ್ರದ್ಧಾಳು ಕವಿ ಜಿ. ಎಸ್. ಎಸ್.

ಆದರ್ಶದ ಹಂಬಲವಿದ್ದೂ, ನಿಷ್ಠುರವಾದ ವಾಸ್ತವಿಕ ಪ್ರಜ್ಞೆಯಿಂದ ಅವರು ರೊಮ್ಯಾಂಟಿಕ್ ಕಾವ್ಯದ ಸೆಳೆತಗಳಿಂದ ತಮ್ಮ ಕಾವ್ಯವನ್ನು ರಕ್ಷಿಸಿಕೊಂಡಂತೆ, ಭಾವನಾಶೀಲತೆ, ಜೀವನ ಶ್ರದ್ಧೆ ಮಾರ್ದವತೆಗಳಿಂದ ನವ್ಯದ ಸೆಳೆತಗಳಿಂದಲೂ ತಮ್ಮ ಕಾವ್ಯವನ್ನು ರಕ್ಷಿಸಿಕೊಂಡರು. ವ್ಯಂಗ್ಯ ಅವರ ಕಾವ್ಯದ ಪ್ರಧಾನ ಅಸ್ತ್ರಗಳಲ್ಲಿ ಒಂದಾಗಿರುವುದರಿಂದ ಅವರ ಸಾಮಾಜಿಕ ವಿಡಂಬನೆಯ ಕಾವ್ಯ ಉದ್ಘೋಷಗಳಿಂದ ಪಾರಾಯಿತು. ಹೀಗೆ ತಮ್ಮ ವೈಚಾರಿಕತೆ, ವಾಸ್ತವಿಕ ಪ್ರಜ್ಞೆ ಮತ್ತು ಆತ್ಮನಿಷ್ಠೆಯಿಂದ ಕನ್ನಡ ಕಾವ್ಯದಲ್ಲಿ ತೀರ ವೈಶಿಷ್ಟ್ಯವೆನ್ನಿಸುವ ಕಾವ್ಯ ಧ್ವನಿಯನ್ನು ಸ್ಥಾಪಿಸಿದ್ದು ಈ ಹಿರಿಯ ಕವಿಯ ಮಹತ್ವದ ಸಾಧನೆಯಾಗಿದೆ.

ಜಿ. ಎಸ್. ಎಸ್. ಪ್ರಧಾನವಾಗಿ ಕವಿಯಾಗಿದ್ದರೂ ಗಣನೀಯ ಪ್ರಮಾಣದಲ್ಲಿ ವಿಮರ್ಶೆಯನ್ನು ಬರೆದಿದ್ದಾರೆ. ಕಾವ್ಯ ಮೀಮಾಂಸೆಯ ಕ್ಷೇತ್ರದಲ್ಲಿ ಅವರು ಮಾಡಿರುವ ಸಾಧನೆ ಕೂಡ ಗಮನೀಯವಾದುದು. ಅವರ 'ಕಾವ್ಯಾರ್ಥ ಚಿಂತನ' ಎಂಬ ತೌಲನಿಕ ಕಾವ್ಯಚಿಂತನೆಯ ಕೃತಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಪಡೆದುದನ್ನು ಇಲ್ಲಿ ನೆನೆಯಬಹುದು. ಮೊದಲಿನಿಂದಲೂ ಪ್ರವಾಸದ ಹುಚ್ಚಿನ ಜಿ. ಎಸ್. ಎಸ್. ಚೆಲುವಾದ ಮೂರು ಪ್ರವಾಸ ಕೃತಿಗಳನ್ನೂ ರಚಿಸಿದ್ದಾರೆ.

1926ರಲ್ಲಿ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದಲ್ಲಿ ಮಧ್ಯಮವರ್ಗದ ಕುಟುಂಬ ಒಂದರಲ್ಲಿ ಜನಿಸಿದ ಜಿ. ಎಸ್. ಎಸ್. ಅನೇಕ ಕಷ್ಟನಿಷ್ಠುರಗಳ ನಡುವೆಯೇ ಬೆಳೆದು, ಹಂತ–ಹಂತವಾಗಿ ಮೇಲೇರಿದವರು. ಬದುಕಿನ ನಿಷ್ಠುರತೆಯಿಂದ ಅವರ ಜೀವನ ಶ್ರದ್ಧೆ ಮತ್ತಷ್ಟು ಮತ್ತಷ್ಟು ದೃಢವಾಗುತ್ತಲೇ ಹೋಗಿದೆ. ಕ್ಷುಲ್ಲಕತೆ,

ಸಣ್ಣತನಗಳೆಂದರೆ ಆಸ್ಫೋಟಿಸುವ, ವ್ಯಗ್ರವಾಗುವ ಅವರ ಮನಸ್ಸು ಕಾವ್ಯ ಪ್ರವೃತ್ತವಾದಾಗ ವ್ಯಂಗ್ಯದ ಆಯುಧವನ್ನು ಝಳಪಿಸುತ್ತದೆ. ಆದರೆ ಅಂಥ ಕ್ಷಣಗಳು ಅವರ ಮನೋಧರ್ಮದಲ್ಲಿ ಸ್ಥಾಯಿಯಾಗಿ ನಿಲ್ಲುವುದಿಲ್ಲ. ಆರ್ದ್ರತೆ, ಮುಗ್ಧತೆ, ಕೋಮಲವಾದ ಸ್ಪಂದನಶೀಲತೆಯನ್ನು ಕಾಪಾಡಿಕೊಳ್ಳುತ್ತಲೇ ತೋರಿಕೆಯ ಒಂದು ಪೆಡುಸಾದ ರಕ್ಷಾಕವಚವನ್ನು ಅವರ ವ್ಯಕ್ತಿತ್ವ ಹಾಕಿಕೊಂಡಿರಬಹುದೇ ಎಂದು ಅನೇಕ ಬಾರಿ ಅನ್ನಿಸುತ್ತದೆ.

ಜಿ. ಎಸ್. ಎಸ್. ಅವರ ಕಾವ್ಯಶಕ್ತಿಯಂತೇ ಅವರ ಕರ್ತೃತ್ವ ಶಕ್ತಿಯೂ ಅದಮ್ಯವಾದುದು. ಕನ್ನಡ ಅಧ್ಯಯನ ಕೇಂದ್ರದ (ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ) ನಿರ್ದೇಶಕರಾಗಿ, ಕೇದ್ರವನ್ನು ಅವರು ಬೆಳಸಿದ ಕ್ರಮ, ವಿಚಾರ ಸಂಕಿರಣಗಳ ಒಂದು ಪರಂಪರೆಯನ್ನೇ ನಿರ್ಮಿಸಿ ಹೊಸ ವಿಮರ್ಶೆಗೆ ಸಮರ್ಥ ವೇದಿಕೆಯೊಂದನ್ನು ಕಲ್ಪಿಸಿದ್ದು, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಾಮಾನ್ಯನಿಗೆ ಕನ್ನಡ ಸಾಹಿತ್ಯ ಚರಿತ್ರೆ, ಸಾಹಿತ್ಯ ವಾರ್ಷಿಕದಂಥ ಕೃತಿಗಳ ಪ್ರಕಟಣ ಯೋಜನೆಯನ್ನು ರೂಪಿಸಿ ಅವು ಹೊರಬರುವಂತೆ ಮಾಡಿದ್ದು, ನಿವೃತ್ತಿಯ ನಂತರ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ನಿಯೋಜಿತರಾಗಿ ಜವಾಬ್ದಾರಿ ನಿರ್ವಹಿಸುವ ಸುಂದರ್ಭದಲ್ಲಿ ಭಾರತೀಯ ಸಾಹಿತ್ಯ ಸಮೀಕ್ಷೆಯಂಥ ಬೃಹತ್ ಸಂಪುಟದ ಪ್ರಕಟಣೆ, ಪಾರಿಭಾಷಿಕ ಮಾಲೆ ಪುಸ್ತಕಗಳ ಯೋಜನೆ, ಕನ್ನಡೇತರ ಭಾಷಾ ಸಾಹಿತ್ಯದ ಅನುವಾದಕ್ಕೆ ಮೀಸಲಾದ 'ಅನಿಕೇತನ' ಎಂಬ ಪತ್ರಿಕೆಯನ್ನು ರೂಪಿಸಿದ್ದು 'ಸಾಲುದೀಪಗಳು' ಎನ್ನುವ ಅನನ್ಯ ಕೃತಿಯ ಪ್ರಕಟಣೆ ಇವೆಲ್ಲಾ ಜಿ.ಎಸ್.ಎಸ್. ಅವರ ದೂರದರ್ಶಿತ್ವ ಮತ್ತು ಕಾರ್ಯಕ್ಷಮತ್ವದ ಕುರುಹಾಗಿವೆ.

ಹೇಗೋ ನನ್ನ ಪಾಡಿಗೆ ನಾನು ಬದುಕುತ್ತೇನೆ ಇದ್ದಷ್ಟು ನೆಲವ ಉತ್ತು ಬಿತ್ತಿ ನೀರೆರೆದು ಮಲಗಿರುವ ಬೀಜಗಳ ಕಣ್ಣು ತೆರಸುತ್ತೇನೆ. – ಎಂದು ಪದ್ಯವೊಂದರಲ್ಲಿ ತಮ್ಮ ನಿಲುವಿನ ಬಗ್ಗೆ ಜಿ. ಎಸ್. ಎಸ್. ಪ್ರಸ್ತಾಪಿಸುತ್ತಾರೆ. ಈ 'ವಿನಯ' ಮತ್ತು 'ಜೀವನಶ್ರದ್ಧೆ' ಗಳೇ ಅವರನ್ನು ಕಾವ್ಯ ಮತ್ತು ಜೀವನದ ಹೋರಾಟದಲ್ಲಿ ಈವತ್ತಿನ ಎತ್ತರದ ನೆಲೆಗೆ ತಂದು ನಿಲ್ಲಿಸಿವೆ.

* * *

**ಕನ್ನಡ ಸಾಹಿತ್ಯ, ಸಂಸ್ಕೃತಿ ಹಾಗೂ ಭಾಷೆ ಬೆಳವಣಿಗೆಗೆ ಸಂಬಂಧಿಸಿದಂತೆ ಜಿ. ಎಸ್. ಎಸ್. ಅವರ ಅಭಿಪ್ರಾಯಗಳು ತುಂಬಾ ಮೌಲಿಕವಾದುವು. ಅವರೊಡನೆ ನಡೆಸಿದ ಸಂದರ್ಶನ ಇಲ್ಲಿದೆ. – ಸಂ**

* ನಿಮ್ಮನ್ನು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದ ವಿಷಯ ತಿಳಿದಾಗ ನಿಮಗೆ ಏನನ್ನಿಸಿತು?

– ಸಹಜವಾಗಿಯೇ ಸಂತೋಷವಾಯಿತು. ಜೊತೆಗೆ ನನಗಿಂತ ಅರ್ಹರಾದವರೂ, ಹಿರಿಯರೂ ಇದ್ದಾರಲ್ಲ ಅನ್ನೋ ಭಾವನೇನೂ ಮನಸ್ಸಿನಲ್ಲಿ ಬಂತು.

* ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ಇವತ್ತು ಕನ್ನಡದ ಸ್ಥಾನದ ಬಗ್ಗೆ ನಿಮ್ಮ ಅಭಿಪ್ರಾಯ.

– ಈ ಬಗ್ಗೆ ಖಚಿತವಾಗಿ ಹೇಳಲು ನಮ್ಮಲ್ಲಿ ಅಗತ್ಯವಾದ ಮಾಹಿತಿಗಳು ಇಲ್ಲ. ಎಲ್ಲ ಭಾರತೀಯ ಭಾಷೆಗಳ ಸಮರ್ಪಕ ಪರಿಚಯ ಮಾಡಿಕೊಳ್ಳಲು ಇರುವ ಅವಕಾಶಗಳು ನಮಗೆ ಕಡಿಮೆ. ಆದರೂ ನಾನು ಓದಿರುವ ಅನುವಾದಗಳ ಮೂಲಕ, ಸಮೀಕ್ಷಾ ಲೇಖನಗಳ ಮೂಲಕ ಹೇಳೋದಾದ್ರೆ– ಕನ್ನಡ ಸಾಹಿತ್ಯ ನಿಸ್ಸಂದೇಹವಾಗಿ ಮುಂಚೂಣಿಯಲ್ಲಿದೆ. ಬಂಗಾಳಿ, ಮರಾಠಿ, ಮಲಯಾಳಂ ಭಾಷಾ ಸಾಹಿತ್ಯಕ್ಕೆ ಹೋಲಿಸಿದಾಗಲೂ ಸಹ ನಮ್ಮ ಸಾಹಿತ್ಯ ಉತ್ತಮವಾಗಿದೆ ಅನ್ನಿಸುತ್ತೆ, ಕೇವಲ ಪ್ರಶಸ್ತಿಗಳನ್ನು ಗಮನದಲ್ಲಿಟ್ಟುಕೊಂಡು ನಾವು ಇದನ್ನು ಹೇಳೋದಲ್ಲ. ಸಾಹಿತ್ಯ ಕೃತಿಯನ್ನು ತೌಲನಿಕವಾಗಿ ಅಭ್ಯಾಸ ಮಾಡಿದಾಗಲೂ ಆಧುನಿಕ ಕನ್ನಡ ಸಾಹಿತ್ಯ ತುಂಬ ಶ್ರೀಮಂತವಾಗಿದೆ ಅನಿಸುತ್ತೆ. ನಾನು ಈ ಹಿಂದೆ ಅನೇಕ ಸಲ ಹೇಳಿರೋ ಹಾಗೆ ಕಳೆದ ಆರೇಳು ದಶಕಗಳ ಕಾಲ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಅಪೂರ್ವವಾದ ಕಾಲ. ಏಕಕಾಲಕ್ಕೆ ಬಹುಸಂಖ್ಯೆಯ ಎತ್ತರದ ಸಾಹಿತಿಗಳು ಈ ಕಾಲದಲ್ಲಿ ಕಾಣಿಸಿಕೊಂಡಿರುವುದು ವಿಶೇಷ ಸಂಗತಿಯಾಗಿದೆ. ಬೇಕಿದ್ದರೆ ಈ ಕಾಲವನ್ನು ಕನ್ನಡ ಸಾಹಿತ್ಯದ 'ಸುವರ್ಣಯುಗ' ಅಂತ ಕರೀಬಹುದು.

* ಕನ್ನಡ ಸಾಹಿತ್ಯ ಇಷ್ಟೊಂದು ಶ್ರೀಮಂತವಾಗಿದ್ದರೂ, ಕನ್ನಡ ಭಾಷೆ ಅಪಾಯದ ಸ್ಥಿತಿಯಲ್ಲಿದೆ ಎಂಬ ಕೂಗು ಇದೆ. ಮಾತ್ರವಲ್ಲ. 'ಕನ್ನಡ ಉಳಿಸಿ', ಚಳವಳಿ ಸಹ ನಡೀತಿದೆ. ಈ ಬಗ್ಗೆ ನಿಮ್ಮ ಅಭಿಪ್ರಾಯ?

– ಇದೊಂದು ರೀತಿಯ ಕುತೂಹಲಕರ ಸನ್ನಿವೇಶ. ಭಾಷೆಗೂ, ಸಾಹಿತ್ಯಕ್ಕೂ ಅವಿನಾಭಾವ ಸಂಬಂಧ ಇದೆ ಅನ್ನೋದನ್ನ ಒಪ್ಪೋದಾದರೆ ಕನ್ನಡ ಭಾಷೆ ಇವತ್ತು ಅಪಾಯದ ಸ್ಥಿತಿಯಲ್ಲಿಲ್ಲ. (ಕನ್ನಡ ಸಾಹಿತ್ಯ ಇಷ್ಟೊಂದು ಶ್ರೀಮಂತವಾಗಿರೋವಾಗ ಕನ್ನಡ ಭಾಷೆ ದುಸ್ಥಿತಿಯಲ್ಲಿದೆ ಅಂತ ಹೇಗೆ ಹೇಳ್ತೀರಾ)? ಕನ್ನಡ ಭಾಷೆ ಇವತ್ತು ನಮ್ಮ ಆಧುನಿಕ ಸಂವೇದನೆಯ ಸೂಕ್ಷ್ಮಗಳನ್ನೆಲ್ಲ ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುವ ಸಾಮರ್ಥ್ಯ ಪಡೆದಿದೆ. ಸಾಹಿತ್ಯಿಕವಾಗಿ ಮಾತ್ರವಲ್ಲ, ಬೇರೆ ಬೇರೆ ಜ್ಞಾನಾಂಗಗಳನ್ನು ಗಮನಿಸಿದಾಗಲೂ ಕನ್ನಡ ಸಮರ್ಥವಾಗಿ ಬೆಳೆದಿದೆ ಅನ್ನಿಸುತ್ತೆ. ದೂರದರ್ಶನದಲ್ಲಿ, ರೇಡಿಯೋದಲ್ಲಿ ಬೇರೆ ಬೇರೆ ಕ್ಷೇತ್ರಕ್ಕೆ ಸಂಬಂಧಪಟ್ಟೋರು ಕನ್ನಡದಲ್ಲಿ ಎಷ್ಟು ಚೆನ್ನಾಗಿ ಮಾತನಾಡ್ತಾರೆ ಗಮನಿಸಿದ್ದೀರಾ? ತುಂಬ ಚೆನ್ನಾಗಿ ಮಾತನಾಡ್ತಾರೆ.

ಆದರೆ ವ್ಯವಹಾರಿಕವಾಗಿ ನೋಡಿದಾಗ ಕನ್ನಡ ಭಾಷೆ ತೊಂದರೆಯಲ್ಲಿದೆ ಅನ್ನಿಸೋದು ನಿಜ. ಭಾಷಾವಾರು ಪ್ರಾಂತ್ಯ ವಿಂಗಡಣೆ ಆದಾಗ ಯಾವ ಧೋರಣೆಗಳು ಆ ವಿಂಗಡಣೆ ಹಿನ್ನಲೇಲಿ ಇತ್ತೋ ಆ ದೃಷ್ಟಿಯಿಂದ ನೋಡಿದಾಗ ಕನ್ನಡದ ನಿಜವಾದ ಸಮಸ್ಯೆ ಏನೂಂತ ನಮಗೆ ಗೊತ್ತಾಗುತ್ತೆ.

1) ಶಿಕ್ಷಣ ಮಾಧ್ಯಮವಾಗಿ ಕನ್ನಡ ಎಲ್ಲ ಹಂತಗಳಲ್ಲೂ ಜಾರಿಗೆ ಬರಬೇಕು.

2) ಆಡಳಿತದ ಎಲ್ಲ ಹಂತಗಳಲ್ಲೂ ಕನ್ನಡ ಬಳಕೆಯಾಗಬೇಕು.

3) ಕನ್ನಡಿಗರಿಗೆ ಉದ್ಯೋಗದಲ್ಲಿ ಆದ್ಯತೆ ಸಿಗಬೇಕು.

– ಈ ಅಂಶಗಳನ್ನು ಗಮನಿಸಿದಾಗ ಕನ್ನಡದ ಸ್ಥಿತಿ ಶೋಚನೀಯ ಅನ್ನಿಸುತ್ತೆ. ಒಂದು ಕಡೆ ಕನ್ನಡ ಸಾಹಿತ್ಯದ ಶ್ರೀಮಂತಿಕೆ. ಇನ್ನೊಂದು ಕಡೆ ವ್ಯಾವಹಾರಿಕವಾಗಿ ಕನ್ನಡ ಭಾಷೆಯ ಅಪಾಯದ ಸ್ಥಿತಿ – ಇವೆರಡೂ ಏಕಕಾಲದಲ್ಲಿ ಸಮಾನಾಂತರವಾಗಿ ನಮಗೆ ಕಾಣಿಸೋ ವಾಸ್ತವ ಚಿತ್ರ.

* ಇಂಥ ಸ್ಥಿತಿಗೆ, ಅಂದರೆ ಕನ್ನಡ ಭಾಷೆಯ ಈ ಅಪಾಯದ ಸ್ಥಿತಿಗೆ ಕಾರಣ ಏನು?

– ನಮ್ಮ ಭಾಷೆಯ ಬಗ್ಗೆ ನಮಗೆ ನಿಜವಾದ ಕಳಕಳಿ, ಅಭಿಮಾನ ಇಲ್ಲದೇ ಇರೋದು. ಚಾರಿತ್ರಿಕವಾಗಿ ನೋಡಿದಾಗಲೂ ನಾವು ಅತ್ಯಂತ ಉದಾರಿಗಳು. ಈ ಔದಾರ್ಯವೇ ನಮಗೆ ಉರುಳಾಗಿದೆ ಅನ್ನಿಸುತ್ತೆ. ಮುಖ್ಯವಾಗಿ ಮತ್ತೊಂದು ಅಂಶವನ್ನು ನಾವಿಲ್ಲಿ ಗಮನಿಸಬೇಕು: ನಿಜವಾಗಿ ಕನ್ನಡದ ಸಮಸ್ಯೆ ಇವತ್ತು ಇರೋದು– ಉದ್ಯೋಗವಾಕಾಶಗಳಿಗೆ ಸಂಬಂಧಿಸಿದಂತೆ, ಕನ್ನಡ ಶಿಕ್ಷಣ ಮಾಧ್ಯಮವಾಗಿ, ಕನ್ನಡಿಗರಿಗೆ ಉದ್ಯೋಗ ಸಿಗುತ್ತೆ ಅನ್ನೋದಾದರೆ ಈ ಸಮಸ್ಯೆಯೇ ಇರೋದಿಲ್ಲ. ಕನ್ನಡಿಗರೇ ಕರ್ನಾಟಕದಲ್ಲಿ ಅನಾಥರಾಗುವ ಸ್ಥಿತಿ ಬಂದರೆ ಕನ್ನಡ ಎಲ್ಲಿ ಉಳಿಯುತ್ತೆ ಹೇಳಿ? ಇಂಗ್ಲೀಷ್ ಶಿಕ್ಷಣ ಮಾಧ್ಯಮಕ್ಕೂ ಉದ್ಯೋಗಕ್ಕೂ ಇರೋ ಸಂಬಂಧ ಹೋಗದ ಹೊರತು ಕನ್ನಡದ ಉದ್ಧಾರ ಸಾಧ್ಯ ಇಲ್ಲ. ಕನ್ನಡ ಚಳವಳಿ ಈ ದಿಕ್ಕಿನಲ್ಲಿ ಆಗಬೇಕು.

* ಕನ್ನಡದ ಬಗೆಗಿನ ಕಳಕಳಿ. ಕನ್ನಡದ ಅಭಿಮಾನ ಅಂತ ಹೇಳಿದ್ರಿ. ಹಾಗಂದರೇನು? ಕನ್ನಡದ ಅಭಿಮಾನ ವ್ಯಕ್ತವಾಗುವ ಬಗೆ ಹೇಗೆ?

– ಕನ್ನಡ ಕೇವಲ ಒಂದು ಭಾಷೆ ಮಾತ್ರ ಅಲ್ಲ, ಒಂದು ಜೀವನ ವಿಧಾನವೂ ಹೌದು. ಕನ್ನಡ ಭಾಷೆಯ ಹಿಂದೆ ಒಂದು ಸಂಸ್ಕೃತಿ ಇದೆ, ಒಂದು ಪರಂಪರೆ ಇದೆ, ಕೆಲವು ಜೀವನ ಮೌಲ್ಯಗಳಿವೆ. ಅವುಗಳನ್ನು ಸರಿಯಾಗಿ ಅರ್ಥ ಮಾಡಿಕೊಳ್ಳೋದು, ಅಳವಡಿಸಿಕೊಳ್ಳೋದು– ಇದು ಕನ್ನಡದ ಅಭಿಮಾನ ಅಂತ ನನ್ನ ತಿಳುವಳಿಕೆ ಕನ್ನಡಕ್ಕೆ ಜೈಕಾರ ಹಾಕಿದ ಮಾತ್ರಕ್ಕೆ ಅದು ಕನ್ನಡದ ಅಭಿಮಾನ ಆಗಿಬಿಡಲ್ಲ.

* ಕನ್ನಡ ಪರ ಚಳವಳಿಗಳು ಇಂಥ ಅಭಿಮಾನ ಮೂಡಿಸೋ ಕೆಲಸ ಮಾಡ್ತಾ ಇವೆ ಅಂತೀರಾ?

– ಮಾಡಬೇಕಾಗಿದೆ. ನೋಡಿ, ಯಾವುದೇ ಚಳವಳಿಯಾಗಲೀ ಜನಸಾಮಾನ್ಯರ ನಡುವೆ ಹುಟ್ಟಿ ಬರಬೇಕು. ನಮ್ಮ ಕನ್ನಡ ಪರ ಚಳವಳಿಗಳನ್ನು ನೋಡಿದಾಗ ಅವು ರಾಜಕಾರಣಿಗಳ ಅಥವಾ ಬುದ್ಧಿಜೀವಿಗಳ ಚಳವಳಿ ಆಗಿದೆ ಅನ್ನಿಸುತ್ತೆ. ಇವುಗಳಿಂದ ಉಪಯೋಗ ಇಲ್ಲಾಂಥಲ್ಲ. ಆದರೆ ಜನತೆಯಲ್ಲೇ ಜಾಗೃತಿ ಉಂಟಾದಾಗ ಆಗೋ ಪರಿಣಾಮ ಬೇರೆ. ನೀವು ತಮಿಳುನಾಡಿಗೆ ಹೋದರೆ ತಮಿಳು ಕಲಿಯೋದು ಅನಿವಾರ್ಯ ಆಗುತ್ತೆ. ತಮಿಳು ಕಲೀದೆ ನಾವು ಅಲ್ಲಿ ವ್ಯವಹರಿಸೋದು ಕಷ್ಟ ಆಗುತ್ತೆ ಅಂಥ ವಾತಾವರಣ ಅಲ್ಲಿದೆ. ಆದರೆ ನಮ್ಮಲ್ಲಿ? ಕನ್ನಡ ಕಲೀದೇನೆ ಇಲ್ಲಿ ನೆಮ್ಮದಿಯಾಗಿ ಇರಬಹುದು. ಕನ್ನಡನಾಡಿನಲ್ಲಿ ಕನ್ನಡ ಕಲಿಯದೆ ಇರೋದು ಸಾಧ್ಯವಿಲ್ಲ – ಅನ್ನೋ ಸ್ಥಿತಿ, ಅಂಥ ವಾತಾವರಣವನ್ನು ನಮ್ಮ ಜನತೆ ನಿರ್ಮಾಣ ಮಾಡಬೇಕು.

ಇದು ಭಾಷಾಂಧತೆ ಅಲ್ಲ: ಅನ್ಯ ಭಾಷೆಯ ಬಗ್ಗೆ ನಮಗೆ ಗೌರವ ಇರಬೇಕು ನಿಜ. ಆದರೆ ಅನ್ಯ ಭಾಷೆಯ ಬಗ್ಗೆ, ಜನ ಇಲ್ಲಿನ ಮುಖ್ಯ ಪ್ರವಾಹದೊಂದಿಗೆ ಬೆರೆತು ಒಂದಾಗದಿದ್ದರೆ ಹೇಗೆ? ಅವರೇ ಒಂದು ದ್ವೀಪ ಆಗಿಬಿಟ್ಟರೆ ಹೇಗೆ? ಭಾಷೆ ಇರೋದು ಕೂಡಿಸೋಕೆ ಹೊರತು ಒಡೆಯೋಕಲ್ಲ. ಬೇರೆ ಭಾಷೆ ಜನ ಕನ್ನಡದ ಮುಖ್ಯ ಭಾಷೆಯ ಜೊತೆ ಒಂದಾಗಬೇಕಾದ್ದು ಅನಿವಾರ್ಯ.

* ‘ಕರ್ನಾಟಕ’– ಒಂದು ರಾಜ್ಯವಾಗಿ ಎದುರಿಸುತ್ತಿರುವ ಮುಖ್ಯ ಸಮಸ್ಯೆಗಳಾವುವು?

– ಒಂದೇ ಎರಡೇ? ಕರ್ನಾಟಕದ ಮುಂದೆ ಇವತ್ತು ಹಲವಾರು ಸಮಸ್ಯೆಗಳಿವೆ. ಗಡಿ ಸಮಸ್ಯೆ ನೀರಿನ ಸಮಸ್ಯೆ. ಸಂಪನ್ಮೂಲದ ಪ್ರಶ್ನೆ, ಉದ್ಯೋಗವಕಾಶಗಳ ಸಮಸ್ಯೆ, ಅನ್ಯ ಭಾಷಾ ಜನರ ವಲಸೆ ಪ್ರಶ್ನೆ. ಸಾರಿಗೆ ಸವಲತ್ತಿನ ಪ್ರಶ್ನೆ ಹೀಗೇ, ಇಡೀ ಭಾರತದಲ್ಲಿ ಬೇರೆ ರಾಜ್ಯಗಳೊಂದಿಗೆ ಹೋಲಿಸಿದರ ಅಭಿವೃದ್ಧಿ ಕಾರ್ಯಗಳಲ್ಲಿ ಕರ್ನಾಟಕ ಬಹಳ ಹಿಂದೆ ಇದೆ ಅನ್ನೋದನ್ನ ಅಂಕಿ ಅಂಶಗಳೇ ತಿಳಿಸಿ ಹೇಳುತ್ತವೆ.

* ಇದಕ್ಕೆ ಏನು ಕಾರಣ?

– ಕರ್ನಾಟಕದ ಸಮಸ್ಯೆಗಳನ್ನ, ಇಲ್ಲಿನ ಜನತೆಯ ಆಶೋತ್ತರಗಳನ್ನು ಸಂಸತ್ತಿನಲ್ಲಿ ಸಮರ್ಥವಾಗಿ ಮಂಡಿಸುವ ಸದಸ್ಯರ, ಪ್ರತಿನಿಧಿಗಳ ಕೊರತೆಯೇ ಇದಕ್ಕೆ ಕಾರಣ ಅನ್ನಿಸುತ್ತೆ. ಬೇರೆ ರಾಜ್ಯಗಳ ಸದಸ್ಯರಂತೆ ನಮ್ಮ ಸದಸ್ಯರು ಹೋರಾಡಿ, ನಮಗೆ ಸಲ್ಲಬೇಕಾದ ಸವಲತ್ತುಗಳನ್ನು ಪಡಿಯೋ ಪ್ರಯತ್ನ ಮಾಡ್ತಾ ಇಲ್ಲ.

* ನಮ್ಮದೇ ಆದ ಒಂದು ಪ್ರಾದೇಶಿಕ ಪಕ್ಷ ಇದ್ದಿದ್ದರೆ ಈ ಸಮಸ್ಯೆಗೆ ಪರಿಹಾರ ಸಿಗುತ್ತಿತ್ತು ಅಂತ ಅನ್ನಿಸುತ್ತಾ?

– ನೀವು ಹೇಳೋದರಲ್ಲಿ ನಿಜ ಇದೆ. ಇಡೀ ರಾಜ್ಯ ಒಂದಾಗಿ, ರಾಜ್ಯದ ಹಿತವನ್ನು ಲಕ್ಷಿಸಿ ಗಟ್ಟಿ ದನಿಯಲ್ಲಿ ಮಾತಾಡೋ ಪ್ರಾದೇಶಿಕ ಪಕ್ಷ ಇದ್ದಿದ್ದರೆ ಉತ್ತಮ ಫಲ ಸಿಗ್ತಾ ಇತ್ತು ಅನ್ನಿಸುತ್ತದೆ.

* ಇವತ್ತಿನ ಸಾಹಿತ್ಯರಂಗದಲ್ಲಿ 'ಸಾಮಾಜಿಕ ಚಳವಳಿ' ಕೇಂದ್ರದಲ್ಲಿದೆ. ಇದರಿಂದ ಸಾಹಿತ್ಯದ ಮೇಲೆ ಗುಣಾತ್ಮಕ ಪರಿಣಾಮ ಆಗುತ್ತೆ ಅಂತೀರಾ?

– ಸಾಹಿತ್ಯಕ್ಕೆ ಸಾಮಾಜಿಕ ಚಳವಳಿಯಿಂದ ಹೊಸ ಆಯಾಮ ಸಿಗೋದಾದರೆ ಅದು ಒಳ್ಳೆಯದೇ ಅಲ್ಲವೇ. ಹಾಗೆ ನೋಡಿದರೆ ಇವತ್ತಿನ ಸಂದರ್ಭವನ್ನು ಸಾಮಾಜಿಕ ಚಳುವಳಿ ಅಂತ ಅನ್ನೋದಕ್ಕಿಂತ, 'ಸಾಂಸ್ಕೃತಿಕ ಚಳುವಳಿ' ಅನ್ನಬಹುದೇನೋ! ಅನೇಕ ಸ್ತರಗಳಿಂದ ಬಂದವರು ಇವತ್ತು ಮಾತನಾಡೋಕೆ ಆರಂಭ ಮಾಡಿರೋದು ಗಮನಿಸಬೇಕಾದ ಅಂಶ.

* ಇವತ್ತು 'ಸಾಹಿತ್ಯದಲ್ಲಿ ಶ್ರೇಷ್ಠತೆ ಮುಖ್ಯ'– ಅನ್ನೋ ಮಾತು ಕೇಳಿ ಬರ್‍ತಾ ಇದೆ. ಸಾಹಿತ್ಯದಲ್ಲಿ ಶ್ರೇಷ್ಠತೆ ಅಂದರೇನು?

– ಸಾಹಿತ್ಯದಲ್ಲಿ ಶ್ರೇಷ್ಠತೆ ಅನ್ನೋದು, ಎಲ್ಲ ಕಾಲಕ್ಕೂ ಸಲ್ಲುವ ಪುನರ್ ವ್ಯಾಖ್ಯಾನ ಪಡೆದುಕೊಳ್ಳುವ ಸಾಹಿತ್ಯ ಕೃತಿಯ ಒಂದು ಗುಣ ವಿಶೇಷ ಅನ್ನಬಹುದು. ಇದು ಅನೇಕ ಕಾಲಮಾನಗಳ ಮೂಲಕ ಹಾದು ಗಟ್ಟಿಗೊಳ್ಳುವ ಅಂಶ. ಯಾವುದೇ ಸೆನ್ಸಾರ್ ಮಂಡಲಿ ಸಾಹಿತ್ಯದ ಶ್ರೇಷ್ಠತೆಯನ್ನು ನಿರ್ಧರಿಸೋಕೆ ಆಗಲ್ಲ, ಇನ್ನೊಂದು ಅಂಶವನ್ನು ನಾನಿಲ್ಲಿ ಗಮನಿಸಬೇಕು–

ಇವತ್ತು ಅಗ್ಗದ ಜನಪ್ರಿಯ ಸಾಹಿತ್ಯ ಅಪಾರವಾಗಿ ಬರ್‍ತಾ ಇದೆ. ಇಂಥ ಅಗ್ಗದ ಸರಕಿನಿಂದ ಉತ್ತಮವಾದುದನ್ನು ಉಳಿಸುವ ಉದ್ದೇಶದಿಂದಲೂ ಈ ಮಾತು ಕೇಳಿ ಬರ್‍ತಾ ಇರಬಹುದು.

* ಆಧುನಿಕತೆಯ ಫಲವಾದ ಸಮೂಹ ಮಾಧ್ಯಮಗಳು ಅಕ್ಷರ ಸಂಸ್ಕೃತಿಗೆ ಧಕ್ಕೆ ಉಂಟುಮಾಡಿವೆ ಅಂತ ನಿಮಗೆ ಅನ್ನಿಸುತ್ತಾ?

– ಈ ಸಮೂಹ ಮಾಧ್ಯಮಗಳು– ರೇಡಿಯೋ ಟಿವಿ ಇತ್ಯಾದಿಗಳು ಸಾಹಿತ್ಯಕ್ಕೆ ಒಂದು ರೀತೀಯ ಸವಾಲುಗಳು ಅನ್ನೊದು ನಿಜ. ಆದರೆ ಧಕ್ಕೆ ಉಂಟು ಮಾಡಿವೆ ಅಂತ ಹೇಳೋಕಾಗಲ್ಲ, ಅನಕ್ಷರಸ್ಥರೇ ಜಾಸ್ತಿ ಇರೋ ನಮ್ಮ ಸಂದರ್ಭದಲ್ಲಿ ಇವೂ ಕೂಡ ಅಕ್ಷರ ಸಂಸ್ಕೃತಿಯನ್ನು ಜನತೆಗೆ ತಲುಪಿಸುವ ಕೆಲಸವನ್ನು ಪರಿಣಾಮಕಾರಿಯಾಗಿ ಮಾಡಬಹುದಲ್ಲ!

ಸಮೂಹ ಮಾಧ್ಯಮಗಳು ತಮಗೆ ತಾವೇ ಅಪಾಯಕಾರಿಯಲ್ಲ, ಅವುಗಳನ್ನು ನಿರ್ವಹಿಸ್ತಾ ಇರೋರ ಮೇಲೆ ಅಪಾಯ, ಪ್ರಯೋಜನ ಸಂಬಂಧಿಸಿದೆ. ಅಗ್ಗದ ಸಾಹಿತ್ಯ ಪ್ರಕಾರಕ್ಕೆ ಇವು ವಾಹಕ ಆಗೋ ಹಾಗೆ ಒಳ್ಳೆಯ ಸಾಹಿತ್ಯಕ್ಕೂ ವಾಹಕ ಆಗಬಹುದು ಅಷ್ಟೇ?

* ನೀವು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ನಿರ್ದೇಶಕರಾಗಿದ್ರಿ. ಸಾಹಿತ್ಯ ಅಕಾಡೆಮಿ ಅಧ್ಯಕರಾಗಿದ್ರಿ. ಈ ಹಿನ್ನೆಲೆಯಲ್ಲಿ ಒಂದು ಪ್ರಶ್ನೆ– ಸಾಹಿತ್ಯಕ ಸಂಸ್ಥೆಗಳು ಸರ್ಕಾರದ ಅಂಗ ಸಂಸ್ಥೆಗಳಾಗಿದ್ದಾಗ ಪರಿಣಾಮಕಾರಿಯಾಗಿ ಕೆಲಸ ಮಾಡೋಕೆ ಸಾಧ್ಯವೇ?

– ಖಂಡಿತಾ ಸಾಧ್ಯ. ನಾನು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕನಾಗಿದ್ದಾಗ, ಅಕಾಡೆಮಿ ಅಧ್ಯಕ್ಷನಾಗಿದ್ದಾಗ ಅನೇಕ ಯೋಜನೆಗಳನ್ನು ಹಾಕಿಕೊಂಡು ಕಾರ್ಯರೂಪಕ್ಕೆ ತಂದಿದ್ದೇನೆ. ಮುಖ್ಯ 'ಸಂಕಲ್ಪ ಶಕ್ತಿ' ಬೇಕು: ಸಹೋದ್ಯೋಗಿಗಳ ಬೆಂಬಲ ಇರಬೇಕು.

* ಕನ್ನಡ ಸಾಹಿತ್ಯ ಪರಿಷತ್ತಿಗೆ ಈಗ 75 ವರ್ಷಗಳು ತುಂಬಿದೆ. ಈ ದೀರ್ಘ ಭವ್ಯ ಇತಿಹಾಸ ಇರೋ ಪರಿಷತ್ತು ಮೊದಲು ಇದ್ದ ಘನತೆ ಪ್ರಾಮುಖ್ಯತೇನ ಈಗ ಉಳಿಸಿಕೊಂಡಿಲ್ಲ ಅನ್ನೋ ಅಭಿಪ್ರಾಯ ಇದೆ. ಈ ಬಗ್ಗೆ ನೀವೇನು ಹೇಳ್ತೀರಿ?

– ಒಂದು ಕಾಲಕ್ಕೆ ಕನ್ನಡದ ಎಲ್ಲ ಕೆಲಸಗಳಿಗೆ ಪರಿಷತ್ತೇ ಕೇಂದ್ರವಾಗಿತ್ತು. ಆಗ ಸಹಜವಾಗಿಯೇ ಅದಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇತ್ತು. ಆದರೆ ಇವತ್ತು ಕನ್ನಡದ ಕೆಲಸ ಮಾಡಲಿಕ್ಕೆ ಬೇರೆ ಬೇರೆ ಸಂಸ್ಥೆಗಳು ಇವೆ– ವಿಶ್ವವಿದ್ಯಾಲಯಗಳು ಕನ್ನಡ ವಿಭಾಗಗಳು, ಸಾಹಿತ್ಯ ಅಕಾಡೆಮಿ, ಸಂಸ್ಕೃತಿ ಇಲಾಖೆ ಇತ್ಯಾದಿ– ಹೀಗಾಗಿ ಪರಿಷತ್ತಿಗೆ ಮೊದಲಿದ್ದ ಪ್ರಾಮುಖ್ಯತೆ ಈಗಿಲ್ಲ ಅನ್ನಿಸಿರಬಹುದು. ಆದರೆ ಪರಿಷತ್ತಿನ ಸ್ವರೂಪವೇ ಬೇರೆ. ಇತರ ಈ ಸಂಸ್ಥೆಗಳ ಸ್ವರೂಪವೇ ಬೇರೆ ಅನ್ನೋದನ್ನ ನೀವು ಗಮನಿಸಬೇಕು. ಕನ್ನಡ ವಿಭಾಗಗಳಾಗಲೀ, ಅಕಾಡೆಮಿಯಾಗಲೀ, – ಸಾಹಿತ್ಯದ ಶೈಕ್ಷಣಿಕ ಶಿಸ್ತಿಗೆ ಹೆಚ್ಚು ಬದ್ಧವಾದಂಥವು. ಕರ್ನಾಟಕದ ಸಮಸ್ಯೆಗಳ ಸಂದರ್ಭದಲ್ಲಿ ಇವು ದನಿಯನ್ನು ಎತ್ತಬಹುದು ಅಂತೀರಾ? ಆದರೆ ಈ ಸವಲತ್ತು ಪರಿಷತ್ತಿಗೆ ಇವತ್ತೂ ಇದೆ. ಕನ್ನಡದ ಸರ್ವಾಂಗೀಣ ಬೆಳವಣಿಗೆ– ಈ ಅಕಾಡೆಮಿಕ್ ಸಂಸ್ಥೆಗಳ ಕಾರ್ಯವ್ಯಾಪ್ತಿ, ಸಾಹಿತ್ಯ ಮತ್ತು ಜನ ಸಾಮಾನ್ಯರ ನಡುವಿನ ಪರಿಣಾಮಕಾರೀ ಸೇತುವೆ– ಪರಿಷತ್ತು. ಸಾಹಿತ್ಯ ಸಮ್ಮೇಳನಗಳನ್ನೇ ಗಮನಿಸಿ. ಅಕಾಡೆಮಿಯ ವಿಚಾರ ಸಂಕಿರಣಕ್ಕೂ, ಪರಿಷತ್ತಿನ ಸಮ್ಮೇಳನಕ್ಕೂ ಸ್ವರೂಪದಲ್ಲೇ ಎಂಥ ವ್ಯತ್ಯಾಸ ಇದೆ ನೋಡಿ. ಈ ದೃಷ್ಟಿಯಿಂದ ಪರಿಷತ್ತಿಗೆ ಹೆಚ್ಚು ಘನವಾದ ಹಾಗೂ ವ್ಯಾಪಕವಾದ ಉದ್ದೇಶಗಳಿವೆ ಅನಿಸುತ್ತೆ.

**ನರಹಳ್ಳಿ ಬಾಲಸುಬ್ರಹ್ಮಣ್ಯ**
**ಕೃಪೆ – ಪ್ರಜಾವಾಣಿ,**

## ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದ ಆಯ್ದ ಭಾಗಗಳು

### ದಾವಣಗೆರೆ ಮತ್ತು ಜಿ.ಎಸ್.ಎಸ್.

ಈ ಬಿಡುದೀಪದ ಬೆಳಕಿನಲ್ಲಿ ಅರವತ್ತೊಂದನೆಯವನಾಗಿ ನಿಂತ, ಸಾಹಿತ್ಯ ಕ್ಷೇತ್ರದಲ್ಲಿ ಅಲ್ಪಸ್ವಲ್ಪ ಕೆಲಸ ಮಾಡಿರುವ ನನ್ನನ್ನು, ಕನ್ನಡ ಜನ ತುಂಬ ಪ್ರೀತಿಯಿಂದ ಕಂಡಿದೆ. ಬಾನ ಮೂಲೆಯೊಳಗಲ್ಲೋ ಮುದುರಿ ನಿಂತ ತುಂಡು ಮೋಡಕ್ಕೆ ವಿಶ್ವಾಸದ ಹೊಂಬೆಳಕು ಬಂಗಾರದ ಕಿರೀಟವನ್ನು ಇರಿಸಿದೆ. ಈ ಎಲ್ಲ ಗೌರವವೂ ದಾವಣಗೆರೆಯಲ್ಲಿ

ಸಮಾವೇಶಗೊಂಡ ಈ ಸಮ್ಮೇಳನದಲ್ಲಿ ನನಗೆ ಸಂದದ್ದು ಒಂದು ಅಪೂರ್ವವಾದ ಯೋಗಾಯೋಗವೇ ಸರಿ. ಯಾಕೆಂದರೆ, ದಾವಣಗೆರೆ ನನ್ನ ಕಾವ್ಯ ಜೀವನದ ಮೊದಲ ಮೆಟ್ಟಲು. ನನ್ನ ಪ್ರೌಢಶಾಲೆಯ ಶಿಕ್ಷಣ ಪ್ರಾರಂಭವಾದದ್ದು ದಾವಣಗೆರೆಯಲ್ಲಿ. ಆಗ ನನಗೆ ಹದಿನಾಲ್ಕು ವರ್ಷ. ನಾನಿದ್ದದ್ದು ಶ್ರೀ ಜಯದೇವ ವಿದ್ಯಾರ್ಥಿನಿಲಯದಲ್ಲಿ. ಮುಂದೆ ನಾನು ಕಾಲೇಜು ಅಧ್ಯಾಪಕನಾಗಿ ನನ್ನ ವೃತ್ತಿ ಜೀವನವನ್ನು ಪ್ರಾರಂಭಿಸಿದ್ದು ದಾವಣಗೆರೆಯಲ್ಲಿ; ನನ್ನ ಮೊಟ್ಟಮೊದಲ ಕವನ ಸಂಗ್ರಹ 'ಸಾಮಗಾನ' ಪ್ರಕಟವಾದದ್ದು ನಾನು ದಾವಣಗೆರೆಯಲ್ಲಿ ನನ್ನ ವೃತ್ತಿಜೀವನವನ್ನು ಪ್ರಾರಂಭಿಸಿದ ಸಮಯದಲ್ಲಿ. ನನ್ನ ಬದುಕಿನೊಂದಿಗೆ ಬೆಸೆದುಕೊಂಡ ಸ್ನೇಹ ವಿಶ್ವಾಸಗಳು ದೊರೆತದ್ದು ದಾವಣಗೆರೆಯಲ್ಲಿ. ಈಗ ಈ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ದೊರಕಿರುವುದೂ ದಾವಣಗೆರೆಯಲ್ಲಿ.

ನನಗೆ ದಾವಣಗೆರೆ ಮುಖ್ಯವಾಗುವುದು, ನಾನು ಈಗಾಗಲೇ ಪ್ರಸ್ತಾಪಿಸಿದ ಅದರೊಂದಿಗಿನ ವೈಯಕ್ತಿಕ ಸಂಬಂಧಗಳ ಆಚೆಗೆ, ಇನ್ನೂ ಎರಡು ಕಾರಣಗಳಿಂದಾಗಿ. ಅವೇನೆಂದರೆ, 'ಸುಲಿದ ಬಾಳೆಯ ಹಣ್ಣಿನಂದದಿ । ಕಳಿದ ಸಿಗುರಿನ ಕಬ್ಬಿನಂದದಿ । ಇಳಿಸಿದುಷ್ಣದ ಹಾಲಿನಂದದಿ ಸುಲಭವಾಗಿರ್ಪ । ಲಲಿತವಹ ಕನ್ನಡದ ನುಡಿಯಲಿ । ತಿಳಿದು ತನ್ನೊಳು ತನ್ನ ಮೋಕ್ಷವ। ಗಳಿಸಿಕೊಂಡರೆ ಸಾಲದೇ, ಸಂಸ್ಕೃತದೊಳಿನ್ನೇನು?' ಎಂದು ಕನ್ನಡ ಪರವಾದ ದನಿಯೆತ್ತಿದ ಮಹಲಿಂಗರಂಗ ಕವಿಯ ಸಮಾಧಿ ಈ ದಾವಣಗೆರೆಯಲ್ಲಿದೆ, ಎಂಬ ಕಾರಣಕ್ಕಾಗಿ; ಮತ್ತು ಕನ್ನಡದಲ್ಲಿ ಅಪೂರ್ವವಾದ ರೀತಿಯಲ್ಲಿ ಸರಸ್ವತಿಯನ್ನು ವರ್ಣಿಸಿರುವ ಕವಿತೆಯೊಂದನ್ನು ಒಳಗೊಂಡ ಶಾಸನ ದಾವಣಗೆರೆಯಲ್ಲಿ ಇದೆ ಎಂಬ ಕಾರಣಕ್ಕಾಗಿ ದಾವಣಗೆರೆ ನನಗೆ ತುಂಬ ಮುಖ್ಯ ಎಂದು ಅನ್ನಿಸುತ್ತದೆ.

ಆ ಶಾಸನ ಹೀಗಿದೆ :

ನೀರಜ ಜಾತ ವಿಸ್ತರಿಸದಂಡಮುಮಂ ಮಣಿಮಾಲೆಯಾಗಿ ಬಿ–
ಸ್ತಾರಿಸಿ ಹಸ್ತದಿಂ ಪಿಡಿದು ತನ್ನ ಸರಣ್ಬುಗುವರ್ಗೆ ಲೇಸುಮಂ
ಪ್ರೇರಿಸಲೋಸುಗಂ ಜಪಿಸುತಿರ್ಪಳಿರುಳ್ ಪಗಲಾವಳೊರ್ವಳಾ–
ಭಾರತಿ ನಮ್ಮ ಜಿಹ್ವೆಯೊಳನಾವಿಳದಿಂದಿರುತಿರ್ಕೆ ಸಂತತಂ

ಬ್ರಹ್ಮನು ನಿರ್ಮಿಸಿರುವ ಸಮಸ್ತ ಬ್ರಹ್ಮಾಂಡಗಳನ್ನೆ ಮಣಿಮಾಲೆಯಾಗಿ ಅಥವಾ ಜಪಸರವನ್ನಾಗಿ ಮಾಡಿ ತನ್ನ ಕೈಯಲ್ಲಿ ಹಿಡಿದು, ತನ್ನನ್ನು ಶರಣು ಹೋಗುವವರಲ್ಲಿ ಲೇಸನ್ನು ಅಥವಾ ಶ್ರೇಯಸ್ಸನ್ನು ಪ್ರೇರಿಸುವ ಸಲುವಾಗಿ, ಯಾವ ಒಬ್ಬಳು ಹಗಲೂ ಇರುಳು ಜಪಿಸುತ್ತಿದ್ದಾಳೆಯೋ, ಆ ಭಾರತಿ ನಮ್ಮ ನಾಲಗೆಯಲ್ಲಿ ನಿರ್ಮಲವಾಗಿ ಹಾಗೂ ಸಂತೋಷದಿಂದ ನೆಲಸಲಿ–ಎಂಬುದು ಈ ಪದ್ಯದ ಸಾರಾಂಶವಾಗಿದೆ.

## ಕನ್ನಡ ನಾಡು, ನುಡಿ, ಸಾಹಿತ್ಯ ಸಂಸ್ಕೃತಿ

ಕನ್ನಡ ನಾಡು–ನುಡಿ–ಗಡಿ, ಇತ್ಯಾದಿಗಳಿಗೆ ಸಂಬಂಧಪಟ್ಟ ಎಲ್ಲ ಸಮಸ್ಯೆಗಳನ್ನೂ, ಹಿಂದಿನ ಅರುವತ್ತೂ ಸಮ್ಮೇಳನಾಧ್ಯಕ್ಷರು ಅತ್ಯಂತ ತಲಸ್ಪರ್ಶಿಯಾಗಿ ವಿವೇಚಿಸಿ, ಈ ಜನ ಸರ್ಕಾರ ಹಾಗೂ ವಿವಿಧ ಸಾಂಸ್ಕೃತಿಕ ಸಂಸ್ಥೆಗಳು ಕನ್ನಡದ ಸರ್ವಾಂಗೀಣ ಪ್ರಗತಿಗೆ

ಕೈಕೊಳ್ಳಬೇಕಾದ ಕರ್ತವ್ಯಗಳೂ, ಕಾರ್ಯಗಳೂ ಏನೆಂಬುದನ್ನು ನಿರ್ದೇಶಿಸಿದ್ದಾರೆ. ಆದರೆ, ಕನ್ನಡ ಪರವಾಗಿ 'ನಿರಂತರ ಜಪ'ದಂತೆ ಮಂಡಿತವಾದ ಎಷ್ಟೋ ನಿರ್ದೇಶನಗಳೂ, ಆಶೋತ್ತರಗಳೂ ಇನ್ನೂ ಸಮರ್ಪಕನಾಗಿ ಈಡೇರಿಲ್ಲ ಎನ್ನುವುದು ಒಂದು ವಿಪರ್ಯಾಸದ ಸಂಗತಿಯಾಗಿದೆ. ಪ್ರಸ್ತುತ ಸರ್ಕಾರವೇನೋ ಕನ್ನಡದ ಬಗ್ಗೆ ಅನೇಕ ಭರವಸೆಗಳ ಹಾಗೂ ಆಶ್ವಾಸನೆಗಳ ಮಳೆಯನ್ನೆ ಕರೆದಿದೆ. 'ಸರೋಜಿನಿ ಮಹಿಷಿ ವರದಿ'ಯನ್ನು ಜಾರಿಗೆ ತರುವ ಆಶ್ವಾಸನೆ, 'ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸ್ಥಾಪನೆ' ಹಾಗೂ 'ಪುಸ್ತಕ ಪ್ರಾಧಿಕಾರ'ದ ಯೋಜನೆ, ಕನ್ನಡ ಮಾಧ್ಯಮದ ಮಾದರಿ ಶಾಲೆಗಳ ಕಲ್ಪನೆ, ಕನ್ನಡ ವಿಶ್ವವಿದ್ಯಾಲಯವು, ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ವಿವಿಧ ವಿಶ್ವವಿದ್ಯಾಲಯಗಳ ಕನ್ನಡ ವಿಭಾಗಗಳಿಗೆ ಮಾರಕವಾಗದಂತೆ, ಮತ್ತು ಸರಿಯಾದ ಆರ್ಥಿಕ ನೆರವು ಒದಗಿ, ಅದೂ ಸೊರಗುವ ಸಂಸ್ಥೆಗಳ ಸರಣಿಗೆ ಸೇರದಂತೆ ಅರ್ಥಪೂರ್ಣವಾದ ಅಭಿವೃದ್ಧಿಯನ್ನು ಪಡೆಯುವುದೆಂಬ ಆಶ್ವಾಸನೆ – ಇತ್ಯಾದಿಗಳಿಂದ ಕನ್ನಡಿಗರಲ್ಲಿ ಹೊಸ ಆಸೆಗಳನ್ನು ಹುಟ್ಟಿಸಿರುವುದಾದರೂ, ಕನ್ನಡ ಪರವಾದ ಸರ್ಕಾರದ ನಿಲುವುಗಳೂ ಆಶಯಗಳೂ ಈವರೆಗೆ ಯಾವ ಸ್ಥಿತಿಯಲ್ಲಿ ಕ್ರಿಯಾಶೀಲವಾಗಿದೆ ಎಂಬ ಅನುಭವದ ಹಿನ್ನೆಲೆಯಲ್ಲಿ, ಈ ಎಲ್ಲ ಆಶ್ವಾಸನೆಗಳನ್ನೂ ಅದು ಕಾರ್ಯರೂಪಕ್ಕೆ ಇಳಿಸುವವರೆಗೂ ಕನ್ನಡಿಗರ ಪರವಾಗಿ ಅದಕ್ಕೆ ಸಲ್ಲಬೇಕಾದ ಅಭಿನಂದನೆಗಳನ್ನು ಕಾಯ್ದಿರಿಸುವುದು ಅನಿವಾರ್ಯವಾಗಿದೆ.

ಆದರೆ ಕಾವೇರಿ ನದಿ ಜಲವಿವಾದದ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ತಾಳಿರುವ ದಿಟ್ಟ ನಿಲುವುಗಳಿಗಾಗಿ ಮತ್ತು ಈ ಕುರಿತು ವಿವಿಧ ರಾಜಕೀಯ ಪಕ್ಷಗಳು ತಾವೆಲ್ಲ ಒಂದು ಎಂಬಂತೆ ಸರ್ಕಾರದೊಂದಿಗೆ ಹೊಂದಿಕೊಂಡದ್ದಕ್ಕಾಗಿ, ಸರ್ಕಾರವನ್ನೂ ಹಾಗೂ ವಿವಿಧ ರಾಜಕೀಯ ಪಕ್ಷಗಳನ್ನೂ ಕನ್ನಡಿಗರು ಹೃತ್ಪೂರ್ವಕವಾಗಿ ಅಭಿನಂದಿಸಬೇಕಾಗಿದೆ. ಮತ್ತು ಉದ್ದಕ್ಕೂ ಹಲವು ಪಂಚವಾರ್ಷಿಕ ಯೋಜನೆಗಳ ಸಂದರ್ಭದಲ್ಲಿ, ಕರ್ನಾಟಕದ ವಿವಿಧ ಅಭಿವೃದ್ಧಿ ಕ್ಷೇತ್ರಗಳಲ್ಲಿ ಈವರೆಗೂ ಆಗಿರುವ ಅನ್ಯಾಯಗಳನ್ನು ಇನ್ನಾದರೂ ಸರಿಪಡಿಸುವಂತೆ, ಮತ್ತು ಕರ್ನಾಟಕದ ಗಡಿವಿವಾದಗಳಿಗೆ ಸಂಬಂಧಿಸಿದ ಮಹಾಜನ್ ಆಯೋಗದ ಶಿಫಾರಸುಗಳನ್ನು ತಡಮಾಡದ ಕಾರ್ಯಗತಗೊಳಿಸುವಂತೆ, ಕೇಂದ್ರ ಸರ್ಕಾರವನ್ನು ಒತ್ತಾಯಪಡಿಸುವ ಕಾರ್ಯದಲ್ಲಿ ಇದೇ ರೀತಿಯ ಒಮ್ಮತವನ್ನು ಕರ್ನಾಟಕದ ಎಲ್ಲ ರಾಜಕೀಯ ಪಕ್ಷಗಳೂ ತಾಳಬೇಕಾಗಿದೆ. ಕನ್ನಡದ ಎಲ್ಲ ಸಮಸ್ಯೆಗಳೂ ಈವರೆಗೆ ಇತ್ಯರ್ಥವಾಗದಿರಲು, ದೃಢವಾದ ರಾಜಕೀಯ ಸಂಕಲ್ಪದ ಅಭಾವವೇ ಕಾರಣ ಎಂಬ ಮಾತನ್ನು ಈ ಸಂದರ್ಭದಲ್ಲಿ ಒತ್ತಿ ಹೇಳಬೇಕಾಗಿದೆ.

ಶುದ್ಧ ಧಾರ್ಮಿಕ ವಿಷಯಗಳ ಮಾತು ಹಾಗಿರಲಿ, ಮತ–ಧರ್ಮ ಸಂಬಂಧಿಯಾದ ವಸ್ತುಗಳನ್ನು ಕುರಿತ ಸಾಹಿತ್ಯ ನಿರ್ಮಿತಿಯನ್ನಾಗಲೀ, ಚರ್ಚೆಯನ್ನಾಗಲೀ, ವಿಮರ್ಶೆಯನ್ನಾಗಲೀ, ಸಂಶೋಧನೆಯನ್ನಾಗಲೀ, ನಿರಾತಂಕವಾಗಿ ನಡೆಯಿಸುವುದು ನಿಜವಾಗಿಯೂ ಕಷ್ಟವೆಂಬಂತಹ ಅನಾರೋಗ್ಯಕರ ಪರಿಸರ ನಿರ್ಮಾಣವಾಗಿರುವಾಗ, ಸಾಹಿತ್ಯವು ತನ್ನ ಜಾತ್ಯಾತೀತ, ಮಾನವಪರ ಧೋರಣೆಗಳನ್ನು ಉಳಿಸಿಕೊಳ್ಳುವುದು ಹೇಗೆ ಎನ್ನುವುದು ನಮ್ಮನ್ನು ಕಾಡುವ ಪ್ರಶ್ನೆಯಾಗಿದೆ. ಆದರೂ ನಮ್ಮ ಸಾಹಿತಿಗಳು, ಕಲಾವಿದರು ಮತ್ತು ಪ್ರಜ್ಞಾವಂತರು, ಈ ವಿಭಜಕ ಶಕ್ತಿಗಳನ್ನು ದಿಟ್ಟತನದಿಂದ ಎದುರಿಸುವಂತಹ, ವಿವೇಕ ಮತ್ತು ಔಚಿತ್ಯಪ್ರಜ್ಞೆಯನ್ನು ಜನಮನದಲ್ಲಿ ಜಾಗ್ರತಗೊಳಿಸುವ ಹಾಗೂ ಅದಕ್ಕೆ ತಕ್ಕ ವೈಚಾರಿಕ ವಾತಾವರಣವನ್ನು ನಿರ್ಮಿಸುವ ಕಾರ್ಯದಲ್ಲಿ ತೊಡಗಬೇಕಾಗಿದೆ.

ಯಾವುದೇ ಬರೆಹಗಾರ, ಆತ ಈ ಯಾವ ಚಳುವಳಿಗಳ ಸಂದರ್ಭದಲ್ಲಿ ಬರೆದ ಅನ್ನುವುದು ಅಷ್ಟು ಮುಖ್ಯವಾಗದೆ, ಒಟ್ಟಾರೆಯಾಗಿ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅವನ ಕೊಡುಗೆಯೇನು ಹಾಗೂ ಪ್ರಸ್ತುತೆಯೇನು ಎನ್ನುವುದೆ ಮುಖ್ಯವಾಗುತ್ತದೆ. ಈಗಂತೂ ನಾವು ಎಲ್ಲ ಚಳುವಳಿಗಳೂ ನಿಲುಗಡೆಗೆ ಬಂದ ಒಂದು 'ಬಿಡುವಿನ' ಸ್ಥಿತಿಯಲ್ಲಿದ್ದೇವೆ. ಕಳೆದ ಒಂದು ದಶಕದಲ್ಲಿ ಪ್ರಕರ್ಷಗೊಂಡ ದಲಿತ-ಬಂಡಾಯ ಚಳುವಳಿ ಕೂಡಾ, ತನ್ನ ಮುನ್ನಿನ ರಭಸವನ್ನು ತಗ್ಗಿಸಿಕೊಂಡು ಒಂದು ಬಗೆಯ ಪರಿಭಾವನೆಯ ಹದಕ್ಕೆ ಬಂದಿದೆ. ಹೀಗಾಗಿ, ಹೊಸಗನ್ನಡದ ಎಲ್ಲ ಚಳುವಳಿಗಳ ನಿಲುಗಡೆಯ ಈ ಸಂದರ್ಭ ಸಾಹಿತ್ಯದ ಪುನರಾವಲೋಕನ ಹಾಗೂ ಮರುವಿಮರ್ಶೆಗೆ ಮತ್ತು ಅಂತರ್ನಿರೀಕ್ಷಣೆಗಳಿಗೆ ಸರಿಯಾದ ಕಾಲವಾಗಿದೆ. ಇದುವರೆಗಿನ ಎಲ್ಲ ಸಾಹಿತ್ಯ ಚಳುವಳಿಗಳನ್ನೂ ಅವುಗಳ ಕೊಡುಗೆಗಳನ್ನೂ ಒಂದು ಬಗೆಯ ಸಮಾಧಾನಚಿತ್ತದಿಂದ ಸಮಗ್ರವಾದ ಪುನರ್ವಿಮರ್ಶೆಗೆ ಗುರಿಪಡಿಸುವುದು ಇಂದಿನ ಅಗತ್ಯವಾಗಿದೆ. ಕನ್ನಡ ಸಾಹಿತ್ಯದ ಪ್ರಸ್ತುತ ಸಂದರ್ಭವು, ಕಳೆದ ಒಂದು ದಶಕದಲ್ಲಿ ಮುಖ್ಯಧ್ವನಿಯಾದ ದಲಿತ-ಬಂಡಾಯ ಚಳುವಳಿಯ ಮುಂದುವರಿದ ರೂಪವಾಗಿದೆ. ಈ ಹಂತದಲ್ಲಿ ಕನ್ನಡದ ಹಿಂದಿನ ಹಲವು ಚಳುವಳಿಗಳ ಮೂಲಕ ಹಾದು ಬಂದವರೂ, ತಮ್ಮ ಚಳುವಳಿಗಳ ಗಡಿಗಳನ್ನು ದಾಟಿ ನಿಂತು ಹೊಸ ಪೀಳಿಗೆಯ ಲೇಖಕರ ಜತೆಜತೆಗೆ ಸಾಹಿತ್ಯ ನಿರ್ಮಿತಿಯನ್ನು ಮುಂದುವರಿಸುತ್ತಿದ್ದಾರೆ. ಕಾವ್ಯದ ಮೂಲಮಾನದಲ್ಲಿ ಈ ಸಂದರ್ಭದ ಸಾಹಿತ್ಯ ನಿರ್ಮಿತಿಯ ಲಕ್ಷಣಗಳನ್ನು ಗುರುತಿಸುವುದಾದರೆ, ಇವತ್ತಿನ ಕಾವ್ಯ ಹಿಂದಿನ ಸಾಹಿತ್ಯ ಚಳುವಳಿಗಳ ಸಂದರ್ಭದಲ್ಲಿಯಂತೆ, ಅನ್ಯದೇಶೀಯ ಪ್ರೇರಣೆ ಹಾಗೂ ಮಾದರಿಗಳನ್ನು ಅಷ್ಟಾಗಿ ಅವಲಂಬಿಸದೆ, ತಾನು ನಿಂತ ನೆಲದ ಚರಿತ್ರೆ, ಪುರಾಣ ಹಾಗೂ ವಾಸ್ತವಗಳೊಳಗೆ ಬೇರು ಚಾಚುತ್ತ ತನ್ನ ಪರಿಸರದಿಂದಲೇ ತನ್ನ ಸತ್ವವನ್ನು ಪಡೆದುಕೊಂಡು ಅರಳುವ ಪ್ರಕ್ರಿಯೆಯಲ್ಲಿ ತೊಡಗಿದೆ. ಬದುಕಿನ ಸರಳ ಸಾಧಾರಣ ಸಂಗತಿಗಳಿಂತ ಸ್ಫುರಿಸುವ ಹೊಸ ಅರ್ಥವಂತಿಕೆಯ ಆಯಾಮಗಳನ್ನು ಕವಿಯ ಕಣ್ಣು ಗುರುತಿಸುತ್ತಿದೆ. ಚರಿತ್ರೆಯ ಅರಿವಿನಿಂದ ಹುಟ್ಟುವ ವಿವೇಕ, ಚರಿತ್ರೆ ಹಾಗೂ ಪುರಾಣಗಳ ಮೂಲಕ ವರ್ತಮಾನವನ್ನು ವ್ಯಾಖ್ಯಾನಿಸುವ ಪ್ರಯತ್ನಗಳು ಹಾಗೂ ಅನುಭಾವಿಕ ಅನ್ವೇಷಕ ಪ್ರವೃತ್ತಿಗಳು ಈ ಹೊತ್ತಿನ ಕಾವ್ಯದ ಪ್ರಧಾನ ಲಕ್ಷಣಗಳಾಗಿವೆ. ಜತೆಗೆ ದಲಿತ-ಬಂಡಾಯ ಸಾಹಿತ್ಯ ಚಳುವಳಿಯ ಸಂದರ್ಭದಲ್ಲಿ ಗಟ್ಟಿಗೊಂಡ ಸಾಮಾಜಿಕ-ಸಾಂಸ್ಕೃತಿಕ ಕಾಳಜಿಗಳು ಸಾಹಿತ್ಯದ ಮರುವ್ಯಾಖ್ಯಾನಕ್ಕೆ ಬೇರೊಂದು ನೆಲೆಯನ್ನು ಒದಗಿಸಿವೆ. ವ್ಯಕ್ತಿ ಕೇಂದ್ರಿತ ಪ್ರಜ್ಞೆಯ ಮೂಲಕ ಮೂಡಿಬರುತ್ತಿದ್ದ ಸಾಹಿತ್ಯ ಕೃತಿಗಳ ಸ್ಥಾನವನ್ನು, ಒಟ್ಟು ಸಮುದಾಯದ ಅನುಭವಗಳನ್ನು ತಮ್ಮ ಕೇಂದ್ರದಲ್ಲಿ ಒಳಕೊಳ್ಳುವಂಥ ಕೃತಿಗಳು ಪಡೆದುಕೊಳ್ಳುತ್ತವೆ. ಇವೆಲ್ಲಕ್ಕಿಂತ ಮುಖ್ಯವಾಗಿ ಗ್ರಾಮೀಣ ಭಾರತದ ವಿವಿಧ ಸ್ತರಗಳ ಸಮೃದ್ಧ ಅನುಭವವು ಸಾಹಿತ್ಯವನ್ನು ಪ್ರವೇಶಿಸಿ ತನ್ನನ್ನು ಅಭಿವ್ಯಕ್ತಿಸಿಕೊಂಡ ಕ್ರಮವು ವಿಶೇಷ ರೀತಿಯದಾಗಿದೆ. ಮತ್ತು ಶೋಷಕ ಶಕ್ತಿಗಳನ್ನು ನಿಚ್ಚಳವಾಗಿ ಗುರುತಿಸಿ, ಪ್ರತಿಭಟನೆಯನ್ನೆ ಒಂದು ಮೌಲ್ಯವನ್ನಾಗಿ ಮಾಡಿಕೊಂಡು ವಾಸ್ತವತೆಗಳನ್ನು ಲೇಖಕನು ಎದುರಿಸಿದ ರೀತಿಯು ಗಮನಿಸತಕ್ಕದ್ದಾಗಿದೆ. ಅಭಿವ್ಯಕ್ತಿಯೊಳಗಣ ಸಂಕೀರ್ಣತೆ, ಅಸ್ಪಷ್ಟತೆಗಳು ಹಿಂದೆ ಬಿದ್ದು, ಸಾಹಿತ್ಯವು ಸಂವಹನಶೀಲತೆಯ ಕಡೆ ಹೆಚ್ಚು ಒತ್ತನ್ನೂ ಕೊಡತೊಡಗಿದೆ. ನವೋದಯ ಕಾವ್ಯ ಮತ್ತು ವಾಸ್ತವತಾವಾದೀ ಕಥಾ

ಸಾಹಿತ್ಯದಿಂದ ಈ ಮೊದಲೇ ಪ್ರತಿಪಾದಿತವಾದ ಹಲವು ಪ್ರವೃತ್ತಿಗಳು ಮತ್ತೆ ಪ್ರಧಾನವಾಗಿ ಕಾಣಿಸಿಕೊಳ್ಳುತ್ತಿವೆ. ಇತ್ತೀಚಿನ ಸಾಹಿತ್ಯದ ಮತ್ತೊಂದು ವಿಶೇಷವೆಂದರೆ, ಬಹುಸಂಖ್ಯೆಯ ಮಹಿಳೆಯರು ಮೊದಲಿಗಿಂತ ಬೇರೆಯ ರೀತಿಯಲ್ಲಿ ಬರೆಯತೊಡಗಿದ್ದು ಮತ್ತು ಕರ್ನಾಟಕದ ಉಪ ಸಂಸ್ಕೃತಿಯಾದ ಮುಸ್ಲಿಂ ಜನಾಂಗದ ಸಂವೇದನೆಗಳು, ಸಾಹಿತ್ಯವಾಗಿ ವಿಶಿಷ್ಟಾಭಿವ್ಯಕ್ತಿ ಪಡೆದುಕೊಂಡದ್ದು. ಕಳೆದ ಒಂದೂವರೆ ದಶಕದ ಕಾಲಮಾನದಲ್ಲಿ ಇಪ್ಪತ್ತಕ್ಕೂ ಹೆಚ್ಚು ಸಂಖ್ಯೆಯ ಕವಯಿತ್ರಿಯರೂ ಕಾಣಿಸಿಕೊಂಡಿದ್ದಾರೆ ಎನ್ನುವುದು ಸಾಮಾನ್ಯವಾದ ಸಂಗತಿಯೇನಲ್ಲ, ಮತ್ತು ಅವರಲ್ಲಿ ಕೆಲವರು ಈಗಾಗಲೆ ಮೌಲಿಕವಾದ ಕವಿತೆಗಳನ್ನು ಬರೆದಿದ್ದಾರೆ ಎನ್ನುವುದು ಸಂತೋಷದ ವಿಷಯವಾಗಿದೆ. ಜತೆಗೆ ಮುಸ್ಲಿಂ ಬರಹಗಾರರು, ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ತಾವು ಪಟ್ಟ ಸಾಂಸ್ಕೃತಿಕ ಸಂಘರ್ಷಗಳನ್ನೂ, ತಮ್ಮ ಸಾಮಾಜಿಕ–ಧಾರ್ಮಿಕ ಕಟ್ಟುಪಾಡುಗಳ ನಡುವಣ ಅವರದೆ ಆದ ವಾಸ್ತವಗಳನ್ನೂ ಮೊಟ್ಟಮೊದಲಿಗೆ ತುಂಬ ಧೈರ್ಯದಿಂದ ಅಭಿವ್ಯಕ್ತಿಸಿರುವ ಕ್ರಮ ಕನ್ನಡಕ್ಕೆ ಹೊಸದಾಗಿದೆ. ಈ ಕುರಿತ ಕೆಲವು ಕತೆ ಕಾದಂಬರಿಗಳು, ಇದುವರೆಗೆ ನಾವು ಕಾಣದ ಹಲವು ವಾಸ್ತವಗಳನ್ನು ಪರಿಚಯ ಮಾಡಿಕೊಡುತ್ತವೆ ಎಂಬುದು ಮಾತ್ರವಲ್ಲ, ಅವು ಅವರ ಬದುಕಿನ ವಿಮರ್ಶೆಯೂ ಆಗಿವೆ. ಕವಿತೆಗಳಿಗಿಂತ ಕಥಾಸಾಹಿತ್ಯದಲ್ಲಿ ಮುಸ್ಲಿಂ ಅನುಭವ ಜಗತ್ತು ತುಂಬ ದಟ್ಟವಾದ ವಿವರಗಳೊಂದಿಗೆ ಕಾಣಿಸಿಕೊಂಡಿದೆ. ಅದರಲ್ಲಿಯೂ ಮಹಿಳೆಯರ ಬರಹ ಪುರುಷರ ಬರಹಕ್ಕಿಂತ ಹೆಚ್ಚು ತೀವ್ರ ಸಂವೇದನೆಗಳ ಅಭಿವ್ಯಕ್ತಿಯಾಗಿದೆ.

## ವಿಜ್ಞಾನ ಮತ್ತು ಜನಜೀವನ

ನಮ್ಮ ಮಹತ್ತ್ವದ ವೈಜ್ಞಾನಿಕ ಸಂಶೋಧನೆಗಳು. ಜನಸಾಮಾನ್ಯರ ದೈನಂದಿನ ಅಗತ್ಯವನ್ನೇ ಪೂರೈಸಲು ನೆರವಾಗಲಿಲ್ಲ. ನಮ್ಮ ರೈತನ ನೇಗಿಲು, ಅವನು ಬಳಸುವ ಬಂಡಿ, ಶತಮಾನಗಳ ಹಿಂದೆ ಹೇಗಿದ್ದುವೋ ಇಂದಿಗೂ ಹಾಗೆಯೇ ಇವೆ. ಅತ್ಯಂತ ಕಡಿಮೆ ಖರ್ಚಿನಲ್ಲಿ ಮನೆಗಳನ್ನು ಕಟ್ಟುವುದು ಹೇಗೆ ಎಂಬುದನ್ನು, ತಲೆಯಿಡಲು ಸರಿಯಾದ ನೆಲೆಯಿಲ್ಲದ ಅಸಂಖ್ಯಾತರ ಈ ದೇಶದಲ್ಲಿ, ಯಾರೂ ತೋರಿಸಿಕೊಡಲಿಲ್ಲ. ಆದರೆ ಈ ಎಲ್ಲ ಯಂತ್ರನಾಗರಿಕತೆಯ ಕಾರಣದಿಂದ ನಮ್ಮ ಜೀವನದಿಗಳ ನೀರೆಲ್ಲ ಕಲುಷಿತವಾಗಿದೆ ; ಬೆಟ್ಟಗುಡ್ಡಗಳ ಹಾಗೂ ಅರಣ್ಯದ ಹಸುರೆಲ್ಲ ನಾಶವಾಗುತ್ತಿದೆ ; ಗ್ರಾಮೀಣ ಪರಿಸರದ ಕೈಗಾರಿಕೆಗಳೂ ಕುಶಲಕಲೆಗಳೂ ಹೇಳಹೆಸರಿಲ್ಲದಾಗಿವೆ. ಇಂಥ ಪರಿಸರ ನಾಶದಿಂದ ನಮ್ಮ ನಾಳಿನ ಮಕ್ಕಳ ಭವಿಷ್ಯ ಬಗ್ಗೆ ಸೂಕ್ಷ್ಮಸಂವೇದನೆಯುಳ್ಳವರು ತಲ್ಲಣಿಸುವಂತಾಗಿದೆ. ಗಾಂಧೀಜಿಯ ಗ್ರಾಮಸ್ವರಾಜ್ಯದ ಕಲ್ಪನೆಗಳನ್ನೂ ವಿಚಾರಗಳನ್ನೂ ನಿರಾಕರಿಸಿದ ಪರಿಣಾಮದಿಂದ ಈ ದೇಶ ತೆರಬೇಕಾದ ಬೆಲೆ ಅಪಾರವಾಗಿದೆ. ಸಮುದಾಯದ ಹಿತಾಸಕ್ತಿಗೆ ಅಗತ್ಯವಾದ ಆಧುನಿಕ ಪ್ರಗತಿಯನ್ನೂ, ಪರಿಸರ ಸಂರಕ್ಷಣೆಯ ಕಾರ್ಯವನ್ನೂ, ಪರಸ್ಪರ ವಿರೋಧವಿಲ್ಲದೆ ನಿರ್ವಹಿಸುವುದು ಹೇಗೆ ಎಂಬ ಸಮಸ್ಯೆಗಳು, ಮಾನವತಾವಾದಿಗಳು ಈ ದಿನ ಎದುರಿಸಬೇಕಾದ ಸವಾಲುಗಳಾಗಿವೆ.

## ಯುವಕರು–ಶಿಕ್ಷಣ

ನಮ್ಮ ದೇಶದ ಯುವಕರು ನಿಶ್ಚಿತವಾದ ಪ್ರಜ್ಞೆಯೊಂದರಲ್ಲಿ ಬೇರೂರದೆ, ಹಲವು

ಹತ್ತು ಪ್ರಭಾವಗಳಿಗೆ, ಸುತ್ತಿಕೊಳ್ಳುವ ಬಂದಳಿಕೆಗಳಂತೆ ವರ್ತಿಸಲು, ಅವರು ಈ ದೇಶದ ಪರಂಪರೆಗೆ, ಚರಿತ್ರೆಗೆ, ಸಾಹಿತ್ಯ ಮತ್ತು ಕಲೆಗಳಿಗೆ, ಹಾಗೂ ವರ್ತಮಾನದ ನಿಜವಾದ ವಾಸ್ತವಗಳಿಗೆ ನೇರವಾಗಿ ಸಂಬಂಧಿಸಿಕೊಳ್ಳದಂತಹ ಪರಕೀಯ ಸ್ಥಿತಿಯಲ್ಲಿರುವುದೇ ಕಾರಣವಾಗಿದೆ. ನಮ್ಮ ಪ್ರಸ್ತುತ ಶಿಕ್ಷಣ ಕ್ರಮ ಈ ಬಗೆಯ ಪ್ರಜ್ಞೆಯನ್ನು ಸಮರ್ಥವಾಗಿ ಉಂಟುಮಾಡುವಷ್ಟು ನವೀಕರಣಗೊಂಡಿಲ್ಲ. ಕೇವಲ ವಿಷಯ ಜ್ಞಾನವನ್ನು ತಲೆಗೆ ತುರುಕುವುದಷ್ಟೆ ಅದರ ಕೆಲಸವಾಗಿದೆ. ಮತ್ತು ನಿಜವಾದ ವೈಜ್ಞಾನಿಕ ವಿಚಾರ ಬುದ್ಧಿಯನ್ನಾಗಲೀ, ಮೌಲ್ಯನಿಷ್ಠೆಯನ್ನಾಗಲೀ ಪ್ರಚೋದಿಸುವ ದಿಕ್ಕಿನಲ್ಲಿ ಅದು ದುರ್ಬಲವಾಗಿದೆ. ಈ ಕಾರಣದಿಂದಲೇ, ಲಕ್ಷಾಂತರ ಹಳ್ಳಿಗಳ ಗ್ರಾಮೀಣ ಪರಿಸರದಿಂದ ಬಂದು, ಆ ಹಳ್ಳಿಯ ಜನರ ದುಡಿಮೆಯ ಫಲದಿಂದಲೆ ರೂಪುಗೊಂಡ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸವನ್ನು ಪಡೆದ ನಮ್ಮ ಯುವಕರು, ಅನಂತರ ತಾವು ಹುಟ್ಟಿ ಬೆಳೆದ ಗ್ರಾಮಾಂತರ ಪರಿಸರಕ್ಕೆ ತಮ್ಮಿಂದ ಸಲ್ಲಬೇಕಾದ ಋಣ ಏನಾದರೂ ಉಂಟೆ ಎನ್ನುವ ಬಗ್ಗೆ ಅತ್ಯಂತ ತಟಸ್ಥವಾಗಿ ವರ್ತಿಸುತ್ತಾರೆ. ಯಾವುದು ಸಾಮಾಜಿಕ ಪ್ರಜ್ಞೆಯನ್ನು ವೈಚಾರಿಕತೆಯನ್ನು ಸೇವಾ ಮನೋಭಾವವನ್ನು ಎಚ್ಚರಿಸುವುದರ ಮೂಲಕ ಅವರನ್ನು ನಿಜವಾದ ಹೃದಯವಂತ ಮನುಷ್ಯರನ್ನಾಗಿ ಮಾಡುವುದಿಲ್ಲವೋ ಅಂತಹ ಶಿಕ್ಷಣದಿಂದ ಏನು ಪ್ರಯೋಜನ? ತಮ್ಮ ಬದುಕಿನ ಹಾಗೂ ಸಮಯದ ಒಂದಷ್ಟು ಭಾಗವನ್ನು ನಮ್ಮ ಯುವಕರು, ಅವರವರು ಹುಟ್ಟಿ–ಬೆಳೆದುಬಂದ ಗ್ರಾಮಗಳ, ನಿರಕ್ಷರರೂ, ದರಿದ್ರರೂ, ಅನೇಕ ಬಗೆ ಅವೈಚಾರಿಕ ಸಂಗತಿಗಳಿಗೆ ಹಾಗೂ ನಂಬಿಕೆಗಳಿಗೆ ಜೋತುಬಿದ್ದವರೂ ಆದ ತಮ್ಮ ಜನದ ಒಳಿತಿಗೆ ಮೀಸಲಿರಿಸುವುದಾದರೆ ಅದಕ್ಕಿಂತ ಮಹತ್ತಾದ ಸಾಧನೆ ಬೇರೊಂದಿರಲಾರದು.

## ಸಾಹಿತ್ಯ ವಿಮರ್ಶೆಯನ್ನು ಕುರಿತು

ವಿಮರ್ಶೆ ಸೃಜನಶೀಲತೆಯನ್ನು ಗುರುತಿಸುವ ಹಾಗೂ ಬೆಳೆಯಿಸುವ ಸ್ವರೂಪದ್ದಾಗಬೇಕು. ಈ ಅರ್ಥದಲ್ಲಿ ವಿಮರ್ಶೆಯ ಪ್ರಯೋಜನ ಸಾಂಸ್ಕೃತಿಕವಾಗಿ ಮುಖ್ಯವಾಗುತ್ತದೆ. ಸಾಹಿತ್ಯ ಕ್ಷೇತ್ರಕ್ಕೆ ಹೊಸದಾಗಿ ಪ್ರವೇಶಿಸಿದ ಹಾಗೂ ಬೆಳೆಯಬಲ್ಲ ತರುಣ ಬರಹಗಾರರ ದೃಷ್ಟಿಯಿಂದಲಂತೂ ಈ ಮಾತು ತುಂಬ ಮುಖ್ಯವಾದದ್ದು. ವಿಮರ್ಶೆಯನ್ನು ಸಮರ್ಥವಾಗಿ ನಿರ್ವಹಿಸಬಲ್ಲ ಬುದ್ಧಿವಂತರು ನಮ್ಮ ನಡುವೆ ಇದ್ದಾರೆ. ಆದರೆ ಬರೀ ಬುದ್ಧಿವಂತಿಕೆಯೊಂದೇ ಸಾಲದು; ಬೇಕಾದದ್ದು ಹೃದಯವಂತಿಕೆ ಹಾಗೂ ಪ್ರಾಮಾಣಿಕತೆ ಮತ್ತು ಪರಂಪರೆಯ ಗಾಢವಾದ ತಿಳಿವಳಿಕೆ. ಒಂದು ಸಾಹಿತ್ಯ ಪರಂಪರೆಯ ಗಾಢವಾದ ಅರಿವಿನಿಂದ ವಿಮರ್ಶೆಗೆ ಬರುವ ಸಮತೂಕವೆ ಬೇರೆಯದು. ಅಂಥ ವಿಮರ್ಶೆ, ಬಹುಕಾಲದಿಂದ ಹಾಗೂ ಶ್ರದ್ಧೆಯಿಂದ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿಕೊಂಡಂಥವರ ಸಾಧನೆಯನ್ನು, ಅವಿಚಾರಿತವಾಗಿ ತಳ್ಳಿಹಾಕದೆ, ಆಯಾ ಲೇಖಕರು ಒಟ್ಟು ಸಾಹಿತ್ಯ ಪರಂಪರೆಯಲ್ಲಿ ಎಲ್ಲಿ ಹಾಗೂ ಎಷ್ಟರಮಟ್ಟಿಗೆ ಪ್ರಸ್ತುತವಾಗುತ್ತಾರೆ ಎಂಬುದನ್ನು ತಕ್ಕ ಜವಾಬ್ದಾರಿಯಿಂದ ಪರೀಕ್ಷಿಸಿ ನೋಡುತ್ತದೆ.

ಇದುವರೆಗಿನ ನಮ್ಮ ಸಾಹಿತ್ಯ ವಿಮರ್ಶೆ ಬಹುಮಟ್ಟಿಗೆ ಪಶ್ಚಿಮದ ಮಾದರಿ ಹಾಗೂ ಮಾನದಂಡಗಳನ್ನು ಅವಲಂಬಿಸಿದ್ದಾಗಿದೆ. ಭಾರತೀಯ ಕಾವ್ಯಮೀಮಾಂಸೆಯ ಪರಿಜ್ಞಾನದ

ಹಿನ್ನೆಲೆಯೂ, ಪಾಶ್ಚಾತ್ಯ ಸಾಹಿತ್ಯ ವಿಮರ್ಶೆಯ ತಾತ್ವಿಕ ತಿಳಿವಳಿಕೆಯೂ ಮೇಳವಿಸಿದ ವಿಮರ್ಶನ ದೃಷ್ಟಿಯೊಂದು ಸಮಾನಾಂತರವಾಗಿ ಇದ್ದರೂ, ಮೇಲುಗೈ ಪಡೆದದ್ದು ಪಾಶ್ಚಾತ್ಯ ಪ್ರೇರಣೆ ಹಾಗೂ ಮಾದರಿಗಳೇ. ಇದರಿಂದ ಕನ್ನಡ ವಿಮರ್ಶೆಗೆ ಖಂಡಿತವಾಗಿಯೂ ಪ್ರಯೋಜನವಾಗಿದೆ, ಎಂಬುದನ್ನು ಮರೆಯುವಂತಿಲ್ಲ. ಮೊದಮೊದಲು ಪಾರಿಭಾಷಿಕಗಳ ಬಗ್ಗೆ ಇದ್ದ ಗೊಂದಲಗಳು ಕ್ರಮಕ್ರಮೇಣ ಕಡಿಮೆಯಾಗಿ ಅನಂತರದ ವಿಮರ್ಶೆಯ ಭಾಷೆ ಹೆಚ್ಚು ಖಚಿತತೆಯನ್ನು ಪಡೆದುಕೊಂಡಿತೆಂಬುದು ನಿಜ. ಈ ಹೊತ್ತಿನ ಸಾಹಿತ್ಯ ವಿಮರ್ಶೆಯಲ್ಲಿ, ಅನ್ಯದೇಶೀಯ ಪ್ರೇರಣೆ ಹಾಗೂ ಮಾದರಿಗಳ ಹಂಗನ್ನು ಹರಿದುಕೊಂಡು, ಕೃತಿಯೊಂದನ್ನು ಅದರ ಪಾರಂಪಾರಿಕ ಹಾಗೂ ಸಾಂಸ್ಕೃತಿಕ ಸಂದರ್ಭದಲ್ಲಿ ಇರಿಸಿ ಪರಿಶೀಲಿಸುವ ಪ್ರವೃತ್ತಿಗಳು ಮೂಡುತ್ತಿರುವುದು ಸಂತೋಷದ ಸಂಗತಿಯಾಗಿದೆ.

## ಜೀವನ ಪ್ರೀತಿಯನ್ನು ಕುರಿತು

ಪ್ರೀತಿಯಿಲ್ಲದವನು ಕವಿಯಾಗಲಾರ, ಕಲಾವಿದನಾಗಲಾರ, ವಿಜ್ಞಾನಿಯಾಗಲಾರ, ರಾಜಕಾರಣಿಯಾಗಲಾರ, ಕ್ರಾಂತಿಕಾರಿಯಾಗಲಾರ. ಬದುಕನ್ನು ಕುರಿತು ನಿಜವಾದ ಪ್ರೀತಿ ಇದ್ದವನಿಗೆ ಮಾತ್ರ ಅದರ ಸಮೃದ್ಧಿಯಲ್ಲಿ, ವೈವಿಧ್ಯತೆಯಲ್ಲಿ, ಸ್ವಾತಂತ್ರ್ಯದಲ್ಲಿ ಹಾಗೂ ಶ್ರೇಯಸ್ಸಿನಲ್ಲಿ ಆಸಕ್ತಿ ಹುಟ್ಟೀತು. ಅದಿಲ್ಲದೆ ಬದುಕನ್ನು ಕೇವಲ ವ್ಯಾವಹಾರಿಕವಾಗಿ ಹಾಗೂ ಪ್ರಾಯೋಜನಿಕ ದೃಷ್ಟಿಯಿಂದ ನೋಡುವವನಿಗೆ, ಅದರೊಳಗಿನ ಚೆಲುವಿಕೆಯಾಗಲೀ, ಜೀವಂತಿಕೆಯಾಗಲೀ ಕಂಡೀತು ಹೇಗೆ? ಸಾಹಿತ್ಯದ ಮುಖ್ಯ ಗಮನವೇ, ಮನುಷ್ಯನನ್ನು ಪ್ರಾಯೋಜನಿಕ ಬುದ್ಧಿಯ ನಿಲುವಿನಿಂದ ಪಾರುಮಾಡಿ, ಬದುಕಿನ ನಿಜವಾದ ಅರ್ಥವಂತಿಕೆಯ ಅನ್ವೇಷಣೆಗಳ ಕಡೆ ತೊಡಗಿಸುವುದು. ಭಾಷೆಯ ಬಗ್ಗೆ ನಿಜವಾದ ಪ್ರೀತಿಯಿದ್ದವನ ಅಭಿಮಾನ ಕೇವಲ ಆವೇಶದ ಕೂಗಾಟವಾಗುವುದಿಲ್ಲ; ಬದುಕಿನ ಬಗ್ಗೆ ನಿಜವಾದ ಪ್ರೀತಿಯಿದ್ದವನ ಬರಹ ಲಘುವಾಗುವುದಿಲ್ಲ; ಸಾಹಿತ್ಯದ ಬಗ್ಗೆ ನಿಜವಾದ ಪ್ರೀತಿಯಿದ್ದವನ ವಿಮರ್ಶೆ ಸಮತೋಲನವನ್ನು ಕಳೆದುಕೊಳ್ಳುವುದಿಲ್ಲ; ಜನದ ಶ್ರೇಯಸ್ಸಿನ ಬಗ್ಗೆ ನಿಜವಾದ ಪ್ರೀತಿಯಿದ್ದ ರಾಜಕಾರಣಿ ಕೇವಲ ತತ್ಕಾಲವಷ್ಟನ್ನೆ ನೋಡುವುದಿಲ್ಲ; ಅಪ್ರಾಮಾಣಿಕನಾಗುವುದಿಲ್ಲ. ಪ್ರೀತಿಯಿದ್ದವನ ಬದುಕಿನ ಗ್ರಹಿಕೆ ಮೇಲ್ಪದರದ್ದಲ್ಲ ಯಾಕೆಂದರೆ ಪ್ರೀತಿ ಎಂದರೆ ವಸ್ತುವೊಂದರ ಅಂತರಂಗವನ್ನು ಹೊಕ್ಕು ಅದನ್ನು ಸಹಾನುಭೂತಿಯಿಂದ ನೋಡುವ ಒಂದು ಕ್ರಮ.

ಪ್ರೀತಿ ಇಲ್ಲದ ಮೇಲೆ
ಮಾತಿಗೆ ಮಾತು ಕೂಡೀತು ಹೇಗೆ?
ಅರ್ಥ ಹುಟ್ಟೀತು ಹೇಗೆ?
ಬರೀ ಪದಕ್ಕೆ ಪದ ಜತೆಗಿದ್ದ ಮಾತ್ರಕ್ಕೆ
ಪದ್ಯವಾದೀತು ಹೇಗೆ?

* * *



# ಚಂದ್ರಶೇಖರ ಕಂಬಾರರ 'ಸಿರಿಸಂಪಿಗೆ'

ಬಸವರಾಜ ಕಲ್ಗುಡಿ

ಚಂದ್ರಶೇಖರ ಕಂಬಾರರ 'ಸಿರಿಸಂಪಿಗೆ' ನಾಟಕಕ್ಕೆ 1991 ರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯು ದೊರಕಿತು. ಕಂಬಾರರ ಅಪೂರ್ವವಾದ ಸೃಜನಶೀಲ ಪ್ರತಿಭೆಗೆ ದೊರಕಿದ ಗೌರವವಿದು. ಕವಿಯಾಗಿ, ನಾಟಕಕಾರರಾಗಿ, ಹಾಡುಗಾರರಾಗಿ, ಸಿನಿಮಾ ನಿರ್ದೇಶಕರಾಗಿ, ಕಾದಂಬರಿಕಾರರಾಗಿ – ಹೀಗೆ ಹತ್ತು ಹಲವು ಸೃಜನಶೀಲ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿರುವ ಕಂಬಾರರಿಗೆ ಕಲಾಭಿವ್ಯಕ್ತಿ ಎನ್ನುವುದು ಸಂಸ್ಕೃತಿಯ ಸತ್ವವನ್ನು ಅರಸುವ ಮಾಧ್ಯಮವಾಗಿದೆ.

ಕಂಬಾರರು ನವ್ಯ ಸಾಹಿತ್ಯದ ಪ್ರಾದುರ್ಭಾವದ ಸಂದರ್ಭದಲ್ಲಿ ವೈಯಕ್ತಿಕ ನೆಲೆಯಿಂದ ಅನುಭವವನ್ನು ನೋಡುವ ಆದರ ತಾತ್ವಿಕ ನೆಲೆಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿ – ತಮ್ಮ ಅಭಿವ್ಯಕ್ತಿಯನ್ನು ಭಿನ್ನವಾಗಿಸಿಕೊಂಡರು. ಸಮುದಾಯದ ಬದುಕಿನ ಭಾಗವಾಗಿರುವ ವ್ಯಕ್ತಿಗಳ ಸಂಬಂಧದ ಸೂಕ್ಷ್ಮಗಳನ್ನು ಹುಡುಕುವ ನೆಲೆ ಇವರ ಕಲಾಭಿವ್ಯಕ್ತಿಯ ಮುಖ್ಯ ಭಿತ್ತಿಯಾಯಿತು. ಕಂಬಾರರು – ಹೀಗೆ ಸಂಸ್ಕೃತಿ ಗ್ರಹಿಕೆಯ ಸಂವೇದನೆ ಹಾಗೂ ಅಭಿವ್ಯಕ್ತಿ ವಿಧಾನ ಎರಡರಲ್ಲೂ ನವ್ಯಕ್ಕಿಂತ ಭಿನ್ನವಾದರು; ವಿಶಿಷ್ಟಧ್ವನಿಯಾದರು. ಬದುಕನ್ನು ಅರಸುವ ಬಗೆಯಲ್ಲಿ ವಚನಕಾರರು, ಬೇಂದ್ರೆಯಂಥವರ ಪರಂಪರೆಯನ್ನು ಆಧುನಿಕ ಪರಿಭಾಷೆಯಲ್ಲಿ ಮುಂದುವರಿಸಿದವರು ಕಂಬಾರರು. ಈಗ 91 ರಲ್ಲಿ ಕಲಾಕಾರನೊಬ್ಬ ತನ್ನ ಅಭಿವ್ಯಕ್ತಿಯ ಸಾಂದ್ರತೆಗೆ – ತಿರಸ್ಕರಿಸಲ್ಪಟ್ಟಿರುವ ಜಾನಪದ, ದೇಸಿಲೋಕದ ಕಗ್ಗಾಡಿಗೆ ಮತ್ತೆ ಹಿಂದಿರುಗಬೇಕಾಗಿದೆ ಎಂದು ಕೂಗೆದ್ದಿರುವ ಸಂದರ್ಭದಲ್ಲಿ – ಕಂಬಾರರ ಸಾಂಸ್ಕೃತಿಕ ಹುಡುಕಾಟದ ರೀತಿಗಳು ಎಷ್ಟು ಅರ್ಥಪೂರ್ಣವೆಂದು ವಿವರಿಸಬೇಕಾಗಿಲ್ಲ.

ಸಂಸ್ಕೃತಿಯ ಅತ್ಯಂತ ಮೂಲಭೂತ ಪ್ರಶ್ನೆಗಳನ್ನು ಕಂಬಾರರು ಕಲೆಯ ಅನುಭವವನ್ನಾಗಿಸುತ್ತಾರೆ. ಕಲೆಯನ್ನು ಜೀವನದ ಭಾಗವನ್ನಾಗಿ ಮಾಡಿ ನೋಡುವ ಸಮಸ್ಯೆ, ಸಂಸ್ಕೃತಿಯ ಸಮಸ್ಯೆಯನ್ನು ಇಂಥ ಕಲಾವಿನ್ಯಾಸದಲ್ಲಿ ಶೋಧಿಸುವ ಬಗೆ ಇವೆಲ್ಲವೂ ಕಂಬಾರರ ಅಭಿವ್ಯಕ್ತಿಯಲ್ಲಿ ಒಂದರೊಳಗೊಂದು ಹಾಸುಹೊಕ್ಕಾಗಿವೆ. ಹೀಗಾಗಿ ಕಂಬಾರರಿಗೆ ತಮ್ಮ ಕಲಾಭಿವ್ಯಕ್ತಿಯಲ್ಲಿ ಜಾನಪದ ಸತ್ವವನ್ನು ತರುವುದು ಒಂದು ಅನಿವಾರ್ಯವಾದ, ಸಹಜವಾದ ಕ್ರಿಯೆಯೇ ಆಗಿದೆ. ಜನರ ಕನಸುಗಳ, ನೋವುಗಳ, ಅನುಭವಗಳ ಸೃಷ್ಟಿಯಾಗಿ ಕಲೆ ತನ್ನ ಬೇರು ಬಿಡಬೇಕೆ ವಿನಃ ಕೇವಲ ನಾಟಕಕಾರನಿಗೆ, ನಿರ್ದೇಶಕನಿಗೆ ಹಾಗೂ ಕೆಲವೇ ಪ್ರತಿಷ್ಠಿತ ನೋಟಕರಿಗೆ ಅಲ್ಲ ಎಂದು ಗಾಢವಾಗಿ ನಂಬಿದವರು ಕಂಬಾರರು. ವಸಾಹತುಶಾಹೀ ಸಂಸ್ಕೃತಿಯ ಅನುಕರಣೆಯಿಂದಾಗಿ ನಮ್ಮ ಜೀವನ ಸಂವೇದನೆಯನ್ನು ಭಿನ್ನ ಭಿನ್ನ ವಿಭಾಗಗಳಲ್ಲಿ ಒಡೆದು ಪರೀಕ್ಷಿಸುವಂತೆ ಮಾಡಿದ ರೀತಿಯೊಂದರ ಬಗ್ಗೆ ತೀವ್ರ ಖೇದವು ಕಂಬಾರರಿಗಿದೆ. ಈ ದೃಷ್ಟಿಯಿಂದಲೇ ನಾಟಕ ಮತ್ತು ಕಾವ್ಯ – ಎರಡು ಭಿನ್ನ ಪ್ರಕಾರಗಳು ಅನ್ನುವ ಆ ಶಿಸ್ತನ್ನು ಕಂಬಾರರು ಒಪ್ಪುವುದಿಲ್ಲ. ಇವೆರಡೂ ಸೇರಿಯೇ ಸಂವೇದನೆಯ ಗಾಢ ನೆಲೆಗಳು ಸಾಧ್ಯವೆನ್ನುತ್ತಾರೆ ಅವರು. ಹಾಡು, ಕುಣಿತ, ಮಾತು, ಆಲೋಚನೆ, ಭಾವಗಳು, ಕನಸು ಇವೆಲ್ಲವೂ ಕೂಡಿಯೇ ಕಲಾನುಭವಕ್ಕೆ – ಜೀವನ ಸಂಕೀರ್ಣತೆಯ ಸಾಂದ್ರತೆ ಬರುವುದು ಎನ್ನುವುದು ಕಂಬಾರರ ಗಾಢ ನಂಬಿಕೆಯಾಗಿದೆ. ಈಗಲೂ ನಮ್ಮ ಸಾಹಿತ್ಯಕ ಬರವಣಿಗೆಯಲ್ಲಿ ಹೆಚ್ಚು–ವ್ಯಾಪಕವಾಗಿರುವ ಸಾಹಿತ್ಯ ಮೀಮಾಂಸೆಯ ಕಲ್ಪನೆಗಿಂತ ಸಂಪೂರ್ಣ ವ್ಯತಿರಿಕ್ತ ನಿಲುವು ಇದು.

ನಮ್ಮ ಜನಪದ (ದೇಸಿ) ಬದುಕಿನ ಕಲ್ಪನಾಲೋಕದಲ್ಲಿ (ಇದನ್ನು ಕನಸು ಎನ್ನೋಣವೇ?) ಅಸಂಖ್ಯಾತ ಲೋಕಗಳಿವೆ. ಅಲ್ಲಿ ಪ್ರಣಯವಿದೆ–ಸಾಹಸವಿದೆ, ಎದುರಿಸಬೇಕಾದ ಗಂಡಾಂತರಗಳಿವೆ; ಎದುರಿಸಬಲ್ಲ ನಾಯಕನಿದ್ದಾನೆ. ಈ ಲೋಕ ಕಾಲವನ್ನು ಮೀರಿದ್ದು; ಕಂಬಾರರು ಈ ಲೋಕವನ್ನು ಹೊಕ್ಕರೇ! ಆದರೆ ಚರಿತ್ರೆ, ಕಾಲವೆಂಬ – ತಣ್ಣೀರ ಹನಿಗಳನ್ನೊಯ್ದು ಕನಸನ್ನು ಎಚ್ಚರಿಸುವ ಕ್ರಿಯೆಯನ್ನು ಮಾಡದ ಹೊರತು ಅವರಿಗೆ ಸಮಾಧಾನವಿಲ್ಲ. ಕಂಬಾರರ ಕಾವ್ಯ–ನಾಟಕಗಳಲ್ಲಿ ಸಮಕಾಲೀನ ಚಾರಿತ್ರಿಕ ಒತ್ತಡಗಳು ರೂಪುಗೊಳ್ಳುವುದು ಇಲ್ಲೇ. ಕಂಬಾರರ ನಾಟಕಗಳಲ್ಲಿನ ಈ ಚಾರಿತ್ರಿಕ ಒತ್ತಡಗಳು ದೇಸೀ ಸಂಸ್ಕೃತಿಯನ್ನು ಪುನರಾವಲೋಕಿಸುವ ಗ್ರಹಿಕೆಯ ಮುಖ್ಯ ವಿಧಾನಗಳಾಗಿವೆ. ಅಸ್ತಿತ್ವದ ಪ್ರಶ್ನೆ, ತನ್ನತನವನ್ನು ಹುಡುಕುವ ಪ್ರಯತ್ನ, ದೇಹ ಮನಸ್ಸುಗಳ ದ್ವಂದ್ವ. ಗಂಡು–ಹೆಣ್ಣು ಸಂಬಂಧ, ಜೀವ–ಆತ್ಮಗಳ ಸಮಸ್ಯೆ–ಹೀಗೆ ನಮಗೆ ಮೇಲ್ನೋಟಕ್ಕೆ ತಾತ್ವಿಕ ಸಮಸ್ಯೆಗಳಂತೆ ಕಾಣುವ ಈ ಪ್ರಶ್ನೆಗಳೆಲ್ಲ ಕಂಬಾರರ ಕಲಾವಿನ್ಯಾಸದಲ್ಲಿ ಸಾಂಸ್ಕೃತಿಕ ಸಮಸ್ಯೆಗಳಾಗಿ ರೂಪುತಳೆಯುತ್ತವೆ.

'ಸಿರಿಸಂಪಿಗೆ' ಜಾನಪದದ ಯಕ್ಷಗಾನದ ಧಾಟಿಯನ್ನು ಒಳಗೊಂಡ ನಾಟಕ. ಇಲ್ಲಿ ದೇಹ ಮನಸ್ಸುಗಳ ಸಂಬಂಧ, ದೇಹ–ಮನಸ್ಸು ಬಿದ್ರವಾದ ಸ್ಥಿತಿಯಲ್ಲಿ– ಗಂಡು ಹೆಣ್ಣು ಸಂಬಂಧ ಬದುಕಿನ ಚೈತನ್ಯದಲ್ಲಿ ಜೀವ–ಭಾವಕ್ಕಿರುವ ನಂಟಿನ ಸಮಸ್ಯೆ–ಈ ಪರಿಯಲ್ಲಿ ಅನೇಕ ಸಮಸ್ಯೆಗಳು ಸಾಂಸ್ಕೃತಿಕವಾದ ಹುಡುಕಾಟಕ್ಕೆ ಗುರಿಯಾಗಿವೆ. ಇವರ ಹಿಂದಿನ ನಾಟಕ, ಕವನಗಳಲ್ಲಿ ಮತ್ತೆ ಮತ್ತೆ ಎದ್ದು ಮೈತೋರಿದ ಸಮಸ್ಯೆ ಇದು. ಪರಿಹಾರ ಕಂಡು ಹಿಡಿಯಲಾಗದ, ಚಾರಿತ್ರಿಕ ಗತಿ ತರ್ಕವೇ ಹೀಗೆಯೋ ಎನ್ನುವಂತೆ ಮರಳಿ ಮರಳಿ ಈ ಆಶಯಗಳು ಕಂಬಾರರ ಅಭಿವ್ಯಕ್ತಿಯಲ್ಲಿ ರೂಪುತಳೆದಿವೆ. ಋಷ್ಯಶೃಂಗ, ಜೋಕುಮಾರಸ್ವಾಮಿ – ಈ ನಾಟಕಗಳಲ್ಲಿ ಸಂಸ್ಕೃತಿಯ ನಿರ್ಜೀವ ಸ್ವರೂಪಕ್ಕೆ ನ್ಯಾಯಬದ್ಧ ಸಾಮಾಜಿಕ ದೇಹದ ನಪುಂಸಕತೆಯೇ ಕಾರಣವಾಗಿದ್ದು, ಹೆಣ್ಣು ಅಲ್ಲಿ ಹಪಹಪಿಸುವ, ಮುರುಟಿ ಹೋದ ಚೈತನ್ಯವಾಗಿದ್ದಾಳೆ. ಈ ಸಮಸ್ಯೆಯ ಬೆಳವಣಿಗೆಯೇ ಸಿರಿಸಂಪಿಗೆಯಲ್ಲಿ ಇನ್ನೊಂದು ರೀತಿಯ ನಾಟ್ಯೀಕರಣಕ್ಕೆ ಧಾತುವಾಗಿದೆ. ಸಂಸ್ಕೃತಿಯ ನಿಸ್ಸತ್ವ ಸ್ಥಿತಿಯನ್ನು ಬಗೆದು ನೋಡುತ್ತ ಅದರ ವಿವಿಧ ಆಕೃತಿಗಳನ್ನು ಕಾಣುವ ಪ್ರಯತ್ನ ಕಂಬಾರರ ಮುಂದಿನ ಕಾವ್ಯ–ನಾಟಕಗಳಲ್ಲಿದೆ. ಎಲ್ಲ ಕಡೆಯೂ ಗಂಡು ಈ ಸಮಸ್ಯೆಯ ಕೇಂದ್ರ. ಸಂಸ್ಕೃತಿಯ ಬೆಳವಣಿಗೆಯ ಸಮಸ್ಯೆ. ಪುರುಷ ಪ್ರಧಾನವಾದದ್ದಾದರೆ, ಚೈತನ್ಯಮಯ ಸ್ತ್ರೀ ಒದಗುವುದಾದರೂ ಹೇಗೆ? ಈ ದೇಹ–ಚೈತನ್ಯಗಳ ನಡುವಣ ಕಂದರವೇ ನಪುಂಸಕತ್ವಕ್ಕೆ ಎಡೆಮಾಡಿರಬಹುದು ಎನ್ನುವ ಶೋಧವೇ ಸಿರಿಸಂಪಿಗಯಲ್ಲಿ ಗಾಢವಾಗಿ ಕಾಡಿರಬಹುದಾದ ಸಮಸ್ಯೆಯಾಗಿದೆ.

ನಾಟಕದ ನಾಯಕ ಶಿವನಾಗದೇವ. ಮದುವೆಯಾಗುವುದಾದರೆ ಯಾವುದೇ ಕೊರತೆಯಿಲ್ಲದ ಹೆಣ್ಣನ್ನು ಮದುವೆಯಾಗಬೇಕೆಂಬುದು ಇವನ ನಿಶ್ಚಯ. ದೇಹವನ್ನು ಮೀರಿದ ಚೈತನ್ಯವನ್ನು ಕಾಣುವ ಆದರ್ಶವೊಂದರಲ್ಲಿ ಇವನು ತೊಡಗುತ್ತಾನೆ. ಮನುಷ್ಯನ ಅಸ್ತಿತ್ವದ ಪ್ರಶ್ನೆಗಳು ಪ್ರಾರಂಭವಾಗುವುದು ಇಲ್ಲಿಯೇ. ಯಾವುದು ಮುಖ್ಯ? ದೇಹವೋ? ಚೈತನ್ಯವೋ? 'ಸಿರಿಸಂಪಿಗೆ'ಯಲ್ಲಿ ಇದು ಅನೇಕ ನಾಟಕೀಯ ಘಟನೆಗಳಿಗೆ ಎಡೆಕೊಡುತ್ತದೆ. ನಿದ್ರಾಪರವಶ ಅವಸ್ಥೆಯಲ್ಲಿ ಶಿವನಾಗದೇವ ದೀಪದ ಮೊಲ್ಲೆಯ ರೂಪದ ಹೆಣ್ಣನ್ನು ಕಾಣುತ್ತಾನೆ. ಆಕೆಯನ್ನು ಹಂಬಲಿಸುತ್ತಾನೆ. ಕೊರತೆಯಿಲ್ಲದ ಹೆಣ್ಣನ್ನು ಪಡೆಯಲು ಅವನೇ ಒಂದು ಉಪಾಯ ಮಾಡಿ ತನ್ನ ದೇಹವನ್ನು ಸೀಳಲು ಹೇಳಿ, ಎರಡು ಮಡಕೆಗಳಲ್ಲಿ ತುಂಬಿಸಿ ಹೂವಿನಲ್ಲಿ ಹೂಳಿಸುತ್ತಾನೆ. ಹೂವಿನ ಮಡಕೆಗಳಿಂದ ಶಿವನಾಗದೇವನ ದೇಹ ಎರಡು ಗುಣ ಸ್ವರೂಪವಾಗಿ ಮೈ ತಳೆಯುತ್ತದೆ. ಶಿವನಾಗದೇವನೇ ಒಂದರ್ಧದಿಂದ ಮೈ ತಳೆದರೆ, ಇನ್ನರ್ಧ ಕಾಳಿಂಗ ಸರ್ಪವಾಗಿ ಮೈ ತಳೆಯುತ್ತದೆ. ಶಿವನಾಗದೇವ ಮನಸ್ಸು, ಚೈತನ್ಯವನ್ನೂ, ಕಾಳಿಂಗನು ದೇಹಕ್ಕೆ ಪ್ರಾಶಸ್ತ್ಯ ಕೊಟ್ಟ ಅವತಾರವೂ ಆಗಿ–ನಾಟಕದ ಆಯಾಮಗಳು

ಬಿಚ್ಚಿಕೊಳ್ಳುತ್ತವೆ. ಸಿರಿಸಂಪಿಗೆಯನ್ನು ಒತ್ತಾಯಕ್ಕೆ ಮದುವೆಯಾದ ಶಿವನಾಗದೇವನಿಗೆ – ಆ ದೇಹದಲ್ಲಿ ನಿರಾಸಕ್ತಿಯಾಗುವುದು ತಾರ್ಕಿಕ ಬೆಳವಣಿಗೆಯ ದೃಷ್ಟಿಯಿಂದ ಸರಿಯಾಗಿಯೇ ಇದೆ.

ನಾಟಕದಲ್ಲಿ ಶಿವನಾಗದೇವನ ತತ್ವಕ್ಕೆ, ಪ್ರತಿತತ್ವವಾಗಿ ಅರಮನೆಯ ವಿದೂಷಕರಾದ ಅವಳಿ–ಜವಳಿಗಳು ಬರುತ್ತಾರೆ. ಅವಳಿ–ಜವಳಿಗಳು ಹೆಸರೇ ಸೂಚಿಸುವಂತೆ ದೇಹದ ಪ್ರಾಶಸ್ತ್ಯಕ್ಕೆ ಒಂದು ರೂಪನ್ನು ಮಾತ್ರವಲ್ಲ– ಪ್ರತಿರೂಪುಗಳನ್ನು ಪಡೆದು ಬಂದಂಥವರು. ಶಿವನಾಗದೇವನಿಗೆ ಮದುವೆಯಲ್ಲಿ ನಿರಾಸಕ್ತಿಯಾದರೆ ಇವರು ತಾಮುಂದು ನಾ ಮುಂದು ಎಂದು ಹಂಬಲಿಸುವರು. ದೇಹವನ್ನು, ಹೆಣ್ಣು ದೇಹಕ್ಕಾಗಿ – ಬಲಿಕೊಟ್ಟು ಹೋರಾಡಲು ಸಿದ್ಧವಿರುವವರು. ಕಮಲಳಿಗೆ ಜವಳಿಯನ್ನು ಮದುವೆಯಾದರೂ–ಅವರು ದೇಹಕ್ಕೆ ಕೊಟ್ಟ ಪ್ರತಿರೂಪಿನಿಂದಾಗಿ ಯಾರನ್ನು ಮದುವೆಯಾದೆನೆನ್ನುವುದೇ ಸಮಸ್ಯೆ. ಗಂಡನ ಪ್ರೀತಿಯನ್ನು ಪಡೆಯದ ಕೊರಗು ಇವಳದು.

ದೇಹದ ಅತೀವ ಮೋಹ, ಮತ್ಸರ, ಸಾವಿಗೆ ಕಾರಣವಾಗುವುದನ್ನು ಕಮಲಳ ಅನುಭವವು ರೂಪಿಸುತ್ತದೆ. ಊರಹೊರಗಿನ ಹುತ್ತದ ಅರಳು ಮಲ್ಲಿಗೆಯನ್ನು ಕಿತ್ತು ಗಂಡನಿಗೆ ಮಾಲೆ ಮಾಡಿ ಹಾಕಿದರೆ ಅವನು ಸರ್ಪವಾಗಿ ಬಂದು ಕೂಡಿ ಸಂತಾನವಾಗುತ್ತದೆ ಎಂಬ ಕುಲದೇವರ ಕರುಣೆಯನ್ನು ನಂಬಿ ಕಮಲ ಹೂವಿನಮಾಲೆಯನ್ನು ಹಾಕುತ್ತಾಳೆ. ಜವಳಿಯು ಸರ್ಪವಾಗಿ ಮಾರ್ಪಾಡುತ್ತಾನೆ. ಸರ್ಪವಾಗಿ ಕಮಲಿಯನ್ನು ಕೂಡಿದ ಜವಳಿಯನ್ನು ಅವಳಿ ಕೊಲ್ಲುತ್ತಾನೆ. (ಭಿನ್ನದೇಹಿಯಾಗಿ ಕೂಡಿದ ಜವಳಿಯ ಬಗೆಗಿನ ಅಸೂಯೆ ಮುಖ್ಯ ಕಾರಣ.) ದೇಹಕ್ಕೆ ಹಾತೊರೆದ ಅವಳಿಯ ಮೇಲೆ ಕುಪಿತಳಾದ ಕಮಲಿ ತನ್ನ ಎರಡೂ ಮೊಲೆಗಳನ್ನು ಕಿತ್ತೆಸೆಯುತ್ತಾಳೆ. ದೇಹಕ್ಕೆ ಕೊಟ್ಟ ಪ್ರಾತಿನಿಧ್ಯ ಅತ್ಯಂತ ಕುರೂಪು ಸ್ಥಿತಿಗೆ ಎಳೆದು ತರುವುದನ್ನು ಇಲ್ಲಿ ಶಿವನಾಗದೇವನ ಪ್ರಸಂಗಕ್ಕೆ ಪ್ರತಿಯಾಗಿ ನಾಟಕ ಚಿತ್ರಿಸುತ್ತದೆ.

ಶಿವನಾಗದೇವ ಆತ್ಮ, ಚೈತನ್ಯಕ್ಕೆ ಕೊಟ್ಟ ಆರಾಧನಾಭಾವವು ಕ್ರಮೇಣ ಕೆಳ ನೆಲೆಗೆ ಇಳಿಯುವುದನ್ನು ನಾಟಕವು ಪರ್ಯಾಯವಾಗಿ ಸೂಚಿಸುತ್ತದೆ. ಶಿವನಾಗದೇವನ ಅರ್ಧ (ದೇಹ ಪ್ರಾಶಸ್ತ್ಯದ) ಕಾಳಿಂಗನ ಜೊತೆ ಸಿರಿಸಂಪಿಗೆ ಕೂಡಿ ಬಸಿರಾಗುವುದನ್ನು ಶಿವನಾಗದೇವ ಅನುಮಾನದಿಂದ ನೋಡುತ್ತಾನೆ. 'ಚೈತನ್ಯ'ದ ಕೊರತೆ ಇಲ್ಲಿ ಸ್ಪಷ್ಟವಾಗುತ್ತದೆ. ಶಿವನಾಗದೇವ ದಿವ್ಯ ಪ್ರಸಂಗದಲ್ಲಿ ಸೋಲುತ್ತಾನೆ. ತನ್ನ ಅರ್ಧ ದೇಹವಾದ ಕಾಳಿಂಗನ ಜೊತೆ ಮುಖಾಮುಖಿಯಾಗಿ ಜಯ ಸಾಧಿಸುತ್ತಾನೆ. ಆದರೆ ಇಲ್ಲಿ ಶಿವನಾಗದೇವನ ದೇಹದ ಮೇಲಿನ ಜಯ ನಿರರ್ಥಕ ಪ್ರಯತ್ನವಾಗಿದೆ. ದೇಹದ ಅಂತ್ಯ–ಆತ್ಮದ ಅಂತ್ಯವೂ ಆಗಿದೆ. ಅದಕ್ಕೆ ಕೊನೆಯಲ್ಲಿ ಅವನಿಗೆ

ಅನ್ನಿಸಿದೆ 'ನಮ್ಮ ಮಗ ಸೀಳಿಕೊಳ್ಳದ ಹಾಗೆ ನೋಡಿಕೊ' ಎನ್ನುವ ಭಾವ. (ಮತ್ತೆ 'ಮಗ'ನೇ ಹುಟ್ಟುವನೆಂಬ ಅವನ ಭಾವದಲ್ಲಿ ಈ ಹುಡುಕಾಟದ ನೆಲೆ ಮುಗಿದಿಲ್ಲವೆನ್ನುವುದು ಸೂಚ್ಯವಿದೆ)

ದೇಹವೊಂದಕ್ಕೇ ಕೊಟ್ಟ ತೀವ್ರವಾದ ಪ್ರಾಧಾನ್ಯ, ದೇಹ ಮೋಹವನ್ನೇ ಕಳೆದು–ನಿರರ್ಥಕ ಚೈತನ್ಯದ ಹುಡುಕಾಟ ಇವೆರಡರ ಅಸಂಪೂರ್ಣತೆ – ಸಂಸ್ಕೃತಿಯ ಚೈತನ್ಯವನ್ನೇ ಉಡುಗಿಸಬಲ್ಲ ಸ್ಥಿತಿ ನಾಟಕದ ಕ್ರಿಯಾಬಿಂದುವಾಗಿದೆ. ದೇಹ–ಮನಸ್ಸಿನ ಸಾಮರಸ್ಯದ ನೆಲೆ ಇಲ್ಲದ್ದು ಚಾರಿತ್ರಿಕ ಕಾಲವಾಗಿದೆ. ಅವುಗಳನ್ನು ಭಿನ್ನವಾಗಿಸಿದ ಸಾಂಸ್ಕೃತಿಕ ವಾತಾವರಣವು ಅವುಗಳನ್ನು ಬೇರೆಲ್ಲೋ ಇರುವ ಹುಡುಕಾಟದ ತಾಣವೆಂಬಂತೆ ಭ್ರಮಿಸಲು ಪ್ರೇರೇಪಿಸಿದೆ. – ಇದೂ ಚಾರಿತ್ರಿಕ ಕಾಲ. ಈ ಅನ್ವೇಷಣೆ ಸರಿಯಾದ ದಿಕ್ಕು ಹಿಡಿದರೆ ಈ ಕಾಲಸ್ವರೂಪದ ಮುಕ್ತಾಯವಾಗುತ್ತದೆ. ತತ್ಫಲವಾಗಿ ಕಲಾನ್ವೇಷಣೆಯೂ ಇರುವುದಿಲ್ಲ. ಮನುಷ್ಯನ ಸಂಸ್ಕೃತಿಯಲ್ಲಿ ನಿರಂತರವಾಗಿ ಎದುರಾಗುತ್ತಿರುವ ಸಮಸ್ಯೆಯಾಗಿ ಕಂಬಾರರು ತಮ್ಮ ಕಲಾಕೃತಿಯಲ್ಲಿ ಈ ಅನ್ವೇಷಣೆಯನ್ನು ಮೂಡಿಸಲು ಯತ್ನಿಸಿದ್ದಾರೆ. ಈ ಸಮಸ್ಯೆಯ–ಕಾರಣಗಳ ಹೊಳಹುಗಳು ನಾಟಕದ ನಾಟ್ಯಕ್ರಿಯೆಯ ಅಂತರಾಳದಿಂದಲೇ ಮಿಂಚಿ ಹೊಳೆಯುತ್ತವೆ. 'ಸಿರಿಸಂಪಿಗೆ' ತನ್ನ ಸ್ವರೂಪದ ಒಡಲಿನಿಂದ ಕಟ್ಟಿ ಬಿಚ್ಚಲು ಪ್ರಯತ್ನಿಸುವ ಸಾಂಸ್ಕೃತಿಕ ಸಮಸ್ಯೆಯ ಕಾರಣದಿಂದ ವಿಶಿಷ್ಟವಾಗಿದೆ. ಕಂಬಾರರ ಕೃತಿಗಳ ಸಾಲಿನಲ್ಲಿ ಅಷ್ಟೇ ಏಕೆ ಕನ್ನಡ ನಾಟಕಗಳ ಸಾಲಿನಲ್ಲೇ ಇದಕ್ಕೆ ಪ್ರಮುಖ ಸ್ಥಾನವಿದೆ.

* * *

## ಸಿರಿಸಂಪಿಗೆಯ ಒಂದು ಮುಖ್ಯ ಭಾಗ

(ಶಿವನಾಗದೇವ ತನ್ನ ಇನ್ನರ್ಧ ದೇಹ ಕಾಳಿಂಗವನ್ನು ಎದುರಿಸಿ ಹೋರಾಡುವ ದೃಶ್ಯ. ಇಲ್ಲಿ ಭಾಗವತನ ಮೂಲಕ ಹೇಳಿಸಲಾದ ಹಾಡೇ ಸ್ವಯಂಪೂರ್ಣವಾಗಿ ನಾಟಕೀಯ ಘಟನೆಯನ್ನು ಚಿತ್ರಿಸುತ್ತದೆನ್ನುವ ಕಾರಣಕ್ಕಾಗಿ ಕೊಡಲಾಗಿದೆ)

(ಯುದ್ಧ ಭೂಮಿಯಲ್ಲಿ ರಾಜ ಮತ್ತು ಕಾಳಿಂಗ ಎದುರಾಗುವರು)

ಭಾಗವತ : ನನ್ನ ನಾರಿಯ ಸೇರಿದಾತನೆ
ನನ್ನ ಕುಲವೆಂಜಿಲಿಸಿದಾತನೆ
ನಿನ್ನ ಕೊಲ್ಲದೆ ಮಾಣೇನೆನ್ನುತ ರಾಜ ಗರ್ಜಿಸಿದ॥

ರಾಜ : ಮಾಯಕಾರನಾಗಿ ಬಂದು ನನ್ನ ನಾರಿಯ ಸೇರಿದ ಜಾರ ನೀನಲ್ಲವೊ? ನನ್ನ ಕುಲವೆಂಜಿಸಿಲಿದ ನಾಯಿ ನೀನಲ್ಲವೊ? ನಿನ್ನಂಥ ಜಾರ ಚೋರನನ್ನು ಕೊಂದಲ್ಲದೆ ನನ್ನ ಆಯುಧಗಳಿಗೆ ನೆಮ್ಮದಿಯೆಲ್ಲಿ? ಬಂದು ಯುದ್ಧ ಕೊಡು ಅಧಮಧಮಾ॥

ಭಾಗವತ : ಕಣ್ಣ ಕನ್ನಡಿಯಲ್ಲಿ ಕಂಡಿರುವೆನೇ ನಿನ್ನ
ನನ್ನ ಇನ್ನೊಬ್ಬನಂತಿರುವಿ
ನನಗೆ ನಿನ್ನಲಿ ಕೋಪ ಹುಟ್ಟದಯ್ಯಾ ನೀನು
ಅನುಜನೇ ಅಳಿದ ಜನ್ಮದಿ॥

ಕಾಳಿಂಗ : ದೂರವಿರು ರಾಜಕುಮಾರ, ಯುದ್ಧಕ್ಕೆ ಹೆದರಿದವನಲ್ಲ ನಾನು, ಕನ್ನಡಿಯಲ್ಲಿ ಅನೇಕ ಬಾರಿ ನಿನ್ನ ಕಂಡಂತೆ ನೆನಪಾಗುತ್ತಿದೆ. ನಿನ್ನ ಕಂಡರೆ ನನಗ್ಯಾಕೋ ಕರುಣ ಬರುತ್ತಿದ. ಕಾಳಗವಾಡುವ ಮುನ್ನ ಈ ಉಮ್ಮಳ ಯಾಕೆಂದು ಚಿಂತಿಸಲಿಕ್ಕೆ ಸಮಯ ಕೊಡು ರಾಜಕುಮಾರ

ಭಾಗವತ : ಹಾವಿನಂತೆಯೆ ಸಿಂಬೆಸುತ್ತುವು
ದಾವ ವೇಷವೊ ಕಾಣೆನಲ್ಲಾ
ನಿನ್ನ ಪಾಲಿನ ಗರುಡ ಬಂದೆನು
ಸಹಿಸಿಕೊ ಎಂದ॥

ರಾಜ : ಅನುಕೂಲಕ್ಕೆ ತಕ್ಕಂತೆ ಆಯಾ ರೂಪ ತಾಳಿ ವಂಚನೆ ಮಾಡುವ ನಿನಗೆ ಇನ್ನೂ ಸಮಯಾವಕಾಶ ಕೊಡಬೇಕೋ? ಪ್ರಾಣಭೀತಿಯಿಂದ ಮುದುಡಿ ಸಿಂಬೆಯಾಗುತ್ತಿರುವ ನಿನ್ನ ಯಾವ ಸಂಚವು ಇನ್ನು ಫಲಿಸದಯ್ಯಾ
ಇಗೋ ನಿನ್ನ ಪಾಲಿನ ಗರುಡ ನಿನ್ನ ಮೇಲೆರಗುತ್ತಾನೆ. ಧೈರ್ಯವಿದ್ದರೆ ಎದುರಿಸು.

ಕಾಳಿಂಗ : ನನ್ನ ಅಹಂಕಾರ ಕೆಣಕಬೇಡ ರಾಜಕುಮಾರ, ನೀನು ಸುಕುಮಾರ ಕೊಲೆಗಳನ್ನು ಕಾವ್ಯದಲ್ಲಿ ಮಾತ್ರ ಓದಿದವನು. ಒಂದು ಬಾರಿ ಒಂದೇ ಬಾರಿ ನಿನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡುವುದಕ್ಕಾದರೂ ಅವಕಾಶಕೊಡು.

ರಾಜ : ಹಾಗೆ ಮಾಡುವುದೂ, ನಿನ್ನ ಕೈಯಲ್ಲಿ ಹಗ್ಗ ಕೊಟ್ಟು ಕೈ ಕಟ್ಟಿಸಿ ಕೊಳ್ಳುವುದೂ ಒಂದೇ, ಈಗೇನು ಯುದ್ಧ ಮಾಡುತ್ತೀಯೋ, ಹೇಡಿಯ ಹಾಗೆ ಸಾಯುತ್ತೀಯೋ? ಇಗೋ ಎದುರಿಸು

ಭಾಗವತ : ಒಬ್ಬರೊಬ್ಬರ ಕೆಣಕಿ ಕಾರುತ
ಅಬ್ಬರದಿ ಸಾಹಸವ ಮೆರೆಯುತ
ಇಬ್ಬರೂ ಘನಘೋರ ಹೋರಾಡಿದರು
ಧುರದೊಳಗೆ ॥
ಕಡೆಗೆ ನಾಗನು ಕರುಳ ನೋಯಲು
ಕಡಮೆಯಾದನು ಎದುರು ಬಲದಲಿ
ಜಡಿದು ಕೊಂದನು ರಾಜ ಗುಡುಗುತ ಒಡಲ
ತುಳಿಯುತಲಿ ॥

ದೂರದಾಕಾಶವನು ನೋಡುತ
ಹರಣ ಹಾರಿತು ನಾಗದೇವನ
ತೆರೆದ ಕಣ್ಣಲಿ ರಾಜ ಕಂಡನು ಮರೆಯ
ದದ್ಭುತವ ॥

ಕಾಣಕಾಣುತ ಆದರೆ ತನ್ನಯ
ಬೆನ್ನಯುರಿ ಕಗ್ಗಂಟು ಸಡಿಲಿತು
ತಣ್ಣಗಾಯಿತು ಕರುಳು ಎನ್ನುತ ಅರಮನೆಗೆ
ಬಂದ ॥

# ಎಚ್. ಎಸ್. ವೆಂಕಟೇಶಮೂರ್ತಿಯವರ 'ಋತುವಿಲಾಸ'

ಬಸವರಾಜ ಕಲ್ಗುಡಿ

ಕೇಂದ್ರ ಸಾಹಿತ್ಯ ಅಕಾಡೆಮಿ ಕನ್ನಡದಲ್ಲಿ ಅನುವಾದಕ್ಕೆಂದು ಕೊಟ್ಟ ಪ್ರಶಸ್ತಿಯ ಮೊದಲ ಪಟ್ಟ ವೆಂಕಟೇಶಮೂರ್ತಿಯವರ 'ಋತುವಿಲಾಸಕ್ಕೆ' ಸಂದಿದೆ. 1991 ರಲ್ಲಿ ಕೊಟ್ಟ ಈ ಪ್ರಶಸ್ತಿಯು ಸೆಂಟ್ರಲ್ ಸಾಹಿತ್ಯ ಅಕಾಡೆಮಿಯಿಂದ 'ಋತುವಿಲಾಸಕ್ಕೆ ಸಿಕ್ಕಿತು. ಕಾಳಿದಾಸನ 'ಋತುಸಂಹಾರ' ಮೂಲವಾಗಿದ್ದು – ಅದರ ಅನುವಾದವನ್ನು 'ಋತುವಿಲಾಸ'ವೆಂಬ ಪರಿಣಾಮಕಾರಿಯಾದ ಹೆಸರಿನಲ್ಲಿ ವೆಂಕಟೇಶಮೂರ್ತಿಯವರು ಮಾಡಿದ್ದಾರೆ. ಮೂಲದ ಅರ್ಥವಿನ್ಯಾಸವನ್ನು ಪ್ರತಿಸರ್ಗದಲ್ಲಿ ಭಿನ್ನ ವೃತ್ತಗಳನ್ನು ಉಪಯೋಗಿಸಿಕೊಂಡು ಗ್ರಹಿಸುವ ಪ್ರಯತ್ನವನ್ನು ಮಾಡಿದ್ದಾರೆ. ಕಾಳಿದಾಸನ 'ಋತು ಸಂಹಾರ'ವು ಅವನ ಶ್ರೇಷ್ಠ ಕೃತಿಯೇನೂ ಅಲ್ಲದಿದ್ದರೂ, ಅವನ ಸೃಜನಶೀಲ ಪ್ರತಿಭೆಯ ಅತ್ಯುನ್ನತ ಶಿಖರಗಳಾದ ಕುಮಾರಸಂಭವ, ಮೇಘದೂತ ಮತ್ತು ರಘುವಂಶ – ಈ ಕಾವ್ಯಗಳ ಪರಂಪರೆಯಲ್ಲಿ ಅದಕ್ಕೊಂದು ಪ್ರಾಮುಖ್ಯತೆ ಬರುತ್ತದೆ. ಪ್ರಕೃತಿಯ ವಿವಿಧ ಸ್ವರೂಪಗಳು, ಪ್ರಕೃತಿ–ಮನುಷ್ಯ ಸಂಬಂಧ, ಪ್ರಕೃತಿ ಮತ್ತು ಪ್ರೇಮ, ನೆನಪುಗಳು – ಹೀಗೆ ಪ್ರಕೃತಿ ಹಾಗೂ ಸಂಸ್ಕೃತಿಯ ಸಂಬಂಧಗಳ ಅನೇಕ ಚಿತ್ರಗಳನ್ನು ಪ್ರತಿಮಾ ವಿನ್ಯಾಸದ ಮೂಲಕ ಕೊಡುವ ಋತುಸಂಹಾರ ಆ ಕಾರಣಕ್ಕಾಗಿ ಒಂದು ಸತ್ವಯುತ ಸ್ವರೂಪವನ್ನು ಸೃಷ್ಟಿಸಿಕೊಂಡಿದೆ. ಅವನ ಉಳಿದ ಕಾವ್ಯಗಳಿಗೆ ಇಲ್ಲಿಯ ಚಿತ್ರಣದ ಆಳದಲ್ಲಿರುವ ಸಂವೇದನೆಯು ಒಂದು ಧಾತುವಾಗಿ ಒದಗಿದೆ. ಕುಮಾರ ಸಂಭವ, ಮೇಘಸಂದೇಶದಂಥ ಕಾವ್ಯಗಳ ಒಡಲಾಳದ ಸತ್ವದ ಹಿಂದೆ 'ಋತು ಸಂಹಾರ'ದ ಸಂವೇದನೆಯು ಇರದಿದ್ದರೆ ಅವುಗಳ ಅರ್ಥವಿಸ್ತಾರ ಅಷ್ಟು ಕುಂಠಿತಗೊಳ್ಳುತ್ತಿತ್ತು.

ಋತುಸಂಹಾರದ ವೈಶಿಷ್ಟ್ಯತೆಯನ್ನು ಕುರ್ತಕೋಟಿಯವರು ಈ ಮಾತುಗಳಲ್ಲಿ ವಿವರಿಸುತ್ತಾರೆ "ಋತುಪ್ರೇರಣ ವ್ಯಾಪಕವಾಗಿ ಸೃಷ್ಟಿಯ ಬದುಕನ್ನು ಪುನಃ ಸೃಷ್ಟಿಸುತ್ತದೆ, ಕಾಳಿದಾಸನಂಥ ಕವಿಗೆ ಋತುಚಕ್ರವನ್ನು ನಿರೀಕ್ಷಿಸುವುದರಲ್ಲಿ,

ಸ್ವಾಗತಿಸುವದರಲ್ಲಿ, ಋತುಪ್ರೇರಣೆಯನ್ನು ಅನುಭವಿಸಿ ಅದರಲ್ಲಿ ತನ್ಮಯವಾಗುವುದರಲ್ಲಿ ಆಸಕ್ತಿಯಿದೆ. ಆದ್ದರಿಂದ ಆಯಾ ಋತುವಿನಲ್ಲಿ ನಡೆಯುವ ಸುರತೋತ್ಸವ ಕೂಡ ಒಂದು ಕರ್ಮ ಕಾಂಡದಂತೆ ಕ್ರಮಬದ್ಧವಾಗಿರುತ್ತದೆ. ಋತುಗಳ ಸ್ವಭಾವ ಮನುಷ್ಯರ ಸ್ವಭಾವವನ್ನು ತಿದ್ದುವ ವ್ಯಾಪಾರ ಅದ್ಭುತವಾದದ್ದು. ಶರತ್ಕಾಲದ ನಾಚಿಕೆಯಿಂದ ತುಂಬಿದ ಪ್ರಣಯ ಕ್ರೀಡೆಗೂ, ವಸಂತದ ವಿಶೃಂಖಲವಾದ ಪ್ರಣಯ ಕ್ರೀಡೆಗೂ ಇರುವ ಅಂತರವನ್ನು ಗಮನಿಸಬೇಕು. ಋತುವಿಗೆ ವಿಸಂಗತವಾದ, ವಿಮುಖವಾದ ಯಾವ ಜೀವನ ವ್ಯಾಪಾರವೂ ಇಲ್ಲಿ ವರ್ಣಿತವಾಗಿಲ್ಲ. ಈ ಮಾತಿಗೆ ಗಿಡ, ಬಳ್ಳಿ, ಮತ್ತು ಪ್ರಾಣಿಗಳಂತೆ ಮನುಷ್ಯರೂ ಅಪವಾದವಾಗಿಲ್ಲ. ಈ ಮಾತು ಆ ಕಾಲದ ಧರ್ಮವನ್ನು ಸೂಚಿಸುತ್ತದೆಂಬ ಮಾತು ಇಲ್ಲಿ ಮಹತ್ವದ್ದಾಗಿದೆ''. ಕಾಳಿದಾಸನ ಜೀವನ ಸಂವೇದನೆಯು ಅವನ ಋತುಸಂಹಾರದಲ್ಲಿ ವ್ಯಕ್ತವಾಗುವಂತೆ ಉಳಿದ ಕಾವ್ಯಗಳ ನಾಡಿಮಿಡಿತವೂ ಆಗಿದೆ.

ವೆಂಕಟೇಶಮೂರ್ತಿಯವರ ಅನುವಾದವನ್ನು ಅನೇಕ ವಿಮರ್ಶಕರು ಮೆಚ್ಚಿದ್ದಾರೆ. 'ಇದೊಂದು ಹೊಸ ಬಗೆಯ ಭಾಷಾಂತರ ವಿಧಾನ. ಮೂಲವನ್ನು ಓದಿ ಅಲ್ಲಿಂದ ಚಿಮ್ಮುವ ಭಾವದ ಆಸ್ವಾದವನ್ನು ತಮ್ಮದೇ ಧಾಟಿಯ ಮಾತಿನಲ್ಲಿ ಓದುಗರಿಗೆ ಬಡಿಸುವುದು ಈ ವಿಧಾನ'' ವೆಂದು ಕವಿ ಪು. ತಿ. ನ ಅವರು ಹೇಳಿದ್ದಾರೆ. 'ಋತು ವಿಲಾಸ'ಕ್ಕೆ ಸೊಗಸಾದ ಮುನ್ನುಡಿಯನ್ನು ಬರೆದ ಕುರ್ತಕೋಟಿಯವರು ವೆಂಕಟೇಶಮೂರ್ತಿಯವರ ಅನುವಾದದಲ್ಲಿ ಸಫಲತೆಯ, ವಿಫಲತೆಯ ಕ್ಷಣಗಳನ್ನು ಗುರುತಿಸಿದ್ದಾರೆ.

ಆಧುನಿಕ ಕನ್ನಡ ಕವಿತೆ, ಹಾಗೂ ವೆಂಕಟೇಶಮೂರ್ತಿಯವರ ಕಾವ್ಯ ಚಟುವಟಿಕೆಯ ಹಿನ್ನೆಲೆಯಲ್ಲಿಯೂ 'ಋತುವಿಲಾಸ' ಕೃತಿಯ ಬಗ್ಗೆ ಕೆಲವು ವಿಚಾರಗಳನ್ನು ಮಾಡಬಹುದು. ವೆಂಕಟೇಶಮೂರ್ತಿಯವರು, ಹೊಸ ಸೃಜನಶೀಲ ಕವಿಗಳ ಸಾಲಿನಲ್ಲಿ ಪ್ರಮುಖರಾದವರು. ಸುಮಾರು ಹನ್ನೊಂದು ಕವನ ಸಂಕಲನಗಳನ್ನು ಇದುವರೆಗೆ ಪ್ರಕಟಿಸಿದ್ದಾರೆ. ಸಣ್ಣಕತೆ, ಮಕ್ಕಳಕಥೆಗಳು, ನಾಟಕಗಳು, ವಿಮರ್ಶೆ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲೂ ಕೃತಿ ರಚನೆ ಮಾಡಿದ್ದಾರೆ, ಕಾವ್ಯರಚನೆಯಲ್ಲಿ ಹೆಚ್ಚು ಸಫಲರಾಗಿರುವ ವೆಂಕಟೇಶಮೂರ್ತಿಯವರ ಕಾವ್ಯದ ಅಭಿವ್ಯಕ್ತಿ ವಿನ್ಯಾಸ, ವಸ್ತುವಿನ ಸ್ವರೂಪ, ಕುತೂಹಲ ಹುಟ್ಟಿಸುವಂಥದ್ದು. ಕಾವ್ಯ ಕಟ್ಟುವ ರಚನೆಯಲ್ಲಿ, ವಸ್ತುವನ್ನು ಒಡೆದು ನೋಡುವ, ಬಿಡಿಭಾಗಗಳಲ್ಲಿ ಮತ್ತೆ ಮತ್ತೆ ಕಾಣಿಸಲು ಪ್ರಯತ್ನ ಪಡಿಸುವ ರಚನೆಯಿದು. ವಸ್ತುವಿನ ಬಂಧ, ಧೋರಣೆ ಹಾಗೂ ಸಂಪೂರ್ಣತೆಯ ಬಗ್ಗೆ ಕವಿಗೆ ಅಷ್ಟು ಆಸಕ್ತಿ ಇಲ್ಲ. ಬೇರೆಯ ಕವಿಗಳು ಕಾವ್ಯ ವಸ್ತುವಿಗೆ ಮಹತ್ವ ಕೊಟ್ಟು ತಕ್ಕ ಶಿಲ್ಪ, ಬಂಧವೊಂದಕ್ಕೆ ಹೆಣಗಾಡಿದರೆ ವೆಂಕಟೇಶಮೂರ್ತಿಯವರ ರಚನೆ ವ್ಯತಿರಿಕ್ತವಾದದ್ದು. ಹೀಗಾಗಿ ಯಾವುದೇ ಕಾವ್ಯ ಪರಂಪರೆಯಲ್ಲಿ ಇಂಥ ರಚನೆಗಳು ವಿಶಿಷ್ಟವೂ, ಪರಕೀಯವೂ ಆಗಿರುತ್ತವೆ.

ವೆಂಕಟೇಶಮೂರ್ತಿಯವರ ಕಾವ್ಯದಲ್ಲಿ ಈ ಕಾರಣದಿಂದಲೇ ಸಾಂಸ್ಕೃತಿಕ ಅಭಿವ್ಯಕ್ತಿಗಳ ಆಯಾಮವು ಇಲ್ಲವೆನ್ನುವಷ್ಟು ಅಪರೂಪ. ಈಗಾಗಲೇ ಇರುವ ಲೋಕ ವಸ್ತುವನ್ನು ಚಿತ್ರಕ ಸತ್ವದ ಕಾವ್ಯ ಭಾಷೆಯಲ್ಲಿ ವಿವಿಧ ರೂಪಗಳಲ್ಲಿ ಹಿಡಿಯುವ ಪ್ರಯತ್ನವನ್ನು ಇವರು ಮಾಡುತ್ತಾರೆ. ಈ ಹಿನ್ನೆಲೆಯಲ್ಲಿಯೇ ಅವರ 'ಋತುವಿಲಾಸ'ದ ಸ್ವರೂಪವನ್ನು ಗಮನಿಸಬಹುದು. ಕಾಳಿದಾಸನ ಋತುಸಂಹಾರವು ಅನೇಕ ಸುಂದರ ಪ್ರತಿಮೆಗಳ ಸರಮಾಲೆಯೆನಿಸಿದರೂ, ಅವನ ಕಾವ್ಯಗಳ ಒಟ್ಟು ಸ್ವರೂಪಗಳ ಹಿನ್ನೆಲೆಯಲ್ಲಿ ಅದಕ್ಕೊಂದು ಸಾಂಸ್ಕೃತಿಕ ಆಯಾಮವನ್ನು ಗುರುತಿಸಬಹುದು. ಹಿಂದೆ ವಿವರಿಸಿದ ಹಾಗೆ ಋತುಸಂಹಾರವು 'ಸಂಸ್ಕೃತಿಯಲ್ಲಿನ ಸಂವೇದನೆ'ಯನ್ನು ಚಿತ್ರಿಸುವ ಕಾವ್ಯ. ವೆಂಕಟೇಶಮೂರ್ತಿಯವರ 'ಋತುವಿಲಾಸ' 'ಋತು ಸಂಹಾರ'ದ ಹಿನ್ನೆಲೆಯ 'ನವನಿರ್ಮಿತಿ' ಎಂದು ಹೇಳುವುದಾದರೆ, ಇದಕ್ಕೆ ತನ್ನ ಕಾಲದ ಸಾಂಸ್ಕೃತಿಕ ಆಯಾಮಗಳು ಇಲ್ಲವೆಂದೇ ಹೇಳಬೇಕು. ಈ ದೃಷ್ಟಿಯಿಂದ ಋತುಸಂಹಾರದ ಸ್ವರೂಪಕ್ಕೆ, ಸಂವೇದನೆಗೆ ಇದು ವಿರುದ್ಧವಾದದ್ದು. ವೆಂಕಟೇಶಮೂರ್ತಿಯವರ ಕಾವ್ಯ ರಚನೆಯ ವಿಶಿಷ್ಟ ಅಂಶಗಳ (ಮೇಲೆ ವಿವರಿಸಿದ) ಹಿನ್ನೆಲೆಯಲ್ಲಿ ಗಮನಿಸಿದರೆ 'ಋತುಸಂಹಾರ'ವನ್ನು ಕವಿ ಪುನರ್ ಸೃಷ್ಟಿ ಮಾಡುತ್ತಿರುವುದರ ತರ್ಕ ಅರ್ಥವಾಗುತ್ತದೆ.

ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರಾಚೀನಕಾಲದಿಂದಲೂ ಬಂದಿರುವ ಅತ್ಯುತ್ತಮ ಕಾವ್ಯಗಳು ಅನುವಾದದ ಬೇರೆ ಬೇರೆ ರೂಪಗಳೇ ಆಗಿ ಸೃಷ್ಟಿಯಾಗಿವೆ. ಪಂಪನ ಆದಿಪುರಾಣ, ನಾಗವರ್ಮನ ಕಾದಂಬರಿ ಮುಂತಾದ ಕೆಲವನ್ನು ಉದಾಹರಣೆಗೆ ಕೊಡಬಹುದು. ಆಧುನಿಕ ಕಾಲದಲ್ಲಿ – ನವೋದಯ, ಹಾಗೂ ನವ್ಯ ಸಾಹಿತ್ಯದ ಸಂದರ್ಭಗಳಲ್ಲಿ ಅನುವಾದಗಳು, ರೂಪಾಂತರಗಳು ಸಾಕಷ್ಟು ಬಂದಿವೆ. ಬಿ. ಎಂ. ಶ್ರೀ. ಯವರ 'ಇಂಗ್ಲಿಷ್ ಗೀತೆಗಳು', ಬೇಂದ್ರೆಯವರ 'ಮೇಘಧೂತ' – ಆ ಯುಗದ ಸಾಂಸ್ಕೃತಿಕ ಒತ್ತಡಗಳ ಅನಿವಾರ್ಯ ಸೃಷ್ಟಿಗಳಾಗಿವೆ. ಕವಿಯ ಅದಮ್ಯ ಹಂಬಲ, ಭಾಷಿಕ ಅಭಿವ್ಯಕ್ತಿಯ ಸಾಧ್ಯಾಸಾಧ್ಯತೆಗಳಲ್ಲಿ ಹೊಸ ಚಾರಿತ್ರ್ಯವನ್ನು ನಿರ್ಮಾಣ ಮಾಡುವ ಸತ್ವವನ್ನು ಪ್ರಕಟಿಸುವಂಥವುಗಳೇ ಆಗಿವೆ. ಕಾವ್ಯದ ವಸ್ತುವೇ ಸಂಸ್ಕೃತಿಯಾಗಿ ಇಂಥ ಪುನರ್ ಸೃಷ್ಟಿಯಲ್ಲಿ ಕಂಡರೆ ವೆಂಕಟೇಶಮೂರ್ತಿಯವರ ಕಾವ್ಯದ ವಸ್ತು– ಹೊಸ ಚಿತ್ರಕ ಸತ್ವವುಳ್ಳ ಆವರಣವನ್ನು ನಿರ್ಮಿಸುವ ವಿವರಗಳ ಕಡೆಗಿದೆ. ಆದ್ದರಿಂದಲೇ 'ಋತು ವಿಲಾಸ'ದಲ್ಲಿ ಸನ್ನಿವೇಶಗಳ ಆವರಣವನ್ನು ರೊಮ್ಯಾಂಟಿಕ್ ಆಶಯದ್ದೆಂದು ಭಾವಿಸಿ, ಅದಕ್ಕೆ ತಕ್ಕ ಭಾಷಿಕ ಸ್ವರೂಪವನ್ನು ಕವಿ ರೂಪಿಸಿಕೊಂಡು ಚಿತ್ರಗಳ ಸೃಷ್ಟಿಗೆ ತೊಡಗಿದ್ದಾರೆ.

ವೆಂಕಟೇಶಮೂರ್ತಿಯವರ ಕಾವ್ಯ ರಚನೆಯ ವೈಶಿಷ್ಟ್ಯವೇ ಇದಾಗಿದೆ. ಇದು ಅವರ ಕಾವ್ಯದ ಭಾಷೆಯ ಬಳಕೆಯಲ್ಲಿ ಚುರುಕುತನ, ನವೀನತೆಯನ್ನು

ತಂದುಕೊಡುತ್ತದೆ. ಅಷ್ಟೇ ಅಲ್ಲ – ಈಗ ಬರೆಯುವ ಇತರರಿಗಿಂತ ಭಿನ್ನವಾದ ಬಗೆಯನ್ನು ಹೇಳುತ್ತದೆ. ವೆಂಕಟೇಶಮೂರ್ತಿಯವರ ಕಾವ್ಯದ ಇಂಥ ವೈಶಿಷ್ಟ್ಯವೇ ಅವರ ಕಾವ್ಯದ ಸತ್ಯವಾಗಿರುವುದರ ಜೊತೆಗೆ ಮಿತಿಯೂ ಆಗಿದೆ.

* * *

## ಋತುವಿಲಾಸದಿಂದ ಆಯ್ದ ಕೆಲವು ಪದ್ಯ ಚಿತ್ರಗಳು

ಗ್ರೀಷ್ಮ : ಸುಡುಸುಡುವ ಸೂರ್ಯ ; ಇರುಳಲ್ಲಿ ತಣ್ಣನೆ ಚಂದ್ರ;
ನೀರು ಹಿತ ದಿನವಿಡೀ ಮಜ್ಜನಕ್ಕೆ
ಬಣ್ಣ ಬಣ್ಣದ ಸಂಜೆ. ರತಿಯ ಬಯಸದು ಜೀವ.
ಬಂತು ಬೇಸಗೆ. ಬೇಡ ಪ್ರಿಯೆಯ ತೆಕ್ಕೆ

ವರ್ಷ : ಹೊಸ ನೀರಿನ ಹೊಳೆ ಮೆರೆದು ಹರಿದಿದೆ
ತೀರದ ಮರಗಳು ಬುಡಮೇಲು
ನಡುವಿನ ಸುಳಿಗಳ ತೋರಿಸಿ ಓಡಿದೆ,
ಕಡಲಿಗೆ ನದಿ ಜಾರಿಣಿಯವೊಲು.

ಕೇಕೆ ಹಾಕಿ ಕುಣಿದಾಡಲು ನವಿಲು
ಬೆನ್ನ ಹಿಂದೆ ಬಣ್ಣದ ಜಾಲ,
ಕೊಕ್ಕಿಗೆ ಕೊಕ್ಕಿವೆ ; ಗೀತೆಗಳುಕ್ಕಿವೆ ;
ಸಾಗಿದಂತೆ ನರ್ತನ ಮೇಳ.

ಶರತ್ : ಬೆಳ್ದಿಂಗಳ ಕಾಂತಿಯನ್ನು ಸ್ತ್ರೀಯರ ಮುಖದಲ್ಲಿ ಇಟ್ಟು,
ಹಂಸದ ಕಲಕಲವ ಕೊಟ್ಟು ಕಾಲ್ಗೆಜ್ಜೆಗೆ,
ಬಂದುಗೆ ಹೂ ಬಣ್ಣವನ್ನು ತರುಣಿಯ ಕೆಳದುಟಿಗೆ ಬಿಟ್ಟು
ಶರದ್ ಋತುವು ಎಲ್ಲಿಗೋ ಪ್ರಯಾಣ ಬೆಳೆಸಿದೆ.

ಹೇಮಂತ : ಕಾಡುವ ಜಿಗಿದಾಡುವ ತನ್ನರಸಿಯ ಮೊಲೆಗಳನು
ನಿರ್ದಯದಲಿ ಮರ್ದಿಸಿರಲು ಇರುಳಲಿ ಪ್ರಿಯಕರನು
ಕಂಡು ಖೇದಗೊಂಡು ಅಳುತಲಿರುವನೊ ಹೇಮಂತ
ಎನ್ನುವಂತೆ ಉದುರುತ್ತಿವೆ ಇಬ್ಬನಿ ಹುಲ್ಲಿಂದ.

ಶಿಶಿರ : ಮುಚ್ಚಿದ ಕಿಟಕಿಯ ಬೆಚ್ಚನೆ ಮನೆಗಳು
ತನಿಗೆಂಡವು ಉರಿಯೊಲೆಯಲ್ಲಿ
ದಪ್ಪ ಬಟ್ಟೆಗಳು, ಹರಯದ ಹೆಂಗಳು
ಪ್ರಿಯ ಎನಿಸುವುದೀ ಕಾಲದಲಿ.

ವಸಂತ : ಚಿಗುರು ಮಾವಿನ ಹೊಳೆವ ಹೂಗಳೆ ಹರಿತ ಬಾಣವಾಗಿರಲು
ಝೇಂಕೃತಿಯ ದುರುದುಂಬಿ ಮಾಲೆಯೆ ಬಿಲ್ಲ ಹೆದೆ ಹುರಿಯಾಗಲು
ಕಾಮಕಾತರಂತರಂಗಕೆ ಶರಗಳೆಸೆಯುತ ಸೀಳಲು
ಬಂದನುಬ್ಬರದಿಂದಲಬ್ಬರಿಸುತ್ತ ಚೈತ್ರದ ಯೋಧನು.

ಕಣ್ಣಿನಲಿ ಚಂಚಲತೆಯಾದನು ಕೆನ್ನೆಯಲಿ ಕೆಂಪಾದನು
ಎದೆಗಳಲಿ ಬಿರುಸಾದ ನಿಮ್ನತೆಯಾದ ಕಟಿಯಲ್ಲಾತನು
ಅಡಿಗಡಿಗೆ ಕಂಪಿಸುವ ಜೋಡಿ ನಿತಂಬದುಲ್ಲುಬ್ಬಾದನು
ಅಂಗದಲಿ ಅಳವಟ್ಟನೀ ಪರಿ ಅಂಗವಿಲ್ಲದಂಗನು.



# ಪು.ತಿ.ನ.

*ಎಚ್. ಎಸ್. ವೆಂಕಟೇಶಮೂರ್ತಿ*

ಕನ್ನಡ ನವೋದಯ ಕಾವ್ಯದ ಹಿರಿಯ ಸಾಧಕರಲ್ಲಿ ಮುಖ್ಯರಾದ ಶ್ರೀ ಪುರೋಹಿತ ತಿರುನಾರಾಯಣ ಅಯ್ಯಂಗಾರ್ ನರಸಿಂಹಾಚಾರ್ ಅವರು 1905ರಲ್ಲಿ ಜನಿಸಿದರು. ಶ್ರೀ ತಿರುನಾರಾಯಣ ಅಯ್ಯಂಗಾರ್ ಇವರ ತಂದೆ. ಶ್ರೀ ರಂಗಮ್ಮ ತಾಯಿ. ಬಾಲ್ಯದಲ್ಲಿ ಸಂಸ್ಕೃತವನ್ನು ವಿಶೇಷವಾಗಿ ಅಧ್ಯಯನ ಮಾಡಿದವರು. ಚಿಕ್ಕ ವಯಸ್ಸಿನಲ್ಲಿ ಮೇಲುಕೋಟೆಯ ಧಾರ್ಮಿಕ ಪರಿಸರ ಇವರನ್ನು ಗಾಢವಾಗಿ ಪ್ರಭಾವಿಸಿತು ಎನ್ನಬಹುದು. 1926ರಲ್ಲಿ ತತ್ವ ಶಾಸ್ತ್ರ, ವೇದಾಂತ ದರ್ಶನ, ಸಂಸ್ಕೃತಗಳನ್ನು ವಿಶೇಷ ವಿಷಯಗಳಾಗಿ ಅಭ್ಯಾಸ ಮಾಡಿ ಬಿ.ಎ. ಪದವಿಯನ್ನು ಪಡೆದರು. ಕಾಳಿದಾಸ ಹಾಗೂ ವರ್ಡ್ಸ್‌ವರ್ತ್ ಇವರ ಮನೋಧರ್ಮವನ್ನು ರೂಪಿಸಿದವರೆಂದು ಹಿರಿಯರಾದ ಎಂ. ಹಿರಿಯಣ್ಣನವರು ಗುರಿತಿಸಿದ್ದಾರೆ.

ಪು.ತಿ.ನ ಅವರಿಗೆ ಅನೇಕ ಗೌರವಗಳು, ಪ್ರಶಸ್ತಿಗಳು ಸಹಜವಾಗಿಯೇ ಪ್ರಾಪ್ತವಾಗಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಪ್ರಸ್ತಾಪಿಸಬಹುದೆಂದರೆ 1966ರಲ್ಲಿ "ಹಂಸ ದಮಯಂತಿ ಮತ್ತು ಇತರ ರೂಪಕಗಳು" ಎಂಬ ಕೃತಿಗೆ ಇವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿತು. 1971ರಲ್ಲಿ ಮೈಸೂರು ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪದವಿಯನ್ನು ಇವರಿಗೆ ನೀಡಿತು. 1981ರಲ್ಲಿ ಚಿಕ್ಕಮಗಳೂರಿನಲ್ಲಿ ನಡೆದ 53ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ಇವರು ಪಡೆದರು. ಈಗ ಅವರಿಗೆ ಭಾರತ ಸರ್ಕಾರ ಪದ್ಮಶ್ರೀ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

ಕನ್ನಡದ ಚಿಂತನ ಶೀಲ ಲೇಖಕರೆಂದು ಪ್ರಸಿದ್ಧರಾಗಿರುವ ಪುತಿನ ಅವರು ಕಾವ್ಯದೊಂದಿಗೆ ಗೀತ ರೂಪಕ, ಲಲಿತ ಪ್ರಬಂಧ ಕಾವ್ಯಮಿಮಾಂಸೆ, ಅನುವಾದ ಮೊದಲಾದ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಬೆಲೆ ಬಾಳುವ ಕೃತಿಗಳನ್ನು ರಚಿಸಿದ್ದಾರೆ. ಅವರ ಎಲ್ಲಾ ಕೃತಿಗಳಲ್ಲಿ ಕಾಣುವ ಸಾಮಾನ್ಯ ಅಂಶವೆಂದರೆ ಅಪೂರ್ವವೂ ವಿಲಕ್ಷಣವೂ ಆದ "ಚಿಂತನಮಯತೆ'' ಆ ಚಿಂತನೆಯಿಂದ ಇವರ ಬರವಣಿಗೆಯಲ್ಲಿ ಕಾಣಿಸುವ ಅಪರೂಪದ ಹೊಳಹುಗಳು. ಸಂಗೀತ, ಪುತಿನ ಅವರ ಇನ್ನೊಂದು ಪ್ರಧಾನ ಆಸಕ್ತಿಯಾದುದರಿಂದ ಅವರ ಕಾವ್ಯದಲ್ಲಿ ಸಂಗೀತದ ಧಾತು ವಿಶೇಷವಾಗಿಯೇ ಕಂಡು ಬರುತ್ತದೆ. ಜೊತೆಗೆ ಸಂಸ್ಕೃತ ಸಾಹಿತ್ಯದಿಂದ ಪರಿಷ್ಕಾರಗೊಂಡ ಮನಸ್ಸು ಅವರದಾದುರಿಂದ ಸೂಕ್ಷ್ಮತೆ- ಸಂಪನ್ನತೆ ಮತ್ತು ಸಂಸ್ಕೃತ ಪ್ರಚುರತೆ ಅವರ ಕಾವ್ಯದಲ್ಲಿ ವಿಶೇಷವಾಗಿ ಕಂಡು ಬರುತ್ತದೆ. ಆದರೆ, ಇದಕ್ಕೆ ಅಪವಾದವೂ ಉಂಟು. ಅಚ್ಚಕನ್ನಡ ಲಯಗಳಲ್ಲಿ, ಜಾನಪದೀಯ ಶೈಲಿಯಲ್ಲಿ ಸರಳವೂ-ಸುಲಭವೂ ಆದ ಅನೇಕ ಕವಿತೆಗಳನ್ನು ಅವರು ರಚಿಸಿದ್ದಾರೆ. ವಿಶ್ವ ಕುಂಟಬಿಯ ಕಷ್ಟ, ನನ್ನ ನಾಯಿ ರಂಗವಲ್ಲಿ, ಕಣಿವೆಯ ಮುದುಕ, ಪ್ರತೀಕ್ಷೆ, ಈ ಬಗೆಯ ಉತ್ಕೃಷ್ಟ ರಚನೆಗಳಾಗಿವೆ. 'ಯದುಗಿರಿಯ ಮೌನವಿಕಾಸ' "ಶಾರದಯಾಮಿನಿ'' "ಮಲೆದೇಗುಲ''ದ ಕವಿತೆಗಳೊಂದಿಗೆ ಮೇಲೆ ಪ್ರಸ್ತಾಪಿಸಿದ ಕವಿತೆಗಳನ್ನು ಹೋಲಿಸಿದರೆ ಶಿಷ್ಟ ಮತ್ತು ದೇಸಿ ಸಂಪ್ರದಾಯಗಳು ಹೇಗೆ ಪುತಿನ ಅವರ ಕಾವ್ಯಗಳಲ್ಲಿ ಸಮಾನಾಂತರವಾಗಿ ಕಾಣಿಸಿಕೊಳ್ಳುತ್ತವೆ ಎಂಬುದು ತಿಳಿಯುತ್ತದೆ. ಪುತಿನ ಅವರ ಕಾವ್ಯದ ಇನ್ನೊಂದು ಮಹತ್ವದ ಅಂಶ ಆ ಕಾವ್ಯದ ಪ್ರಧಾನ ಸೂತ್ರವಾಗಿ ಕಾಣಿಸುವ ಭಾಗವತ ಮನೋಧರ್ಮ. 'ಗೋಕುಲ ನಿರ್ಗಮನ' ದಂತಹ ಗೀತರೂಪಕದಲ್ಲಿ ಈ ಭಾಗವತ ಮನೋಧರ್ಮ ಅದ್ಭುತವಾದ ರೀತಿಯಲ್ಲಿ ಅಭಿವ್ಯಕ್ತಿ ಪಡೆದಿದೆ. ಸಂಗೀತ-ಸಾಹಿತ್ಯಗಳು ಪುತಿನ ಅವರ ಗೀತರೂಪಕಗಳಲ್ಲಿ ಅಪೂರ್ವವಾದ ಸಮನ್ವಯವನ್ನು ಸಾಧಿಸಿವೆ. ಪುತಿನ ಅವರು ಭಾಗವತ ಮನೋಧರ್ಮದ ಅತ್ಯಂತ ಪ್ರಬುದ್ಧವಾದ ರಚನೆಯೆಂದರೆ "ಶ್ರೀಹರಿಚರಿತ'' ಎಂಬ ಅವರ ಮಹಾಕಾವ್ಯ. ಭಕ್ತಿಯ ದಿವ್ಯಭಾವ ಇಲ್ಲಿ ತಾನೇ ತಾನಾಗಿ ಕಾಣಿಸುವುದಾದರೂ ಭಕ್ತಿಯು ಇಲ್ಲಿ ಕೊಚ್ಚಿಕೊಂಡು ಹೋಗುವ ಪ್ರವಾಹವಾಗದೆ, ಆಳದ ಧ್ಯಾನ ಹಾಗೂ ಚಿಂತನೆಯಿಂದ, 'ಹರಿಚರಿತೆ'ಗೆ ಒಂದು ವಿಶಿಷ್ಟವಾದ ಸೌಷ್ಠವ ಪ್ರಾಪ್ತವಾಗಿದೆ. 20ನೇ ಶತಮಾನದ ಮಹಾಕಾವ್ಯಗಳಲ್ಲಿ 'ಶ್ರೀ ಹರಿಚರಿತೆ'ಗೆ ಮಹತ್ವ ಸ್ಥಾನವಿದೆ.

ಕಾವ್ಯದ ನಂತರ ಪುತಿನ ಅವರ ಸೃಷ್ಟಿಶೀಲತೆ ಉನ್ನತ ನೆಲೆಯಲ್ಲಿ ಕ್ರಿಯಾಪ್ರವೃತ್ತವಾಗಿರುವುದು ಅವರ ಪ್ರಬಂಧಗಳಲ್ಲಿ. ಲಲಿತ ಪ್ರಬಂಧಕ್ಕೆ ಚಿಂತನೆಯ ಓಜಸ್ಸನ್ನು ಕೂಡಿಸಿದ್ದು ಪುತಿನ ಅವರ ಮಹತ್ವದ ಸಾಧನೆ. ಕಾವ್ಯ ಕುತೂಹಲದಂತಹ ಕೃತಿಗಳ ಮೂಲಕ ಕಾವ್ಯ ಚಿಂತನೆಗೂ ಪುತಿನ ಗಮನೀಯ ಕಾಣಿಕೆ ಸಲ್ಲಿಸಿದ್ದಾರೆ. ಇಲ್ಲಿ ಕೆಲವು ಸ್ವತಂತ್ರ ಹೊಳಹುಗಳಿವೆ. ಅದಕ್ಕೂ

ಮಿಗಿಲಾಗಿ ಕಾವ್ಯ ಮೀಮಾಂಸೆಗೆ ಅರ್ಥಗರ್ಭಿತವೆನ್ನಿಸುವ ಅನೇಕ ಪಾರಿಭಾಷಿಕಗಳನ್ನು ಪುತಿನ ತಮ್ಮ ಕಾವ್ಯ ಪ್ರತಿಭೆಯಿಂದ ಸೃಷ್ಟಿಸಿದ್ದಾರೆ. ಹಾಗೇ ಅನುವಾದದಲ್ಲೂ ಪುತಿನ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಉಲ್ಲೇಖನೀಯವಾದದ್ದು ಗಯಟೆಯ ಫೌಸ್ಟ್ ಕಾವ್ಯದ ಅನುವಾದ, ತಾಮಸ್‌ಮನ್‌ನ 'ಬದಲಿಸಿದ ತಲೆಗಳು' ಎಂಬ ಕಾದಂಬರಿಯ ಅನುವಾದ.

ಹಣತೆ, ಮಲೆದೇಗುಲ, ಅಹಲ್ಯೆ, ಗೋಕುಲ ನಿರ್ಗಮನ ಶ್ರೀ ಹರಿಚರಿತೆ, ಕಾವ್ಯ ಕುತೂಹಲ, ಈಚಲು ಮರದ ಕೆಳಗೆ–ಇಂತಹ ಬೆಲೆಬಾಳುವ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿರುವ ಪು.ತಿ. ನರಸಿಂಹಾಚಾರ್ ತುಂಬುವಯಸ್ಸಿನ ತಮ್ಮ ವೃದ್ಧಾಪ್ಯದಲ್ಲೂ ಜೀವನ ಪ್ರೀತಿಯನ್ನಾಗಲೀ ಕಾವ್ಯ ಪ್ರೀತಿಯನ್ನಾಗಲಿ ಕೊಂಚವೂ ಕಳೆದುಕೊಂಡವರಲ್ಲ. ಅವರ ಕೃತಿಗಳ ಓದು, ವಿಶೇಷವಾಗಿ ಅವರೊಂದಿಗೆ ನಡೆಸುವ ಸಂವಾದ ಎಂಥವರಿಗೂ ಒಂದು ಅಪೂರ್ವ ಅನುಭವ.



# ಆರ್. ಎಂ. ಬಿ. ಆರಾಧ್ಯ

ಶ್ರೀ ಆರ್. ಎಂ.ಬಿ. ಆರಾಧ್ಯರಿಗೆ ಅವರ ಸಮಾಜ ಸೇವಾ ಕಾರ್ಯವನ್ನು ಗುರುತಿಸಿ ಭಾರತ ಸರ್ಕಾರ 'ಪದ್ಮಶ್ರೀ' ರಾಷ್ಟ್ರ ಪ್ರಶಸ್ತಿಯನ್ನು ನೀಡಿದೆ. ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಅರ್ಪಿತ ಮನೋಭಾವದಿಂದ ಸೇವೆ ಸಲ್ಲಿಸಿದ ಅಪರೂಪದ ವ್ಯಕ್ತಿಗಳಲ್ಲಿ ಇವರು ಒಬ್ಬರು. ಜಾತಿ—ಮತಗಳ ಚೌಕಟ್ಟನ್ನು ಮೀರಿ ದುರ್ಬಲ ವರ್ಗಗಳ ಬಗ್ಗೆ ಅಪಾರ ಅನುಕಂಪವನ್ನು ತೋರುವ ಹೃದಯವುಳ್ಳವರು ಇವರು. ಇವರು ಸೇವೆಯನ್ನು ಗುರುತಿಸಿದ ಕರ್ನಾಟಕದ ಸರ್ಕಾರವು 1990 ರಲ್ಲಿ ರಾಜ್ಯ ಪ್ರಶಸ್ತಿಯನ್ನು ನೀಡಿತ್ತು.

ತಾರುಣ್ಯದಲ್ಲೇ ಗಾಂಧೀಜಿಯವರ ರಚನಾತ್ಮಕ ಕಾರ್ಯದ ಮನೋಧರ್ಮವನ್ನು ಬೆಳೆಸಿಕೊಂಡು ಅದನ್ನು ಕಾರ್ಯರೂಪಕ್ಕೆ ತಂದವರು ಶ್ರೀ ಆರ್. ಎಂ. ಬಿ. ಆರಾಧ್ಯ ಅವರು.

ತಮ್ಮ ಹುಟ್ಟೂರು ಗೊಟ್ಟಿಗೆರೆಯಿಂದಲೇ ಸೇವಾ ಕಾರ್ಯವನ್ನು ಆರಂಭಿಸಿದ ಶ್ರೀ ಆರಾಧ್ಯರು ಮೊದಲಿಗೆ ಊರಿನ ಹರಿಜನ ಕಾಲೋನಿಯ ಅಭಿವೃದ್ಧಿಯಲ್ಲಿ ಸಕ್ರಿಯ ಪಾತ್ರ ವಹಿಸಿದರು. ಡಾ. ಎಂ.ಸಿ. ಮೋದಿಯವರ ಉಚಿತ ನೇತ್ರ ಚಿಕಿತ್ಸಾ ಶಿಬಿರಗಳಿಗೆ ಆರ್ಥಿಕ ನೆರವು ನೀಡಿದರು. ಅಲ್ಲಿ ಸ್ವಯಂ ಸೇವಕರಾಗಿ ದುಡಿದರು. ಭಾರತೀಯ ವಿದ್ಯಾ ಸಂಸ್ಕೃತಿ ಪೀಠ, ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಎಸ್. ಜೆ. ಎಂ. ವಿದ್ಯಾಪೀಠದ ಕಾರ್ಯ ಸಮಿತಿ – ಇವುಗಳ ಸದಸ್ಯರಾಗಿ ಶಿಕ್ಷಣ ಕ್ಷೇತ್ರಕ್ಕೆ ಅವರು ನೀಡಿರುವ ಕೊಡುಗೆ ಅಪಾರ. ಭಾರತ ಸೇವಕ ಸಮಾಜ, ವಯಸ್ಕರ ಶಿಕ್ಷಣ ಸಮಿತಿ, ಭಾರತ ರೆಡ್ ಕ್ರಾಸ್ ಸಂಸ್ಥೆ, ಕಿದ್ವಾಯ್ ಕ್ಯಾನ್ಸರ್

ಸಂಸ್ಥೆ ಮತ್ತು ಕರ್ನಾಟಕ ಅಂಧರ ಕ್ಷೇಮಾಭ್ಯುದಯ, ಸಂಸ್ಥೆಗಳ ಮೂಲಕ ಅವರು ತಮ್ಮ ಸೇವಾ ಕ್ಷೇತ್ರವನ್ನು ವಿಸ್ತರಿಸಿಕೊಂಡಿದ್ದಾರೆ. ಇದಲ್ಲದೆ 'ಶ್ರೀ ಕೃಷ್ಣ ಸಂಗೀತ ಸಭಾ', 'ಶಾರದಾ ಸ್ತ್ರೀ ಸಮಾಜ' 'ಅಕ್ಕಮಹಾದೇವಿ ಸಮಾಜ', 'ಭಾರತದ ಸ್ಕೌಟ್' ಮತು ಗೈಡ್ಸ್' ಸಂಸ್ಥೆ – ಹೀಗೆ ತೀರ ವಿಭಿನ್ನ ಕ್ಷೇತ್ರಗಳ ಹಲವಾರು ಸಂಸ್ಥೆಗಳು ಅವರು ನೆರವನ್ನು ಪಡೆದುಕೊಂಡಿವೆ.

ಶಿಕ್ಷಕರಾಗಿ, ಖಾಸಗಿ ಸಾರಿಗೆ ಸಂಸ್ಥೆಯ ಸ್ಥಾಪಕರಾಗಿ, ಇಂಜಿನಿಯರಿಂಗ್ ಕಂಟ್ರಾಕ್ಟರ್ ಆಗಿ, ನಿವೇಶನಾಭಿವೃದ್ಧಿ ಉದ್ದಿಮೆದಾರರಾಗಿ ನಾಡಿನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮ ತನುಮನ ಧನಗಳನ್ನು ತೊಡಗಿಸಿ, ಸಮರ್ಪಣ ಮನೋಭಾವದಿಂದ ದುಡಿಯುತ್ತಿರುವ ಹಿರಿಯ ಸಮಾಜ ಸೇವಕರು ಶ್ರೀ ಆರ್. ಎಂ.ಬಿ. ಆರಾಧ್ಯ ಅವರು.



# ಮಾಸ್ತಿ : ಮಾನವನ ಅಂತಸ್ಥ ಜಗತ್ತಿನ ಶೋಧಕ

ಕೆ. ವಿ. ನಾರಾಯಣ

ಮಾಸ್ತಿಯವರು ಜನಿಸಿ ನೂರು ವರ್ಷಗಳಾಗುತ್ತಿರುವ ಸಂದರ್ಭದಲ್ಲಿ ಅವರ ಸಾಹಿತ್ಯವನ್ನು ಕುರಿತ ಬರೆಹವನ್ನು ಹೇಗೆ ಪ್ರಾರಂಭಿಸಿದರೂ ಕೇವಲ ಔಪಚಾರಿಕವಾಗಿ ತೋರುತ್ತದೆ. ಆದ್ದರಿಂದ ನೇರವಾಗಿ ವಿಷಯ ಪ್ರವೇಶವೇ ಸರಿ.

ಈಗ ಕಾಲದ ಈ ಘಟ್ಟದಲ್ಲಿ ನಿಂತು ನಮ್ಮ ನಾಡಿನ ಈ ಶತಕದ ಪುನರುಜ್ಜೀವನದ ಲಕ್ಷಣಗಳನ್ನು ಪುನಾರಚಿಸಿಕೊಳ್ಳುವುದು ಸಾಧ್ಯವಾಗಿದೆ. ಇಂಥ ಯತ್ನಗಳ ಮೂಲಕ ಲಭ್ಯವಾದ ಹಿನ್ನೆಲೆಯಲ್ಲಿ ಮಾಸ್ತಿಯವರ ಸಾಹಿತ್ಯವನ್ನು ಇರಿಸಿ ನೋಡಿದರೆ ಅದರ ಕೆಲವು ಒಳ ಚಹರೆಗಳು ಗಾಢವಾಗಿ ಕಾಣತೊಡಗುತ್ತವೆ. ಅಂಥ ಕೆಲವು ಚಹರೆಗಳನ್ನು ಅರಿಯುವುದಕ್ಕೆಂದು ಮುಂದಿನ ಮಾತುಗಳನ್ನು ಬರೆಯಲಾಗಿದೆ.

ವಸಾಹತುಶಾಹಿ ಅನುಭವದ ಮೂಲಕ ಒದಗಿದ ದಿಗ್ಭ್ರಮೆಯಲ್ಲಿ ನಾಡಿನ ಪ್ರಜ್ಞೆ ನಂಬಿಕೆ ಮತ್ತು ಆಚರಣೆಗಳ ನಡುವಣ ಸಹಬಾಳ್ವೆಗೆ ತೀವ್ರತರ ಆಘಾತ

(ಮಾಸ್ತಿಯವರಿಗೆ 1991 ರಲ್ಲಿ ನೂರು ವರ್ಷಗಳು ತುಂಬುತ್ತವೆ. ಮಾಸ್ತಿ ಇಂದು ನಮ್ಮ ಕಣ್ಮುಂದೆ ಇಲ್ಲ. ಸಣ್ಣಕತೆಗಳ ಜನಕರಾಗಿ ಆ ಪ್ರಕಾರಕ್ಕೆ ಒಂದು ಚೈತನ್ಯವನ್ನು ಕೊಟ್ಟದಷ್ಟೇ ಅಲ್ಲ, ಬದುಕಿನಲ್ಲಿ ಸಂಸ್ಕೃತಿಯನ್ನು ಒಳಗೊಂಡು ಪಕ್ವವಾಗುವುದು ಹೇಗೆ ಎನ್ನುವುದನ್ನು ಕಥೆ, ಕಾದಂಬರಿಗಳ ಮೂಲಕ ಅನ್ವೇಷಿಸುತ್ತ ತಿಳಿ ಹೇಳುವ ಪ್ರಯತ್ನ ಮಾಡಿದರು. ಕನ್ನಡ ಸಂಸ್ಕೃತಿಯ ಆದರ್ಶಗಳ ಹುಡುಕಾಟ ಇಂಥ ಕಡೆ ಎದ್ದು ಕಾಣುತ್ತದೆ. ಅವರ ನೆನಪಿನಲ್ಲಿ ಈ ಲೇಖನವನ್ನು ಇಲ್ಲಿ ಕೊಡಲಾಗಿದೆ.)

ಒದಗಿದ್ದನ್ನು ಅರಗಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಇದರಿಂದ ಬಿಡುಗಡೆ ಪಡೆಯಲು ಹಲವು ಮಾದರಿಗಳನ್ನು ಹುಡುಕಲಾಯಿತು. ಮಾಸ್ತಿಯವರ ಸಾಹಿತ್ಯ ಅಂಥ ಒಂದು ಮಾದರಿಯನ್ನು ಮಂಡಿಸುತ್ತದೆ.

ಅತೀತವಾದ ಅತೀಂದ್ರಿಯಾತ್ಮಕವಾದ ಬಂಧವೊಂದರ ನಮ್ಮುಗೆಯಿಲ್ಲದ ಜೀವನದಲ್ಲಿ ಆಚರಣೆಗಳು ಬರಿಯ, ಅರ್ಥವಿಹೀನ ಚಲನೆಗಳಾಗುವುದು ಸಾಧ್ಯ. ಹಾಗಿದ್ದಲ್ಲಿ ಜೀವನದ ಧಾರಣಾಶಕ್ತಿಯ ಮೂಲವನ್ನು ಎಲ್ಲಿ ಕಾಣುವುದು? ಇಲ್ಲಿ ಮಾಸ್ತಿಯವರ ಕಾಣ್ಕೆ ಮೈದಳೆಯುತ್ತದೆ. ಅವರ ಕಾಣ್ಕೆಯಂತೆ ಆತ್ಯಂತಿಕವಾಗಿ ಮನುಷ್ಯನಲ್ಲೇ ಈ ಧಾರಣಾಶಕ್ತಿಯ ಮೂಲವಿದೆ. ಬದುಕು ಬಿದ್ರಗೊಳ್ಳದಂತೆ ಕಟ್ಟಿ ಹಿಡಿದಿಡಬಲ್ಲ ಶಕ್ತಿ ಅವನಲ್ಲೇ ಅಂತಸ್ತವಾಗಿದೆ. ಮಾಸ್ತಿಯವರ ಕಥಾಸಾಹಿತ್ಯದಲ್ಲಿ ಎಲ್ಲಿ ಆಯ್ದುಕೊಂಡರೂ ಇದಕ್ಕೆ ನಿದರ್ಶನಗಳು ಒದಗಿಬರುತ್ತವೆ. ಅವರ ವೆಂಕಟಶಾಮಿ (ವೆಂಕಟಶಾಮಿಯ ಪ್ರಣಯ) ವೆಂಕಟಿಗ (ವೆಂಕಟಿಗನ ಹೆಂಡತಿ) ಶಕುಂತಲೆ (ಹೇಮಕೂಟದಿಂದ ಬಂದ ಮೇಲೆ) ಗೌತಮಿ (ಗೌತಮಿ ಹೇಳಿದ ಕತೆ) ಎಮಿಲಿ (ಮಸುಮತಿ) ಸಾವಿತ್ರಮ್ಮ (ಕಾಮನಹಬ್ಬದ ಕತೆ) ಹೀಗೆ ಎಷ್ಟೋ ಪಾತ್ರಗಳು ಈ ಹಿನ್ನೆಲೆಯಿಂದ ಹೊರತು ಪಡಿಸಿದರೆ ಕೇವಲ ಭಾವುಕ ಹಾಗೂ ಭ್ರಾಮಕ ಕಲ್ಪನೆಗಳಾಗಿ ತೋರುತ್ತವೆ. ಆದರೆ ಮಾಸ್ತಿಯವರು ನಡೆಸಿದ ಮಾನವನ ಅಂತಸ್ಥ ಸಾಮರ್ಥ್ಯದ ಕೆಲವು ಹೊಳಹುಗಳು ಈ ಪಾತ್ರಗಳು.

ಹೀಗಾಗಿ ಮಾಸ್ತಿಯವರ ಸಾಹಿತ್ಯದಲ್ಲಿ ಅತ್ಯಂತ ನಿಗೂಢವಾದ ಮುಷ್ಟಿಗ್ರಾಹ್ಯವಲ್ಲದ ನೆಲೆಯೆಂದರೆ ಮಾನವನೇ ಸರಿ. ಈ ಮಾನವ ಕೇಂದ್ರಿತ ಗ್ರಹಿಕೆ ಅವರ ಸಾಹಿತ್ಯದ ಲಕ್ಷಣವಾಗಿರುವಂತೆ ಮುಖ್ಯ ಮಿತಿಯೂ ಆಗಿರುವುದು ಸಾಧ್ಯ. ಮಾಸ್ತಿಯವರಿಗಿಂತ ಭಿನ್ನ ಹಾದಿ ತುಳಿದ ಬೇಂದ್ರೆ ಮತ್ತು ಕುವೆಂಪು ಅವರ ಸಾಹಿತ್ಯವನ್ನು ಕಂಡಾಗ ಮಾಸ್ತಿಯವರ ಆಯ್ಕೆಗಿದ್ದ ಪರ್ಯಾಯಗಳು ನಮಗೆ ಪರಿಚಯವಾಗುತ್ತವೆ.

ಮಾಸ್ತಿಯವರು ಮನುಷ್ಯನ ಅಂತರಂಗದ ಅತೀತ ಮೂಲಗಳಿಗೆ ಪಯಣ ಹೊರಟದ್ದರಿಂದ ಅವರ ಸಾಹಿತ್ಯದಲ್ಲಿ ಕಾಲದ ಪರಿಕಲ್ಪನೆ ವಿಶಿಷ್ಟಗೊಳ್ಳುತ್ತದೆ. ಅಂದರೆ ಚಾರಿತ್ರಿಕ ಕಾಲವೆಂಬುದಕ್ಕೆ ಅವರ ಸಾಹಿತ್ಯದಲ್ಲಿ ಅರ್ಥವಿಲ್ಲ. 'ಈಗ–ಇಲ್ಲಿ' ಎಂಬುದಷ್ಟೇ ಮುಖ್ಯ. ಅವರ ಕಥೆಗಳಲ್ಲಿ ಬರುವ ಪುರಾಣ, ಐತಿಹ್ಯಗಳ ಪಾತ್ರಗಳಿಗೆ ಅನ್ಯದೇಶ್ಯ ಪಾತ್ರಗಳಿಗೆ ಚಹರೆಯೊದಗುವುದು 'ಈಗ–ಇಲ್ಲಿ' ಮಾತ್ರ. 'ವಸುಮತಿ'ಯಲ್ಲಿ ಪರಕಾಯ ಪ್ರವೇಶದಂಥ ಸಂಗತಿಯನ್ನು ಅರಗಿಸಿಕೊಳ್ಳಲು ಎಮಿಲಿ ಹಾಗೂ ರಾಷ್ಟ್ರೀಯ ಸ್ಥಿತಿಯನ್ನು ಬಳಸುವ ಕ್ರಮ 'ರಂಗನ ಹಳ್ಳಿಯ ರಾಮು' ದಲ್ಲಿನ ಚಾರಿತ್ರಿಕ ಪುನಾರಚನೆಯನ್ನು ಕಥನದ ಕಾಲದ ಅರ್ಥವಲಯಕ್ಕೆ ಬದ್ಧಗೊಳಿಸುವ ಬಗೆ–ಇಂಥ ಹಲವು ನಿದರ್ಶನಗಳನ್ನು ಕಂಡಾಗ ಮಾಸ್ತಿಯವರ ಕಥಾಸಾಹಿತ್ಯದ ಚಾರಿತ್ರಿಕ ಕಾಲಶೂನ್ಯತೆ ಅರಿವಿಗೆ ಬರುತ್ತದೆ.

ಈ ಸಂದರ್ಭದಲ್ಲೇ ಈಗಾಗಲೇ ಚರ್ಚೆಗೆ ಒಳಗಾದ, ವಿವಾದಕ್ಕೆ ಸಿಲುಕಿದ ಸಂಗತಿಯನ್ನು ಇಲ್ಲಿ ಮೇಲಿನ ವಿವರಣೆಗೆ ಪೂರಕವಾಗಿ ಮತ್ತೆ ಗಮನಿಸಬಹುದು. ಅವರ ಎರಡೂ ಚಾರಿತ್ರಿಕ ಕಾದಂಬರಿಗಳು ('ಚನ್ನಬಸವ ನಾಯಕ', 'ಚಿಕವೀರರಾಜೇಂದ್ರ') ಮತ್ತೆ ಮತ್ತೆ ವಿವಾದಗಳಿಗೆ ಕಾರಣವಾಗಿವೆ. ವಿವಾದಗಳ ಮುಖ್ಯ ತರ್ಕ ಮುಖ್ಯವಾಗಿ ಈ ಕಾದಂಬರಿಗಳಲ್ಲಿ ಚಾರಿತ್ರಿಕ ಸಾಮ್ಯತೆ ಇಲ್ಲವೆನ್ನುವುದಾಗಿದೆ. ಆದರೆ ಮಾಸ್ತಿಯವರಿಗೆ, ಅದು ಗೌಣಗೊಂಡು ಕಾಲ–ಓದುಗನ ಕಾಲವಾಗಿ ಮಾರ್ಪಡಬೇಕೆಂಬುದೇ ಮುಖ್ಯ ಉದ್ದೇಶ. ಮಗುವಿನ ಕತ್ತು ಹಿಸುಕಲು ಉದ್ಯುಕ್ತನಾದ ರಾಜ (ಚಿಕವೀರರಾಜೇಂದ್ರ), ತನ್ನ ಕೊರಳ ಮೇಲೆ ಇನ್ನೇನು ಕತ್ತಿ ಬೀಳಲಿದೆಯೆಂದು ತಿಳಿದು ಸನ್ನದ್ಧಳಾದ ಶಾಂತವ್ವ (ಚನ್ನಬಸವನಾಯಕ) ಈ ಸಂದರ್ಭದ ಪಾತ್ರಗಳಲ್ಲಿ ಹೇಗೆ ಕಾಲ ಸಂಪೂರ್ಣವಾಗಿ 'ಈಗ–ಇಲ್ಲಿ' ಎಂಬಷ್ಟಕ್ಕೆ ಬದ್ಧಗೊಳ್ಳುತ್ತದೆ ಎಂಬುದರ ಅನುಭವವಾಗುತ್ತದೆ.

ಹೀಗೆಂದ ಮಾತ್ರಕ್ಕೆ ಮಾಸ್ತಿಯವರ ಸಾಹಿತ್ಯಕ್ಕೆ ಚರಿತ್ರೆಯಿಂದ ಬಿಡುಗಡೆ ದೊರಕಿತು ಎಂದಲ್ಲ. ಹಾಗೆ ನೋಡಿದರೆ ಅವರ ಸಾಹಿತ್ಯದ ಒಂದು ಪಾಲು ಚರಿತ್ರೆಯನ್ನು ತನ್ನದೇ ಆದ ರೀತಿಯಲ್ಲಿ ವ್ಯಾಖ್ಯಾನಿಸಲು ಯತ್ನಿಸುತ್ತದೆ. ಮೇಲೆ ಹೇಳಿದ ಕಾದಂಬರಿಗಳ ಜತೆಗೆ 'ಕಾಕನಕೋಟೆ' ನಾಟಕವನ್ನೂ ಉದಾಹರಣೆಗೆ ತೆಗೆದುಕೊಂಡರೆ ಅಧಿಕಾರಗ್ರಹಣದ ಮೂಲಕ ವಿಸ್ತರಣಶೀಲತೆಯನ್ನು ಪ್ರಕಟಿಸುವ ರಾಜಕಾರಣವನ್ನು ಚರಿತ್ರೆಯ ಸಹಜಗತಿ ಎನ್ನುವಂತೆ ಚಿತ್ರಿಸುವುದನ್ನು ಕಾಣುತ್ತೇವೆ. ಇದು ಮಾಸ್ತಿಯವರ ಸಾಹಿತ್ಯವನ್ನು ಅರಿಯಲು ಇನ್ನೊಂದು ಕೀಲಿಯನ್ನು ಒದಗಿಸುತ್ತದೆ. ಮಾಸ್ತಿಯವರು ವಸಾಹತುಶಾಹಿ ಅನುಭವಕ್ಕೆ ತೆರೆದುಕೊಂಡ ಮೊದಲ ಶಿಕ್ಷಿತ ತಲೆಮಾರಿಗೆ ಸೇರಿದವರು. ಈ ತಲೆಮಾರಿನ ಪ್ರಜ್ಞಾವಂತರು, ಹೊಂದಿದ್ದ ದ್ವಂದ್ವಗಳು ಇವರ ಸಾಹಿತ್ಯದಲ್ಲಿ ಸೂಕ್ಷ್ಮವಾಗಿ ಪ್ರಕಟಗೊಳ್ಳುತ್ತವೆ. ವಸಾಹತು ಶಕ್ತಿ ತಾನು ಆಳುವ ಸಂಸ್ಕೃತಿ ಕಗ್ಗತ್ತಲಲ್ಲಿ ಮುಳುಗಿದೆಯೆಂದು, ತಾನು ಅದರ ಉದ್ಧಾರಕನೆಂದು ತಿಳಿಯುತ್ತದೆ. ಮೊದಮೊದಲ ಓರಿಯಂಟಲಿಸ್ಟರು ಅನುಭವಿಸಿದ ಆಶ್ಚರ್ಯದ ಜತೆಗೆ ಈ ಸಂಗೋಪನ ಧೋರಣೆಯೂ ಒಟ್ಟಾಗಿದೆ. ನಮ್ಮ ಪ್ರಜ್ಞಾವಂತರೂ ಈ ಮಾದರಿಯ ದೇಶಿಯ ಅವತರಣಿಕೆಗಳಾಗಿದ್ದರು. ಮಾಸ್ತಿಯವರ ಮಾನವನ ಅಂತಸ್ಥ ಜಗತ್ತಿನ ಶೋಧನೆ ತಾತ್ವಿಕವಾಗಿ ಹೀಗೆ ದ್ವಂದ್ವ ನೆಲೆಗಟ್ಟುಗಳಿಗೆ ಸೇರಿದೆ. ಒಂದೆಡೆಗೆ ಈ ಮೊದಲೇ ಹೇಳಿದಂತೆ ಆತ್ಯಂತಿಕ ಧಾರಣಾಶಕ್ತಿಯ ಶೋಧದ ಉದ್ದೇಶವಿದ್ದರೆ ಇನ್ನೊಂದೆಡೆಗೆ ಮಾನವಶಾಸ್ತ್ರಜ್ಞರು ಕಗ್ಗತ್ತಲ ಭೂಖಂಡಗಳನ್ನು ಬೆಳಕಿಗೆ ತರುವಲ್ಲಿ ಹೊಂದಿದ ಉಮೇದಿದೆ. ಈ ಉಮೇದಿನ ಪರಿಣಾಮವಾಗಿಯೇ ಶೋಧಿತ 'ಅನ್ಯ' ನೆಲೆಗಳನ್ನು ನಾಗರಿಕಗೊಳಿಸುವ ವಿಧಾನದ ಪರವಾಗಿ ಮಾಸ್ತಿ ನಿಲ್ಲುತ್ತಾರೆ. ಪ್ರಾಸ್ಪರೋ ಕ್ಯಾಲಿಬನ್ನ್ ಹಾಗೂ ಏರಿಯಲ್–ಇಬ್ಬರನ್ನೂ ತನ್ನ ತೆಕ್ಕೆಗೆ ತಂದುಕೊಳ್ಳಲು ಯತ್ನಿಸಿದನಷ್ಟೆ. ಇಲ್ಲಿಯೂ ಅಂಥದೇ ಮಾದರೀ. ಈ ನಿಲುವನ್ನು ಹೇಳುವಾಗ

ಮೇಲೆ ಹೇಳಿದ ಕಾದಂಬರಿ, ನಾಟಕ ನೇರ ಉದಾರಹಣೆಗಳಾದರೆ ಅವರ ಕಥಾ ಸಾಹಿತ್ಯದಲ್ಲಿ ಇದಕ್ಕೆ ಪರೋಕ್ಷವಾದ ಸಮರ್ಥನೆ ಒದಗುವುದೆಂಬುದು ನನ್ನ ಗಮನದಲ್ಲಿದೆ. ಸಾಮಾಜಿಕ ಪರಿವರ್ತನೆಯ ಸೂಕ್ಷ್ಮನೆಲೆಗಳನ್ನು ಒಳಗೊಂಡ ಅವರ ಹಲವು ಕತೆಗಳಲ್ಲಿ ಜೀವನ ಕ್ರಮದ ಚಲನಶೀಲತೆ 'ನಾಗರೀಕ'ವಾಗುವ ಕಡೆಗೆ ಮುಖ ಮಾಡುತ್ತದೆ. ನ್ಯಾಯವನ್ನು ಕುರಿತಂತೆ ಈ ಮಾತು ಇನ್ನಷ್ಟು ಸ್ಪಷ್ಟವಾಗಿದೆ. ಅಥವಾ 'ಮೊಸರಿನ ಮಂಗಮ್ಮ' ಕತೆಯ ಸೊಸೆ ಕೊನೆಗೆ ಆರ್ಥಿಕ ಸೂತ್ರಗಳನ್ನು ಪಡೆಯುವ ವಿಧಾನದಲ್ಲಿ ಸಹಜತೆ ಇರುವಂತೆ ಮಂಗಮ್ಮನ ಸೋಲೂ ಅಡಗಿದೆಯಷ್ಟೆ.

ಬೇಂದ್ರೆಯವರು ಒಮ್ಮೆ "ಮಾಸ್ತಿಯವರು ರುದ್ರನನ್ನು ಶಿವನನ್ನಾಗಿ ಕಾಣುವ ಪ್ರಾತಿಭ ಚಕ್ಷುಗಳನ್ನುಳ್ಳವರು, ಫಾಲನೇತ್ರವು ಹಣೆಯ ನಾಮದಂತೆಯೂ, ಭುಜಗಾವಳಿಯೂ ಭೂಷಣಾವಳಿಯಂತೆಯೂ, ವ್ಯಾಘ್ರಾಂಬರವು ದಿಗಂಬರತ್ವದ ಮುಸುಕಾಗಿಯೂ, ಬಸಿತವು ದೇಹಪ್ರತಿಭೆಯಾಗಿಯೂ, ವಿಷಕಂಠಾಭರಣವಾಗಿಯೂ ಮಾರ್ಪಾಡಾಗುವ ಇಂದ್ರಜಾಲವು ಕಲಾವತಿಯಾದ ಅವರ ವಾಣಿಯಲ್ಲಿದೆ" ಎಂದಿದ್ದಾರೆ. ಅರ್ಧಶತಮಾನದ ಹಿಂದೆ ಹೇಳಿದ ಈ ಮಾತು ಈಗ, ಬಹುಶಃ ಬೇಂದ್ರೆಯವರು ಉದ್ದೇಶಿಸಿದ್ದಕ್ಕಿಂತಲೂ ಹೆಚ್ಚಿನ ವ್ಯಾಪ್ತಿ ಪಡೆದು ಮಾಸ್ತಿಯವರ ಕಥಾಸಾಹಿತ್ಯವನ್ನು ಅರಿಯಲು ನೆರವಾಗುವಂತಿದೆ : ಬೇಂದ್ರೆಯವರು ಈ ಮಾತನ್ನು ಪ್ರಗತಿಶೀಲ ಸಾಹಿತ್ಯದ ಉತ್ಕರ್ಷದ ದಿನಗಳಲ್ಲಿ ಹೇಳಿದ್ದರಾಗಿ ಇಲ್ಲಿ ಅವರು ಮುಖ್ಯವಾಗಿ ಮಾಸ್ತಿಯವರ ಸಾಹಿತ್ಯ, ಜೀವನದ ಭೀಕರತೆ, ನೋವು, ವಿಷಣ್ಣತೆಗಳನ್ನು ಪರಿವರ್ತಿಸಿ ನಮ್ಮೆದುರು ಸಹ್ಯವಾಗುವಂತೆ ಮಂಡಿಸುವುದೆಂದು ಹೇಳುತ್ತಿದ್ದಾರೆ. ಆದರೆ ಈ ಪರಿವರ್ತನೆಯನ್ನೇ ನಾವೀಗ ನಾಗರಿಕಗೊಳಿಸುವುದೆಂದು ವ್ಯಾಖ್ಯಾನಿಸುತ್ತಿದ್ದೇವೆ. ಈ ಮೊದಲೇ ಹೇಳಿದಂತೆ ಇದು ವಸಾಹತುಶಾಹಿ ದೃಷ್ಟಿಕೋನ ಹಾಗೂ ಹೊರಗಿನಿಂದ ನೋಡುವವನ ನೆಲೆ. ಹೀಗೆ ಸಹ್ಯವಾಗುವಂತೆ ಪರಿವರ್ತಿಸಲು ಮಾಸ್ತಿಯವರಿಗೆ ಪ್ರತಿಭೆಯೂ ಇತ್ತು. ಅದು ಕತೆಗಾರನ ಹಕ್ಕು ಇದ್ದೀತು. ಆದರೆ ಹೀಗೆ 'ನಾಗರಿಕ' ಗೊಳಿಸಿದ ಜೀವನದ ಒಳಗಿರುವ ಜ್ವಾಲಾಮುಖಿಯ ಬಾಯಿಯ ಬಿಸುಪು ಅವರ ಕಥಾಜಗತ್ತಿನಲ್ಲಿ ತಟ್ಟದೇ ಹೋಗದು. 'ಕೃಷ್ಣಮೂರ್ತಿಯ ಹೆಂಡತಿ, 'ಮೇಲೂರಿನ ಲಕ್ಷ್ಮಮ್ಮ', 'ಕಾಮನ ಹಬ್ಬದ ಕತೆ', 'ಆಚಾರ್ಯರ ಪತ್ನಿ' ಹೀಗೆ ಎಷ್ಟೋ ಕತೆಗಳಲ್ಲಿ ಈ ಅನುಭವ ಒದಗುತ್ತದೆಯಾದರೂ 'ಸುಬ್ಬಣ್ಣ'ದಲ್ಲಿ ಇದರ ಉತ್ತಮ ಮಾದರಿಯಿದೆ.

'ಸುಬ್ಬಣ್ಣ' ಪುಟಕ್ಕಿಟ್ಟ ಚಿನ್ನವಾಗುವ ಕತೆಯನ್ನು ನಮ್ಮೆದುರು ಮಂಡಿಸುತ್ತದೆ. ಕಿಲ್ಬಿಷಗಳನ್ನು ಕಳೆದುಕೊಂಡು ಪೂರ್ಣ ಮಾನವನಾಗುವ ವಿಕಸನ ಕ್ರಮದತ್ತ ಮುಖಮಾಡಿ ಕಥನ ಮುಂದುವರಿಯುತ್ತದೆ. ಆದರೆ ಸೂಕ್ಷ್ಮವಾದ ಓದಿಗೆ ಕಥನ ಮುಂದೊಡ್ಡುವ ಪರಿಷ್ಕೃತ ರೂಪದ ಇಕ್ಕಟ್ಟುಗಳನ್ನು ಮೀರಿ ಸುಬ್ಬಣ್ಣನ ಆತಂಕದ ಬದುಕು 'ಸಹಜ'ವಾಗಿ ಪ್ರಕಟವಾಗುವುದು ಗಮನಕ್ಕೆ ಬರುತ್ತದೆ.

ಸಂಗೀತದ ಸಾಧನೆ ಹಾಗೂ ಜೀವನದ ಸಂಕಷ್ಟಗಳು ಸುಬ್ಬಣ್ಣನನ್ನು ತಿದ್ದಿದವು, ಪೂರ್ಣಗೊಳಿಸಿದವು ಎಂದು ಹೇಳುವ ಕಥನದೊಳಗೇ ಅಶಾಂತ ಸುಬ್ಬಣ್ಣನ ನೋವಿನ ಎಳೆಗಳು ಗೋಚರಿಸುತ್ತವೆ. ಮೈಸೂರು ಕಲ್ಕತ್ತ-ಬೊಂಬಾಯಿ ಮತ್ತೆ ಮೈಸೂರಿಗೆ ಬಂದ ಸುಬ್ಬಣ್ಣನ ಹುಡುಕಾಟ ತುದಿಮೊದಲಿಲ್ಲದೆ ಸಾಗಿಯೇ ಸಾಗುತ್ತದೆ. ತಾಯಿಯನ್ನು ಹುಡುಕುತ್ತಿರುವ ಕರುವಿನಂತೆ ಸುಬ್ಬಣ್ಣ ತಾಯಿಯಂತಿದ್ದ ಹೆಂಡತಿಯ ಹೆಸರುಳ್ಳ ಲಲಿತೆ ಮದುವೆಯಾಗಿ ಹೋಗುತ್ತಿರುವಂತೆ ಸುಬ್ಬಣ್ಣನ ಅತಂತ್ರತೆ ಮತ್ತೆ ಗಾಢಗೊಳ್ಳುತ್ತದೆ. ಈ ಎಲ್ಲ ವಿವರಣೆಯ ಉದ್ದೇಶವಿಷ್ಟೆ. ಮಾಸ್ತಿಯವರ ಕಥನದ ಮೂಲ ಉದ್ದೇಶ ಜೀವನದ ಭಯಂಕರತೆಯನ್ನು ಪರಿವರ್ತಿಸಿ ಅದನ್ನು ಶಿವರೂಪಿಯನ್ನಾಗಿಸುವುದೇ ಆಗಿದ್ದರೂ ಕಥನದ ಒಡಲಲ್ಲಿ ಮೂಲ ಆಕೃತಿ ಇನ್ನೂ ಚಹರೆಗಳೊಡನೆ ಗೋಚರಿಸುತ್ತದೆ ಎಂದು ಹೇಳುವುದೇ ಆಗಿದೆ. ಇದನ್ನು ಮಾಸ್ತಿಯವರ ಕಥನದ ಕೊರತೆ ಎಂದು ತಿಳಿಯುವುದಕ್ಕಿಂತ ಕಥಾಪ್ರಕಾರದ ಗೆಲುವು ಎಂದು ಹೇಳುವುದು ಸೂಕ್ತವೆನಿಸುತ್ತದೆ.

## ವೈವಿಧ್ಯ ಜಗತ್ತು

ಮಾಸ್ತಿಯವರ ಕಥಾಲೋಕದ ವೈವಿಧ್ಯ ದುಗು ತರುವಂಥದ್ದು. ಮೂರ್ತಿರಾಯರು 'There is gods plenty' ಎಂಬ ಮಾತಿನ ಮೂಲಕ ಈ ಬೆರಗನ್ನು ಸೂಚಿಸಿದ್ದುಂಟು. ಆದರೆ ಮಾಸ್ತಿಯವರ ಕಥಾ ಜಗತ್ತು ಪ್ರತಿಜಗತ್ತಲ್ಲ; ಪೂರಕ ಜಗತ್ತೂ ಅಲ್ಲ. ಪರಿಷ್ಕೃತ ಜಗತ್ತು ಎಂದೆವಷ್ಟೆ. ಈ ಕಥಾ ಜಗತ್ತಿನ ವೈವಿಧ್ಯ ಪಾತ್ರಗಳ ಅನನ್ಯತೆಯ ಮೂಲಕ ಪ್ರಕಟವಾಗುವಂಥದಲ್ಲ. ಬದಲಿಗೆ ಈ ವೈವಿಧ್ಯವನ್ನು ಮಾನವ ಪ್ರಕೃತಿಯ ವರ್ಣಪಟಲದ ಬಂಧನಕ್ಕೆ ಅಳವಡಿಸಿದ ಕ್ರಮ ಬೆರಗುತರುತ್ತದೆ. ಸುಮಾರು ಆರುದಶಕಗಳ ಕಾಲ ಹೆಚ್ಚೂ ಕಡಿಮೆ ಇದೇ ಮಾದರಿಯನ್ನು ಅನುಸರಿಸಿದ ಮಾಸ್ತಿಯವರ ಜತೆಯಲ್ಲೇ ಕನ್ನಡ ಕಥಾಸಾಹಿತ್ಯವೂ ಕವಲೊಡೆಯುತ್ತ ಮುಂದುವರೆಯಿತಷ್ಟೆ ಈ ಕವಲೊಡೆಯುವಿಕೆಯಲ್ಲಿ ಮಾಸ್ತಿಯವರ ಮಾದರಿಯನ್ನು ಸೃಜನಶೀಲವಾಗಿ ನಿರಾಕರಿಸುವ ಯತ್ನಗಳೂ ನಡೆದಿವೆ ಎಂಬುದನ್ನು ಗಮನಿಸಬೇಕು. ಈ ನಿರಾಕರಣೆಯ ಹಿಂದೆ ಮಾಸ್ತಿಯವರ ಮಾದರಿಯ ಬಗೆಗೆ ಅತೃಪ್ತಿಯೂ ಇದ್ದು ಅದು ಅನ್ಯವಿಧಾನಗಳ ಶೋಧದಲ್ಲಿ ತೊಡಗಿವೆ. ಈ ಬಗ್ಗೆ ಕೊಂಚ ವಿಚಾರ ಅಗತ್ಯ.

ಮಾಸ್ತಿಯವರ ಮಾನವ ಪ್ರಕೃತಿ ಶೋಧನೆಯ ಗುರಿ ಈಗಾಗಲೇ ಹೇಳಿದಂತೆ, ಜೀವನದ ವಿಘಟನೆಯನ್ನು ಮೀರುವ ಸಾಮರ್ಥ್ಯದ ಸೆಲೆಗಳನ್ನು ಹುಡುಕುವುದು. ಆದರೆ ಈ ವಿಘಟನೆಯ ಪರಿಣಾಮಗಳನ್ನಾಗಲೀ ವಿಘಟನೆಗೆ ಇದ್ದ ಕಾರಣಗಳನ್ನಾಗಲೀ ಹುಡುಕುವುದು ಮಾಸ್ತಿಯವರ ಕಥಾ ಸಾಹಿತ್ಯದ ಉದ್ದೇಶವಾಗಿರಲಿಲ್ಲ. "ಜೀವನದಲ್ಲಿರುವ ನೋವಿನ ಗೂಢತೆಯನ್ನು ಒಪ್ಪಿಕೊಳ್ಳುವುದು ಮತ್ತು ಓದುಗ ಒಪ್ಪಿಕೊಳ್ಳುವಂತೆ ಮಾಡುವುದು. ದೃಷ್ಟಿಯನ್ನು ನೋವಿನ ಮೇಲೆ

ಕೇಂದ್ರೀಕರಿಸದೆ, ನೋವನ್ನು ಕೊಂಚಮಟ್ಟಿಗಾದರೂ ಅರ್ಥಮಾಡಿಕೊಳ್ಳಲು ಮತ್ತು ಒಪ್ಪಿಕೊಳ್ಳಲು ಸಹಾಯ ಮಾಡುವ ಸಾಂಸ್ಕೃತಿಕ ಮೌಲ್ಯಗಳ ಮೇಲೆ ಕೇಂದ್ರೀಕರಿಸುವುದು'' ಮಾಸ್ತಿಯವರ ಕಥನದ ಮುಖಲಕ್ಷಣವೆಂದು ಎಂ. ಜಿ. ಕೃಷ್ಣಮೂರ್ತಿಯವರು ಹೇಳಿದ ಮಾತು ಸೂಕ್ಷ್ಮವಾಗಿದೆ. ಈ ಉದ್ದೇಶವೇ ಮುಂದಿನ ಕನ್ನಡ ಕಥಾ ಸಾಹಿತ್ಯಕ್ಕೆ ಬೇರೆ ದಿಕ್ಕು ಹಿಡಿಯಲು ಒತ್ತಾಸೆಯಾಗಿ–ನೇತ್ಯಾತ್ಮಕವಾಗಿಯಾದರೂ–ನಿಂತಿತೆನ್ನಬೇಕು. ನವ್ಯರಲ್ಲಿ ಹಾಗೂ ಈಚಿನ ದಲಿತ–ಬಂಡಾಯ ಬರಹಗಾರರಲ್ಲಿ ಮಾಸ್ತಿಯವರ ಮಾದರಿಯ ಹಿಂದಿನ ತಾತ್ವಿಕತೆ ಸಂಪೂರ್ಣವಾಗಿ ನಿರಾಕರಣೆಗೊಂಡಿದೆ.

ಈಚಿನ ಕೆಲವು ವರ್ಷಗಳಲ್ಲಿ ನವ್ಯರಲ್ಲಿ ಕೆಲವರು, ದಲಿತ–ಬಂಡಾಯ ಲೇಖಕರ ಬಗ್ಗೆ ಬರೆಯುವಾಗ ಕೆಲವು ವಿಮರ್ಶಕರು ಮಾಸ್ತಿಯವರ ಮಾದರಿಯ ಪುನರುಜ್ಜೀವನದ ಮಾತನಾಡುವುದು ಕಂಡು ಬರುತ್ತದೆ. ಹೊರಗೆ ನಿಂತು ಮಾರ್ಗದರ್ಶಿಯಾಗುವ ನಿರೂಪಕನ ಮಾದರಿಗಷ್ಟೇ ಮಾಸ್ತಿಯವರ ಕಥನವನ್ನು ವ್ಯಾಖ್ಯಾನಿಸಿಕೊಂಡರೆ ಅವರ ಕಥನದ ಮಾದರಿ ಇನ್ನೂ ಕನ್ನಡದಲ್ಲಿ ಬಳಕೆಯಲ್ಲಿದೆ ಎನ್ನುವುದು ನಿಜ. ಆದರೆ ಮಾಸ್ತಿಯವರ ಕಥನದ ಹಿಂದಿನ ಚಾರಿತ್ರಿಕ ಒತ್ತಡ ಹಾಗೂ ತಾತ್ವಿಕತೆಗಳನ್ನು ಪರಿಗಣಿಸಿದರೆ ಅವರ ಮಾದರಿ–ಇನ್ನೂ ಬಳಕೆಯಲ್ಲಿದೆ ಎಂಬ ಮಾತು ದೂರಾನ್ವಯದ್ದಾಗಿ ಬಿಡುತ್ತದೆ.

ಹಾಗಿದ್ದರೆ ಮಾಸ್ತಿಯವರ ಕಥಾಸಾಹಿತ್ಯದ ಪ್ರಸ್ತುತತೆ ಏನು? ಈ ಪ್ರಶ್ನೆ ತಿರುಳಿಲ್ಲದ್ದು. ಏಕೆಂದರೆ ಸಾಹಿತ್ಯಕ ಪರಂಪರೆಯ ಸ್ವರೂಪವನ್ನು ಬಲ್ಲವರು ಈ ಪ್ರಶ್ನೆಗೆ ಉತ್ತರವನ್ನು ತಿಳಿದಿರುತ್ತಾರೆ. ಯಾವುದೇ ಸಾಹಿತ್ಯಕ ಮಾದರಿ ನಿರಾಕೃತವಾಯಿತೆಂದರೆ ಆ ಮಾದರಿಯಲ್ಲಿ ಮೈತಳೆದ ಮೂಲಸಾಹಿತ್ಯವೂ ನಿರಾಕೃತವಾಗುವುದೆಂದು ತಿಳಿಯಬಾರದು. ಮಾಸ್ತಿ ನಂತರದ ಕನ್ನಡ ಕಥಾ ಸಾಹಿತ್ಯದ ಹೊಸ ದಿಕ್ಕುಗಳು ಪರೋಕ್ಷವಾಗಿ ಮಾಸ್ತಿಯವರ ಕಥೆಗಳನ್ನು ಅರ್ಥಮಾಡಿಕೊಳ್ಳಲು ಹೊಸ ನೆಲೆಗಳನ್ನು ಒದಗಿಸುತ್ತವೆ. ಅನಂತಮೂರ್ತಿ ಚಿತ್ತಾಲ, ದೇಸಾಯಿ, ಲಂಕೇಶ, ದೇವನೂರು ಮಹಾದೇವ, ಬೆಸಗರಹಳ್ಳಿ ರಾಮಣ್ಣರನ್ನು ಓದಿದ ಮೇಲೆ ಮಾಸ್ತಿಯವರ ಕಥೆಗಳು ಬೇರೆಯೇ ಬೆಳಕಿನಲ್ಲಿ ತಮ್ಮ ಅಂತಸ್ಥ ಸಾಮರ್ಥ್ಯವನ್ನು ತೋರತೊಡಗುತ್ತದೆ.

## ಮಾಗಿದ ಕಾಲ

ಈ ಲೇಖನದ ಮೊದಲಲ್ಲಿ ಮಾಸ್ತಿಯವರು ಬರೆಯತೊಡಗಿದ್ದು ವಸಾಹತುಶಾಹಿ ಅನುಭವದ ದಿಗ್‌ಭ್ರಮೆಯ ಮೊದಮೊದಲ ಘಳಿಗೆಗಳಲ್ಲಿ ಎಂದು ಸೂಚಿಸಿದೆ. ಹಾಗೆಂದಾಗ ಈ ಏಳೆಂಟು ದಶಕಗಳಲ್ಲಿ ನಾವು ವಸಾಹತುಶಾಹಿ ಅನುಭವದಿಂದ ಬಿಡುಗಡೆ ಪಡೆದಿದ್ದೇವೆ ಎಂದಲ್ಲ. ಆದರೆ ಆ ಸಾಂಸ್ಕೃತಿಕ ಸ್ಥಿತಿಯ ಬಗ್ಗೆ ಪ್ರಜ್ಞಾವಂತರಾಗುವುದು ಹಾಗೂ ಆ ಸಾಂಸ್ಕೃತಿಕ ಸ್ಥಿತಿಯ ಭಾಗವಾಗಿ

ಇರುವುದು, ಬೇರೆ ಬೇರೆ ಬಗೆಯ ಅನುಭವಗಳು. ಹಾಗಾಗಿ ಮಾಸ್ತಿಯವರ ಕಥಾಸಾಹಿತ್ಯದ ಹಿಂದಿನ ಧ್ಯಾನಪೂರ್ವ ತುಡಿತಗಳನ್ನು ಅರಿಯಲು ಇದೀಗ ಕಾಲ ಮಾಗಿದೆ. ಅದಕ್ಕೆ ಅವಶ್ಯವಾದ ಚಿಂತನಾಪರಿಕರಗಳು ಸಿದ್ಧವಾಗಿವೆ. ಬಹುಶಃ ಮುಂದಿನ ದಶಕಗಳಲ್ಲಿ ಇಂಥ ಪ್ರಯತ್ನಗಳು ಗಾಢಗೊಳ್ಳಲಿವೆ.

ಮಾಸ್ತಿಯವರ ಕಥಾಸಾಹಿತ್ಯ ಅವರ ಒಟ್ಟು ಬರವಣಿಗೆಯ ಒಂದು ಚಿಕ್ಕಭಾಗ ಮಾತ್ರ. ವಿಮರ್ಶೆ, ಜೀವನಚರಿತ್ರೆ, ಆತ್ಮಕತೆ, ಸಂಪಾದಕೀಯ ಹೀಗೆ ಹಲವು ದಿಕ್ಕುಗಳಲ್ಲಿ ಹರಡಿದ ಮಾಸ್ತಿಯವರ ಬರವಣಿಗೆಯ ಹಿಂದಿನ ಸಾಂಸ್ಕೃತಿಕ ತುಡಿತಗಳ ಅಭ್ಯಾಸ ಪರೋಕ್ಷವಾಗಿ ಅವರ ಕಥಾ ಸಾಹಿತ್ಯ ಅಧ್ಯಯನಕ್ಕೂ ಪೂರಕವಾಗಿ ನಿಲ್ಲಬಲ್ಲದು. ಏಕೆಂದರೆ ನಮ್ಮ ನಾಡಿನ ಪುನರುಜ್ಜೀವನ ರೂಪಿಸಿದ ಸಾಂಸ್ಕೃತಿಕ ವ್ಯಕ್ತಿತ್ವದ ಬಹುಮುಖತ್ವ ಕೂಡ ತಾತ್ವಿಕ ಏಕಾಗ್ರತೆಗೆ ಬದ್ಧವಾಗಿತ್ತು. ಇದಕ್ಕೆ ಹತ್ತಾರು ನಿದರ್ಶನಗಳಿವೆ.

ಶತಮಾನದ ತಿರುವಿಗೆ ಸಮೀಪವಾಗುತ್ತಿರುವಾಗ—ಈ ತಿರುವುಗಳು ಎಷ್ಟೇ ಔಪಚಾರಿಕ ಎನಿಸಿದರೂ—ಈ ಶತಮಾನದ ಕನ್ನಡ ಸಾಹಿತ್ಯದ ಮಹತ್ವದ ಕೊಡುಗೆಗಳನ್ನು ಪರಿಗಣಿಸುವ ಪ್ರಕ್ರಿಯೆಯೂ ಮೊದಲಾಗುತ್ತಿದೆ. ಬರಲಿರುವ ದಶಕಗಳು ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯದ ಬಗ್ಗೆ ತಿಳಿಯುವಾಗ ಬಿಡದೆ ಓದುವ ಐದಾರು, ಖಂಡಿತವಾಗಿ ಐದಾರು ಲೇಖಕರಲ್ಲಿ ಮಾಸ್ತಿಯವರು ಒಬ್ಬರಾಗಿರುತ್ತಾರೆ.

# ಕಾವ್ಯ

*ಕೆ. ರಂ. ನಾಗರಾಜ*

ಒಂದು ವರ್ಷದ ಅವಧಿಯಲ್ಲಿ ಪ್ರಕಟವಾದ (1991) ಕನ್ನಡ ಕಾವ್ಯದ ಸಮೀಕ್ಷೆ ಇಲ್ಲಿದೆ. ಕನ್ನಡ ಕಾವ್ಯ ಈ ಹೊತ್ತು ಸಾಗುತ್ತಿರುವ ದಾರಿಯನ್ನು ಈ ನೂರೈವತ್ತಕ್ಕೂ ಮೀರಿದ ಸಂಕಲನಗಳಿಂದ ತಿಳಿಯಬಹುದು. ನಮ್ಮ ಗಮನಕ್ಕೆ ಬಂದ ಸಂಕಲನಗಳ ಹಿನ್ನೆಲೆಯಲ್ಲಿ ಈ ಟಿಪ್ಪಣಿ ಇರುವುದು ಕೇವಲ ಅನಿವಾರ್ಯ ಕೂಡಾ ಆಗಿದೆ. ನಾಡಿನ ಎಲ್ಲ ಕಡೆಗಳಲ್ಲಿ ಪ್ರಕಟವಾಗಿರುವ 91ರ ಕವನ ಸಂಕಲನಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿರಬಹುದೆಂಬ ಊಹೆ ಕೂಡ ಮಾಡಬಹುದಾಗಿದ. ನಾಡಿನ ವಿವಿಧ ಕಡೆಗಳಲ್ಲಿ ಪ್ರಕಟವಾಗುವ ಕವನ ಸಂಕಲನಗಳನ್ನು ಒಂದು ಕಡೆ ಸಂಕಲಿಸುವುದು ಕಷ್ಟವಾದರೂ ದಾಖಲಾತಿಯ ದೃಷ್ಟಿಯಿಂದ ಆಗಬೇಕಾದ ಕೆಲಸ. ಇಷ್ಟೇ ಅಲ್ಲದೆ ದಿನ, ವಾರ, ತಿಂಗಳ ಪತ್ರಿಕೆಗಳಲ್ಲಿ, ಪ್ರತಿ ಜಿಲ್ಲೆ, ತಾಲ್ಲೂಕುಗಳಲ್ಲಿ ಪ್ರಕಟವಾಗುವ ಸುದ್ದಿ ಪತ್ರಿಕೆಗಳಲ್ಲಿ, ಇನ್ನಿತರ ಸಮೂಹ ಮಾಧ್ಯಮಗಳಲ್ಲಿ ಪ್ರಕಟಗೊಳ್ಳುವ, ಬಿತ್ತರಗೊಳ್ಳುವ ಸಮಕಾಲೀನ ಕಾವ್ಯ ಸೃಷ್ಟಿಯನ್ನು ನೆನೆಸಿಕೊಂಡರೆ ಆಶ್ಚರ್ಯವಾಗುತ್ತದೆ. ಒಂದು ವರ್ಷಕ್ಕೆ ಏನಿಲ್ಲವೆಂದರೂ ಸರಾಸರಿ ಮೂರರಿಂದ ನಾಲ್ಕು ಸಾವಿರ ಪುಟಗಳಷ್ಟು ಕಾವ್ಯ ಪ್ರಕಟಗೊಳ್ಳುತ್ತಿದೆ. ಕಾವ್ಯ ಸೃಷ್ಟಿಯ ಬಗೆಗೆ ಇರುವ ಉತ್ಸಾಹ, ಗಾಂಭೀರ್ಯಕ್ಕೆ ಈ ಪ್ರಕಟನೆ ಒಂದು ಕಾರಣವಾಗಿರುವಂತೆಯೇ ನಮ್ಮ ಕವಿತೆಯ ಗ್ರಾಹಕ ವಲಯದ ಮೇಲೂ ವಿಶೇಷ ಬೆಳಕು ಚೆಲ್ಲುತ್ತಿದೆ. ನಮ್ಮ ಕಾವ್ಯಕ್ಕೆ ಎಂದಿಗಿಂತ ಭಿನ್ನರಾದ ಓದುಗ ವಲಯ, ಕೇಳುಗ ವಲಯ ನಿರ್ಮಾಣ ಆಗುತ್ತಿರುವ ಕಾಲ ಕೂಡ ಇದಾಗಿದೆ.

ಸಾಹಿತ್ಯದ ಇನ್ನಿತರ ಪ್ರಕಾರಗಳಿಗೆ ಇರುವ ಮಾರುಕಟ್ಟೆ, ಪ್ರಸಾರ ವ್ಯವಸ್ಥೆಗಳಿಗಿಂತ ಕಾವ್ಯ ಪ್ರಸಾರ ತುಂಬ ಭಿನ್ನವಾದದ್ದು. ನಮ್ಮ ಸಮೀಕ್ಷೆಗಾಗಿ ಸಂಗ್ರಹಗೊಂಡಿರುವ 91 ರ ಕವನ ಸಂಕಲನಗಳಲ್ಲಿ ಹಲವನ್ನು ಪ್ರತಿಷ್ಠಿತ ಪ್ರಕಾಶನ ಸಂಸ್ಥೆಗಳು ಪ್ರಕಟಿಸಿವೆ. ಬಹುತೇಕ ಕವನ ಸಂಕಲನಗಳ ಪ್ರಕಾಶನಕ್ಕೆ ಕವಿಗಳೇ ಕಾರಣರಾಗಿದ್ದಾರೆ. ಹೀಗೆ ನಡೆದಿರುವುದು 91 ವೈಶಿಷ್ಟ್ಯ ಮಾತ್ರವಲ್ಲ. ಎಲ್ಲ ಕಾಲದಲ್ಲೂ ಕಾವ್ಯ ಪ್ರಕಾಶನ ನಡೆಯುವುದೇ ಹೀಗೆ. ಕವಿ ಮತ್ತು ಓದುಗರ ಸಹಭಾಗಿತ್ವದಿಂದ ಮಾತ್ರ ಕವಿತೆಗೆ ಜೀವಂತಿಕೆ ಬರುವುದು ಸಾಧ್ಯ. ಕಾವ್ಯ, ಮುದ್ರಣದ ಮೂಲಕ

ಪ್ರಕಟನೆಗೊಳ್ಳುವುದು ಎಷ್ಟು ಮುಖ್ಯವೋ ಹಾಗೆಯೇ ವಾಚನ, ಗೋಷ್ಠಿ, ಸಂವಾದಗಳ ಮೂಲಕವೂ ಅದರ ಪ್ರಸಾರ ನಡೆಯುವುದು ಅಗತ್ಯವಾಗಿದೆ. ಪ್ರಸಾರ ವ್ಯವಸ್ಥೆ ಕ್ರಮಬದ್ಧ ಸಂಘಟನೆ ಸಾಧ್ಯವಾಗದೇ ಹೋದಲ್ಲಿ ಅನೇಕ ಸಂಕಲನಗಳು, ಬಿಡಿ ಬಿಡಿಯಾದ ಪ್ರಕಟಿತ ಕವಿತೆಗಳು ಅಜ್ಞಾತವಾಗಿಯೇ ಉಳಿಯುವುದು ಅನಿವಾರ್ಯ ಆಗುತ್ತದೆ. ಬೇರೆ ಬೇರೆ ಪ್ರದೇಶಗಳಲ್ಲಿ ಪ್ರಕಟವಾಗುವ ಕಾವ್ಯ ಸಂಗ್ರಹಗಳನ್ನು ಸಂಕಲಿಸುವ ಪ್ರಯತ್ನವನ್ನು ಸಂಘಸಂಸ್ಥೆಗಳು, ಗ್ರಂಥಾಲಯಗಳು, ಹಾಗೂ ಮಾಹಿತಿ ಸಂಘಟನೆಯ ಆಸಕ್ತರು ಕೈಗೊಳ್ಳಬೇಕಾಗುತ್ತದೆ. ಮುದ್ರಿತ ಸಾಮಗ್ರಿಯ ಭರಾಟೆಯಲ್ಲಿ ಭಾಷೆಯ ಅತ್ಯಂತ ಸೂಕ್ಷ್ಮ ಅಭಿವ್ಯಕ್ತಿ ಪ್ರಕಾರವಾದ ಕಾವ್ಯವನ್ನು ಹೆಚ್ಚು ಗಂಭೀರವಾಗಿ ಪರಿಗಣಿಸುವ ದೃಷ್ಟಿಯಿಂದ ಈ ಮಾತುಗಳನ್ನು ಹೇಳಬೇಕಾಯಿತು.

## ಉದಯೋನ್ಮುಖರು

1991 ರಲ್ಲಿ ಉದಯೋನ್ಮುಖ ಕವಿಗಳಿಂದ ರಚಿತವಾದ ಸಂಕಲನಗಳ ಪಾಲು ತುಂಬ ದೊಡ್ಡದು. ತಮ್ಮ ಅಭಿವ್ಯಕ್ತಿಯನ್ನು ಕಾವ್ಯದ ಮೂಲಕ ಕಂಡುಕೊಳ್ಳಲು ಪ್ರಯತ್ನಿಸುವವರ ಸಂಖ್ಯೆ ಯಾವಾಗಲೂ ದೊಡ್ಡದಾಗಿರುತ್ತದೆ. ಜೊತೆಗೆ ಕಾವ್ಯವನ್ನು ಕೇವಲ ವಿನೋದಾಸಕ್ತಿಯ ನಿಟ್ಟಿನಲ್ಲಿ ಬರೆಯುವವರಿಗೇನೂ ಕೊರತೆಯಿಲ್ಲ. ಏನನ್ನು ಹೇಳಬೇಕಾದರೂ ಪದ್ಯ ಮಾಧ್ಯಮವನ್ನು ಬಳಸಿ ಆ ಮೂಲಕ ತಮ್ಮ ಅನ್ನಿಸಿಕೆಗಳನ್ನು ಹೊರಹಾಕಲು ಅನೇಕರು ಪ್ರಯತ್ನಿಸುತ್ತಾರೆ. ಕಾವ್ಯದ ಮೌಲ್ಯದ ದೃಷ್ಟಿಯಿಂದ ಇಂಥ ಪ್ರಯೋಗಗಳು ಅಷ್ಟು ಮಹತ್ವವಲ್ಲದೇ ಇರಬಹುದು. ಆದರೂ ಈ ದಿಸೆಯ ಪ್ರಯತ್ನವನ್ನು ತಳ್ಳಿಹಾಕುವಂತಿಲ್ಲ.

ಬಹುತೇಕ ಉದಯೋನ್ಮುಖ ರಚನೆಗಳು ತೀರ ಪ್ರಾಥಮಿಕ ಸ್ವರೂಪದ್ದು. ಅನೇಕ ಸಂಕಲನಗಳು ತೀರಾ ಸ್ವೇಚ್ಛೆಯಾದ ರಚನೆಗಳು. ಕಾವ್ಯದಂಥ ಮಾಧ್ಯಮವನ್ನು ಆಯ್ಕೆ ಮಾಡಿಕೊಂಡದ್ದರ ಸಮರ್ಥನೆ ಕೂಡಾ ಇಂಥ ಸಂಕಲನಗಳಲ್ಲಿ ಕಾಣಲು ಸಾಧ್ಯವಾಗುವುದಿಲ್ಲ. ಬರಹಗಾರ ಯಾವುದೇ ಪಂಥದ, ಚಳುವಳಿಯ ನೆಲೆಯಲ್ಲಿ ನಿಂತು ಬರೆದರೂ ಬರಹ ರಚನೆಯ ಕೆಲವು ಮುಖ್ಯ ನಿಯಮಗಳಿಗೆ ಗುರಿಪಡುವುದು ತೀರಾ ಪ್ರಾಥಮಿಕ ಅಗತ್ಯ. ಹೀಗೆ ಇದ್ದಾಗ ಮಾತ್ರ ಕೃತಿಯನ್ನು ಗ್ರಹಿಸಲು ತಕ್ಕ ಭಿತ್ತಿ ಒದಗಿ ಬರುತ್ತದೆ. ಇಲ್ಲವಾದರೆ–ವಿಮರ್ಶಕನಿರಲಿ, ಓದುಗ ಕೂಡಾ ಅಂಥ ರಚನೆಗಳ ಬಗೆಗೆ ಅನಾಸಕ್ತನಾಗುತ್ತಾನೆ. ಏಕೆಂದರೆ ಕಾವ್ಯ ಶುದ್ಧ ನಿರ್ವಾತದಲ್ಲಿ ಆಗುವಂಥದ್ದಲ್ಲ. ಕಾವ್ಯಕ್ಕೆ ಒಂದು ಪರಂಪರೆಯ ಸತತತೆ ಇರುತ್ತದೆ. ಅದರ ಗ್ರಹಿಕೆ–ಸ್ವೀಕಾರಗಳೂ ಈ ನಿಟ್ಟಿನಲ್ಲಿಯೇ ಆಗುವಂಥದ್ದು. ಉದಯೋನ್ಮುಖರ ಬಹುಪಾಲು ಸಂಕಲನಗಳು ಇಂಥ ಸತತತೆಯನ್ನು ಗಣನೆಗೆ ತಂದುಕೊಳ್ಳದೆ ಸೃಷ್ಟಿಯಾಗಿರುವಂಥದ್ದು. ಕಾವ್ಯ ಮಾಧ್ಯಮದ ಬಗೆಗೆ ಗಂಭೀರ ಕಾಳಜಿ,

'ಅನುಭವವನ್ನು ಇನ್ನೊಬ್ಬರಿಗೆ ನಿವೇದನೆ ಮಾಡಬಲ್ಲ ಅಭಿವ್ಯಕ್ತಿ ಶಕ್ತಿಯಿಂದ ರೂಪುಗೊಳಿಸಬಲ್ಲ' ಪ್ರಯತ್ನದಿಂದ ಮಾತ್ರ ಕವಿಯ ದನಿಗೆ ಮಹತ್ವ ಒದಗಿಬರುತ್ತದೆ. ಇಂಥ ಪ್ರಯತ್ನಶೀಲತೆಯನ್ನು ಉದಯೋನ್ಮುಖರ ಸಂಕಲನಗಳಲ್ಲಿ ಕಾಣುವುದು ಅನಿವಾರ್ಯ ಆಗುತ್ತದೆ. ಕನ್ನಡ ಸಾಹಿತ್ಯಪರಿಷತ್ತು ಪ್ರಕಟಿಸಿರುವ 'ಹೊಸ ಧ್ವನಿ' (ಪ್ರಧಾನ ಸಂಪಾದಕ : ಜಿ. ಎಸ್. ಸಿದ್ಧಲಿಂಗಯ್ಯ) ನಾಡಿನ ವಿವಿಧ ಯುವ ದನಿಗಳನ್ನು ಒಂದು ಕಡೆ ತರುವ ಪ್ರಯತ್ನವಾಗಿ ಗಮನಾರ್ಹ ಸಂಕಲನವಾಗಿದೆ. ಈ ಸಂಕಲನದಲ್ಲಿ ಈಗಾಗಲೇ ಕವನ ಸಂಗ್ರಹಗಳನ್ನು ಪ್ರಕಟಿಸಿರುವ ಯುವ ಕವಿಗಳ ಕವನಗಳು ಇರುವಂತೆಯೇ ಈಗ ತಾನೇ ಕಾವ್ಯಾಭಿವ್ಯಕ್ತಿಯ ಮೂಲಕ ತಮ್ಮನ್ನು ಪ್ರತಿನಿಧಿಸಿಕೊಳ್ಳಲು ಹವಣಿಸುತ್ತಿರುವ ಯುವ ಕವಿಗಳೂ ಇದ್ದಾರೆ. ಅಂತೆಯೇ 'ಅತ್ತು ಬಿಡೆ ಗೆಳತಿ' (ಸಂ : ರವಿಕುಮಾರ), 'ಮಿಂಚುಹುಳು' (ಸಂ : ಚಿ. ಶ್ರೀನಿವಾಸರಾಜು), ನಿಸರ್ಗ (ಸಂ: ಗಜಾನನ ಮಹಾಲೆ) ಉದಯೋನ್ಮುಖರ ಕವಿತೆಗಳನ್ನು ಒಂದೆಡೆ ಸಂಕಲಿಸಿರುವ ಸಂಗ್ರಹಗಳಾಗಿವೆ. ಈ ಸಂಕಲನಗಳಲ್ಲಿ ಕಾವ್ಯಾಭಿವ್ಯಕ್ತಿಗೆ ತಮ್ಮನ್ನು ತೆರೆದುಕೊಳ್ಳುತ್ತಿರುವ, ಭರವಸೆ ಹುಟ್ಟಿಸುವ ಅನೇಕ ಕವಿಗಳಿದ್ದಾರೆ.

**'ತಟ್ಟು ಚಪ್ಪಾಳೆ ಪುಟ್ಟ ಮಗು'**

ಈ ವರ್ಷ ಪ್ರಕಟವಾಗಿರುವ ಮಹತ್ವದ ಸಂಪಾದಿತ ಸಂಗ್ರಹಗಳಲ್ಲಿ 'ತಟ್ಟು ಚಪ್ಪಾಳೆ ಪುಟ್ಟ ಮಗು' (ಸಂ : ಬೋಳುವಾರು ಮಹಮದ್ ಕುಂಞ್) ಅನೇಕ ದೃಷ್ಟಿಗಳಿಂದ ಮಹತ್ವದ ಕೃತಿ. ನಾಡಿನ ಕವಿಗಳು ಬರೆದ ಮಕ್ಕಳ ಕವಿತೆಗಳ ಅಚ್ಚುಕಟ್ಟಾದ ಸಂಗ್ರಹ. 'ಮುದ್ರಣಯುಗ ಪ್ರಾರಂಭವಾದಂದಿನಿಂದ 1975 ರ ವರೆಗೆ ಕನ್ನಡ ಕವಿಗಳು ಬರೆದ 'ಮಕ್ಕಳ ಪದ್ಯ' ಗಳು ಈ ಸಂಗ್ರಹದಲ್ಲಿವೆ. ಅದಲ್ಲದೆ ನಾಡಿನ ನಲವತ್ತೇಳು ಸುಪ್ರಸಿದ್ಧ ಕಲಾವಿದರೂ ಈ ಪದ್ಯಗಳಿಗೆ ಚಿತ್ರಗಳನ್ನು ಬರೆದು ಕೃತಿಗೆ ವಿಶೇಷ ಕಾಂತಿಯನ್ನು ತಂದಿದ್ದಾರೆ.

ನಾಡಿನ ಹಿರಿಯ ಸಾಹಿತಿ, ಮಕ್ಕಳ ಜ್ಞಾನವಿಕಾಸದ ಚಿಂತಕ ಡಾ. ಶಿವರಾಮ ಕಾರಂತರು ಈ ಸಂಗ್ರಹಕ್ಕೆ ಮುನ್ನುಡಿ ಬರೆದಿದ್ದಾರೆ. ಶಿಶುಸಾಹಿತ್ಯ ನಿರ್ಮಿತಿಯ ಮೂಲಭೂತ ಸಮಸ್ಯೆಗಳನ್ನು ತುಂಬ ಚೆನ್ನಾಗಿ ಮನಗಾಣಿಸಿದ್ದಾರೆ. ಸಾಂಪ್ರದಾಯಕ ಪಠ್ಯ ಪುಸ್ತಕಗಳಲ್ಲಿ ತುಂಬಿರುವ ಸತ್ವಹೀನತೆಯನ್ನು ಮೀರಲು ಒಳ್ಳೆಯ ಶಿಶುಸಾಹಿತ್ಯವನ್ನು ಬಳಸುವ ವಿಚಾರವನ್ನು ಕಾರಂತರು ಇಲ್ಲಿ ಪ್ರತಿಪಾದಿಸಿದ್ದಾರೆ. ಹೀಗಾಗಿ ಶಿಶು ಸಾಹಿತ್ಯ ನಿರ್ಮಾಣದ ಬಗೆಗೆ ಈ ಮುನ್ನುಡಿ ತುಂಬ ಮಹತ್ವದ ಚಿಂತನೆ. ಶಿಶುಸಾಹಿತ್ಯ–ಬೋಧನೆ ಮುಖ್ಯವಾಗದ ಭಾಷೆಯ ಬಳಕೆ, ಕಿವಿಯನ್ನು ಸಂತೈಸುವ ಪ್ರಾಸ ವೈಚಿತ್ರ್ಯದಿಂದ ಚೋದ್ಯ ಪ್ರೇರಕ ಗುಣಗಳ ಬಗೆಗೆ ಅವರು ಹೇಳಿರುವ ಮಾತುಗಳು ಮನನೀಯವಾದದ್ದಾಗಿದೆ. 'ಪದ್ಯಗದ್ಯ–ಏನೇ ಇದ್ದರೂ ಇದು ಉಪದೇಶವನ್ನು ಮಾಡಬೇಕೆಂಬ ಹುಚ್ಚು ನಮ್ಮನ್ನು ಪೀಡಿಸಬೇಕಾದ

ಕಾರಣವಿಲ್ಲ. ಮಕ್ಕಳಿಗೆ ಸಂತೋಷ ಕೊಡಬಲ್ಲ ಯಾವುದೇ ವೈಚಿತ್ರ್ಯ, ಅದ್ಭುತ ಅಥವಾ ಅಸಂಬದ್ಧಗಳೆಲ್ಲವೂ ಪ್ರಾಸಬದ್ಧಗೀತೆಗಳಾಗಿ ಸಂತೃಪ್ತಿ ಕೊಡಬಲ್ಲವು... ಎಳೆಯ ಮಕ್ಕಳ ಸಲುವಾಗಿ ಹಾಡಿದ ಹಾಡುಗಳಲ್ಲಿ ಅವರ ಎಟುಕಿನೊಳಗಿನ ಪದಗಳನ್ನು ಬಳಸಬೇಕು. ಅವರ ಲೋಕ ಹಿರಿಯರ ಲೋಕವಲ್ಲ. ಅದು ಲೋಕವೂ ಅಲ್ಲ; ದೇಶವೂ ಅಲ್ಲ. ಅದನ್ನು ಎಣಿಸದೆ ನಾವು ತುರುಕುವ ಘೋಷಣೆಗಳು ಅರ್ಥ ವೈಪರೀತ್ಯದಿಂದ ಹೊಮ್ಮುತ್ತವೆ. (ಶಿವರಾಮ ಕಾರಂತ : ಪು : 19) ನಮ್ಮ ಸಾಹಿತ್ಯದ ವಿಕಾಸದಲ್ಲಿ ಶಿಶುಸಾಹಿತ್ಯ ತನ್ನ ನಿರ್ದಿಷ್ಟತೆಯನ್ನು ಕಳೆದುಕೊಂಡಿರುವ ಈ ಹೊತ್ತಿನಲ್ಲಿ ಕಾರಂತರ ಚಿಂತನಗಳಿಗೆ ವಿಶೇಷ ಮಹತ್ವವಿದೆ. ಕಾರಂತರ ಮಾತುಗಳು ಮಕ್ಕಳಿಗೆ ಹೇಳಿದ್ದಲ್ಲ. ಮಕ್ಕಳ ಸಾಹಿತ್ಯ ಸೃಷ್ಟಿಯಲ್ಲಿ ತೊಡಗಿರುವವರಿಗೆ, ತೊಡಗುವವರಿಗೆ ಹೇಳಿದ ಮಾತಾಗಿದೆ.

ಸಂಪಾದಕ ಬೊಳುವಾರು ಮಹಮದ್ ಕುಞ ಪುಸ್ತಕಕ್ಕೆ ಮೌಲಿಕ ಮುನ್ನುಡಿಯನ್ನು ಬರೆದಿದ್ದಾರೆ. 19–20 ನೆಯ ಶತಮಾನಗಳಲ್ಲಿ ರೂಪುಗೊಂಡ ಮಕ್ಕಳ ಸಾಹಿತ್ಯದ ಬಗೆಗೆ ವಿಶೇಷ ಶೋಧ, ಪತ್ತೇದಾರಿಯನ್ನು ನಡೆಸಿರುವ ಬೊಳುವಾರು ಮೊತ್ತಮೊದಲ ಬಾರಿಗೆ ಶಿಶುಸಾಹಿತ್ಯ ತತ್ವವನ್ನೇ ಕುರಿತು ಬರೆದಿದ್ದಾರೆ. ಅಲ್ಲದೆ ಶಿಶುಸಾಹಿತ್ಯ ಚರಿತ್ರೆಯನ್ನು ಕುರಿತು ಗಂಭೀರ ಚರ್ಚೆ ಕೂಡಾ ಇದಾಗಿದೆ. ಈ ಚರಿತ್ರೆ – ಸಾಹಿತ್ಯ ಚರಿತ್ರೆಯ ನಿರ್ಮಿತಿಯ ಬಗೆಗೆ ಹೊಸ ಕಲ್ಪನೆಗಳನ್ನೆ ನೀಡುವಷ್ಟು ಗಟ್ಟಿಮುಟ್ಟಾದ ವಿಚಾರ, ವ್ಯಾಖ್ಯೆಗಳಿಂದ ಕೂಡಿದೆ. ಶಿಶುಸಾಹಿತ್ಯದ ಬಗೆಗೆ ಲೇಖಕರ ಶ್ರದ್ಧೆ ಆಸಕ್ತಿಗಳು ನಾಡಿನ ಮೂಲೆ ಮಡಕುಗಳನ್ನು ಪ್ರವೇಶಿಸಿದೆ. ಮಕ್ಕಳ ಪದ್ಯಗಳ ಹುಡುಕಾಟ, ದಾಖಲಾತಿಗಳು ಎಷ್ಟು ಕಷ್ಟಸಾಧ್ಯ ಎಂಬುದು ಈ ಸಂಕಲನದ ಉದ್ದಕ್ಕೂ ಕಾಣಬರುತ್ತದೆ. ಮಕ್ಕಳ ಕಾವ್ಯಕ್ಕಾಗಿ ಸಂಪಾದಕರು ನಡೆಸಿರುವ ಅನ್ವೇಷಣೆ, ಆಯ್ಕೆಯ ಸಂದರ್ಭದ ಪ್ರಯೋಗಶೀಲತೆ ನಿಜಕ್ಕೂ ಇಂಥ ಕಾರ್ಯಗಳಿಗೆ ಒಂದು ಮಾದರಿ ಎನ್ನಿಸುವಂತಿದೆ. ಸಂಪಾದಕರು ಮಕ್ಕಳ ಪ್ರೀತಿಗೆ ಪಕ್ಕಾಗುವುದರೊಂದಿಗೆ, ಮಕ್ಕಳ ಮನೋವಿಕಾಸದಲ್ಲಿ ಆಸಕ್ತರಾದ ಹಿರಿಯರೆಲ್ಲರ ಪ್ರೀತಿಗೆ ಕಾರಣರಾಗಿದ್ದಾರೆ.

ಅಬ್ದುಲ್ ರಹಮಾನ್, ಹೊಯಿಸಳ, ಉಗ್ರಾಣ ಮಂಗೇಶರಾವ್, ಹೊನ್ನಯ್ಯ ಶೆಟ್ಟಿ, ನಾ. ಕಸ್ತೂರಿ, ಎಂ. ಎನ್. ಕಾಮತ್, ಎಲ್. ಗುಂಡಪ್ಪ, ದ. ರಾ. ಬೇಂದ್ರೆ, ಎಸ್. ಜಿ. ನರಸಿಂಹಾಚಾರ್, ಪೇಜಾವರ ಸದಾಶಿವರಾವ್, ಪಂಜೆ ಮಂಗೇಶರಾವ್, ಮಧುರಚೆನ್ನ, ಗೋವಿಂದ ಪೈ, ಜಿ. ಪಿ. ರಾಜರತ್ನಂ, ಎಂ. ವಿ. ಸೀ, ಕುವೆಂಪು, ಕಾರಂತ, ಚೆನ್ನವೀರ ಕಣವಿ, ವಿ. ಜಿ. ಭಟ್ಟ, ಸಿದ್ಧಯ್ಯ ಪುರಾಣಿಕ – ಹೀಗೆ ನೂರ ಆರು ಕವಿತೆಗಳು ಈ ಸಂಕಲನದಲ್ಲಿ ಇವೆ. ಸಂಕಲನದ ಕವಿಗಳ ಬಗೆಗೆ ಮಾಹಿತಿಗಳು ಕೂಡ ಇಲ್ಲಿ ದೊರೆಯುತ್ತದೆ. 1991 ರಲ್ಲಿ ಪ್ರಕಟವಾಗಿರುವ ಮುಖ್ಯ ಕಾವ್ಯ ಸಂಕಲನ ಮಾತ್ರವಲ್ಲದೆ – ಇತ್ತೀಚಿನ ವರ್ಷಗಳಲ್ಲಿ ಕನ್ನಡ ಕಾವ್ಯ ಕಂಡಿರುವ ಸಾಂಸ್ಕೃತಿಕ ಮಹತ್ವದ ಸಂಕಲನಗಳಲ್ಲಿ ಒಂದಾಗಿದೆ.

ಒಂದು ಸಂಸ್ಕೃತಿಯಲ್ಲಿ – ಸಾಹಿತ್ಯಾಭಿವ್ಯಕ್ತಿಯನ್ನು ಅನನ್ಯ ಭಾಗವಾಗಿ ಸ್ವೀಕರಿಸುವ ಓದುಗ ವರ್ಗ ನಿರ್ಮಾಣವಾಗುವುದು ಮಕ್ಕಳ ಸಾಹಿತ್ಯಾಭಿರುಚಿಯ ಮೂಲಕ. ಇಂಥ ಅಭಿರುಚಿಯ ವಿಕಾಸದಿಂದ ಮಾತ್ರ ನಮ್ಮ ಸಾಹಿತ್ಯ ಪರಂಪರೆಯ ಮಹತ್ವದ ಕೃತಿಗಳು ಹೊಸ ಓದುಗ ವಲಯಕ್ಕೆ ತೆರೆದುಕೊಳ್ಳುವುದು ಸಾಧ್ಯ. ನಮ್ಮ ಶೈಕ್ಷಣಿಕ ಸಂದರ್ಭದಲ್ಲಿ ಪಠ್ಯ ಪುಸ್ತಕಗಳ ನಿರ್ಮಾಣ ಅನೇಕ ಗೊಂದಲಗಳಿಂದ ಕೂಡಿದ್ದಾಗಿದ್ದು, ನಿರ್ದಿಷ್ಟ ಗುರಿಯತ್ತ ಚಲಿಸದೇ ಹೋಗಿರುವುದೊಂದು ವಿರೋಧಾಭಾಸ. ಇಂಥ ಸಂದರ್ಭದಲ್ಲಿ ಮಕ್ಕಳಿಗಾಗಿ, ಅಂತೆಯೇ ಹಿರಿಯರಿಗಾಗಿಯೂ ಕೂಡ ಬೊಳುವಾರು ಇಂಥ ಸಾಂಸ್ಕೃತಿಕ ಮಹತ್ವದ ಪಠ್ಯವನ್ನು ಸಂಯೋಜಿಸಿಕೊಟ್ಟಿದ್ದಾರೆ.

**ವಿವಿಧ :**

ಯಾವುದೇ ಒಂದು ವರ್ಷದ ಕನ್ನಡ ಕವಿತೆಗಳನ್ನು ವರ್ಗೀಕರಿಸುವುದು ಎಷ್ಟು ಕಷ್ಟದ ಕೆಲಸ ಎಂಬುದನ್ನು 1991 ರ ಕವನ ಸಂಕಲನಗಳನ್ನಷ್ಟೇ ಗಮನಿಸಿದರೂ ತಿಳಿಯುವ ಅಂಶವಾಗಿದೆ. ಎಲ್ಲ ಕಾಲಮಾನದ, ಎಲ್ಲ ಕಾವ್ಯ ಪ್ರಸ್ಥಾನ, ಚಳುವಳಿಗಳ ಧ್ವನಿಗಳು ಈ ವರ್ಷದ ಕವನ ಸಂಕಲನಗಳಲ್ಲಿ ಪ್ರತಿನಿಧಿತಗೊಂಡಿವೆ. ಅಧ್ಯಾತ್ಮ–ವಿಜ್ಞಾನ, ಪ್ರೇಮ–ಪ್ರೀತಿ–ನೆನಪು–ವಿರಹ, ಪೌರಾಣಿಕತೆ–ಕ್ರಾಂತಿ, ಭಾಮಿನಿ ಷಟ್ಪದಿಯಲ್ಲಿ ಬರೆದ 'ವಿಷ್ಣುರಹಸ್ಯ', ಬೆಳಕು ಅರುಣೋದಯ, ಭಾವತರಂಗ, ಹನ್ನೆರಡನೆಯ ಶತಮಾನದ ಡಕ್ಕೆಯ ಬೊಮ್ಮಣ್ಣನ ವಚನಗಳು (ಸಂ : ಭೂಸರೆಡ್ಡಿ, ಮಧು ವೆಂಕಾರೆಡ್ಡಿ) ಹಸಿವು, ಹೊಸಚಿಗುರು, ಕೆಂಗುಲಾಬಿ, ಹೊಕ್ಕುಳಲ್ಲಿ ಹೂವಿದೆ ... ಹೀಗೆ ಭಾವಪ್ರಪಂಚದ, ಸಾಮಾಜಿಕ ಅಪೇಕ್ಷೆಯ ಅನೇಕ ಮಟ್ಟದ ಲಹರಿಗಳು ಈ ವರ್ಷದ ಮುಖ್ಯ ವಸ್ತು–ವಿಷಯಗಳಾಗಿವೆ. ಈ ಎಲ್ಲ ರಚನೆಗಳನ್ನು ಓದುವುದಕ್ಕೇ ಸಾಕಷ್ಟು ಕಾಲಬೇಕು. ಇನ್ನು ಇವುಗಳನ್ನೆಲ್ಲ ವಿವರಿಸಿ ವಿಶ್ಲೇಷಿಸುವುದಕ್ಕಂತೂ ಒಂದು ವರ್ಷ ಸಾಲುವುದಿಲ್ಲ; ಅನೇಕ ವರ್ಷಗಳೇ ಬೇಕಾಗಬಹುದು. ಅಷ್ಟು ಹೊತ್ತಿಗೆ ಅದೆಷ್ಟು ಪ್ರವಾಹವಾಹಿನಿಗಳು ಬಂದು ಸೇರುತ್ತದೆಯೋ ಕಾದು ನೋಡಬೇಕು.

**ಮಹಿಳಾ ಕಾವ್ಯ**

1991 ರ ಕನ್ನಡ ಕಾವ್ಯದಲ್ಲಿ ಬಹು ಮುಖ್ಯ ಮಹಿಳಾ ಧ್ವನಿಗಳು ಕಾಣಸಿಗುತ್ತವೆ. ಈಗಾಗಲೇ ತಮ್ಮ ಕಾವ್ಯವನ್ನು ಪ್ರಸ್ತುತಪಡಿಸುತ್ತ ಬಂದಿದ್ದು, ಓದುಗರನ್ನು ಕೇಳುಗರನ್ನು ಸಂಪಾದಿಸಿಕೊಂಡಿರುವ ಸವಿತಾ ನಾಗಭೂಷಣ (ಚಂದ್ರನನ್ನು ಕರೆಯಿರಿ ಭೂಮಿಗೆ) ಪ್ರತಿಭಾ ನಂದಕುಮಾರ್ (ರಸ್ತೆಯಂಚಿನ ಗಾಡಿ) ಲಕ್ಷ್ಮಣ ರೇಖೆ ದಾಟಿದವರು (ವಿಜಯಶ್ರೀ ಸಬರದ) ಛಾಯೆ (ಡಿ. ಬಿ. ರಜಿಯಾ) ತುಂತುರ ಹನಿಗಳು (ಶೈಲಜಾ ಉಡುಚಣ) ಒಳರಾಗ (ವಿಜಯಕುಮಾರಿ ಡಿ. ಎಲ್) ಪ್ರಮದ (ವಸಂತ ಕಲ್‌ಬಾಗಲ್) ಅಂತರಗಂಗೆ (ಸುನಿತಾ ಶೆಟ್ಟಿ) ಮುಂತಾಗಿ ಇನ್ನೂ ಅನೇಕ ಸಂಕಲನಗಳಿವೆ.

ಹೆಣ್ಣಿನ ಅನುಭವಲೋಕವನ್ನು ಕೇಂದ್ರವಾಗಿಸಿಕೊಂಡು ಕಾವ್ಯ ಬರೆಯುತ್ತಿರುವ ಕವಯತ್ರಿಯರು ಹಿಂದಿಗಿಂತ ಈಗ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಹೆಣ್ಣು ತಾನಾಗಿ ಹೇಳಬೇಕಾದ ವಿಶಿಷ್ಟ ಅನುಭವ ಲೋಕವೊಂದು ಇದೆ ಎಂದು ಈ ಕವಯತ್ರಿಯರು ದೃಢವಾಗಿ ನಂಬಿದ್ದಾರೆ. ಅಲ್ಲದೆ ಅಭಿವ್ಯಕ್ತಿ ಕ್ರಿಯೆಯ ಹೊಸ ಒತ್ತಡಗಳಿಗೆ ಇವರು ಗುರಿಯಾಗಿದ್ದಾರೆ. ವಸ್ತುವಿನ ವಿಶಿಷ್ಟತೆ, ಭಾಷಾಭಿವ್ಯಕ್ತಿ, ಹೊಸ ಸವಾಲುಗಳನ್ನು, ಪಂಥಾಹ್ವಾನಗಳನ್ನು ಮಂಡಿಸುವ ಮುನ್ನೆಲೆಯಲ್ಲಿ ಈ ಕವಯತ್ರಿಯರು ಇದ್ದಾರೆ. ಆದರೆ ಹೆಣ್ಣಿನ ಅನುಭವ ಲೋಕ ಪ್ರಮುಖವಾಗಿ ನಮ್ಮ ಮಧ್ಯಮ ವರ್ಗದ ಸಂವೇದನೆಯ ಮಧ್ಯೆ ಹೊರಟದ್ದಾಗಿದೆ. ವೈದೇಹಿ, ಸಾರಾ ಅಬೂಬಕರ್ – ಮುಂತಾದವರು ಇಂಥ ಪರಿಮಿತಿಗಳನ್ನು ಮೀರಿದ ಅಭಿವ್ಯಕ್ತಿಯನ್ನು ಕನ್ನಡಕ್ಕೆ ತರುತ್ತಿದ್ದಾರೆ. ಲಲಿತಾ ನಾಯಕ (ಬಿ. ಟಿ.) ಯವರು ತಮ್ಮ ಅನುಭವಗಳ ಅಭಿವ್ಯಕ್ತಿಗೆ ಹೊಸ ನೆಲೆಯನ್ನು ಕಂಡುಕೊಂಡಿದ್ದಾರೆ. ಮಧ್ಯಮ ವರ್ಗದ ಅನುಭವಗಳಿಗೆ ಬದ್ಧವಾಗಿರುವುದೊಂದು ಮಿತಿಯಲ್ಲ.

ಅನೇಕ ಮಟ್ಟದ ಯಜಮಾನ ಸಂಸ್ಕೃತಿಯ ವಲಯ ನಮ್ಮದಾಗಿದ್ದು, ಹೆಣ್ಣಿನ ಅನುಭವಲೋಕ ಕೂಡಾ ಈ ಕಕ್ಷೆಯಿಂದ ಬೇರಯಾದುದಲ್ಲ. ನಮ್ಮ ಕಾವ್ಯದಲ್ಲಿ ಪ್ರಕಟಗೊಳ್ಳುತ್ತಿರುವ ಹೆಣ್ಣಿನ ಲೋಕ– ಅಸ್ತಿತ್ವ ಹಾಗೂ ಸಾಂಪ್ರದಾಯಕ ಕುಟುಂಬ ವ್ಯವಸ್ಥೆಯ ನೆಲಗಳನ್ನು ಶೋಧಿಸುವ ಮುಖ್ಯ ಆಶಯವನ್ನು ಕೇಂದ್ರವನ್ನಾಗಿಸಿಕೊಂಡಿದೆ. ಪುರುಷ ಪ್ರಧಾನ ಮೌಲ್ಯಗಳ ನೆರಳಿನಲ್ಲಿ ಹೊಸಧೋರಣೆಯೊಂದನ್ನು ಕಲ್ಪಿಸಿಕೊಳ್ಳುತ್ತಿರುವ ಹೆಣ್ಣಿನ ಪ್ರಪಂಚ ಪ್ರತಿಭಟನೆಯ ಅನೇಕ ತಳತಂತ್ರಗಳನ್ನು ಹೂಡುತ್ತಿರುವ ಅಭಿವ್ಯಕ್ತಿಯಾಗಿದೆ. ಅಲ್ಲದೆ ಅಭಿವ್ಯಕ್ತಿಯ ಸಂದರ್ಭದಲ್ಲಿ ತನ್ನನ್ನು ನಿಚ್ಚಳವಾಗಿ ಅನಾವರಣಗೊಳಿಸಿ ಕೊಳ್ಳುವ ಕ್ರಮಗಳೂ ಕೂಡಾ ಈ ಕಾಲದ ಮುಖ್ಯ ಧ್ವನಿಯಾಗಿದೆ.

1991 ರ ಮುಖ್ಯ ಕಾವ್ಯಾನುವಾದಗಳಲ್ಲಿ ರಷ್ಯನ್ ಕವಯಿತ್ರಿ ಆನಾ ಆಖ್ಮತೋವ ಬರೆದಿರುವ ಸುಮಾರು ಮೂವತ್ತು ಕವಿತೆಗಳನ್ನು ಶಾ. ಬಾಲೂರಾವ್ ಕನ್ನಡಕ್ಕೆ ಅನುವಾದಿಸಿದ್ದಾರೆ. ರಷ್ಯನ್ ಭಾಷೆಯಿಂದ ನೇರವಾಗಿ ಕನ್ನಡಕ್ಕೆ ಅನುವಾದಿತವಾಗಿರುವ ಈ ಕೃತಿ ಸ್ಟಾಲಿನ್ನನ ದಬ್ಬಾಳಿಕೆಗೆ ಗುರಿಯಾದ ಕವಯಿತ್ರಿಯೊಬ್ಬಳ ಕನ್ನಡಾನುವಾದವಾಗಿದೆ. ಪ್ರೇಮದ ನಿರಾಕರಣೆ, ಕಾವ್ಯ ಪ್ರತಿಭೆ ದುಃಖ – ಹೀಗೆ ವಿವಿಧ ಅನುಭವಗಳ ಮಧ್ಯೆ ಹುಟ್ಟುವ ಆಖ್ಮತೋವಳ ಕಾವ್ಯ ಬಹುಕಾಲ ಶಕ್ತರಾಜಕಾರಣದ ಅವಕೃಪೆಗೆ ಗುರಿಯಾಗಿ ಬೆಳಕು ಕಾಣದೆ ಹೋಗಿದ್ದವು. ಆಖ್ಮತೋವಳ ಕವಿತೆ ಅಲ್ಲಲ್ಲಿ ಚಿಕ್ಕ ಪ್ರಮಾಣದಲ್ಲಿ ಓದುಗರ ಅವಗಾಹನೆಗ ಗುರಿಯಾಗಿತ್ತು. ಅಂಥ ಕವಯಿತ್ರಿಯ ಬಹುತೇಕ ಮಹತ್ವದ ಕವಿತೆಗಳು ಸುದೀರ್ಘ ಮುನ್ನುಡಿ ಹಾಗು ಟಿಪ್ಪಣಿಗಳೊಂದಿಗೆ ಪ್ರಕಟವಾಗಿದೆ. ಶಾ. ಬಾಲೂರಾಯರ ಪಾಂಡಿತ್ಯ–ಪ್ರತಿಭೆಗಳು ಈ ಸಂಕಲನದ ಮೂಲಕ ಕನ್ನಡದ

ಓದುಗರಿಗೆ ಲಭ್ಯಿಸಿದೆ. ಅನುವಾದ ಸಾಹಿತ್ಯ ಕನ್ನಡದ ಸಂದರ್ಭದಲ್ಲಿ ಹೆಚ್ಚು ವಿಸ್ತಾರಗೊಳ್ಳುತ್ತಿರವ ಈ ಹೊತ್ತಿನಲ್ಲಿ ಈ ಸಂಕಲನ ಒಂದು ಉತ್ಕೃಷ್ಟ ಮಾದರಿಯಾಗಿದೆ. ಕನ್ನಡದ ಮಹಿಳಾ ಕಾವ್ಯದ ಅಭಿವ್ಯಕ್ತಿ ತನ್ನತನವನ್ನು ಗುರ್ತಿಸಿಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಇಂಥ ಅನುವಾದಗಳು ಉತ್ತಮ ದಿಕ್ಸೂಚಿಯಾಗಿದೆ.

ಈಗಾಗಲೆ ಕನ್ನಡಕಾವ್ಯದ ನಕಾಶೆಯಲ್ಲಿ ತಮ್ಮ ಸ್ಥಾನವನ್ನು ಖಚಿತ ಪಡಿಸಿಕೊಂಡಿರುವ ಸುಬ್ಬಣ್ಣ ರಂಗನಾಥ ಎಕ್ಕುಂಡಿಯವರು 'ಬಕುಲದ ಹೂವುಗಳು' ಎಂಬ ಸಂಕಲನವನ್ನು ಪ್ರಕಟಿಸಿದ್ದಾರೆ. 'ಬಕುಲದ ಹೂವುಗಳು' ಮೂವತ್ತೈದು ಕವಿತೆಗಳ ಒಂದು ಸಂಕಲನ. ಈ ಸಂಕಲನದ ಎಲ್ಲ ಕವಿತೆಗಳಲ್ಲಿಯೂ ಹರಿಯುವ ದ್ರವ್ಯ ಒಂದೇ. ಎಕ್ಕುಂಡಿಯವರ ಹಿಂದಿನ ಸಂಕಲನಗಳ ಚಿಂತನೆ ಈ ಸಂಕಲನದಲ್ಲಿ ಮತ್ತೆ ಹೊಸದಿಕ್ಕುಗಳತ್ತ ಚಲಿಸುತ್ತದೆ. ಸಂಕಲನಕ್ಕೆ ಡಾ. ಕೆ. ವಿ. ನಾರಾಯಣ್ ಅನೇಕ ಒಳನೋಟಗಳನ್ನುಳ್ಳ ಮುನ್ನುಡಿಯನ್ನು ಬರೆದಿದ್ದಾರೆ. ಇಲ್ಲಿ ಎಕ್ಕುಂಡಿಯವರಲ್ಲಿ ಬದಲಾಗಿರುವ ಕಥನ ಕವನದ ವ್ಯಾಖ್ಯೆಯನ್ನು ಪರಿಶೀಲಿಸಿದ್ದಾರೆ. ಕಥನವಿಲ್ಲದ ಕವಿತೆಗಳು ಸಾಧ್ಯವೇ ಇಲ್ಲವೆಂಬ ನಿಲುವನ್ನು ಅವರು ಮಂಡಿಸಿದ್ದಾರೆ. ಕಥನದ ಜಗತ್ತು ಓದುಗನ ಸಂವೇದನೆಯ ಮೇಲೆ ತರುವ ಒತ್ತಾಯವನ್ನು ಕುರಿತು ಚರ್ಚಿಸಿದ್ದಾರೆ.

ಎಕ್ಕುಂಡಿಯವರು ಕವಿತೆಗಳಲ್ಲಿ ಪಡೆದುಕೊಳ್ಳುವ ವೈವಿಧ್ಯವನ್ನು ಹಾಗು ವಿನ್ಯಾಸಗಳನ್ನು ನಾರಾಯಣ್ ಅವರು ತೆರೆದು ತೋರಿದ್ದಾರೆ. ಕವಿ ಕಟ್ಟುವ ಕಾವ್ಯ ದ್ರವ್ಯಕ್ಕೂ ಅದು ಚಲಿಸುವ ವಿನ್ಯಾಸಕ್ಕೂ ಇರುವ ಸಾವಯವ ಸಂಬಂಧವನ್ನು ಕೆ. ವಿ. ನಾರಾಯಣ್ ಅವರ ಮುನ್ನುಡಿ ತಿಳಿಸಿಕೊಡುತ್ತದೆ. ಎಕ್ಕುಂಡಿಯವರ ಕವಿತೆಗಳು ಎಂದಿನ ಗಾಂಭೀರ್ಯ ಹಾಗೂ ಆಪ್ತತೆಯನ್ನು ಓದುಗನಲ್ಲಿ ನಿರ್ಮಿಸುತ್ತವೆ.

'ಜೀವ ಝಲ್ಲರಿ' (ಬಸವರಾಜ ವಕ್ಕುಂದ), 'ಆ ದಾರಿ' (ಜಯ ಸುದರ್ಶನ), 'ಮಾನವಿ' (ವೇಣುಗೋಪಾಲ ಸೊರಬ), 'ಕೊಂಪಾಯಾತ್ರೆ' (ದೇಶ ಕುಲಕರ್ಣಿ), 'ದಾರಿ ಮತ್ತು ಆಕಾಶ' (ಸ. ರಘುನಾಥ್)– ಈ ಸಂಕಲನಗಳು ಈಗಾಗಲೆ ಕಾವ್ಯ ಪ್ರಯೋಗದಲ್ಲಿ ನಿರತವಾಗಿರುವವರ ಸಂಕಲನಗಳು. ಈ ಎಲ್ಲ ಸಂಕಲನಗಳು ಅಲ್ಲಲ್ಲಿ ಒಂದೆರಡು ಉತ್ತಮ ರಚನೆಗಳನ್ನು ಒಳಗೊಂಡಿವೆ. ತಮ್ಮ ಇಂದಿನ ಸಂಕಲನಗಳಲ್ಲಿ ತೋರಿದ ಪ್ರಯೋಗಗಳಿಗಿಂತ ಮಹತ್ವದ ಪಲ್ಲಟಗಳನ್ನೇನೂ ಸಾಧಿಸಿಲ್ಲವೆಂದೇ ಹೇಳಬೇಕು.

ಕನ್ನಡದಲ್ಲಿ ಈಗ ಮತ್ತೊಮ್ಮೆ ಕಾಣುತ್ತಿರುವ ಗೀತಗಳ ರಚನೆಗೆ ಅನೇಕ ಕವಿಗಳು ಒಲಿದಿದ್ದಾರೆ. ಗೀತರಚನೆಯ ಬೇಕು–ಬೇಡಗಳ ಪ್ರಶ್ನೆಗೆ ಹೆಚ್ಚು ಮಹತ್ವವಿಲ್ಲ. ಆದರೆ ಈಗಾಗಲೆ ಬದಲಾವಣೆ ಗೊಂಡಿರುವ ನಮ್ಮ ಕಾವ್ಯದ ಸಂವೇದನೆ, ನುಡಿಗಟ್ಟು ಹಾಗೂ ಹೊಸ ಅಭಿರುಚಿಗೆ ಹೊಂದಿಕೊಳ್ಳುವ ಗೀತ

ರಚನೆಗೆ ವಿಶಿಷ್ಟತೆ ಇದ್ದೀತು. 'ಕೆಂಗುಲಾಬಿ' (ಬಿ. ಆರ್. ಲಕ್ಷ್ಮಣ್‌ರಾವ್) ಇಂಥ ಗೀತೆಗಳ ಸಂಕಲನವಾಗಿದೆ. ಸಂಕಲನದಲ್ಲಿ ಹಾಡಬಹುದಾದ ಗೀತೆಗಳು ಅನೇಕ ಇವೆ. ಆದರೆ ಸಂಕಲನದ ತುಂಬ ಈಗಾಗಲೇ ಗೀತ-ಭಾವಗೀತಗಳನ್ನು ರಚಿಸಿರುವ ಅನೇಕ ಕವಿಗಳ ನೆರಳು ಕವಿದಿದೆ. ಗೀತಗಳಿಗೆ ಹಾಡಿನ ದೃಷ್ಟಿಯಿಂದ ವಿಶಿಷ್ಟ ಸ್ಥಾನವಿದೆ ಎಂಬುದು ನಿಜ. ಆದರೆ ಗೀತ ಕಾವ್ಯತ್ವವನ್ನು ಪಡೆದುಕೊಂಡಾಗ ಅದಕ್ಕೆ ಹೆಚ್ಚಿನ ಮೌಲಿಕತೆ ಒದಗೀತು.

ನಮ್ಮ ಕೇಳುಗರ ಹಾಗೂ ಸಮೂಹಮಾಧ್ಯಮಗಳ ಬೇಡಿಕೆಗೆ ಅನುಗುಣವಾಗಿ ಚುಟುಕಗಳು, ಹನಿಗವಿತೆಗಳು, ಮಿನಿಗವನಗಳು ಎಂದೆಲ್ಲಾ ಕರೆಸಿಕೊಳ್ಳುತ್ತಿರುವ ಕಾವ್ಯ ಪ್ರಕಾರವೊಂದು ಇಂದು ವಿಸ್ತಾರಗೊಂಡಿದೆ. ನಮ್ಮ ಮಹತ್ವದ ಕವಿಗಳೂ ಸೇರಿಕೊಂಡಂತೆ ಅನೇಕರು ಕಾವ್ಯದ ಈ ಬಗೆಯನ್ನು ಬರೆಯುತ್ತಿದ್ದಾರೆ. ಜಾಣ್ಮೆ ಪ್ರಾಸಗಳ ವಿನ್ಯಾಸ, ಚಮತ್ಕಾರ ಇವುಗಳಿಂದ ಕೂಡಿದ ಅಗಣಿತ ರಚನೆಗಳ ಒಂದು ದೊಡ್ಡ ವಲಯವೇ ನಿರ್ಮಾಣವಾಗುತ್ತದೆ. ಇಂಥ ರಚನೆಗಳೂ ಕೂಡ ಕಾವ್ಯವಾಗುವುದು ಸಾಧ್ಯ ಎಂಬುದನ್ನು ಕನ್ನಡ ಕಾವ್ಯ ಈಗಾಗಲೇ ತೋರಿಸಿಕೊಟ್ಟಿದೆ. ವೈ ಎನ್ ಕೆ, ನೀಲು, ಬಿಳಿಗಿರಿ, ವಿ. ಜಿ. ಭಟ್ಟ, ದಿನಕರ ದೇಸಾಯಿ, ದುಂಡಿರಾಜ್ ಮುಂತಾದವರು ಈ ವಲಯವನ್ನು ದಿನೇ ದಿನೇ ಹೆಚ್ಚಿಸುತ್ತಿದ್ದಾರೆ. ಇಂಥವರ ರಚನೆಗಳ ಸಾಲಿಗೆ 'ಬುಗ್ಗೆ' (ಜರಗನಹಳ್ಳಿ ಶಿವಶಂಕರ್) ಸಂಕಲನ ಈ ವರ್ಷ ಸೇರಿಕೊಂಡಿದೆ.

ಇದೊಂದು ಸಾಮಾನ್ಯ ಸಮೀಕ್ಷೆ. ಕನ್ನಡ ಕಾವ್ಯ ಈ ಕಾಲದಲ್ಲಿ ಪಡೆದುಕೊಳ್ಳುತ್ತಿರುವ ವಿಸ್ತಾರವನ್ನು ಕುರಿತ ಕೆಲವು ಸಂಗತಿಗಳನ್ನಷ್ಟೇ ಇಲ್ಲಿ ದಾಖಲಿಸುವುದು ಸಾಧ್ಯವಾಗುತ್ತಿದೆ. ಓದುಗರು ತಮ್ಮ ಅಭಿರುಚಿಯ ವಿಭಿನ್ನ ನೆಲೆಗಳನ್ನು ಕನ್ನಡ ಕಾವ್ಯದ ಮುಖೇನ ಗುರುತಿಸಿಕೊಳ್ಳಲು ಸಾಧ್ಯವಾಗಲೆಂಬ ಆಶಯ ಈ ಟಿಪ್ಪಣಿಯದು.

# ಸಣ್ಣಕತೆ
## (ಕೆಲವನ್ನು ಕುರಿತ ಟಿಪ್ಪಣಿಗಳು)

ಕೆ. ವಿ. ನಾರಾಯಣ

ಒಂದು ವರ್ಷದ ಅವಧಿಯಲ್ಲಿ ಪ್ರಕಟವಾದ ಸಣ್ಣಕತೆಗಳು ಹಾಗೂ ಸಣ್ಣಕತೆಗಳ ಸಂಕಲನಗಳನ್ನು ಸಮಗ್ರವಾಗಿ ಪರಿಶೀಲಿಸಿ, ವಿಮರ್ಶಿಸುವುದು ದಾಖಲಾತಿಯ ದೃಷ್ಟಿಯಿಂದ ಮುಖ್ಯವಾಗಬಹುದು. ಆದರೆ ಅಂತಹ ಕೆಲಸ ಔಪಚಾರಿಕ ನೆಲೆಯಲ್ಲಿಯೇ ನಿಂತುಬಿಡುತ್ತದೆ. ಮುಖ್ಯ ಅಮುಖ್ಯಗಳ ನಡುವೆ ಗೆರೆ ಎಳೆದುಕೊಳ್ಳಲಾಗದೆ ಹೋದಂತಾಗಿ ವರ್ಷದ ಸಾಧನೆಗಳು ಗಣನೆಗೆ ಬಾರದೆಯೂ ಹೋಗುತ್ತವೆ. ಹಾಗಾಗಿ ಈ ವರ್ಷದ ಕೆಲವು ಮುಖ್ಯ ಸಂಕಲನಗಳನ್ನಷ್ಟೇ ಈ ಲೇಖನದ ವ್ಯಾಪ್ತಿಯಲ್ಲಿ ಉಳಿಸಿಕೊಳ್ಳಲಾಗಿದೆ.

ಪೂರ್ಣಚಂದ್ರ ತೇಜಸ್ವಿ ಈ ವರ್ಷ ಎರಡು ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ '**ಕಿರಗೂರಿನ ಗಯ್ಯಾಳಿಗಳು**' ಮತ್ತು '**ಪರಿಸರದ ಕತೆ**'. ಎರಡೂ ಸಂಕಲನಗಳು ಸ್ವರೂಪದಲ್ಲಿ ಭಿನ್ನ ಸಂಗತಿ ಮತ್ತು ಕಲ್ಪಕತೆಗಳ ನಡುವಣ ಸಂಬಂಧವನ್ನಷ್ಟೇ ಪರಿಗಣಿಸಿದರೂ 'ಪರಿಸರದ ಕತೆ'ಯ ಕತೆಗಳು ಸಂಗತಿಯ ಕಡೆಗೆ ಒಲುವೆಯನ್ನು ತೋರಿದರೆ 'ಕಿರಗೂರಿನ ಗಯ್ಯಾಳಿಗಳು' ಕಲ್ಪಕತೆಯೆಡೆಗೆ ಸೆಳೆತವನ್ನು ಪ್ರಕಟಿಸುವ ಕತೆಗಳನ್ನು ಒಳಗೊಂಡಿದೆ.

'ಪರಿಸರದ ಕತೆ' ಯಲ್ಲಿ ಹಲವು ಪ್ರಸಂಗಗಳಿವೆ. ಎಲ್ಲ ಪ್ರಸಂಗಗಳ ತಿರುಳಿನಲ್ಲಿ ಪರಿಸರ ಮತ್ತು ಮನುಷ್ಯನ ಸಂಬಂಧದ ಸ್ವರೂಪವನ್ನು ಗಮನಿಸಲಾಗಿದೆ. ಸಸ್ಯ ಮತ್ತು ಪ್ರಾಣಿ ಪರಿಸರದ ಅಗಾಧ ಗೂಢತೆ ಹಾಗೂ ಗಹನತೆಗಳ ಕಡೆಗೆ ಆಸಕ್ತಿ ಇರುವಂತೆ ಮಾನವ ಪರಿಸರದ ಕ್ಷುದ್ರತೆಯನ್ನು, ವಿಸಂಗತಿಯನ್ನು ಸಂವೇದನಾ ಶೂನ್ಯತೆಯನ್ನು ಚಿತ್ರಿಸುವ ಬಯಕೆ ಕೂಡ ಈ ಪ್ರಸಂಗಗಳಿಗೆ ಇದೆ. ಹಾಗೆ ನೋಡಿದರೆ ಈ ಎರಡರ ನಡುವಣ ತುಯ್ತವೇ ಈ ಪ್ರಸಂಗಗಳ ಜೀವಾಳ. ಜೀವ ಪರಿಸರದ ಒಟ್ಟು ಜಾಲದಲ್ಲಿ ಸಸ್ಯ, ಪ್ರಾಣಿ ಜಗತ್ತು ಅನೂಹ್ಯತೆಯನ್ನು ಕಾಯ್ದಿರಿಸಿಕೊಂಡಿರುವಾಗಲೇ ಮನುಷ್ಯ ದೈವಿಕಗಳ ಜಂಜಾಟದಲ್ಲಿ ಅಸೂಕ್ಷ್ಮವಾಗಿರುವ ದ್ವಂದ್ವವನ್ನೆ ಮತ್ತೆ ಮತ್ತೆ ಈ ಪ್ರಸಂಗಗಳು ಎದುರಿಗಿಡುತ್ತವೆ.

ಹಾಗೆ ನೋಡಿದರೆ ನಿರೂಪಕನಿಗೆ ಮನುಷ್ಯನ ಅಸೂಕ್ಷ್ಮತೆ, ಕ್ಷುದ್ರತೆಗಳನ್ನು ಮಂಡಿಸುವುದಕ್ಕಾಗಿ ಅಣಕದ ಮಾದರಿ ಒದಗಿ ಬಂದಿದೆ. ಅಂದರೆ ಬಹುಪಾಲು

ಪ್ರಸಂಗಗಳಲ್ಲಿ ವ್ಯಕ್ತಿಗಳು ತಮಾಷೆಯ, ಗೇಲಿಯ, ಪೇಚಿಗೆ ಸಿಕ್ಕಿಕೊಂಡ ಸ್ಥಿತಿಗಳಲ್ಲೇ ಕಾಣಸಿಗುತ್ತಾರೆ ಮನುಷ್ಯನ ತಿಳುವಳಿಕೆಯ ಮಿತಿಗಳನ್ನು, ಪರಿಸರದೊಡನೆ ಅವನು ಹೊಂದಿರುವ ಸಂಬಂಧದ ಭಗ್ನತೆಯನ್ನು ವಿಷಾದದಲ್ಲಿ ಪ್ರಕಟಿಸುವ ಮಾರ್ಗಕ್ಕಿಂತ, ಅಣಕವಾಡುವ ವಿಧಾನ ಇಲ್ಲಿ ಪ್ರಧಾನವಾಗಿದೆ. ತೇಜಸ್ವಿಯವರ ಈ ಆಯ್ಕೆ ಕುತೂಹಲಕಾರಿಯಾಗಿದೆ. ವಿಷಾದದ ನೆಲೆ ತರಬಹುದಾದ ಭಾವುಕತೆಯಿಂದ ಪಾರಾಗಲು ಇಂಥ ಆಯ್ಕೆಯನ್ನು ಮಾಡಿಕೊಂಡಿರಬಹುದು. ಆದರೆ ಒಟ್ಟು ಜೀವಜಾಲದಲ್ಲಿ, ಪರಿಸರದ ನೇಯ್ಗೆಯಲ್ಲಿ ಮನುಷ್ಯನ ಪಾತ್ರಕೂಡ ನಾವು ಭಾವಿಸುವಷ್ಟು ಯಾದೃಚ್ಛಿಕವಾಗಿ ಇರಲಾರದು. ಅಂದರೆ ಅವನ ಆಯ್ಕೆಗಳೂ ಅವನ ಇಚ್ಛೆಯಿಂದ ನಿರ್ಧರಿತವಾಗದ ಒಟ್ಟು ಚರಿತ್ರೆಯ ವಿನ್ಯಾಸದ ಫಲಿತವೇ ಆಗಿರುವುದು ಸಾಧ್ಯ. ಹೀಗಿರುವಾಗ ಅವನನ್ನು ಬೇರೆ ಮಾಡಿ ನೋಡುವ ಪರಿಸರವಾದಿಗಳ ಇಕ್ಕಟ್ಟನ್ನು ತೇಜಸ್ವಿಯವರೂ ಈ ಪ್ರಸಂಗಗಳಲ್ಲಿ ಪ್ರಕಟಿಸುವಂತಿದೆ.

ಲವಲವಿಕೆಯ ಹಾಗೂ ಅಧಿಕೃತತೆಯ ಛಾಪನ್ನು ಪಡೆದ ಇಲ್ಲಿನ ನಿರೂಪಣೆ ಒಳ್ಳೆಯ ಓದಿಗೆ ಸಾಮಗ್ರಿಯನ್ನು ಒದಗಿಸಬಲ್ಲುದು. ಇಲ್ಲಿರುವ ಎಲ್ಲ ಪ್ರಸಂಗಗಳ ಬಗೆಗೂ ಈ ಮಾತನ್ನು ಹಿಂಜರಿಕೆಯಿಲ್ಲದೆ ಹೇಳಬಹುದು. ವಿಚಾರ ಮತ್ತು ವಿಜ್ಞಾನಗಳನ್ನು ಬೆನ್ನಿಗಿರಿಸಿಕೊಂಡ ನಿರೂಪಕನಿಗೆ ಎಂಗ್ಟ, ಕಾಳಪ್ಪ, ಸೀನಪ್ಪ, ಭೈರ, ಪ್ಯಾರ, ಮಾದ ಇವರೆಲ್ಲ ಮುಖಾಮುಖಿಯಾಗುವ ಕ್ರಮದಲ್ಲಿ ಎದ್ದುಕಾಣುವ ಅಸಂಗತತೆಯನ್ನು ನಮ್ಮ ಸಾಂಸ್ಕೃತಿಕ ಸಂದರ್ಭದಲ್ಲಿ ಹೇಗೆ ವ್ಯಾಖ್ಯಾನಿಸಬೇಕು ಎಂಬುದು ಮುಖ್ಯ ಪ್ರಶ್ನೆಯಾಗಿದೆ. ಖಿಲಗೊಳ್ಳುತ್ತಿರುವ ಜೈವಿಕ ಸಮವಾಯತೆ (symboitic relations) ಯಿಂದಾಗಿ ಮೇಲೆ ಹೇಳಿದ ಎಂಗ್ಟಾದಿಗಳು ಅಪ್ರಸ್ತುತರಾಗುತ್ತಾರೋ ಅಥವಾ ವಿಚಾರ, ವಿಜ್ಞಾನ ಸನ್ನದ್ಧರಾದ ಓದುಗರು ಹೆಚ್ಚು ಪ್ರಸ್ತುತರಾಗುತ್ತಾರೋ? ಇದೀಗ ನಮ್ಮ ಎದುರಿನ ಸಮಸ್ಯೆ.

'ಕಿರಗೂರಿನ ಗಯ್ಯಾಳಿಗಳು' ಕೃತಿಯಲ್ಲಿ ಪ್ರಸಂಗಗಳ ನಿರೂಪಣೆ ಮತ್ತು ವಿನ್ಯಾಸದಿಂದಾಗಿ ಹೆಚ್ಚು ಮಹತ್ವಾಕಾಂಕ್ಷೆಯನ್ನು ಪ್ರಕಟಿಸುತ್ತವೆ. ತೇಜಸ್ವಿಯವರ ಸಾಹಿತ್ಯದ ಮುಖ್ಯ ಆಶಯಗಳಲ್ಲಿ ಒಂದಾದ ನಿಗೂಢತೆ ಈ ಸಂಕಲನದ ಕತೆಗಳಲ್ಲಿ ಬೇರೆ ಬೇರೆ ಆಕಾರಗಳಲ್ಲಿ ಕಾಣಸಿಗುತ್ತದೆ. ಮುಖ್ಯಕತೆಯಾದ 'ಕಿರಗೂರಿನ ಗಯ್ಯಾಳಿಗಳು' ಕೇವಲ ಗಯ್ಯಾಳಿಗಳ ಸ್ಫೋಟವನ್ನು ಮಾತ್ರ ಕುರಿತಿಲ್ಲ. ಮೂರು ದಿನಗಳು ಎಡಬಿಡದೆ ಬಿದ್ದ ಮಳೆ, ಬೀಸಿದ ಗಾಳಿ ಮರವೊಂದಕ್ಕೆ ಪುರಾಣವನ್ನು ರಚಿಸಿಕೊಡುತ್ತದೆ. ಸಾಮಾಜಿಕ ಸಂಬಂಧಗಳ ಅಪರಿಚಿತ ಮೂಲೆ ಮುಡುಕುಗಳು ಹೊರಬೀಳುತ್ತವೆ. ಕತೆಯಲ್ಲಿ ಬರುವ ದಿಮ್ಮಿ ಉರುಳುವ ಪ್ರಸಂಗ ಹಾಗೂ ಕೊನೆಯಲ್ಲಿ ಬಗಿನೆ ಮರದ ತುಂಡು ಕೋಲು ಹಿಡಿದ 'ಗಯ್ಯಾಳಿಗಳು' – ಇವೆರಡು ವಿವರಗಳನ್ನು ಗಮನಿಸೋಣ. ಎರಡು ಅನಿರೀಕ್ಷಿತ ಹಾಗೂ ಪೂರ್ವನಿಯೋಜಿತವಲ್ಲದ್ದು. ದಿಮ್ಮಿ ಉರುಳುವಿಕೆಯ ದಿಕ್ಕು ತಪ್ಪಿದ

ಸ್ಥಿತಿ ಒದಗಿಸುವ ಅನಿರೀಕ್ಷಿತತೆ ಹಾಗೂ ಆ ಮೂಲಕ ಒದಗುವ ಅಪಾಯ ಗಯ್ಯಾಳಿಗಳ ಸಿಡಿಯುವಿಕೆಗೂ ಅನ್ವಯಿಸುತ್ತದೆ. ಕಾರ್ಯಕಾರಣ ಸಂಬಂಧದ ಅನ್ವಯವಿಲ್ಲದೆ ಸಂಭವಿಸುವ ಹತ್ತಾರು ಘಟನೆಗಳು ಕತೆಯಲ್ಲಿ ಇದರೊಡನೆ ಸೇರಿಕೊಳ್ಳುತ್ತವೆ. ಗ್ರಾಮಸೇವಕನ ಬೋರ್ಡಿನ ಪ್ರಕರಣ, ಕಿರಗೂರಿನವರ ಜೈಲುವಾಸ, ಮರಕೊಯ್ಯುವ ಮಲೆಯಾಳಿಗಳು ಹೀಗೆ ಎಲ್ಲವೂ. ತೇಜಸ್ವಿಯವರ ಕತೆಯಲ್ಲಿ ಈಗ ನಿಗೂಢತೆ ಕೇವಲ ಅತೀಂದ್ರೀಯ ಹಾಗೂ ಅಭೌತಿಕದ ಸ್ಥಿತಿಗಿಂತ ಹೆಚ್ಚು ಸಾಮಾಜಿಕವಾದ ನೆಲೆಗಳನ್ನು ತಲುಪಿದೆ. ಹೀಗಿದ್ದರೂ ನಿಗೂಢತೆಯ ಮಾನವಾತೀತ ಗುಣಗಳು ತೇಜಸ್ವಿಯವರಲ್ಲಿ ವಿನಾಶಕಾರಿ ಲಕ್ಷಣಗಳನ್ನೆ ಏಕೆ ಪ್ರಕಟಿಸುತ್ತವೆ ಎಂಬುದು ಮುಖ್ಯ ಪ್ರಶ್ನೆ. ಈ ಪ್ರಶ್ನೆ ಅವರ ಹಲವು ಕೃತಿಗಳ ಹಿನ್ನೆಲೆಯಲ್ಲಿ ಉಂಟಾದದ್ದು. ನಿಗೂಢತೆ ಪ್ರಕಟವಾಗದೇ ಇದ್ದಾಗಿನ ಸ್ಥಿತಿಗೂ ಪ್ರಕಟಗೊಂಡ ಮೇಲಿನ ಸ್ಥಿತಿಗೂ ಇರುವ ಅಗಾಧ ಗುಣಾತ್ಮಕ ಅಂತರವನ್ನು ದಾಖಲು ಮಾಡುತ್ತಲೇ ಅದರ ವಿನಾಶಕಾರ ಶಕ್ತಿಯನ್ನು ಮಂಡಿಸುತ್ತಾರೆ. ಸಿಡಿದೆದ್ದ ದಾನಮ್ಮನಂಥವರು ಒಂದು ನೆಲೆಯಲ್ಲಿ ಪಾರಂಪರಿಕ ಮಾತೃದೇವತೆಯ ಕಲ್ಪನೆಯನ್ನೇ ಪ್ರಕಟಿಸುತ್ತಾರಲ್ಲವೇ? ಏನೇ ಇರಲಿ ಈ ಕತೆ ತೇಜಸ್ವಿಯವರ ಕಥಾಸಾಹಿತ್ಯದ ಒಂದು ಮುಖ್ಯ ತಿರುವನ್ನು ಸೂಚಿಸುತ್ತಿರಬಹುದೆಂದು ಹೇಳಲಡ್ಡಿಯಿಲ್ಲ. ಈ ಸಂಕಲನದ ಇತರ ಕತೆಗಳಿಗೂ ಮೇಲಿನ ಚರ್ಚೆಯ ತಿರುಳು ಭಿನ್ನ ವಿವರಗಳೊಂದಿಗೆ ಹೊಂದಿಕೊಳ್ಳುತ್ತದೆ.

ಶ್ರೀಮತಿ ವೈದೇಹಿಯವರ ನಾಲ್ಕನೆಯ ಕಥಾಸಂಕಲನ 'ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗಳು', ವೈದೇಹಿಯವರ ಕತೆಗಳಲ್ಲಿ ಎರಡು ಸಾಮಾನ್ಯ ಲಕ್ಷಣಗಳ ಮಾದರಿಗಳನ್ನು ಗುರುತಿಸಬಹುದು. ಒಂದು ಮಾದರಿ ನಿರೂಪಕಿಯ ಮಧ್ಯವರ್ತಿತನ ಇಲ್ಲದ್ದು; ಇನ್ನೊಂದು ಘಟನೆಗಳ ವ್ಯಾಖ್ಯೆ ಹಾಗೂ ವಿನ್ಯಾಸಗಳಲ್ಲಿ ನಿರೂಪಕಿಯ ಪ್ರವೇಶ ಎದ್ದುಕಾಣುವಂಥದು. ಮೊದಲ ಮಾದರಿಯ ಕತೆಗಳಲ್ಲಿ ಹೆಣ್ಣುಜಗತ್ತಿನ ಹೆಣ್ಣುತನ ಸಮೃದ್ಧವಾಗಿ ಮಂಡಿತವಾಗುವುದು ಮುಖ್ಯ. ಈ ಸಂಕಲನದ ಕತೆಗಳಲ್ಲೂ ಈ ಲಕ್ಷಣದ ಕತೆಗಳು ಹಲವಿವೆ. ಹಲವು ತಲೆಮೊರೆಯ ಹೆಂಗಸರು, ಬದಲಾಗುತ್ತಿರುವ ಸಾಮಾಜಿಕ ವಿನ್ಯಾಸ, ಬದುಕಿನ ಚಲನಶೀಲತೆ, ಗಂಡುಜಗತ್ತಿನ ದೂರೀಕರಣ ಇತ್ಯಾದಿ ಹಲವು ಸಂಗತಿಗಳ ಮೂಲಕ ಈ ಕತೆಗಳ ಹೆಣ್ಣು ಜಗತ್ತು ಮಂಡಿತವಾಗುತ್ತದೆ. 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು', 'ಒಂದು ಕಳ್ಳ ವೃತ್ತಾಂತ', 'ಹಕ್ಕಿಲ್ಲದವರು' ಈ ಕತೆಗಳು ಮೇಲೆ ಹೇಳಿದ ಮಾದರಿಗೆ ನಿದರ್ಶನಗಳಾಗಿವೆ. ಈ ಕತೆಗಳು ದೈನಿಕ ಲಯಗಳನ್ನು ಅಚ್ಚುಕಟ್ಟು ಅಲಂಕರಣೆಯೊಂದಿಗೆ ಎದುರಿಗಿಡುತ್ತವೆ. ಈ ಮಾದರಿ ಅನನ್ಯವಲ್ಲ; ಆದರೆ ವೈದೇಹಿಯವರು ತೆರೆದುಕೊಡುತ್ತಿರುವ ಜಗತ್ತು ಹಾಗೂ ಅದರ ಸೂಕ್ಷ್ಮಗಳು ಹೊಸವು.

ಒಂದು ರೀತಿಯ ಸ್ವಾಯತ್ತತೆಯನ್ನು ಪ್ರಕಟಿಸುವ ಈ ಜಗತ್ತು ಕೆಲವು ಹೊಸ ಪ್ರಶ್ನೆಗಳನ್ನು ಎದುರಿಸಲು ನಮ್ಮನ್ನು ಸನ್ನದ್ಧಗೊಳಿಸುತ್ತವೆ. ಹೆಣ್ಣುಜಗತ್ತನ್ನು ಗಂಡು ಜಗತ್ತಿಗೆ ಅನುಬಂಧವಾಗಿ ಇಲ್ಲವೇ ವೈರುದ್ಯದ ಸ್ಥಿತಿಯಲ್ಲಿ ಇರಿಸುವ ಕ್ರಮವನ್ನು ಬಿಟ್ಟುಕೊಟ್ಟು ಅದರ ಸ್ವಾಯತ್ತತೆಯನ್ನು ವಿವರಗಳಲ್ಲಿ ಹಿಡಿದಿಡುವ ಈ ಕತೆಗಳು ಹಾಗಾಗಿ ಅಪರೂಪದವು.

ವೈದೇಹಿಯವರ ಎರಡನೆಯ ಮಾದರಿಯ ಕತೆಗಳಲ್ಲಿ, ಈ ಹಿಂದೆ ಹೇಳಿದಂತೆ ಘಟನೆಗಳ ಜೊತೆಗೆ ವ್ಯಾಖ್ಯೆ ಕೂಡ ವಿನ್ಯಾಸದಲ್ಲಿ ಬೆರೆತುಕೊಳ್ಳುತ್ತದೆ. ಜೀವನವನ್ನು ಕಲೆಯಾಗಿಸುವ ಒಂದು ಬಗೆಯನ್ನು ಕತೆಗಾರ್ತಿ ಇಲ್ಲಿ ಆಯ್ದುಕೊಂಡಿದ್ದಾರೆ. ಸಂಕೇತ ಮತ್ತು ಸಾಂಕೇತಿಕಕತೆಗಳನ್ನು ರೂಢಿಗೊಳಿಸುವ ಈ ಮಾರ್ಗ ಈಗಾಗಲೇ ಕನ್ನಡದಲ್ಲಿ ಸಾಕಷ್ಟು ಬಳಕೆಯಾಗಿದೆ. 'ಸೌಗಂಧಿಯ ಸ್ವಗತಗಳು', 'ಶೋಧ' ಇಂಥ ಕತೆಗಳು ಈ ಮಾದರಿಗೆ ನಿದರ್ಶನಗಳು. ಕತೆಗಾರ್ತಿಯ ಸಾಧನೆಗಳು ಈ ಮಾದರಿಯ ಕತೆಗಳಲ್ಲೂ ಮಿಂಚುವುದುಂಟು. ಮೀರುವಿಕೆಯ ಗೆರೆಯ ಮೇಲೆ ನಿಂತ ಎಷ್ಟೋ ಹೆಣ್ಣುಗಳು ಈ ಕತೆಗಳಲ್ಲಿ ಸಿಗುತ್ತಾರೆ. ಅವರ ಈ ಸಂದಿಗ್ಧತೆಯನ್ನು ಹಿಡಿಯುವಲ್ಲಿ ಈ ಕಥಾವಿನ್ಯಾಸ ಉಪಯುಕ್ತವಾಗಿದೆ.

ಈ ಸಂಕಲನದ ಕತೆಗಳೂ ಸೇರಿದಂತೆ ವೈದೇಹಿಯವರ ಕತೆಗಳು ಒಟ್ಟಾರೆಯಾಗಿ ನಮ್ಮೆದುರು ಹೆಣ್ಣುಜಗತ್ತಿನ ಎರಡು ಸ್ತರಗಳನ್ನು ಎದುರಿಡುತ್ತವೆ. ಓದುಗರಿಗೆ ಬೆನ್ನುಮಾಡಿ ತಮ್ಮ ಪಾಡಿಗೆ ತಾವಿರುವ ಜೀವಿಗಳ ಲೋಕ ಒಂದಾದರೆ, ಓದುಗರೊಡನೆ ಸಂವಾದಿಸಲು, ಸಂವೇದಿಸಲು ಬಯಸುವ ಜೀವಿಗಳ ಲೋಕ ಇನ್ನೊಂದು. ಇವೆರಡು ಮಾದರಿಗಳನ್ನು ಕತೆಗಾರ್ತಿ ಸಮಪ್ರಾಧಾನ್ಯ ದಲ್ಲಿಯಲ್ಲವಾದರೂ ಈವರೆಗೂ ಬಳಸುತ್ತಲೇ ಬಂದಿದ್ದಾರೆ. ಕವಿತೆಯ ಮೇಲಿನ ಅವರ ಈಚಿನ ಆಸಕ್ತಿ ಈ ಮಾದರಿಗಳ ಸ್ವರೂಪದಲ್ಲೂ ಬದಲಾವಣೆ ತರುವ ಸಾಧ್ಯತೆಗಳು ಇದ್ದೇ ಇವೆ.

ಸುಗ್ಗಿ, ಡಾ. ಬೆಸಗರಹಳ್ಳಿ ರಾಮಣ್ಣನವರ ಆಯ್ದ ಕಥಾ ಸಂಕಲನ. ರಾಮಣ್ಣನವರು ಬರೆದ ತೀರ ಹೊಸ ಕತೆಗಳು ಇಲ್ಲಿಲ್ಲ. ಅವರ 'ಕನ್ನಂಬಾಡಿ' ಎಂಬ ಸಮಗ್ರ (ಅವರೆಗಿನ) ಕತಗಳ ಸಂಕಲನದಿಂದಲೇ ಆಯ್ಕೆಮಾಡಿಕೊಂಡ ಕತೆಗಳಿವು. ನಮ್ಮ ಮುಖ್ಯ ಕತೆಗಾರರಲ್ಲಿ ಒಬ್ಬರಾದ ರಾಮಣ್ಣನವರ ಈ ಕತೆಗಳು ಕನ್ನಡದ ಶಕ್ತ ಕಥಾಪರಂಪರೆಯ ಲಕ್ಷಣಗಳನ್ನು ಪ್ರಕಟಿಸಲು ಸಮರ್ಥವಾಗಿವೆ.

ಈ ಕತೆಗಳಲ್ಲಿ ಹಳ್ಳಿ ಇಲ್ಲವೇ ಹಳ್ಳಿಗರೇ ಕೇಂದ್ರದಲ್ಲಿದ್ದಾರೆ. 'ಸುಗ್ಗಿ', 'ದೇವರ ಹೂ' ಈ ಕತೆಗಳ ಹಳ್ಳಿ ಸಮೃದ್ಧ. ಅಲ್ಲಿ 'ಕೆಡುಕು' ಮನುಷ್ಯರ ನಡುವಣ ಸಂಬಂಧದ ಮೇಳನವನ್ನು ತಾತ್ಕಾಲಿಕವಾಗಿ ಪಲ್ಲಟಗೊಳಿಸಬಲ್ಲದು.

ಆದರೆ ಆ ಬದುಕಿನ ಧಾರಣಾಶಕ್ತಿ ಈ ಕೆಡುಕನ್ನು ಮೀರಿ ಮತ್ತೆ ಮೇಳನದೆಡೆಗೆ ತುಯ್ಯುವುದು. ಕಹಿಗೊಂಡ ಮನಸ್ಸುಗಳು ತಿಳಿಗೊಳ್ಳುವುವು. ಹೀಗಾಗಿ ಕಾಲ ದೇಶ ಬದ್ಧ ಹಳ್ಳಿಗಳ ಪರಿಸರದ ಕತೆಗಳಲ್ಲೂ ತಿರುಳಿನಲ್ಲಿ ಇಡಿಯಾದ ಮಾನವ ಸ್ವಭಾವದ ಅನ್ವೇಷಣೆ ಮುಖ್ಯವಾಗುತ್ತದೆ. 'ಸುಗ್ಗಿ'ಯಲ್ಲಿ ಫಲವಂತಿಕೆಯ ವಿವರವಾಗಿ ಬರುವ ತಾಯಿ ಹಾಗೂ ಬೆಳಸು, ಆಚರಣೆಯಾಗಿ ಬರುವ ಧಾನ್ಯದ ಪೂಜೆ, ಹಾಡುಗಳು ಕತೆಗೆ ವರ್ತಮಾನವನ್ನು ಮೀರುವ ಶಕ್ತಿಯನ್ನು ಒದಗಿಸುತ್ತವೆ. ಕೆಡುಕಿಗೆ ಇತ್ಯಾತ್ಮಕ ಸಾಮರ್ಥ್ಯವನ್ನು ಒದಗಿಸದೆ ಅದು 'ಬಂದು ಹೋಗುವ' ಸಂಚಾರಿ ಹಾಗೂ ತಾಳುವಿಕೆಯ ಪುಷ್ಟಿಗಾಗಿ ಬಂದ 'ಲೀಲೆ' ಎಂಬ ನೆಲೆಗಟ್ಟು ಈ ಕಥನಗಳ ಹಿಂದೆ ಇರುತ್ತದೆ.

ಆದರೆ ರಾಮಣ್ಣನವರ ಕಥೆಗಳಲ್ಲಿ ನಿಧಾನವಾಗಿ 'ಕೆಡುಕು' ಹಾಗೆ ಸಂಚಾರಿಯಾಗಿ ಉಳಿಯಲಾರದು. ವೈರುದ್ಯಗಳು ಸಿಡಿಯುವ, ಸನ್ನದ್ಧ ಸ್ಥಿತಿಗೆ ಬಂದು ನಿಲ್ಲುತ್ತವೆ. ಸಾಮಾಜಿಕ ಬದುಕಿನ ವೈಷಮ್ಯಗಳು ನಿಧಾನವಾಗಿ ಮೈ ಮುರಿದು ನಿಲ್ಲುತ್ತ ಜೀವನದ ಧಾರಣಶಕ್ತಿಗೆ ಸವಾಲಾಗುತ್ತವೆ. ಇದು ಈ ಮುಂದಿನ ಕತೆಗಳಲ್ಲಿ ನೈತಿಕ ಸವಾಲಾಗಿ ನಿಲ್ಲುತ್ತವೆ. 'ಕಕರನ ಉಗಾದಿ'ಯಂಥ ಕತೆ ಇದಕ್ಕೆ ಒಳ್ಳೆ ಮಾದರಿ.

ರಾಮಣ್ಣನವರ ಕಥನದಲ್ಲಿ ಮುಂದಿನ ಹಂತ ಪ್ರಾರಂಭವಾಗುವುದು ನೈತಿಕ ಉದ್ವಿಗ್ನತೆಯಲ್ಲಿ. ಹಳ್ಳಿಗಳನ್ನು ಪ್ರವೇಶಿಸುವ 'ಪೋಲೀಸರು' 'ನ್ಯಾಯಾಲಯಗಳು' 'ಸರಕಾರಿ ಆಸ್ಪತ್ರೆಗಳು' ಹಾಗೂ 'ಖಾಸಗಿ ಡಾಕ್ಟರು' ಉಂಟುಮಾಡುವ ವಿಘಟನೆ, ಇಕ್ಕಟ್ಟುಗಳನ್ನು ಈ ಕಥೆಗಳು ಹಿಡಿದಿಡುತ್ತವೆ. 'ಕರುಡಾಳು ಬಾ ಬೆಳಕೆ', 'ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು' ಈ ಕಥೆಗಳಲ್ಲಿ ಜೀವಾಧಾರವಾದ ನಾಳೆಗಳು ಇಂದೇ ಕರಗಿ ಹೋಗುತ್ತವೆ. ಮೊದಲ ಹಂತದ ಕತೆಗಳ ಜೀವಾಗಮ ಸ್ಥಿತಿಗೂ ಈ ಕತೆಗಳ ಜೀವನಿರ್ಗಮನ ಸ್ಥಿತಿಗೂ ಇರುವ ವ್ಯತ್ಯಾಸ ಗಮನಿಸಬೇಕಾದ್ದು. ಕೆಡುಕು ಈಗ, ಈ ಕತೆಗಳಲ್ಲಿ ಒಳಿತಿನ ಒಂದು ಸಾಧ್ಯತೆಯಾಗಿ ಮಾತ್ರ ಬೆಳೆದಿಲ್ಲ. ಜೀವನದ ಒಂದು ಮುಖ್ಯಧಾರೆಯಾಗಿದೆ. ಆದರೆ ಅದು ಮಾನವೀಯ ನೆಲೆಯಲ್ಲಿ ವ್ಯಾಖ್ಯಾನವಾಗುವುದಿಲ್ಲ; ಸಾಂಸ್ಥಿಕ ಸಾಧ್ಯತೆಗಳಲ್ಲಿ ಮೈದಳೆಯುತ್ತದೆ. ಇವು ಮನುಷ್ಯನ ಆಯ್ಕೆಯಾಗಿ ಕಂಡುಬರುವುದಿಲ್ಲ; ಸಾಮಾಜಿಕ ಪ್ರಗತಿಯ ಸಹಜವಿನ್ಯಾಸವಾಗಿ ಮಾತ್ರ ಮಂಡಿತವಾಗಿವೆ.

ಇಷ್ಟಾದರೂ ರಾಮಣ್ಣನವರ ಹುಡುಕಾಟ ನೆಲೆಗಂಡಿದೆ ಎನ್ನುವಂತಿಲ್ಲ. 'ಗಂಗಾ' ಕತೆಯಲ್ಲಿ ಮತ್ತಷ್ಟು ಸಾಧ್ಯತೆಗಳನ್ನು ಹುಡುಕುತ್ತಿದ್ದಾರೆ. ಕೆಡುಕು ಸಹಯಾತ್ರಿಯಾದಾಗ ಹೇಗಿರಬಹುದೆಂಬ ಭಾವ-ಹತಾಶೆಯಲ್ಲ – ಈಗ ಈ ಕಥೆಯಲ್ಲಿ ಆಕಾರ ತಳೆಯುತ್ತಿದೆ.

ಕನ್ನಡ ಕಥಾಪರಂಪರೆಯ ಒಂದು ಮುಖ್ಯ ಎಳೆಯನ್ನೂ ರಾಮಣ್ಣನವರ ಈ ಕತೆಗಳ ಓದಿನಿಂದ ಹಿಡಿಯಲು ಸಾಧ್ಯವಾಗುತ್ತದೆ.

ಮಾಯಾದರ್ಪಣ ಶ್ರೀರಾಮ್ ಎಂ. ಎಸ್. ಅವರ ಮೊದಲ ಕಥಾ ಸಂಕಲನ. ಕನ್ನಡ ಕಥಾಲೋಕದ ಇನ್ನೊಂದು ವಲಯಕ್ಕೆ ಸೇರುವ ಕಥೆಗಳಿವು. ವಾಸ್ತವವಾದಿ ಮಾರ್ಗದ ಸೆಳೆತಗಳನ್ನು ಮೀರಿದ ಕತೆಗಾರರು ಕನ್ನಡದಲ್ಲಿ ಈಗಾಗಲೇ ಹಲವು ಹಾದಿಗಳನ್ನು ಹುಡುಕಿ ಕೊಂಡಿದ್ದಾರೆ. ಘಟನೆಗಳ ಜೋಡಣೆಯನ್ನು ಮುರಿಯುವ ಸರಳ ವಿಧಾನದಿಂದ ಹಿಡಿದು ಪ್ರತಿವಾಸ್ತವವನ್ನು ನಿರ್ಮಿಸುವವರೆಗೆ ಈ ಸಾಧ್ಯತೆಗಳು ಬೆಳೆದಿವೆ. ಶ್ರೀರಾಮ್ ಕತೆಗಳು ಪ್ರತಿವಾಸ್ತವದ ಆಸಕ್ತಿಯನ್ನು ಪ್ರಕಟಿಸುತ್ತವೆ. ಕತೆಯಲ್ಲಿ ನಿರೂಪಿತವಾಗುವ ಘಟನೆಗಳು ಪಾರದರ್ಶಕವಾಗುತ್ತ ನಡೆದು ತಮ್ಮ ಮೂಲಕ ಮತ್ತೇನನ್ನೋ ಸೂಚಿಸಲು ತವಕಿಸುತ್ತವೆ. 'ಮಾಯಾದರ್ಪಣ'ವೆಂಬ ಹೆಸರೇ ಇದನ್ನು ಸೂಚಿಸುವಂತಿದೆ. ದರ್ಪಣದ ವಾಸ್ತವಬದ್ಧತೆ ಮಾಯಾದರ್ಪಣಕ್ಕಿಲ್ಲ. ಅದು ನಮ್ಮ ಒಳಗನ್ನು ಬಿಂಬಿಸಬಹುದು. ಅಥವಾ ಅದು ಬಿಂಬಿಸುವ ಸಂಗತಿಗಳ ಮೂಲಕ ನಮ್ಮ ಒಳಗು ಪ್ರಕಟವಾಗಬಹುದು. ಈ ಕತೆಗಳೂ ಇಂಥ ಮಾಯಾದರ್ಪಣವಾಗಲು ಆಶಿಸುತ್ತವೆ.

ಕತೆಗಳ ವಿವರಗಳನ್ನು ನಿರೂಪಕ ಜೋಡಿಸುವ ಕ್ರಮದಲ್ಲಿ ಹಾಗೂ ವಿವರಗಳನ್ನು ಆಯ್ದುಕೊಳ್ಳುವಲ್ಲಿ ಪ್ರತಿವಾಸ್ತವವನ್ನು ನಿರ್ಮಿಸುವ ತಂತ್ರವನ್ನು ಲೇಖಕರು ಬಳಸಿದ್ದಾರೆ. ಸಂಗತಿಯೊಂದನ್ನು ವಿಶಿಷ್ಟ ಪರಿಪ್ರೇಕ್ಷ್ಯದಿಂದ ನೋಡಿದಾಗ ಅಪರಿಚಿತವೆಂಬಂತೆ ಗೋಚರಿಸುವುದಷ್ಟೆ. ಈ ನೆಲೆಯಲ್ಲಿ ಇಲ್ಲಿನ ಕಥೆಗಳು ಬೆಳೆಯುತ್ತವೆ. ಕೆಲವೊಮ್ಮೆ ಲೇಖಕ–ನಿರೂಪಕ ಜಾಣ ಕಥೆಯಲ್ಲಿ ಪ್ರಧಾನವಾದಂತೆ ತೋರುತ್ತದೆ. ಇಂಥ ಮಾರ್ಗ ಅಪಾಯ ಇರುವುದು ಇಲ್ಲಿಯೇ. ಸಹಜ ಮತ್ತು ಕಲ್ಪಿತಗಳ ನಡುವೆ ಗೆರೆಕೊರೆತ ಎದ್ದು ಕಾಣುವಂತಾಗುವ ಅಪಾಯ ಹೆಚ್ಚು. ಈ ಮಾರ್ಗ ಹಿಡಿದ ಶ್ರೀರಾಮ್ ಎಷ್ಟು ಮುಂದೆ ಹೋಗುತ್ತಾರೆ ಎಂಬುದು ಕುತೂಹಲದ ಸಂಗತಿ. ಸಮಕಾಲೀನ ಐರೋಪ್ಯ ದೇಶ ಮತ್ತು ಐರೋಪ್ಯ ಭಾಷೆಗಳಲ್ಲಿ ಇಂಥ ಪ್ರಯೋಗಗಳು ಯಶಸ್ವಿಯಾಗಿವೆ. ಮಹತ್ವದ ಬರಹಗಾರರು ಮೂಡಿ ಬಂದಿದ್ದಾರೆ. ಕನ್ನಡದ ಸಂದರ್ಭದಲ್ಲಿ ಬಲವಾದ ಸಾಮಾಜಿಕ ಆಯಾಮವನ್ನು ಪಡೆದುಕೊಳ್ಳದಿದ್ದರೆ ಈ ಮಾರ್ಗ ಕೇವಲ ಪ್ರಯೋಗವಾಗಿ ಮಾತ್ರ ಉಳಿಯುವುದು: ಅಂದರೆ ಕತೆಗಳು ನುಡಿಯುವ ಪ್ರತಿವಾಸ್ತವ ನಮ್ಮ ವರ್ತಮಾನದ ದಿಕ್ಕುದಿಸೆಗಳನ್ನು ಅರಿಯಲು ಒಳದಾರಿಗಳನ್ನು ಒದಗಿಸಬೇಕು. ಸದ್ಯ ಶ್ರೀರಾಮ್ ಕತೆಗಳು ಆ ದಿಕ್ಕಿನತ್ತ ಮುಖ ಮಾಡಿವೆ; ಹಾದಿ ಸಾಗಬೇಕು.

ಒಂದು ಸಂಜೆ ಬೆಳಗಾದಾಗ ಎಂಬುದು ಮುಕುಂದ ಜೋಷಿಯವರ ಮೊದಲ ಕಥಾ ಸಂಕಲನ. ನಮ್ಮ ಕಥಾಮಾರ್ಗದ ಲಕ್ಷಣಗಳನ್ನು ಅದರಲ್ಲೂ ಚಿತ್ತಾಲ

ಮಾರ್ಗದ ಲಕ್ಷಣವನ್ನು ಹೆಚ್ಚಾಗಿ ಮೂಢಿಸಿಕೊಂಡ ಕಥೆಗಳಿವು. ಅನುಭವದ ಅರ್ಥವನ್ನು ಹುಡುಕುವ ಅಪೇಕ್ಷೆಯನ್ನು ಈ ಕಥೆಗಳು ತೀವ್ರವಾಗಿ ಪ್ರಕಟಿಸುತ್ತವೆ. ಅದಕ್ಕೆ ಹೊಂದುವ ನಿರೂಪಣಾ ವಿಧಾನ ಹಾಗೂ ಭಾಷೆಯ ಬಳಕೆ ರೂಢವಾಗಿ ಒದಗಿಬಂದಿದೆ.

ಮನುಷ್ಯ ಸಂಬಂಧಗಳಲ್ಲಿನ ಒಡಕು, ಹೆಪ್ಪುಗಟ್ಟಿದ ಮೌನ – ಇದರ ಫಲವಾದ ಒಂಟಿತನದ ಅನಿಸಿಕೆ ಇವು ಈ ಕತೆಗಳಲ್ಲಿ ಬಹುಮಟ್ಟಿಗೆ ಸ್ಥಾಯಿಯಾಗಿವೆ. ಇಂಥ ಸ್ಥಿತಿಯೊಂದನ್ನು ಚಿತ್ರಿಸುವ ಕತೆಗಳಲ್ಲಿ ಕೇಂದ್ರಪ್ರಜ್ಞೆಯ ಅಧಿಕೃತತೆ ಮಾತ್ರ ಹೆಚ್ಚು ಗಾಢಗೊಳ್ಳುವುದಿಲ್ಲ. ಹೀಗಾಗಿ ಆರೋಪಿತ ಸ್ಥಿತಿಯೊಂದನ್ನು ಕತೆಗಳು ನಮ್ಮೆದುರು ಮಂಡಿಸುತ್ತಿರುವಂತೆ ತೋರುತ್ತದೆ. ಕತೆಗಳ ಮುಖ್ಯ ಪಾತ್ರಗಳು, ಹೀಗಾಗಿ, ಕತೆಯ ನಿಜವನ್ನು ನೆಮ್ಮಿ ನಿಲ್ಲುತ್ತವೆಯೇ ಹೊರತು, ಜೀವನಜನ್ಯ ನೆಲೆಗಳನ್ನಲ್ಲ. ಇಂಥ ಸಮಸ್ಯೆಗಳು ಕಲೆಗೆ ಸಂಬಂಧಪಟ್ಟವು. ಅಂದರೆ ಕತೆಗಾರ ತಾನು ಸೃಷ್ಟಿಸುವ ಜಗತ್ತನ್ನು ಭಾಷಿಕವಾಗಿ ನಿಜವಾಗಿಸಲಾರದೇ ಹೋದಾಗ ಉಂಟಾಗುವ ತೊಡಕುಗಳಿವೆ. ಆಯ್ದುಕೊಂಡ ಮಾರ್ಗಗಳೇ ಇಕ್ಕಟ್ಟಿನವಾದಾಗ ಕತೆಗಾರ ಈ ಸವಾಲುಗಳನ್ನು ಎದುರಿಸಲೇಬೇಕು. ಕನ್ನಡ ನವ್ಯ ಕಥಾ ಪರಾಂಪರೆಯಲ್ಲಿ ಹಲವರು ಹೀಗಾಗಿ ಸೋತ ದನಿಯವರಾದದ್ದನ್ನು ಮರೆಯುವಂತಿಲ್ಲ..

ಈ ಸಂಕಲನದ ಯಾವುದೇ ಕತೆಯನ್ನು ತೆಗೆದುಕೊಂಡರೂ ಕತೆಗಾರ ಆಯ್ಕೆ ಮಾಡಿಕೊಳ್ಳುವ ಪಾತ್ರಗಳು ಹಾಗೂ ಘಟನೆಗಳ ಪರಿಸರ ಸ್ಪಷ್ಟವಾಗಿ ನಗರಪ್ರಧಾನವೆಂಬಂತೆ ಭಾಸವಾಗುತ್ತದೆ. ಇಂಥ ಪರಿಪ್ರೇಕ್ಷ್ಯದ ಅನುಭವಗಳನ್ನು ಮಂಡಿಸಲು ತಕ್ಕ ರೂಪಾವಳಿ ಇನ್ನು ಕನ್ನಡದಲ್ಲಿ ಸಿದ್ಧವಾಗಿಲ್ಲ. ಚಿತ್ತಾಲರಂತಹವರು ಹನೇಹಳ್ಳಿಯ ಸ್ನಿಗ್ಧಚಿತ್ರವನ್ನು ಬೆನ್ನಿಗಿರಿಸಿಕೊಂಡು ಈ ಸಮಸ್ಯೆಯನ್ನು ಪರಿಹರಿಸಿಕೊಂಡರಾದರೆ ಮುಕುಂದ ಜೋಶಿಯವರು ಇನ್ನು ಅಂಥ ಹುನ್ನಾರಗಳನ್ನು ರೂಪಿಸಿಕೊಳ್ಳಬೇಕಾಗಿದೆ.

ಅಮರೇಶ ನುಗಡೋಣಿ ತಮ್ಮ ಮೊದಲ ಕಥಾ ಸಂಕಲನ 'ಮಣ್ಣು ಸೇರಿತು ಬೀಜ' ಹೊರತಂದಿದ್ದಾರೆ. ಇವರ ಕತೆಗಳು ಕನ್ನಡ ಕಥಾಲೋಕದ ಇನ್ನೊಂದು ಮುಖವನ್ನು ಪ್ರತಿನಿಧಿಸುತ್ತವೆ. ಸಂಪೂರ್ಣವಾಗಿ ಹಳ್ಳಿಯ ವಾತಾವರಣದಿಂದ ಪಾತ್ರವಸ್ತುಗಳನ್ನು ಆಯ್ದುಕೊಳ್ಳುವ ಕಥೆಗಳಿವು. ಹಾಗೆ ನೋಡಿದರೆ ಕನ್ನಡದಲ್ಲಿ ಇಂಥ ವಸ್ತುಗಳ ಕತೆಗಳು ರೂಪಿಸಿದ ಮಾರ್ಗವನ್ನು ಅಮರೇಶ್ ಬಲಪಡಿಸುತ್ತಿದ್ದಾರೆ. ಈ ಸಂಕಲನದ ಎಲ್ಲ ಕತೆಗಳೂ ಗ್ರಾಮೀಣ ಜೀವನದ ಸಂದರ್ಭದಲ್ಲಿನ ಹೆಣ್ಣು ಗಂಡಿನ ಸಂಬಂಧದ ವಿವಿಧ ನೆಲೆಗಳನ್ನು ಪರಿಶೀಲಿಸುವ ಆಸಕ್ತಿಯನ್ನು ಪ್ರಕಟಿಸುತ್ತವೆ. ಸಾಮಾಜಿಕ ನಡಾವಳಿಯ ಚೌಕಟ್ಟನ್ನು ಮೀರುವ ತವಕ ಪಡೆದ ಈ ಸಂಬಂಧದ ವಿವರಗಳಲ್ಲಿ ಮನುಷ್ಯನ 'ಸಾಮಾಜಿಕ–ಮಾನಸಿಕ' ನೆಲೆಯ

ವೈವಿಧ್ಯಗಳನ್ನು ಹುಡುಕುವ ಆಸಕ್ತಿ ಇರುವಂತಿದೆ. 'ಒತ್ತೆ' ಎಂಬ ಕತೆಯಲ್ಲಿ ಕೊಂಚ ಭಾವುಕವೆನ್ನುವ ತಿರುವನ್ನು ಪಡೆದುಕೊಳ್ಳುವುದರಿಂದ ರಾಚಪ್ಪನ ವಿವಾಹಬಾಹಿರ ಸಂಬಂಧಕ್ಕೆ ಕೇವಲ ಮಾನವೀಯ ನೆಲೆಯನ್ನು ಮಾತ್ರ ಒದಗಿಸಲು ಕತೆಗಾರರು ಅಪೇಕ್ಷೆಪಟ್ಟಂತಿದೆ. ಆದರೆ ಉಳಿದ ಕತೆಗಳಲ್ಲಿ ಈ ಮಿತಿಯನ್ನು ಮೀರುತ್ತಾರೆ.

ಲೈಂಗಿಕ ಸಂಬಂಧಗಳು ಊಳಿಗಮಾನ್ಯ ವ್ಯವಸ್ಥೆಯಲ್ಲಿ ಕೇವಲ ದೈಹಿಕ ಮಾನಸಿಕ ನೆಲೆಯಲ್ಲಿ ಮಾತ್ರ ಸಾಮಾಜಿಕ ಪಾತಳಿಯನ್ನು ದಾಟುವುದು ಒಂದು ಸಂಕೇತ ಮಾತ್ರವಲ್ಲ: ಆ ವ್ಯವಸ್ಥೆ ರೂಪಿಸಿರುವ ಅಮಾನವೀಯ ಒತ್ತಡಗಳ ನಡುವೆ ಸಂಧಾನಕ್ಕೆ ಇರುವ ಒಂದು ಮಾಧ್ಯಮವೂ ಆಗಿರುವ ಸಾಧ್ಯತೆಗಳಿವೆ. ಶ್ರೀ ಅಮರೇಶರ ಕತೆಗಳು ಸದ್ಯ ಕನ್ನಡದ ಒಂದು ಮುಖ್ಯ ಕಥಾಪರಂಪರೆಯ ಮುಂದುವರಿಕೆಯಂತೆ ಕಾಣುತ್ತಿವೆಯಾದರೂ, ಈ ಪರಂಪರೆಯ ಲಕ್ಷಣಗಳನ್ನು ವಿಸ್ತೃತಗೊಳಿಸಬಲ್ಲ ಕತೆಗಳನ್ನು ಬರೆಯಬಲ್ಲರೇ ಎಂಬುದನ್ನು ಕಾಯ್ದು ನೋಡಬೇಕಾಗಿದೆ.

'ನೆನಪಲ್ಲ ವಾಸ್ತವ' ಡಾ. ಕರೀಗೌಡ ಬೀಚನಹಳ್ಳಿ ಅವರ ಮೂರನೆಯ ಕಥಾಸಂಕಲನ. ಕಳೆದ ಹತ್ತು ವರ್ಷಗಳಿಂದ ಸಣ್ಣಕಥೆಗಳಲ್ಲಿ ಪ್ರಯೋಗ ಮಾಡುತ್ತಿರುವ ಕರೀಗೌಡ ಬೀಚನಹಳ್ಳಿಯವರು ನವ್ಯೋತ್ತರ ಕಥಾಸಾಹಿತ್ಯದ ಕ್ಷೇತ್ರದಲ್ಲಿ ಒಂದು ವಿಶಿಷ್ಟ ಧ್ವನಿ. ನವೋದಯ ಕಥಾಸಾಹಿತ್ಯದ ಕಥನಕಲೆ, ನವ್ಯಕಥಾಸಾಹಿತ್ಯದ ಕಾವ್ಯಗುಣಗಳೆರಡನ್ನೂ ತಮ್ಮ ಕಥೆಗಾರಿಕೆಯಲ್ಲಿ ಮಿಳಿತಗೊಳಿಸುವ ಪ್ರಯತ್ನ ಇವರ ಒಟ್ಟು ಕಥಾಸಾಹಿತ್ಯದಿಂದ ವ್ಯಕ್ತವಾಗುವ ಗುಣವಾಗಿದೆ. ಪ್ರಸ್ತುತ ಕಥಾಸಂಕಲನದಲ್ಲಿನ 'ಗೌರಿ', 'ವಿಯೋಗ' ಮತ್ತು 'ನೆನಪಲ್ಲ ವಾಸ್ತವ' ಕಥೆಗಳು ಈ ಅಭಿಪ್ರಾಯಕ್ಕೆ ಪುರಾವೆಗಳನ್ನೊದಗಿಸುತ್ತವೆ. ಪ್ರೇಮದ ಅಂತರ್ ಜಾತಿ ವಿವಾಹದ ಸಂದರ್ಭದಲ್ಲಿ ಜಾತಿ, ಅಂತಸ್ತುಗಳೆಲ್ಲಾ ಭಗ್ನವಾಗಿ ಕೊನೆಗೆ ಮಾನವ ಪ್ರೀತಿ, ಶ್ರದ್ಧೆಗಳೇ ಪ್ರಧಾನ ನೆಲೆಯಾಗುವ ವಸ್ತುವನ್ನು 'ಗೌರಿ' ಕತೆ ಪ್ರಕಟಿಸುತ್ತದೆ. 'ನವೋದಯದ ಕಥಾ ಪರಂಪರೆಯನ್ನೂ, ನವ್ಯದ ಬೌದ್ಧಿಕ ಚಿಂತನೆಯನ್ನೂ ಒಟ್ಟಿಗೆ ಈ ಕಥೆ ಧ್ವನಿಸುತ್ತದೆ.

ಪ್ರಸ್ತುತ ಸಂಕಲನದ ಮತ್ತೊಂದು ಮುಖ್ಯವಾದ ಕಥೆಯೆಂದರೆ, 'ವಿಯೋಗ'. ಮನುಷ್ಯ ಮತ್ತು ನಿಸರ್ಗ ಇವುಗಳಿಗೆ ಇರುವ ಗಾಢತೆಯನ್ನು ಅವ್ವನ ಮುಖಾಂತರ ಈ ಕಥೆ ನಿರೂಪಿಸುತ್ತದೆ. ಪರಿಸರದ ನಾಶಕ್ಕೆ ಧಕ್ಕೆ ಒದಗಿದಾಗ ಅದರೊಳಗೆ ಜೀವ ಇಟ್ಟುಕೊಂಡ ಅವ್ವ ಮಾನಸಿಕವಾಗಿ ಅಸ್ವಸ್ಥಳಾಗುವ ಕ್ರಿಯೆ ಅಪೂರ್ವವಾಗಿ ಚಿತ್ರಿತವಾಗಿದೆ. ಮತ್ತೆ ಕಥೆ ಪರಿಸರದ ಮರುಸೃಷ್ಟಿಯ ಆಶಾವಾದದಲ್ಲಿ ಮುಗಿಯುತ್ತದೆ. ನಿರುದ್ವಿಗ್ನವಾದ ಶೈಲಿಯಲ್ಲಿಯೇ ಕಥೆ ತಣ್ಣಗೆ ಬೆಳೆದು ಪರಿಣಾಮಕಾರಿಯಾದ ಅನುಭವವನ್ನು ಓದುಗನಿಗೆ ಉಂಟುಮಾಡುವುದು ಗಮನಾರ್ಹವಾದ ಸಂಗತಿಯಾಗಿದೆ.

ಈ ಸಂಕಲನದ 'ನೆನಪಲ್ಲ ವಾಸ್ತವ' ಒಂದು ನೀಳ್ಗಥೆ. ಹಳ್ಳಿಯ ಅವನತಿಯನ್ನು ಒಂದು ಶಾಲೆಯನ್ನು ಕೇಂದ್ರವಾಗಿಟ್ಟುಕೊಂಡು ಚಿತ್ರಿಸುವ ಕಥೆ ಇದಾಗಿದೆ. ಆ ಶಾಲೆ ಆ ಹಳ್ಳಿಗೆ ಬಂದದ್ದರಿಂದ ಅಲ್ಲಿ ಸಮಸ್ಯೆಗಳು ಹೊಸದಾಗಿ ಸೃಷ್ಟಿಯಾಗಲಿಲ್ಲ. ಆ ಸಮಸ್ಯೆಗಳು ಮೊದಲೇ ಇದ್ದವು. ಅವು ಆಮೇಲೆ ಸ್ಫೋಟಗೊಂಡುವು ಎಂಬುದನ್ನು ಕಥೆಗಾರರು ಕಥೆಯೊಳಗೆಯೇ ನಿರ್ವಹಿಸುವ ಕ್ರಮ ಭಿನ್ನವಾಗಿದೆ. ಆದರೆ ಕೆಲವು ನೀತಿ ಘಟನೆಗಳು, ಸೊಗಸಾದ ನೀತಿ ಘಟನೆಗಳಾಗಿಯೇ ಉಳಿದು ಬಿಡುತ್ತವೆ. ಈ ಘಟನೆಗಳನ್ನು ಕತೆಗಾರರು ಕಥೆಯ ಕೇಂದ್ರ ಆಶಯಕ್ಕೆ ಪೂರಕವಾಗಿ ಇನ್ನು ದುಡಿಸಿಕೊಳ್ಳಬಹುದಿತ್ತು ಅನ್ನಿಸುತ್ತದೆ.

ಇನ್ನು 'ಒಂದು ಬೆಳದಿಂಗಳ ರಾತ್ರಿ' ಒಂದು ಚೈನೀಸ್ ಕಥೆಯ ಭಾವಗ್ರಹಣವಾಗಿದೆ. ಭಾರತದಲ್ಲಿ ಹಳ್ಳಿಗಳ ಜನ ನಗರದತ್ತ ಮುಖ ಮಾಡಿದರೆ, ಚೈನಾದಲ್ಲಿ ನಗರದ ಜನ ಹಳ್ಳಿಗಳತ್ತ ಹೊರಡುವ ಒಂದು ನೋಟವನ್ನು ಈ ಕಥೆಯಲ್ಲಿ ಕಾಣಬಹುದು. ಒಟ್ಟಾರೆ, ಈ ವರ್ಷದ ಪ್ರಮುಖ ಕಥಾ ಸಂಕಲನಗಳಲ್ಲಿ ಇದು ಒಂದಾಗಿದೆ.

ಈ ವರ್ಷ ಇನ್ನು ಹಲವು ಸಂಕಲನಗಳು ಪ್ರಕಟವಾಗಿವೆ. ಹೊಸತಲೆಮಾರಿನ ಕತೆಗಳ ವೈಶಿಷ್ಟ್ಯಗಳನ್ನು, ಗುಣಾವಗುಣಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ 'ಉದಯೋನ್ಮುಖ ಕಥೆಗಳು – ೯೧' ಎಂಬ ಸಂಕಲನದಲ್ಲಿ ನೋಡಬಹುದು. ಭರವಸೆಯ ಕೆಲವು ದನಿಗಳು ಅಲ್ಲಿವೆ. ಪಳಗಿದ ಬರಹಗಾರರೂ ಇದ್ದಾರೆ. ಓದಿ ಮರೆಯಬಹುದಾದ ಕತೆಗಾರರೂ ಇದ್ದಾರೆ.

ದಿಕ್ಕು ಬದಲಿಸಬಲ್ಲ ಕಥಾ ಸಂಕಲನಗಳು ಈ ವರ್ಷ ಪ್ರಕಟವಾಗಿಲ್ಲವಾದರೂ, ಆ ಸಾಮರ್ಥ್ಯವುಳ್ಳವರು ತಮ್ಮ ಸಂಕಲನಗಳನ್ನು ಪ್ರಕಟಿಸಿದ್ದಾರೆ ಎಂಬುದು ಮುಖ್ಯ ಸಂಗತಿ.

# ಕಾದಂಬರಿ

***ಟಿ. ಪಿ. ಅಶೋಕ***

ಒಂದು ಅನಧಿಕೃತ ಅಂದಾಜಿನಂತೆ 1991ರಲ್ಲಿ ಇನ್ನೂರ ಐವತ್ತಕ್ಕೂ ಹೆಚ್ಚು ಕಾದಂಬರಿಗಳು ಕನ್ನಡದಲ್ಲಿ ಪ್ರಕಟವಾಗಿವೆ. ಅಂದರೆ ಕಾದಂಬರಿ ಇನ್ನೂ ನಮ್ಮ ಅತ್ಯಂತ ಜನಪ್ರಿಯ ಸಾಹಿತ್ಯ ಪ್ರಕಾರವಾಗಿ ಉಳಿದುಕೊಂಡು ಬಂದಿದೆ. ಕನ್ನಡದ ಬಹುತೇಕ ಎಲ್ಲಾ ವಾರಪತ್ರಿಕೆಗಳು, ಮಾಸ ಪತ್ರಿಕೆಗಳು ಧಾರಾವಾಹಿಗಳನ್ನು ಪ್ರಕಟಿಸಿಕೊಂಡು ಬರುತ್ತಿವೆ. ಕೆಲವು ಪತ್ರಿಕೆಗಳು ಏಕಕಾಲದಲ್ಲಿ ಮೂರು-ನಾಲ್ಕು ಧಾರವಾಹಿಗಳನ್ನು ಅಚ್ಚು ಹಾಕುತ್ತಿವೆ. ಕುತೂಹಲದ ಸಂಗತಿ ಎಂದರೆ ಈಚೆಗೆ ಪ್ರಕಟವಾಗುತ್ತಿರುವ ಕಾದಂಬರಿಗಳಲ್ಲಿ ಹೆಚ್ಚು ಕಡಿಮೆ ಅರ್ಧಭಾಗ ಬೇರೆ ಭಾಷೆಗಳಿಂದ ಅನುವಾದಗೊಂಡವು. ಈ ಅನುವಾದಗಳಲ್ಲಿ ಮುಕ್ಕಾಲು ಪಾಲು ತೆಲುಗು ಜನಪ್ರಿಯ ಕಾದಂಬರಿಗಳೇ ಸೇರುತ್ತವೆ. ಅನುವಾದಿತ ಕಾದಂಬರಿಗಳ ಪೈಕಿ ಗಮನ ಸೆಳೆಯುವುದೆಂದರೆ ಭೀಷ್ಮ ಸಾಹನಿ ಅವರ "ಗವಾಕ್ಷಿ". ಇದನ್ನು ಶ್ರೀಮತಿ ಶಾರದಾಸ್ವಾಮಿ ಮತ್ತು ಡಾ॥ ಎಸ್.ಎಂ. ರಾಮಚಂದ್ರಸ್ವಾಮಿ ಹಿಂದಿಯಿಂದ ಕನ್ನಡಕ್ಕೆ ತಂದುಕೊಟ್ಟಿದ್ದಾರೆ. "ಗವಾಕ್ಷಿ" ಭೀಷ್ಮಸಾಹನಿ ಅವರ ಮೊದಲ ಕಾದಂಬರಿ. ಸಾಹನಿ ಅವರ "ತಮಸ್" ಮತ್ತು "ಬಸಂತಿ" ಕಾದಂಬರಿಗಳು ಈಗಾಗಲೇ ಕನ್ನಡಕ್ಕೆ ಅನುವಾದಗೊಂಡಿದ್ದು ಶ್ರೀಯುತರ ಬರವಣಿಗೆಯ ಬಗ್ಗೆ ವಿಮರ್ಶಕ ವಲಯಗಳಲ್ಲಿ ಹೆಚ್ಚಿನ ಆಸಕ್ತಿ ಬೆಳೆಯುತ್ತಿದೆ. ಕನ್ನಡದ ಅತ್ಯುತ್ತಮ ಪ್ರಗತಿಶೀಲ ಲೇಖಕರೊಂದಿಗೆ ಹೋಲಿಸಬಹುದಾದ ಲೇಖಕ ಸಾಹನಿ. ಭಾರತೀಯ ಪ್ರಗತಿಶೀಲ ಸಾಹಿತ್ಯದ ಮೂಲ ಮಾದರಿಗಳನ್ನು ಅಧ್ಯಯನ ಮಾಡಲೂ ಸಾಹನಿಯವರ ಕಾದಂಬರಿಗಳು ಉತ್ತಮ ಆಕರಗಳಾಗಬಹುದು. "ಗವಾಕ್ಷಿ" ಲೇಖಕರ ಮೊದಲ ಘಟ್ಟವನ್ನು ಪ್ರತಿನಿಧಿಸುವಂಥ ಬರಹ. ಬಾಲಕನೋರ್ವನ ದೃಷ್ಟಿಕೋನದಿಂದ ಬದುಕನ್ನು ನೋಡಲೆತ್ನಿಸುವ ಈ ಕಾದಂಬರಿ ಸಾಧಾರಣ ಮಧ್ಯಮ ವರ್ಗದ ಕುಟುಂಬವನ್ನು ಅದರ ದೈನಂದಿನ ಜೀವನದ ವಿನ್ಯಾಸದಲ್ಲಿ ಸೆರೆಹಿಡಿಯುತ್ತದೆ. ವರ್ಗಸಮಾಜವೊಂದರ ಚಿತ್ರವೊಂದು ನಿರ್ದಿಷ್ಟ ಚಾರಿತ್ರಿಕ ಸಂದರ್ಭದಲ್ಲಿ ಮೈದಾಳಿ ಬರುವುದರಿಂದ ಬರಹಕ್ಕೆ ಸಾಂಸ್ಕೃತಿಕ ಆಯಾಮವೊಂದು ತಾನಾಗಿ ಬಂದುಬಿಟ್ಟಿದೆ. ಒಂದು ಸಾಹಿತ್ಯ ಕೃತಿಯಾಗಿ ಕೂಡಾ "ಗವಾಕ್ಷಿ" ಒಂದು ಯಶಸ್ವೀ ಕೃತಿ. ಕಾದಂಬರಿಯ ಮೊದಲ ಪ್ಯಾರಾದಲ್ಲೇ

ಲೇಖಕರ ಜೀವನದೃಷ್ಟಿ ಮತ್ತು ಸಾಹಿತ್ಯ ದೃಷ್ಟಿಗೆ ಮಹತ್ವಪೂರ್ಣ ಸೂಚನೆಗಳು ಕಾಣಿಸುವುದರಿಂದ ಅದನ್ನು ಉದ್ಧರಿಸಬೇಕು:

"ಮರೆವಿನ ಕತ್ತಲ ಗವಿಯಲ್ಲಿ ಹುದುಗಿರುವ ಗತಕಾಲದ ಚಿತ್ರದ ತುಣುಕುಗಳು ಕಾಗದದ ಚೂರುಗಳಂತೆ ಆಗಾಗ್ಗೆ ಹಾರಾಡಲಾರಂಭಿಸುತ್ತವೆ. ಒಂದೆರಡು ಚೂರುಗಳು ಸೇರಿಕೊಂಡಾಗ ಚಿತ್ರವೊಂದು ರೂಪುತಳೆದಂತೆ ಭಾಸವಾಗುತ್ತದೆ. ಗುಹೆಯ ಕತ್ತಲು ಇನ್ನಷ್ಟು ಗಾಢವಾದಂತೆ ಅನ್ನಿಸುತ್ತದೆ. ಆದರೆ ಗಮನವಿಟ್ಟು ನೋಡಿದಾಗ ಚಿತ್ರದ ಬಣ್ಣ ತಿಳಿಯಾಗುತ್ತ, ಅದು ತನ್ನ ಅರ್ಥ ಮಹತ್ತುಗಳನ್ನು ಕಳೆದುಕೊಳ್ಳತೊಡಗುತ್ತದೆ. ಕಾಗದದ ಚೂರುಗಳು ಪುನಃ ಕಳಚಿಕೊಂಡು ಚೆಲ್ಲಾಪಿಲ್ಲಿಯಾಗುತ್ತವೆ; ಮರೆವಿನ ಗವಿಯಲ್ಲಿ ಮತ್ತೆ ಮಾಯವಾಗುತ್ತವೆ. ನನ್ನ ಕಲ್ಪನೆ ಈ ತುಣುಕುಗಳನ್ನು ಜೋಡಿಸಿ ಅವುಗಳಲ್ಲಿ ಜೀವಕಳೆ ತುಂಬುವ ಪ್ರಯತ್ನ ನಡೆಸಿಲ್ಲವಷ್ಟೆ? ಜೀವನದ ಕಾರ್ಯಕಲಾಪಗಳನ್ನು ಕ್ರಮವಾಗಿ ಜೋಡಿಸಿ ಪೋಣಿಸುವ ಸೂತ್ರವೊಂದಿದೆಯೇ? ಅಥವಾ ನಿಯಮಬದ್ಧತೆಗೆ ಹಾತೊರೆಯುವ ನಮ್ಮ ಕಲ್ಪನೆಯೇ ಅವುಗಳಿಗೆ ಒಂದು ಸುಸಂಗತವಾದ ರೂಪವನ್ನು ಕೊಡುವ ಯತ್ನದಲ್ಲಿ ತೊಡಗಿರುತ್ತದೆಯೋ?''

"ಗವಾಕ್ಷಿ'' ಸದಭಿರುಚಿಯ ಅನುವಾದಕ್ಕೂ ಒಂದು ಉತ್ತಮ ಉದಾಹರಣೆಯಾಗಿದೆ. ಈ ಕಾದಂಬರಿಯ ಅನುವಾದಕರು ಮತ್ತು ಪ್ರಕಾಶಕರಿಗೆ ತಮ್ಮ ಚಟುವಟಿಕೆಗಳ ಸ್ವರೂಪ ಮತ್ತು ಉದ್ದೇಶಗಳ ಬಗ್ಗೆ ಸ್ಪಷ್ಟಕಲ್ಪನೆ, ತಾತ್ವಿಕ ಬದ್ಧತೆ ಇವೆ. ಮುಖ್ಯವಾಗಿ, ಬೇರೊಂದು ಭಾಷೆಯಿಂದ ನಮ್ಮ ಭಾಷೆಗೆ ಏನನ್ನು ತರಬೇಕೆಂಬ ಔಚಿತ್ಯ ಪ್ರಜ್ಞೆ ಇದೆ. ಈ ಮಾತನ್ನು 91ರ ಬಹುತೇಕ ಅನುವಾದಿತ ಕಾದಂಬರಿಗಳ ಬಗ್ಗೆ ಹೇಳುವಂತಿಲ್ಲ. ಇದು ನಿಜಕ್ಕೂ ವಿಷಾದಪೂರ್ಣ ಸಂಗತಿ. ತೆಲುಗಿನಿಂದ ಜನಪ್ರಿಯ ಕಾದಂಬರಿಗಳ ಮಹಾಪೂರವೇ ಕನ್ನಡಕ್ಕೆ ಹರಿದು ಬರುತ್ತಿದೆ. ಕನ್ನಡದ ಪತ್ರಿಕೆಗಳು ಇವುಗಳನ್ನು ಪ್ರಕಟಿಸಲು ಅತ್ಯುತ್ಸಾಹ ತೋರಿಸುತ್ತಿವೆ. ಕೀಳಭಿರುಚಿ ಧಾರವಾಹಿ ಪ್ರಕಟಣೆಯಲ್ಲಿ ಕನ್ನಡದ ಪತ್ರಿಕೆಗಳು ಪರಸ್ಪರ ಸ್ಪರ್ಧೆಗಿಳಿದಂತೆ ತೋರುತ್ತದೆ. ಮಲ್ಲಾದಿ ವೆಂಕಟಕೃಷ್ಣಮೂರ್ತಿ, ಸೂರ್ಯದೇವರ ರಾಮ ಮೋಹನರಾವ್, ಯಂಡಮೂರಿ ವೀರೇಂದ್ರನಾಥ್, ರಮೇಶ್‌ಚಂದ್ರ ಚಟರ್ಜಿ, ಶಾತವಾಹನ–ಹೀಗೆ ಹಲವು ಲೇಖಕರು ಕನ್ನಡಕ್ಕೆ ಬಂದಿದ್ದಾರೆ. ಕನ್ನಡ ಕಾದಂಬರಿಕಾರರೇನೂ ಇವರಿಗೆ ಹಿಂದೆ ಬಿದ್ದಿಲ್ಲ! ಎಚ್.ಕೆ. ಅನಂತರಾವ್, ಕೆ.ಟಿ. ಗಟ್ಟಿ, ಕೆ.ಎನ್. ಅಶ್ವಥ್, ಸರಿತಾ ಜ್ಞಾನಾನಂದ ಮುಂತಾದವರು ತಮ್ಮ ತೆಲುಗು ಸ್ನೇಹಿತರೊಂದಿಗೆ ಸ್ಪರ್ಧೆಗಿಳಿದಿದ್ದಾರೆ. ಇವರೆಲ್ಲರ ಕಾದಂಬರಿಗಳ ಸಾಮಾನ್ಯ ಪ್ರಧಾನ ಲಕ್ಷಣಗಳೆಂದರೆ ಅತಿಮಾನುಷ ಪಾತ್ರಗಳ, ಅಸಂಭವನೀಯ ಸನ್ನಿವೇಶಗಳ ಸೃಷ್ಟಿ; ಕಲ್ಪನೆಯ ಹೆಸರಿನಲ್ಲಿ ಅತಿರಂಜಿತ, ಅಸಹಜ ಘಟನೆಗಳು; ಪ್ರಶ್ನಾರ್ಹ ತಾತ್ವಿಕತೆ. ಈ ಕೆಲವು ಕಾಂದಬರಿಗಳಲ್ಲಿ ಸಜ್ಜನರು ಕ್ರಿಮಿನಲ್‌ಗಳಾಗುವ, ಸಾತ್ವಿಕರು ಖಳರಾಗುವ, ಮುಗ್ಧರು ರೌಡಿಗಳಾಗುವ ಕಥೆಗಳು ಬರುತ್ತವೆ. ಇದಕ್ಕೆಲ್ಲ ವ್ಯವಸ್ಥೆಯೇ ಕಾರಣವೆಂದು ಹೇಳಿ ಅದಕ್ಕೆ ಪ್ರತಿ ವ್ಯವಸ್ಥೆಯೊಂದನ್ನು

ಸೃಷ್ಟಿಸುವುದು ಲೇಖಕರ ಹವಣಿಕೆ. ಬದುಕಿನ ಬಗೆಗಿನ ಅತೃಪ್ತಿ, ಸಿಟ್ಟುಗಳು ವಿಕೃತಿಯ ಸೃಷ್ಟಿಗೆ ಮತ್ತು ಅದರ ಸಮರ್ಥನೆಗೆ ದಾರಿ ಮಾಡಿಕೊಡುವುದು ಒಂದು ದೊಡ್ಡ ವಿಪರ್ಯಾಸ. ಕಾದಂಬರಿಯ ಕಲ ಪುಟಗಳನ್ನೋದುತ್ತಿದ್ದಂತೆ ಇಂಥ ವಿಕೃತಿಗಳನ್ನೇ ಲೇಖಕರು ವಿಜೃಂಭಿಸುತ್ತಿದ್ದಾರೆ ಎನಿಸುತ್ತದೆ. ಬದುಕು ಬದಲಾಗಬೇಕೆಂಬ ಕಾಳಜಿ ಕ್ರಮೇಣ ಕಣ್ಮರೆಯಾಗಿ ತಮ್ಮ ವಿಕೃತ ಸೃಷ್ಟಿಯಲ್ಲಿ ಲೇಖಕರೇ ಸಂಭ್ರಮಿಸಿಬಿಡಲು ಪ್ರಾರಂಭಿಸುತ್ತಾರೆ. ಇನ್ನು ಕೆಲವು ಲೇಖಕರು ಹುಸಿ ಮನೋವೈಜ್ಞಾನಿಕ ಸಿದ್ಧಾಂತಗಳ ಪೋಸಿನಲ್ಲಿ ಇನ್ನಷ್ಟು ಅಪಾಯಕಾರಿಯಾಗುತ್ತಾರೆ. ಸದಭಿರುಚಿ ಮನೋರಂಜನೆಯನ್ನು ಈ ಕಾದಂಬರಿಗಳು ನೀಡುವುದಿಲ್ಲ. ಇಂಥ ಅಮೇಧ್ಯರಾಶಿಯನ್ನು ಪರಭಾಷೆಗಳಿಂದ ಹೊತ್ತು ತರುವುದು ಮತ್ತು ಅದನ್ನು ಅನುಕರಿಸುತ್ತ ಹೋಗುವುದು 91ರ ಕಾದಂಬರಿ ಪ್ರಪಂಚದ ಒಂದು ದುರಂತ ಅಧ್ಯಾಯವೇ ಸರಿ. ಅನುವಾದಗಳಿಂದ ನಮ್ಮ ಸಂಸ್ಕೃತಿ ಸಂವೇದನೆಗಳು ಶ್ರೀಮಂತವಾಗಬೇಕು; ಹೊಸ ಸೃಷ್ಟಿಶೀಲ ಪ್ರೇರಣೆಗಳು ನಮ್ಮ ಜಗತ್ತನ್ನು ಪ್ರವೇಶಿಸಬೇಕು. ಆದರೆ ಇಲ್ಲಿ ಹೊಸ ವಿಕೃತಿಗಳ ಆಗಮನದಿಂದಾಗಿ ಅಕ್ಷರ ಜಗತ್ತು ಇನ್ನಷ್ಟು ಹೊಲಸಾಗುತ್ತಿದೆ. ಬರೇ ಮನರಂಜನೆ ಬಯಸುವವರಿಗೂ ಇಂಥ ಕಾದಂಬರಿಗಳು ಅಸಹ್ಯವಾದದ್ದನ್ನೇ ನೀಡುತ್ತವೆ. ಹಿಂಸೆ ಮತ್ತು ಕಾಮದ ಬಗ್ಗೆ ಈ ಕಾದಂಬರಿಗಳು ತಾಳುವ ನಿಲುವುಗಳು, ಈ ಲೇಖಕರ ರಾಜಕೀಯ ಧೋರಣೆಗಳು ಪ್ರತಿಗಾಮಿಯಷ್ಟೇ ಅಲ್ಲ, ಅನಾರೋಗ್ಯಕರ ಮತ್ತು ಅಪಾಯಕಾರಿ.

ಜನಪ್ರಿಯ ಕಾದಂಬರಿಗಳ ಇನ್ನೊಂದು ದೊಡ್ಡ ಕಟ್ಟು ನಮ್ಮ ಲೇಖಕಿಯರಿಂದ ಬಂದಿದೆ. ಉಷಾ ನವರತ್ನರಾಂ, ಈಚನೂರು ಶಾಂತಾ, ಈಚನೂರ ಜಯಲಕ್ಷ್ಮಿ, ಕಾಕೋಳು ಸರೋಜರಾವ್, ಇಂದಿರಾ ಶಿವಣ್ಣ, ಸಿ.ಎನ್. ಮುಕ್ತಾ, ಕೆ.ವಿ. ರಾಜೇಶ್ವರಿ, ಎಚ್.ಜಿ. ರಾಧಾದೇವಿ, ವಿಜಯಶ್ರೀ, ಸಾಯಿಸುತೆ ಮುಂತಾದ ಲೇಖಕಿಯರ ಐವತ್ತಕ್ಕೂ ಹೆಚ್ಚಿನ ಕಾದಂಬರಿಗಳು ಈ ವರ್ಷ ಪ್ರಕಟವಾಗಿವೆ. ಹಿಂದಿನ ವರ್ಷಗಳಲ್ಲಿಯೂ ಇಂಥ ನೂರಾರು ಕಾದಂಬರಿಗಳು ಪ್ರಕಟವಾಗಿವೆ. 91ರ ಈ ಬಗೆಯ ಕಾದಂಬರಿಗಳು ಕೇವಲ ಅವುಗಳ ಶೀರ್ಷಿಕೆಗಳಲ್ಲಷ್ಟೇ ಹೊಸದು ಎನಿಸುತ್ತದೆ. ಮಧ್ಯಮ ವರ್ಗದ ಕೌಟುಂಬಿಕ ಗೋಳುಗಳು ಬೇರೆ ಬೇರೆ ವಿವರಗಳಲ್ಲಿ ಇಲ್ಲಿ ಬಿಚ್ಚಿಕೊಳ್ಳುತ್ತವೆ. ಇಲ್ಲಿನ ಬಹುತೇಕ ನಾಯಕಿಯರ ರಂಗು ರಂಗಿನ ಕನಸುಗಳು, ಭಾವುಕತೆ, ಆಕಸ್ಮಿಕ ಪರಿಹಾರಗಳು, ಹೃದಯಸ್ಪರ್ಶಿ ಮನಃ ಪರಿವರ್ತನೆಗಳು ಕನ್ನಡ ಓದುಗರಿಗೆ ಚಿರಪರಿಚಿತವಾದದ್ದೇ. ಪ್ರೇಮ, ತ್ಯಾಗ, ವಂಚನೆ, ಪ್ರತಿಭಟನೆ ಎಲ್ಲವೂ ಇಲ್ಲಿ ಬಳಕೆದಾರ ವಸ್ತುಗಳೇ. ಪುರುಷರ ಬರಹಗಳಲ್ಲಿ ರಕ್ತ ಹರಿಯುವಂತೆ ಈ ಮಹಿಳೆಯರ ರಚನೆಗಳಲ್ಲಿ ಕಣ್ಣೀರು ಹರಿಯುತ್ತದೆ. ಧಾರವಾಹೀ ಪುಟಗಳ ಅರ್ಧ ಸಂಖ್ಯೆ ಇವರಿಗೆ ಮೀಸಲು. ಈ ಕಾದಂಬರಿಗಳಿಗೆ ಜೀವನದೃಷ್ಟಿ ಎಂಬುದೇ ಇಲ್ಲ. ಇರುವ ಕತೆ ಬಳಕೆದಾರ ಸಂಸ್ಕೃತಿಯನ್ನು ವಿಜೃಂಭಿಸುವಂಥದ್ದು. ಹೆಚ್ಚು ಕಡಿಮೆ ಯಾವ ಕಾದಂಬರಿಯನ್ನು

ಓದಿದರೂ ಒಂದೇ ಥರ ಇರುತ್ತವೆ. ಭಾಷೆಯ ಬಳಕೆ, ಸನ್ನಿವೇಶ ನಿರ್ಮಾಣ, ಪಾತ್ರಪೋಷಣೆ ಇಂಥ ತಾಂತ್ರಿಕ ಪರಿಕರಗಳ ಮಟ್ಟದಲ್ಲೂ ಈ ಕಾದಂಬರಿಗಳು ಅತಿ ಸಾಧಾರಣ. ಯಾವ ರೀತಿಯ ಮನೋರಂಜನೆಯನ್ನೂ ನೀಡದ ಈ ಬರಹಗಳು ವ್ಯರ್ಥ ಪದರಾಶಿಗಳು.

ಸೂತ್ರಬದ್ಧ ಥ್ರಿಲ್ಲರ್‌ಗಳು ಮತ್ತು ಕೌಟುಂಬಿಕ ಕಥೆಗಳ ದೊಡ್ಡರಾಶಿಗಳನ್ನು ದಾಟಿಕೊಂಡು ಬಂದರೆ ಅಲ್ಲೊಂದು ಇಲ್ಲೊಂದು ಆರಾಮವಾಗಿ ಓದಬಹುದಾದ, ತಲೆಗೆ ಹೆಚ್ಚು ಕೆಲಸ ಕೊಡದೆ ಮನಸ್ಸನ್ನು ಹರಿಬಿಡಬಹುದಾದ ಕೆಲಕಾದಂಬರಿಗಳು ಕಾಣುತ್ತವೆ. ಸು. ರುದ್ರಮೂರ್ತಿ ಶಾಸ್ತ್ರಿಗಳ "ಹೊಸ ಮನೆ ಅಳಿಯ", ಎಂ.ಪಿ. ಮನೋಹರ ಚಂದ್ರನ್ ಅವರ "ವಿಗ್ರಹಗಳು" ಇಂಥ ಕಾದಂಬರಿಗಳು ಲಘು ಮನರಂಜನೆ ನೀಡುವಲ್ಲಿ ಸಾಕಷ್ಟು ಯಶಸ್ವಿಯಾಗಿವೆ ಎನ್ನಬಹುದು. ಕೆಲವು ಐತಿಹಾಸಿಕ ಕಾದಂಬರಿಗಳೂ ಈ ವರ್ಷ ಪ್ರಕಟವಾಗಿವೆ. ಶ್ರೀನಿವಾಸರಾವ್ ಕೊರಟಿ ಅವರ "ಟೀಪೂಸುಲ್ತಾನ್", ಸು. ರುದ್ರಮೂರ್ತಿ ಶಾಸ್ತ್ರಿಗಳ "ಕುಮಾರ ರಾಮ" ಮುಂತಾದ ಕಾದಂಬರಿಗಳನ್ನು ಇಲ್ಲಿ ಉಲ್ಲೇಖಿಸಬಹುದು. ಇವರೆಲ್ಲ ಸ್ವಾರಸ್ಯವಾಗಿ ಕತೆ ಹೇಳುತ್ತಾರೆ. ಆದರೆ ಇತಿಹಾಸವೆನ್ನುವುದು ಇಲ್ಲಿ ಗತಕಾಲದಲ್ಲಿ ನಡೆದ ಕೆಲವು ಘಟನೆಗಳು ಮಾತ್ರ. ಹಾಗಾಗಿ ಈ ಬರಹಗಳಿಗೆ ತಾನಾಗಿ ಒಂದು ಮಿತಿ ಬಂದುಬಿಟ್ಟಿದೆ. ಐತಿಹಾಸಿಕ ಪ್ರಕ್ರಿಯೆಯ ಸೂಕ್ಷ್ಮಾವಲೋಕನಕ್ಕೆ ಬದಲಾಗಿ ನೆಚ್ಚಿನ ವೀರರ ಸಾಹಸಗಥೆ ಇಲ್ಲವೆ ಖಳರ ಹೇಯಕೃತ್ಯಗಳು ವಿಜೃಂಭಿಸುತ್ತವೆ. ಅಲ್ಲದೆ ಸಮಕಾಲೀನ ಕನ್ನಡ ಚಳುವಳಿ ಮತ್ತು ಹಿಂದೂಪರ ನೆಲೆಗಳಲ್ಲಿ ಇತಿಹಾಸವನ್ನು ನೋಡಲಾಗಿರುವುದರಿಂದ ಚರಿತ್ರೆಯ ನಿರ್ದಯ ನಿಷ್ಠುರ ಚಲನೆ ಕಾಣೆಯಾಗಿ ಸರಳೀಕೃತ ಆರೋಪಗಳು ಮೇಲುಗೈ ಸಾಧಿಸುವಂತಿವೆ. ಜನಪ್ರಿಯ ಧಾಟಿಯಲ್ಲೇ ಬರೆಯಲಾಗಿದ್ದರೂ ಹೆಚ್ಚಿನ ಅಂತಃಸತ್ವವನ್ನು ತೋರಿಸುವ ಕೆಲವು ಕಾದಂಬರಿಗಳೆಂದರೆ ಕೆ.ಟಿ. ಗಟ್ಟಿ ಅವರ "ಇತಿಹಾಸದ ಮೊಗಸಾಲೆಯಲ್ಲಿ", ದೊಡ್ಡೇರಿ ವೆಂಕಟಗಿರಿರಾವ್ ಅವರ "ರತ್ನಿಯ ಮಗಳು", ಡಾ. ಹೆಚ್. ಗಿರಿಜಮ್ಮ ಅವರ "ಮೇಘ ಮಂದಾರ", ರೇಖಾ ಕಾಖಂಡಕಿ ಅವರ "ಹೊಂಬೆಳಕು" ಮುಂತಾದವು. ಈ ಲೇಖಕರ ಕೃತಿಗಳಲ್ಲಿ ಅನುಭವ ಸಮೃದ್ಧಿ ಕಾಣುತ್ತದೆ. ಆದರೆ ಅದನ್ನು ಸಾವಧಾನದಿಂದ ತಡವಿ ನೋಡಿಕೊಳ್ಳುವಷ್ಟು ತಾಳ್ಮೆ, ಸಹನೆಗಳನ್ನು ಅಷ್ಟಾಗಿ ಇಟ್ಟುಕೊಳ್ಳದಿರುವುದರಿಂದ ಮಹತ್ವಾಕಾಂಕ್ಷೆ ಕಡಿಮೆಯಾಗುತ್ತದೆ. ಸುಲಭ ಸಂವಹನಕ್ಕಷ್ಟೇ ತಂತ್ರ ಬಳಕೆಯಾಗುವುದರಿಂದ ಬರವಣಿಗೆಯ ಪ್ರಕ್ರಿಯಯಲ್ಲೇ ಅಂಥ ಗಹನವಾದ ಸೃಜನಶೀಲ ಚಡಪಡಿಕೆ ಕಾಣುವುದಿಲ್ಲ. ದು.ನಿಂ. ಬೆಳಗಲಿ ಅವರ "ದೇವದಾಸಿ", ಹೂವ ಸಿದ್ದಗಂಗಯ್ಯ ಅವರ "ತಿರುವು", ಆರ್ಚಿ ಅವರ "ಅಭ್ಯಾಸ ಪ್ರಯೋಗ ಪರಿಣಾಮ–ಭಾಗ 1–ಬೆಟ್ಟದ ಪುರ" ಇಂಥ ಕೆಲವು ಕಾದಂಬರಿಗಳಲ್ಲಿ ಸಾಮಾಜಿಕ ಕಾಳಜಿ ಢಾಳಾಗಿ ಎದ್ದು ಕಾಣುತ್ತದೆ. ಬೆಳಗಲಿ ವಿವರಗಳ ಮಟ್ಟದಲ್ಲಿಯೂ ಹೆಚ್ಚಿನ ಮಹತ್ವಾಕಾಂಕ್ಷೆ ತೋರಿದ್ದಾರೆ. ಉಳಿದ

ಬರಹಗಳಲ್ಲಿ ಕಥೆ ಮತ್ತು ಕಳಕಳಿ ಬೆರೆಯದೆ ಕಾದಂಬರಿಗಳು ಯಶಸ್ವಿಯಾಗುವುದಿಲ್ಲ. ಲೇಖಕರ ವಿಚಾರಗಳಿಗೆ ಪ್ರಕಾರ ಕೇವಲ ಒಂದು ವಾಹಕವಾಗುತ್ತದೆ. ಮತ್ತು ಈ ವಿಚಾರಗಳಾದರೂ ತಮ್ಮಷ್ಟಕ್ಕೇ ಗಟ್ಟಿಯೂ ಪ್ರಬುದ್ಧವೂ ಆಗದೆ ಕೇವಲ ಒಳಿತನ್ನು ಬಯಸುವ ಸರಳ ನೈತಿಕ ಭಾವುಕ ಲಹರಿಗಳ ಮಟ್ಟದಲ್ಲಿ ನಿಂತುಬಿಡುತ್ತವೆ. "ಚಂದ್ರಗಿರಿಯ ತೀರದಲ್ಲಿ" ಕಾದಂಬರಿಯಿಂದ ತುಂಬಾ ಪ್ರಸಿದ್ಧರಾಗಿರುವ ಸಾರಾ ಅಬೂಬಕರ್ ತಮ್ಮ ಹೊಸ ಕಾದಂಬರಿ "ಕದನ ವಿರಾಮ"ವನ್ನು ಈ ವರ್ಷ ಹೊರತಂದಿದ್ದಾರೆ. ವರದಕ್ಷಿಣೆಯ ಸಮಸ್ಯೆಯನ್ನು ಕೇಂದ್ರವಾಗಿಟ್ಟುಕೊಂಡು ಮನುಷ್ಯ ಸಂಬಂಧಗಳ ಸುತ್ತ ಹೆಣೆದ ಈ ಕಾದಂಬರಿ ಲೇಖಕಿಯ ಮಾನವೀಯ ಮತ್ತು ಪ್ರಗತಿಪರ ಜೀವನದೃಷ್ಟಿಗೆ ಮತ್ತೊಂದು ಉದಾಹರಣೆ. ಹಿಂದಿನ ಕಾದಂಬರಿಗಳ ತೀವ್ರತೆ ಇಲ್ಲಿ ಅಷ್ಟಾಗಿ ಇಲ್ಲ. ಒಂದು ವಿಶೇಷವೆಂದರೆ ಮುಸ್ಲಿಂ ಬದುಕಿನ ಒಳವಿವರಗಳಲ್ಲೇ ಕಾದಂಬರಿ ಬರೆಯುತ್ತಿದ್ದ ಸಾರಾ ಈಗ ತಮ್ಮ ಆವರಣವನ್ನು ವಿಸ್ತರಿಸಿಕೊಂಡಿದ್ದಾರೆ. ಈ ಕಾದಂಬರಿಯ ಪಾತ್ರಗಳೆಲ್ಲವೂ ಹಿಂದೂಗಳೇ. ಸಂಸ್ಕೃತಿ ವಿಶಿಷ್ಟ ವಿವರಗಳಿಂದ ಹೆಚ್ಚಿನ ಕುತೂಹಲ ಹುಟ್ಟಿಸಿದ್ದ ಈ ಲೇಖಕಿ ಇನ್ನು ಮುಂದೆ ಬೇರೆ ರೀತಿಯ ಶೋಧನೆಗಳಿಗೆ ಸಜ್ಜಾಗುತ್ತಿರುವಂತಿದೆ. "ಕದನ ವಿರಾಮ" ಲೇಖಕಿಯ ಬರವಣಿಗೆಯ ಇನ್ನೊಂದು ಹಂತವನ್ನು ಸೂಚಿಸುವ ಬರವಣಿಗೆ. ಸದ್ಯಕ್ಕೆ ಇದು ಬದಲಾದ ಸಾಂಸ್ಕೃತಿಕ ಆವರಣದ ಮಟ್ಟದಲ್ಲಿ ಮಾತ್ರ ಇದೆ. ಲೇಖಕಿಯ ಜೀವನದೃಷ್ಟಿಯಲ್ಲೇ ಮಹತ್ವದ ಬೆಳವಣಿಗೆ ಕಾಣುವುದಿಲ್ಲ. ಬರಹ ಕೊಂಚ ಸಡಿಲವಾಗಿದೆ. ಆವರಣ ವಿಸ್ತೃತವಾದಂತೆ ಲೇಖಕಿಯ ತಾತ್ವಿಕತೆಯೂ ಇನ್ನಷ್ಟು ಆಳವಾದರೆ ಮುಂದಿನ ವರ್ಷಗಳಲ್ಲಿ ಸಾರಾ ಅವರಿಂದ ಇನ್ನಷ್ಟು ಪರಿಷ್ಕೃತ ರಚನೆಗಳನ್ನು ನಿರೀಕ್ಷಿಸಬಹುದೇನೋ.

ಅನುಪಮಾ ನಿರಂಜನ ಅವರ ಕೊನೆಯ ಕಾದಂಬರಿ "ಮೂಲಮುಖಿ" 91ರಲ್ಲಿ ಪ್ರಕಟವಾಗಿದೆ. ತುಂಬಾ ಜನಪ್ರಿಯ ಕಾದಂಬರಿಕಾರ್ತಿಯಾಗಿದ್ದ ಅನುಪಮಾ ಆಗಾಗ ಮಹತ್ವಾಕಾಂಕ್ಷೆಯಿಂದ ಕೂಡಿದ ಕಾದಂಬರಿ ರಚನೆಗಾಗಿ ಪ್ರಯತ್ನಿಸುತ್ತಾ ಬಂದಿರುವುದನ್ನು ಗಮನಿಸಬಹುದು. ಅವರಲ್ಲಿ ವಿಪುಲವಾದ ಸಾಮಗ್ರಿಯಿತ್ತು. ಮತ್ತು ಆಕರ್ಷಕವಾಗಿ ಕಥೆ ಹೇಳಬಲ್ಲ ಕೌಶಲವಿತ್ತು. ಆಳವಾದ ಮಾನವೀಯ ದೃಷ್ಟಿ ಇತ್ತು. ಆದರೆ ಕಾದು ಬರೆಯುವ ವ್ಯವಧಾನವನ್ನು ಅವರು ಅಷ್ಟಾಗಿ ತೋರುತ್ತಿರಲಿಲ್ಲ. ತ್ರಿವೇಣಿ, ವಾಣಿ, ಎಂ.ಕೆ. ಇಂದಿರಾ ಅವರಂತೆ ಅನುಪಮಾ ಅವರದು ಸೀಮಿತ ಚೌಕಟ್ಟಿನ ಆದರೆ ಸದಭಿರುಚಿಯುಳ್ಳ ಬರವಣಿಗೆ. "ಸಂಕೋಲೆಯೊಳಗಿಂದ", "ಮಾಧವಿ", "ಎಳೆ", "ಘೋಷ"ದಂಥ ಕಾದಂಬರಿಗಳಲ್ಲಿ ಅನುಪಮಾ ತಾವು ಮನಸ್ಸು ಮಾಡಿದರೆ ಮಹತ್ವಪೂರ್ಣ ರಚನೆಗೆ ಕೈಹಾಕಬಹುದೆಂಬ ಸೂಚನೆಗಳನ್ನು ನೀಡಿದ್ದರು. "ಮೂಲಮುಖಿ" ಈ ಕಾದಂಬರಿಗಳ ಸಾಲಿಗೆ ಸೇರುವಂಥದ್ದು. ಈ ಕಾದಂಬರಿಯ ನಾಯಕಿ ಚಾರುಮತಿ. ನಿಜವಾದ ಅರ್ಥದಲ್ಲಿ

ಇವಳೊಬ್ಬ ಆಧುನಿಕ ಹೆಣ್ಣುಮಗಳು. ಮಾನವಶಾಸ್ತ್ರದ ಸಂಶೋಧನೆಯೊಂದಕ್ಕಾಗಿ ಮುಂಬಯಿಯಿಂದ ಕರ್ನಾಟಕದ ಹಳ್ಳಿಯೊಂದಕ್ಕೆ ಬಂದು ನೆಲೆಸುತ್ತಾಳೆ. ಒಂದು ವರ್ಷದ ಅವಧಿಯಲ್ಲಿ ತನ್ನ ಸಂಶೋಧನೆಗೆ ಸಂಬಂಧಿಸಿದಂತೆ ಮಾತ್ರವಲ್ಲ, ಒಟ್ಟೇ ಬದುಕಿನ ಬಗ್ಗೆ, ಹೆಣ್ಣಿನ ಸ್ಥಿತಿಗತಿಗಳ ಬಗ್ಗೆ, ಗಂಡು ಹೆಣ್ಣಿನ ಸಂಬಂಧಗಳ ವಿವಿಧ ಆಯಾಮಗಳ ಬಗ್ಗೆ ಅರಿವನ್ನು ಹಿಗ್ಗಿಸಿಕೊಳ್ಳುತ್ತಾಳೆ. ಒಂದು ಘಟ್ಟದಲ್ಲಿ ತಾನು ತನ್ನ ತಂದೆ–ತಾಯಿಗಳೆಂದು ಯಾರನ್ನು ತಿಳಿದುಕೊಂಡಿದ್ದೆನೋ ಅವರು ತನ್ನ ಸಾಕುತಂದೆ ತಾಯಿಗಳೆಂದೂ, ತನ್ನನ್ನವರು ದತ್ತು ತೆಗೆದುಕೊಂಡಿದ್ದರೆಂದೂ ತಿಳಿಯುತ್ತದೆ. ತನ್ನ ಮೂಲವನ್ನು ಹುಡುಕಿಕೊಂಡು ಹೋಗುತ್ತಾಳೆ. ತನ್ನ ನಿಜವಾದ ತಂದೆ–ತಾಯಿಗಳನ್ನು ಪತ್ತೆ ಮಾಡಿದರೂ ಸಾಕು ತಂದೆ–ತಾಯಿಗಳ ಬಗ್ಗೆ ಭಾವನೆಗಳು ಬದಲಾಗುವುದಿಲ್ಲ. "ಮೂಲದ ಹುಡುಕಾಟದಿಂದ ಅನೇಕ ಅಪ್ರಿಯ ಸತ್ಯಗಳು ಹೊರಬೀಳುತ್ತವೆ ಎಂದಿದ್ದಳು ತಾಯಿ. ಅದು ನಿಜವಾಯಿತು. ಬದುಕಿನ ಕಟು ಸತ್ಯದ ವಿರಾಟ್ ದರ್ಶನವಾಗಿತ್ತು ತನಗೆ. ಆದರಿಂದ ಮಾನಸಿಕವಾಗಿ ಬೆಳೆದೆ. ನಿರ್ಲಿಪ್ತವಾಗಿ ನೋಡುವುದು ಕಲಿತೆ" ಎಂದು ಚಾರುಮತಿ ಒಮ್ಮೆ ಅಂದುಕೊಳ್ಳುತ್ತಾಳೆ. ತನ್ನ ಬದುಕಿನ ಕೆಲವು ವೈಯಕ್ತಿಕ ಸತ್ಯಗಳನ್ನೂ, ಸಂಶೋಧನೆಯ ಮೂಲಕ ಕೆಲವು ಜಟಿಲವಾದ ಸಾಮಾಜಿಕ ಸತ್ಯಗಳನ್ನೂ ಚಾರುಮತಿ ಕಂಡುಕೊಳ್ಳುವ ಪ್ರಕ್ರಿಯೆಯೇ ಕಾದಂಬರಿಯ ಸಂವಿಧಾನ ಸ್ವರೂಪವನ್ನು ನಿರ್ಧರಿಸಿದೆ. ಕನ್ನಡ ಕಾದಂಬರಿಕಾರ್ತಿ ತನ್ನ ಆವರಣವನ್ನು ಹಿಗ್ಗಿಸಿಕೊಳ್ಳುತ್ತಿರುವ ಸೂಚನೆಯಾಗಿಯೂ "ಮೂಲಮುಖಿ" ಗಮನಾರ್ಹವಾಗುತ್ತದೆ.

ನಾ. ಮೊಗಸಾಲೆ ಕಳೆದ ಹಲವು ವರುಷಗಳಿಂದ ಕೃತಿರಚನೆ ಮಾಡಿಕೊಂಡು ಬರುತ್ತಿದ್ದಾರೆ. ಅವರ ಹತ್ತನೆಯ ಕಾದಂಬರಿ "ದೃಷ್ಟಿ" ಈ ವರ್ಷ ಪ್ರಕಟವಾಗಿದೆ. ತಮ್ಮ ಹಿಂದಿನ ಎಲ್ಲ ಕಾದಂಬರಿಗಳಿಗಿಂತ ಹೆಚ್ಚಿನ ಮಹತ್ವಾಕಾಂಕ್ಷೆಯನ್ನು ಲೇಖಕರು ಇಲ್ಲಿ ತೋರಿದ್ದಾರೆ. ನಗರ ಜೀವನದಲ್ಲಿ ಹಲವು ವರುಷಗಳನ್ನು ಕಳೆದ ಈ ಕಾದಂಬರಿಯ ನಾಯಕ ವಾಸುದೇವರಾಯ ತಮ್ಮ ನಿಡುಗಾಲದ ಬದುಕಿಗಾಗಿ ಹಳ್ಳಿಯನ್ನು ಸೇರುತ್ತಾನೆ. ತನ್ನ ಜೀವನದ ವಿಶ್ಲೇಷಣೆಗೆ ತೊಡಗುವ ವಾಸುದೇವರಾಯ ಬದಲಾದ ವಾಸ್ತವದಲ್ಲಿ ಎರಡು ಪೀಳಿಗೆಗಳ ಮೌಲ್ಯವ್ಯತ್ಯಾಸಗಳ ಬಗ್ಗೆಯೂ ವಿಚಾರ ಮಾಡುತ್ತಾನೆ. ಎರಡು ತಲೆಮಾರುಗಳ ವ್ಯತ್ಯಾಸ, ಗ್ರಾಮ–ಪಟ್ಟಣಗಳ ವ್ಯತ್ಯಾಸ, ಪ್ರಜ್ಞಾಸ್ತರಗಳ ವ್ಯತ್ಯಾಸದಲ್ಲಿ ಒಟ್ಟಾರೆ ಬದುಕಿನ ಸ್ವರೂಪವನ್ನು ಅರ್ಥೈಸಿಕೊಳ್ಳುವುದು ಲೇಖಕರ ಉದ್ದೇಶವಾಗಿದೆ. ಆದರೆ ಈ ಉದ್ದೇಶ ಕಲಾತ್ಮಕವಾಗಿ ಆಗಿ ಬರುವಷ್ಟು ಅನುಭವ ಸಮೃದ್ಧಿ ಕಾದಂಬರಿಯಲ್ಲಿಲ್ಲ. ಹಾಗಾಗಿ ಆಶಯಗಳಲ್ಲಿ ಸೂಚಿತವಾಗುವುದು ವಿವರಗಳಲ್ಲಿ ಸ್ಪಷ್ಟ ಆಕಾರವನ್ನು ತಳೆಯುವುದಿಲ್ಲ. ಲೇಖಕರು ಸರಳ ಸುಲಭ ದಾರಿಗಳನ್ನು ಬಿಟ್ಟು ಪ್ರಜ್ಞಾಪೂರ್ವಕವಾಗಿ ಕಷ್ಟದ ಹಾದಿಯನ್ನೇ ಹಿಡಿದಿದ್ದಾರೆ. ಈ ಸೃಜನಶೀಲ ಹೆಣಗಾಟ ಮೊಗಸಾಲೆಯವರ ಬರವಣಿಗೆಯ ಮುಖ್ಯ ಘಟ್ಟವೊಂದನ್ನು ಧ್ವನಿಸುತ್ತಿದೆ.

ಹಿರಿಯ ಬರಹಗಾರರಾದ ಪ್ರಭುಶಂಕರ ಅವರು ತಮ್ಮ ಮೊದಲ ಕಾದಂಬರಿ "ಜೀವ ಜೀವದ ನಂಟು"ವನ್ನು 91ರಲ್ಲಿ ಪ್ರಕಟಿಸಿದ್ದಾರೆ. ಅಧ್ಯಾಪಕರಾಗಿ, ವಿದ್ವಾಂಸರಾಗಿ, ವಿಮರ್ಶಕರಾಗಿ ಪ್ರಸಿದ್ಧರಾಗಿರುವ ಪ್ರಭುಶಂಕರ್ ತಮ್ಮ ತುಂಬು ವಯಸ್ಸಿನಲ್ಲಿ ಕಾದಂಬರಿ ರಚನೆಗೆ ಕೈ ಹಾಕಿದ್ದಾರೆ. "ನಮ್ಮ ಬದುಕು ಎಷ್ಟು ಜಟಿಲವಾದದ್ದು, ಎಷ್ಟು ಬಗೆಯ ಜನ ನಮ್ಮ ಬದುಕಿನ ಒಳಪದರಗಳ ಭಾಗವಾಗುತ್ತಾರೆ, ನಾವು ಎಷ್ಟು ಜನರ ಅಂತರಂಗ ವಲಯವನ್ನು ಪ್ರವೇಶಿಸುತ್ತೇವೆ, ಈ ಸಂಬಂಧಗಳು ನಮ್ಮನ್ನು ಅವರನ್ನು ಎಷ್ಟು ದೂರಕ್ಕೆ ಒಯ್ಯುತ್ತವೆ–ಇವು ನನಗೆ ಸದಾ ಕುತೂಹಲ ಹುಟ್ಟಿಸುವ ವಿಷಯಗಳು. ಒಂದರ್ಥದಲ್ಲಿ ಅದರ ವಿಶ್ಲೇಷಣೆ ಈ ಕಾದಂಬರಿಯ ವಸ್ತು" ಎಂದು ಲೇಖಕರು ಅರಿಕೆಯಲ್ಲಿ ತಿಳಿಸುತ್ತಾರೆ. ಮುಖ್ಯವಾಗಿ ಗಂಡು ಹೆಣ್ಣಿನ ಸಂಬಂಧದ ಹಲವು ಸ್ವರೂಪಗಳನ್ನು ಕಾದಂಬರಿ ಪರಿಶೀಲಿಸ ಹೊರಡುತ್ತದೆ. ಕಾದಂಬರಿ ಕಟ್ಟಿಕೊಡುವ ಜೀವನ ಸಂದರ್ಭಗಳಲ್ಲಿ ಸಂಕೀರ್ಣವೂ, ವೈವಿಧ್ಯಮಯವೂ ಆಗಿವೆ. ಪರಸ್ಪರ ಭಿನ್ನವೆನ್ನಿಸುವ ಈ ಸಂದರ್ಭಗಳಲ್ಲಿ ಮನುಷ್ಯ ಸಂಬಂಧಗಳ ಹಲವು ವಿನ್ಯಾಸಗಳು ಜೀವಂತವಾಗಿ ಕಟ್ಟಿಕೊಳ್ಳುತ್ತವೆ. ಕೊನೆಯ ಪಕ್ಷ ಹತ್ತು ಜನಪ್ರಿಯ ಕಾದಂಬರಿಗಳಿಗಾಗುವಷ್ಟು ಅನುಭವ ಸಾಮಗ್ರಿ ಇಲ್ಲಿದೆ. ಓರ್ವ ಸಾಮಾನ್ಯ, ಅಪ್ರಬುದ್ಧ ಲೇಖಕನ ಕೈಯಲ್ಲಿ ಕೇವಲ ರೋಚಕವಾಗಬಹುದಾದ ಸಾಮಗ್ರಿ ಈ ಲೇಖಕರ ನಿರ್ವಹಣೆಯಲ್ಲಿ ಸಾಕಷ್ಟು ಗಾಢವಾದ ಅನುಭವವನ್ನು ಕೊಡುತ್ತದೆ. ಮಾಗಿದ, ಪಕ್ವಗೊಂಡ ಮನಸ್ಸು ಜೀವನವನ್ನು ನೋಡಿದ ಸೂಚನೆಗಳು ತಾವಾಗಿಯೇ ಗಮನಕ್ಕೆ ಬರುತ್ತವೆ. ನಿಶ್ಚಿತ ವಿಚಾರಗಳನ್ನು ಘಟನೆಗಳಿಗೆ ಅನ್ವಯ ಮಾಡುವ ಮಾರ್ಗವನ್ನು ಪ್ರಭುಶಂಕರ್ ತುಳಿದಿಲ್ಲ. ಮಾನವೀಯ ಸನ್ನಿವೇಶಗಳನ್ನು ಮುಕ್ತವಾಗಿ ವರ್ಣಿಸುತ್ತಾ ಆ ವರ್ಣನೆಯಲ್ಲೇ ತಾವು ಕೇಳಿಸಿಕೊಂಡ ಧ್ವನಿಗಳನ್ನು ಅನುಕರಣಿಸುತ್ತ ಹೋಗುವ ಕಾದಂಬರಿಕಾರರು ಎಲ್ಲವನ್ನೂ ಓದುಗರಿಗೇ ಬಿಟ್ಟುಬಿಟ್ಟಿದ್ದಾರೆ. ಜೀವನದ ಬಗ್ಗೆ ತೀರ್ಪುಗಳನ್ನು ಕೊಡುವ ಧಾರ್ಷ್ಟ್ಯ ಇಲ್ಲಿಲ್ಲ. ಬದಲಾಗಿ ಬದುಕಿನ ಹಲವು ಸಾಧ್ಯತೆಗಳಿಂದ ವಿಸ್ಮಿತನಾದ ಸಂವೇದನಾಶೀಲನೊಬ್ಬನ ಬೆರಗು ಉದ್ದಕ್ಕೂ ಕಾಣುತ್ತದೆ.

"ಚಾಮುಂಡೇಶ್ವರಿ ಭವನ" ವ್ಯಾಸರಾವ್ ನಿಂಜೂರ್ ಅವರ ಎರಡನೆಯ ಕಾದಂಬರಿ. ತಮ್ಮ ಮೊದಲ ಕಾದಂಬರಿ "ಉಸಿರು" ಪ್ರಕಟವಾದ ಅನೇಕ ವರುಷಗಳ ನಂತರ ಲೇಖಕರು "ಚಾಮುಂಡೇಶ್ವರಿ ಭವನ"ವನ್ನು ಹೊರತಂದಿದ್ದಾರೆ. ಈ ಅವಧಿಯಲ್ಲಿ ಲೇಖಕರು ತುಂಬಾ ಬೆಳೆದಿದ್ದಾರೆ. ಅವರ ಅನುಭವ ಹೆಚ್ಚು ಸಮೃದ್ಧವಾಗಿದೆ; ದೃಷ್ಟಿ ವ್ಯಾಪಕವಾಗಿದೆ. "ಚಾಮುಂಡೇಶ್ವರಿ ಭವನ" ಒಂದು ಮಹತ್ವಾಕಾಂಕ್ಷೆಯುಳ್ಳ ರಚನೆಯಾಗಿದೆ. ಕನ್ನಡದ ಅನೇಕ ಪ್ರಾದೇಶಿಕ ಕಾದಂಬರಿಗಳ ನೆನಪನ್ನು ತರುವ ಈ ಕೃತಿ ಒಂದು ಊರಿನ ಸ್ಥಿತ್ಯಂತರಗಳನ್ನು ಸೂಕ್ಷ್ಮವಾಗಿ ದಾಖಲಿಸುವ ಆಶಯವನ್ನು ಇಟ್ಟುಕೊಂಡಿದೆ. ಕೆಮ್ಮಣ್ಣು ಎಂಬ

ಊರಿನ ಸುತ್ತ ಹೆಣೆದಿರುವ ಈ ಕಾದಂಬರಿಯ ಕೇಂದ್ರವೆಂದರೆ ಚಾಮುಂಡೇಶ್ವರಿ ಭವನವೆಂಬ ಹೆಸರು ಹೊತ್ತ ಹೋಟೆಲು. ನಗರಕ್ಕೆ ಸಂಪರ್ಕ ಕಲ್ಪಿಸುವ ಹೊಸರಸ್ತೆ, ಬಸ್ಸು, ಹೊಸ ಬಗೆಯ ಸಾಮಾಜಿಕ ಸಂಬಂಧಗಳನ್ನು ಹುಟ್ಟುಹಾಕುವ ಹೋಟೆಲಿನಂಥ ಹೊಸ ಸಾಮಾಜಿಕ ಸಂಸ್ಥೆಗಳು, ಸ್ವಾತಂತ್ರ್ಯೋತ್ತರ ಭಾರತದ ಹೊಸ ಮೌಲ್ಯಗಳು ಒಂದು ಜೀವನ ಕ್ರಮವನ್ನೇ ಪಲ್ಲಟಗೊಳಿಸಿದ ಪ್ರಕ್ರಿಯೆಯನ್ನು ಕಾದಂಬರಿ ಗಮನಿಸುತ್ತದೆ. ಇಲ್ಲಿ ಹಲವಾರು ವ್ಯಕ್ತಿಗಳ ವೈಯಕ್ತಿಕ ಬದುಕಿನ ಶೈಲಿ ಬದಲಾಗುತ್ತದೆ; ಹಳೆಯ ಆದರ್ಶಗಳನ್ನು ಹೊಸ ಆಶೋತ್ತರಗಳು ಸ್ಥಾನಪಲ್ಲಟ ಮಾಡುತ್ತವೆ. ಒಟ್ಟಾರೆ ಸಾಮೂಹಿಕ ಬದುಕಿನಲ್ಲೂ ಹೊಸ ಧಾವಂತ, ತಳವಳ ಕಾಣಿಸಿಕೊಳ್ಳುತ್ತವೆ. ಪರಂಪರಾಗತ ಸಂಸ್ಕೃತಿಯಲ್ಲಿ ಬಿರುಕು ಕಾಣಿಸಿಕೊಳ್ಳುತ್ತದೆ. ಹೊಸ ಭರವಸೆಗಳೊಂದಿಗೆ ಹೊಸ ವಿಕೃತಿಗಳೂ ಸೃಷ್ಟಿಯಾಗುತ್ತವೆ. ವೈವಿಧ್ಯಮಯ ಘಟನೆಗಳು, ಕುತೂಹಲಕರ ಸನ್ನಿವೇಶಗಳು, ಪರಿಸರಕ್ಕೆ ನಿಕಟವಾದ ಭಾಷಾಪ್ರಯೋಗ, ಬದಲಾವಣೆಯ ಸೂಕ್ಷ್ಮ ನಿರೀಕ್ಷಣೆಗಳಿಂದಾಗಿ "ಚಾಮುಂಡೇಶ್ವರಿ ಭವನ" ಗಮನ ಸೆಳೆಯುತ್ತದೆ. ಕಾರಂತ, ಆಲನಹಳ್ಳಿ ಕೃಷ್ಣ, ತೇಜಸ್ವಿ ಪರಂಪರೆಯಲ್ಲೇ ವ್ಯಾಸರಾವ್ ನಿಂಜೂರ್ ಹೆಜ್ಜೆ ಹಾಕುತ್ತಿದ್ದಾರೆ ಎನಿಸುತ್ತದೆ.

ಪಿ. ಲಂಕೇಶ್ ಅವರ "ಅಕ್ಕ" ನಿಸ್ಸಂದೇಹವಾಗಿ 1991ರ ಅತ್ಯುತ್ತಮ ಕನ್ನಡ ಕಾದಂಬರಿ. ಇದು ಶ್ರೀಯುತರ ಮೂರನೆಯ ಕಾದಂಬರಿ. ಅವರ ಮೊದಲ ಕಾದಂಬರಿ "ಬಿರುಕು" ಪ್ರಕಟವಾದದ್ದು 1967 ರಲ್ಲಿ. ಎರಡನೆಯ ಕಾದಂಬರಿ "ಮುಸ್ಸಂಜೆಯ ಕಥಾ ಪ್ರಸಂಗ" ಪ್ರಕಟವಾದದ್ದು 1978ರಲ್ಲಿ. ಬಿರುಕು ಒಂದು ಅಪ್ಪಟ ನವ್ಯ ಕಾದಂಬರಿ. "ಮುಸ್ಸಂಜೆ...." ನವ್ಯ ಮಾರ್ಗಕ್ಕೆ ವಿದಾಯ ಹೇಳಿತು. ಅದು ವಾಸ್ತವವಾದೀ ರಾಜಮಾರ್ಗದಲ್ಲಿದೆ. "ಅಕ್ಕ" ಒಂದು ದೃಷ್ಟಿಯಿಂದ ಈ ಎರಡೂ ಮಾರ್ಗಗಳಿಂದ ಅನೇಕ ಅಂಶಗಳನ್ನು ಒಟ್ಟಿಗೇ ತೆಗೆದುಕೊಂಡಿದೆ ಎನಿಸುತ್ತದೆ. ಲೇಖಕರು ಇಲ್ಲಿ ಕೊಳೆಗೇರಿಯ ಬದುಕನ್ನು ಚಿತ್ರಿಸುತ್ತಿದ್ದಾರೆ. ಆದರೆ ಅದು ಈ ಕಾದಂಬರಿಯ ನಾಯಕ ಮತ್ತು ನಿರೂಪಕನ ಸ್ವಗತ ಲಹರಿ ಎಂಬಂತೆ ದಾಖಲಾಗಿದೆ. ಅಂದರೆ ಲೇಖಕರು ತಮ್ಮ ಶಿಷ್ಟ ಪ್ರಜ್ಞೆಯಲ್ಲಿ ನೇರವಾಗಿ ದಾಖಲಿಸದೆ ಕ್ಯಾತನ ಕಣ್ಣುಗಳಲ್ಲೇ ಎಲ್ಲವನ್ನೂ ನೋಡುತ್ತಿದ್ದಾರೆ. ಇಲ್ಲಿನ ಗ್ರಹಿಕೆ, ನಿರೂಪಣೆ, ಮೌಲ್ಯನಿರ್ಣಯ ಎಲ್ಲವೂ ಕ್ಯಾತನದು ಎಂದು ಅನ್ನಿಸುವ ತಂತ್ರವನ್ನು ರೂಪಿಸಿಕೊಂಡಿದ್ದಾರೆ. ಕೊಳೆಗೇರಿಯಲ್ಲಿ ಸ್ವತಃ ಬದುಕಿದ ಕ್ಯಾತ ತಾನು ಕಂಡಿದ್ದು, ಅನುಭವಿಸಿದ್ದನ್ನು ನಮ್ಮೆದುರಿಗೆ ಬಿಚ್ಚಿಡುತ್ತಿದ್ದಾನೆ. ಇದರಿಂದಾಗಿ ಎರಡು ಮುಖ್ಯ ತಾಂತ್ರಿಕ ಸಮಸ್ಯೆಗಳನ್ನು ಲಂಕೇಶ್ ಇಲ್ಲಿ ಸುಲಭವಾಗಿ ಬಗೆಹರಿಸಿಕೊಂಡಿದ್ದಾರೆ. ಮೊದಲನೆಯದಾಗಿ ಕೊಳೆಗೇರಿಯ ವ್ಯಕ್ತಿಯೊಬ್ಬನ ಸಂವೇದನೆ, ನುಡಿಗಟ್ಟು, ಆಶೋತ್ತರಗಳಿಗೆ ಹತ್ತಿರವಾಗಲು ಈ ಮಾರ್ಗ ತುಂಬಾ ಅನುಕೂಲವಾಗಿದೆ. ಎರಡನೆಯದಾಗಿ ತನ್ನ ನೆಲೆಯ ಬಗ್ಗೆ

ನಿಶ್ಚಿತವಾಗಿ ಕೇವಲ ವೀಕ್ಷಕ ಅಥವಾ ಶ್ರೋತೃವಾಗಿ ಒಂದು ದೂರದಿಂದ ಎಲ್ಲವನ್ನೂ ದಾಖಲಿಸಲು ಇದರಿಂದ ಸಾಧ್ಯವಾಗಿದೆ. ನಿರೂಪಕನ ಭಾವಜಗತ್ತಿನಲ್ಲಿ ಇಲ್ಲವೆ ಕಥನ ಪ್ರಕ್ರಿಯೆಯಲ್ಲಿ ಕಾದಂಬರಿಕಾರ ಅನಗತ್ಯವಾಗಿ ಹಸ್ತಕ್ಷೇಪ ಮಾಡುತ್ತಿಲ್ಲ. ಲಂಕೇಶ್ ಕೇವಲ ತಂತ್ರಕ್ಕಾಗಿ ತಂತ್ರದ ಹೊಸ ಪ್ರಯೋಗ ಮಾಡುತ್ತಿಲ್ಲ. ಅದು ವಸ್ತುವಿನ ಅನಿವಾರ್ಯತೆಯಿಂದ, ಭಿನ್ನರೂಪದ ಗ್ರಹಿಕೆಯ ಅಧಿಕೃತತೆಗಾಗಿ ಮೂಡಿಬಂದಿದೆ. ಒಂದು ಬದುಕನ್ನು ಚಿತ್ರಿಸಲು ಅದೇ ಜಾತಿ ವರ್ಗಗಳಲ್ಲಿಯೇ ಹುಟ್ಟಿ ಬಂದಿರಬೇಕೆ ಇತ್ಯಾದಿ ಬಾಲಿಶ ಪ್ರಶ್ನೆಗಳು ಈ ಕಾದಂಬರಿಯ ಸಂದರ್ಭದಲ್ಲಿ ಅರ್ಥಹೀನವೆನ್ನಿಸಿಬಿಡುತ್ತದೆ. ಇಲ್ಲಿ ಕಾದಂಬರಿಕಾರನ ವರ್ಗ ಬೇರೆ. ನಿರೂಪಕನ ವರ್ಗ ಬೇರೆ. ತನ್ನದಲ್ಲದ ವರ್ಗ ಸತ್ಯಗಳನ್ನು ಅರ್ಥ ಮಾಡಿಕೊಳ್ಳಲು ಕಾದಂಬರಿಕಾರ ತಂತ್ರದಲ್ಲಿ ಅರ್ಥಪೂರ್ಣ ಬದಲಾವಣೆ ಮಾಡಿಕೊಂಡಿದ್ದಾನೆ. ಆ ಮೂಲಕ ವಾಸ್ತವತೆಯ, ಅಧಿಕೃತತೆಯ ಪ್ರಶ್ನೆಗಳನ್ನು ಗೆದ್ದುಕೊಂಡಿದ್ದಾನೆ. ಕ್ಯಾತನ ಸ್ವಗತ ಲಹರಿಯನ್ನು ಆತನ ವರ್ಗಕ್ಕೆ ಸೇರದ ನಾವು ಯಾಕೆ ಕೇಳಬೇಕೆಂಬ ಪ್ರಶ್ನೆಗೂ ಉತ್ತರ ಇಲ್ಲಿಯೇ ಅಡಗಿದೆ. ನಿರೂಪಕನ ಅನುಭವ ಮತ್ತು ಸಂವೇದನೆಗಳಿಗೆ ಭಾರವೆನ್ನಿಸುವ ಶೈಲಿಯನ್ನು ನಿರೂಪಕನಿಗೆ ಧಾರಣ ಮಾಡಲಾಗಿಲ್ಲ. ಆದರೆ ನಿರೂಪಕ ಎಷ್ಟು ಸೂಕ್ಷ್ಮ ಮನಸ್ಸಿನವನಾಗಿದ್ದಾನೆ ಎಂದರೆ ಅವನ ಅಭಿವ್ಯಕ್ತಿಯ ಎಲ್ಲ ಒರಟುತನ ಮತ್ತು ಗೊಂದಲಗಳನ್ನು ಮೀರಿ ಅನುಭವ ದಟ್ಟವೂ, ಸಂಕೀರ್ಣತೆಯೂ ಆಗುತ್ತದೆ. ಕ್ಯಾತ ತನ್ನ ನಿರೂಪಣೆಯುದ್ದಕ್ಕೂ ಏಕಕಾಲದಲ್ಲಿ ವರ್ಣಿಸುತ್ತಲೂ, ಚಿಂತಿಸುತ್ತಲೂ ಹೋಗುತ್ತಾನೆ. ಅಷ್ಟೇ ಅಲ್ಲ ತನ್ನ ನಿರೂಪಣೆಯ ಸ್ವರೂಪ, ಸಾಧ್ಯತೆಗಳ ಬಗ್ಗೆಯೂ ತನ್ನ ಆಲೋಚನೆಗಳನ್ನು ದಾಖಲಿಸುತ್ತ ಹೋಗುತ್ತಾನೆ. ಆ ಮೂಲಕ ಕಾದಂಬರಿಕಾರರು ಪರೋಕ್ಷವಾಗಿ ಸಾಹಿತ್ಯದ ಪ್ರೇರಣೆ ಮತ್ತು ಉದ್ದೇಶಗಳ ಬಗ್ಗೆಯೂ ಕೆಲ ಮೂಲಭೂತ ಅಂಶಗಳನ್ನು ಕ್ಯಾತನ ಮೂಲಕ ಪ್ರಸ್ತಾಪಿಸುತ್ತಾರೆ ಎನಿಸುತ್ತದೆ.

ತನ್ನ ಸುತ್ತಲ ಪರಿಸರವನ್ನು ಕೇವಲ ಅಧಿಕೃತವಾಗಿ ಚಿತ್ರಿಸುವುದು ಕ್ಯಾತನ ಉದ್ದೇಶವಲ್ಲ. ನಿಜ, ಅವನು ತನ್ನ ಬಗ್ಗೆ, ತನ್ನ ಅಕ್ಕನ ಬಗ್ಗೆ, ಕೊಳೆಗೇರಿಯ ಇನ್ನೂ ಅನೇಕ ವ್ಯಕ್ತಿಗಳ ಬಗ್ಗೆ, ಪುಢಾರಿಗಳ ಬಗ್ಗೆ, ಕೊಳೆಗೇರಿಯ ನಾತದ ಬಗ್ಗೆ, ಅಲ್ಲಿಯ ಗದ್ದಲದ ಬಗ್ಗೆ, ರೋಮಾಂಚನಗಳ ಬಗ್ಗೆ ಬರೆಯುತ್ತಿದ್ದಾನೆ. ಆದರೆ ಈ ಎಲ್ಲ ವಿವರಗಳು ತನ್ನ ಬದುಕಿಗೆ ಹೇಗೆ ಒದಗಿ ಬರುತ್ತವೆ, ತನ್ನ ಪ್ರಜ್ಞೆಯ ಮೇಲೆ ಏನು ಪರಿಣಾಮ ಮಾಡುತ್ತವೆ ಎಂಬುದರ ಬಗ್ಗೆ ಎಚ್ಚರವುಳ್ಳವನಾಗಿದ್ದಾನೆ. ಅಂದರೆ ತನ್ನ ಪರಿಸರವನ್ನು ಚಿತ್ರಿಸುತ್ತಲೇ ಅದಕ್ಕೂ ತನ್ನ ಪ್ರಜ್ಞೆಗೂ ಇರುವ ಸಂಬಂಧವನ್ನು ಪರಿಶೀಲಿಸಿಕೊಳ್ಳುತ್ತಿದ್ದಾನೆ. "ಅಕ್ಕ"ದಲ್ಲಿ "ಬಿರುಕು"ನ ನವ್ಯತೆ ಮತ್ತು "ಮುಸ್ಸಂಜೆ ...."ಯ ವಾಸ್ತವವಾದ ಬೆರೆಯುವುದು ಹೀಗೆ. ಆದ್ದರಿಂದಲೇ ದಲಿತ–ಬಂಡಾಯ ಚಳುವಳಿಗಳ ಸಂದರ್ಭದಲ್ಲಿಯೂ "ಅಕ್ಕ" ತುಂಬಾ ಪ್ರಸ್ತುತವಾದ ಗಣನೀಯ ಕೃತಿ ಎನಿಸಿಕೊಳ್ಳುತ್ತದೆ. ಅದು

ಲಂಕೇಶರ ಕಥನ ಸಾಹಿತ್ಯದಲ್ಲಿ ಒಂದು ಮಟ್ಟದ ಬೆಳವಣಿಗೆಯನ್ನು ತೋರುವಂತೆ ಸಮಕಾಲೀನ ಕನ್ನಡ ಕಥಾಸಾಹಿತ್ಯಕ್ಕೂ ತನ್ನದೇ ಆದ ಕಾಣಿಕೆಯನ್ನು ಸಲ್ಲಿಸಿದೆ. "ಅಕ್ಕ" ಅನೇಕ ಬಗೆಯಲ್ಲಿ ಹೊಸದಾಗಿ ತೋರುವಂತೆ ತನ್ನ ಪರಂಪರೆಯೊಂದಿಗೆ ಇಟ್ಟುಕೊಂಡಿರುವ ನಂಟೂ ಮಹತ್ವದ್ದಾಗಿದೆ. ಲಘು ಅನುಕರಣ ಧಾಟಿಯನ್ನು ಅನುಸರಿಸಿರುವ ಕನ್ನಡದ ಮಹತ್ವದ ಕೃತಿಗಳ ಜೊತೆ ಇಟ್ಟು ಇದನ್ನು ಚರ್ಚಿಸಬಹುದಾಗಿದೆ. ಟಿಪಿಕಲ್ ಪ್ರಗತಿಶೀಲ, ದಲಿತ, ಬಂಡಾಯ ಕಾದಂಬರಿಗಳಿಗಿಂತ ಇದು ತೀರಾ ಭಿನ್ನವಾಗಿದೆ. ಕ್ಯಾತನ ಪಾತ್ರ ಚಿತ್ರಣದಲ್ಲಿ ಲಂಕೇಶ್ ಸಾಧಿಸಿರುವ ಹದ ಅದ್ಭುತವಾಗಿದೆ. ಕ್ಯಾತನ ದಾರಿದ್ರ್ಯವನ್ನು, ಚೈತನ್ಯವನ್ನೂ ಒಟ್ಟಿಗೇ ಹಿಡಿಯುವ ಕಾದಂಬರಿ ಕ್ಯಾತನ ಸ್ಥಿತಿ ಬದಲಾದರೆ ಅವನ ಜೀವನ ಸಾಧ್ಯತೆಗಳೂ ವಿಸ್ತೃತಗೊಳ್ಳುತ್ತವೆ ಎಂಬ ಗಾಢ ವಿಶ್ವಾಸವನ್ನು ಪ್ರಕಟಿಸುತ್ತದೆ. ಆದರೆ ಇದು ಕೇವಲ ರೊಮ್ಯಾಂಟಿಕ್ ಕನಸುಗಾರಿಕೆಯಲ್ಲ. ಏಕೆಂದರೆ ಕ್ಯಾತ ತನ್ನ ಸ್ಥಿತಿಯನ್ನು ಬದಲಿಸಿಕೊಳ್ಳಬಲ್ಲ ಸಾಧ್ಯತೆ ಅವನ ವ್ಯಕ್ತಿತ್ವದಲ್ಲೇ ಇದೆ ಎಂಬುದನ್ನು ಕಾದಂಬರಿ ಕ್ಯಾತನ ಬದುಕಿನ ಹಲವು ಸಂದರ್ಭಗಳಲ್ಲಿ ಜೀವಂತವಾಗಿ ಕಾಣಿಸುತ್ತಾ ಸೂಚಿಸುತ್ತದೆ. ಪರ್ಯಾಯವಾಗಿ ಇದು ಒಟ್ಟಾರೆ ಆ ಕೊಳೆಗೇರಿಯ ಸ್ಥಿತಿ ಸಾಧ್ಯತೆಗಳನ್ನು ಕುರಿತ ಲೇಖಕರ ದರ್ಶನವೇ ಆಗಿಬಿಡುತ್ತದೆ.

ಈ ಮಟ್ಟದಲ್ಲಿ 91ರ ಮತ್ಯಾವ ಕಾದಂಬರಿಯನ್ನೂ ಚರ್ಚಿಸಲು ಸಾಧ್ಯವಾಗದಿರುವುದು ಈ ವರ್ಷ ಈ ಪ್ರಕಾರದ ಸಾಧನೆಯ ಸೀಮಿತತೆಯನ್ನು ಒತ್ತಿ ಹೇಳುತ್ತದೆ. ಏಕೋ ಏನೋ ಕನ್ನಡ ಕಾದಂಬರಿಗಳ ದೃಷ್ಟಿಯಿಂದ 1991 ಅಂಥ ಒಳ್ಳೆಯ ವರ್ಷವಾಗಲಿಲ್ಲ. ಕೆಲವೇ ಕೆಲವು ಹೆಸರಿಸಬಹುದಾದ ಕಾದಂಬರಿಗಳಾದ "ದೃಷ್ಟಿ", "ಮೂಲಮುಖಿ", "ಜೀವಜೀವದ ನಂಟು" ಮುಂತಾದುವುಗಳೆಲ್ಲ ಕನ್ನಡ ಕಾದಂಬರಿಯ ಈವರೆಗಿನ ಒಟ್ಟಾರೆ ಸಾಧನೆಯ ಹಿನ್ನೆಲೆಯಲ್ಲಿ ತೀರಾ ಪೇಲವವಾಗಿ ಕಾಣುತ್ತವೆ. "ಕದನ ವಿರಾಮ", "ಚಾಮುಂಡೇಶ್ವರಿ ಭವನ", "ಕುಮಾರ ರಾಮ", "ಟೀಪೂಸುಲ್ತಾನ" ಮುಂತಾದವುಗಳೆಲ್ಲ ಹಿಂದಿನ ಈ ಬಗೆಯ ಪ್ರಯತ್ನಗಳ ಕೇವಲ ಮುಂದುವರಿಕೆಗಳು. "ಅಕ್ಕ" ಮಾತ್ರ ತನ್ನ ಪರಂಪರೆಗೆ ಅಷ್ಟಿಷ್ಟನ್ನು ಜೋಡಿಸುತ್ತಾ ಈ ದಶಕದ ಕಾದಂಬರಿ ತುಳಿಯಬಹುದಾದ ದಿಕ್ಕನ್ನು ಸೂಚಿಸುವಂತಿದೆ.

ಈ ವರ್ಷ ಪ್ರಕಟವಾಗಿರುವ ಎರಡು ಅನುವಾದಿತ ಕಾದಂಬರಿಗಳನ್ನು ಅವಶ್ಯಕವಾಗಿ ಪ್ರಸ್ತಾಪಿಸಬೇಕು. ವಿಶ್ವಸಾಹಿತ್ಯದ ಎರಡು ಮೇರು ಕೃತಿಗಳಾದ ಲಿಯೊಟಾಲ್‌ಸ್ಟಾಯ್ ಅವರ "ಯುದ್ಧ ಮತ್ತು ಶಾಂತಿ" ಹಾಗೂ "ಅನ್ನಾಕರೆನಿನಾ" ಎಂಬ ಬೃಹತ್ ಕಾದಂಬರಿಗಳನ್ನು ದೇ. ಜವರೇಗೌಡ ಅವರು ತುಂಬಾ ಸಮರ್ಥವಾಗಿ ಅನುವಾದಿಸಿ ಕನ್ನಡಕ್ಕೆ ತಂದಿದ್ದಾರೆ. ಈ ಎರಡೂ ರಷ್ಯನ್ ಕಾದಂಬರಿಗಳ ಇಂಗ್ಲೀಷ್ ಭಾಷಾಂತರಗಳನ್ನು ದೇಜಗೌ ಮೂಲವಾಗಿಟ್ಟುಕೊಂಡಿದ್ದಾರೆ. ಇತರ ಯೂರೋಪಿಯನ್ ಭಾಷೆಗಳಿಂದ ನೇರವಾಗಿ ಅನುವಾದ ಮಾಡಬಲ್ಲ

ತಜ್ಞರು ಕನ್ನಡದಲ್ಲಿ ಅಷ್ಟಾಗಿ ಇಲ್ಲ. ಹಾಗಾಗಿ ಯುರೋಪಿಯನ್ ಸಾಹಿತ್ಯ ಹೆಚ್ಚಾಗಿ ಇಂಗ್ಲೀಷ್ ಮೂಲಕವೇ ಕನ್ನಡಕ್ಕೆ ಬರುತ್ತಿದೆ. ಇದರಿಂದ ಸಹಜವಾಗಿಯೇ ಅನೇಕ ತೊಂದರೆಗಳು ಉದ್ಭವಿಸುತ್ತವೆ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಇಷ್ಟಾದರೂ ಕೆಲಸಗಳಾಗುತ್ತಿರುವುದಕ್ಕೆ ನಾವು ಸಂತೋಷಪಡಬೇಕು.

ಟಾಲ್‌ಸ್ಟಾಯ್ ಬೃಹತ್ ಕಾದಂಬರಿಗಳ ಅನುವಾದ ಕೇವಲ ಸಾಹಿತ್ಯ ಪ್ರೀತಿಯನ್ನಲ್ಲದೆ ಅಪಾರ ಭೌತಿಕ ಶ್ರಮ, ಸಹನೆಗಳನ್ನೂ ಬೇಡುವಂಥದ್ದು, ಈ ಕೆಲಸವನ್ನು ದೇಜಗೌ ತುಂಬಾ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ನೆರವೇರಿಸಿದ್ದಾರೆ.

ಟಾಲ್‌ಸ್ಟಾಯ್ ಕಾದಂಬರಿಗಳೆಂದರೆ ವಿಶ್ವಸಾಹಿತ್ಯದ ಮಹಾಕುತೂಹಲಗಳು. ಅವುಗಳ ಕೇಂದ್ರ ವಸ್ತು ಮನುಷ್ಯನೇ ಆಗಿದ್ದಾನೆ. ಮನುಷ್ಯನನ್ನು ಏಕಕಾಲದಲ್ಲಿ ವ್ಯಕ್ತಿಯಾಗಿಯೂ ವರ್ಗಮಾದರಿಯಾಗಿಯೂ ನೋಡುವುದು ಟಾಲ್‌ಸ್ಟಾಯ್ ಅವರ ವೈಶಿಷ್ಟ್ಯ. ಇನ್ನೊಂದು ರೀತಿಯಲ್ಲಿ ಅವರು ಕ್ರಾಂತಿಪೂರ್ವ ರಷ್ಯಾದ ಜನಸಮೂಹದ ಚರಿತ್ರೆಯನ್ನೇ ಬರೆದಿದ್ದಾರೆ. ಒಂದು ಸಂಕ್ರಮಣ ಕಾಲದಲ್ಲಿ ಸಾಮಾಜಿಕ ವರ್ಗಗಳು ಸ್ಥಿತ್ಯಂತರ ಹೊಂದುತ್ತಿದ್ದ, ರಷ್ಯನ್ ಚರಿತ್ರೆ ಮತ್ತೊಂದು ನಿರ್ಣಾಯಕ ಘಟ್ಟಕ್ಕೆ ಹೊರಳಿಕೊಳ್ಳುತ್ತಿದ್ದ ಪ್ರಕ್ರಿಯೆಯನ್ನೇ ಅವರ ಕೃತಿಗಳು ಕಲಾತ್ಮಕವಾಗಿ ದಾಖಲಿಸಿವೆ. ಹೀಗೆ ಮಾಡುವಾಗ ಅತ್ಯಂತ ಚಿಕ್ಕ ಪಾತ್ರಗಳೂ ತಮ್ಮ ವಿಶಿಷ್ಟ ಬಣ್ಣ, ಚಹರೆ, ವಾಸನೆಗಳೊಂದಿಗೆ ಜೀವಂತ ವ್ಯಕ್ತಿಗಳಾಗಿ ಮೂಡಿಬಂದಿರುವುದು ಒಂದು ದೊಡ್ಡ ಸಾಧನೆಯಾಗಿದೆ. ವಾಸ್ತವಿಕವಾದ ಎನ್ನುವುದು ಟಾಲ್‌ಸ್ಟಾಯ್ ಕಾದಂಬರಿಗಳಲ್ಲಿ ಬಹಿರಂಗ ಪ್ರಪಂಚದ ತೀರಾ ಸಾಮಾನ್ಯ ಭೌತಿಕ ವಿವರಗಳಿಂದ ಅಂತರಂಗ ಪ್ರಪಂಚದ ಸೂಕ್ಷ್ಮಾತಿಸೂಕ್ಷ್ಮ ಭಾವಸತ್ಯಗಳವರೆಗೆ ವ್ಯಾಪಿಸಿಕೊಂಡು ಬಿಡುತ್ತದೆ. ಟಾಲ್‌ಸ್ಟಾಯ್ ನಿರ್ಮಿಸುವ ಬೃಹತ್ ವಿಶ್ವದಲ್ಲಿ ಮನುಷ್ಯನ ರಾಗದ್ವೇಷಗಳ, ಪ್ರೀತಿ–ಮೋಹಗಳ ಭಾವತೀವ್ರ ಸನ್ನಿವೇಶಗಳ ಜೊತೆಜೊತೆಯಲ್ಲೇ ಬದುಕಿನ ಅರ್ಥದ ತಾತ್ವಿಕ ಪ್ರಶ್ನೆಗಳೂ ಮಂಡಿತವಾಗಿ ದರ್ಶನ ಸಂಕೀರ್ಣವಾಗುತ್ತದೆ.

"ಯುದ್ಧ ಮತ್ತು ಶಾಂತಿ" ಹತ್ತಿರ ಹತ್ತಿರ ಎರಡು ಸಾವಿರ ಪುಟಗಳಷ್ಟು ದೊಡ್ಡದಾದ ಕಾದಂಬರಿ. (ದೇಜಗೌ ಅನುವಾದ ಮೂರು ಸಂಪುಟಗಳಲ್ಲಿ ಪ್ರಕಟವಾಗಿದೆ) ಈ ಕಾದಂಬರಿಯನ್ನು ಬರೆಯಲು ಏಳು ವರುಷಗಳನ್ನು ತೆಗೆದುಕೊಂಡ ಟಾಲ್‌ಸ್ಟಾಯ್ ಅದನ್ನು ಮೂರ ಬಾರಿ ತಿದ್ದಿ ಬರೆದರಂತೆ. ಅದು 1805–14ರ ಅವಧಿಯ ರಷ್ಯನ್ ಚರಿತ್ರೆಯನ್ನು ಒಳಗೊಳ್ಳುತ್ತದೆ. ನೆಪೋಲಿಯನ್ನನ ಆಕ್ರಮಣದ ಹಿನ್ನೆಲೆಯಲ್ಲಿ, ಯುದ್ಧದ ದೀರ್ಘ ನೆರಳಿನಲ್ಲಿ ಅದು ಭೂಮಾಲೀಕ ವರ್ಗಗಳ ಖಾಸಗಿ ಬದುಕನ್ನು, ರೈತಾಪಿ ಜನರ ಆಶೋತ್ತರಗಳನ್ನು, ಅಧಿಕಾರ ವರ್ಗದ ಒಳ ಜಗತ್ತನ್ನು ಬಿಚ್ಚುವ ಪರಿ ಅದ್ಭುತವಾದದ್ದು. ಚರಿತ್ರೆಯ ಬಗ್ಗೆ, ಮನುಷ್ಯ ಸ್ವಭಾವದ ಬಗ್ಗೆ, ಮನುಷ್ಯ ಜೀವನದ ವಿವಿಧ ಅವಸ್ಥೆಗಳ ಬಗ್ಗೆ,

ಮನುಷ್ಯ ಸಂಬಂಧಗಳ ಬಗ್ಗೆ ಟಾಲ್‌ಸ್ಟಾಯ್ ಅವರ ವಿಚಾರಗಳೂ ಈ ಕಾದಂಬರಿಯಲ್ಲಿ ವಿವರವಾಗಿ ಪ್ರತಿಪಾದಿತವಾಗಿವೆ. ಮನುಷ್ಯ ತನಗಾಗಿ ಬದುಕಬೇಕೋ, ಇತರರಿಗಾಗಿ ಬದುಕಬೇಕೋ? ಚರಿತ್ರೆಯ ಮನುಷ್ಯನ ವಿಧಿಯನ್ನು ರೂಪಿಸುತ್ತದೆಯೊ, ಮನುಷ್ಯ ಸಂಕಲ್ಪ ಚರಿತ್ರೆಯ ಗತಿಯನ್ನು ನಿರ್ದೇಶಿಸುತ್ತದೆಯೊ? ಮುಂತಾದ ಮೂಲಭೂತ ಪ್ರಶ್ನೆಗಳು ಇಲ್ಲಿ ಶೋಧನೆಗೆ ಒಳಗಾಗುತ್ತವೆ.

"ಅನ್ನಾ ಕರೆನಿನಾ" ಕಾದಂಬರಿಯ ಮೊದಲು ವಾಕ್ಯವೇ ಅದರ ಆಳ ಅಗಲಗಳನ್ನು ಸೂಚಿಸುವಂತಿದೆ. "ನೆಮ್ಮದಿಯಿರುವ ಎಲ್ಲ ಕುಟುಂಬಗಳು ಪರಸ್ಪರ ಹೋಲುತ್ತವೆ; ಪ್ರತಿಯೊಂದು ಅಸಂತುಷ್ಟ ಕುಟುಂಬವೂ ತಂತನ್ನ ರೀತಿಯಲ್ಲಿ ಅಸುಖವಾಗಿರುತ್ತದೆ. ಅನ್ನಾ ಮತ್ತು ವ್ಯಾಸ್ಕಿ, ಕಿಟ್ಟಿ ಮತ್ತು ಲೆವಿನ್, ಆಬ್ಲಾನ್ಸ್ಕಿ ಮತ್ತು ಡಾಲಿ ಹೀಗೆ ಹಲವು ಗಂಡು-ಹೆಣ್ಣು ಸಂಬಂಧಗಳ ಮೂಲಕ ಟಾಲ್‌ಸ್ಟಾಯ್ ಪ್ರೀತಿ, ಪ್ರೇಮ, ವಿವಾಹ, ದಾಂಪತ್ಯ, ಕುಟುಂಬಗಳ ಅರ್ಥವನ್ನು ವಿಶ್ಲೇಷಿಸುತ್ತಾರೆ. ಇನ್ನೊಂದು ಹಿನ್ನೆಲೆಯಲ್ಲಿ ಈ ಕಾದಂಬರಿ ಭೂಮಿ ಮತ್ತು ಮನುಷ್ಯನ ಸಂಬಂಧ, ಒಡೆಯ-ಒಕ್ಕಲುಗಳ ಸಂಬಂಧಗಳನ್ನು ಪರಿಶೀಲಿಸುತ್ತದೆ. ಕಾದಂಬರಿಯ ಪ್ರಾರಂಭದಲ್ಲಿಯೇ ಟಾಲ್‌ಸ್ಟಾಯ್ ಬೈಬಲ್ಲಿನ ಸೂಕ್ತಿಯೊಂದನ್ನು ಉದ್ಧರಿಸುತ್ತಾರೆ : **Vengeance is mine, I will repay.** (ಈ ಸೂಕ್ತಿ ದೇಜಗೌ ಭಾಷಾಂತರದಲ್ಲಿ ಬಿಟ್ಟು ಹೋಗಿದೆ) ಈ ವಾಕ್ಯ ಕಾದಂಬರಿಯ ನೈತಿಕ ಆಯಾಮಗಳ ಬಗ್ಗೆ ಅರ್ಥಪೂರ್ಣ ಸೂಚನೆಯೊಂದನ್ನು ನೀಡುತ್ತದೆ.

ಟಾಲ್‌ಸ್ಟಾಯ್ ಅವರ ಈ ಕಾದಂಬರಿಗಳೆಂದರೆ ಗದ್ಯಮಹಾಕಾವ್ಯಗಳೇ ಸರಿ. ಭಾರತೀಯ ಸಾಹಿತ್ಯದ ಮೇಲೆ, ಗಾಂಧೀಜಿಯವರ ಮೂಲಕ ಭಾರತೀಯ ಚಿಂತನೆಯ ಮೇಲೆ ಟಾಲ್‌ಸ್ಟಾಯ್ ಸಾಕಷ್ಟು ಪ್ರಭಾವ ಬೀರಿದ್ದಾರೆ. ಇವರ ಕಾದಂಬರಿಗಳ ಈ ಭಾಷಾಂತರಗಳು ಕನ್ನಡಕ್ಕೆ ಒಂದು ದೊಡ್ಡ ಕೊಡುಗೆ. ನಮ್ಮ ಕಾದಂಬರಿ ಪ್ರಕಾರದ ಬಗ್ಗೆ ಚರ್ಚಿಸುವಾಗ, ವಾಸ್ತವತಾವಾದದ ಬಗ್ಗೆ ಚರ್ಚಿಸುವಾಗ ಟಾಲ್‌ಸ್ಟಾಯ್ ಕಾದಂಬರಿಗಳು touch stone ಗಳಾಗಬಲ್ಲವು. ದೇಜಗೌ ಅನುವಾದಗಳು 1991ರ ಕನ್ನಡ ಸಾರಸ್ವತ ಪ್ರಪಂಚದ ಸಂದರ್ಭದಲ್ಲಿ ಖಂಡಿತವಾಗಿಯೂ ದೊಡ್ಡ ಸಾಧನೆಗಳೇ.

# ನಾಟಕ

ಕೆ. ಮರುಳಸಿದ್ಧಪ್ಪ

'ಕನ್ನಡ ವಾರ್ಷಿಕ' ದಲ್ಲಿ ಸಮೀಕ್ಷೆಗಾಗಿ ನಮ್ಮ ಮುಂದಿರುವ ನಲವತ್ತೈದು ನಾಟಕಗಳಲ್ಲಿ ನಾಲ್ಕು ಅನುವಾದವನ್ನು ಬಿಟ್ಟರೆ , ಉಳಿಯುವ ನಾಟಕಗಳಲ್ಲಿ ಅರೆಪಾಲು ನಾಟಕಗಳು ಶಿವರಾಮ ಕಾರಂತರ 'ಸರಳ ವಿರಳ ನಾಟಕಗಳು'. ಈ ಎಲ್ಲಾ ನಾಟಕಗಳನ್ನು ಕಾರಂತರು ಒಂದೆಡೆ ಈ ವರ್ಷ ಪ್ರಕಟಿಸಿರುವವಾದರೂ ರಚನೆಯ ಕಾಲ ಹಲವು ವರ್ಷಗಳ ವ್ಯಾಪ್ತಿಗೆ ಸೇರಿರುತ್ತದೆ. ಆದ್ದರಿಂದ ಈ ವರ್ಷದ ನಾಟಕಗಳು, ಎಂದು ನಿರ್ದಿಷ್ಟವಾಗಿ ನಾವು ಗಮನಿಸಬಹುದಾದ ಸ್ವತಂತ್ರ್ಯ ನಾಟಕಗಳು ಹೆಚ್ಚಿನ ಸಂಖ್ಯೆಯಲಿಲ್ಲವೆಂಬುವುದನ್ನು ಆರಂಭದಲ್ಲಿಯೇ ಸ್ಪಷ್ಟಪಡಿಸಬಹುದಾಗಿದೆ. ಸಮೀಕ್ಷೆಗಾಗಿ ನಮ್ಮ ಕಡೆಗೆ ಕಳುಹಿಸಲಾದ ನಾಟಕಗಳಲ್ಲಿ ಬಹುಪಾಲು ಏಕಾಂಕಗಳು ಇಲ್ಲಿವೆ, ಹಲವು ದೃಶ್ಯಗಳನ್ನೊಳಗೊಂಡ ಚಿಕ್ಕ ನಾಟಕಗಳು ಪೂರ್ಣಾವಧಿಯ ದೊಡ್ಡ ನಾಟಕಗಳ ಸಂಖ್ಯೆಯು ಕೈ ಬೆರಳೆಣಿಕೆಯಲ್ಲಿವೆ. ಒಟ್ಟಾರೆಯಾಗಿ ನಾಲ್ಕೈದು ನಾಟಕಗಳನ್ನು ಬಿಟ್ಟರೆ ಉಳಿದವುಗಳನ್ನು ಗಂಭೀರ ಚರ್ಚೆಗೆ ಗುರಿಪಡಿಸುವುದೇ ಚರ್ಚಾರ್ಹವಾದ ಸಂಗತಿಯಾಗುತ್ತದೆ.

ಇಲ್ಲಿಯೇ ಗಮನಿಸಬಹುದಾದ ಮತ್ತೊಂದು ಸಂಗತಿಯೆಂದರೆ, ಇಲ್ಲಿನ ಬಹುಪಾಲು ನಾಟಕಗಳ ವಸ್ತು ಸಮಕಾಲೀನವೆಂಬುದು. ಜೀವನದ ಮೂಲದಿಂದ ಪ್ರೇರಣೆ ಪಡೆದು ನಿರೂಪಣ ತಂತ್ರದಲ್ಲಿ ಜಾನಪದವನ್ನು ಅನುಸರಿಸುವ ಕೃತಿಗಳು ತೀರಾ ಅಲ್ಪ ಪ್ರಮಾಣದಲ್ಲಿವೆ. ಸಮಕಾಲೀನ ಕನ್ನಡ ಹವ್ಯಾಸಿ ರಂಗ ಭೂಮಿಯು ಪುರಾಣವಸ್ತುಗಳಿಂದ ಮತ್ತು ಜನಪದ ನಾಟಕಗಳಿಂದ ತುಂಬಿ ಹೋಗಿದೆಯೆಂದು ಆರೋಪಿಸುವ ವಿಮರ್ಶಕರು ಇದನ್ನು ಗಮನಿಸಬಹುದಾಗಿದೆ. ಈ ಸಮೀಕ್ಷೆಯಲ್ಲಿ ಗುರುತಿಸಲು ಈ ವರ್ಷ ಪ್ರಕಟವಾದ ಎಲ್ಲಾ ನಾಟಕಗಳು ನಮಗೆ ದೊರೆಯದಿರಬಹುದಾದ ಸಾಧ್ಯತೆಯನ್ನು ಒಪ್ಪಿಕೊಂಡರೂ, ಉಪಲಬ್ಧ ಕೃತಿಗಳ ಆಧಾರದ ಮೇಲೆ ಹೇಳುವುದಾದರೆ ಕನ್ನಡ ಹವ್ಯಾಸಿ ರಂಗಭೂಮಿಯ ಸಾಮಾಜಿಕ ನೆಲೆ ಇನ್ನು ದೃಢವಾಗಿ ಉಳಿದಿದೆ.

ಕನ್ನಡ ಸಾಹಿತ್ಯದ ಹಿರಿಯ ಲೇಖಕರಾದ ಡಾ. ಶಿವರಾಮ ಕಾರಂತರ ಇಪ್ಪತ್ತೊಂದು ನಾಟಕಗಳು ಈ ವರ್ಷ ಪ್ರಕಟವಾಗಿವೆ. 'ಸರಳ ವಿರಳ ನಾಟಕಗಳು' ಎಂಬ ಶೀರ್ಷಿಕೆಯಲ್ಲಿ ಸಂಗ್ರಹಿಸಲಾಗಿರುವ ಈ ಚಿಕ್ಕ ನಾಟಕಗಳ ವಿಸ್ತಾರವಾದ

ಅಧ್ಯಯನದ ಅಗತ್ಯವಿದೆ. ರಂಗ ಪ್ರಯೋಗಕ್ಕಾಗಿಯೇ ಇಲ್ಲಿರುವ ಎಲ್ಲ ನಾಟಕಗಳನ್ನೂ ಬರೆಯಲಾಯಿತೆಂದು ಲೇಖಕರು ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ. ಎಂಟು ಗದ್ಯನಾಟಕಗಳನ್ನು ಬಿಟ್ಟರೆ ಉಳಿದೆಲ್ಲ ಕೃತಿಗಳು ಪದ್ಯನಾಟಕಗಳು. ಬಹು ಪಾಲು ನಾಟಕಗಳ ವಸ್ತು ಸಾಮಾಜಿಕ. ಕೆಲವು ಪೌರಾಣಿಕ ಪ್ರಸಂಗಗಳಿದ್ದರೂ ಅಲ್ಲಿಯು ಸಮಕಾಲೀನ ಧ್ವನಿಯೇ ಅನುರಣನಗೊಳ್ಳುತ್ತಿದೆ. 'ಹವ್ಯಾಸಿ ನಾಟಕಗಳು ಇಂದಿನ ಮನ್ವಂತರದಲ್ಲಿ ಹೇಗೆ ಮನ್ನಣೆ ಪಡೆದಾವೆಂದು ಹೇಳಲಾರೆ'. ಎಂಬ ಅಳುಕು ಈ ನಾಟಕಗಳ ಬಗೆಗೆ ಲೇಖಕರಿಗಿದೆಯಾದರೂ ಇದೊಂದು ಈ ವರ್ಷದ ಮಹತ್ವದ ಪ್ರಕಟಣೆ ಎಂದು ಗುರುತಿಸಬೇಕಾಗುತ್ತದೆ. ಈ ಸಮೀಕ್ಷೆಗಿರುವ ಪರಿಮಿತಿಯ ಹಿನ್ನೆಲೆಯಲ್ಲಿ ಈ ಸಂಕಲನದ ಯಾವೊಂದು ನಾಟಕವನ್ನು ಪ್ರತ್ಯೇಕವಾಗಿ ಚರ್ಚಿಸದೇ ಇರುವ ಸಂದರ್ಭವನ್ನು ಅನಿವಾರ್ಯವೆಂದು ತಿಳಿಯಬಹುದಾಗಿದೆ. 'ಸರಳವಿರಳ ನಾಟಕಗಳು' ಸಂಕಲನದ ಎಲ್ಲ ನಾಟಕಗಳ ಸ್ಥಾಯಿ, ವ್ಯಂಗ್ಯ. ಸಮಕಾಲೀನ ಸಮಾಜದ ವಿಡಂಬನೆಯೇ ಗುರಿ. ಇದು ಈ ನಾಟಕಗಳ ವಿಶೇಷ ಗುಣವೆಂಬುದರ ಜೊತೆಗೆ ಈ ನಾಟಕಗಳ ಪರಿಮಿತಿಯೂ ಆಗುತ್ತದೆ ಎಂಬುದನ್ನು ಮರೆಯುವಂತಿಲ್ಲ. ಕಾದಂಬರಿಗಳ ವಿಸ್ತಾರವಾದ ವಸ್ತು ನಿರೂಪಣೆಯಲ್ಲಿ ಕಾರಂತರು ಬೇರೆಯಾಗಿಯೇ ಕಾಣಿಸಿಕೊಳ್ಳುತ್ತಾರೆ. ಆದರೆ ನಾಟಕಗಳ ಮಟ್ಟಿಗೆ ಅದರಲ್ಲೂ ಈಗ ಪ್ರಕಟವಾಗಿರುವ ನಾಟಕಗಳಲ್ಲಿ ಅವರ ಲೋಕದೃಷ್ಟಿ ವ್ಯಂಗ್ಯ ಪ್ರಧಾನವಾಗಿದ್ದು, ಅಲ್ಲಲ್ಲಿ ಸಿನಿಕತನದವರೆಗೂ ಬೆಳೆದಿದೆ. ಕಾರಂತರ ಗೀತ ನಾಟಕಗಳನ್ನು ಪ್ರಯೋಗದಲ್ಲಿ ನೋಡುವ ಅವಕಾಶವಿಲ್ಲದಿರುವುದರಿಂದ ಅವುಗಳ ಬಗೆಗೆ ಹೆಚ್ಚು ಹೇಳುವಂತಿಲ್ಲ. ಪ್ರಯೋಗದ ಮೂಲಕವೇ ಸಾರ್ಥಕಗೊಳ್ಳಬೇಕಾದ ಮತ್ತು ಪ್ರೇಕ್ಷಕನ ರಸಗ್ರಹಣಕ್ಕೆ ಗೋಚರವಾಗಬಹುದಾದ ನಾಟಕಗಳ ಪದ್ಯ ಶೈಲಿ ಮಾತ್ರ ಏಕತಾನವಾಗಿ ಕಂಡುಬರುತ್ತದೆ. ಒಮ್ಮೊಮ್ಮೆ ಪ್ರಾಸಕ್ಕಾಗಿಯೇ ಶಬ್ದ ಜಾಲವನ್ನು ಹೆಣೆಯುವ ಪ್ರಯತ್ನವಿದೆ. ಸಮಕಾಲೀನ ಸಮಾಜವನ್ನು ಕುರಿತು ಈ ಕಾಲದ ಶ್ರೇಷ್ಠ ಸೃಜನಶೀಲ ಮನಸ್ಸೊಂದು ಹೇಗೆ ಪ್ರತಿಕ್ರಿಯಿಸಿದೆ ಎಂಬುದಕ್ಕೆ ಈ ಸಂಕಲನದ ನಾಟಕಗಳು ಅತ್ಯುತ್ತಮ ದಾಖಲೆಗಳಾಗುತ್ತವೆಯೆಂಬುವುದರಲ್ಲಿ ಸಂದೇಹವಿಲ್ಲ.

ಕನ್ನಡ ಜಾನಪದ ಪರಂಪರೆಯಲ್ಲಿ 'ಮಂಟೇ ಸ್ವಾಮಿ ಪುರಾಣ', ಪ್ರಸಿದ್ಧವಾದುದು. ಮೈಸೂರು, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿರುವ ಮಂಟೇ ಸ್ವಾಮಿ ಪರಂಪರೆಯ ಜನಪದ ಗಾಯಕರು ಹಾಡುವ ಕಥಾ ಪ್ರಸಂಗವನ್ನೇ ಆಧರಿಸಿ ಕವಿ ಎಚ್. ಎಸ್. ಶಿವಪ್ರಕಾಶರು 'ಮಂಟೇ ಸ್ವಾಮಿ ಕಥಾ ಪ್ರಸಂಗ' ಎಂಬ ನಾಟಕವನ್ನು ರಚಿಸಿದ್ದಾರೆ. ಬೆಂಗಳೂರು ಪ್ರಯೋಗರಂಗ ತಂಡದವರು ಹಲವು ಬಾರಿ ಪ್ರದರ್ಶಿಸಿ ನಾಡಿನಾದ್ಯಂತ ಜನಪ್ರಿಯಗೊಂಡಿರುವ ನಾಟಕವಿದು.

ದಲಿತವರ್ಗದಿಂದ ಹುಟ್ಟಿಬಂದ ಶರಣ ಮಂಟೇಸ್ವಾಮಿಯ ಕಾಲ ಅನಿರ್ದಿಷ್ಟವಾಗಿದೆ. ಹನ್ನೆರಡನೆ ಶತಮಾನದ ಬಸವಣ್ಣನ ಗುರುವೆಂದು ಮಂಟೇಸ್ವಾಮಿ ಪುರಾಣದಲ್ಲಿ

ಹೇಳಲಾಗಿದೆಯಾದರೂ ಪವಾಡ, ದಂತಕಥೆಗಳ ದಟ್ಟವಾದ ಕಾರ್ಮೋಡದಲ್ಲಿ ಐತಿಹಾಸಿಕ ಸಂಗತಿ ಸತ್ಯ ಮುಚ್ಚಿ ಹೋಗಿದೆ. ಆಧುನಿಕ ನಾಟಕಕಾರರಾದ ಶಿವಪ್ರಕಾಶ್ ಈ ಐತಿಹ್ಯ ಪುರುಷನ ಕಥಾವಸ್ತು ಆಶ್ರಯಿಸಿದಾಗ ಇದರಲ್ಲಿ ಹುದುಗಿರುವ ಐತಿಹಾಸಿಕ ಸಂಗತಿಗಳನ್ನು ನಿಚ್ಚಳಗೊಳಿಸಬಹುದಿತ್ತು. ಆದರ ಶಿವ ಪ್ರಕಾಶರ ನಾಟಕ ಈ ನಿಟ್ಟಿನಲ್ಲಿ ಪ್ರಯತ್ನವನ್ನೇ ಪಟ್ಟಿಲ್ಲ. ಜಾನಪದ ಪರಂಪರೆಯಲ್ಲಿರುವ ಪವಾಡಮಯವಾದ ಕಥಾ ಪ್ರಸಂಗವನ್ನೇ ಸಂಪಾದ ಹಾಡುಗಳ ಮೂಲಕ ಅವರು ಸುಂದರವಾಗಿ ಒಂದು ನಾಟಕವನ್ನು ರಚಿಸಿದ್ದಾರೆ.

ಸಿರಿಸಂಪತ್ತನ್ನೇ ಅಧಿಕವೆಂದು ತಿಳಿದಿರುವ ಬಾಹ್ಯ ಪ್ರಪಂಚಕ್ಕೆ ಪರ್ಯಾಯವಾಗಿ ಅನುಭಾವಿಯ ಬಡತನವನ್ನು, ಒಣಪ್ರತಿಷ್ಠೆಯ ಅತ್ಮ ಪಲ್ಲಕ್ಕಿ ಜಗದ್ಗುರುಗಳಿಗೆ ಪ್ರತಿಯಾಗಿ ಒರಟು ಶೈಲಿಯ ಗುಪ್ತ ಮಾಹೇಶ್ವರನನ್ನು ಈ ಕಥೆಯಲ್ಲಿ ನಿರೂಪಿಸಲಾಗಿದೆ. ಸಂಘರ್ಷ ರಹಿತನಾದ ಸಿದ್ಧಪುರುಷನೊಬ್ಬನು ನಾಯಕನಾಗಿರುವುದರಿಂದ ಮತ್ತು ರಕ್ತಮಾಂಸದಿಂದ ತುಂಬಿದ ಪ್ರತಿನಾಯಕನಿಲ್ಲದಿರುವುದರಿಂದ ನಾಟಕದ ಪಾತ್ರ ಮತ್ತು ಸನ್ನಿವೇಶ ನಿರ್ಮಾಣವೆಂಬುದು ಸರಳಗೊಂಡಿದೆ. ಮಂಟೇಸ್ವಾಮಿಯ ಮಹಾತ್ಮೆಯುನ್ನು ಅನೇಕ ಪವಾಡಗಳ ಮೂಲಕವೇ ಮಂಡಿಸುವ ನಾಟಕಕಾರರ ಪ್ರಯತ್ನದಿಂದಾಗಿ ಹೋರಾಟವೇ ಇಲ್ಲದ ಸಪಾಟಾದ ಹಾದಿಯಲ್ಲಿ ನಾಟಕ ಬೆಳೆಯುತ್ತದೆ. 'ಮಂಟೇ ಸ್ವಾಮಿ ಕಥಾ ಪ್ರಸಂಗ' ವೆಂಬ ನಾಟಕದ ಶೀರ್ಷಿಕೆಯೇ ನಾಟಕದ ಉದ್ದೇಶ ಮತ್ತು ಶೈಲಿಯನ್ನು ಸ್ಪಷ್ಟ ಪಡಿಸುತ್ತದೆ. ಕಥಾ ಪ್ರಸಂಗವೊಂದನ್ನು ಸುಂದರವಾಗಿ ನಿರೂಪಿಸುವ ಪ್ರವಚನಕಾರನ ಶೈಲಿಯಿಂದಾಗಿ ಕೃತಿಯ ನಾಟಕತ್ವ ಮತ್ತು ಸಮಕಾಲೀನ ಮಹತ್ವ ಹಿಂದೆ ಸರಿಯುತ್ತವೆ.

'ಆಸ್ಫೋಟ' ಮತ್ತು 'ನಮ್ಮೊಳಗೊಬ್ಬ ನಾಜೂಕಯ್ಯ', ಈಗಾಗಲೇ ಹಲವು ಪ್ರಯೋಗ ಕಂಡು ಯಶಸ್ವಿಯಾಗಿರುವ ನಾಟಕಗಳು ಎರಡೂ ನಾಟಕಗಳನ್ನು ಈ ವರ್ಷ ಪ್ರಕಟಿಸಿರುವ ನಾಟಕಕಾರ ಟಿ. ಎನ್. ಸೀತಾರಾಮ ಕನ್ನಡದ ಸಾಮಾಜಿಕ ರಂಗಭೂಮಿಗೆ ಜೀವ ಸತ್ವ ನೀಡಿದ ಒಬ್ಬ ನಾಟಕಕಾರ.

ಬಂಡಾಯಗಾರನೊಬ್ಬ ಅಧಿಕಾರದ ಗದ್ದುಗೆಯೇರುವ ಮೂಲಕ ರಾಜಕೀಯಕ್ಕೆ ಹೊಸ ಚೈತನ್ಯ ತರಹೋಗಿ, ಭ್ರಷ್ಟಪರಿಸರದಲ್ಲಿ ತಾನೇ ಮಲಿನಗೊಂಡು ಅವನತಿ ಹೊಂದುವ ವಸ್ತುವನ್ನುಳ್ಳ 'ಆಸ್ಫೋಟ', ಮುಕ್ತಾಯ ಪಡೆಯುವುದು ಮತ್ತೊಬ್ಬ ಕ್ರಾಂತಿಕಾರಿಯ ಘೋಷಣೆಯೊಂದಿಗೆ. ಈ ನಾಟಕದ ಕೇಂದ್ರ ಪಾತ್ರವಾದ ಶಿವಪ್ರಸಾದ ಯುವಶಕ್ತಿಯ ಪ್ರತಿನಿಧಿಯಂತೆ ಕಾಣಿಸಿಕೊಂಡು ವ್ಯವಸ್ಥೆಯೊಂದಿಗೆ ಯಾವ ಕಾರಣಕ್ಕೂ ರಾಜಿ ಮಾಡಿಕೊಳ್ಳಬಾರದೆಂಬ ಉಗ್ರನಿಷ್ಠೆಯ ಸಮಾಜವಾದಿ. ಅವನ ಗುರು ರಾಜಾರಾಂ ಮಂತ್ರಿಯಾದೊಡನೆ ತನ್ನ ಆದರ್ಶಗಳನ್ನು ಮರೆತು ಬಂಡಾವಾಳಶಾಹಿ ಕುತಂತ್ರಕ್ಕೆ ಮಣಿದು ಮೆದುವಾದಾಗ ಶಿವಪ್ರಸಾದ್

ಆಸ್ಫೋಟಿಸುತ್ತಾನೆ. ಅವನ ದಂಗೆ ಸಮಕಾಲೀನ ಯುವಶಕ್ತಿಗೆ ನಾಟಕಕಾರರು ನೀಡುವ ಕರೆಯಂತೆ ಸಾಂಕೇತಿಕವಾಗಿದೆ.

'ಆಸ್ಫೋಟ'ದ ಬಳಿಕ ಸೀತಾರಾಮ್ ರಚಿಸಿದ ಮತ್ತೊಂದು ನಾಟಕ 'ನಮ್ಮೊಳಗೊಬ್ಬ ನಾಜೂಕಯ್ಯ'. ಈ ನಾಟಕ ನಮ್ಮ ಸಾಮಾಜಿಕ ಪರಿಸರದ ದ್ವಂದ್ವವನ್ನು ಇನ್ನೂ ಸಮರ್ಥವಾಗಿ ಧ್ವನಿ ಪೂರ್ವಕವಾಗಿ ಮಂಡಿಸುತ್ತದೆ. 'ಆಸ್ಫೋಟ'ದಂತೆ ಕೇವಲ ಆಕ್ರೋಶ ಮುನ್ನಡೆಗೆ ಬರದೆ ಆಕ್ರೋಶವನ್ನು ಮೀರಿದ ವಿಷಾದವಿದೆ. ಸಾಂಕೇತಿಕತೆಯ ದೃಷ್ಟಿಯಿಂದಲೂ ಈ ನಾಟಕದ ಅರ್ಥವಂತಿಕೆಯು ಗಮನಾರ್ಹವಾಗಿದೆ. ವೃತ್ತಿ ರಂಗಭೂಮಿಯ ಪ್ರಸಿದ್ಧ ನಾಟಕವಾದ 'ದೇವದಾಸಿ'ಯ ನಾಜೂಕಯ್ಯ ಕನ್ನಡ ಭಾಷೆಯಲ್ಲಿ ಪಡೆದುಕೊಂಡ ಹೊಸ ಅರ್ಥವಂತಿಕೆಯು ನುಡಿ ಗಟ್ಟಿನಂತೆ ಬಳಕೆಯಲ್ಲಿದ್ದು, ಅದರ ವ್ಯಂಗ್ಯಾರ್ಥವನ್ನು ಬಹುಸಮರ್ಥವಾಗಿ ನಾಟಕದ ಪರಿಸರಕ್ಕೆ ಇಲ್ಲಿ ಹೊಂದಿಸಲಾಗಿದೆ. ಅವನತಿಗೊಂಡ ಸಮಕಾಲೀನ ಸಾಮಾಜಿಕ ಪರಿಸರದಲ್ಲಿ ಕಾನೂನು ಮತ್ತು ನ್ಯಾಯದ ಪರಿಕಲ್ಪನೆಗಳೆರಡೂ ಬೇರೆಯಾಗಿ ಪರಸ್ಪರ ವಿರುದ್ಧವಾಗಿ ಕಾಣಿಸಿಕೊಳ್ಳುವ ದುರಂತವೇ ನಾಟಕದ ಕೇಂದ್ರ ಶಕ್ತಿಯಾಗಿದೆ.

'ನಮ್ಮೊಳಗೊಬ್ಬ ನಾಜೂಕಯ್ಯ' ನಾಟಕದ ಪ್ರಸಾದ್ ಸಣ್ಣ ಕೈಗಾರಿಕೆಯೊಂದರ ಒಡೆಯ; ಆಗೀಗ ಪತ್ರಿಕೆಗಳಿಗೆ ಲೇಖನ ಕಥೆ ಬರೆಯುವ ಬರಹಗಾರ. ಬರಹಗಾರ ಪ್ರಸಾದ್‌ನ ನಿಲುವು ಅವನ ಸಣ್ಣ ಕೈಗಾರಿಕೆಯ ಪಾಲಿಗೆ ಮೃತ್ಯು ಪ್ರಾಯವಾಗುತ್ತದೆ. ಅವನ ನಿರ್ದಯ ಬರಹಗಳಿಂದ ಸಿಟ್ಟಿಗೆದ್ದ ಶ್ರೀಮಂತ ಉದ್ಯಮಿ ಅಧಿಕಾರಿ ಮತ್ತು ರಾಜಕಾರಣಿಗಳು ಒಟ್ಟಾಗಿ ಬೇಟೆಯಾಡಿ ಅವನನ್ನು ಪಳಗಿಸುತ್ತಾರೆ. 'ದೇವದಾಸಿ' ನಾಟಕದ ನಾಜೂಕಯ್ಯನಂತೆ ಪ್ರಸಾದ್ ಅವರೆಲ್ಲರ ದಲ್ಲಾಳಿಯಾಗಲು ಒಪ್ಪುವುದರೊಂದಿಗೆ ನಾಟಕ ಮುಕ್ತಾಯವಾಗುತ್ತದೆ. 'ಆಸ್ಫೋಟ'ದಲ್ಲಿ ಬಂಡಾಯದ ಸೂಚನೆಯಿದ್ದರೆ, ಈ ನಾಟಕ ವಿಷಾದ ಮತ್ತು ಹಳಹಳಿಕೆಯೊಂದಿಗೆ ಮುಕ್ತಾಯಗೊಂಡಿದೆ. ನೈತಿಕವಾಗಿ ದಿವಾಳಿಯಾಗಿರುವ ಪರಿಸರದಲ್ಲಿ ಬಂಡಾಯವೆನ್ನುವುದು ಹೊಸ ಭರವಸೆಯಾಗುವುದರಿಂದ ಈ ನಾಟಕದ ನಾಯಕನಂತಿರುವ ಮಧ್ಯಮವರ್ಗದ ಬುದ್ಧಿಜೀವಿಗಳೆಲ್ಲ ಒಬ್ಬೊಬ್ಬ ನಾಜೂಕಯ್ಯನಂತೆ ಕಾಣುವ ವ್ಯಂಗ್ಯವನ್ನು ನಾಟಕವು ಒಟ್ಟಾರೆಯಾಗಿ ಧ್ವನಿಸುತ್ತಿದೆ.

ಈ ವರ್ಷ ನಮ್ಮ ಸಮೀಕ್ಷೆಯ ವ್ಯಾಪ್ತಿಯಲ್ಲಿ ಬರುವ ಬಹುಪಾಲು ನಾಟಕಗಳ ಗುರಿ ಸಮಕಾಲೀನ ರಾಜಕೀಯದ ಅವನತಿ. ಇದು ಒಟ್ಟೊಟ್ಟಿಗೆ ಸಮಕಾಲೀನ ಕನ್ನಡ ರಂಗಭೂಮಿಯ ಎಚ್ಚರವನ್ನು ಮತ್ತು ರಾಜಕಾರಣದ ಅವನತಿಯನ್ನು ಸೂಚಿಸುತ್ತಿದೆ ಎಂಬುದನ್ನು ಇಲ್ಲಿ ಪ್ರಾಸಂಗಿಕವಾಗಿ ಗಮನಿಸಬೇಕಾಗುತ್ತದೆ.

ಕಾವ್ಯಜೀವಿಯವರು 'ಕೈಗೊಂಬೆಯ ದಂಗೆ'ಯಲ್ಲಿಯೂ ಸಮಕಾಲೀನ ರಾಜಕಾರಣವನ್ನು ವಿಡಂಬಿಸಿದ್ದಾರೆ. ಆದರೆ ವಸ್ತು ಸಮಕಾಲೀನವಲ್ಲ. ಈ ನಾಟಕದ ಐತಿಹಾಸಿಕ ಪರಿಸರ ಮತ್ತು ವ್ಯಕ್ತಿಗಳೆಲ್ಲ ಅರ್ಥವಿಸುತ್ತಿರುವುದು ಭಾರತದ ಸಮಕಾಲೀನ ರಾಜಕೀಯದ ಏಳುಬೀಳುಗಳನ್ನು ಮತ್ತು ಮೌಲ್ಯ ವ್ಯವಸ್ಥೆಯನ್ನು. ರಾಜನೊಬ್ಬನ ಮರಣದಿಂದಾಗಿ ಸಿಂಹಾಸನ ಖಾಲಿಯಾಗುವುದು, ಉತ್ತರಾಧಿಕಾರಿಯನ್ನು ಗೊತ್ತುಪಡಿಸುವಲ್ಲಿ ಅಮಾತ್ಯರು ಮತ್ತು ಪ್ರಧಾನ ಅಮಾತ್ಯರು ನಡೆಸುವ ಸಂಚು ಒಳಸಂಚುಗಳು, ಸಿಂಹಾಸನದ ಮೇಲೆ ಕಣ್ಣಿಟ್ಟ ಮೂವರು ರಾಜಕುಮಾರರ ದುರ್ಬಲ ವ್ಯಕ್ತಿತ್ವ ನಾಟಕೀಯವಾಗಿ ನಿರೂಪಿಸಲಾಗಿದೆ. ಕೈಗೊಂಬೆಯಾಗಿರುವನೆಂದು ಭಾವಿಸಿ ಮಂತ್ರಿಗಳು ಸಿಂಹಾಸನಕ್ಕೇರಿಸಿದ ರಾಜಕುಮಾರ ದಂಗೆಕೋರನಾಗಿ ಸ್ವಂತ ಅಧಿಕಾರ ಸ್ಥಾಪಿಸ ಹೊರಡುವುದರೊಂದಿಗೆ ನಾಟಕವು ಅನಿರೀಕ್ಷಿತ ತಿರುವನ್ನು ಪಡೆಯುತ್ತದೆಯಾದರೂ ನಾಟಕದ ಶಿಖರವಾದ ಈ ಭಾಗದಲ್ಲಿ ತೀವ್ರತರ ಸಂಘರ್ಷ ನಿರ್ಮಾಣಗೊಳ್ಳುವುದಿಲ್ಲ. ದಂಗೆಯೆದ್ದ ಕೈಗೊಂಬೆಯ ಪಾತ್ರ ದುರ್ಬಲವಾಗಿರುವುದರಿಂದ ನಾಟಕೀಯ ಸಂಘರ್ಷಕ್ಕೆ ಅವಕಾಶವೇ ಇಲ್ಲದಂತಾಗಿದೆ. ಯಾವುದೇ ಹೋರಾಟವಿಲ್ಲದೆ ಅಸಹಾಯಕನಾಗಿ ಅಮಾತ್ಯ ಮಂಡಳಿಗೆ ಶರಣಾಗುವ ರಾಜನ ಸೋಲು ದುರಂತವಾಗುವುದಿಲ್ಲ. ಏಕೆಂದರೆ ಬಲಿಪಶುಗಳನ್ನು ದುರಂತ ನಾಯಕರೆಂದು ಭಾವಿಸಲಾಗುವುದಿಲ್ಲ. ಬಹುಶಃ ನಾಟಕಕಾರರ ಗುರಿಯೂ ಇಂತಹ ಅಸಹಾಯಕ ಅನಿವಾರ್ಯ ಸಂದರ್ಭದ ಮನದಟ್ಟು ಮಾಡುವುದೇ ಆಗಿದ್ದಿರಬಹುದಾದರೂ ಈ ಅಸಹಾಯಕತೆಯೂ ತೀವ್ರವಾಗಿ ನಾಟಕದಲ್ಲಿ ಮೂಡಿಬರುವುದಿಲ್ಲ. 'ಕೈಗೊಂಬೆಯ ದಂಗೆ' ಎಂಬ ನಾಟಕದ ಶೀರ್ಷಿಕೆಯೇ ಮುಕ್ತಾಯದ ಔಚಿತ್ಯವನ್ನು ವಿವರಿಸುತ್ತಿದೆಯಾದರೂ ನಾಟಕದ ಕೊನೆಯ ಅಂಕವನ್ನು ಇನ್ನೂ ಪರಿಣಾಮಕಾರಿಯಾಗಿ ನಾಟ್ಯೋಚಿತವಾಗಿ ರಚಿಸಿ ತೋರಿಸಲು ಸಾಧ್ಯವಿದ್ದಿದ್ದರೆ ಚೆನ್ನಾಗಿತ್ತು.

ಜಯಪ್ರಕಾಶ್ ಮಾವಿನಕುಳಿಯವರು ಒಂದು ಮಠದ ಸ್ವಾಮಿಯ ಕಥೆಯ ಮೂಲಕ ಸಮಕಾಲೀನ ಧಾರ್ಮಿಕ ಮತ್ತು ರಾಜಕೀಯ ಅವನತಿಯನ್ನು ಚಿತ್ರಿಸಲು ಹೊರಟಿದ್ದಾರೆ. ಅಸಹಾಯಕ ಹೆಣ್ಣೊಬ್ಬಳ ಮೇಲೆ ಅತ್ಯಾಚಾರ ನಡೆಸಿ, ಜಾತಿ ಮತ್ತು ರಾಜಕಾರಣಿಗಳ ಬೆಂಬಲದಿಂದ ಬಚಾವಾಗುವ ಮಠಾಧಿಪತಿಯೊಬ್ಬನ ಕಥೆಯನ್ನು ನಿರೂಪಿಸುತ್ತಲೇ ಸನ್ಯಾಸಿಯ ಒಂಟಿತನ, ಮನುಷ್ಯ ಸಹಜ ಲೈಂಗಿಕ ತೃಷೆ, ಇವುಗಳತ್ತ ಸಹ ಓದುಗರ ಗಮನ ಸೆಳೆಯುವುದು ನಾಟಕದ ಗುರಿ. ಸಮಕಾಲೀನ ವಸ್ತುವನ್ನು ಆರಿಸಿಕೊಂಡ ಲೇಖಕನು ಎದುರಿಸಬೇಕಾಗುವ ಸವಾಲುಗಳನ್ನು ಆತ ಹೇಗೆ ನಿರ್ವಹಿಸುತ್ತಾನೆಂಬುದರ ಮೇಲೆ ಇಂತಹ ಕೃತಿಗಳ ಯಶಸ್ಸು ನಿಂತಿರುತ್ತದೆ. ಪ್ರಸ್ತುತ ನಾಟಕಕಾರರು ಸೋಲುವುದು ಇದೇ ಕಾರಣದಿಂದ. ವಸ್ತು ನಿರೂಪಣೆ, ಪಾತ್ರ ರಚನೆಗಳ ಮೂಲಕವೇ ಶರೀರ ಪಡೆಯಬೇಕಾದ ಲೇಖಕರ ಧೋರಣೆಗಳು ಇಲ್ಲಿ ಮಾತಿನ ಅಬ್ಬರವನ್ನು

ಆಶ್ರಯಿಸುತ್ತವೆ. ವ್ಯಂಗ್ಯ ಮತ್ತು ವಿಡಂಬನೆಯ ಧಾರಾಳ ಬಳಕೆಯಿಂದಾಗಿ ಮಾತಿಗಿರಬೇಕಾದ ಕ್ರಿಯಾತ್ಮಕತೆ ಕುಂಠಿತಗೊಂಡಿದೆ. ತೀವ್ರವಾದ ವಿಷಾದ ಮತ್ತು ಸಿಟ್ಟನ್ನು ಬಡಿದೆಬ್ಬಿಸಬಲ್ಲ ಕ್ರಿಯಾತ್ಮಕತೆ ಈ ಮಾತುಗಳಲ್ಲಿ ಕಂಡು ಬರುವುದಿಲ್ಲ. ಲಂಚಾವತಾರ, ನಡುಬೀದಿನಾರಾಯಣ'ದ ಶೈಲಿಯ ಮಾತುಗಾರಿಕೆ ಇಂತಹ ನಾಟಕಗಳಿಗೆ ಹೊಂದುವುದಿಲ್ಲ; ಆವೇಶ ಉದ್ವಿಗ್ನತೆಯ ಅತಿರೇಕದಿಂದಾಗಿಯೂ ಈ ಬಗೆಯ ಮಾತುಗಾರಿಕೆ ತನ್ನ ಶಕ್ತಿ ಕಳೆದುಕೊಳ್ಳುತ್ತದೆ. ನಾಟಕದ ಕೇಂದ್ರ ಪಾತ್ರವೆನ್ನಬಹುದಾದ ಕಮಲಮ್ಮನ ಪಾತ್ರರಚನೆಯಲ್ಲಿ ನಾಟಕಕಾರರು ತೋರಿಸಿರುವ ಸಂಯಮವನ್ನು ಉಳಿದ ಪಾತ್ರ ಮತ್ತು ಸನ್ನಿವೇಶ ನಿರೂಪಣೆಯಲ್ಲಿಯು ತೋರಿಸಲು ಸಾಧ್ಯವಾಗಿದ್ದಿದ್ದರೆ ಜಯಪ್ರಕಾಶ ಮಾವಿನ ಕುಳಿಯವರ 'ಮಹಾಯಾತ್ರೆ'ಯ ನಾಟಕೀಯತೆ ಧ್ವನಿ ಪೂರ್ಣವಾಗಿರುತ್ತಿತ್ತು.

ಚಂದ್ರಪ್ರಭ ಕಠಾರಿಯವರ 'ಅಂಬು' ಬೀದಿನಾಟಕಕ್ಕೆ ಉಚಿತವಾದ ಕೃತಿ. ಅಂಬು ಎಂಬ ಬಾಲಕನು ಬೆಳೆದು ದೊಡ್ಡವನಾಗಿ ಕಾಲೇಜು ವಿದ್ಯಾಭ್ಯಾಸ ಮುಗಿಸುವ ತನಕ ಕಥಾವಿಸ್ತಾರವಿದೆ. ಹತ್ತಿಪ್ಪತ್ತು ವರ್ಷಗಳ ಅವನ ಬದುಕಿನಲ್ಲಿ ಕುಟುಂಬ, ಶಾಲೆ, ಕಾಲೇಜು, ಸುತ್ತಣ ಸಮಾಜಗಳು ಅವನ ಮೇಲೆ ಬೀರಿದ ಪ್ರಭಾವ, ಅವನು ಪರಿಸರಕ್ಕೆ ತೋರಿದ ಪ್ರತಿಕ್ರಿಯೆಗಳನ್ನೆಲ್ಲಾ ಬಿಡಿಬಿಡಿಯಾದ ದೃಶ್ಯಗಳಲ್ಲಿ ಸಡಿಲವಾಗಿ ನಿರೂಪಿಸುವ ಪ್ರಯತ್ನವಿದು. ಕಾನ್ವೆಂಟ್ ಶಾಲೆಗಳ ಶೋಷಣೆ, ಡೊನೇಷನ್ ಕಾಲೇಜುಗಳ ಹಾವಳಿ, ಕಾಲೇಜು ಚುನಾವಣೆಗಳ ಹಿಂಸಾಚಾರ, ರ‍್ಯಾಗಿಂಗ್ ಹಾವಳಿ, ಪರೀಕ್ಷೆಗಳಿಗೆ ಒದಗಿರುವ ದುರ್ಗತಿ, ಭ್ರಷ್ಟ ಅಧ್ಯಾಪಕರು, ಪಿತೂರಿಕೋರ ರಾಜಕಾರಣಿಗಳು– ಹೀಗೆ ನಾಟಕಕಾರರು ತಮ್ಮ ಚಿಕ್ಕನಾಟಕದ ವ್ಯಾಪ್ತಿಯ ತೆಕ್ಕೆಗೆ ತರಬಯಸುವ ವಸ್ತು ವಿಷಯವನ್ನು ಒಂದೇ ನಾಟಕದಲ್ಲಿ ಹೇಳುವ ಆತುರದಿಂದಾಗಿ ಅದೊಂದು ವರದಿಯಾಗಿರುವುದರಿಂದ ಅಲ್ಲಿ ನಾಟಕದ ಮುಖ್ಯ ಅಂಶಗಳಾದ ಕಾಲ, ಸ್ಥಳ, ಕ್ರಿಯೆಯ ಸುಸಂಬದ್ಧ ಹೊಂದಾಣಿಕೆಯೇ ಇಲ್ಲವಾಗಿದೆ. ಅಂಬುವೂ ಸೇರಿದಂತೆ ಯಾವ ಪಾತ್ರವೂ ಮನಸ್ಸಿನಲ್ಲಿ ಅಚ್ಚೊತ್ತಿದಂತೆ ಉಳಿಯುವುದಿಲ್ಲ. ಸಮಾಜದ ಅವನತಿಯನ್ನು ಕುರಿತ ಉತ್ಕಟತೆ, ಭಾವೋದ್ವೇಗಗಳಿಂದಲೇ ಒಂದು ನಾಟಕವನ್ನು ರಚಿಸಲಾಗುವುದಿಲ್ಲವೆಂಬುದನ್ನು ಈ ನಾಟಕ ಸ್ಪಷ್ಟಪಡಿಸುತ್ತಿದೆ.

ಜಿ. ಬಾಲಕೃಷ್ಣಯ್ಯನವರು ಮೂರು ನಾಟಕಗಳನ್ನು ಈ ವರ್ಷ ಪ್ರಕಟಿಸಿದ್ದಾರೆ 'ಥ್ರಿಲ್ ರಾಜಾ ಥ್ರಿಲ್' ಎಂಬ ಅವರ ಹಾಸ್ಯ ನಾಟಕದ ಗುರಿ ಕೇವಲ ಹಾಸ್ಯವಾಗಿರದೆ ಪರಿಶುದ್ಧಸ್ನೇಹದ ಸ್ವರೂಪವನ್ನು ತೋರಿಸಿಕೊಡುವುದು ಆಗಿದೆ. ಮೂರು ಜನ ಸ್ನೇಹಿತರಲ್ಲಿ ಒಬ್ಬ ಸ್ವಾರ್ಥಿ; ಉಳಿದಿಬ್ಬರೂ ಸ್ನೇಹಕ್ಕಾಗಿ ಯಾವ ತ್ಯಾಗಕ್ಕೂ ಸಿದ್ಧವಾಗಿರುವವರು. ಅಂತ್ಯದಲ್ಲಿ ಸ್ವಾರ್ಥಿಗೆ ಸೋಲಾಗಿ ತ್ಯಾಗಮಯಿಗಳು ಭಾರಿ ಶ್ರೀಮಂತರಾಗುತ್ತಾರೆ. ಬಳಿಕ, ಸ್ವಾರ್ಥಿ ಗೆಳೆಯನನ್ನು ಕ್ಷಮಿಸಿ ತಮ್ಮ

ಜೊತೆ ಸೇರಿಸಿಕೊಳ್ಳುತ್ತಾರೆ. ಹೀಗೆ ಆದರ್ಶ ಪ್ರತಿಪಾದನೆ ಚೆನ್ನಾಗಿದೆಯಾದರೂ ಅದನ್ನು ಹೇಳುವ ಕಥೆ ತೀರಾ ಸರಳವಾಗಿದೆ. ಕಪ್ಪು-ಬಿಳಿ ಪಾತ್ರಗಳು. ನಿರೀಕ್ಷಿತ ಬೆಳವಣಿಗೆ ಇರುವ ಸನ್ನಿವೇಶಗಳು. ಕೇಂದ್ರ ವ್ಯಕ್ತಿಯಾದ ರಾಜನಂತೂ ಸಕಲ ಸದ್ಗುಣ ಸಂಪನ್ನ ಮತ್ತು ಅದ್ಭುತ ಹಾಸ್ಯಗಾರ. ದಿನಕ್ಕೊಂದು ಥ್ರಿಲ್ ಕಥೆಗಳನ್ನು ಹೇಳುವ ಅವನ ಹಾಸ್ಯವಂತೂ ಪ್ರಾಸಾನುಪ್ರಾಸಗಳ ಸಾಧಾರಣ ಮಾದರಿಗೆ ಸೇರುವಂತಹುದು. ಸಂಭಾಷಣೆಗಳ ನಡುವೆ ಇಂಗ್ಲೀಷ್ ವಾಕ್ಯಗಳ ಬಳಕೆ ಈ ನಾಟಕದ ಮತ್ತೊಂದು ವಿಶೇಶ. ಆದರೆ ಈ ವಾಕ್ಯಗಳ ಕಾಗುಣಿತದ ತಪ್ಪುಗಳು ಪುಟ ಪುಟದಲ್ಲೂ ಎದುರಾಗುತ್ತವೆ.

'ದೇಶಪಾಶ'ವೆಂಬ ಮತ್ತೊಂದು ನಾಟಕದಲ್ಲಿಯೂ ಜಿ. ಬಾಲಕೃಷ್ಣಯ್ಯನವರು ನಿಷ್ಠಾವಂತ ದೇಶಭಕ್ತನೊಬ್ಬನ ಕಥೆಯನ್ನು ನಿರೂಪಿಸಿದ್ದಾರೆ. ಅವನ ಇಬ್ಬರು ಮಕ್ಕಳೂ ಸ್ವಾರ್ಥಿಗಳಾಗಿ ದಾರಿತಪ್ಪುವರು. ಒಬ್ಬ ವಿಗ್ರಹಚೋರನಾದರೆ ಮತ್ತೊಬ್ಬ ಲಂಚಕೋರ. ಮಕ್ಕಳೆಂಬ ಮಮತೆಯ ಪಾಶವನ್ನು ಹರಿದೊಗೆದು ಇಬ್ಬರಿಗೂ ಸೂಕ್ತ ಶಿಕ್ಷೆಗೆ ಗುರಿಪಡಿಸಲು ಮುಂದಾಗುವ ಮೇಜರ್ ವಿಶ್ವನಾಥನ ದೇಶಪ್ರೇಮವನ್ನು ಹಲವಾರು ದೃಶ್ಯಗಳ ಮೂಲಕ ಈ ನಾಟಕದಲ್ಲಿ ನಿರೂಪಿಸಲಾಗಿದೆ. ಆದರೆ ಈ ಬಗೆಯ ಗಂಭೀರ ಕಥಾವಸ್ತುವಿನ ನಿರೂಪಣೆಗೂ ಹಾಸ್ಯವನ್ನೇ ಆಶ್ರಯಿಸಿರುವುದು ಇಲ್ಲಿನ ವಿಶೇಷ. ಹಾಸ್ಯವು ಸರಳವಾದುದು; ಪ್ರಾಸಾನುಪ್ರಾಸಗಳ ಸಂಭಾಷಣೆಯನ್ನು ಆಶ್ರಯಿಸಿರುವಂತಹದು. ಸಿನಿಮೀಯವಾದ ಪಾತ್ರ ನಿರೂಪಣೆ ಮತ್ತು ಸಂಭಾಷಣೆಗಳು ಬಾಲಕೃಷ್ಣಯ್ಯನವರ ಎರಡೂ ನಾಟಕಗಳಲ್ಲಿ ಕಂಗೊಳಿಸುತ್ತವೆ.

ಬಾಲಕೃಷ್ಣಯ್ಯನವರ ನಾಟಕಗಳಲ್ಲಿ 'ಕಾಡಚ್ಚಿ' ಸ್ವಲ್ಪ ಮಟ್ಟಿಗೆ ಉತ್ತಮವಾದ ನಾಟಕ. ಗಿರಿಜನ ಸಮುದಾಯವೊಂದರ ಜೀವನ ಚಿತ್ರಣ ಮತ್ತು ಅಲ್ಲಿನ ನಾಯಕತ್ವಕ್ಕಾಗಿ ನಡೆದ ಹೋರಾಟ ಇಲ್ಲಿನ ಕಥಾವಸ್ತು. ನಾಟಕದ ವಸ್ತು ಪಾತ್ರಗಳಲ್ಲಿ ಮತ್ತು ಸಂಭಾಷಣೆಗಳಲ್ಲಿ ಗಿರಿಜನ ಬದುಕಿನ ತಾಜಾ ನಿರೂಪಣೆಯಿದೆ ಎಂಬಂತೆ ಮೇಲು ನೋಟಕ್ಕೆ ಕಂಡರೂ ಒಟ್ಟಾರೆ ನಾಟಕದ ಗುರಿ ಜನಪ್ರಿಯ ಚಲನಚಿತ್ರಕ್ಕೆ ಒಂದು ಕಥಾಚೌಕಟ್ಟನ್ನು ಹೊಂದಿಸುವಂತಿದೆ. ಗಿರಿಜನ ಬುಡಕಟ್ಟಿನಲ್ಲಿಯೂ ನಾಯಕತ್ವವಿರುವುದು, ಅದಕ್ಕಾಗಿ ಸಂಚು ಒಳಸಂಚುಗಳು ನಮ್ಮ ಸಮಕಾಲೀನ ರಾಜಕೀಯವನ್ನೇ ಹೋಲುವಂತಿವೆ. ನಾಟಕಕಾರರೂ ತಮ್ಮ ಗುರಿ ಸಮಕಾಲೀನ ರಾಜಕೀಯವೆಂದೇ ಹೇಳಿಕೊಂಡಿದ್ದಾರೆ. ಆದರೆ ಅವರು ಆಶ್ರಯಿಸಿದ ಕಥಾವಸ್ತು ಮತ್ತು ನಿರೂಪಣಾ ವಿಧಾನ ಸರಳವಾಗಿದ್ದು ನಾಟಕಕ್ಕೆ ಯಾವ ಧ್ವನಿ ಶಕ್ತಿಯೂ ಇಲ್ಲವಾಗಿದೆ. ಆದರೂ ಜನಪ್ರಿಯವಾಗಬಹುದಾದ ಎಲ್ಲ ನಾಟಕೀಯ ಅಂಶಗಳನ್ನು ಒಳಗೊಂಡಿರುವ ಈ ನಾಟಕ ಕೃತಿಕಾರನ ನಾಟಕ ರಚನಾ ಪ್ರತಿಭೆಯನ್ನು ಸಾಬೀತು ಪಡಿಸಿದೆ.

ಹದಿನಾಲ್ಕು ದೃಶ್ಯಗಳ ಹತ್ತಿಪ್ಪತ್ತು ಪಾತ್ರಗಳನ್ನೊಳಗೊಂಡ 'ಕಾಡಚ್ಚಿ'ಯಲ್ಲಿ ಹೆಣ್ಣು ಪಾತ್ರ ಕೇವಲ ಒಂದೇ ಒಂದು. ಬಾಲಕೃಷ್ಣಯ್ಯನವರ ಉಳಿದೆರಡು ನಾಟಕಗಳಲ್ಲಿ ತಲಾ ಒಂದೊಂದು ಹೆಣ್ಣು ಪಾತ್ರಗಳಿವೆ. ಹವ್ಯಾಸಿ ರಂಗಭೂಮಿಯಲ್ಲಿ ಪ್ರಯೋಗದ ಅನುಕೂಲತೆಗಾಗಿ ಹಾಗೆ ಹೆಣ್ಣು ಪಾತ್ರಗಳ ಸಂಖ್ಯೆಯನ್ನು ಕನಿಷ್ಠ ಪ್ರಮಾಣದಲ್ಲಿಟ್ಟು ಕೊಂಡಿರುವುದು ಸಾಧಾರಣ ಸಂಗತಿಯಾದರೂ ಬದುಕಿನ ಸಹಜ ನಿರೂಪಣೆ ಇದರಿಂದ ಸಾಧ್ಯವಾಗುವುದಿಲ್ಲ. ಆದರೆ ಇಂತಹ ನಾಟಕಗಳು ಆಧುನಿಕ ಹವ್ಯಾಸಿ ರಂಗಭೂಮಿಯ ಜನಪ್ರಿಯ ನಾಟಕಗಳ ಪ್ರಾಯೋಗಿಕ ಇತಿಮಿತಿಗಳನ್ನು ಸೂಚಿಸುತ್ತಿರುವುದು ಗಮನಿಸಬೇಕಾದ ಒಂದು ಅಂಶವೆನ್ನಬಹುದು.

'ರಮ್ಯ ವಸಂತ' ಕೆ. ವಿ. ಪುಲಿಕೇಶಿಯವರ ನಗೆ ನಾಟಕ. ಸಂಪ್ರದಾಯವಾದಿ ಕಂಠೀರಾಯರ ಮಗ ವಸಂತನು ತನ್ನ ತಂದೆಯ ಅಪೇಕ್ಷೆಯಂತೆ ಪುರೋಹಿತರೊಬ್ಬರ ಮಗಳನ್ನು ಮದುವೆಯಾಗದೆ ಆಧುನಿಕ ವಿದ್ಯಾವಂತ ಯುವತಿ ರಮ್ಯಳನ್ನು ಲಗ್ನವಾಗುವ ಕಥಾ ಹಂದರವಿರುವ ಈ ನಾಟಕದ ಮೆಚ್ಚಿಕೊಳ್ಳಬೇಕಾದ ಅಂಶ ಅಲ್ಲಿನ ಚುರುಕಾದ ಜಾಣ ಮಾತುಕತೆ. ಹಾಸ್ಯ ನಿರ್ಮಿತಿಯಲ್ಲಿ ನಿಷ್ಣಾತರಾದ ಈ ನಾಟಕಕಾರರು ಅದಕ್ಕೆ ತಕ್ಕ ಸನ್ನಿವೇಶಗಳನ್ನು ಅತ್ಯಂತ ಸಹಜವಾಗಿ ನಿರ್ಮಿಸಿಕೊಳ್ಳುತ್ತಾರೆ. ನಾಟಕದಲ್ಲಿ ಬರುವ ಏಳು ಪಾತ್ರಗಳೂ ಭಿನ್ನ ವ್ಯಕ್ತಿತ್ವವಿರುವಂತಿದ್ದು ಅವರವರ ಸ್ವಭಾವದ ಓರೆಕೋರೆಗಳನ್ನು ಸಂಭಾಷಣೆಯಲ್ಲಿ ಯಶಸ್ವಿಯಾಗಿ ಮೂಡಿಸಿದ್ದಾರೆ. ಏಳು ದೃಶ್ಯಗಳ ಈ ಚಿಕ್ಕ ನಾಟಕ ದೃಶ್ಯದಿಂದ ದೃಶ್ಯಕ್ಕೆ ಬಹುಸಹಜವಾಗಿ ಬೆಳೆಯುತ್ತಾ ಕೊನೆಯ ದೃಶ್ಯದಲ್ಲಿ ಅನಿರೀಕ್ಷಿತ ತಿರುವು ಪಡೆಯುವುದು ಸೊಗಸಾಗಿದೆ. ಮಧ್ಯಮ ವರ್ಗದ ಕುಟುಂಬ ಜೀವನವನ್ನು ಅತ್ಯಂತ ಸಹಜವಾಗಿ ನಿರೂಪಿಸಬಲ್ಲ ಈ ಯುವ ನಾಟಕಕಾರ ಬದುಕಿನ ಶೋಧನೆಯನ್ನು ಇನ್ನೂ ಸಂಕೀರ್ಣವಾಗಿ ಮಾಡಲು ಸಾಧ್ಯವಾಗಬೇಕು. ಬಡ ಪುರೋಹಿತರ ಬಗೆಗೆ ಮತ್ತು ಅವರ ಮಗಳ ಬಗೆಗೆ ಈ ನಾಟಕದ ಹಾಸ್ಯ ಉತ್ತಮ ಅಭಿರುಚಿಯ ದ್ಯೋತಕವಲ್ಲ. ಬಡತನ ಮತ್ತು ಕುರೂಪಗಳು ಹಾಸ್ಯಕ್ಕೆ ವಸ್ತುವಾಗುವುದು ನ್ಯಾಯವಲ್ಲ.

'ಎಳೆಯರ ಏಕಾಂಕಗಳು' ಎಂಬ ಐದು ಏಕಾಂಕಗಳ ಸಂಗ್ರಹವನ್ನು ಕಲ್ಲಿನಾಥ್ ಎನ್. ಕಾತ್ರಾಳೆಯವರು ಪ್ರಕಟಿಸಿದ್ದಾರೆ. ಒಂದು ಐತಿಹಾಸಿಕ, ಎರಡು ಪೌರಾಣಿಕ, ಎರಡು ಸಾಮಾಜಿಕ ವಸ್ತುಗಳನ್ನು ಹೊಂದಿರುವ ಈ ಏಕಾಂಕಗಳಿಗೆ 'ಎಳೆಯರ ಏಕಾಂಕ'ವೆಂದು ಕರೆದಿರುವ ಔಚಿತ್ಯ ಸ್ಪಷ್ಟವಾಗುವುದಿಲ್ಲ. ಸರಳ ಪಾತಳಿಯ ಮೇಲೆ ನಿರೂಪಿತವಾಗಿವೆ ಎಂಬುದರಿಂದ ಹೀಗೆ ಕರೆದಿರಬಹುದಾದರೂ ಎಲ್ಲ ನಾಟಕಗಳ ವಸ್ತು ವಯಸ್ಕರಿಗೇ ಸಂಬಂಧಿಸಿದೆ. ಯಾವ ವಿನೂತನ ಬದಲಾವಣೆಗೂ ಕೈಹಾಕದೆ ತಮಗೆ ದೊರೆತ ಇತಿಹಾಸ ಮತ್ತು ಪುರಾಣ ಮಾಹಿತಿಯನ್ನು ಸಂವಾದ ರೂಪದಲ್ಲಿ ನಿರೂಪಿಸಿರುವುದೇ ನಾಟಕಗಳ

ಸಾಧ್ಯವೆನ್ನಬಹುದು. 'ಜಾಣ ನರ್ತಕಿ' ಎಂಬ ನಾಟಕದ ಹೆಸರಿನ ಔಚಿತ್ಯ ಅರ್ಥಹೀನವಾಗಿದೆ. ನರ್ತನವನ್ನು ಮೆಚ್ಚಿ ಕೇಳಿದ್ದನ್ನು ನರ್ತಕಿಗೆ ಕೊಡಬಯಸುವ ಅಕ್ಬರ್ ಮತ್ತು ರಾಜನ ಮುಂದಾಲೋಚನೆಯಿಲ್ಲದ ಕೊಡುಗೆಯನ್ನು ದುರುಪಯೋಗಪಡಿಸಿಕೊಂಡು ಅವನ ಸಿಂಹಾಸನದ ಮೇಲೆ ಉಗುಳುವ ಬಯಕೆಯನ್ನು ಕೇಳಿದ ನರ್ತಕಿಯರಿಬ್ಬರೂ ಮೂರ್ಖರು. ಈ ತೊಡಕನ್ನು ಜಾಣತನದಿಂದ ಬಿಡಿಸಿದನು ಬೀರಬಲ್. ಆದರೆ ಜಾಣತನದ ಬಿರುದನ್ನು ನಾಟಕಕಾರರು ಮೂರ್ಖ ನರ್ತಕಿಗೆ ದಯಪಾಲಿಸಿದ್ದಾರೆ.

'ನಕಲಿ ವೈದ್ಯ' ನೊಬ್ಬನ ಅವಾಂತರವನ್ನು ಹಾಸ್ಯದ ಮೂಲಕ ಗೇಲಿಮಾಡುವ ಒಂದು ನಾಟಕದಲ್ಲಿ ಹಾಸ್ಯವೂ ಇಲ್ಲ; ಇದರಿಂದ ಯಾರಿಗೆ ಮನರಂಜನೆಯಾಗುತ್ತದೆ ಎಂಬುದು ಗೊತ್ತಾಗುವುದಿಲ್ಲ. ಖೂಳನೊಬ್ಬನನ್ನು ಹಾಸ್ಯಗಾರನಂತೆ ಚಿತ್ರಿಸುವುದು ಸರಿಯಲ್ಲ. ಉಳಿದ ನಾಟಕಗಳು ಇದೇ ಮಾದರಿಗೆ ಸೇರಿದ್ದು ವಿಶೇಷ ಗಮನಕ್ಕೆ ಪಾತ್ರವಾಗುವುದಿಲ್ಲ.

'ಭಕ್ತಿ ರೂಪಕ' ವೆಂಬುದು ಐದು ಪೌರಾಣಿಕ ಕಿರುನಾಟಕಗಳ ಸಂಕಲನ ಶಾಲೆಯೊಂದರಲ್ಲಿ ಅಧ್ಯಾಪಕ ವೃತ್ತಿಯಲ್ಲಿರುವ ಸಿ. ಎಚ್. ಲಕ್ಷ್ಮಿಯವರು ಈ ನಾಟಕಗಳ ರಚನೆಗೆ ಹೇಳಿಕೊಂಡಿರುವ ಕಾರಣ ಸ್ವಾರಸ್ಯಕರವಾಗಿದೆ. ಪ್ರತಿ ವರ್ಷವೂ ಶಾಲಾ ವಾರ್ಷಿಕೋತ್ಸವಕ್ಕಾಗಿ ನಾಟಕ ಆಡಿಸುವ ಹೊಣೆ ಹೊತ್ತ ಕಾರಣದಿಂದಾಗಿ ನಾಟಕ ರಚನೆಗೆ ತೊಡಗಿ ಈ ಕಿರು ನಾಟಕಗಳನ್ನು ಅವರು ಬರೆದರಂತೆ. ಮಹಾಭಾರತ, ಭಾಗವತಗಳಂತಹ ಪ್ರಾಚೀನ ಮೂಲಗಳಿಂದ ಎತ್ತಿಕೊಂಡ ಕರ್ಣ, ಸುದಾಮ, ಬಲಿ ಚಕ್ರವರ್ತಿ, ಅಂಬರೀಷ ಮತ್ತು ಸ್ಯಮಂತಕಮಣಿ ಪ್ರಸಂಗದಂತಹ ಕಥೆಗಳನ್ನು ನಾಟಕ ರೂಪದಲ್ಲಿ ಪರಿಚಯ ಮಾಡಿಕೊಡಲಾಗಿದೆ. ಪರಿಚಯಾತ್ಮಕ ಗುರಿಯನ್ನು ಲೇಖಕಿ ಸಾಧಿಸಿರುವರಾದರೂ ಪುರಾಣ ಕಥೆಯೊಂದರ ಧ್ವನಿಶಕ್ತಿಯನ್ನು ಹಿಡಿದು ಸಮಕಾಲೀನ ಸಂದರ್ಭಕ್ಕೆ ಪ್ರಸಕ್ತಗೊಳಿಸಲು ಅವರು ಪ್ರಯತ್ನಿಸಿಲ್ಲ. ಪುರಾಣ ಜಗತ್ತಿನ ಕೇವಲ ಪರಿಚಯವನ್ನು ಇನ್ನೂ ಉಜ್ವಲವಾಗಿ ವರ್ಣರಂಜಿತವಾಗಿ ಮಾಡಿಕೊಡುವ ಯಕ್ಷಗಾನಗಳಿಗೆ ಹೋಲಿಸಿದರೆ ಇಲ್ಲಿನ ಕಿರುನಾಟಕಗಳು ಪೇಲವವಾಗುತ್ತವೆ. ಹವ್ಯಾಸಿ ರಂಗಭೂಮಿಯಲ್ಲಿ ಕೇವಲ ಪರಿಚಯದ ಗುರಿಯುಳ್ಳ ಸಾವಿರಾರು ನಾಟಕಗಳ ಮಾದರಿಗಳೂ ಸಿಗುತ್ತವೆ. ಆದರೂ ನಮ್ಮ ಪರಂಪರೆಯ ಪರಿಚಯದ ಸೀಮಿತ ಗುರಿಯೂ ಸ್ವಾಗತಾರ್ಹವೇ ಎನ್ನಬಹುದು. ಮಕ್ಕಳ ಮಟ್ಟಿಗಂತೂ ಇದರ ಅಗತ್ಯವನ್ನು ವಿಶೇಷವಾಗಿ ಗುರುತಿಸಬೇಕಾಗುತ್ತದೆ.

ಈ ವರ್ಷದ ಸಮೀಕ್ಷೆಗಾಗಿ ನಮಗೆ ದೊರಕಿರುವ ಕೃತಿಗಳಲ್ಲಿ ನಾಲ್ಕು ಅನುವಾದಿತ ನಾಟಕಗಳಿವೆ. ಶೂದ್ರಕನ 'ಮೃಚ್ಛಕಟಿಕ'ವನ್ನು ಪ್ರೊ. ಜಿ. ಚಂದ್ರಶೇಖರರು ಅಲ್ಪ ಸ್ವಲ್ಪ ಬದಲಾವಣೆಗಳೊಡನೆ ಅನುವಾದಿಸಿದ್ದಾರೆ. ಸುಲಲಿತವಾದ

ಆದರೆ ಗ್ರಾಮೀಣವಲ್ಲದ ಆಡುಮಾತಿನ ಶೈಲಿಯಲ್ಲಿರುವ ಈ ಅನುವಾದ, ಪ್ರದರ್ಶನ ದೃಷ್ಟಿಯಿಂದ ಅತ್ಯಂತ ಸಮರ್ಪಕವಾಗಿದೆ. 'ಮಣ್ಣಿನ ಬಂಡಿ'ಯ ವಸ್ತು ಎರಡು ಸಾವಿರ ವರ್ಷಗಳಷ್ಟು ಹಳೆಯದಾದರೂ ಅದರ ಪ್ರಸ್ತುತತೆ ನಿತ್ಯನೂತನವಾದುದು. ಆದುದರಿಂದ ಹಲವಾರು ಭಾರತೀಯ ಭಾಷೆಗಳಿಗೆ ಮತ್ತೆ ಮತ್ತೆ ಅನುವಾದಗೊಳ್ಳುತ್ತಿದೆ. ಕನ್ನಡದಲ್ಲಿಯೇ ಹತ್ತೊಂಬತ್ತನೆ ಶತಮಾನದಿಂದ ಇಂದಿನವರೆಗೆ ಹತ್ತಾರು ಅನುವಾದಗಳಿವೆ. ಪ್ರೊ. ಚಂದ್ರಶೇಖರ್ ಅವರ 'ಮಣ್ಣಿನ ಬಂಡಿಯ' ಮುಖಪುಟ ಅಥವಾ ಮತ್ತಾವ ಕಡೆಯಲ್ಲಿಯೂ ಶೂದ್ರಕನ ಉಲ್ಲೇಖವೇ ಇಲ್ಲದಿರುವುದು ಅಚ್ಚರಿ ಹುಟ್ಟಿಸುವ ಸಂಗತಿಯಾಗಿದೆ.

ಭೀಷ್ಮ ಸಾಹನಿಯವರ ಹಿಂದಿ ನಾಟಕ 'ಮಾಧವಿ'ಯನ್ನು ಗೊರೂರು ಶ್ರೀನಿವಾಸಮೂರ್ತಿಯವರು ಕನ್ನಡಿಸಿದ್ದಾರೆ. ಪುರಾಣ ಕಾಲದ ಕಥಾವಸ್ತುವಿನ ಮೂಲಕ ಸ್ತ್ರೀ ಶೋಷಣೆಯ ಆಯಾಮಗಳನ್ನು ಈ ನಾಟಕ ಮುಂದಿಡುತ್ತದೆ. ಗಾಲವ, ಯಾಯಾತಿ, ವಿಶ್ವಾಮಿತ್ರರ ಪುರುಷ ಪ್ರತಿಷ್ಠೆ ಮೆರೆಸಲು ಮಾಧವಿಯಂತಹ ಹೆಣ್ಣು ಕೇವಲ ಸಾಧನವಾಗುವ ಕರುಣಾಜನಕ ಕಥೆಯನ್ನು ಅತ್ಯಂತ ನಾಟಕೀಯವಾಗಿ ಭೀಷ್ಮ ಸಾಹನಿಯವರು ನಿರೂಪಿಸಿದ್ದಾರೆ. ಪುರಾಣ ವಸ್ತುವನ್ನು ಹೊಸಕಾಲದ ನೂತನ ದೃಷ್ಟಿಯ ನೆಲೆಯಿಂದ ಅರ್ಥವಿಸುವ ಅವರ ಪ್ರಯತ್ನ ಯಶಸ್ವಿಯಾಗಿದೆ. ಸಮಕಾಲೀನವಾಗಿಯೂ ಪ್ರಸಕ್ತವಾಗಬಹುದಾದ ಈ ನಾಟಕವನ್ನು ಗೊರೂರು ಶ್ರೀನಿವಾಸ ಮೂರ್ತಿಯವರು ಸಮರ್ಥವಾಗಿ ಅನುವಾದಿಸಿದ್ದಾರೆ. ಮೂಲದ ಅರ್ಥವಂತಿಕೆಯನ್ನು ಅನುವಾದವು ಚೆನ್ನಾಗಿ ಗ್ರಹಿಸಿರುವುದರಿಂದಲೇ ನಾಟಕದ ಭಾಷಾ ಶೈಲಿ ಅತ್ಯಂತ ಸಹಜವಾಗಿದೆ. ಪ್ರಾಚೀನ ಗ್ರೀಕ್ ನಾಟಕಕಾರ ಈಸ್ಕಿಲಸ್‌ನ ಸುಪ್ರಸಿದ್ಧ 'ಒರೆಸ್ಟಿಯನ್ ಮುಕ್ಕೂಟ ನಾಟಕ' ಗಳ ಎರಡು ನಾಟಕಗಳನ್ನು ಸಿ. ಪಿ. ಕೆ ಯವರು ಕನ್ನಡಕ್ಕೆ ವಿದ್ವತ್‌ಪೂರ್ಣವಾಗಿ ಅನುವಾದಿಸಿದ್ದಾರೆ. ಈಗಾಗಲೇ ಒಂದು ನಾಟಕವನ್ನು (ಅಗೆಮೆಮ್ನಾನ್) ಅನುವಾದಿಸಿದ್ದ ಅವರು ಉಳಿದೆರಡು ನಾಟಕಗಳನ್ನು (ತರ್ಪಣಧಾರಿಗಳು, ಮಂಗಳದೇವಿಯರು) ಈಗ ಅನುವಾದಿಸಿದ್ದಾರೆ. ಕ. ವೆಂ. ರಾಘವಾಚಾರ್ಯರ ಪರಂಪರೆಯ ಮಾದರಿಗಳಾಗಿರುವ ಸಿ. ಪಿ. ಕೆ. ಯವರ ಅನುವಾದದ ಭಾಷಾಶೈಲಿ ಓದಿಗೆ ಒಗ್ಗುವಂತೆ ಪ್ರದರ್ಶನಕ್ಕೆ ಹೊಂದಲಾರದೆಂಬ ಸಂದೇಹವಿದೆ.

# ವಿಮರ್ಶೆ

ಓ. ಎಲ್. ನಾಗಭೂಷಣ ಸ್ವಾಮಿ

ಸಾಮಾನ್ಯವಾಗಿ ಪ್ರತಿವರ್ಷದ ಸಾಹಿತ್ಯ ವಿಮರ್ಶೆಯ ಸ್ವರೂಪಗಳು ಹಲವು ರೀತಿಯಲ್ಲಿ ಚದುರಿಹೋಗಿರುತ್ತವೆ. ನಿಯತಕಾಲಿಕೆಗಳ ಲೇಖನಗಳು, ವಿಚಾರಸಂಕಿರಣದ ಲೇಖನಗಳು, ಪುಸ್ತಕಗಳು, ವಾಗ್ವಾದಗಳು– ಇವೆಲ್ಲವೂ ಸಾಮಾನ್ಯವಾಗಿ ವಿಮರ್ಶೆಯ ಒಂದು ಭಾಗವಾಗುತ್ತವೆ. ಒಂದು ವರ್ಷದ ವಿಮರ್ಶೆಯೆನ್ನುವುದು ಹಾಗೆ ನೋಡಿದರೆ – ಹಿಂದಿನ ಅನೇಕ ಚಿಂತನೆಗಳು, ವಾಗ್ವಾದಗಳ ಬೆಳವಣಿಗೆಯೇ ಆಗಿರುತ್ತದೆ. ಇವೆಲ್ಲವನ್ನೂ ಒಟ್ಟು ನೋಟದಲ್ಲಿ ಗಮನದಲ್ಲಿಟ್ಟು ಕೆಲವು ಮುಖ್ಯ ಕೃತಿಗಳನ್ನು ವಿವರವಾಗಿ ಪರಿಶೀಲಿಸಿ, ಸಾಹಿತ್ಯ ವಿಮರ್ಶೆಯ ನೆಲೆಗಳನ್ನು ಗುರುತಿಸುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

ಯಾವುದೇ ವರ್ಷದ ವಿಮರ್ಶೆಯ ಚಟುವಟಿಕೆಯು ಗಂಭೀರ ಸಾಹಿತ್ಯ ವಿಮರ್ಶೆಯಿಂದ ಹಿಡಿದು ಸಾಹಿತ್ಯ ಸಹೃದಯಾಭಿರುಚಿಯನ್ನು ಹುಟ್ಟಿಸುವ ಪರಿಚಯದವರೆಗೂ ಹರಡಿರುತ್ತದೆ. ಈ ದೃಷ್ಟಿಯಿಂದ ಗಮನಿಸಿದಾಗ ವಿಮರ್ಶೆ ಎನ್ನುವ ವಿಭಾಗಕ್ಕೆ ಅಸಂಖ್ಯ ಗ್ರಂಥಗಳು ಬಂದು ಸೇರುತ್ತವೆ.

ಮುಖ್ಯವಾಗಿ ಗಮನಿಸಿದಾಗ ವಿಮರ್ಶೆಯ ಪುಸ್ತಕವೊಂದರ ಸಂಯೋಜನೆಯಲ್ಲಿ ಅಂಥ ವ್ಯತ್ಯಾಸವೇನೂ ಕಂಡು ಬರುವುದಿಲ್ಲ. ಬೇರೆ ಬೇರೆ ವಿಚಾರಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳು ಅಥವಾ ಬೇರೆ ಬೇರೆ ಎಡೆಗಳಲ್ಲಿ ಪ್ರಕಟವಾದ ಲೇಖನಗಳನ್ನು ಒಂದೆಡೆ ಸೇರಿಸಿದ ಪುಸ್ತಕಗಳೇ ಹೆಚ್ಚಾಗಿವೆ. ಇದಕ್ಕೆ ವಿರುದ್ಧವಾದದ್ದು ಸಾಹಿತ್ಯಕ ವಿಷಯದಲ್ಲಿ ಪಿ. ಎಚ್. ಡಿ. ಸಂಪ್ರಬಂಧವನ್ನು ರಚಿಸಿ, ಅದನ್ನು ಅಲ್ಪ ಸ್ವಲ್ಪ ಪರಿಷ್ಕರಿಸಿ ಪ್ರಕಟಿಸುವ ವಿಧಾನ. ಅಂಥ ಒಂದು ಕೃತಿಯೂ ೯೧ರಲ್ಲಿ ಪ್ರಕಟವಾಗಿದೆ. ಮೂರನೆಯ ರೀತಿಯ ಪುಸ್ತಕವೆಂದರೆ ವಿಮರ್ಶಕ ತನಗೆ ಪ್ರಿಯವಾದ ಕವಿ, ಕೃತಿ ಅಥವಾ ಪ್ರಕಾರವೊಂದನ್ನು ಆಯ್ದುಕೊಂಡು, ತನ್ನ ಆಯ್ಕೆಯ ವಿಷಯವನ್ನು ಸಾಧ್ಯವಾದಷ್ಟು ಸಮಗ್ರವಾಗಿ ವಿವೇಚಿಸಿ ಬರೆಯುವ ವಿಧಾನ. ಇಂಥ ಬರವಣಿಗೆ ಕನ್ನಡದಲ್ಲಿ ಕಡಮೆ. ಈ ಬಗೆಯ ಕೃತಿಗಳೂ ಕೆಲವು ೯೧ ರಲ್ಲಿ ಬಂದಿವೆ. ಸಾಹಿತ್ಯವನ್ನು ಅಥವ ವಿಮರ್ಶೆಯ ಚಟುವಟಿಕೆಯನ್ನೇ ತಾತ್ವಿಕ ನೆಲೆಯಲ್ಲಿ ವಿವೇಚಿಸುವ ವಿಶ್ಲೇಷಿಸುವ

ರೀತಿ ಕನ್ನಡದಲ್ಲಿ ಎಂದು ಕಡಮೆಯೇ. ಆ ಕೊರತೆ ಕಳೆದ ವರ್ಷವೂ ಮುಂದುವರೆದಿದೆ. ನೇರವಾಗಿ ಸಾಹಿತ್ಯ ವಿಮರ್ಶೆಯೆಂದು ಗುರುತಿಸಲಾಗದ ಆದರೆ ಸಾಹಿತ್ಯ ವಿಮರ್ಶೆಗೆ ಪೂರಕವಾಗುವಂಥ ಸಂದರ್ಭಗ್ರಂಥಗಳು ಕೂಡ ೯೧ರಲ್ಲಿ ಬಂದಿವೆ.

ಈ ಹಿನ್ನೆಲೆಯಲ್ಲಿ ನೋಡಿದರೆ ೯೧ರ ಕನ್ನಡ ಸಾಹಿತ್ಯ ವಿಮರ್ಶೆ ವ್ಯಾಖ್ಯಾನ ಮತ್ತು ವಿವರಣೆಗಳ ಅಚ್ಚನ್ನು ಮೀರಿದೆ ಎನ್ನಿಸುವುದಿಲ್ಲ. ಆದರೆ ಮೌಲ್ಯ ಮಾಪನದ ಸಲುವಾಗಿ ಕೇವಲ ಸಾಹಿತ್ಯಕ ಗುಣವನ್ನಷ್ಟೇ ಆಧಾರವಾಗಿಟ್ಟುಕೊಳ್ಳದೆ ಸಾಮಾಜಿಕ ಪ್ರಸ್ತುತತೆಯನ್ನೂ ಪರಿಗಣಿಸುವ ಧೋರಣೆ ಬೆಳೆಯುತ್ತಿರುವುದನ್ನು ಕಾಣಬಹುದು. ವಿಮರ್ಶೆಯ ಸಂವಾದದಲ್ಲಿ ಸಾಹಿತ್ಯೇತರ ಅಂಶಗಳನ್ನು ಅಳವಡಿಸಿಕೊಳ್ಳುವ, ಆದರೆ ಸಾಹಿತ್ಯಕತೆಯನ್ನು ಬಿಟ್ಟುಕೊಡದಂತಿರುವ ಹಾಳತವನ್ನು ಸಾಧಿಸುವ ಪ್ರಯತ್ನ ೯೧ರ ವಿಮರ್ಶೆಯ ಬರವಣಿಗೆಗಳಲ್ಲಿ ಕಾಣುತ್ತದೆ.

೨

೯೧ ರ ಬಹುಮುಖ್ಯ ವಿಮರ್ಶಾ ಕೃತಿಯೆಂದರೆ ಜಿ. ಎಸ್. ಆಮೂರರ 'ಭುವನದ ಭಾಗ್ಯ'. ಇದು ಆಮೂರರ ಅತ್ಯಂತ ಮಹತ್ವಾಕಾಂಕ್ಷೆಯ ಕೃತಿಯೂ ಹೌದು. ಕನ್ನಡದ ಒಬ್ಬ ಸಾಹಿತಿಯ ಬಗ್ಗೆ ಇಷ್ಟು ವ್ಯಾಪಕವಾದ ಸಮೀಕ್ಷೆ ನಡೆದಿರುವುದು ಬಹಳ ಅಪರೂಪದ ಸಂಗತಿ. ನಾಲ್ಕು ಭಾಗಗಳಲ್ಲಿ ಇಪ್ಪತ್ತೈದು ಅಧ್ಯಾಯಗಳಲ್ಲಿ ಬೇಂದ್ರೆಯವರ ಸಮಗ್ರ ಸಾಹಿತ್ಯದ ಸಮೀಕ್ಷೆ ನಡೆದಿದೆ. ಬೇಂದ್ರೆಯವರ ಸಾಹಿತ್ಯವನ್ನು "ಅದರ ಚಾರಿತ್ರಿಕ ಸಂದರ್ಭದಲ್ಲಿಟ್ಟು ಇಡಿಯಾಗಿ ನೋಡುವ' ಪ್ರಯತ್ನ ಇಲ್ಲಿ ನಡೆದಿದೆ. ಬೇಂದ್ರೆಯವರ ಸಮಗ್ರ ಸಾಧನೆಯ ಪರಿಪ್ರೇಕ್ಷೆಯಲ್ಲಿ ಆಮೂರರು ನಮ್ಮ ವಿಮರ್ಶಕರಲ್ಲಿ ಗೃಹೀತರಾಗಿರುವ ಅನೇಕ ಅಭಿಪ್ರಾಯಗಳನ್ನು ಪುನರ್ ಪರಿಶೀಲನೆಗೆ ಒಳಪಡಿಸಿದ್ದಾರೆ. ಅರಳು ಮರಳಿನ ನಂತರದ ಕವಿ ಕವಿಯೇ ಅಲ್ಲ ಎಂಬುದು ಅಂಥ ಗೃಹೀತಗಳಲ್ಲಿ ಒಂದು. ಕಾಲಕ್ರಮ ಮತ್ತು ವಸ್ತು ಕ್ರಮಗಳೆರಡನ್ನೂ ಒಳಗೊಂಡಂಥ ನಿರೂಪಣಾ ವಿಧಾನವನ್ನು ಆಮೂರರು ಆಯ್ಕೆ ಮಾಡಿಕೊಂಡಿರುವುದರಿಂದ ಬೇಂದ್ರೆಯವರ ಸಾಹಿತ್ಯದ ವಿಕಾಸದ ಮೂಲ ಸೂತ್ರಗಳನ್ನು ಹಿಡಿಯಲು ಸಾಧ್ಯವಾಗಿದೆ. ಜೊತೆಗೆ ಕೃತಿ ನಿಷ್ಠತೆ ಆಮೂರರ ವಿಮರ್ಶೆಯ ಮುಖ್ಯ ಗುಣ. ಆದರಿಂದಾಗಿ ಅವರ ತೀರ್ಮಾನಗಳಿಗೆ ಒಂದು ವಸ್ತು ನಿಷ್ಠ ನೆಲೆ ದೊರೆತಿದೆ. ಇದುವರೆಗೆ ಗಂಭೀರ ಚರ್ಚೆಗೆ ಒಳಗಾಗದಿದ್ದ ಬೇಂದ್ರೆಯವರ ಕಥೆ, ನಾಟಕ, ಅನುವಾದ, ಹರಟೆ ವಿಮರ್ಶೆಗಳೂ ಇಲ್ಲಿ ವಿವೇಚನೆಗೆ ಒಳಗಾಗಿವೆ. ಲೇಖಕನೊಬ್ಬನ ಸಮಗ್ರ ಸಾಹಿತ್ಯದ ಅಧ್ಯಯನಕ್ಕೆ ಆಮೂರರ ಭುವನದ ಭಾಗ್ಯ ಒಂದು ಮಾದರಿಯಾಗುವಂತಿದೆ. ಇಷ್ಟೆಲ್ಲ ಆದರೂ ಅನೇಕ ಕಡೆಗಳಲ್ಲಿ ಬೇಂದ್ರೆಯವರ ಕಾವ್ಯ ಪ್ರಕಾರದ ಅನೇಕ ವಿಶಿಷ್ಟ ಅಂಶಗಳನ್ನು ಆಮೂರರು ಇನ್ನಷ್ಟು ಗೃಹಿಸಬೇಕಿತ್ತು ಎಂದು ಅನ್ನಿಸದೇ

ಇರುವುದಿಲ್ಲ. ಹೀಗಾಗಿರುವುದರಿಂದ ಬೇಂದ್ರೆಯವರ ಉತ್ಕೃಷ್ಟ ಕವನಗಳಿಗೂ ಸಾಮಾನ್ಯ ಕವನಗಳಿಗೂ ಅಂತರವನ್ನು ಗ್ರಹಿಸುವಲ್ಲಿ ಒಂದು ಮಿತಿ ಇಲ್ಲಿ ರೂಪುಗೊಳ್ಳುತ್ತದೆ ಎಂದು ಅನ್ನಿಸುತ್ತದೆ.

ಬೇಂದ್ರೆಯವರಿಗೇ ಸಂಬಂಧಿಸಿದ ಇನ್ನೊಂದು ಆಸಕ್ತಿಪೂರ್ಣ ಬರಹ ಗೋಪಾಲಕೃಷ್ಣ ಅಡಿಗರ ಬೇಂದ್ರೆಯವರ ಕಾವ್ಯ. ಇದು ಬೇಂದ್ರೆಯವರ ಉಯ್ಯಾಲೆಯ ಮುನ್ನುಡಿಯಾಗಬೇಕಾಗಿದ್ದ ಬರಹ. ಈಗ ವಿಸ್ತೃತ ರೂಪದಲ್ಲಿ ಪ್ರಕಟವಾಗಿದೆ. ಅಡಿಗರ ಕವಿ–ವಿಮರ್ಶಕ ಒಳನೋಟಗಳು ಬೇಂದ್ರೆ ಅಭ್ಯಾಸಿಗಳಿಗೆ ಉಪಯುಕ್ತವಾಗುವಂತಿವೆ.

ವೆಂಕಟಲಕ್ಷ್ಮಿಯವರ ಕನ್ನಡ ಲೇಖಕಿಯರ ನೆಲೆ ಬೆಲೆಯನ್ನು ಗಮನಿಸುವುದಕ್ಕೆ ಒಂದು ಮುಖ್ಯ ಕಾರಣವೆಂದರೆ ಅದು ಸಮಗ್ರ ಪುಸ್ತಕವಾಗಿ ಯೋಜನೆಗೊಂಡಿದೆ ಎಂಬುದಷ್ಟೆ. ವೆಂಕಟಲಕ್ಷ್ಮಿಯವರು 'ಸಾಮಾನ್ಯ ಓದುಗ'ಳಾಗಿ ಕನ್ನಡ ಲೇಖಕಿಯರ ಕೃತಿಗಳಿಗೆ ತಮ್ಮ ಪ್ರತಿಕ್ರಿಯೆಗಳನ್ನು ದಾಖಲಿಸಿದ್ದಾರೆ. ವಿಮರ್ಶೆಯಾಗಿ ತುಂಬ ಮಹತ್ವದ ಬರವಣಿಗೆಯಲ್ಲ. ಆದರೂ ಬರವಣಿಗೆಯ ಹಿಂದಿನ ಪ್ರಾಮಾಣಿಕತೆ ಗಮನ ಸೆಳೆಯುತ್ತದೆ.

ಟಿ. ಪಿ. ಅಶೋಕ ಅವರ 'ಸಾಹಿತ್ಯ–ಸಂದರ್ಭ' ಹದಿನೆಂಟು ಲೇಖನಗಳು ಸಂಗ್ರಹ. ವಿಮರ್ಶೆಯನ್ನೇ ಅಭಿವ್ಯಕ್ತಿಯ ಮುಖ್ಯ ಮಾಧ್ಯಮವಾಗಿ ಪರಿಗಣಿಸಿರುವ ಇಂದಿನ ತಲೆಮಾರಿನ ಲೇಖಕರಲ್ಲಿ ಅಶೋಕ ಅವರದು ಮುಖ್ಯ ಹೆಸರು. ಆಧುನೀಕರಣ, ಮತ್ತು ವಸಾಹತುಶಾಹಿ ಅನುಭವದ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಪಡೆದ ರೂಪಾಂತರಗಳನ್ನು ಪರಿಶೀಲಿಸುವುದು ಅವರ ಈಚಿನ ಬರವಣಿಗೆಯ ಮುಖ್ಯ ಆಸಕ್ತಿಯಾಗಿದೆ. ಈ ಪುಸ್ತಕದ ಲೇಖನಗಳಲ್ಲಿ ಹೆಚ್ಚಿನಂಶ ಕಥಾ ಸಾಹಿತ್ಯದ ಪರಿಶೀಲನೆಗೆ ಮೀಸಲಾಗಿದೆ. ಆಲನಹಳ್ಳಿಯವರ ಬರವಣಿಗೆಯನ್ನು ಕನ್ನಡ ಕಾದಂಬರಿ ಪರಂಪರೆಯಲ್ಲಿ ಹಿನ್ನೆಲೆಯಲ್ಲಿ ಗಮನಿಸುವ ಲೇಖನ ಮತ್ತು ಶಾಂತಿನಾಥ ದೇಸಾಯಿ ಅವರ ಕಥೆಗಳನ್ನು ಕುರಿತ ಲೇಖನಗಳು ಅಶೋಕ ಅವರ ವಿಮರ್ಶೆಯ ಸ್ವರೂಪವನ್ನು ಮನದಟ್ಟು ಮಾಡಿಕೊಡುತ್ತವೆ. ಅಶೋಕ ಅವರದು ಕೃತಿನಿಷ್ಠ ಮತ್ತು ಸಂದರ್ಭ ನಿಷ್ಠ ವಿಮರ್ಶೆ. ಕೃತಿನಿಷ್ಠವಾಗಿ ಕೃತಿಯ ಮುಖ್ಯಾಂಶಗಳನ್ನೆಲ್ಲ ಸಂಗ್ರಹಿಸಿ ಹೇಳುವುದರಿಂದ ಕೃತಿಯನ್ನು ಓದದವರಿಗೂ ಉಪಯೋಗವಾಗುತ್ತದೆ. ಅಶೋಕ ಅವರ ತೀರ್ಮಾನಗಳಿಗೆ ಕಾರಣಗಳು ಹೊಳೆಯುತ್ತವೆ. ಸಂದರ್ಭನಿಷ್ಠರೂ ಆದುದರಿಂದ ಅವರ ವಿಮರ್ಶೆ ಕೇವಲ ಸಾಹಿತ್ಯವಾಗದೆ ಸುತ್ತಲ ಬದುಕನ್ನು ಅವರು ಗ್ರಹಿಸಿದ ರೀತಿಯನ್ನು ನಮ್ಮ ಮುಂದಿಡುತ್ತದೆ.

ಕನ್ನಡ ಹಿರಿಯ ಕವಿಗಳಾದ ಪು. ತಿ. ನರಸಿಂಹಾಚಾರ್ ಅವರ ಕಾವ್ಯಗಳನ್ನು ಕುರಿತು ಈ ವರ್ಷ ಎರಡು ಗ್ರಂಥಗಳು ಬಂದಿವೆ. ಪು. ತಿ. ನ ಅವರ

'ಶ್ರೀಹರಿ ಚರಿತೆ' ಯನ್ನು ಕುರಿತ ಲೇಖನಗಳ ಸಂಕಲನ ಒಂದಾದರೆ, ಎಸ್. ಎಸ್. ವೇಣುಗೋಪಾಲರಾವ್ ಅವರ ಪಿ. ಎಚ್. ಡಿ. ಮಹಾಪ್ರಬಂಧವೂ ಎರಡು ಸಂಪುಟಗಳಲ್ಲಿ ಪ್ರಕಟವಾಗಿದೆ. ವೇಣುಗೋಪಾಲರಾವ್ ಅವರ ವಿಮರ್ಶೆ ಮೂಲಭೂತವಾಗಿ ವಿವರಣಾತ್ಮಕ ಧಾಟಿಯದು. ಒಂದು ಬಗೆಯ ಸಹೃದಯಭಾವವನ್ನು ಮೂಡಿಸುವ ಬರವಣಿಗೆಯಿದು. 'ಶ್ರೀಹರಿ ಚರಿತೆ'ಯ ಅನೇಕ ಲೇಖನಗಳು ಕಾವ್ಯವನ್ನು ಸೂಕ್ಷ್ಮವಾಗಿ ವಿಮರ್ಶೆಗೆ ಒಡ್ಡಿವೆ.

ಈ ವರ್ಷ ಬಂದ ಇನ್ನೊಂದು ಗಮನಿಸಬೇಕಾದ ವಿಮರ್ಶಾ ಸಂಕಲನವೆಂದರೆ ಶ್ರೀ ಕೃಷ್ಣ ಆಲನಹಳ್ಳಿಯವರ ಕೃತಿಗಳನ್ನು ಕುರಿತ 'ಕಾಡಿನ ಹುಡುಗ ಕೃಷ್ಣ' ಎಂಬ ಸಂಕಲನ. ಆಲನಹಳ್ಳಿಯವರ ಆತ್ಮೀಯರು ಅವರನ್ನು ನೆನಪಿಸಿಕೊಳ್ಳುವ ಲೇಖನಗಳು ಇಲ್ಲಿರುವಂತೆಯೇ, ಅವರ ಕಾದಂಬರಿ, ಸಣ್ಣಕತೆ ಮತ್ತು ಕಾವ್ಯವನ್ನು ಕುರಿತಂತೆ ಸೂಕ್ಷ್ಮ ಒಳನೋಟಗಳನ್ನೂ ಕೆಲವರ ಲೇಖನಗಳಲ್ಲಿ ಗುರುತಿಸಬಹುದು. ನವ್ಯದ ಕಲಾತ್ಮಕತೆಯನ್ನು ರೂಢಿಸಿಕೊಂಡು, ನಂತರ ಅದನ್ನು ಮೀರಿ ಬೆಳೆದ ಆಲನಹಳ್ಳಿಯವರ ಸಾಹಿತ್ಯಕ ಬೆಳವಣಿಗೆಯನ್ನು ಟಿ. ಪಿ. ಅಶೋಕ, ತಿರುಮಲೇಶ, ಪಾಟೀಲ, ಬಸವರಾಜು ಮುಂತಾದವರ ಲೇಖನಗಳಲ್ಲಿ ಗುರುತಿಸಬಹುದು.

ಎಚ್. ವಿ. ನಾಗೇಶ ಅವರ 'ಪುನರಾವಲೋಕನ'–ಸಾಹಿತ್ಯ ಮತ್ತು ಸಮಾಜಶಾಸ್ತ್ರದ ಸಂಬಂಧಗಳನ್ನು ಕೃತಿ ಪರಿಶೀಲನೆಯ ಹಿನ್ನೆಲೆಯಲ್ಲಿ ನೋಡಿರುವ ಗ್ರಂಥ. ಹಿಂದೆಯೇ ಪ್ರಕಟವಾಗಿ, ವಿಮರ್ಶೆಗೆ ಗುರಿಯಾಗಿದ್ದ ಕೃತಿಗಳನ್ನು ಇಲ್ಲಿ ಪುನರ್ ಮೌಲ್ಯಮಾಪನಕ್ಕೆ ಲೇಖಕರು ಒಡ್ಡಿದ್ದಾರೆ.

ಎಲ್. ಎಸ್. ಶೇಷಗಿರಿರಾವ್ ಅವರ ಪಾಶ್ಚಾತ್ಯ ಮತ್ತು ಭಾರತೀಯ ಮಹಾಕಾವ್ಯ ಪರಂಪರೆಗಳ ಮನೋಧರ್ಮ ಇನ್ನೊಂದು ಗಮನಾರ್ಹ ಕೃತಿ. ಸಾಕಷ್ಟು ವಿವರಣೆ, ಸಮತೂಕದ ಹೋಲಿಕೆ, ಹದವರಿತ ಪಾಂಡಿತ್ಯ, ಸರಳವೂ ನೇರವೂ ಆದ ಬರವಣಿಗೆ ಇವುಗಳಿಂದಾಗಿ ಶೇಷಗಿರಿರಾಯರ ಪುಸ್ತಕ ಮಹಾಕಾವ್ಯಗಳನ್ನು ಅಭ್ಯಾಸ ಮಾಡುವವರಿಗೆ ಉತ್ತಮ ಪ್ರವೇಶಿಕೆಯಾಗಿದೆ. ತೌಲನಿಕ ವಿಮರ್ಶೆಯ ವಿಧಾನದಲ್ಲಿ ಕನ್ನಡದಲ್ಲಿ ಪ್ರಚಾರದಲ್ಲಿರುವ ವಿಮರ್ಶಾರೀತಿ ಪ್ರತಿನಿಧಿಯಾಗಿದೆ, ಈ ಪುಸ್ತಕ. ಭಾರತ ಮತ್ತು ಪಾಶ್ಚಾತ್ಯ ಮಹಾಕಾವ್ಯಗಳನ್ನು ಇನ್ನೂ ಬೇರೆಯ ನಿಟ್ಟಿನಿಂದ ಅಭ್ಯಾಸಮಾಡಬಯಸುವ ವಿಮರ್ಶಕರಿಗೆ ಶೇಷಗಿರಿರಾಯರ ಪುಸ್ತಕ ಅಗತ್ಯ ಪ್ರಚೋದನೆಯನ್ನು ಒದಗಿಸುವಂತಿದೆ.

ಬರಗೂರ ರಾಮಚಂದ್ರಪ್ಪನವರ ಬಂಡಾಯ ಸಾಹಿತ್ಯ ಮೀಮಾಂಸೆ ಮತ್ತು ಇಣುಕುನೋಟ ೯೧ ರ ಗಮನಾರ್ಹ ಪ್ರಸ್ತಕಗಳು. ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳನ್ನು ಬರಗೂರರು ಮೊದಲ ಪುಸ್ತಕದಲ್ಲಿ ಮಂಡಿಸುತ್ತಾರೆ. ಎರಡನೆಯ ಪುಸ್ತಕದಲ್ಲಿ ಬಂಡಾಯ ಸಾಹಿತ್ಯ ಪರಂಪರೆಗೆ ಸೇರುವ ಲೇಖಕರ ಕೃತಿಗಳನ್ನು ಕುರಿತು ಬರಗೂರರು ಬರೆದ ಮುನ್ನುಡಿ ಮತ್ತು ಪ್ರಸ್ತಾವನೆ. ಹಾಗೆ

ಇವೆರಡೂ ಪರಸ್ಪರ ಪೂರಕವಾದ ಪುಸ್ತಕಗಳು : ಒಂದು ತಾತ್ವಿಕ ಇನ್ನೊಂದು ಆನ್ವಯಿಕ. ಸಾಹಿತ್ಯ ಸ್ವರೂಪ ಮತ್ತು ವಿಮರ್ಶೆಯ ಸ್ವರೂಪ ಕುರಿತು ಇರುವ ರೂಢಿಗತ ಅಭಿಪ್ರಾಯಗಳನ್ನು ಪ್ರಶ್ನಿಸುತ್ತ ಹೊಸ ತಾತ್ವಿಕ ವಾಗ್ವಾದಗಳಿಗೆ ಕಾರಣವಾಗುವಂತಿವೆ ಈ ಎರಡು ಪುಸ್ತಕಗಳು.

ಎಸ್. ಶಿವಾನಂದ ಅವರ 'ವಿಮರ್ಶೆಯ ಸವಾಲುಗಳು' ಎಂಬ ಲೇಖನಗಳ ಸಂಕಲನವನ್ನೂ ಇಲ್ಲೇ ಗಮನಿಸಬಹುದು. ಇದು ಅವರ ಪ್ರಥಮ ವಿಮರ್ಶಾ ಕೃತಿ. ಸಾಹಿತ್ಯ ಕೃತಿಯ ವೈಶಿಷ್ಟ್ಯ ಹಾಗೂ ಸಾಮಾಜಿಕ ಸಿದ್ಧಾಂತಗಳನ್ನು ಜೊತೆಗಿಟ್ಟು ನೋಡುವ ಪ್ರಯತ್ನವನ್ನು ಲೇಖಕರು ಮಾಡಿದ್ದಾರೆ. ವಿಮರ್ಶೆಯ ತಾತ್ವಿಕ ಚೌಕಟ್ಟನ್ನು ಸಾಮಾಜಿಕ ದೃಷ್ಟಿಕೋನದಿಂದ ರೂಪಿಸಿಕೊಳ್ಳುವ ಪ್ರಯತ್ನವನ್ನು ಲೇಖಕರ ಇಲ್ಲಿಯ ಲೇಖನಗಳಲ್ಲಿ ಗುರುತಿಸಬಹುದು. ಬಂಡಾಯ ವಿಮರ್ಶೆಯ ಸೈದ್ಧಾಂತಿಕ ನೆಲೆಗಳನ್ನು ರೂಪಿಸುವ ಪ್ರಯತ್ನವನ್ನು ಇದು ಮಾಡುತ್ತಿದೆ. ಆದರೆ– ಸೃಜನಶೀಲ ಸಾಹಿತ್ಯ ಪರಂಪರೆಯೊಂದನ್ನು ನಿರಾಕರಿಸುವ ಧಾಟಿಯೊಂದು ಆಳದಲ್ಲಿ ಇಲ್ಲಿ ಗೋಚರಿಸುತ್ತದೆ.

ಈ ಇಬ್ಬರು ಕೃತಿಕಾರರ ಕೃತಿಗಳು, ಹಾಗೂ ಈ ವರ್ಷದವರೆಗಿನ ಬಂಡಾಯ ಸಾಹಿತ್ಯ ವಿಮರ್ಶೆಯ ಸ್ವರೂಪಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ವಿಮರ್ಶೆಯು ಸಾಹಿತ್ಯ ಕೃತಿಯನ್ನು ಅರಿಯುವ ವಿಧಾನದಲ್ಲಿ ಮೊದಲಿನ ಆಕ್ರೋಶದ, ನಿರಾಕರಣೆಯ ದಾರಿಯನ್ನು ಬಿಟ್ಟು ಹೊಸ ವಾಗ್ವಾದವನ್ನು ಮೂಡಿಸುವ ಗಂಭೀರತೆಗೆ ಎಡೆಮಾಡಿಕೊಟ್ಟಿದೆ ಎನ್ನಬಹುದು. ಭಿನ್ನ ಭಿನ್ನ ನೆಲೆಗಳನ್ನು ಹೊಂದಿರುವ, ಕೆಲವು ಸಾರಿ ಸ್ವವಿಮರ್ಶೆಯ ಅಭಿವ್ಯಕ್ತಿಗಳು ಇಲ್ಲಿ ಅನೇಕ ಬಾರಿ ಎದ್ದು ಕಾಣುತ್ತಿವೆ.

ಅರವಿಂದ ಮಾಲಗತ್ತಿಯವರು ಸಂಪಾದಿಸಿರುವ ನಾಲ್ಕು ದಲಿತೀಯ ಕಾದಂಬರಿಗಳು 'ಒಡಲಾಳ', 'ಕುಸುಮ ಬಾಲೆ' 'ಮಾಗಿ' ಮತ್ತು 'ಕಾರ್ಯ' ಕುರಿತ ವಿಶ್ಲೇಷಣೆಗಳನ್ನಲ್ಲದೇ ದಲಿತ ಕಾದಂಬರಿಗಳನ್ನು ಕುರಿತ ಲೇಖನವನ್ನೂ ಒಳಗೊಂಡಿದೆ. ಎಲ್ಲ ಲೇಖನಗಳಲ್ಲಿ ದಲಿತೀಯ ಕಾದಂಬರಿಗಳ ವೈಶಿಷ್ಟ್ಯ ಮತ್ತು ಹಿರಿಮೆಗಳನ್ನು ಸ್ಥಾಪಿಸುವುದು ಮುಖ್ಯ ಕಾಳಜಿಯಾಗಿದೆ.

ಡಾ. ಕರೀಗೌಡ ಬೀಚನಹಳ್ಳಿಯವರ 'ವ್ಯಷ್ಟಿ–ಸಮಷ್ಟಿ' ಪಿ. ಎಚ್. ಡಿ ಗಾಗಿ ಬರೆದು ಒಪ್ಪಿಸಿದ ಪ್ರಬಂಧ. ಕನ್ನಡದ ನವ್ಯ ಕಥಾ ಸಾಹಿತ್ಯವನ್ನು ಕುರಿತ ಪರಿಶೀಲನೆ ಇದರಲ್ಲಿದೆ. ಕನ್ನಡ ನವ್ಯಕತೆಗಳ ಪ್ರವೃತ್ತಿ ಮತ್ತು ಪ್ರಯೋಗಗಳನ್ನು ಚಾರಿತ್ರಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನಗಳಿಂದ ಕರೀಗೌಡರು ವಿವೇಚಿಸಿದ್ದಾರೆ. ವಸ್ತುವಿನ ಸಮಗ್ರತೆಯಿಂದ ಕೃತಿಯು ಆಕರ್ಷಕವಾಗಿದ್ದರೂ ವಿಶ್ಲೇಷಣೆಯ ಅಂಶ ಕೊಂಚ ದುರ್ಬಲವೆನಿಸುತ್ತದೆ. ಕನ್ನಡ ಸಾಹಿತ್ಯದ ಪ್ರಮುಖ ಘಟ್ಟವೊಂದರ

ಒಟ್ಟುನೋಟ ದೊರೆಯುತ್ತದೆಂಬುದರಿಂದ ಸಮಸ್ಯೆ ಸ್ವಾಗತಾರ್ಹವಾಗಿದೆ. ಪಾ. ವೆಂ. ಆಚಾರ್ಯರ ಪದಾರ್ಥ ಚಿಂತಾಮಣಿ, ಕುಶಾಲಪ್ಪಗೌಡ ಅವರ ಕನ್ನಡ ತಿರುಳಕನ್ನಡ ಮತ್ತು ಸಮಾಜ, ಬಸವರಾಜ ಮಲಶೆಟ್ಟಿಯವರ ಮಹಾಕವಿ ಹರಿಹರನ ಕೃತಿಗಳ ಪದಕೋಶ, ಎಂ. ಎಂ. ಕಲ್ಬುರ್ಗಿಯವರ ವಚನ ಸಾಹಿತ್ಯದ ಪ್ರಕಟನೆಯ ಇತಿಹಾಸ ಇವುಗಳು ನೇರವಾಗಿ ಸಾಹಿತ್ಯ ವಿಮರ್ಶೆಯಲ್ಲದಿದ್ದರೂ ವಿಮರ್ಶಕರಿಗೆ ಆಕರವಾಗಬಹುದಾದ ವಿದ್ವತ್ ಕೃತಿಗಳು. ಇವು ಒಂದೊಂದು ತಮ್ಮ ರೀತಿಯಲ್ಲಿ ಅನನ್ಯವಾಗಿವೆ. ವಿದ್ವತ್ ಪೂರ್ಣವಾದಂಥ ಕೆಲಸಗಳು ಅಪಾರಶ್ರಮ ಮತ್ತು ತಾಳ್ಮೆಯನ್ನು ಬೇಡುತ್ತವೆ. ಆದಕ್ಕೆ ಪ್ರತಿಯಾಗಿ ಜನಪ್ರಿಯತೆಯೇನೂ ದೊರಕುವುದಿಲ್ಲ. ಇಂಥ ವಿದ್ವಾಂಸರ ಶ್ರಮದ ಫಲವನ್ನೂ ಕನ್ನಡ ವಿಮರ್ಶಕರೂ ಇನ್ನೂ ಸರಿಯಾಗಿ ಬಳಸಿಕೊಂಡಂತಿಲ್ಲ.

ಎಸ್. ಅನಂತನಾರಾಯಣ ಅವರ ಕಾರಂತರ ಕಾದಂಬರಿಗಳಲ್ಲಿ ನಿಸರ್ಗ, ಸರೋಜಿನಿ ಅವರ ಪಾಶ್ಚಾತ್ಯ ಸಾಹಿತ್ಯಮಾರ್ಗ, ವರದಾ ಶ್ರೀನಿವಾಸ ಅವರ 'ಮಹಿಳೆ ವೈಚಾರಿಕತೆ ಮತ್ತು ವಿಮರ್ಶೆ' ಇತ್ಯಾದಿಗಳೆಲ್ಲಾ ಒಂದು ಗುಂಪಿನ ಪುಸ್ತಕಗಳು. ಶೀರ್ಷಿಕೆ ಎಷ್ಟು ಆಕರ್ಷಕವಾಗಿರುತ್ತದೋ ಅಷ್ಟು ಉಪಯುಕ್ತ ಮಾಹಿತಿ ಪುಸ್ತಕದಲ್ಲಿರುವುದಿಲ್ಲ. ಮಾತು ಹೆಚ್ಚಿರುತ್ತದೆ. ಅರ್ಥ ಕಡಿಮೆಯಾಗಿರುತ್ತದೆ. ಲೆಕ್ಕಕ್ಕೆ ಇಂಥ ಸುಮಾರು ಇನ್ನೂ ಹತ್ತು ಪುಸ್ತಕಗಳನ್ನು ವಿಮರ್ಶೆಯ ಪುಸ್ತಕಗಳೆನ್ನಬಹುದು.

ಮಾಸ್ತಿಯವರ ಸಾಹಿತ್ಯ ಕೃಷಿಯನ್ನು ಕುರಿತಂತೆ ಮೂರು ಪುಸ್ತಕಗಳು ಈ ವರ್ಷ ಹೊರಬಂದಿವೆ. ಮಾಸ್ತಿಯವರ ಕಾವ್ಯವನ್ನು ಕುರಿತು ಸಾ. ಶಿ. ಮರುಳಯ್ಯನವರು ಬರೆದಿದ್ದಾರೆ. ಮಾಸ್ತಿಯವರ ಸಾಹಿತ್ಯ ಮತ್ತು ವ್ಯಕ್ತಿತ್ವನ್ನು ಕುರಿತು ವಿ. ಸೀತಾರಾಮಯ್ಯನವರು ಎಂಟು ಲೇಖನಗಳನ್ನು ಹಾಗೂ ಒಂದು ಸಂದರ್ಶನವನ್ನೂ ಒಂದು ಸಂಕಲನವಾಗಿ ತಂದಿದ್ದಾರೆ. ಮಾಸ್ತಿಯವರ ಕಥೆಗಳನ್ನು ಕುರಿತಂತೆ ರಾಜೇಂದ್ರ ಚೆನ್ನಿ ಬರೆದಿದ್ದಾರೆ.

ರಾಜೇಂದ್ರ ಚೆನ್ನಿಯವರ ಪುಸ್ತಕವು ಇವುಗಳಲ್ಲಿ ಗಮನಾರ್ಹವಾದುದು ಮಾಸ್ತಿಯವರ ಕಥೆಗಳ ವೈಶಿಷ್ಟ್ಯ ಹಾಗೂ ಪರಿಮಿತಿಗಳೆರಡನ್ನೂ ವಿವರವಾಗಿ ಉದಾಹರಣೆಗಳೊಡನೆ ಚೆನ್ನಿಯವರು ತೋರಿಸಿಕೊಡುತ್ತಾರೆ. ಈಗಾಗಲೇ ಮಾಸ್ತಿಯವರ ಕಥೆಗಳ ಬಗ್ಗೆ ಚರ್ಚಿತವಾಗಿರುವ ಅನೇಕ ಮುಖ್ಯ ವೈಚಾರಿಕ ಅಂಶಗಳನ್ನು ಚೆನ್ನಿಯವರು ಮತ್ತೊಮ್ಮೆ ಚರ್ಚೆಗೆ ಎತ್ತಿಕೊಳ್ಳುತ್ತಾರೆ. ಪ್ರವೃತ್ತಿ–ಸಂಸ್ಕೃತಿಗಳು ಸಂಘರ್ಷ, ಸಾಮಾಜಿಕತೆಯ ಆಯಾಮಗಳು ಇಲ್ಲದಿರುವುದು. ಇವೇ ಮುಂತಾದ ಅಂಶಗಳ ಚರ್ಚೆ ಇಲ್ಲಿ ಗಮನಿಸಬಹುದು. ವಿ. ಸೀತಾರಾಮಯ್ಯನವರ ಲೇಖನ ಸಂಗ್ರಹ ಒಂದು ರೀತಿಯಲ್ಲಿ ಮಾಸ್ತಿಯವರನ್ನು, ವಿ. ಸಿಯವರು ಕಾಲಾನುಕ್ರಮದಲ್ಲಿ ತಾವು ಅರಿತ ಭಿನ್ನ ನೆಲೆಗಳನ್ನು ತೋರುವಂಥದ್ದು. ಇಲ್ಲಿ

ಕೊನೆಕೊನೆಯಲ್ಲಿ ವಿ. ಸೀ. ಯವರು ಮಾಸ್ತಿಯವರನ್ನು ಆರಾಧಿಸುವ ಘಟ್ಟಕ್ಕೆ ಹೋಗಿರುವುದನ್ನು ಗುರುತಿಸಬಹುದು

೯೧ರ ಕನ್ನಡ ವಿಮರ್ಶೆಯಲ್ಲಿ ಸೂಕ್ಷ್ಮವಾಗಿ ಮೈ ತಳೆಯುತ್ತಿರುವ ಎರಡು ಅಂಶಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ಕನ್ನಡದ ಹಿಂದಿನ ವರ್ಷಗಳ ಕೆಲವು ಮುಖ್ಯ ಕೃತಿಗಳ ಬಗ್ಗೆ ಬಿಡಿಲೇಖನಗಳಲ್ಲಿ ವಾಗ್ವಾದವನ್ನು ಬೆಳೆಸುತ್ತಿರುವುದು ಇಲ್ಲಿ ಗಮನಿಸಬೇಕಾದ ಒಂದು ಅಂಶ. ದೇವನೂರರ 'ಕುಸುಮ ಬಾಲೆ'ಯ ಬಗ್ಗೆ ಇಂಥ ಚರ್ಚೆಯೊಂದು ರೂಪುತಳೆಯಿತು.

ಎರಡನೆಯದಾಗಿ ಸ್ತ್ರೀ ಸಂವೇದನೆಯಿಂದ ಹೊರಟ ಅನೇಕ ವಿಮರ್ಶಾ ಲೇಖನಗಳು ಸಾಹಿತ್ಯವನ್ನು ಆ ದೃಷ್ಟಿಕೋನದಿಂದ ನೋಡುವ ಪ್ರಯತ್ನವನ್ನು ಬಿಡಿಲೇಖನಗಳಲ್ಲಿ ಮಾಡಿದವು. ವಿಜಯಾ, ಕೇಶವಶರ್ಮ, ಕೆ. ಸತ್ಯನಾರಾಯಣ ಮೊದಲಾದವರು ತಮ್ಮ ಲೇಖನಗಳಲ್ಲಿ ಈ ಆಯಾಮವನ್ನು ಗುರುತಿಸಲಿಕ್ಕೆ ಪ್ರಯತ್ನಿಸಿದ್ದಾರೆ. ಅನೇಕ ಲೇಖಕರ ಸಾಹಿತ್ಯ ಕೃತಿಗಳನ್ನು ಸ್ತ್ರೀ ಸಂವೇದನೆಯಿಂದ ಪರಿಶೀಲಿಸುವ ಪ್ರಯತ್ನವೂ ಇಲ್ಲಿ ಹೊಸದೆಂಬಂತೆ ತೋರುತ್ತದೆ.

ಈ ಸಮೀಕ್ಷೆಯಲ್ಲಿ ಹೆಸರಿಸಿರುವ, ಹೆಸರಿಸಿರದ ಎಲ್ಲ ಪುಸ್ತಕಗಳನ್ನೂ ಓದಿದರೆ ಹೀಗನ್ನಿಸೀತು. ಯಾಕೆ ಇನ್ನೂ ನಮ್ಮ ವಿಮರ್ಶೆ ಕೆಲವೇ ಲೇಖಕರನ್ನು, ಕೃತಿಗಳನ್ನು ಕುರಿತೇ ಆಯಾಸ ಮಾಡಿಕೊಳ್ಳುತ್ತಿದೆ? ಯಾಕೆ ಬೆರಳೆಣಿಕೆಯ ಕೆಲವು ಲೇಖಕರನ್ನು ಬಿಟ್ಟರೆ, ಹೊಸದಾಗಿ ವಿಮರ್ಶೆಯನ್ನು ಬರೆಯುವವರು ಕಾಣಿಸಿಕೊಳ್ಳುತ್ತಿಲ್ಲ? ಯಾಕೆ ವಿಮರ್ಶೆಯ ಭಾಷೆ ಒಣಗಿದಂತೆ ಕಾಣುತ್ತದೆ? ಯಾಕೆ ವಿಮರ್ಶೆಯ ಬರವಣಿಗೆಯೆಲ್ಲವೂ ಸಾಹಿತ್ಯ ವಿದ್ಯಾರ್ಥಿಗಳನ್ನ ಅಥವ ಇತರ ವಿಮರ್ಶಕರನ್ನ ಮಾತ್ರ ಉದ್ದೇಶಿಸಿ ಬರೆದಂತೆ ಇರುತ್ತದೆ? ಜೊತೆಗೇ ಹೆಮ್ಮೆಗೂ ಕಾರಣವಿದೆ. ಕೊನೆಯ ಪಕ್ಷ ವರ್ಷಕ್ಕೆ ಐದು ಆರಾದರೂ ಮುಖ್ಯ ವಿಮರ್ಶಾ ಕೃತಿಗಳು ಬರುತ್ತಿವೆ. ಇತರ ಭಾಷೆಗಳಿಗೆ ಹೋಲಿಸಿದರೆ ಇದು ಹೆಮ್ಮೆಯ ಸಂಗತಿಯಾಗಿಯೂ ಕಾಣಬಹುದು.

# ಪ್ರವಾಸ ಸಾಹಿತ್ಯ ಹಾಗೂ ಮಕ್ಕಳ ಸಾಹಿತ್ಯ

ಎಸ್. ವಿದ್ಯಾಶಂಕರ್

## ಪ್ರವಾಸ ಸಾಹಿತ್ಯ :

ಕನ್ನಡದಲ್ಲಿ ಪ್ರವಾಸ ಸಾಹಿತ್ಯಕ್ಕೆ ಒಂದು ಸಾಹಿತ್ಯ ಪ್ರಕಾರವಾಗಿ ಒಂದು ನಿಶ್ಚಿತ ನೆಲೆಯಿರುವುದು ಅದರ ಒಂದು ನೂರು ವರ್ಷಗಳ ಗತ ಇತಿಹಾಸದಿಂದ ಸ್ಪಷ್ಟಗೊಳ್ಳುತ್ತಿದೆ. ಪ್ರತಿವರ್ಷ ಬರುತ್ತಿರುವ ಪ್ರವಾಸ ಸಾಹಿತ್ಯ ಕೃತಿಗಳನ್ನು ಗಮನಿಸುತ್ತ ಬಂದಾಗ ಬೇರೆ ಭಾಷೆಯಲ್ಲಿ ಸಾಧಿಸಲಾಗದಿರುವುದು ನಮ್ಮಲ್ಲಿ ಸಾಧ್ಯವಾಗಿರುವುದು ಕಂಡುಬರುತ್ತದೆ. ಇದು ಸಂತೋಷದ ಸಂಗತಿ.

1991ರಲ್ಲಿ ಬಂದಿರುವ ಪ್ರವಾಸ ಸಾಹಿತ್ಯ ಕೃತಿಗಳ ಸಂಖ್ಯೆ ಒಂಬತ್ತು. ಇವುಗಳಲ್ಲಿ ಎರಡು ಕೃತಿಗಳು ಜನಾಂಗಿಕ ಅಧ್ಯಯನವನ್ನು ಒಳಗೊಂಡಿವೆ. ವಿದೇಶ ಪ್ರವಾಸಾನುಭವವನ್ನು ಕುರಿತಂತೆ ನಾಲ್ಕು ಕೃತಿಗಳು ಹೊರಬಂದಿವೆ. ಪ್ರವಾಸ ಸಾಹಿತ್ಯದಲ್ಲಿ ಸಾಹಸ ಯಾತ್ರೆಯೂ ಒಂದು ಮುಖ್ಯ ಭಾಗವಾಗಿದ್ದು, ಅದನ್ನು ಕುರಿತಂತೆ ಒಂದು ಕೃತಿ ಬಂದಿದೆ. ಒಂದು ನಿಶ್ಚಿತ ಪ್ರದೇಶದಲ್ಲಿ ಕೈಗೊಂಡ ಪ್ರವಾಸದ ಅನುಭವವನ್ನು ಹೇಳುವ ಒಂದು ಕೃತಿಯೂ ಹೊರಬಂದಿದೆ. ಶಬರಿಮಲೆ ಯಾತ್ರೆಯ ಬಗೆಗೂ ಒಂದು ಪುಸ್ತಕ ಬಂದಿದೆ. ವರ್ಷದ ಕೃತಿಗಳಲ್ಲಿ ಡಾ. ಕೃಷ್ಣಾನಂದ ಕಾಮತರ 'ಬಸ್ತರ ಪ್ರವಾಸ' ಹಾಗೂ ಹಿ.ಚಿ. ಬೋರಲಿಂಗಯ್ಯನವರ 'ಗಿರಿಜನ ನಾಡಿಗೆ ಪಯಣ' ಗಮನಾರ್ಹವಾದುವು.

ಡಾ. ಕೃಷ್ಣಾನಂದ ಕಾಮತ್‌ರವರ 'ಬಸ್ತರ ಪ್ರವಾಸವು ಮಧ್ಯಪ್ರದೇಶದ ಅತೀ ಹಿಂದುಳಿದ ಜಿಲ್ಲೆಯಾದ ಬಸ್ತರ್‌ನ ದಟ್ಟವಾದ ಕಾಡುಗಳಲ್ಲಿ ಶತಶತಮಾನಗಳಿಂದ ಒಂದೇ ರೀತಿಯಲ್ಲಿ ಜೀವನ ನಡೆಸುತ್ತ ಬಂದಿರುವ ಆದಿವಾಸಿ ಜನಾಂಗವನ್ನು ತೀರಾ ಹತ್ತಿರದಿಂದ ಅಭ್ಯಸಿಸುವ ಏಕಮೇವ ಉದ್ದೇಶವನ್ನು ಹೊಂದಿದೆ. ಒಂದು ಜನಾಂಗಿಕ ಅಧ್ಯಯನವನ್ನು ಗಂಭೀರವಾಗಿ ಪರಿಗಣಿಸಿ ಕನ್ನಡದಲ್ಲಿ ಉನ್ನತ ಸಂಶೋಧನೆಯನ್ನು ಈಗಾಗಲೇ ವಿದ್ವಾಂಸರು ನಡೆಸಿರುವರು. ಈ ದಿಶೆಯಲ್ಲಿ 'ಬಸ್ತರ ಪ್ರವಾಸ'ವು ಸಾಗಿದ್ದರೂ ಉನ್ನತ ಸಂಶೋಧನೆಯ ಕಡೆಗೆ ಹೊರಳದೆ,

ಲವಲವಿಕೆಯ ನಿರೂಪಣೆಯಿಂದಾಗಿ ಪ್ರವಾಸ ಸಾಹಿತ್ಯವಾಗಿ ಹೊರಳಿದೆ. ಲೇಖಕರು ಯಾವ ಪೂರ್ವನಿರ್ಧರಿತ ಧೋರಣೆಗಳನ್ನೂ ಹೊಂದಿರದೆ ಈ ಆದಿವಾಸಿ ಜನಾಂಗದವರ ಜೊತೆ ವಿರಾಮವಾಗಿ ನಿಂತು ಅವರ ಜೀವನ ವಿಧಾನವನ್ನು, ನಂಬುಗೆಗಳನ್ನು, ಕಟ್ಟುಪಾಡುಗಳನ್ನು, ಬಡತನದಲ್ಲೂ ನೆಮ್ಮದಿಯನ್ನು ಕಂಡುಕೊಂಡಿರುವ ಅವರ ಹೃದಯಶ್ರೀಮಂತಿಕೆಯನ್ನು, ಎಳೆಯರ ಮುಕ್ತ ಲೈಂಗಿಕ ಸಂಬಂಧಗಳನ್ನು, ಬದಲಾವಣೆಗೆ ತಮ್ಮನ್ನು ಒಡ್ಡಿಕೊಳ್ಳಲು ಅವಕಾಶಗಳಿದ್ದರೂ ಅಡವಿಯ ಮಕ್ಕಳಾಗಿ ಅಲೆಮಾರಿ ಜೀವನವನ್ನೇ ಇಷ್ಟಪಡುವ ಅವರ ನಿಲುವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿರುವರು.

160 ಸೆಂ.ಮೀ. ಗಿಂತಲೂ ಅಧಿಕವಾಗಿ ಸುರಿವ ಮಳೆಯಿಂದಾಗಿ ಬಸ್ತರ್ ಜಿಲ್ಲೆಯ ಶೇಕಡಾ 70ರಷ್ಟು ಭೂಭಾಗ ದಟ್ಟವಾದ ಕಾಡಿನಿಂದ ಕೂಡಿದೆ. ಈ ಜಿಲ್ಲೆಯಲ್ಲಿ ಹರಡಿಕೊಂಡಿರುವ ಈ ಆದಿವಾಸಿ ಜನಾಂಗದ ಕೆಲವು ಗುಂಪುಗಳು ಅಲೆಮಾರಿಗಳಾಗಿ ಕಾಡಿನಲ್ಲಿ ಜೀವನ ನಡೆಯಿಸಿರುವರು. ತಾತ್ಕಾಲಿಕವಾಗಿ ನಿಂತ ಎಡೆಯಲ್ಲಿ ಕುಮರಿ ಬೆಳೆ ತೆಗೆದು ಕೆಲಕಾಲ ಅಲ್ಲಿದ್ದು ನಂತರ ಹೊಟ್ಟೆಪಾಡಿಗಾಗಿ ಮತ್ತೊಂದೆಡೆಗೆ ಸಾಗಿಹೋಗುವ ಇವರು ತಮ್ಮ ಚಲನಶೀಲ ಬದುಕಿನಲ್ಲೂ ನೆಮ್ಮದಿ ಕಂಡುಕೊಂಡಿರುವರು. ಜನಸಂಪರ್ಕದಿಂದ ದೂರವಿರುವ ಇವರು ಆದಿಮಾನವರ ರೀತಿಯಲ್ಲಿ ಉಡುಗೆ ತೊಡುಗೆ ಧರಿಸಿ ತಮ್ಮ ಹೊಟ್ಟೆಪಾಡಿಗೆ ಕಾಡನ್ನೇ ಆಶ್ರಯಿಸಿರುವರು. ಇವರಲ್ಲಿ ಸುಧಾರಣೆ ತರುವ ನೆಪವೊಡ್ಡಿ ಸರಕಾರದ ಅಧಿಕಾರಿಗಳು, ಪೋಲೀಸರು ಮೇಲಿಂದ ಮೇಲೆ ಇವರಿರುವ ಜಾಗಕ್ಕೆ ಧಾಳಿ ನಡೆಸಿ ಇವರ ಏಕಾಂತ ಜೀವನಕ್ಕೆ ಧಕ್ಕೆ ತಂದಿರುವರು. ಆದಿವಾಸಿಗಳಲ್ಲಿ ಕೆಲವರು ಕಾಡುಕಡಿದು ನೆಲವನ್ನು ಸಮಮಾಡಿ ಸಾಗುವಳಿ ನಡೆಸಿರುವರು. ಅಕ್ರಮವಾಗಿ ಸಾಗುವಳಿ ಮಾಡುವರೆಂಬ ನೆಪವೊಡ್ಡಿ ಸರಕಾರಿ ಅಧಿಕಾರಿಗಳು ಇವರಿಗೆ ಕಿರುಕುಳ ಕೊಡುತ್ತಿರುವರು. ಈ ಜಮೀನನ್ನು ತಮ್ಮ ಹೆಸರಿಗೆ ಮಾಡಿಕೊಳ್ಳಲು ಇವರು ಮುಖಂಡರಿಗೆ, ಅಧಿಕಾರಿಗಳಿಗೆ ದುಂಬಾಲು ಬೀಳಬೇಕಾಗಿದೆ. ಹಣ ಕೊಡದೇ ಸರಕಾರದಲ್ಲಿ ತಮ್ಮ ಕೆಲಸವಾಗುವುದಿಲ್ಲವೆನ್ನುವ ತಿಳುವಳಿಕೆಯೂ ಈಗ ಈ ಮುಗ್ಧ ಜನರಿಗೆ ಬಂದಿದೆ.

'ನೀವೇಕೆ ಸರಕಾರ ಕೊಡುವ ಸವಲತ್ತುಗಳನ್ನು ನಿರಾಕರಿಸಿ ಕಾಡಿನ ಮರೆಯಲ್ಲಿ ಕಷ್ಟದ ಜೀವನ ನಡೆಸುವಿರಿ?' ಎಂದು ಲೇಖಕರು ಕೇಳಿದ್ದಕ್ಕೆ ಆದಿವಾಸಿಗಳ ಮುಖಂಡ ಕೊತವಾಲನು ಹೀಗೆ ಹೇಳುವನು : 'ಬಾಬು ನಾವು ಕಾಡಿನ ಮಕ್ಕಳು. ಕಾಡುಕೋಣ, ಕಾಡು ಹಂದಿ, ಕರಡಿಗಳಿಗೆ ಕಾಡು ತ್ಯಜಿಸಿ ನಾಡಿನಲ್ಲಿ ಸುಖವಾಗಿರಲು ಸಾಧ್ಯವೆ? ಅನಾದಿಕಾಲದಿಂದಲೂ ನಾವೆಲ್ಲ ಈ ಗುಡ್ಡ ಬೆಟ್ಟ, ನದಿ ಕೊಳ್ಳ, ಪಶು ಪಕ್ಷಿಯೊಂದಿಗೆ ಒಂದಾಗಿ ಬಾಳಿದ್ದೇವೆ. ಮೀನಿಗೆ ನೀರು ಬಿಟ್ಟು ಬದುಕುಂಟೆ? ಜಗದಲಪುರದಲ್ಲಿ ಅರಮನೆಯಲ್ಲಿ ಇರುವಂತ

ಮಾಡುತ್ತೇನೆಂದರೂ ನಾವು ಮಾತ್ರ ಈ ಕಾಡಿನಿಂದ ಹೊರಬರಲು ಸಿದ್ಧರಿಲ್ಲ. ನನ್ನ ಈ ಕಿರಿಯಮಗ ಹುಟ್ಟಿದಾಗ ನಮ್ಮವರೆಲ್ಲ ಪೋಟಡೊಂಗರು, ನಾರಾಯಣಪುರಗಳ ಆಸುಪಾಸು (ಅಕ್ಕಪಕ್ಕ)ದಲ್ಲಿ ಬೀಡುಬಿಟ್ಟಿದ್ದೆವು. ಆದರೆ ಅಲ್ಲಿ ರಸ್ತೆಗಳಾದವು. ಕಾರು ಜೀಪುಗಳು ಓಡಾಡಲಾರಂಭಿಸಿದವು. ದಿನಂಪ್ರತಿ ಬೇರೆ ಬೇರೆ ಅಧಿಕಾರಿಗಳ ಕಿರುಕುಳ ಪ್ರಾರಂಭವಾಯಿತು. ನಿರುಪಾಯವಾಗಿ ಈ ತಾಣಕ್ಕೆ ಬಂದೆವು ..... ಕಾನೂನಿನ ಪ್ರಕಾರ ವರ್ಷಕ್ಕೊಮ್ಮೆ ಕರ ಕೇಳಿದರೆ ಹೇಗಾದರೂ ಕೊಡಬಹುದು. ಅದು ಬಿಟ್ಟು ಪ್ರತಿ ವಾರವೂ ಬಂದು ಕಾಳುಕಡಿ, ಕುಕ್ಕುಟ, ಹುಲಿ ಹುಲ್ಲೆಗಳ ಚರ್ಮ, ಕೋಡು, ಕೋರೆಹಲ್ಲು, ಜೇನುತುಪ್ಪ, ಮದ್ಯ ಮೊದಲಾದವನ್ನು ಜಬರ್ದಸ್ತಿಯಿಂದ ಕೇಳಿದರೆ ನಾವು ಎಲ್ಲಿಂದ ಕೊಡುವದು? ನಾವು ಕಡುಬಡವರು ಬಾಬು .....'' (ಪು. 31–32).

'ಈಗ ನೀವು ಆಯ್ದುಕೊಂಡ ತಾಣದಲ್ಲಿಯೇ ಕೃಷಿ ಮಾಡಿಕೊಂಡು ಆದಾಯ ಹೆಚ್ಚಿಸಿಕೊಳ್ಳಬಹುದಲ್ಲ' ಎಂಬ ಇನ್ನೊಂದು ಪ್ರಶ್ನೆಗೆ ಕೊತವಾಲ ಕೊಟ್ಟ ಉತ್ತರ ಹೀಗಿದೆ : ''ಬಾಬುಜಿ ಅದಕ್ಕಾಗಿ (ಕೃಷಿಗೆ) ದನಕರುಗಳು ಅತ್ಯವಶ್ಯ. ಕಾಡೆತ್ತುಗಳು ಪ್ರೇಮಿಯನ್ನು ಸೇರುವುದಕ್ಕಾಗಿ ಆಗಾಗ ನಮ್ಮ ದೊಡ್ಡಿಗಳ ಮೇಲೆ ಹಲ್ಲೆ ನಡೆಸುತ್ತವೆ. ಅವುಗಳ ಸಹವಾಸದಲ್ಲಿ ನಮ್ಮ ಹಸುಗಳು ಹಾಲು ಹಿಂಡಲು ನಿರಾಕರಿಸಿಬಿಡುತ್ತವೆ. ದನದ ಮಾಂಸಕ್ಕೆ ಆಸೆಪಟ್ಟು ಹೆಬ್ಬುಲಿಗಳು ಆಗಾಗ ಆಕ್ರಮಣ ನಡೆಸುತ್ತವೆ ..... ಕೆಲವೊಮ್ಮೆ ನರಭಕ್ಷಕ ಹುಲಿಗಳ ಕಾಟ ಹೆಚ್ಚಾದಾಗ ನಾವೇ ವಾಸಸ್ಥಾನ ಬದಲಿಸಿಕೊಳ್ಳಬೇಕಾಗುತ್ತದೆ. ಕೃಷಿಗಾಗಿ ಎತ್ತುಗಳನ್ನು ಸಾಕಿದರಂತೂ ನಮ್ಮ ಸರ್ವನಾಶವಾಗುವದು ಖಂಡಿತ.''

'ಒಂದೆಡೆ ನಿಂತು ಕೃಷಿ ಮಾಡುವುದನ್ನು ಒಪ್ಪದಿದ್ದರೆ ಹೋಗಲಿ ಸರಕಾರ ಕೊಡಮಾಡುವ ಶಿಕ್ಷಣ ಔಷದೋಪಚಾರಗಳನ್ನಾದರೂ ಸ್ವೀಕರಿಸಬಹುದಲ್ಲಾ?' ಎಂದು ಲೇಖಕರು ಬೇಕೆಂದೇ ಪ್ರಶ್ನೆ ಕೇಳಿದ್ದಕ್ಕೆ ಕೊತವಾಲ, ಕಾಡಿನ ಸಂತೃಪ್ತ ಜೀವನದ ಬಗೆಗೆ ಹೀಗೆ ಸಮಜಾಯಿಷಿ ನೀಡುವನು : 'ಮಗನಿಗೆ ತಂದೆ ಮಗಳಿಗೆ ತಾಯಿಗಿಂತ ದೊಡ್ಡ ಗುರುಗಳು ಯಾರಾದರೂ ಇದ್ದಾರೆಯೇ? ಬೇಟೆಯಾಡುವುದು, ಮೀನು ಹಿಡಿಯುವುದು, ಕಟ್ಟಿಗೆ ತರುವುದು, ಗುಡಿಸಲು ಕಟ್ಟುವುದು, ಪೆಂಡಾ (ಕಾಡಿನ) ಕೃಷಿ ಮಾಡುವುದು, ಮಹುವಾಮದ್ಯ ಮಾಡುವುದು, ವಾದ್ಯ ನುಡಿಸುವುದು, ನರ್ತಿಸುವುದು ಎಲ್ಲವನ್ನೂ ನಮ್ಮ ಎಳೆಯರಿಗೆ ಚಾಚೂ ತಪ್ಪದೇ ಕಲಿಸುತ್ತೇವೆ. ಇನ್ನಿತರರಂತೆ ನಾವೂ ಬೆನ್ನುಮುರಿ ದುಡಿಯುತ್ತೇವೆ. ಅಡುಗೆ ಮಾಡಿ ಉಣ್ಣುತ್ತೇವೆ. ಸುಖವಾಗಿ ನಿದ್ರಿಸುತ್ತೇವೆ. ಮದುವೆಯಾಗಿ ಮಕ್ಕಳನ್ನು ಪಡೆಯುತ್ತೇವೆ. ಶಾಲಾ ಶಿಕ್ಷಣವಿಲ್ಲದಿದ್ದರೂ ಜೀವನದಲ್ಲಿ ಯಾವ ಕೊರತೆಯನ್ನೂ ಮಾಡಿಕೊಂಡಿಲ್ಲ. ಕಾಡಿನ ಮಕ್ಕಳು ಗಟ್ಟಿಮುಟ್ಟಾಗಿದ್ದರೆ ಮಾತ್ರ ನಮಗೆ ಬದುಕು. ಸಣ್ಣಪುಟ್ಟ ಆರೋಗ್ಯದ ಸಮಸ್ಯೆಗಳಿದ್ದರೆ ನಾವೇ ಗಿಡಮೂಲಿಕೆ ತೊಗಟೆ

ಬೇರು ಪರ್ಣಗಳನ್ನು ಬಳಸಿ ಔಷದೋಪಚಾರ ಮಾಡಿಕೊಳ್ಳುತ್ತೇವೆ. ಹೆಚ್ಚಿನ ಕಾಯಿಲೆಯಾದರೆ ಅದು ಭೂತ ಪ್ರೇತಗಳ ಬಾಧೆಯಿಂದಾಗಿ ಅದಕ್ಕೆ ಪರಿಹಾರ ಸೂಚಿಸಲು ನಮ್ಮ ಮಂತ್ರವಾದಿ ಇದ್ದೇ ಇರುವ. ಮಕ್ಕಳ ಮನೋರಂಜನೆಗೆ ಘೋಟುಲು ಇದ್ದೇ ಇವೆ.''

ಆದಿವಾಸಿ ಸ್ತ್ರೀಯರ ಪ್ರಕೃತಿದತ್ತವಾದ ದೇಹಸೌಂದರ್ಯ, ಕೇಶಾಲಂಕಾರ, ಉಡಿಗೆ-ತೊಡಿಗೆ, ಕ್ಯಾಮರ ಕಂಡರೆ ನಾಚಿ ಹೆದರಿ ಓಡಿಹೋಗುವ ಮನೋಭಾವ-ಇವುಗಳ ವಿವರಣೆಯನ್ನು ಲೇಖಕರು ಸಾಕಷ್ಟು ಚೆನ್ನಾಗಿಯೇ ಮೂಡಿಸಿರುವರು. ರಾಜಕಾರಣಿಗಳ ನಯವಂಚನೆಯಿಂದ ಅರಸೊತ್ತಿಗೆಯ ಅಧಿಕಾರವನ್ನು ಕಳೆದುಕೊಂಡ ಆದಿವಾಸಿಗಳ ಅರಸ ಪ್ರವೀರಚಂದ್ರರ ಕರುಣಾಜನಕ ಕಥೆಯನ್ನು ಇಂದಿನ ರಾಜಕೀಯದ ವಿಡಂಬನೆಯಾಗಿ ಲೇಖಕರು ಬಳಸಿಕೊಂಡಿರುವರು. ಆದಿವಾಸಿಗಳ ಮುಗ್ಧತೆಯನ್ನು ತನ್ನ ಬಂಡವಾಳವನ್ನಾಗಿ ಮಾಡಿಕೊಂಡು ಅವರಿಗೆ ದೀಕ್ಷೆ ಕೊಡುವ ನೆಪದಲ್ಲಿ ಅವರನ್ನು ಸುಲಿದ ಕಂಠೀಬಾಬಾನ ಚಿತ್ರವನ್ನು ಲೇಖಕರು ಚೆನ್ನಾಗಿ ಮೂಡಿಸಿರುವರು. ಕಂಠೀಬಾಬಾನ ಪ್ರಭಾವಶಾಲೀ ವರ್ಚಸ್ಸನ್ನು ಆದಿವಾಸಿಗಳ ಮತ ಗಳಿಸುವಲ್ಲಿ ಬಳಸಿಕೊಂಡ ರಾಜಕಾರಣಿಗಳು ತುರ್ತು ಪರಿಸ್ಥಿತಿಯಲ್ಲಿ ಆತ ಸರಕಾರಕ್ಕೆ ಆದಾಯಕರ ಕೊಡದೇ ಸಂಪತ್ತನ್ನು ಕೂಡಿಹಾಕಿ ಮೋಸಮಾಡಿದ್ದಾನೆಂದು ಅವನ ಅಪಾರ ಸಂಪತ್ತನ್ನು ಜಪ್ತಿಮಾಡಿಸಿದ್ದಲ್ಲದೆ ಅವನನ್ನು ಬಂಧಿಸಿ ಕಾರಾಗೃಹದಲ್ಲಿಡಿಸಿದ್ದ ರಾಜಕಾರಣಿಗಳ ಗೋಮುಖ ವ್ಯಾಘ್ರತನವನ್ನು ಲೇವಡಿ ಮಾಡಿದಂತಿದೆ.

ಪ್ರವಾಸ ಸಾಹಿತ್ಯವು ಸಾಮಾಜಿಕ ಅಧ್ಯಯನದತ್ತಲೂ ಮುಖ ಮಾಡಬಹುದೆಂಬುದಕ್ಕೆ ಇಲ್ಲಿ ಸಾಕಷ್ಟು ನಿದರ್ಶನಗಳು ಸಿಗುತ್ತವೆ. ಈ ಪ್ರವಾಸ ಸಾಹಿತ್ಯದಲ್ಲಿ ಬರುವ ಘೋಟುಲ್ ಸಾಮಾಜಿಕ ಜೀವನ ಕುತೂಹಲಕಾರಿಯಾಗಿದೆ. ಘೋಟುಲ್ ಕಿರಿಯರಿಗೆಂದೇ ಇರುವ ಜೀವಂತ ವಿದ್ಯಾಲಯ. ಹಳ್ಳಿಯ ಹೊರಗೆ ಊರ ಜನರು ಪ್ರತ್ಯೇಕ ಸ್ಥಳವನ್ನು ಮೀಸಲಿಡುವರು. ಇಲ್ಲಿ ಆರು ವರ್ಷಕ್ಕಿಂತ ಮೇಲ್ಪಟ್ಟ ಮಕ್ಕಳೆಲ್ಲ ಇದರ ಸದಸ್ಯರು. ಉರಿಯುತ್ತಿರುವ ಬೆಂಕಿಯ ಸುತ್ತ ಕುಳಿತು ಹಾಡು, ಕುಣಿತ, ವಾದ್ಯ ನುಡಿಸುವುದು-ಇವುಗಳ ಮೂಲಕ ಮನರಂಜನೆ ಪಡೆಯುವರು. ಕತೆ ಒಗಟು ಹೇಳುವುದು, ಒಬ್ಬರನ್ನೊಬ್ಬರು ಛೇಡಿಸಿ ಕೆರಳಿಸಿ ವಿನೋದವಾಡುವುದು ಮುಂದುವರಿಯುತ್ತದೆ. ಇಲ್ಲಿ ಗಂಡು-ಹೆಣ್ಣುಗಳಿಗೆ ಮುಕ್ತ ಸ್ವಾತಂತ್ರ್ಯ. ಅವರು ತಮಗೆ ಸರಿಕಂಡವರ ಜೊತೆ ಮಲಗುವರು. ಪ್ರಕೃತಿಯ ಮಡಿಲಲ್ಲಿ ಯಾರ ವಿಕೃತಿಗೂ ಆಸ್ಪದವಿಲ್ಲದೆ ಗಂಡು-ಹೆಣ್ಣು ಪರಸ್ಪರ ಆಕರ್ಷಿತರಾಗಿ ಸುಖಿಸುವರು. ಪ್ರತಿಯೊಬ್ಬ ಸುಂದರ ಆಕರ್ಷಕ ಯುವತಿ ಒಂದಿಲ್ಲೊಂದು ದಿನ ಪ್ರತಿಯೊಬ್ಬ ಗಂಡಿನ ಜೊತೆ ಕೊಡುವ ಅವಕಾಶವಿರುವುದರಿಂದ ಇಲ್ಲಿ ಪ್ರೇಮದಲ್ಲಿ ಅಸೂಯೆ, ವೈಮನಸ್ಯ, ನಿರಾಸೆಗಳಿಗೆ ಆಸ್ಪದವಿಲ್ಲ.

ಘೋಟುಲದಲ್ಲಿನ ಚಟುವಟಿಕೆಗಳನ್ನು ಮನೋಜ್ಞವಾಗಿ ತಿಳಿಯಪಡಿಸುವ ಲೇಖಕರು ಕಾಡಿನ ಮಕ್ಕಳ ಅದ್ಭುತ ಜಗತ್ತೊಂದನ್ನು ಪರಿಚಯಿಸುವರು. ಘೋಟುಲದ ಗಂಡು–ಹೆಣ್ಣುಗಳು ಪರಸ್ಪರ ಕೆರಳಿಸುವ ಸಲುವಾಗಿ ಹಾಡುವ ಹಾಡುಗಳನ್ನು ಲೇಖಕರು ಸಂದರ್ಭೋಚಿತವಾಗಿ ಉಲ್ಲೇಖಿಸಿರುವರು. ಅವು ಸ್ವಾರಸ್ಯಪೂರ್ಣವಾಗಿವೆ, ಅರ್ಥಗರ್ಭಿತವಾಗಿವೆ.

ಈ ಪ್ರವಾಸ ಕಥನದ ಕೊನೆಯಲ್ಲಿ ಕಾಲು ಶತಮಾನಕ್ಕಿಂತಲೂ ಹೆಚ್ಚು ಕಾಲ ಆದಿವಾಸಿಗಳೊಂದಿಗೆ ಒಂದಾಗಿ ಬಾಳಿ ಬದುಕಿ ಅವರ ನೋವು ನಲಿವುಗಳನ್ನು ಅರ್ಥಮಾಡಿಕೊಂಡಿದ್ದ ವೆರಿಯರ್ ಎಲ್ವಿನ್ನರು ಕೇಂದ್ರ ಸರ್ಕಾರಕ್ಕೆ ಆದಿವಾಸಿ ಕಲ್ಯಾಣ ಯೋಜನೆಗೆ ಕೆಲವು ಸಲಹೆಗಳನ್ನು ಕೊಟ್ಟದ್ದನ್ನು ವಿವರಿಸಲಾಗಿದೆ. ಆದಿವಾಸಿಗಳ ಆಧುನೀಕರಣಕ್ಕೆ ಸರಕಾರ ನಡೆಸಿರುವ ಹಲವು ಯೋಜನೆಗಳನ್ನು ತಿಳಿಯಪಡಿಸಿ, ಅವುಗಳ ಪ್ರಯೋಜನ ಆದಿವಾಸಿಗಳಿಗೆ ಬರದೆ ಅವರು ಅಧಿಕಾರಿಗಳ ದರ್ಪ, ದೌರ್ಜನ್ಯಕ್ಕೆ, ಶೋಷಣೆಗೆ ಹೆದರಿ ದೂರವೇ ಉಳಿದುದನ್ನು ಮಾರ್ಮಿಕವಾಗಿ ಹೇಳಿರುವರು.

'ಬಸ್ತರ ಪ್ರವಾಸ' ಪ್ರವಾಸ ಸಾಹಿತ್ಯವಾಗಿ ಆದಿವಾಸಿ ಜನಾಂಗವೊಂದರ ಸಾಮಾಜಿಕ ಜೀವನ ವಿಧಾನವನ್ನು, ಸಂಸ್ಕೃತಿಯನ್ನು ಬಹಳ ಸೊಗಸಾಗಿ ಪರಿಚಯಿಸುತ್ತದೆ, ನಮ್ಮ ಪ್ರಜ್ಞೆಯ ಕ್ಷಿತಿಜವನ್ನು ವಿಸ್ತರಿಸುತ್ತದೆ.

ಹೀ.ಚಿ. ಬೋರಲಿಂಗಯ್ಯನವರ 'ಗಿರಿಜನ ನಾಡಿಗೆ ಪಯಣ' ವು ಕರ್ನಾಟಕ ಪಶ್ಚಿಮ ಘಟ್ಟ ಹಾಗೂ ಕರಾವಳಿ ತೀರಗಳಲ್ಲಿ ನಡೆಸಿದ ಅಧ್ಯಯನ ಪ್ರವಾಸದ ಅನುಭವಗಳ ಕಥನವಾಗಿದೆ. "ಈ ಪಯಣದ ಬರಹಗಳು ಗಿರಿಜನರನ್ನು ಕುರಿತ ಆಳವಾದ ಸಂಶೋಧನೆಯಲ್ಲ, ಬದಲಾಗಿ ಕುತೂಹಲದ ಕಣ್ಣು ನೋಡಿದ ಪ್ರಥಮ ಅನುಭವ.'' ಎಂದು ಲೇಖಕರು ಪ್ರಾರಂಭದಲ್ಲಿ ಹೇಳಿರುವ ಮಾತಿನಲ್ಲಿ ಸತ್ಯವಿದೆ. ಲೇಖಕರು ಕನ್ನಡದ ಹೆಸರಾಂತ ಜಾನಪದ ತರುಣ ಸಂಶೋಧಕರು; ಉತ್ಸಾಹದ ಜೊತೆಗೆ ಸಾಹಸವೂ ಇವರ ವ್ಯಕ್ತಿತ್ವದಲ್ಲಿ ಮೈಗೂಡಿರುವುದರಿಂದ ಇಲ್ಲಿನ ಬಹುಪಾಲು ಬರಹಗಳಲ್ಲಿ ಈ ಗುಣಗಳು ಮೇಳನಗೊಂಡಿವೆ. ಗಿರಿಜನರ ಸಮಸ್ಯೆಗಳ ಅಧ್ಯಯನದ ಜೊತೆಗೆ ಅವರ ಜೀವನ ವಿಧಾನ, ಸಂಸ್ಕೃತಿಗಳ ಅಧ್ಯಯನವನ್ನು ಲೇಖಕರು ಇಲ್ಲಿ ಮಾಡಿರುವರು. ಕನ್ನಡದಲ್ಲಿ ಇಂತಹ ಪ್ರಯತ್ನ ಬೆರಳೆಣಿಕೆಯದಾದ್ದರಿಂದ ಈ ಕೃತಿ ಮುಖ್ಯವೆನ್ನಿಸುತ್ತದೆ.

ಇಲ್ಲಿನ ಯಾವುದೇ ಗಿರಿಜನರನ್ನು ತೆಗೆದುಕೊಂಡರೂ ಎಲ್ಲರ ವ್ಯಥೆಯ ಕಥೆ ಒಂದೇ. ಇವರು ಬಡವರು, ಸರಕಾರದ ದಿವ್ಯ ನಿರ್ಲಕ್ಷ್ಯಕ್ಕೆ ಒಳಗಾದವರು, ಇವರ ಮಕ್ಕಳಿಗೆ ಅಕ್ಷರ ಕಲಿಸುವ ವ್ಯವಸ್ಥೆಯಿಲ್ಲ. ಮೇಗಾನೆಯ ಕುಣಬಿಯರ ದುರ್ಗ ಹೇಳುತ್ತಾನೆ : "ನಮ್ಮ ಮಕ್ಕಳಿಗೆ ಅಕ್ಷರ ಕಲಿಸುವುದು ಹೇಗೆ ಸಾಧ್ಯ ಸ್ವಾಮಿ, ಐದು ಸಾವಿರ ಅಡಿ ಇಳಿಯಬೇಕು, ಬೆಟ್ಟದ ಬುಡದಿಂದ ಹಾಡುವಳ್ಳಿಗೆ ೫ ಕಿ.ಮೀ.

ನಡೆಯಬೇಕು. ಇಷ್ಟು ದೂರ ಹೋಗಿ ಮಕ್ಕಳು ಹಿಂತಿರುಗುವುದಾದರೂ ಹೇಗೆ? ನಾವಂತೂ ಕಲಿಯಲಿಲ್ಲ. ನಮ್ಮ ಮಕ್ಕಳಾದರೂ ಕಲಿಯಲಿ ಎಂದರೆ ಯಾರೂ ನಮ್ಮ ಕಡೆ ಗಮನ ಕೊಡುತ್ತಿಲ್ಲ. ಇಲ್ಲಿ ಶಾಲೆ ಸ್ಥಾಪನೆ ಮಾಡಿದರೂ ಪಾಠ ಹೇಳುವ ಮಾಸ್ತರು ಬರುವುದು ಮಾತ್ರ ಅನುಮಾನ.''

ಕಾಡುಗಳ್ಳರ ಲೂಟಿಯಿಂದಾಗಿ ಕಾಡು ದಿನದಿನಕ್ಕೆ ಸೊರಗಿ ಬತ್ತಲೆಯಾಗುತ್ತಿರುವುದರ ಬಗೆಗೆ ಲೇಖಕರ ಕಳಕಳಿಯಿದೆ. ಗೋವರ್ಧನಗಿರಿ, ಕಾನೂರುಕೋಟೆ, ಮೇಘಾನೆ ಮುಂತಾದ ಬೆಟ್ಟಸಾಲುಗಳಲ್ಲಿ ಕಾಡು ಸೂರೆಯಾಗುತ್ತಿರುವುದನ್ನು ಲೇಖಕರು ಮನಮುಟ್ಟುವಂತೆ ವಿವರಿಸಿರುವರು. ಸಹ್ಯಾದ್ರಿ ಬೋಳಾಗುತ್ತಿರುವ ವಾಸ್ತವ ಚಿತ್ರ ನಮ್ಮನ್ನು ವಿಚಾರಮಾಡುವಂತೆ ಪ್ರೇರೇಪಿಸುತ್ತದೆ. ಸಹ್ಯಾದ್ರಿಯ ಕಾಡನ್ನು ನಾಶಮಾಡಿ ಅಲ್ಲಿ ಲಾವಂಚದ ಹುಲ್ಲು ಬೆಳೆಯುತ್ತಿರುವ ಕೇರಳದ ಬೇರಿಗಳ ಹೊಸ ಉದ್ಯಮದ ವಿವರ ಓದಿ ಬೆಕ್ಕಸಬೆರಗಾಗುತ್ತೇವೆ. ಲಾವಂಚದ ಬೇರಿನಿಂದ ಎಣ್ಣೆ ಒಸರುತ್ತದೆ. ಲೆಮನ್‌ಗ್ರಾಸ್ ಹುಲ್ಲಿನಿಂದ ಎಣ್ಣೆ ಬರುತ್ತದೆ. ಈ ಸುವಾಸನಾ ಎಣ್ಣೆ ಬರಲು ಲಾವಂಚದ ಬೇರನ್ನು 48 ಗಂಟೆ ಬೇಯಿಸಬೇಕು. ಲೆಮನ್‌ಗ್ರಾಸ್ ಹುಲ್ಲನ್ನು 12 ಗಂಟೆ ಬೇಯಿಸಬೇಕು. ಈ ಭಟ್ಟಿಯಿಳಿಸುವ ಕಾರ್ಯಕ್ಕೆ ಹೇರಳವಾಗಿ ಕಟ್ಟಿಗೆ ಬೇಕು. ಕೈಗೆ ಸಿಕ್ಕಿದ ಮರ ಕಡಿದು ಉಬ್ಬೆಗೆ ತುಂಬುತ್ತಾರೆ. “ಒಂದು ಸಲಕ್ಕೆ ಒಂದು ಬುಟ್ಟಿಯಿಂದ ಒಂದು ಕೆ.ಜಿ. ಎಣ್ಣೆ ಸಿಗುತ್ತದೆ. ಒಂದು ಕೆ.ಜಿ. ಎಣ್ಣೆಗೆ 1300 ರೂಪಾಯಿ. ಗೋವರ್ಧನಗಿರಿ ಪ್ರದೇಶದ ಬಚ್ಚೋಡಿಯಲ್ಲಿನ ಒಂದು ವ್ಯವಸ್ಥಿತ ಗುಂಪು ಇಂಥ 138 ಭಟ್ಟಿಗಳನ್ನು ಒಂದೇಸಲ ಪ್ರತಿಷ್ಠಾಪಿಸಿ ಕೇವಲ 48 ಗಂಟೆಗಳಲ್ಲಿ 138 ಲೀಟರ್ ಎಣ್ಣೆಯನ್ನು ತೆಗೆದರಂತೆ. ಇದರ ಮೌಲ್ಯ ಸುಮಾರು 2 ಲಕ್ಷ ರೂಪಾಯಿ. ಒಬ್ಬ ಫಾರೆಸ್ಟ್ ಗಾರ್ಡ್ ಪ್ರಕಾರ ಇದಕ್ಕೆ ಖರ್ಚಾದ ಉರುವಲಿನ ಮೌಲ್ಯವೂ 2 ಲಕ್ಷ ರೂಪಾಯಿಗೆ ಕಡಿಮೆಯಿಲ್ಲ.'' ಕಾಡುಗಳ್ಳರ ದುರಾಸೆಗೆ ಮಿತಿಯೇ ಇಲ್ಲ. ಇದಕ್ಕೆ ಇನ್ನೊಂದು ಉದಾಹರಣೆ ಮಲೆನಾಡಿನಲ್ಲಿ ಬೃಹದಾಕಾರವಾಗಿ ಬೆಳೆಯುವ ಬಲಿಷ್ಠವಾದ ‘ಮರ ಧೂಮ’ ದಿನದಿನಕ್ಕೆ ಒಣಗುತ್ತಿರುವುದು. ‘ಧೂಮ’ ವೃಕ್ಷದ ಕಾಂಡದಲ್ಲಿ ಸುವಾಸನೆಯ ತೈಲ ಅಡಗಿದೆಯೆಂದು ಹೊಸದಾಗಿ ಕಂಡುಹಿಡಿಯಲಾಯಿತಂತೆ. ಕಾಡುಗಳ್ಳರು ಧೂಮಮರದ ಕಾಂಡಕ್ಕೆ ಬೈರಿಗೆ ಹಿಡಿದು ಅಲ್ಲಿದ ಜಿನುಗುವ ಸುವಾಸನಾಯುಕ್ತ ಅಂಟನ್ನು ಸಂಗ್ರಹಿಸಹೊರಟರು. ಇದರಿಂದಾಗಿ ನಾಗವಳ್ಳಿ ಪ್ರಾಂತ್ಯದ ಸುತ್ತಿನಲ್ಲಿ 300 ಮರಗಳು ಒಣಗಿ ನಿಂತಿವೆಯಂತೆ. ಆ ಮರಗಳ ಅಂದಾಜು ಬೆಲೆ 150 ಲಕ್ಷ!

ಲೇಖಕರಿಗೆ ಗಿರಿಜನರ ಬಗೆಗೆ ಅಪಾರವಾದ ಪ್ರೀತಿಯಿದೆ. ಅವರ ಜನಪದ ಕಲೆಯ ಬಗೆಗೆ ಬಡತನದಲ್ಲೂ ಅವರು ಬಾಳುತ್ತಿರುವ ಸಂತೃಪ್ತಿಯ ಬದುಕಿನ ಬಗೆಗೆ ಮೆಚ್ಚುಗೆಯಿದೆ. ಸರಕಾರ ಅವರ ಜೀವನ ಸುಧಾರಣೆಗಾಗಿ ಏನೂ

ಕಾರ್ಯಮಾಡುತ್ತಿಲ್ಲವಲ್ಲಾ ಎನ್ನುವ ಬಗೆಗೆ ಅಸಹನೆಯಿದೆ. ಆಧುನಿಕತೆಯ ಗಾಳಿ ಈ ಗಿರಿಜನರ ಪೋಡುಗಳಿಗೂ ಬೀಸಿ ಪರಂಪರೆಯಿಂದ ಬೆಳೆದು ಬಂದ ಉಚ್ಚಸಂಸ್ಕೃತಿಯೊಂದನ್ನು ಬಲಿತೆಗೆದುಕೊಳ್ಳುತ್ತಿದೆಯಲ್ಲಾ ಎಂಬ ಬಗೆಗೆ ವಿಷಾದವಿದೆ.

ಗಿರಿಜನರ ಬದುಕನ್ನು ಹತ್ತಿರದಿಂದ ನೋಡಿದ ಲೇಖಕರು ತಮ್ಮ ಅನುಭವಗಳನ್ನು ಭಾಷೆಯಲ್ಲಿ ಹದವಾಗಿ ಬೆರೆಸಿ ಚೇತೋಹಾರಿಯಾಗುವಂತೆ ಹೇಳುವರು. ಕಂಡದ್ದನ್ನು ಭಾವಪುಕ್ಕಿ ವರ್ಣಿಸಲು ತಕ್ಕ ಭಾಷೆ ಲೇಖಕರಿಗೆ ಇದೆ. ಉದಾಹರಣೆಗೆ ಈ ಸಾಲುಗಳನ್ನು ಗಮನಿಸಬಹುದು: "ನಾವು ಮೇಲೇರತೊಡಗಿದಂತೆ ಮಂಜು ಮತ್ತು ಮಳೆಯ ಚದುರಂಗದಾಟ ನಡೆದೇ ಇತ್ತು. ಆಗಾಗ ಮಳೆ, ಹಿಂದೆಯೇ ದಟ್ಟ ಮಂಜು, ಮತ್ತೆ ಮಂದ ಬೆಳಕು. ಒಂದಿಷ್ಟು ಬಿಸಿಲು ಇಣುಕಿದರಂತೂ ನಮ್ಮ ಕಣ್ಮುಂದೆ ಕಿನ್ನರಲೋಕವೇ ತೆರೆದುಕೊಳ್ಳುತ್ತಿತ್ತು. ಬೃಹದಾಕಾರದ ಬೆಟ್ಟಸಾಲುಗಳ ಮೇಲೆ ಉದುರುವ ಏಳುವ ಅಂಟುಪುರಲೆಗಳಂತಹ ತಿಳಿ ಮೋಡಗಳು ಆಗಾಗ ಬಿದ್ದ ಮಳೆಯಿಂದ ಮೈತೊಳೆದುಕೊಂಡು ನಳನಳಿಸುವ ಹಸಿರೆಸಿರು ಕಾಡು. ದೃಷ್ಟಿ ಹಾಯಿಸುವವರೆಗೆ ಅದೇ ಕಾಡು, ಅದೇ ಗುಡ್ಡ, ಅದೇ ಬೆಟ್ಟಗಳ ವರ್ಣಮಯ ಮಾಲೆ. ಮೇಲೇರುತ್ತಾ ಹೋದಂತೆ ಹಿಂದೆ ನೋಡಿದ ಬೃಹತ್ ಬೆಟ್ಟಗಳು ಮರಿಗಳಾಗಿಬಿಡುತ್ತಿದ್ದುವು. .....'' (ಪು. 34) ಶತಾಯುಷಿ ಸೈಮನ್ ಲೋಬೋವಿನ ವ್ಯಕ್ತಿಚಿತ್ರವನ್ನು ಲೇಖಕರು ಸೊಗಸಾಗಿ ಕೊಟ್ಟಿರುವರು (ಪು. 35–37).

ಲೇಖಕರು ಸಾಹಸಯಾತ್ರಿಯಾಗಿ ಗಿರಿಜನರ ಸಾಮಾಜಿಕ ಜೀವನ, ನಂಬಿಕೆಗಳು, ಆಚಾರ–ವಿಚಾರ, ಜನಪದ ಕಲೆ, ಸಂಸ್ಕೃತಿ–ಹೀಗೆ ಹಲವು ದೃಷ್ಟಿಕೋನಗಳಿಂದ ಅಧ್ಯಯನ ನಡೆಸಿರುವರು. ಗಿರಿಜನರನ್ನು ಭೇಟಿಮಾಡಲು ಅವರು ಪಟ್ಟಿರುವ ಶ್ರಮ ಅಪಾರವಾದುದು. ಅವರ ಪರಿಶ್ರಮ ಈ ಪ್ರವಾಸ ಕಥನದಲ್ಲಿ ಸಾರ್ಥಕತೆಯನ್ನು ಕಂಡುಕೊಂಡಿರುವುದು ಮೆಚ್ಚಲೇಬೇಕಾದ ಸಂಗತಿ.

ಮೂರ್ತಿ ಭೀಮಸೇನರಾವ್‌ರವರ 'ಅಮೇರಿಕಾ ಜೀವನದ ಅನುಭವಗಳು' ದೀರ್ಘಕಾಲ ಅಮೇರಿಕಾದಲ್ಲಿ ವಾಸವಿದ್ದು ಅಲ್ಲಿನ ಜನಜೀವನದಲ್ಲಿ, ಸಂಸ್ಥೆಗಳಲ್ಲಿ ಭಾಗವಹಿಸುವ ಅವಕಾಶ, ದೇಶದಾದ್ಯಂತ ಕೈಗೊಂಡ ಪ್ರವಾಸಗಳ ಪರಿಣಾಮವಾಗಿ ಮೂಡಿದ ವೈವಿಧ್ಯಮಯವಾದ ಅನುಭವಗಳ ವಿವರಣೆಯನ್ನೊಳಗೊಂಡ ಪ್ರವಾಸ ಕಥನವಾಗಿದೆ. ಲೇಖಕರು ಭಾರತದಿಂದ ವಲಸೆ ಹೋಗಿ ಅಮೇರಿಕಾದಲ್ಲಿ ನೆಲೆಸಿರುವರು. ಫ್ಲಾರಿಡಾ ವಿಶ್ವವಿದ್ಯಾನಿಲಯದ ವೈದ್ಯಕೀಯ ಕಾಲೇಜಿನಲ್ಲಿ ವಿಸಿಟಿಂಗ್ ಪ್ರೊಫೆಸರ್ ಆಗಿ ಸೇವೆ ಸಲ್ಲಿಸುತ್ತಿದ್ದು ತಾಯಿಯ ಹಾಲು ಮತ್ತು ಶಿಶುಪೋಷಣೆಯ ವಿಷಯದಲ್ಲಿ ಸಂಶೋಧನೆ ನಡೆಸಿರುವರು. ಲೇಖಕರು 1956ರಲ್ಲಿ ಮೊದಲಿಗೆ ಅಮೇರಿಕಾಕ್ಕೆ ಉನ್ನತ ಶಿಕ್ಷಣಕ್ಕಾಗಿ (ಇಲ್ಲಿನಾಯ್ಸ್ ವಿಶ್ವವಿದ್ಯಾನಿಲಯದಲ್ಲಿ ಡಾಕ್ಟರೇಟ್ ಪದವಿಗೆ ವ್ಯಾಸಂಗ ಮಾಡಲು) ತೆರಳಿದರು. ಎರಡನೆಯ ಬಾರಿ ಅಮೇರಿಕಾಕ್ಕೆ ಹೊರಟಿದ್ದು 1984ರಲ್ಲಿ, ಕೇಂದ್ರ ಸರಕಾರದ

ಹುದ್ದೆಯಿಂದ ನಿವೃತ್ತರಾಗಿ ವಲಸಿಗರಾಗಿ ಅಲ್ಲಿ ನೆಲೆಸಲು. ಈ ಪ್ರವಾಸ ಕಥನ ಬರೆಯುತ್ತಿರುವುದು 1991ರಲ್ಲಿ. 36 ವರ್ಷಗಳ ಹಿಂದೆ ಕಂಡ ಅಮೇರಿಕಾಕ್ಕೂ ಈಗ ನೋಡುತ್ತಿರುವ ಅಮೇರಿಕಾಕ್ಕೂ ಬಹಳ ವ್ಯತ್ಯಾಸವಿರುವುದನ್ನು ಲೇಖಕರು ಕೃತಿಯ 'ಪ್ರಸ್ತಾವನೆ'ಯಲ್ಲಿ ಚೆನ್ನಾಗಿ ಗುರುತಿಸಿರುವರು.

ಈ ಪ್ರವಾಸ ಕಥನದಲ್ಲಿ ಲೇಖಕರ ಅಮೇರಿಕಾದ ಮೊದಲ ಭೇಟಿಯ ಅನುಭವಗಳು ವಿಶೇಷವಾಗಿ ದಾಖಲಾಗಿವೆ. ಅಮೇರಿಕಾಕ್ಕೆ ಹಡಗಿನಲ್ಲಿ ಪ್ರಯಾಣ ಬೆಳೆಸುವುದರೊಂದಿಗೆ ಪ್ರವಾಸ ಕಥನ ಪ್ರಾರಂಭವಾಗುತ್ತದೆ. ಇಲ್ಲಿನಾಯ್ಸ್ ವಿಶ್ವವಿದ್ಯಾನಿಲಯದ ಕ್ಯಾಂಪಸ್ ಜೀವನ, ಅಮೇರಿಕಾದಲ್ಲಿ ಉಚ್ಚ ವಿದ್ಯಾಭ್ಯಾಸ ಕ್ರಮ, ವಿದ್ಯಾರ್ಥಿ ಜೀವನ ಹಾಗೂ ಅದರ ಕೆಲವು ಸ್ಮರಣೀಯ ಅನುಭವಗಳು ಅಮೇರಿಕಾ ದೇಶದಲ್ಲಿನ ಪ್ರೇಕ್ಷಣೀಯ ಸ್ಥಳಗಳು, ಅಮೇರಿಕನ್ನರ ಜೀವನ ವಿಧಾನ, ಅಮೇರಿಕನ್ನರ ಹಬ್ಬಗಳು, ಅಮೇರಿಕಾದಲ್ಲಿ ಅವರ ವಯಸ್ಕರಿಗಿರುವ (Senior citizens) ಅನುಕೂಲಗಳು, ವಿದ್ಯಾರ್ಥಿಗಳಿಗಿರುವ ಸೌಲಭ್ಯಗಳು–ಹೀಗೆ ವಿಷಯಗಳು ವಿವರಣೆಗೊಳ್ಳುತ್ತವೆ. ತಮಗೆ ತಿಳಿದುದೆಲ್ಲವನ್ನೂ ಹೇಳುವ ಧಾಟಿಯಲ್ಲಿ ಅನುಭವಗಳು ಇಲ್ಲಿ ದಾಖಲೆಗೊಂಡಿವೆ. ಅಮೇರಿಕಾ–ಇಂಡಿಯಾ ನಡುವಣ ಕೆಲವು ನಿಲವುಗಳ ಬಗೆಗೂ ಲೇಖಕರು ಪ್ರಸ್ತಾಪಿಸಿರುವರು. ನಮ್ಮ ಭಾರತೀಯ ಸಂಸ್ಕೃತಿಯ ಉತ್ತಮ ಅಂಶಗಳ ಬಗೆಗೂ ಲೇಖಕರು ಹೇಳಿರುವರು. ಆದರೂ, ಈ ಪ್ರವಾಸ ಕಥನ ವಿವರಗಳ ಪೂರೈಕೆಯ ಪ್ರಾಥಮಿಕ ಹಂತದಿಂದ ಮೇಲೇಳುತ್ತಿಲ್ಲ. ಯೌವನದ ದಿಶೆಯಲ್ಲಿ ಅಮೇರಿಕಾದಲ್ಲಿ ಉಚ್ಚ ಶಿಕ್ಷಣ ಪಡೆದು ಬಂದು ಭಾರತದಲ್ಲಿ ಹಲವಾರು ವರ್ಷವಿದ್ದು ಮತ್ತೆ ಅಮೇರಿಕಾಕ್ಕೆ ವಲಸೆ ಹೋಗಿ ನೆಲೆಸಿರುವ ಲೇಖಕರು ಪ್ರವಾಸ ಕಥನ ಬರೆಯುವ ವೇಳೆಗೆ ಮಾಗಿರುವರು. ಅವರ ಪಕ್ವವಾದ ಅನುಭವಗಳು ಪೂರ್ವ ಪಶ್ಚಿಮಗಳ ತುಲನೆಯಲ್ಲಿ ಕಾಣಬಹುದೆಂದು ಬಹಳ ಆಸೆಯಿಟ್ಟುಕೊಂಡು ಈ ಕೃತಿಯನ್ನು ಓದಿದಾಗ ನಿರಾಸೆಯಾಗುತ್ತದೆ. ಬಾಳಸಂಜೆಯಲ್ಲಿ ನಿಂತು ಎರಡೂ ದೇಶಗಳ ಬಗೆಗೆ ವಿಚಾರ ಮಾಡುವಾಗ ಲೇಖಕರಿಗೆ ಭಾರತೀಯ ಸಂಸ್ಕೃತಿ ಉತ್ತಮ ಅಂಶಗಳು ಒಂದು ಗುಂಗಾಗಿ, ನೊಸ್ಟಾಲ್ಜಿಯಾ ಆಗಿ ಕಾಡುತ್ತವೆ. ಹೀಗಾಗಿ ತುಲನಾತ್ಮಕ ವಿವೇಚನೆಯಲ್ಲಿ ಏಕಪಕ್ಷೀಯವಾದ ನಿಲುವನ್ನು ನಾವು ಕಾಣುತ್ತೇವೆ. ಲೇಖಕರಿಗೆ ಒಂದು ಒಳ್ಳೆಯ ಪ್ರವಾಸ ಕಥನವನ್ನು ಬರೆಯುವ ಸಾಧ್ಯತೆ ತಪ್ಪಿಹೋದುದಕ್ಕೆ ವಿಷಾದವಾಗುತ್ತದೆ.

ನಾಗತಿಹಳ್ಳಿ ಚಂದ್ರಶೇಖರ ಅವರಿಗೆ ಎರಡು ತಿಂಗಳ ಫ್ರಾನ್ಸ್ ಪ್ರವಾಸ ಒದಗಿಬಂದದ್ದು ಆಕಸ್ಮಿಕವಾಗಿ, ಗೆಳೆಯ ಸುರೇಶ್ ಹೆಬ್ಳೀಕರ್ ಅವರಿಂದ. ಫ್ರಾನ್ಸ್‌ಗೆ ಹೋಗಲು ತಮಗೆ ಬಂದ ಅವಕಾಶವನ್ನು ಸುರೇಶ್ ಹೆಬ್ಳೀಕರ್ ತಮ್ಮ ಗೆಳೆಯನಿಗಾಗಿ ಬಿಟ್ಟುಕೊಟ್ಟರು. ಮುಂಬೈನಲ್ಲಿರುವ ಈಸ್ಟ್‌ವೆಸ್ಟ್ ಕಲ್ಚರಲ್

ಅಸೋಸಿಯೇಷನ್ ಒಂದು ಸಾಂಸ್ಕೃತಿಕ ವಿನಿಮಯ ಸಂಸ್ಥೆ. ಈ ಸಂಸ್ಥೆ ದೇಶದ ವಿವಿಧ ರಾಜ್ಯಗಳ ತರುಣರನ್ನು ಫ್ರಾನ್ಸ್‌ಗೆ ಕಳುಹಿಸಲಿತ್ತು. ನಾಗತಿಹಳ್ಳಿ ಈ ಅವಕಾಶ ಬಳಸಿಕೊಂಡು ಫ್ರಾನ್ಸ್ ದೇಶದಲ್ಲಿ ಸುತ್ತಾಡಿ ಬಂದರು. ಅವರ ಪ್ರವಾಸದಲ್ಲಿ ಅಮೇರಿಕೆಯು ಸೇರಿದ್ದರೂ ಆ ದೇಶವನ್ನು ಅವರು ಭಾಗಶಃ ನೋಡಿಬಂದರು. ಹೀಗಾಗಿ ಪ್ರವಾಸ ಕಥನದ ತುಂಬ ಫ್ರಾನ್ಸ್ ಪ್ರವಾಸಾನುಭವ ಆವರಿಸಿಕೊಂಡುಬಿಟ್ಟಿದೆ. ತಮ್ಮ ಪ್ರವಾಸ ಮುಗಿಸಿಬಂದ ಉತ್ಸಾಹದಲ್ಲೇ ನಾಗತಿಹಳ್ಳಿ ತಮ್ಮ ಅನುಭವಗಳಿಗೆ ಒಂದು ರೂಪ ಕೊಟ್ಟು'ಅಯನ' ಎಂಬ ಕೃತಿ ರೂಪದಲ್ಲಿ ಪ್ರಕಟಿಸಿದರು. ಅದಕ್ಕೆ ಪ್ರತಿಕ್ರಿಯೆ ಹೇಗೆ ಬಂದಿತೆಂಬುದನ್ನು ಅವರು ಹೀಗೆ ಹೇಳಿಕೊಂಡಿರುವರು : "ಒಬ್ಬರು ಹೇಳಿದರು–'ನಾನೊಂದು ದೇಶದಲ್ಲಿ ಏಳುವರ್ಷ ಇದ್ದೆ. ಒಂದಕ್ಷರ ಬರೆಯಲಾಗಲಿಲ್ಲ. ನೀವು ಎರಡು ತಿಂಗಳಲ್ಲಿ ಫ್ರಾನ್ಸ್ ಬಗ್ಗೆ ಹೇಗೆ ಬರೆದ್ರಿ?' ಅವರ ದನಿಯಲ್ಲಿ ಕುಹಕವಿತ್ತು. ನಾನು ಹೇಳಿದೆ : ಎಷ್ಟು ವರ್ಷ ಇರ್ತೀವಿ ಅನ್ನೋದು ಮುಖ್ಯ ಅಲ್ಲ, ಹೇಗಿರ್ತೀರಿ ಅನ್ನೊಂದು ಮುಖ್ಯ ..... ಒಳಗಣ್ಣು ತೆರೆಯದೆ ಇದ್ದವರಿಗೆ ನೂರು ವರ್ಷ ಕೂಡಾ ಏನೂ ಅನ್ನಿಸಲ್ಲ.''

ನಾಗತಿಹಳ್ಳಿಯವರ ಈ ಪ್ರವಾಸಕಥನದ ಪ್ರಮುಖ ಆಕರ್ಷಣೆಯೆಂದರೆ ನಗೆಯ ಲೇಪನದ ಆಹ್ಲಾದಕರ ನಿರೂಪಣೆ. ಫ್ರಾನ್ಸ್‌ನ ಕಲೆ, ಸಾಹಿತ್ಯ, ಸಂಸ್ಕೃತಿಗಳ ಪರಿಚಯವನ್ನು ತಮ್ಮ ಪ್ರವಾಸಕಾಲದಲ್ಲಿ ಪಡೆಯಬೇಕೆಂಬ ಉತ್ಸಾಹ ಲೇಖಕರಲ್ಲಿದೆ. ಅದಕ್ಕಾಗಿ ಬ್ರೆಡ್ಡು ತಿಂದುಕೊಂಡು ಅಲೆದಾಡಿದ್ದಾರೆ. ಕಂಡಕಂಡವರನ್ನು ಮಾತನಾಡಿಸಿದ್ದಾರೆ. ತಮ್ಮ ಸುತ್ತಾಟದಲ್ಲಿ ವೃದ್ಧರ ಏಕಾಕಿತನವನ್ನು ಗಮನಿಸಿರುವ ನಾಗತಿಹಳ್ಳಿ, ಯುವಜನರು ಆಲಸಿಗಳಾಗುತ್ತಿರುವುದು, ದಿಕ್ಕುಗೆಡುತ್ತಿರುವುದು, ಮಾದಕವಸ್ತುಗಳ ದಾಸರಾಗುತ್ತಿರುವುದು ವೃದ್ಧರ ಚಿಂತೆಗೆ ಕಾರಣವಾಗಿರುವುದನ್ನೂ ಲಕ್ಷಿಸಿರುವರು. ಅವರು ಫ್ರಾನ್ಸ್‌ನ ಯುವಜನರ ಸಮಸ್ಯೆಯ ಬಗೆಗೆ ವಿಚಾರಮಾಡುತ್ತಾ ಭಾರತದ ಕಡೆ ಹೊರಳುವರು "ನಮ್ಮದು ಸಮಸ್ಯೆಗಳನ್ನು, ಸಮಸ್ಯೆಗಳಿಂದ ಬಿಡಿಸುತ್ತಾ ಹೊಸ ಸಮಸ್ಯೆಗಳ ಸುಳಿಗೆ ಸಿಕ್ಕಿಬೀಳುತ್ತಾ, ಯಾವ ಸಮಸ್ಯೆಗಳೂ ಇತ್ಯರ್ಥವಾಗದೆ ಉಳಿದ ಸಮಸ್ಯಾತ್ಮಕ ನಾಡು'' ಎಂದು ವ್ಯಂಗ್ಯವಾಡುವರು (ಪು. 65).

ಅತಿಥೇಯ ಜಾನ್ ನಾಗತಿಹಳ್ಳಿಯವರನ್ನು ತನ್ನ ಅಣ್ಣನ ದ್ರಾಕ್ಷಿ ಹೊಲಕ್ಕೆ ಕರೆದುಕೊಂಡು ಹೋದ ಅಲ್ಲಿನ ಸಮೃದ್ಧಿ ಸಂತೃಪ್ತಿ ನೋಡಿದ ಅವರು "ಏನು ಮಣ್ಣು ಅದು. ಏನು ಭೂಮಿತಾಯಿ ಅವಳು. ನನಗೆ ಒಂದು ಮಾತು ಖಾತರಿಯಾಗಿ ಅನ್ನಿಸಿತು. ಈ ಮಣ್ಣು ಎಲ್ಲರೂ ನೆಮ್ಮದಿಯಾಗಿ ಬದುಕುವಷ್ಟು ವಿಶಾಲವೂ ಶ್ರೀಮಂತವೂ ಆಗಿದೆ. ಭಾರತೀಯರಿಗೆ ಏನೋ ಆಗಿದೆ. ಎಲ್ಲ ಹಾಳುಗೆಡುವಿದ್ದಾರೆ. ಪುಟಾಣಿ ರಾಜ್ಯಗಳೆಲ್ಲಾ ಅಷ್ಟೊಂದು ಬೋಗ್ಯ ಮಾಡಿರುವಾಗ ನಾವು ಬೀಳುಬಿಟ್ಟು

ಕುಳಿತಿದ್ದೀವಲ್ಲಾ ತಪ್ಪು ಎಲ್ಲಿದೆ? ಹೊಲ ಖಾಲಿ ಇದ್ದರೂ ಉಣ್ಣುವ ಬಾಯಿಗಳು ಮಾತ್ರ ಹೆಚ್ಚುತ್ತಿದ್ದರೆ ಹೇಗೆ? ನಮ್ಮ ರೈತ ಸಾಲದಿಂದ ಮುಕ್ತನಾಗುವ ದಿನಗಳೇ ಕಾಣುವುದಿಲ್ಲ. ಜಡ್ಡುಗಟ್ಟಿರುವ ವ್ಯವಸಾಯ ವಿಧಾನಗಳು, ಜನರ ತಂಟೆಗೆ ಹೋಗದ ವ್ಯವಸಾಯ ವಿಶ್ವವಿದ್ಯಾನಿಲಯಗಳು, ಅತಿವೃಷ್ಟಿ, ಅನಾವೃಷ್ಟಿಗಳು, ಸಾಲ ನೀಡುವ ಸೋಗುಗಳು, ಬೆಳೆ ನುಂಗುವ ಮಧ್ಯವರ್ತಿಗಳು, ಚಳುವಳಿಗಳಲ್ಲಿ ದಿಕ್ಕೆಟ್ಟ ಸಮುದಾಯ, ರೈತಾಪಿ ಜನರನ್ನು ಅಲಕ್ಷ್ಯ ಮಾಡುವ ನಾಗರೀಕ ಸಮಾಜ, ಅಧಿಕಾರಶಾಹಿಗಳು–ಈ ವಿಷವರ್ತುಲವನ್ನು ಹೇಗೆ ಸರಿಪಡಿಸುವುದು?'' ಎಂದು ಚಿಂತಿಸುವರು (ಪು. 81).

ಪ್ಯಾರಿಸ್‌ನಲ್ಲಿ ಕುತೂಹಲಕ್ಕೆ ನೈಟ್‌ಕ್ಲಬ್ಬಿಗೆ ಹೋಗಿದ್ದ ನಾಗತಿಹಳ್ಳಿಯವರು ಅದರ ವಿವರ ಕೊಡಹೋಗುವುದಿಲ್ಲ. ಅದಕ್ಕೆ ಕಾರಣ "ಓದುಗರಿಗಿಂತ ಹೆಂಡತಿಯ ಪ್ರತಿಕ್ರಿಯೆಗಳು ಹಿಂಸಾರೂಪದಲ್ಲಿರುತ್ತವೆಯಾದ್ದರಿಂದ'' ಎನ್ನುವರು. ಲೇಖಕರ ರಂಜನೆಯ ಬರವಣಿಗೆಗೆ ಈ ಉದಾಹರಣೆ ಸಾಕು.

"ಭಾರತೀಯ ಸಂಜೆ'' ಕಾರ್ಯಕ್ರಮದಲ್ಲಿ ನಾಗತಿಹಳ್ಳಿಯವರನ್ನು ಭೇಟಿ ಮಾಡಿದ ಮುಸ್ಲಿಂ ಹುಡುಗಿ ಹೌರಾ ಮುಗ್ಧ ಪ್ರಶ್ನೆಯೊಂದನ್ನು ಕೇಳುವಳು : "ಭಾರತದಲ್ಲಿ ಮುಸ್ಲಿಮರನ್ನು ತುಂಬಾ ಹೀನಾಯವಾಗಿ ನಡೆಸಿಕೊಳ್ಳುತ್ತಾರಂತೆ. ಹಿಂದೂಗಳು ಅವರನ್ನು ಚಿತ್ರಹಿಂಸೆ ಮಾಡುತ್ತಾರಂತೆ. ಹೌದೆ?'' ಈ ವಿಷಯವನ್ನು ಆ ಮುಗ್ಧ ಹುಡುಗಿಯ ತಲೆಯಲ್ಲಿ ಬಲವಂತವಾಗಿ ತುರುಕಿದವನು ಅವಳ ಅಣ್ಣನೆಂಬುದು ಹೌರಾ ಜೊತೆಗೆ ನಡೆಸಿದ ಮಾತುಕತೆಯಿಂದ ನಾಗತಿಹಳ್ಳಿ ತಿಳಿಯುವರು. ಆಕೆ ತನ್ನ ಅಣ್ಣನಿಗೆ ಹೆದರಿ ನಾಗತಿಹಳ್ಳಿಯವರ ಜೊತೆ ಮಾತನಾಡುವಾಗ ಬಹಳ ಆತಂಕದಿಂದಿದ್ದುದನ್ನು ಗಮನಿಸಿದ ಅವರು "ನಿಮಗೆ ನನ್ನ ಜೊತೆ ಮಾತನಾಡುವುದು ಕಷ್ಟವಾಗಿದ್ದರೆ ಮಾತನಾಡುವುದೇ ಬೇಡ'' ಎನ್ನುವರು.

ನ್ಯೂಯಾರ್ಕ್‌ನಿಂದ ಮುಂಬೈಗೆ ಬಂದಾಗ ನಾಗತಿಹಳ್ಳಿಯವರ ದೊಡ್ಡ ಸೂಟ್‌ಕೇಸ್ ನೋಡಿ ಸಂಶಯಗೊಂಡ ಕಸ್ಟಮ್ಸ್‌ನವರು ಅದನ್ನು ತೆಗೆಸಿ ನೋಡಿದರು. ಅದರಲ್ಲಿ ಬರೀ ಪುಸ್ತಕಗಳಿದ್ದುದನ್ನು ಕಂಡು 'ಅಮೇರಿಕಾದಿಂದ ಪುಸ್ತಕ ತರ್‍ತಾ ಇದ್ದೀಯಾ? ಐ. ಪಿಟಿ ಯು!' ಎಂದು ಅನುಕಂಪ ಸೂಚಿಸಿ ಬೀಳ್ಕೊಟ್ಟರಂತೆ. ತಮ್ಮನ್ನು ತಾವೇ ಲೇವಡಿ ಮಾಡಿಕೊಳ್ಳುವ ನಾಗತಿಹಳ್ಳಿಯವರ ಬರಹ ಓದುತ್ತಿದ್ದಂತೆಯೇ ನಗೆಯುಕ್ಕಿಸುತ್ತದೆ.

ಹ.ವೆಂ. ನಾಗರಾಜರಾವ್ ರವರು 1973ರಲ್ಲಿ ಸೋವಿಯತ್ ರಷ್ಯದ ನೋವಸ್ತಿ ಪ್ರೆಸ್ ಏಜೆನ್ಸಿ ಅವರ ಆಹ್ವಾನವನ್ನು ಮನ್ನಿಸಿ ರಷ್ಯಾ ದೇಶದ ಪ್ರವಾಸ ಕೈಗೊಂಡರು. ಪ್ರವಾಸ ಕಾಲದಲ್ಲಿ ಮಹರ್ಷಿ ತೋಲ್‌ಸ್ತೋಯ್‌ರವರ ವಾಸಸ್ಥಳವಾದ 'ಯಾಸ್ನಯ ಪಲ್ಯಾನ'ಕ್ಕೆ (ತೊಲ್‌ಸ್ತೋಯ್ ಎಸ್ಟೇಟ್ ಮ್ಯೂಜಿಯಂಗೆ) ಭೇಟಿ

ನೀಡಿದ್ದರು. ಸೋವಿಯತ್ ರಷ್ಯಾದ ಮಹಾನ್ ಲೇಖಕನ ಬದುಕು, ಕೃತಿರಚನೆಗೆ ಪ್ರೇರಣೆ ಮಾಡಿದ ಸ್ಥಳ ಹಾಗೂ ಪರಿಸರದ ಪ್ರಾಮುಖ್ಯತೆಯನ್ನು ತಿಳಿಯಪಡಿಸುವ ಉದ್ದೇಶದಿಂದ 'ಯಾಸ್ನಯ ಪಲ್ಯಾನಾ' ಎಂಬ ಕಿರುಹೊತ್ತಿಗೆಯನ್ನು ಹೊರತಂದುಂತಿದೆ. 'ಯಾಸ್ನಯ ಪಲ್ಯಾನಾ' ಎಂದರೆ ಉಜ್ವಲ ಹುಲ್ಲುಗಾವಲು ಎಂದರ್ಥ. ತೊಲ್‌ಸ್ತೋಯ್‌ರವರ ವಾಸಸ್ಥಳಕ್ಕೆ ವಿಶ್ವದ ಎಲ್ಲೆಡೆಯಿಂದ ಅವರ ಸಾಹಿತ್ಯಾಭಿಮಾನಿಗಳು ಪ್ರವಾಸಿಗಳಾಗಿ ಬರುತ್ತಿರುವರು. ಮಾಸ್ಕೋ ನಗರದಿಂದ 230 ಕಿ.ಮೀ. ದೂರದಲ್ಲಿರುವ ಈ ಪ್ರವಾಸೀ ತಾಣವನ್ನು ತೊಲ್‌ಸ್ತೋಯ್ ಸಾಯುವ ಮೊದಲು ಹೇಗಿತ್ತೊ ಹಾಗೆಯೇ ರಕ್ಷಿಸಿಡಲಾಗಿದೆ.

ಲೇಖಕರು ಈ ವಸ್ತುಸಂಗ್ರಹಾಲಯದ ಎಲ್ಲ ಭಾಗಗಳ ಪರಿಚಯವನ್ನು ಸಾದ್ಯಂತವಾಗಿ ಮಾಡಿಕೊಟ್ಟಿರುವರು. ಆ ಮನೆಯ ಒಂದೊಂದು ಭಾಗವನ್ನೂ ಬಹಳ ಸೂಕಷ್ಮವಾಗಿ ಪರಿಚಯಿಸಿರುವರು. ಜಗತ್ತಿನ ಮಹಾನ್ ಲೇಖಕನೊಬ್ಬನ ಬಾಳಿ ಬದುಕಿದ, ಕೃತಿರಚನೆ ಮಾಡಿದ ಪರಿಸರದ ಬಗೆಗೆ ಇಷ್ಟು ವ್ಯಾಪಕವಾದ ಪರಿಚಯ ಕನ್ನಡದಲ್ಲಿ ಬಂದಿರುವುದು ಬಹುಶಃ ಇದೇ ಮೊದಲು.

ದೇ.ಜ.ಗೌ. ರವರ 'ವಿದೇಶದಲ್ಲಿ ಮೂರು ವಾರ' ಎಂಬ ಕೃತಿಯು ಅದರ ಶೀರ್ಷಿಕೆಯೇ ಹೇಳುವಂತೆ ಒಂದು ತಿಂಗಳ ಕಾಲಾವಧಿಯಲ್ಲಿ ರಷ್ಯಾ, ಆಸ್ಟ್ರಿಯಾ, ಜರ್ಮನಿ—ಈ ದೇಶಗಳಲ್ಲಿ ಸುತ್ತಾಡಿ ಪಡೆದ ಅನುಭವಗಳ ಕಥನವಾಗಿದೆ. ಹಿಂದೆ ಇದೇ ಲೇಖಕರು ವಿದೇಶದಲ್ಲಿ 'ನಾಲ್ಕು ವಾರ' ಎಂಬ ಪ್ರವಾಸ ಕಥನ ಬರೆದಿದ್ದರು. ಅಲ್ಲಿ ಇಂಗ್ಲೆಂಡ್ ದೇಶದ ಪ್ರವಾಸಾನುಭವವೂ ಸೇರ್ಪಡೆಯಾಗಿದ್ದಿತು. ಪ್ರಸ್ತುತ 'ವಿದೇಶದಲ್ಲಿ ಮೂರು ವಾರ' ಕೃತಿಯಲ್ಲಿ ಇಂಗ್ಲೆಂಡ್ ದೇಶದ ಪ್ರವಾಸಾನುಭವವನ್ನು ಬಿಡಲಾಗಿದೆ. ಈ ಕೃತಿಯ ಬಹುಭಾಗವನ್ನು ರಷ್ಯಾ ಪ್ರವಾಸಾನುಭವ ಆಕ್ರಮಿಸಿಕೊಂಡುಬಿಟ್ಟಿದೆ. "ನನ್ನದು ಬಿರುಗಾಳಿ''ಯ ಪ್ರವಾಸವಾದದ್ದರಿಂದ, ನನಗೆ ರಷ್ಯನ್ ಭಾಷೆಯಾಗಲಿ ಜರ್ಮನ್ ಭಾಷೆಯಾಗಲಿ ಬರುತ್ತಿಲ್ಲವಾದ್ದರಿಂದ ಜನಜೀವನದ ಸಂಪೂರ್ಣ ಪರಿಚಯ ನನಗೆ ದೊರೆಯಿತೆಂದು ಹೇಳುವಂತಿಲ್ಲ. ಆಯಾಯ ಜನತೆಯ ನಡುವೆ ನಾಲ್ಕಾರು ವರ್ಷ ಬಾಳಿ, ಅವರ ಭಾಷಾ ಸಾಹಿತ್ಯಗಳನ್ನು ಚೆನ್ನಾಗಿ ವ್ಯಾಸಂಗ ಮಾಡಿದಾಗ, ಅವರ ಸಮಾಜದಲ್ಲಿ ಐಕೀಭವಿಸಿದಾಗ ಮಾತ್ರ ಜನಜೀವನದ ಆಳವಾದ ಪರಿಚಯ ಸಾಧ್ಯವಾಗುತ್ತದೆ. ನನಗೆ ತಿಳಿದಷ್ಟನ್ನು ಮಾತ್ರ ನಾನು ಕಂಡಂತೆ ಮೂರು ರಾಷ್ಟ್ರಗಳ ಜನಜೀವನದ ಸ್ಥೂಲ ರೂಪರೇಷೆಗಳನ್ನು ಇಲ್ಲಿ ವಿವರಿಸಲು ಪ್ರಯತ್ನಿಸಿದ್ದೇನೆ. ಈ ನನ್ನ ವಿವರಣೆಯಲ್ಲಿ ನನ್ನ ಪೂರ್ವಗೃಹದೃಷ್ಟಿ ಹಾಗೂ ಮನಸ್ಸಿನ ಓರೆಕೋರೆಗಳು ಪ್ರತಿಫಲಿತವಾಗಿದ್ದರೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ'' ಎಂದು ಲೇಖಕರು ತಮ್ಮ ಇತಿಮಿತಿಯನ್ನು ಪ್ರಾಮಾಣಿಕವಾಗಿ ಒಪ್ಪಿಕೊಂಡಿರುವರು. ದೇ.ಜ.ಗೌ. ತಾವು ಪ್ರವಾಸ ಮಾಡಿದ ಸಮಯದಲ್ಲಿಯೇ ಪ್ರವಾಸ ಕಥನದ ಬಹುಭಾಗವನ್ನು

'ದಿನಚರಿ' ರೂಪದಲ್ಲಿ ಬರೆದಿರುವರು. ದೇ.ಜ.ಗೌ. ತಾವು ಹೋದೆಡೆಯಲ್ಲೆಲ್ಲಾ ವಿಶ್ವವಿದ್ಯಾನಿಲಯಗಳನ್ನು ಸಂದರ್ಶಿಸುವರು, ಶಿಕ್ಷಣ ವ್ಯವಸ್ಥೆಯ ಬಗೆಗೆ ಚರ್ಚಿಸುವರು. ಕನ್ನಡಕ್ಕೆ ತನ್ನ ನೆಲದಲ್ಲಿಯೇ ಮರ್ಯಾದೆಯಿಲ್ಲ, ಹೀಗಿರುವಾಗ ಬೇರೆಡೆ ಪುರಸ್ಕಾರ ಹೇಗೆ ದೊರೆತೀತು? ರಷ್ಯಾದಲ್ಲಿ ಹಿಂದಿ, ಉರ್ದು, ತಮಿಳು, ಬಂಗಾಳಿ ಭಾಷೆ ಕಲಿಯಲು ಅವಕಾಶವಿದೆ. ಸಂಸ್ಕೃತ ಮತ್ತು ಪಂಜಾಬಿ ಭಾಷೆಗಳನ್ನು ದ್ವಿತೀಯ ಭಾಷೆಯ ಮಟ್ಟದಲ್ಲಿ ವಿದ್ಯಾರ್ಥಿಗಳು ಓದುವರು. ಆದರೆ ಅಲ್ಲಿ ಕನ್ನಡಕ್ಕೆ ಅವಕಾಶವಿಲ್ಲವಲ್ಲಾ ಎನ್ನುವ ಕೊರಗು ಲೇಖಕರದು. ಫರ್ಡಿನೆಂಡ್ ಕಿಟ್ಟೆಲ್‌ರವರ ಸಮಾಧಿಯನ್ನು ಟುಬಿಂಗನ್‌ನಲ್ಲಿ ಹುಡುಕಲು ಅವರು ಪಟ್ಟ ಶ್ರಮ ಉಲ್ಲೇಖನಾರ್ಹವಾದುದು. ಲೇಖಕರು ತಮ್ಮ ಪ್ರವಾಸಕಥನದಲ್ಲಿ ಅನೇಕ ದಿನಬಳಕೆಯ ಇಂಗ್ಲೀಷ್ ಪದಗಳನ್ನು ಕನ್ನಡಕ್ಕೆ ತರುವಾಗ ತಮ್ಮ ವೈಶಿಷ್ಟ್ಯವನ್ನು ಮೆರೆದಿರುವರು. ಮೇಜು ನಡವಳಿ, ಮನೆಗಿರ, ಹುಡುಕಣೆ, ಹಿಂಚು (Late), ಹೆಗ್ಗಾರು (Van), ಎತ್ತುಗ, ತಂತಿಲಿ ಯಂತ್ರ, ಮಾಣಿನಿ ಇತ್ಯಾದಿ ಪದಗಳು ಸ್ವತಂತ್ರವೆನ್ನುವಷ್ಟು ಸಲೀಸಾಗಿ ಪ್ರಯೋಗಗೊಂಡಿವೆ.

ಎಂ.ಕೆ. ಶ್ರೀಧರ್ ಅವರ 'ಮೌನಕಣಿವೆ ಸಾಹಸಯಾತ್ರೆ'ಯು 1985ರಲ್ಲಿ ಆರೋಹಿ ಪರ್ವತಾರೋಹಣ ಸಂಸ್ಥೆಯ ವಿದ್ಯಾರ್ಥಿ ಸದಸ್ಯರೊಂದಿಗೆ ಲೇಖಕರು ಕೇರಳದ ದುರ್ಗಮ ಮೌನಕಣಿವೆಯನ್ನು ಪ್ರವೇಶಿಸಿದ ಸಾಹಸ ಪ್ರವಾಸ ಕಥನವಾಗಿದೆ. 'ಚಾರಣಯಾತ್ರೆ'ಯು ಸಾಹಸ ಪ್ರವಾಸಗಳಲ್ಲೊಂದು. ಲೇಖಕರು ನ್ಯಾಷನಲ್ ಕಾಲೇಜಿನ ಪರ್ವತಾರೋಹಣ ಸಂಸ್ಥೆಯ ಅಧ್ಯಕ್ಷರು. ನಿಸರ್ಗ ಹಾಗೂ ಪರಿಸರ ಶಿಕ್ಷಣಕ್ಕೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಈ ಪ್ರವಾಸಕಥನ ಒಳಗೊಂಡಿದೆ. ಡಾ. ಬಿ.ಜಿ.ಎಲ್. ಸ್ವಾಮಿಯವರ 'ಹಸುರು ಹೊನ್ನು' ವಿನಿಂದ ಪ್ರಭಾವಿತರಾದ ಲೇಖಕರು ಅಲ್ಲಿನ ಕಥನಕ್ರಮವನ್ನು ಅನುಸರಿಸಿರುವರು. ಆತ್ಮೀಯವಾದ ಬರವಣಿಗೆ ಪ್ರವಾಸಕಾಲದ ಲಘು ಪ್ರಹಸನಗಳ ಮೂಲಕ ನಮಗೆ ಇನ್ನಷ್ಟು ಪ್ರಿಯವಾಗುತ್ತದೆ. ಪ್ರಾರಂಭದಲ್ಲಿ ಬರುವ ಸೈಲೆಂಟ್ ವ್ಯಾಲಿಯ ಸಿಕಾಡೆ ಕೀಟಗಳ, ಮಕಾಕು ಕೋತಿಗಳ ಬಗೆಗೇ ಆಗಲಿ, ಅಪೂರ್ವ ಸಸ್ಯಗಳ ಬಗೆಗೇ ಆಗಲಿ ಲೇಖಕರು ಕೊಡುವ ವಿವರಗಳು ನಮ್ಮ ತಿಳುವಳಿಕೆಯನ್ನು ಹೆಚ್ಚಿಸುತ್ತವೆ. ಈ ಸಾಹಸ ಪ್ರವಾಸ ಕಥನವು ಪ್ರಕೃತಿ ಹಾಗೂ ಮಾನವರ ನಡುವೆ ಇರಬೇಕಾದ ಮಧುರ ಸಂಬಂಧದ ಬಗೆಗೆ ನಮಗೆ ಅರಿವನ್ನುಂಟುಮಾಡಿಕೊಡುತ್ತದೆ. ಪ್ರಕೃತಿಯ ಅನ್ವೇಷಣೆ ನಮ್ಮ ಜ್ಞಾನದ ಒಂದು ಭಾಗವಾಗಬೇಕಾಗಿದೆ.

ರಾಘವೇಂದ್ರ ಪಾಟೀಲರು ಕರ್ನಾಟಕ ಸಾಹಿತ್ಯ ಅಕಾಡೆಮಿಯ 1989ರ ಪ್ರವಾಸ ಅನುದಾನ ಯೋಜನೆಯ ನೆರವಿನಿಂದ ಮಹಾರಾಷ್ಟ್ರದಲ್ಲಿ ಪ್ರವಾಸ ಕೈಗೊಂಡು ತಮ್ಮ ಸಂಚಾರದ ಅನುಭವಗಳನ್ನು 'ಅಜ್ಞಾತ ಮುಂಬಯಿ' ಎಂಬ ಕೃತಿಯಲ್ಲಿ ನಿರೂಪಿಸಿರುವರು. ಮಹಾನಗರ ಮುಂಬಯಿ ಕೈಗಾರಿಕೀಕರಣದ ಫಲವಾಗಿ ದಟ್ಟವಾಗಿ ಬೆಳೆದು ಇಂದು ಹಲವು ಸಮಸ್ಯೆಗಳನ್ನು ತನ್ನಲ್ಲಿ

ಗರ್ಭೀಕರಿಸಿಕೊಂಡಿದೆ. ಇಲ್ಲಿ ಮನುಷ್ಯ ಮನುಷ್ಯರ ನಡುವಣ ಸಂಬಂಧ ಹೇಗೆ ಅಜ್ಞಾತವಾಗುತ್ತಾ ಬರುತ್ತಿದೆ ಎಂಬುದರ ಬಗೆಗೆ ಸೂಕ್ಷ್ಮವೂ ಸಂವೇದನಾಶೀಲವೂ ಆದ ಮನಸ್ಸು ಚಿಂತಿಸಿದೆ. ಡಾ: ಎಚ್.ಎಸ್. ವೆಂಕಟೇಶಮೂರ್ತಿಯವರು ಕೃತಿಗೆ ಬರೆದಿರುವ 'ಮುನ್ನುಡಿ'ಯಲ್ಲಿ ಕೃತಿಯ ವೈಶಿಷ್ಟ್ಯವನ್ನು ಗುರುತಿಸುತ್ತಾ ಹೀಗೆ ಹೇಳುವರು : "ಪ್ರವಾಸ ಕೃತಿಗಳಂತೆ ಇದು ಬದುಕಿನ ಗ್ರಹಿಕೆಗಳನ್ನು ಸ್ಥೂಲ ವಿವರಗಳನ್ನು ಮಾತ್ರ ಗ್ರಹಿಸದೆ ಒಂದು ಸೃಷ್ಟಿಶೀಲ ಕೃತಿಯಂತೆ–ಈ ಸಂದರ್ಭದಲ್ಲಿ ಸಣ್ಣ ಕಥೆಯೊಂದರಂತೆ–ತಾನೇ ಒಂದು ಪ್ರತಿಮೆಯನ್ನು ಸೃಷ್ಟಿಸುತ್ತಾ, ಅದರ ಮುಖೇನ ಬದುಕಿನ ಸೂಕ್ಷ್ಮಗಳನ್ನು ಧ್ವನಿಸಲು ನೋಡುತ್ತಿದೆ. ಆದಕ್ಕಾಗಿಯೇ ಇದನ್ನು ನಾನು ವಿಶಿಷ್ಟ ಅರ್ಥದಲ್ಲಿ 'ಪ್ರವಾಸ ಕಥೆ' ಎಂದು ಕರೆಯುತ್ತೇನೆ, ಪ್ರವಾಸ ಕಥನ ಎಂತಲ್ಲ." ಲೇಖಕರು ಅನುಬಂಧ ರೂಪದಲ್ಲಿ ಮರಾಠೀ ದಲಿತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ನಾರಾಯಣ ಸುರ್ವೆ ಹಾಗೂ ಕೇಶವ ಮೆಶ್ರಾಮ ಇವರುಗಳ ಸಂದರ್ಶನವನ್ನು ಕೊಟ್ಟಿರುವರು.

ಬಿ.ಎಸ್. ವಿರೂಪಾಕ್ಷಪ್ಪನವರ 'ಶಬರಿಮಲೆ ಯಾತ್ರಾ ನೋಡಿ'ಯು ಶಬರಿಮಲೆ ಅಯ್ಯಪ್ಪ ಯಾತ್ರೆಯ ಅನುಭವ ಕಥನವಾಗಿದೆ. ಲೇಖಕರು ವೃತ್ತಿಯಲ್ಲಿ ವಕೀಲರು, ಅಯ್ಯಪ್ಪ ಸ್ವಾಮಿಯ ನಿಷ್ಠಾವಂತ ಭಕ್ತರು. ಅವರು ಹೇಳುವಂತೆ "ಈ ಯಾತ್ರೆ ಜೀವನಯಾತ್ರೆಯ ಪ್ರತೀಕ. ಜೀವಾತ್ಮ ಪರಮಾತ್ಮನನ್ನು ಅರಸುವ ಪರಿ. ಅನುಭವದಿಂದ ಅರಿವು ಮೂಡಿಸುವುದೇ "ಅಯ್ಯಪ್ಪ ಯಾತ್ರೆಯ ವಿಶೇಷ" ಲೇಖಕರು ಆಸ್ತಿಕರಾಗಿ ಮಾಲೆ ಹಾಕಿಸಿಕೊಂಡು ಶಬರಿಮಲೆಗೆ ಹಲವು ಬಾರಿ ಯಾತ್ರೆ ಮಾಡಿದ್ದು, ಅಲ್ಲಿಗೆ ಹೋಗುವುದು ಹೇಗೆ? ಅನುಸರಿಸಬೇಕಾದ ವ್ರತ ನಿಯಮಗಳೇನು? ಇತ್ಯಾದಿ ವಿವರಗಳನ್ನು ಸಹ ಯಾತ್ರಿಕರಿಗಾಗಿ ಇಲ್ಲಿ ವಿವರವಾಗಿ ಪ್ರಸ್ತಾಪಿಸಿರುವರು. ಶಬರಿಮಲೆಯಾತ್ರೆಯ ಎಲ್ಲ ನಿಯಮಾವಳಿಗಳಲ್ಲಿಯೂ 'ಒಂದೊಂದು ತತ್ವವಿರುವುದನ್ನು ಒಳ ಅರ್ಥಗಳಿರುವುದನ್ನು (ಪು. 33–39) ವಿವರಿಸಲು ಪ್ರಯತ್ನಿಸಿರುವರು. ಪ್ರಶ್ನೋತ್ತರ ತಂತ್ರದ ಮೂಲಕವೂ ಅಯ್ಯಪ್ಪಸ್ವಾಮಿ ಯಾತ್ರೆ ಹಾಗೂ ಅದರ ಮಹತ್ವವನ್ನು ಲೇಖಕರು ತಿಳಿಯಪಡಿಸಿರುವರು. ಪುಸ್ತಕದ ಕೊನೆಯಲ್ಲಿ 108 ಅಯ್ಯಪ್ಪನ ಶರಣುಗಳನ್ನು ಹೇಳಲಾಗಿದೆ. ಒಟ್ಟಿನಲ್ಲಿ ಈ ಪುಸ್ತಕ ಅಯ್ಯಪ್ಪಸ್ವಾಮಿಯ ಭಕ್ತರಿಗೆ, ಶಬರಿಮಲೆ ಯಾತ್ರಿಕರಿಗೆ 'ಗೈಡ್' ರೀತಿಯಲ್ಲಿದೆ.

## ಮಕ್ಕಳ ಸಾಹಿತ್ಯ :

1991ನೇ ಸಾಲಿಗೆ ಮಕ್ಕಳ ಸಾಹಿತ್ಯ ಪ್ರಕಾರಕ್ಕೆ ಸಂಬಂಧಿಸಿದಂತೆ ಬಂದಿರುವ ಕೃತಿಗಳ ಸಂಖ್ಯೆ ಇನ್ನೂರಕ್ಕೂ ಹೆಚ್ಚಿದೆ. ಇಷ್ಟು ಸಮೃದ್ಧವಾಗಿ ಬಂದಿರುವ ಸಾಹಿತ್ಯರಾಶಿಯನ್ನು ಪರಿಶೀಲಿಸಿದಾಗ ಮಕ್ಕಳು ಎನ್ನುವ ಪದದ ವ್ಯಾಪ್ತಿಗೆ ಯಾರನ್ನು ಸೇರಿಸಬೇಕು? ಎಷ್ಟು ವಯಸ್ಸಿನಿಂದ ಎಷ್ಟು ವಯಸ್ಸಿನವರೆಗೆ? ಅವರಿಗೆ

ಕೊಡಬಹುದಾದ ಅಥವಾ ಅವರನ್ನು ಉದ್ದೇಶಿಸಿ ಬರೆದ ಸಾಹಿತ್ಯದ ರೂಪ ಯಾವುದು? ಎಂಬ ಪ್ರಶ್ನೆ ನಮ್ಮ ಮುಂದೆ ಬರುತ್ತದೆ. ಈ ಪ್ರಶ್ನೆಗಳನ್ನು ಬೊಳುವಾರ ಮಹಮದ್ ಕುಂಞ ಸಂಪಾದಿಸಿರುವ 'ತಟ್ಟು ಚಪ್ಪಾಳೆ ಪುಟ್ಟ ಮಗು' ಕೃತಿಗೆ ಬರೆದಿರುವ 'ಮುನ್ನಡಿ'ಯಲ್ಲಿ ಶಿವರಾಮ ಕಾರಂತರು ಎತ್ತಿದ್ದು "ಪ್ರಾಥಮಿಕ ವಿದ್ಯಾಭ್ಯಾಸ ಬಹುಮಟ್ಟಿಗೆ ರೂಢಿಗೆ ಬಂದ ಇಂದಿನ ದಿನಗಳಲ್ಲಿ ನಾವು ಶಾಲಾ ಬಾಲಕ, ಬಾಲಕಿಯರನ್ನು ಗಣನೆಗೆ ತರಲೇಬೇಕಾಗುತ್ತದೆ. ಆಗ ಕಿರಿಯ ಹಿರಿಯ ಪ್ರಾಥಮಿಕ ಶಾಲೆಗಳ ಬಾಲಕ ಬಾಲಕಿಯರನ್ನು ಗಣನೆಗೆ ತಂದುಕೊಳ್ಳಬಹುದು'' ಎಂದು ಅವರು ತಾತ್ಕಾಲಿಕ ಅಭಿಪ್ರಾಯವನ್ನು ಕೊಟ್ಟಿರುವರು. ಇಪ್ಪತ್ತನೆಯ ಶತಮಾನದ ಕೊನೆಯಲ್ಲಿ ನಿಂತಿರುವ, ವಿದ್ಯಾಭ್ಯಾಸದಲ್ಲಿ ತೀವ್ರವಾಗಿ ಪೈಪೋಟಿ ಎದುರಿಸಿರುವ ಇಂದಿನ ಮಕ್ಕಳಿಗೆ ಬೇಕಾಗಿರುವ ಸಾಹಿತ್ಯ ಎಂತಹದು ಎಂಬ ಬಗೆಗೆ ಕೆಲವರು ವಿಚಾರ ಮಾಡಿದಂತಿದೆ. ಹೀಗಾಗಿ ಎಳೆಯ ಮಕ್ಕಳಿಗೆ ಚಿತ್ರಗಳ ಮೂಲಕ ಅಕ್ಷರಾಭ್ಯಾಸ ಮಾಡಿಸುವ ಶಿವರಾಮ ಕಾರಂತರ 'ಓದುವ ಆಟ' ದಿಂದ ಹಿಡಿದು 'ಪ್ರಕೃತಿಯ ನಿಗೂಢಗಳು' 'ಪ್ರಾಣಿ ಜಗತ್ತು' 'ಹೇಗೆ ಕೆಲಸಮಾಡುತ್ತವೆ ರೋಬಟ್‌ಗಳು' 'ವಿಶ್ವವಿಖ್ಯಾತ ರಾಜಕೀಯ ಮುತ್ಸದ್ದಿಗಳು' 'ಸ್ಮರಣೀಯ ಹುತಾತ್ಮರು' ಎನ್ನುವ ವಿಷಯಗಳವರೆಗೆ ನಮ್ಮ ವಿದ್ಯಾರ್ಥಿಗಳ ಜ್ಞಾನ–ವಿಜ್ಞಾನ ತಿಳುವಳಿಕೆ ಬೆಳೆಯಬೇಕೆಂಬ ಉದ್ದೇಶ ನಮ್ಮ ಬರೆಹಗಾರರಿಗೆ ಇದ್ದಂತಿದೆ. ಆದರಿಂದಾಗಿಯೆ ಮಕ್ಕಳ ಸಾಹಿತ್ಯದಲ್ಲಿ ಸಮೃದ್ಧವಾದ ಬೆಳೆಯಾಗುತ್ತಿರುವುದು. ಈ ಬೆಳೆಯಲ್ಲಿ ಗಟ್ಟಿಯಾದ ಕಾಳೆಷ್ಟು ಜೊಳ್ಳೆಷ್ಟು ಎನ್ನುವುದನ್ನು ಕಾಲ ನಿರ್ಣಯಿಸುತ್ತದೆ.

ಈ ವರ್ಷ ಬಂದಿರುವ ಮಕ್ಕಳ ಸಾಹಿತ್ಯದಲ್ಲಿ ಶ್ರೇಷ್ಠ ಪದ್ಯ ಸಂಕಲನ ಕೃತಿ 'ತಟ್ಟು ಚಪ್ಪಾಳೆ ಪುಟ್ಟ ಮಗು'. ಬೊಳುವಾರು ಮಹಮದ್ ಕುಂಞ ಅವರು ಬಹಳ ಶ್ರಮವಹಿಸಿ ನಾಡಿನ ಖ್ಯಾತ ಸಾಹಿತಿಗಳು ಬರೆದಿರುವ ಮಕ್ಕಳ ಪದ್ಯಗಳನ್ನು ಒಂದೆಡೆ ಸಂಕಲಿಸಿಕೊಟ್ಟಿರುವರು. ಸಂಪಾದಕರು ಮಕ್ಕಳ ವಯೋಮಾನವನ್ನು ಗಮನದಲ್ಲಿಟ್ಟುಕೊಂಡು ಈ ಸಂಕಲನವನ್ನು ಚಿಗುರು, ಮುಗುಳು, ಅರಳು ಎಂದು ಮೂರು ಭಾಗಗಳನ್ನಾಗಿ ವಿಂಗಡಿಸಿರುವರು. 'ಚಿಗುರು' ನಮ್ಮ ೫ ರಿಂದ ೭ ವರ್ಷಗಳ ಮಕ್ಕಳಿಗೆ, 'ಮುಗುಳು' ವಿನಲ್ಲಿ ೮ ರಿಂದ ೧೦ ವರ್ಷಗಳ ಮಕ್ಕಳಿಗೆ, 'ಅರಳು' ೧೧ ರಿಂದ ಮೇಲಿನ ಮಕ್ಕಳಿಗೆ ಪ್ರಿಯವಾಗುವ ಪದ್ಯಗಳನ್ನು ಆಯ್ಕೆಮಾಡಿರುವರು. ಮುಪ್ಪಿನ ಷಡಕ್ಷರಿಯ 'ತಿರುಕನ ಕನಸು' ಜಾನಪದದಲ್ಲಿ ಅತ್ಯಂತ ಪ್ರಸಿದ್ಧವಿರುವ 'ಗೋವಿನ ಹಾಡು'–ಇವುಗಳನ್ನೂ ಕೊಟ್ಟಿರುವುದು ಮೆಚ್ಚುವಂತಹುದು. ಪ್ರತಿಯೊಂದು ಪದ್ಯಕ್ಕೂ ಅರ್ಥಪೂರ್ಣವೂ ಆಕರ್ಷಕವೂ ಆದ ಚಿತ್ರಗಳನ್ನು ಕೊಟ್ಟಿರುವುದು ಅಭಿನಂದನಾರ್ಹ. ಬಹಳ ಕಾಲದಿಂದ ಕನ್ನಡಿಗರು ನಿರೀಕ್ಷಿಸಿದ್ದ ಮಕ್ಕಳ ಹಾಡುಗಳ ಒಂದು ಒಳ್ಳೆಯ ಸಂಕಲನವನ್ನು ಕೊಟ್ಟ ಬೊಳುವಾರ ಅವರ ಶ್ರಮ ಉಲ್ಲೇಖನಾರ್ಹವಾಗಿದೆ.

ಮಕ್ಕಳ ಪದ್ಯ ಸಂಕಲನಗಳಲ್ಲಿ ಸಿದ್ದಯ್ಯ ಪುರಾಣಿಕರ 'ಭಾರತವೆಲ್ಲ ಕೆ ಭೂಪಟವೊಂದೇ' ಕೃತಿಯು 33 ಪದ್ಯಗಳನ್ನು ಒಳಗೊಂಡಿದೆ. ಇದು ಲೇಖಕರ ಐದನೆಯ ಮಕ್ಕಳ ಪದ್ಯಸಂಗ್ರಹವಾಗಿದ್ದು 'ನುಡಿದಳಿಯ ಭಾರತಾಂಬೆ' 'ಬಹುಜನ ಹಿತಾಯ, ಬಹುಜನ ಸುಖಾಯ' 'ಕನ್ನಡ ಕವಚ' ಮುಂತಾದ ಕೆಲವು ಪದ್ಯಗಳು ಮಕ್ಕಳ ಮನಸ್ಸಿಗೆ ಭಾರವಾಗಿವೆ. 'ಕಿಟ್ಟಪ್ಪಾ, ಕಿಟ್ಟಪ್ಪಾ!' 'ನೀನೂ ನನ್ನಷ್ಟಿದ್ದಾಗ' 'ಸರಪಳಿ' 'ಬೆಂಡು–ಬತ್ತಾಸು' 'ಹಾವಾಡಿಗ' 'ಸೆಟ್ಟಿಯ ಯುಕ್ತಿ' ಇವೇ ಮೊದಲಾದ ಪದ್ಯಗಳು ಮಕ್ಕಳಿಗೆ ಪ್ರಿಯವಾಗುವಂತಿವೆ. ಕಂಬ್ಳ್ಯಾಣಿ ಶರಣಪ್ಪನವರ 'ತಮ್ಮನ ಶಾಲೆ' ಯಲ್ಲಿ 31 ಪದ್ಯಗಳಿವೆ. 'ತಮ್ಮನ ಶಾಲೆ' 'ಕಾರಂಜಿ' 'ನೀನೆನಗಾದರೆ ನಾ ನಿನಗೆ' 'ಅಜ್ಜನ ಚಾಳೀಸು' 'ನಾಯಿಯ ಹಬ್ಬ' ಮೊದಲಾದ ಪದ್ಯಗಳು ಪ್ರಾಸಲಾಲಿತ್ಯದಿಂದ ಮಕ್ಕಳಿಗೆ ಹಿಡಿಸುಮಂತಿವೆ. ಜಂಬುನಾಥ ಕಂಬ್ಳ್ಯಾಣಿಯವರ 'ನಂದನವನ'ವು ಪರಿಸರ ಮಾಲಿನ್ಯದಿಂದ ನಮ್ಮ ಬದುಕಿನ ಮೇಲಾಗುತ್ತಿರುವ ಭೀಕರ ಪರಿಣಾಮವನ್ನು ತಿಳಿಸುವ ಉದ್ದೇಶವನ್ನು ಹೊಂದಿದೆ. ಇದರಲ್ಲಿ 24 ಪದ್ಯಗಳಿದ್ದು ಬಹಳಷ್ಟು ಪದ್ಯಗಳು ಹಿರಿಯರಿಗೆ ಬರೆದಂತಿವೆ. ಪ.ಗು. ಸಿದ್ದಾಪೂರ ಅವರ 'ಹಸಿರು ತೋರಣ'ವೂ ಪರಿಸರವನ್ನೇ ಕುರಿತದ್ದು. ಇಲ್ಲಿನ ಪದ್ಯಗಳು ವಿಜ್ಞಾನದಲ್ಲಿ ಆಸಕ್ತಿ, ಪರಿಸರ ಪ್ರಜ್ಞೆ–ಇವನ್ನು ಮಕ್ಕಳಲ್ಲಿ ಅರಳಿಸುವಂತಿವೆ. ಅಣ್ಣಾಜಪ್ಪ ಗುಂಜೇವು ಅವರ 'ಕನ್ನಡದ ತೇರ ಎಳೆಯೋಣ' ಪದ್ಯ ಸಂಗ್ರಹದಲ್ಲಿ 'ಬಾಬಾ ಕೋಳಿಮರಿ' 'ಮುದ್ದಿನ ಕರು' 'ಆನೆ ಬಂತು ಆನೆ' 'ಒಗ್ಗಟ್ಟಿನಲ್ಲಿ ಬಲವಿದೆ' ಮುತಾದ ಪದ್ಯಗಳು ಮಕ್ಕಳಿಗೆ ಓದಲು ಖುಷಿ ಕೊಡುತ್ತವೆ. ಲಕ್ಷ್ಮಣ ಕಂದಕೂರರ 'ಮಕ್ಕಳ ಕಥನ ಕವನಗಳು', ಗೋಪಾಲ ಕೃಷ್ಣ ವಂಡ್ಸೆಯವರ 'ತರತರ ಹೂಗಳು' ಬಿ.ಎಸ್. ಚಂದ್ರಕಲಾರವರ 'ಬಾಲರ ಸೊಂಪು' ಶಿಶುಗೀತೆಗಳಾಗಿದ್ದರೂ ಆಸಕ್ತಿ ಕೆರಳಿಸುವಂತಿಲ್ಲ. ಡಾ : ಶಿವರಾಮ ಕಾರಂತರ 'ಢಂ ಢಂ ಡೋಲು' ಮಕ್ಕಳು ಹಾಡಲು, ಅಭಿನಯಿಸಲು ಸಾಧ್ಯವಾಗುವಂತಹ 37 ಪದ್ಯಗಳನ್ನು ಒಳಗೊಂಡಿದೆ. ಇಲ್ಲಿನ 'ಮೀಸೆಯು ಬರಲು' 'ಕಿಟ್ಟು ಪುಟ್ಟು' 'ಹಣ್ಣು!ಹಣ್ಣು!' 'ಗುಬ್ಬಿ ಹಕ್ಕಿ' 'ರಂಗನೂ ಮಂಗನೂ' 'ಕಾಗೆಯ ಬಣ್ಣ ಕಪ್ಪು' 'ತಿನ್ನದ ದೇವರು' 'ಎಷ್ಟೆಲ್ಲ ವಾರಗಳು' ಮೊದಲಾದ ಪದ್ಯಗಳು ಮಕ್ಕಳಿಗೆ ಪ್ರಿಯವಾಗುವಂತಿವೆ. ಟಿ.ಎಸ್. ನಾಗರಾಜಶೆಟ್ಟಿಯವರ 'ಮಕ್ಕಳ ನೆಹರು' ನೆಹರು ಅವರ ಆದರ್ಶ ಜೀವನವನ್ನು ಮಕ್ಕಳಿಗೆ ಹಾಡುಗಳ ಮೂಲಕ ತಿಳಿಸುವ ಪ್ರಯತ್ನವಾಗಿದೆ. ಇಲ್ಲಿನ ಬಹಳಷ್ಟು ಪದ್ಯಗಳು ತಮ್ಮ ಗದ್ಯತನವನ್ನು ಇನ್ನೂ ಕಳೆದುಕೊಂಡಿಲ್ಲ.

ಮಕ್ಕಳು ಮನೆಯಲ್ಲಿ ಆಡುವಾಗ ಹೇಳಿಕೊಳ್ಳುವ ಪದ್ಯಗಳನ್ನು ಶಿಶುಪ್ರಾಸ (Nursery Rhymes) ಗಳೆಂದು ಕರೆಯುವರು. ನಾವು ಬಾಲ್ಯಯಲ್ಲಿ ಕೇಳಿಬರಬಹುದಾದ ಅನೇಕ ಶಿಶುಪ್ರಾಸಗಳನ್ನು ನಗುವನಹಳ್ಳಿ ರತ್ನ ನಾಗರಾಜ್‌ರವರು 'ಪುಟಾಣಿ ಪ್ರಾಸಗಳು' ಎಂಬ ತಮ್ಮ ಕಿರುಹೊತ್ತಗೆಯಲ್ಲಿ ಕೊಟ್ಟಿರುವರು. 'ರತ್ನೋ ರತ್ನೋ ರಾಯನ ಮಗಳೆ' 'ಕಣ್ಣೇಮುಚ್ಚೇ ಕಾಡೇಗೂಡೆ' 'ಹುಯ್ಯೋ ಹುಯ್ಯೋ

ಮಳೆರಾಯ' ಮುಂತಾದ ಜನಪ್ರಿಯ ಶಿಶುಪ್ರಾಸಗಳ ಜೊತೆಗೆ ನಮಗೆ ತಿಳಿಯದಿರುವ ಕೆಲವು ಹೊಸ ಶಿಶುಪ್ರಾಸಗಳೂ ಇಲ್ಲಿ ಸೇರಿವೆ. "ಅಮ್ಮ ನೋಡೆ ಕಣ್ಬಿಟ್ಟು ಮಕ್ಕಳ ಶಾಲೆಯ ಉಪ್ಪಿಟ್ಟು ಮೇಡಂ ತಿಂತಾಳೆ ಬಕೀಟು ನಮ್ಗೆ ಕೊಡ್ತಾಳೆ ಈಟೀಟು" ಎಂಬ ಆಧುನಿಕ ಶಿಶುಪ್ರಾಸವೂ ಇಲ್ಲಿ ಸೇರ್ಪಡೆಯಾಗಿದೆ.

ಮಕ್ಕಳು ಆಡುವ ಆಟಗಳ ಕಿರುಪರಿಚಯವನ್ನು 'ಕಣ್ಣೇ ಮುಚ್ಚೇ ಗಾಡೇ ಗೂಡೆ' ಎಂಬ ಕಿರು ಹೊತ್ತಗೆಯಲ್ಲಿ ನಗುವನಹಳ್ಳಿ ರತ್ನ ನಾಗರಾಜ್‌ರವರು ಮಾಡಿಕೊಟ್ಟಿರುವರು. ಚಂದ್ರಗೌಡ ಕುಲಕರ್ಣಿಯವರು ಪದ್ಯಗಳ ಮೂಲಕ ಒಗಟುಗಳನ್ನು 'ಒಗಟು ಬಿಡಿಸೋ ಜಾಣ' ಎಂಬ ಪುಟ್ಟ ಕೃತಿಯಲ್ಲಿ ಹೇಳಿರುವರು. ಒಂದು ಪದದ ಒಂದೊಂದೇ ಅಕ್ಷರ ಕೂಡುತ್ತ ಕಳೆಯುತ್ತ ಹೋದಂತೆ ಅವು ಬೇರೆ ಬೇರೆ ಅರ್ಥ ಪಡೆಯುವುದನ್ನು ಇಲ್ಲಿನ ಒಗಟುಗಳಲ್ಲಿ ಕಾಣಬಹುದು. ಶ್ರೀರವಿಯವರ 'ಮಕ್ಕಳ ಸಿನಿಮಾ' ಮಕ್ಕಳ ಸಿನಿಮಾ ಸಮಸ್ಯೆ ಕುರಿತ ಪುಸ್ತಕ. ಶ್ರೀವಳ್ಳಿಯವರ ಚಾಂದ್‌ಬೀಬಿ ಮತ್ತು ಬೆಳವಡಿ ಮಲ್ಲಮ್ಮ, ವಿ. ಮುನಿವೆಂಕಟಪ್ಪನವರ 'ಬಾಲಕ ಅಂಬೇಡ್ಕರ್' ಮಕ್ಕಳ ನಾಟಕಗಳು.

ಮಕ್ಕಳಿಗೆ ಪ್ರಿಯವಾದುದು ಕಥಾಸಾಹಿತ್ಯ. ಬೆಂಗಳೂರಿನ ಎಸ್‌ಬಿಎಸ್ ಪಬ್ಲಿಷರ್ಸ್‌ನವರು ಪ್ರಕಟಿಸಿರುವ ಧ್ರುವ, ಏಕಲವ್ಯ, ವೀರವಿಕ್ರಮ, ಮಹಾನಾವಿಕ ಸಿಂದಬಾದ್, ಅರಸನ ಭೇರಿ, ಮಂಕು ಬುದ್ಧಿಯ ಮಹಾಕಾಯ, ಮೊದಲಾದ ಕೃತಿಗಳು ಚಿತ್ರಕಥಾ ಮಾಲಿಕೆಯಲ್ಲಿ ಬಂದಿದೆ. ನೀಲಾಂಬರಿಯವರ ಹೊಟ್ಟೆಕಿಚ್ಚಿನ ಪುಟ್ಟಮ್ಮಣ್ಣಿ, ನಗೆಮದ್ದು, ಮಾತುಗಾರ ಮಲ್ಲಣ್ಣ, ಅರಣ್ಯಗ್ರಾಮಕ್ಕೆ ಪ್ರವಾಸ, ದುರಾಶೆಯ ಗುಂಡ; ಬಿ. ಬೋರೇಗೌಡರ ಸಾಹಸಿ ಮಕ್ಕಳು, ಎಂ.ಆರ್. ಮುಲ್ಲಾ ಅವರ ಸಂಕಲ್ಪ, ಜಿ.ಎಸ್. ವಡಗಾಂವಿಯವರ ಓದಲು ಕಲಿ ಬದುಕಲು ತಿಳಿ, ಜಯವಂತ ಕಾಡದೇವರ ಮಾತಾಡುವ ಗಿಳಿ, ನವಗಿರಿನಂದ ಅವರ ಸಾಹಸೀ ಗುಲಾಮ, ಮಾವಯ್ಯನ ಉಪಾಯ, ಪ. ರಾಮಕೃಷ್ಣಶಾಸ್ತ್ರಿಯವರ ಚಿನ್ನದ ಗರಿ, ಹೂಜಿ ತಂದ ಅದೃಷ್ಟ, ಶಿವರಾಮ ಹೆಗಡೆಯವರ ಕನಸಿನ ಕತೆ, ಸಿ.ಓಕೆ. ಅವರ ಪರಮಹಂಸರ ಕಥೆಗಳು, ರಘುಸುತ ಅವರ ಬುದ್ಧನ ಕಥೆಗಳು, ವರ್ಧಮಾನ ಮಹಾವೀರನ ಕಥೆಗಳು, ಶ್ಯಾಮಲಾ ಮೂರ್ತಿಯವರ ನಗುವ ಮೂರು ಮುತ್ತುಗಳು, ಆನಂದ ಮತ್ತು ಅವನ ಗೆಳೆಯರು–ಇವೇ ಮೊದಲಾದವು ಮಕ್ಕಳಿಗಾಗಿಯೇ ಬರೆದ ಪುಟ್ಟ ಪುಟ್ಟ ಕಥೆಗಳಾಗಿವೆ. ಇತಿಹಾಸದಲ್ಲಿ ಬರುವ ಕಥೆಗಳನ್ನು ಕೊರಟಿ ಶ್ರೀನಿವಾಸರಾವ್‌ರವರು 'ಐತಿಹಾಸಿಕ ಕಥಾಭಾರತಿ' ಎಂಬ ಶೀರ್ಷಿಕೆಯಲ್ಲಿ ಹೊರತಂದಿರುವರು. ಸಿ. ಓಂಕಾರಪ್ಪನವರ 'ಶ್ರೀಮದ್ ಭಗವದ್‌ಗೀತಾ'ವು ಭಗವದ್ಗೀತೆಯಲ್ಲಿ ಬರುವ ವಿವರಗಳನ್ನು ತಿಳಿಸುತ್ತದೆಯಾದರೂ ಮಕ್ಕಳಿಗೆ ಎಟಕುವ ಭಾಷೆಯಲ್ಲಿಲ್ಲ.

ವೈಜ್ಞಾನಿಕ ಕಥೆಗಳು ರಾಜಶೇಖರ ಭೂಸನೂರಮಠ ಅವರ ಪ್ರಯತ್ನದಿಂದಾಗಿ ಕನ್ನಡಕ್ಕೂ ಬಂದಿವೆ. ಈ ಲೇಖಕರ ಪರಮಾಣು ಲೋಕದಲ್ಲಿ, ಕಾಲನೌಕೆ, ಶಕ್ತಿನಗರದಲ್ಲಿ ರೋಬಟ್ ರಮಣಿ, ನಿಯಮಗಳ ನಾಡಿನಲ್ಲಿ ಕೃತಿಗಳು ಕನ್ನಡಕ್ಕೆ ಹೊಸ ಮಾದರಿಯ ಕೊಡುಗೆಗಳಾಗಿವೆ.

ಮಕ್ಕಳಿಗಾಗಿ ನೀಳ್ಗಥೆಗಳೂ ಸಾಕಷ್ಟು ಬಂದಿದೆ. ಉದಾಹರಣೆಗೆ ಎಚ್.ವಿ. ರಾಮಚಂದ್ರರಾವ್‌ರವರ ಹಾಡುವ ಕೋಗಿಲೆ, ಪೆದ್ದ ಗೆದ್ದ, ಮಂಗಣ್ಣಿ; ಮೂರ್ತಿ ರಾಮನಾಥಪುರ ಅವರ ಹುತಾತ್ಮನ ಕಥೆ, ರಘುಸುತ ಅವರ ಸಂಗೊಳ್ಳಿ ರಾಯಣ್ಣ, ಝಾನ್ಸಿರಾಣಿ ಲಕ್ಷ್ಮೀಬಾಯಿ, ಡಾ. ಸಿ. ಓಂಕಾರಪ್ಪನವರ ಕುಮಾರರಾಮ, ಡಾ: ಎಂ.ಪಿ. ಮಂಜಪ್ಪಶೆಟ್ಟಿ ಅವರ ಗುರುಭಕ್ತ ನನ್ನಯ್ಯ, ಕೆ.ಎಸ್. ರಂಗಪ್ಪನವರ ಕಂಬುಗ್ರೀವನ ಕಂಟಕ, ಜಂಬದ ಬೆಳ್ಳಕ್ಕಿ.

ವೈಜ್ಞಾನಿಕ ವಿಷಯಗಳನ್ನು ಸರಳವಾಗಿ ಮಕ್ಕಳಿಗೆ ವಿವರಿಸುವ ಪ್ರಯತ್ನವೂ ನಡೆದಿದೆ. ಉದಾಹರಣೆಗೆ ಎಸ್. ರಾಮಪ್ರಸಾದ್‌ರವರ ಮಳೆ, ಟಿಕ್.ಟಿಕ್. ಗೆಳೆಯ; ಟಿ.ಆರ್. ಅನಂತರಾಮು ಅವರ ಭೂಗರ್ಭಯಾತ್ರೆ, ಡಾ: ಎಂ.ಆರ್. ಚಿದಂಬರಂ ರವರ ಹೇಗೆ ಕೆಲಸ ಮಾಡುತ್ತವೆ ರೋಬಟ್‌ಗಳು, ಶಶಿಧರ ವಿಶ್ವಾಮಿತ್ರ ಅವರ ಎಳೆಯರಿಗೆ ವಿಜ್ಞಾನ, ಸೂರ್ಯಕಾಂತ ಅವರ ಪ್ರಕೃತಿಯ ನಿಗೂಢಗಳು. ಪ್ರಾಣಿಗಳ ಬಗೆಗೆ ಮಕ್ಕಳಿಗೆ ತಿಳಿವಳಿಕೆ ನೀಡುವ ಪ್ರಯತ್ನವನ್ನು ಈಚನೂರು ಶಾಂತ ಅವರು 'ಪ್ರಾಣಿ ಜಗತ್ತು' ಎಂಬ ತಮ್ಮ ಆಕರ್ಷಕ ಕೃತಿಯಲ್ಲಿ ಮಾಡಿರುವರು. 'ಮಕ್ಕಳಿಗಾಗಿ ಕನ್ನಡ ವ್ಯಾಕರಣ' ವನ್ನು ಡಾ. ಎಂ. ಪಿ. ಮಂಜಪ್ಪಶೆಟ್ಟಿಯವರು ರಚಿಸಿರುವರು.

ಮಕ್ಕಳ ಸಾಹಿತ್ಯ ಇಷ್ಟು ದೊಡ್ಡ ಪ್ರಮಾಣದಲ್ಲಿ ಪ್ರಕಟವಾಗಲು ಅಪ್ರತ್ಯಕ್ಷವಾಗಿ ಸರಕಾರವೂ ಕಾರಣವಾಗಿದೆ. ಕಪ್ಪು ಹಲಗೆ ಯೋಜನೆಯ ಆಶ್ರಯದಲ್ಲಿ ಮಕ್ಕಳ ಪುಸ್ತಕಗಳನ್ನು ಸಗಟು ಖರೀದಿ ಮಾಡಲು ಸರಕಾರ ಹೊರಟದ್ದರಿಂದಾಗಿ ವೈವಿಧ್ಯಮಯ ವಿಷಯಗಳನ್ನು ಒಳಗೊಂಡ ಪುಸ್ತಕಗಳು ಅಪಾರ ಸಂಖ್ಯೆಯಲ್ಲಿ ಬಂದುವು. ಇಲ್ಲಿ ಪುಸ್ತಕ ಉದ್ಯಮದ ಒಂದು ಭಾಗವಾಗಿ ಬಂದಿತೇ ಹೊರತು ಮಕ್ಕಳ ಮೇಲಣ ಪ್ರೀತಿಯಿಂದಲ್ಲ. ಇದಕ್ಕೆ ಅಪವಾದಗಳೂ ಇರಬಹುದು.

# ಹಾಸ್ಯ ಸಾಹಿತ್ಯ, ಲಘುಪ್ರಬಂಧಗಳು

ಅ. ರಾ. ಮಿತ್ರ

ಸಮೀಕ್ಷೆಗೆ ಬಂದಿರುವ ಲಲಿತ ಪ್ರಬಂಧ, ಪ್ರಬಂಧ, ವ್ಯಕ್ತಿಚಿತ್ರ ಹರಟೆ ವಿಚಾರ ಪ್ರಬಂಧಗಳಲ್ಲಿ ಪ್ರಸಕ್ತ ವರ್ಷದ ಬೆಳೆ ಅಷ್ಟೇನೂ ಹೆಚ್ಚಿನದು ಎಂದು ಹೇಳುವಂತಿಲ್ಲ. ಪತ್ರಿಕೆಗಳಲ್ಲಿ ನಗೆಯಂಕಣಗಳನ್ನು ಚಿಮ್ಮಿಸುತ್ತಿರುವ ತರುಣರ ಸಂಖ್ಯೆ ಇಂದು ಹೆಚ್ಚುತ್ತಿದೆ. ನಮ್ಮ ಹಾಸ್ಯ ಪರಂಪರೆ ತುಂಡುಗಡಿಯದಂತೆ ನೋಡಿಕೊಳ್ಳಬಲ್ಲವರ ಒಂದು ಪಡೆ ನಿರ್ಮಾಣವಾಗುತ್ತಿದೆ ಎಂದು ಆಶಾಭಾವನೆಯಿಂದ ಹೇಳಬಹುದಾದಷ್ಟು ಲೇಖಕರು ಈ ಬರಹಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಒಂದು ಸಂತೋಷದ ಸಂಗತಿ. ಹಾಸ್ಯ ಬರಹವಾಗಲಿ, ಹರಟೆ, ವ್ಯಕ್ತಿಚಿತ್ರ ಪ್ರಬಂಧವಾಗಲಿ ಲೇಖಕ ತನ್ನ ಬರವಣಿಗೆಯ ಕ್ಷೇತ್ರದ ಗಡಿಗಳನ್ನು ವಿಸ್ತರಿಸಬಲ್ಲವನಾದರೆ ಲೇಖಕನಿಗೂ ವಸ್ತುವಿಗೂ ಕೂಡಿಯೇ ಮೆಚ್ಚುಗೆ ಸೂಚಿಸಿದಂತಾಗುತ್ತದೆ. ಸಂಪಟೂರು "ಶ್ರೀನಿವಾಸರ ಜನಪ್ರಿಯ ನಗೆಪಟಾಕಿಗಳು" ಕೆ. ಚಂದ್ರಮೌಳಿಯವರ "ಮಿಣುಕಾವಳಿ" ಎಂ. ಸಿ. ಶಿವಕುಮಾರರ "ಮಧುಚಂದ್ರ", ಎನ್. ಪ್ರಭಾಕರ್ ಅವರ "ಕಂಡಲ್ಲಿ ಗುಂಡು" ಡಾ. ಕೆ. ಎಂ. ಅಶೋಕ್ ಷೈ ಅವರ 'ಹಾಸ್ಯ ರಶ್ಮಿ' ಕೃಷ್ಣ ಸುಬ್ಬರಾವ್ ಅವರ ದೇವರು ದೊಡ್ಡವನು – ಈ ಹೊತ್ತಗೆಗಳು ಶುದ್ಧಾಂಗವಾಗಿ ಹಾಸ್ಯದ ನೆಲದಲ್ಲಿ ಮೂಡಿ ಬಂದ ಕೃತಿಗಳಾಗಿವೆ. ಹ. ವೆಂ. ನಾಗರಾಜರಾವ್ ಅವರ "ಮನದ ತೆರೆಯ ಮೇಲೆ" ವೈ ಎನ್ ಕೆ ಅವರ Wonder ವಂಡರ್ ಇವೆರಡೂ ಪತ್ರಿಕೋದ್ಯಮ – ಸಾಹಿತ್ಯ ಕ್ಷೇತ್ರಗಳೆರಡರ ಕಸಿಯಿಂದ ಮೂಡಿ ನಿಂತ ಸೊಗಸಾದ ಅಂಕಣ ಬರಹಗಳು. ಚಂದ್ರಶೇಖರ ಆಲೂರರ 'ಗೀತ–ಸಂಗೀತ' ಸಿನಿಮಾ ಗೀತಗಳ ಬಗೆಗೆ, ಗೀತಕಾರರ ಬಗೆಗೆ ಹಾಗೂ ಗೀತೆಗಳ ಮೂಲಕ ಪ್ರತಿಪಾದಿತವಾಗುತ್ತಿರುವ ಜಡಗೊಂಡ ಪಾರಂಪರಿಕ ಮೌಲ್ಯಗಳ ಕಡೆಗೆ ನಮ್ಮ ಗಮನ ಸೆಳೆಯಬಯಸುವ ವಿಪುಲ ಸಾಕ್ಷ್ಯಾಧಾರ ಸಹಿತವಾದ ಒಂದು ವಿವೇಚನಾ ಗ್ರಂಥ, ಇನ್ನೊಂದು ವ್ಯಕ್ತಿಚಿತ್ರ, ಸಮಾಜಚಿಂತನ, ರಾಷ್ಟ್ರಚಿಂತನ, ಸಾಹಿತ್ಯ ಚಿಂತನ ಮೊದಲಾದ ಹತ್ತಾರು ವಿಚಾರಶಾಖೆಗಳಲ್ಲಿ ಲವಲವಿಕೆಯ ಶೈಲಿಯಿಂದ ಸುಳಿಯಬಯಸುವ ವೈಚಾರಿಕ ಭಾವುಕ ಲೇಖನಮಾಲೆ.

ಸಂಪಟೂರು ವಿಶ್ವನಾಥರ "ನಗೆ ಪಟಾಕಿಗಳು" ಹೆಸರೇ ಸೂಚಿಸುವಂತೆ ಸ್ಫೋಟಕ ವಸ್ತುವನ್ನೊಳಗೊಂಡ ಬರಹಗಳು. ಸಣ್ಣ ಸಣ್ಣ ನಗೆಹನಿಗಳ

ಸಂಗ್ರಹ ಇದು. ಬೇರೆ ಬೇರೆ ಗ್ರಂಥಗಳಿಂದ ಆಯ್ದ ಈ ಜೋಕುಗಳು ಒಮ್ಮೆ ಓದಿ ನಕ್ಕು ಪಕ್ಕದವರಿಗೂ ಓದಲು ಕೊಡಬೇಕಾದಂಥವು. ಇಂಥ ನಗೆಹನಿಗಳಿಗೆ ನಿಷ್ಕಾಳಜಿಯ ಹಿನ್ನೆಲೆಯಿರುತ್ತದೆ. ಮನಸ್ಸಿಗೆ ಖುಷಿಕೊಡುವ ಏಕೈಕ ರಂಜನೋದ್ದೇಶದಿಂದ ಇಂಥ ಸಂಕಲನಗಳನ್ನು ತರಲಾಗುತ್ತದೆ. ಇಂಗ್ಲೀಷಿನಲ್ಲಿ ಭಾರಿಯ ಪ್ರಮಾಣದ ಗ್ರಂಥಗಳೇ ಹಾಸ್ಯರಂಜನೆಯಲ್ಲಿ ತೊಡಗಿ ಪ್ರತಿವರ್ಷ ಹೊರಬರುತ್ತಿವೆ. ಕನ್ನಡದಲ್ಲಿ ಹಾಸ್ಯ ತುಣುಕುಗಳ ಸಂಗ್ರಹಗಳು ಕಡಿಮೆ. ರಾ. ಶಿ. ಪ್ರಭುಶಂಕರ, ಟಿ. ವಿ. ವೆಂಕಟರಮಣ, ವಿ. ಕೆ. ದೊರೆಸ್ವಾಮಿ, ಗಂಡಸಿ ವಿಶ್ವೇಶ್ವರ ಮೊದಲಾದ ಕೇವಲ ಬೆರಳೆಣಿಕೆಯ ಬರಹಗಾರರು ಇಂಥ ಜೋಕುಗಳ ಗ್ರಂಥಸಂಖ್ಯೆಯನ್ನು ಬೆಳೆಸಿ ಉಪಕಾರ ಮಾಡುತ್ತಿದ್ದಾರೆ. ಸಂಪಟೂರು ವಿಶ್ವನಾಥರೂ ಸೇರಿದಂತೆ ನಗೆಹನಿ ಸಂಗ್ರಹಕಾರರು ಸ್ವಲ್ಪ 'ಮನೆಗೆಲಸ' (ಹೋಂ ವರ್ಕ್) ಮಾಡಿ ತುಂಬ ಚುರುಕಾದ, ಧ್ವನಿ ಪರಂಪರೆಯುಳ್ಳ ಹಾಗೂ ನಮ್ಮ ಸಾಮಾಜಿಕ ಚರ್ಯೆಗಳ ಹಿನ್ನೆಲೆಯಲ್ಲೇ ಮೂಡಿಬರಬಹುದಾದ ನಗೆಹನಿಗಳನ್ನು ಆರಿಸಿ ಹಾಕುವುದು ಒಳ್ಳೆಯದೆನ್ನಿಸುತ್ತದೆ.

ಕೆ. ಚಂದ್ರಮೌಳಿಯವರ "ಮಿಣುಕಾವಳಿ'' ಬದುಕಿನಲ್ಲಿ ಕಣ್ಣಮುಂದೆ ನಡೆಯುವ ಸಣ್ಣಪುಟ್ಟ ಆಗುಹೋಗುಗಳನ್ನೇ ನಾಟಕೀಯವಾಗಿ, ಕಥಾಮಯವಾಗಿ ಹೇಳುವ ಉದ್ದೇಶದಿಂದ ಮೂಡಿಬಂದ ಹೊತ್ತಗೆ. ಆಸ್ಕರ್ ವೈಲ್ಡ್, ಷೇಕ್ಸಪಿಯರ್ ಮೊದಲಾದವರ ನಾಟಕ ಭಾಗಗಳ ಸಂಗ್ರಹಾನುವಾದವೂ ಸೇರಿದಂತೆ ಕೆಲವು ಸ್ವಂತ ಬಿಡಿ ರಚನೆಗಳನ್ನು ಇಲ್ಲಿ ಕಾಣಬಹುದಾಗಿದೆ. ಮಾತುಗಾರಿಕೆ ಮಾತ್ರ ಪ್ರಧಾನ ಬಂಡವಾಳವಾಗಿರುವ ಈ ಕೃತಿಯಲ್ಲಿ ಕೋಡಂಗಿತನದ ವಿವರಣೆಯ ಹಿನ್ನೆಲೆಯಲ್ಲಿ ನಾಲ್ಕೈದು ದೃಶ್ಯಾವಳಿಗಳು ಮೂಡಿ ಬಂದಿವೆ. 'ಆರು ಪಾತ್ರಗಳನ್ನಾಧರಿಸಿ' 'ಓ ಸರಿ ಬಿಡಿ ಗೊತ್ತಾಯ್ತು' ಮೊದಲಾದವು ಸ್ವತಂತ್ರವಾಗಿ ರೂಪುಗೊಂಡಿವೆ. ಹಿಂದೆ ಶಾಲಾಕಾಲೇಜುಗಳಲ್ಲಿ ವಾರ್ಷಿಕೋತ್ಸವದ ಸಂದರ್ಭದಲ್ಲಿ ನಿರುದ್ದೇಶಿತ ವಿನೋದಕ್ಕೆಂದು ಆಡುತ್ತಿದ್ದ ಪ್ರಹಸನಗಳ ಸಾಮಾನ್ಯ ಮಾದರಿ ಇಲ್ಲಿಯ ದೃಶ್ಯಾವಳಿಗಳಲ್ಲಿವೆ.

ಕೆ. ಎ. ಅಶೋಕ್ ಪೈ ಅವರ 'ಹಾಸ್ಯ ರಶ್ಮಿ' ತುಂಬ ಪುಟ್ಟ ಹರಟೆಗಳ ಸಂಗ್ರಹಯೋಗ್ಯ ಸಂಗ್ರಹ. ಹರಟೆಗಳು ಗಾತ್ರದಲ್ಲಿ ತುಂಬ ಚಿಕ್ಕವಾದ ಚಿಂತನೆಗಳಾಗಿರುವುದರಿಂದ ವಿಷಯ ಮಂಡನೆಗೆ ಇಲ್ಲಿ ಹೆಚ್ಚಿನ ಅವಕಾಶವಿಲ್ಲದಂತಾಗಿದೆ. "ನಗುವಿನ ಗಜಗರ್ಭದಲ್ಲಿರುವ ಭಾವನೆ ಸಂವೇದನೆಗಳು ಪ್ರಾಯಶಃ ಬೇರೆ ಯಾವ ಪ್ರಕ್ರಿಯೆಗಳಲ್ಲೂ ಸಿಕ್ಕುವುದು ಕಷ್ಟ ಸಾಧ್ಯ'' ಎನ್ನುವ ಲೇಖಕರು ಇಲ್ಲಿಯ ಹರಟೆಗಳಲ್ಲಿ ಸಲೀಲವಾಗಿ ತುಂಬ ಸರಳವಾಗಿ ಪ್ರಕರಣಗಳನ್ನು ವಿವರಿಸಿಕೊಂಡು ಹೋಗುತ್ತಾರೆ. "ಹೆಚ್ಚು ಬದುಕಲು ಆಸೆಯೇ ನಿಮಗೆ? ಹಾಗಾದರೆ ಉಸಿರಾಡುವುದನ್ನು ಖಂಡಿತ ನಿಲ್ಲಿಸಬೇಡಿ'' ಇಂಥ ಚತುರೋಕ್ತಿಗಳು ಈ ಪುಟ್ಟ ಪುಸ್ತಕದುದ್ದಕ್ಕೂ ಹಲವಾರಿವೆ. ತಮ್ಮ ವೈದ್ಯಕೀಯ ಬದುಕಿನಲ್ಲಿ

ಕಂಡುಬರುವ ಸಂಭವನೀಯ ಘಟನೆಗಳ ನೇರ ನಿರೂಪಣೆ ತುಂಬ ಹ್ರಸ್ವವಾಗಿ ಬರುತ್ತದಾದ್ದರಿಂದ ಹೆಚ್ಚಿನ ವಿಚಾರದ ಕಾವಿಗೆ ಆಸ್ಪದವಿಲ್ಲ. ಷ್ಮುತ್ತಿಸಂಬಂಧಿಯಾದ 'ಪಥ್ಯಪಾಲನೆ' 'ನಾಮದ ಬಲ' ಮರೆಗುಳಿ' ಮೊದಲಾದ ಲವಲವಿಕೆಯ ನಗೆಬರಹಗಳೂ ಇಲ್ಲಿವೆ.

ಕಂಡಲ್ಲಿ ಗುಂಡು ಎನ್. ಪ್ರಭಾಕರ್ ಅವರ ಹರಟೆಗಳ ಸಂಕಲನ. ಈ ಸಂಕಲನದಲ್ಲಿ ಬಹಳಷ್ಟು ಕಿರುಹರಟೆಗಳಿವೆ. ಸಮಸಾಮಯಿಕ ಸಂಗತಿಗಳನ್ನಾಧರಿಸಿ ತುಂಬ ಸರಳ ಹಾಸ್ಯದೊಂದಿಗೆ ಮೂಡಿ ಬಂದಿರುವ ಈ ಕಿರು ಹಾಸ್ಯ ಪ್ರಬಂಧಗಳು ಒಮ್ಮೆ ಸಲೀಲವಾಗಿ ಓದಿಕೊಂಡು ಹೋಗಬಲ್ಲಷ್ಟು ಚೆನ್ನಾಗಿವೆ. ಕುಮಾರಸಂಭವ, ಆಶ್ವಾಸನೆ ಇವೆರಡೂ ಹೆಸರಿಸಬಹುದಾದ ನಗೆಬರಹಗಳು. ಬಹುಪುತ್ರರನ್ನು ಹೊಂದಿದ್ದ ಕುಟುಂಬವೊಂದು ಮಾಲಿಕನ ಮಗನ ಊರಿಗೆ ಹೋಗಿ ಆತನಿಗೆ ಸಂತತಿಯಾದರೆ ತಂದೆಗೆ ಸಂತೋಷವಾಗುತ್ತದೆಂದು ಹೇಳುವ ಸಂದರ್ಭ ಇಲ್ಲಿಯದು. ಆ ತರುಣ ದಂಪತಿಗಳ ಪ್ರೀತಿಯ ಆರೈಕೆಯ ಪರಿಣಾಮವಾಗಿ ಹಿತೋಪದೇಶ ಮಾಡಲು ಹೋಗಿದ್ದ ವಯಸ್ಕ ದಂಪತಿಗಳಿಗೇ ಸಂತಾನ ಪ್ರಾಪ್ತಿಯಾದುದನ್ನು ತುಂಬ ಧ್ವನಿಪೂರ್ಣವಾಗಿ ಚಿತ್ರಿಸುವ ಕಥಾನಕ "ಕುಮಾರ ಸಂಭವ"

ಎಂ. ಶಿವಕುಮಾರರ 'ಮಧುಚಂದ್ರ' ಕೊರವಂಜಿ ಅಪರಂಜಿಗಳ ಅಖಾಡಾದಲ್ಲಿ ತಯಾರಾದ ಹಾಸ್ಯಲೇಖನಗಳ ಸಂಗ್ರಹ. ಇದು ಪ್ರೌಢಹಾಸ್ಯ ಎನ್ನಬಹುದಾದಷ್ಟು ಹೊಸ ಆಯಾಮವನ್ನೊಳಗೊಂಡಿದೆ. ಇದರಲ್ಲಿ ಮಿಶ್ರಬರಹಗಳಿವೆ. ಗುಂಡುದಿರಿಗೆ 'ಸಲಹೆಗಳು', 'ಪಾರ್ಕಿನಲ್ಲಿ' ಮೊದಲಾದ ಶುದ್ಧ ಹಾಸ್ಯಬರಹಗಳು ಒಂದು ಬಗೆಯಾದರೆ ಸೊಗಸಾದ ಅಣಕವಾಡುಗಳಿಂದ ಮೆರೆಯುವ ಇನ್ನೊಂದು ಭಾಗವಿದೆ. ಅಲ್ಲದೆ ಬಹುತೇಕ ಬರಹಗಳು ವೈಜ್ಞಾನಿಕ ಸಂಗತಿಗಳನ್ನು ಹಾಸ್ಯಕಥೆಯ ರೂಪದಲ್ಲಿ ಹೇಳುವ ಸರಳ ಪ್ರಯತ್ನಗಳಾಗಿ ಯಶಸ್ಸು ಕಂಡಿವೆ.

ಕನ್ನಡದ ಛಂದೋರೂಪಗಳ ಪರಿಚಯವಿದ್ದು ಹಲವಾರು ಕವಿಗಳ ಶೈಲಿಯ ಪರಿಚಯವೂ ಇದ್ದವರು ಎಂಥ ಉತ್ತಮ ಅನುಕರಣ ಪದ್ಯ ಅಣಕವಾಡುಗಳನ್ನು ಬರೆಯಲು ಸಾಧ್ಯ ಎಂಬುದಕ್ಕೆ ಒಂದು ಉದಾಹರಣೆ ಕೊಡಬಹುದು. ಜಿ. ಪಿ. ರಾಜರತ್ನಂ ಅವರ

"ನಾಯಿ ಮರಿ ನಾಯಿ ಮರಿ ತಿಂಡಿ ಬೇಕೆ
ತಿಂಡಿ ಬೇಕು ತೀರ್ಥಬೇಕು ಎಲ್ಲಬೇಕು..."

ಈ ಪದ್ಯವನ್ನು ಕೆ. ಎಸ್. ನರಸಿಂಹಸ್ವಾಮಿಯವರು ಬರೆದಿದ್ದರೆ ಹೀಗಿರುತ್ತಿತ್ತೇನೋ ಎಂದು ಊಹಿಸಿದ್ದಾರೆ:

"ಒಂದು ದಿನ ಬೆಳಗಿನಲಿ ನಾಯಿಯನು ಕೇಳಿದೆನು

ತಿಂಡಿ ನಿನಗಾವುದೆಂದು
ಬಿಸ್ಕೀಟು ಚೆಂದವೋ ನೊರೆಹಾಲು ಚಂದವೋ...''

ಕುಮಾರವ್ಯಾಸನಂತೆ ಭಾಮಿನೀ ಷಟ್ಪದಿ ಬರೆಯಬಲ್ಲವರನ್ನು ಕೇಳಿದ್ದರೆ ಅದು ಹೀಗಿರುತ್ತಿತ್ತಂತೆ!

ಶುನಕ ಪುತ್ರನೆ ಬೆಸಸು ನಿನ್ನಯ
ಮನದಭೀಷ್ಟದ ರೀತಿ ನೀತಿಯ
ಪಾನದೊಂದಿಗೆ ನೀಡಬಲ್ಲೆನು ಖಾದ್ಯ ವಸ್ತುಗಳ...

ಇದನ್ನೇ ಕುವೆಂಪು ಬರೆದಿದ್ದರೆ :

ಓ ನಯನಮನೋಹರ ಶುನಕ ಮೂರ್ತಿ
ಅರಿಹೃದಯ ತಣ್ಣಗಿಪ ರೌದ್ರವಾಣಿ ನಿನ್ನದಲ್ತೆ
ಪೇಳ್ ಪೇಳು ಏನ ಬಯಸುವೆ ನೀನು?
ಮೃಷ್ಟಾನ್ನಭೋಜನವೆ ಮೇಣ್ ಸೋಮರಸವೇ?

ಡಿವಿಜಿ ಯಾಗಿದ್ದರೆ :

ತಿಂಡಿಯಾಸೆಗೆ ಶುನಕ ಬಾಗಿಲನು ಕಾಯ್ವುದಲ
ತಿಂಡಿ ತೀರ್ಥವ ನೀಡೆ ಬಾಲವಾಡಿಪುದು
ಭಂಡಕಳ್ಳರ ಕಂಡು ಬೊಗಳಿ ಓಡಿಪುದಲ್ತೆ
ಹಿಂಡವದು ಸಾರ್ಥಕವೋ...

'ದೇವರು ದೊಡ್ಡವನು' ಕೃಷ್ಣ ಸುಬ್ಬರಾವ್ ಅವರ ಕಿರುಬರಹಗಳ ಸಂಗ್ರಹ. ಕೃಷ್ಣ ಸುಬ್ಬರಾವ್ ಸಮಕಾಲೀನ ಸಮಸ್ಯೆಗಳನ್ನು ಭೂತಗಾಜಿನಿಂದ ನೋಡುವ ಪ್ರವೃತ್ತಿ ಬೆಳೆಸಿಕೊಂಡಿರುವ ಒಬ್ಬ ಹಾಸ್ಯಜೀವಿ. ನಮ್ಮ ಸುತ್ತ ಇರುವ ಜನರ ವಿಚಿತ್ರ ನಡವಳಿಕೆಗಳನ್ನು ಮುಗ್ಧನಂತೆ ತೆರೆದು ತೋರಬಲ್ಲ ಸಾಮರ್ಥ್ಯವುಳ್ಳವರು. ಅವರ ಭಾಷೆಯಲ್ಲಿ ಲಲಿತ ಲಾಸ್ಯವಿದೆ, ರಸವಂತಿಕೆಯಿದೆ. ಓದುಗರೊಂದಿಗೆ ಸಂವಹನದ ಸೇತುವನ್ನು ಕಟ್ಟಿಕೊಳ್ಳಬಲ್ಲ ಆಪ್ತ ಶೈಲಿಯಿದೆ 'ದೇವರು ದೊಡ್ಡವನು' ಎಂಬ ಶೀರ್ಷಿಕಾ ಪ್ರಬಂಧವನ್ನೇ ಉದಾಹರಣೆಗಾಗಿ ತೆಗೆದುಕೊಳ್ಳಬಹುದು. ಇದು ನಾ ಕಸ್ತೂರಿ ಲಾಂಗೂಲಾಚಾರ್ಯ ಜೀ. ಪಿ. ರಾಜರತ್ನಂ ಮೊದಲಾದವರು ಮಾಡಿದಂತೆ ಹಳೆಯಕಥೆಯಲ್ಲಿ ಹೊಸ ಸಾಧ್ಯತೆಗಳನ್ನು ಹುಡುಕುವ ಒಂದು 'ಶೋಧಲೇಖ'. ಪಂಚ ಪಾಂಡವರನ್ನೂ ದ್ರೌಪದಿ ಕಟ್ಟಿಕೊಳ್ಳಬೇಕಾಯಿತಲ್ಲ. ಆದರೆ ಮುಂದೆ ಅವಳು ಯಾವ ಯಾವ ಗಂಡನ ಬಳಿ ಯಾವ ಯಾವ ಅವಧಿಯಲ್ಲಿರಬೇಕು, ಅವಳು ಗರ್ಭಿಣಿಯಾದಾಗ ಅದು ಯಾವ ಲೆಕ್ಕಕ್ಕೆ ಸೇರಬೇಕು ಇತ್ಯಾದಿ ವಿಷಯಗಳ ಬಗೆಗೆ ಪಂಚಪಾಂಡವರಲ್ಲಿ ಭಾರಿಯ ಮಾತುಕಥೆ ನಡೆಯುತ್ತದೆ. ಗಂಟೆಗಟ್ಟಲೆ ಚರ್ಚೆ ನಡೆಯುತ್ತದೆ. ಆಗ ದ್ರೌಪದಿ ಮನಸ್ಸಿನಲ್ಲೇ ಹೀಗೆಂದುಕೊಂಡಳಂತೆ.

"ಸದ್ಯ ದುರ್ಯೋಧನ ನನ್ನನ್ನು ಗೆಲ್ಲಲಿಲ್ಲವಲ್ಲ...!''

ಚಂದ್ರಶೇಖರ ಆಲೂರರ 'ಗೀತ ಸಂಗೀತ' ಒಂದು ವಿಶಿಷ್ಟ ಪ್ರಬಂಧ ಸಂಕಲನ. ಇಡೀ ಪುಸ್ತಕದ ಮುಖ್ಯ ಗುರಿ ಸಿನಿಮಾ ಹಾಡುಗಳ ವಿಶ್ಲೇಷಣೆ. ಮೇಲುನೋಟಕ್ಕೆ ಇಲ್ಲಿಯ ಬಿಡಿ ಬಂಧಗಳು ಕನ್ನಡದ ಒಬ್ಬೊಬ್ಬ ಸಿನಿಸಂಗೀತ ರಚಯಿತನ ಪದ್ಯಗಳ ಪರಿಚಯ ಎನ್ನಿಸಿದರೂ ಅದು ಆಯಾ ಸಿನಿಕವಿಯ ಒಟ್ಟಾರೆ ಸಾಧನೆಯನ್ನು ಅದರ ಎಲ್ಲ ಇತಿಮಿತಿಗಳೊಂದಿಗೆ ತೂಗಿ ನೋಡುವ ಪ್ರಯತ್ನವನ್ನು ಮಾಡಲಾಗಿದೆ. ಚಿ. ಸದಾಶಿವಯ್ಯ, ಕು. ರ. ಸೀತಾರಾಮ ಶಾಸ್ತ್ರಿ, ಜಿ. ವಿ. ಅಯ್ಯರ್, ಹುಣಸೂರ್, ಕಣಗಾಲ್ ಪ್ರಭಾಕರ ಶಾಸ್ತ್ರಿ, ಸೋರಟ್ ಅಶ್ವಥ್, ನರೇಂದ್ರಬಾಬು, ಎಸ್. ಕೆ. ಕರೀಂಖಾನ್ ಗೀತಪ್ರಿಯ, ವಿಜಯನಾರಸಿಂಹ, ಎಸ್. ಜಾನಕಿ, ಆರ್. ಎನ್. ಜಯಗೋಪಾಲ್, ಚಿ. ಉದಯಶಂಕರ್, ದಲಿತಕವಿ ಸಿದ್ಧಲಿಂಗಯ್ಯ, ನಾಡಿಗೇರ್, ಕಂಬಾರ, ದೊಡ್ಡರಂಗೇಗೌಡ, ವ್ಯಾಸರಾವ್ ಶ್ಯಾಮಸುಂದರ ಕುಲಕರ್ಣಿ, ಹಂಸಲೇಖಾ ಮೊದಲಾದ ಎಲ್ಲ ಚಿತ್ರ ಕವಿಗಳ ಕವಿತೆಗಳನ್ನು ಅಧ್ಯಯನಕ್ಕೆ ಒಳಗು ಮಾಡಿದ್ದಾರೆ. ಸರಿಯಾದ ದಾಖಲೆಗಳನ್ನೂ ಪದ್ಯಖಂಡಗಳನ್ನೂ ನಮೂದಿಸಬೇಕಾದರೆ ಅಪಾರ ಪರಿಶ್ರಮ ಹಾಗೂ ಹುಡುಕಾಟ ಅತ್ಯಗತ್ಯ. ತುಂಬ ತಾಳ್ಮೆಯಿಂದ ಇವರು ಸಾಕ್ಷ್ಯಾಧಾರಗಳನ್ನೊದಗಿಸಿಕೊಂಡು, ಕೆಲವರನ್ನು ನೇರವಾಗಿ ಭೇಟಿಮಾಡಿ ಚರ್ಚೆಗೆ ಕಾವು ಮೂಡಿಸಿದ್ದಾರೆ. ಅವರ ಜೀವನ ವಿವರಗಳನ್ನೂ ಕಲೆಹಾಕಿದ್ದಾರೆ. ಅವರ ಗುಣ–ದ್ವೇಷಗಳನ್ನು ಪ್ರಸ್ತಾಪಿಸುತ್ತಾ ಒಟ್ಟಾರೆಯಾಗಿ ಇಡೀ ಸಿನಿಮಾ ಸಂಗೀತದ ಭಾಷ್ಯವನ್ನೇ ಬರೆದುಬಿಡುತ್ತಾರೆ. ಕಾಲಾನುಕ್ರಮಣಿಕೆಯನ್ನೂ ಸೂಚಿಸಿದ್ದಾರೆ. ಅಲ್ಲದೆ ಕುವೆಂಪು ಬೇಂದ್ರೆ ಕೆ.ಎಸ್.ನ. ಇವರ ಕೆಲವು ಕವಿತೆಗಳನ್ನು ಸಿನಿಮಾಕ್ಕೆ ಅಳವಡಿಸಿಕೊಂಡಿರುವುದರ ಪರಿಣಾಮವನ್ನೂ ವಿಶ್ಲೇಷಿಸಿ ನೋಡಿದ್ದಾರೆ. ಚಂದ್ರಶೇಖರ ಆಲೂರರ ಇನ್ನೊಂದು ಸಾಧನೆ ಎಂದರೆ ಕನ್ನಡ ಸಿನಿಮಾದ ಹಾಡುಗಳ ಮೌಲ್ಯವನ್ನು ಗುರುತಿಸುವ ಪ್ರಯತ್ನ. ಉದಾಹರಣೆಗೆ ತಾಯಿ, ಕನ್ನಡನಾಡು, ನುಡಿ, ಹೆಣ್ಣು ಈ ನಾಲ್ಕು ವಸ್ತುಗಳನ್ನು ನಮ್ಮ ಕವಿಗಳು ಹೇಗೆ ನಿರ್ವಹಿಸಿದ್ದಾರೆಂಬುದರ ಸೊಗಸಾದ ವಿಶ್ಲೇಷಣೆ ಈ ಪ್ರಬಂಧಗಳಲ್ಲಿವೆ. ಹೆಣ್ಣನ್ನು ಈ ಕವಿಗಳೆಲ್ಲ ಚಿತ್ರಿಸಿರುವ ರೀತಿಯನ್ನು ವಿವರಿಸುತ್ತಲೇ ಆಲೂರರು "ಪುರುಷ ಪ್ರಧಾನ ವ್ಯವಸ್ಥೆಯ ಪೈಶಾಚಿಕತೆ ಹೆಣ್ಣನ್ನು ಎಷ್ಟೆಲ್ಲ ಹೀನವಾಗಿ, ತುಚ್ಛವಾಗಿ, ನಿಕೃಷ್ಟವಾಗಿ ಕಾಣಲು ಸಾಧ್ಯವೋ ಅಷ್ಟೆಲ್ಲವನ್ನೂ ಚೂರು ಪ್ರಜ್ಞಾವಂತರಿಗೆ ಕೂಡ ನಡುಕ ಹುಟ್ಟಿಸುವಂಥ ರೀತಿಯಲ್ಲಿ ನಮ್ಮ ಬೆಳ್ಳಿತೆರೆ ಬಿಂಬಿಸಿದೆ''– ಇಂಥ ಆರೋಗ್ಯಕರವಾದ ಒಳನೋಟಗಳೂ ಅಲ್ಲಲ್ಲಿ ಕಾಣಿಸಿಕೊಟ್ಟಿದ್ದಾರೆ.

ವೈ ಎನ್ ಕೆ ಅವರ 'ವಂಡರ್' ಒಂದು ಸೊಗಸಾದ ಅಂಕಣ ಬರಹಗಳ ಸಂಕಲನ. ಲೇಖಕರ ಹಾಸ್ಯಪ್ರಿಯತೆ, ವೈಚಾರಿಕತೆ ಭಾಷಾ ಪ್ರೌಢಿಮೆ ವಿಚಾರಪರತೆ

ಹಾಗೂ ಬಹುಶ್ರುತತೆ ಇಲ್ಲಿಯ ಪ್ರಬಂಧಗಳಲ್ಲಿ ಎದ್ದು ಕಾಣುವಂತಿವೆ. ಪತ್ರಿಕೆಯ ಅಂಕಣ ಬರಹಗಳಿಗೆ ದೈನಂದಿನ ಪ್ರಚಲಿತ ವಿಷಯ ಘಟನೆಗಳ ಚಿಂತನೆ ಪ್ರಧಾನವಾಗುವುದರಿಂದ ಅವುಗಳನ್ನು ಪ್ರಸ್ತುತ ಪಡಿಸುತ್ತಲೇ ಸಾರ್ವತ್ರಿಕ ಅಂಶಗಳನ್ನು ಬೆಳಕಿಗೆ ತರುವ ಪ್ರಯತ್ನವನ್ನು ವೈ ಎನ್ ಕೆ ಮಾಡಿದ್ದಾರೆ. ಇಂಥ ದೈನಂದಿನ ಓದುಗಾರರಿಗೆ ಚುರುಕಾಗಿ ಸಂಕ್ಷೇಪವಾಗಿ ತಟ್ಟುವಂತೆ ಹೇಳಬೇಕೆಂಬ ಮನೋಧರ್ಮ ಲೇಖಕರಲ್ಲಿ ಮನೆಮಾಡಿಕೊಂಡಿದೆ. ಅವರ ವಾಕ್ಯಗಳು ಸೂಕ್ತಿಗಳಂತೆ ಅರ್ಥಗರ್ಭಿತವಾಗಿವೆ. ಬರಹಗಳು ತುಂಬ ಸ್ವಾರಸ್ಯವಾದ ಸುದ್ದಿಗಳನ್ನು ನೆಪವಾಗಿಟ್ಟುಕೊಂಡು ಆರೋಗ್ಯಕರವಾದ ಸಂವಾದವನ್ನು ಬೆಳೆಸುತ್ತವೆ. 'ಗಡಿಯಾರದ ಗುಲಾಮ' ಎಂಬ ಒಂದು ಬಂಧವನ್ನು ಉದಾಹರಣೆಗೆ ಪರಿಶೀಲಿಸಬಹುದು. ಸೂರ್ಯನ ಸುತ್ತ ಕ್ರಮಿಸುವ ಭೂಮಿ ಒಂದು ಸುತ್ತು ತಿರುಗುವುದಕ್ಕೆ ಇಪ್ಪತ್ತನಾಲ್ಕು ಗಂಟೆಗಳು ಹಿಡಿಯುವುದರಿಂದ ಮನುಷ್ಯನ ಜೀವನಕ್ರಮವೂ ಇದಕ್ಕೇ ಹೊಂದಿಕೊಂಡಿದೆಯಷ್ಟೆ. ಇದರಲ್ಲಿ ಸ್ವಲ್ಪ ವ್ಯತ್ಯಯವೇಕಾಗಬಾರದು ಎಂಬ ಅಂಶ ಇಲ್ಲಿ ಚರ್ಚೆಗೆ ಒಳಗಾಗಿದೆ. ಮನುಷ್ಯನು ಗಡಿಯಾರ, ಟಿ. ವಿ. ರೇಡಿಯೋಗಳಿಲ್ಲದ ಕಿಟಕಿಯಿಲ್ಲದ ಕಡೆಯಲ್ಲಿ ಇರಬೇಕಾಗಿ ಬಂದರೆ ಆತನ 'ದಿನದ' ಅವಧಿ ವಿಸ್ತರಿಸುವ, ಸಂಭವವಿದೆಯೆಂದು ಈಗ 'ಪ್ರಯೋಗ'ದಿಂದ ತಿಳಿದುಬಂದಿದೆಯಷ್ಟೆ. ಈ ಪ್ರಯೋಗದ ಪ್ರಕಾರ ಈಗ ಮನುಷ್ಯನ ನಿದ್ರಾವಧಿ ನಲವತ್ತು ಗಂಟೆಗಳು. ಈ ವಿಷಯವನ್ನು ಸಂವಾದಕ್ಕೆ ಎತ್ತಿಕೊಳ್ಳುವ ವೈ ಎನ್ ಕೆ ಅದಕ್ಕೆ ಸಂಬಂಧಿಸಿದ ಎಲ್ಲ ಪೂರಕ ಸಾಮಗ್ರಿಗಳನ್ನು ಲಕ್ಷಣವಾಗಿ ಹೆಕ್ಕಿ ತೆಗೆಯುತ್ತಾರೆ. ಕೊನೆಗೆ ಇಂಥ ಪ್ರಯೋಗಗಳ ಬಗೆಗೆ ಮಾತ್ರವಲ್ಲದೆ 'ಕಾಲ'ದ ಬಗೆಗೆ ತೀವ್ರವಾಗಿ ಚಿಂತಿಸುತ್ತಾರೆ. "ಈ ರೀತಿ ಗವಿಯೊಳಗೇ, ಕಿಟಕಿ ಗಡಿಯಾರಗಳಿಲ್ಲದ ಕೋಣೆಯೊಳಗೇ ಇದ್ದು ಆಯುಸ್ಸನ್ನು ಇಮ್ಮಡಿ ಮಾಡಬಹುದಾದರೆ ಏನರ್ಥ? ಎಂದು ಕೇಳುವವರೂ ಇದ್ದಾರೆ. ಜೀವನ ಎಂದರೆ ಜಗತ್ತಿನ ಆಗುಹೋಗುಗಳಿಗೆ ಬಿಚ್ಚುಕಣ್ಣಿನಿಂದ ಪ್ರತಿಸ್ಪಂದನೆ ಎಂದಿರುವಾಗ, ಕಾಲಕ್ಕೆ ಮೊದಲೇ ಜೀವಂತ ಸಮಾಧಿಗೆ ಹೋದಂತಾಗುವುದಿಲ್ಲವೆ?– ಎಂದು ಪ್ರಶ್ನಿಸುತ್ತಾರೆ. ಕೋಣೆಯೊಳಗೆ ಬಂದಿಯಾಗಿದ್ದು ದೇಹದ ಗಡಿಯಾರದ ಅವಧಿ ಹೆಚ್ಚಿಸಬಹುದಾದರೆ ಹೊರಗೆ ಬಂದ ಮೇಲೆ ಏನು? ಭೂಮಿಯ ಪ್ರದಕ್ಷಿಣೆ ಇಪ್ಪತ್ತನಾಲ್ಕು ಗಂಟೆಗಿಂತ ಹೆಚ್ಚಾಗುವುದಿಲ್ಲವಲ್ಲ..."

ವೈ ಎನ್ ಕೆ ಅವರ 'ವಂಡರ್' ನ ಬರಹಗಳ ಇನ್ನೊಂದು ವೈಶಿಷ್ಟ್ಯವೆಂದರೆ ಅವರ ಶಬ್ದಚಿಕಿತ್ಸೆ. ಬರೆಯುವಾಗ ಆಕಸ್ಮಿಕವಾಗಿ ಬರುವ ಶಬ್ದದ ಎಲ್ಲ ಮಗ್ಗುಲುಗಳನ್ನ ಚಪ್ಪರಿಸುವ ರೀತಿಯೂ ಮೆಚ್ಚಬೇಕಾದದ್ದೇ. ಹಾಸ್ಯ ಪ್ರಜ್ಞೆ ಅವರಲ್ಲಿ ಪ್ರಧಾನ ಪಾತ್ರ ವಹಿಸುವುದರಿಂದ ಅತ್ಯಂತ ಗಂಭೀರವಾದ ಚಿಂತನೆಯನ್ನೂ ಅವರು ಹಾಸ್ಯದ ಗಾಡಿಯಲ್ಲಿ ಎಳೆಯಬಲ್ಲರು.

ಕೆ. ಎಸ್. ನಿಸಾರ್ ಅಹಮದ್ ಅವರ 'ಮನದೊಂದಿಗೆ ಮಾತುಕತೆ' ಲೇಖನಗಳ ಸಂಗ್ರಹ. ವಸ್ತು ಸಂಗ್ರಹ ಸಂಶೋಧನ ಶೈಲಿಯ ವಿವರಣೆ, ಹರಟೆಯ ಶೈಲಿಯ ಆಪ್ತತೆ, ಪ್ರಬಂಧ ಶೈಲಿಯ ಸ್ವಚ್ಛಂದ ವಿಚಾರ ಲಹರಿ, ವಿಮರ್ಶೆಯ ಧಾಟಿಯ ವಿಶ್ಲೇಷಣೆ ಈ ಎಲ್ಲ ಪರಿಕರಗಳನ್ನು ಅಗತ್ಯಕ್ಕೆ ಅನುಗುಣವಾಗಿ ಬಳಸಿಕೊಳ್ಳುವ ಪ್ರಾಸಾದಿಕ ಗುಣ ನಿಸಾರ್ ಅಹಮದ್‌ರ ಬರವಣಿಗೆಯಲ್ಲಿದೆ. ವ್ಯಕ್ತಿ ಚಿಂತನ, ಸಮಾಜ ಪರಾಮರ್ಶೆ, ಸಾಹಿತ್ಯ ಸಮಾಲೋಚನೆ, ನಿಸರ್ಗ ಸಮೀಕ್ಷೆ ಮೊದಲಾದ ಹತ್ತಾರು ಕವಲುಗಳಲ್ಲಿ ಒಂದರಿಂದ ಇನ್ನೊಂದು ಭಿನ್ನವಾಗುತ್ತ ಹೋಗುವುದೇ ಇಲ್ಲಿಯ ಮೂವತ್ತು ಲೇಖನಗಳ ವೈಶಿಷ್ಟ್ಯ. ನಿಸಾರ್ ಅಹಮದ್ ತುಂಬ ಭಾವನಾತ್ಮಕವಾಗಿ ಬರೆಯಬಲ್ಲ ಗದ್ಯಕಲಾವಿದ. ವಿ. ಸೀ. ಮಾಸ್ತಿ ಎಂ. ಆರ್. ಶ್ರೀ. ಗೋಕಾಕ್ ಮೊದಲಾದ ಕನ್ನಡದ ಹಿರಿಯರ ಬಗ್ಗೆ ಬರೆಯುವ ಸಂದರ್ಭದಲ್ಲಿ ಈ ಅಂಶ ಎದ್ದು ಕಾಣುತ್ತದೆ. ಸರ್ ಮಿರ್ಜಾ, ನೆಹರೂ, ಟಿಪ್ಪೂ ಮೊದಲಾದವರ ವ್ಯಕ್ತಿ ಚಿತ್ರಗಳು ಇಲ್ಲಿವೆ. ಹ. ವೆಂ ನಾಗರಾಜರಾವ್ ರವರ 'ಮನದ ತೆರೆಯ ಮೇಲೆ' ಎಂಬುದು ಕೂಡ ಇದೇ ಮಾದರಿಯ ಪತ್ರಿಕಾ–ಸಾಹಿತ್ಯಕ ಬರಹಮಾಲೆ. ಇದರಲ್ಲಿ ಲೇಖಕರೇ ಹೇಳುವಂತೆ ವಿವಿಧ ಜಾತಿಯ ಗಿಡಮರಬಳ್ಳಿಗಳು ಸೇರಿಕೊಂಡಿವೆ. ನಿಯತ ಕಾಲಿಕೆಗಳಲ್ಲಿ ಆಗಿಂದಾಗ ಸ್ಥಿರ ಶೀರ್ಷಿಕೆಗಳಲ್ಲಿ ಬರೆಯಲಾಗುವ ಇಂಥ ಲೇಖನಗಳಿಗೆ ಸಹಜವಾಗಿ ವಸ್ತು ವಿಷಯ ಸಂದರ್ಭಗಳು ಬೇರೆ ಬೇರೆಯಾಗುತ್ತವಾದ್ದರಿಂದ ಇಲ್ಲಿಯ ಲೇಖನಗಳಲ್ಲೂ ಏಕಸೂತ್ರತೆ ಎಂಬುದಿಲ್ಲ. ನೀತಿಬದ್ಧವಾದ ಉಪದೇಶಪ್ರಿಯವಾದ ವಿವರಣ ಪರ ಧೋರಣೆ ಲೇಖಕನದು. 'ಬೆಳಗಿನ ವಾಯು ವಿಹಾರ', ಅಯ್ಯಾ ಮಾನವಾ'– ಈ ಎರಡು ಲಲಿತ ಪ್ರಬಂಧಗಳ ವರ್ಗಕ್ಕೆ ಸೇರಿದರೆ 'ತೇರು ಬರುತಿದೆ ಬನ್ನಿ' ಮೊದಲಾದವು ಕಥನಾತ್ಮಕವಾಗಿವೆ. ವ್ಯಕ್ತಿಚಿತ್ರಗಳು ಪ್ರವಾಸ ಚಿಂತನ – ಹೀಗೆ ಸಂಕೀರ್ಣಬರಹಗಳು ಮೂಡಿಬಂದಿವೆ. ನಾಗರಾಜರಾವ್ ಅವರ ಗದ್ಯ ವಿವರಣಪರತೆ, ಭಾಷಣ ಬುದ್ಧಿಗಳ ಉಪಟಳದಿಂದ ಸೊರಗಿರುವಂತೆ ಕಾಣುತ್ತದೆ.

# ಜೀವನಚರಿತ್ರೆ ಮತ್ತು ಆತ್ಮಕಥನ

ಜೆ. ಶ್ರೀನಿವಾಸರಾಜು

ಹೊಸಗನ್ನಡ ಸಾಹಿತ್ಯದ ಗದ್ಯ ಪ್ರಕಾರಗಳಲ್ಲಿ ಜೀವನ ಚರಿತ್ರೆ, ಆತ್ಮಕಥನ ಮತ್ತು ವ್ಯಕ್ತಿ ಚಿತ್ರಗಳು ವಿಶಿಷ್ಟ ಸ್ಥಾನವನ್ನು ಪಡೆದಿವೆ. ಕಳೆದ ಒಂದೆರಡು ದಶಕಗಳಿಂದ ಈ ಪ್ರಕಾರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೃತಿಗಳು ಪ್ರಕಟವಾಗುತ್ತಿವೆ. ಹೊಸಗನ್ನಡ ಸಾಹಿತ್ಯವನ್ನು ಕಟ್ಟಿ ಬೆಳೆಸಿದವರೆಲ್ಲಾ ಈ ಪ್ರಕಾರವನ್ನೂ ಬೆಳೆಸಿದ್ದಾರೆ. ಡಿ.ವಿ.ಜಿ. ಯವರ 'ಜ್ಞಾಪಕ ಚಿತ್ರಶಾಲೆ'ಯ ಸಂಪ್ರದಾಯಗಳನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

ಜೀವನ ಚರಿತ್ರೆ ಮತ್ತು ಆತ್ಮಕಥನಗಳನ್ನು ಬರೆಯುವ ಪ್ರವೃತ್ತಿ ಸಾಮಾನ್ಯವಾಗಿ ಎಲ್ಲ ಕಾಲದ, ಎಲ್ಲ ದೇಶದ ಜನರಲ್ಲೂ ಕಾಣಬಹುದು. ಶ್ರೀ ಹೆಚ್.ಎಲ್. ನಾಗೇಗೌಡರು ಕನ್ನಡಕ್ಕೆ ತಂದ 'ಪ್ರವಾಸಿ ಕಂಡ ಇಂಡಿಯಾ' ಸಂಪುಟಗಳೇ ಇದಕ್ಕೆ ಸಾಕ್ಷಿ. ಈ ಮೂಲಕ ಆಯಾ ಕಾಲದ ಬದುಕಿನ ರೀತಿ–ನೀತಿಗಳನ್ನು ಮನೋಧರ್ಮ ಕಂಡುಕೊಳ್ಳಲು ಸಹಾಯವಾಗುತ್ತದೆ. ಒಂದು ರೀತಿಯಲ್ಲಿ ನಮ್ಮ ಆದಿಕವಿ ಪಂಪನಿಂದಲೇ ಈ ಪರಂಪರೆ ಪ್ರಾರಂಭವಾಗಿದೆ. ಹರಿಹರ ತನ್ನ ರಗಳೆಗಳಲ್ಲಿ ಚರಿತ್ರೆಯನ್ನು ರಚಿಸುವ ಸ್ಪಷ್ಟ ಹೆಜ್ಜೆಗಳನ್ನೇ ಇಟ್ಟಿದ್ದಾನೆ. ಜೀವನ ಚರಿತ್ರೆಗಳನ್ನು ರಚಿಸುವವರು ವಸ್ತುನಿಷ್ಠ ದೃಷ್ಟಿಕೋನವನ್ನುಳ್ಳವರಾಗಿರಬೇಕೆಂದು ಬಯಸಿದರೂ, ಬರೆಯುವವರ ಮನೋಧರ್ಮ, ಸನ್ನಿವೇಶಗಳ ಆಯ್ಕೆಗೆ ಅನುಗುಣವಾಗಿ ಜೀವನ ಚರಿತ್ರೆಯ ಸ್ವರೂಪ ನಿರ್ಧಾರವಾಗುತ್ತದೆ. ಆದ್ದರಿಂದ ಯಾವುದೇ ಜೀವನ ಚರಿತ್ರೆಯನ್ನು ಪರಿಪೂರ್ಣವೆಂದು ಪರಿಗಣಿಸುವುದು, ವ್ಯಾಖ್ಯಾನಿಸುವುದು ತಪ್ಪಾಗುತ್ತದೆ. ದಾಖಲೆ ಸಾಮಗ್ರಿಗಳು ಕಡಿಮೆಯಾಗುತ್ತಾ ಹೋದ ಹಾಗೆ ಈ ಕಷ್ಟ ಹೆಚ್ಚಾಗುತ್ತಾ ಹೋಗುತ್ತದೆ.

ಸಾಮಾನ್ಯವಾಗಿ ಭಾರತೀಯರಲ್ಲಿ ನೆಲೆಯೂರಿರುವ ಪುನರ್ಜನ್ಮದ ಮನೋಧರ್ಮ, ಚಾರಿತ್ರಿಕ ಪ್ರಜ್ಞೆಯ ಅಭಾವಕ್ಕೆ ಕಾರಣವಾಗಿರಲೂಬಹುದು ಅಥವಾ ತಮ್ಮ ಸುತ್ತಮುತ್ತಲಿನ ಮನುಷ್ಯನನ್ನೇ ದೇವತೆಯನ್ನಾಗಿ ಪರಿಭಾವಿಸಿ ಬರೆಯುವ ಪರಿಪಾಠದಿಂದ ಚಾರಿತ್ರಿಕ ಪ್ರಜ್ಞೆ ಹಿಂದೆ ಸರಿದಿರಬಹುದು. ಹೊಸಗನ್ನಡ ಸಾಹಿತ್ಯದಲ್ಲಿ ಆತ್ಮ ಕಥನದ ಬೆಳವಣಿಗೆ ಅಷ್ಟು ಆರೋಗ್ಯಕರವಾಗಿಲ್ಲ.

ಬದುಕಿನಿಂದ ತಮ್ಮ ವ್ಯಕ್ತಿತ್ವಕ್ಕೆ ಧಕ್ಕೆ ಬಾರದ ಭಾಗಗಳನ್ನು ಮಾತ್ರ ಆಯ್ಕೆ ಮಾಡಿಕೊಂಡು ಪ್ರಶಂಸಿಸುವ, ಆರಾಧಿಸುವ, ಭಗ್ನಗೊಳಿಸುವ, ವೈಭವೀಕರಿಸುವ ರೀತಿಯಲ್ಲೇ ಕೃತಿ ರಚನೆ ಮಾಡುತ್ತಾರೆ. ಬೇಡದ ಭಾಗಗಳನ್ನು ಜಾಣತನದಿಂದ ನಿರ್ವಹಿಸುತ್ತಾರೆ. ಆದ್ದರಿಂದ ಬಹುಪಾಲು ಜೀವನ ಚರಿತ್ರೆ ಮತ್ತು ಆತ್ಮ ಕಥನಗಳು ಕಥಾಸಾಹಿತ್ಯದ ಅಂಚಿನಲ್ಲೇ ಸುಳಿದಾಡುತ್ತವೆ. ಮರಾಠಿಯಲ್ಲಿ ಒಂದೆರಡು ದಶಕದಿಂದ ಕಂಡು ಬಂದಿರುವ ದಲಿತರ ಆತ್ಮ ಕಥನಗಳು ಸಾಹಿತ್ಯ ಪ್ರಿಯರ ಗಮನವನ್ನು ಸೆಳೆದಿವೆ. ಅಜ್ಞಾತವಾಗಿದ್ದ ಸಾಂಸ್ಕೃತಿಕ ಬದುಕಿನ ಜೀವನ ವಿಧಾನದ ಬಿಚ್ಚು ಮನಸ್ಸಿನ ಅನಾವರಣವನ್ನು ಕಾಣಬಹುದಾಗಿದೆ. ಆತ್ಮ ಕಥನ ಮತ್ತು ಜೀವನ ಚರಿತ್ರೆಯನ್ನು ಬರೆಯುವವನ ಪ್ರಾಮಾಣಿಕತೆ, ಧೈರ್ಯ, ಸಮಕಾಲೀನ ಬದುಕನ್ನು ಗ್ರಹಿಸಲು ಎಚ್ಚರ ಹೆಚ್ಚಿದಷ್ಟು ಬರವಣಿಗೆಯ ಗಟ್ಟಿತನ ಹೆಚ್ಚುತ್ತದೆ.

ಪ್ರಸ್ತುತ ಸಂದರ್ಭದಲ್ಲಿ ವ್ಯಕ್ತಿಚಿತ್ರಗಳ ರಚನೆ ಅನಿವಾರ್ಯವೆಂಬಂತೆ ಕಂಡು ಬರುತ್ತಿವೆ. ಪ್ರತಿಯೊಂದು ನಿಯತಕಾಲಿಕವೂ ಸುದ್ದಿಯ ಸೃಷ್ಟಿಕರ್ತರನ್ನು ಕುರಿತು ವ್ಯಕ್ತಿ ಚಿತ್ರಗಳನ್ನು ಪ್ರಕಟಿಸುತ್ತಲೇ ಇರುತ್ತದೆ. ಅದು ಚಿತ್ರಿಸುವವರ ಸಿದ್ಧತೆ, ದೃಷ್ಟಿ, ಶೈಲಿಗೆ ಅನುಗುಣವಾಗಿ ರೂಪಗೊಳ್ಳುತ್ತಿದೆ. ಡಿ.ವಿ.ಜಿ., ದ.ಬಾ. ಕುಲಕರ್ಣಿ, ಎಚ್ಚೆಸ್ಕೆ ಮುಂತಾದವರನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

1991ರಲ್ಲಿ ಪ್ರಕಟವಾದ ಜೀವನ ಚರಿತ್ರೆ ಮತ್ತು ಆತ್ಮಕಥನಗಳ ಸಂಖ್ಯೆ ನೂರರ ಗಡಿಯನ್ನು ದಾಟಿಲ್ಲ. ಇವುಗಳಲ್ಲಿ ಬೆರಳೆಣಿಸುವಷ್ಟು ಆತ್ಮ ಕಥನಗಳನ್ನು ಬಿಟ್ಟರೆ ಉಳಿದದ್ದು ವಿವಿಧ ಕ್ಷೇತ್ರಗಳಲ್ಲಿ ಕರ್ತವ್ಯ ನಿರ್ವಹಿಸಿದವರ ಜೀವನ ಚರಿತ್ರೆಗಳು. ಇವುಗಳಲ್ಲಿ ಗಂಭೀರವಾಗಿ ಪರಿಗಣಿಸಬಹುದಾದ ಜೀವನ ಚರಿತ್ರೆಗಳು ಕೆಲವು ಮಾತ್ರ.

1991ರಲ್ಲಿ ಪ್ರಕಟವಾದ ಜೀವನ ಚರಿತ್ರೆಗಳಲ್ಲಿ ಸಾಹಿತ್ಯ ಪ್ರಪಂಚದ ಹಿರಿಯರನ್ನು ಕುರಿತು ಬರೆದ ಕೃತಿಗಳೇ ಹೆಚ್ಚಾಗಿವೆ. ಕನ್ನಡ ಸಾಹಿತ್ಯ ಪರಿಷತ್ತು ತನ್ನ ಅಮೃತೋತ್ಸವ ಸಂದರ್ಭದಲ್ಲಿ 'ಹೊಸಗನ್ನಡ ಸಾಹಿತ್ಯದ ನಿರ್ಮಾಪಕರು ಮಾಲಿಕೆಯಲ್ಲಿ ಪ್ರಕಟಿಸಿದ 'ತಿರುಮಲಾಂಬ', ದ.ರಾ. ಬೇಂದ್ರೆ, ಸಿದ್ದವನಹಳ್ಳಿ ಕೃಷ್ಣಶರ್ಮ, ಉತ್ತಂಗಿ ಚನ್ನಪ್ಪ, ಆ.ನೇ. ಉಪಾಧ್ಯೆ, ಮತ್ತು ಹೆಲೆನ್ ಕೆಲರ್ ಜೀವನ ಚರಿತ್ರೆಗಳಲ್ಲಿ ಆಯಾ ವ್ಯಕ್ತಿಗಳ ಪ್ರಮುಖ ಸಾಧನೆ–ಸಿದ್ಧಿಗಳನ್ನು ಒಳಗೊಂಡ ದಾಖಲೆಗಳಾಗಿವೆ. ಹರಡಿಕೊಂಡಿದ್ದ ಸಾಮಗ್ರಿಯನ್ನು ಒಂದು ಕಡೆ ತರುವ ಪ್ರಯತ್ನವನ್ನು ಕಾಣಬಹುದು. ಹೊಸದಾಗಿ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸುವವರಿಗೆ ಇವು ಸಹಾಯಕವಾಗಿವೆ. ಗುಣಗಾನವೇ ಎಲ್ಲ ಬರವಣಿಗೆಯ ಉದ್ದೇಶವಾಗಿದೆ. ಇದೇ ರೀತಿಯ ಎರಡು ಕೃತಿಗಳನ್ನು ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ತು ಪ್ರಕಟಿಸಿದೆ. ಕವಿ–ಕಾವ್ಯ ಪರಿಚಯದ ಮಾಲಿಕೆಯಲ್ಲಿ ಎಸ್.ಆರ್. ಲೀಲಾರವರ 'ಜಗ್ಗು ವಕುಳ ಭೂಷಣಂ' ಮತ್ತು ಎಚ್.ವಿ. ನಾಗರಾಜರಾವ್ ಅವರ

'ಪಂಡಿತಾ ಕ್ಷಮಾರಾವ್' ಕೃತಿಗಳು ಸಂಸ್ಕೃತ ನುಡಿ ಪರಿಚಾರಕರ ಪರಿಚಯವನ್ನು ಮಾಡಿಕೊಡುತ್ತವೆ. ಗಿರಿರಾಜ ಹೊಸಮನಿಯವರ 'ಮಾತುಂಡ ಮೌನ' ಸಜ್ಜಲಗುಡ್ಡದ ವಚನಕಾರ್ತಿ ಶರಣಮ್ಮನವರ ಬದುಕು ಬೋಧಕಗಳ ವಿವರಗಳನ್ನು ಸಂಗ್ರಹಿಸಿರುವ ಕೃತಿ. ಹಿರಿಯ ಲೇಖಕಿ ಶಾಂತಾದೇವಿ ಮಾಳವಾಡ ಅವರು ತಮಿಳು ನಾಡಿನ ಮೂವತ್ತು ಶಿವಶರಣರ ಬದುಕನ್ನು ಹರಿಹರನ ರಗಳೆಗಳನ್ನಾಧರಿಸಿ 'ಪುರಾತನ ಶರಣರು' ಎಂಬ ಕೃತಿಯನ್ನು ಭಕ್ತಿ ಪರಂಪರೆಯ ಮಾರ್ಗದಲ್ಲಿ ನಿರೂಪಿಸಿದ್ದಾರೆ. ಶರಣರ ಮಹಿಮೆಯನ್ನು ಸಾಮಾನ್ಯರಿಗೆ ಪರಿಚಯಿಸುವ ಬಯಕೆ ಲೇಖಕಿಯದು. ಇದೇ ವಸ್ತುವನ್ನು ಕುರಿತು ಇದೇ ರೀತಿಯ ಒಂದೆರಡು ಪ್ರಯತ್ನಗಳು ಹಿಂದೆ ನಡೆದಿದೆ. ಇದೂ ಕೂಡ ಅಂತಹ ಒಂದು ಪ್ರಯತ್ನ. 'ದತ್ತಾತ್ರೇಯ ಕೃಷ್ಣ ಭಾರದ್ವಾಜ'ರ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ ಕೋ. ವಸಂತಲಕ್ಷ್ಮಿ ಅವರು 'ಕನ್ನಡದ ಗರಡಿಯಾಳು ದ.ಕೃ. ಭಾರದ್ವಾಜ' ಕೃತಿಯನ್ನು ಪ್ರಕಟಿಸಿದ್ದಾರೆ. ಕನ್ನಡಿಗರ ಸ್ಮೃತಿಪಟಲದಿಂದ ಮರೆಯಾಗಿದ್ದ ಭಾರದ್ವಾಜರನ್ನು ಕುರಿತ ಒಂದು ಕಿರು ಜೀವನ ಚರಿತ್ರೆ ಪ್ರಕಟಗೊಂಡಿರುವುದು ಸಂತೋಷ. ಆದರೆ ಕೇವಲ 20 ದಿನಗಳಲ್ಲಿ ವಿಷಯ ಸಂಗ್ರಹಿಸಿ ಹಸ್ತಪ್ರತಿಯನ್ನು ಸಿದ್ಧಪಡಿಸಿರುವುದರಿಂದ ಲೋಪದೋಷಗಳಿಂದ ಮುಕ್ತವಾಗಿಲ್ಲ. ಟಿ.ಎಸ್. ವೆಂಕಣ್ಣಯ್ಯನವರ ಬದುಕಿಗೆ ಸಂಬಂಧಿಸಿದ ಸಂಗತಿಗಳನ್ನು ಹಾ.ಮಾ. ನಾಯಕರು 'ವೆಂಕಣ್ಣಯ್ಯ–ಕೆಲವು ಪ್ರಸಂಗಗಳು' ಎಂಬ ಅಪರೂಪದ ಕೃತಿಯನ್ನು ಪ್ರಕಟಿಸಿದ್ದಾರೆ. ವೆಂಕಣ್ಣಯ್ಯನವರ ವ್ಯಕ್ತಿತ್ವವನ್ನು ಕಟ್ಟಿಕೊಡುವ ಈ ಗಟ್ಟಿ ಪ್ರಯತ್ನ ಸ್ವಾಗತಾರ್ಹ. ಅದರ ಒಂದು ಪ್ರಸಂಗ (18) ಹೀಗಿದೆ.

ವಿದ್ಯಾರ್ಥಿಯಾಗಿದ್ದ ಪರಮೇಶ್ವರ ಭಟ್ಟರು ಒಮ್ಮೆ ವೆಂಕಣ್ಣಯ್ಯನವರಲ್ಲಿಗೆ ಹೋಗಿ 'ಹತ್ತು ರೂಪಾಯಿ ಬೇಕಾಗಿತ್ತು' ಎಂದರು. ಯಾಕೆ, ಏನು ಎಂದು ಕೇಳದೆ ವೆಂಕಣ್ಣಯ್ಯನವರು ಜೇಬಿನಿಂದ ಹತ್ತು ರೂಪಾಯಿ ತೆಗೆದುಕೊಟ್ಟರು. ಮೂರು ನಾಲ್ಕು ತಿಂಗಳ ಮೇಲೆ ತಮ್ಮ ಶಿಷ್ಯವೇತನ ಬಂದಾಗ ಭಟ್ಟರು ಆ ಹತ್ತು ರೂಪಾಯಿಗಳನ್ನು ಹಿಂದಿರುಗಿಸಲು ಹೋದರು. ಆಗ ವೆಂಕಣ್ಣಯ್ಯ 'ನಿನ್ನ ಬಳಿ ಕಿಟ್ಟೆಲ್ ನಿಘಂಟು ಇದೆಯೆ?' ಎಂದು ಕೇಳಿದರು. ಭಟ್ಟರು 'ಇಲ್ಲ' ಎಂದರು. ಹಣವನ್ನು ಮರಳಿ ಭಟ್ಟರ ಕೈಗೇ ಇಟ್ಟು ವೆಂಕಣ್ಣಯ್ಯ ಹೇಳಿದರು "ಹಾಗಾದರೆ ಈ ದುಡ್ಡು ತೆಗೆದುಕೊಂಡು ವೆಸ್ಲಿ ಪ್ರೆಸ್ಸಿಗೆ ಹೋಗಿ ಒಂದು ಪ್ರತಿ ನಿಘಂಟು ಕೊಂಡುಕೊಂಡು ಬಾ. ಅದು ನಿನಗೆ ಜೀವನದುದ್ದಕ್ಕೂ ಬೇಕಾಗುತ್ತದೆ."

ಹಿಂದೆ ಜಿ.ಪಿ. ರಾಜರತ್ನಂ ಅವರು ಗೋವಿಂದಪೈಗಳ ಪತ್ರಗಳನ್ನು ಸಂಕಲಿಸಿದಂತೆ ಎಂ. ರಾಮಚಂದ್ರ ಅವರು ಸೇಡಿಯಾಪು ಕೃಷ್ಣಭಟ್ಟರ 106 ಆಯ್ದ ಪತ್ರಗಳನ್ನು 'ಪತ್ರಾವಳಿ'ಯ ಹೆಸರಿನಲ್ಲಿ ಒಟ್ಟಿಗೆ ತಂದಿದ್ದಾರೆ. ಆಯ್ದ ಪತ್ರಗಳು ಎನ್ನುವಾಗಲೇ ಅದಕ್ಕೊಂದು ಚೌಕಟ್ಟು ಪ್ರಾಪ್ತವಾಗುತ್ತದೆ. ಆದರೂ ಈ ರೀತಿಯ ಪತ್ರಸಾಹಿತ್ಯದ ಪ್ರಕಟಣೆ ಹೊಸಗನ್ನಡ ಸಾಹಿತ್ಯ ರಚನೆಗೆ ಮೂಲಸಾಮಗ್ರಿಯಾಗುವುದರಲ್ಲಿ ಸಂಶಯವಿಲ್ಲ.

ಲಲಿತ ಕಲೆಗಳಲ್ಲಿ ಸಾಧನೆ ಮಾಡಿದವರನ್ನು ಕುರಿತು 1991ರಲ್ಲಿ ಕೆಲವು ಜೀವನ ಚರಿತ್ರೆಗಳು ಪ್ರಕಟಗೊಂಡಿವೆ. ವ್ಹಿ.ಬಿ. ಹಿರೇಮಠರ 'ಜ್ಞಾನಯೋಗಿ ಡಾ: ಪುಟ್ಟರಾಜ ಕವಿ ಗವಾಯಿಗಳು' ಕೃತಿ ಅವರ ಬಹುಮುಖ ಪ್ರತಿಭೆಯನ್ನು ಪರಿಚಯ ಮಾಡಿಕೊಡುತ್ತದೆ. ಪುಟ್ಟರಾಜ ಗವಾಯಿಗಳಿಗೆ ಗುರುಗಳಾಗಿದ್ದವರು ಪಂಡಿತ ಪಂಚಾಕ್ಷರಿ ಗವಾಯಿಗಳು. ಇವರಿಬ್ಬರನ್ನು ಕುರಿತು ಮಾಸ್ಕೇರಿ ಎಂ.ಕೆ. ನಾಯಕರು 'ಗದುಗಿನ ಗವಾಯಿಗಳು' ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿ ಕರ್ನಾಟಕದಲ್ಲಿನ ಹಿಂದೂಸ್ಥಾನಿ ಸಂಗೀತ ಪರಂಪರೆಯ ಒಂದು ಮಜಲನ್ನು ಪರಿಚಯ ಮಾಡಿಕೊಡುತ್ತದೆ. ಸಿದ್ಧರಾಮಯ್ಯ ವ್ಹಿ. ಮಠಪತಿಯವರು 'ಹಿಂದೂಸ್ಥಾನಿ ಸಂಗೀತ ಕಲಾವಿದರು' ಪುಸ್ತಕದಲ್ಲಿ 50 ಸಂಗೀತಕಾರರನ್ನು ಕುರಿತು ಬರೆದಿದ್ದಾರೆ. ಇದೇ ರೀತಿ 21 ಚಿತ್ರಕಾರರನ್ನು ಗವೀಶ ಹಿರೇಮಠರು 'ಸೃಜನಶೀಲ ಕಲಾವಿದರು' ಎಂಬ ಕೃತಿಯನ್ನು ರಚಿಸಿದ್ದಾರೆ. ಈ ವ್ಯಕ್ತಿ ಚಿತ್ರಗಳಿಂದ ಆಯಾ ಕಲಾವಿದರನ್ನು ಕುರಿತ ಅಲ್ಪಸ್ವಲ್ಪ ಮಾಹಿತಿ ದೊರೆಯುತ್ತದೆ. ಲಲಿತಾ ಕಲಾ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ರಚಿಸಿರುವ ಈ ಕೃತಿಗಳಲ್ಲಿ ಪಕ್ವತೆಯ ಮೆರುಗು ಕಂಡುಬರುವುದಿಲ್ಲ.

ಧರ್ಮ ಮತ್ತು ಅಧ್ಯಾತ್ಮ ಕ್ಷೇತ್ರಗಳಿಗೆ ಸಂಬಂಧಿಸಿದ ಸುಮಾರು 20 ಪುಸ್ತಕಗಳು ಪ್ರಕಟಗೊಂಡಿವೆ. ವ್ಯಾಸನಕೆರೆ ಪ್ರಭಂಜನಾಚಾರ್ಯರ ರಾಘವೇಂದ್ರ ದರ್ಶನ', ಮಹಾಂತದೇವರು ಚಿತ್ತರಗಿ ಅವರ 'ಯೋಗ ಪುರುಷ ಯೋಗಿ ಕುಮಾರ', ಹ.ಯು. ತಳವಾರ ಅವರ 'ಶ್ರೀ ಮ.ನಿ.ಪ್ರ. ಮೂಕಪ್ಪ ಶಿವಯೋಗಿಗಳವರು ಮತ್ತು 'ಮೇದೂರು ಪವಾಡ ಪುರುಷ ಶ್ರೀ ಹುಚ್ಚು ಕಾಮೇಶ್ವರರ ಸಂಕ್ಷಿಪ್ತ ಚರಿತ್ರೆ', ರಂ.ರಾ. ಕುಲಕರ್ಣಿಯವರ 'ಪರಮಹಂಸ ಶ್ರೀ ರಾಮಕೃಷ್ಣ ಲೀಲಾ ವಿಲಾಸ' ಮುಂತಾದವು ಸೀಮಿತ ವಲಯದಲ್ಲಿ ಚಲಾವಣೆಯಲ್ಲಿರುವ ಕೃತಿಗಳು. ಇವುಗಳ ಉದ್ದೇಶ ಸ್ಪಷ್ಟವಾಗಿರುವಾಗ ಇವುಗಳ ಆಯ್ಕೆಯನ್ನು ಶೈಲಿಯನ್ನು ನಿರೂಪಣಾ ವಿಧಾನವನ್ನು, ಆವಶ್ಯಕತೆಯನ್ನು ವಿಶ್ಲೇಷಿಸುವುದು ಅನಾವಶ್ಯಕ. ಈ ಗುಂಪಿನಲ್ಲಿ ಕುತೂಹಲದ ದೃಷ್ಟಿಯಿಂದ ಗಮನ ಸೆಳೆಯುವ ಕೃತಿಗಳೆಂದರೆ ವಿಜಯನಗರದ ಪ್ರೌಢ ದೇವರಾಯನ ಗುರುಗಳಾಗಿದ್ದ ನಾಗಲಿಂಗ ಸ್ವಾಮಿಗಳನ್ನು ಕುರಿತು ಶ್ರೀಸಿದ್ಧಲಿಂಗಸ್ವಾಮಿಗಳು 'ಜಗದ್ಗುರು ಶ್ರೀಕರಸ್ಥಲ ನಾಗಲಿಂಗದೇವ ಚರಿತಂ' ಮತ್ತು ಸರಿತಾ ಜ್ಞಾನಾನಂದ ಅವರು ಬರೆದಿರುವ 'ವೇಮನ ಯೋಗಿ ಮತ್ತು ವಿಶ್ವ ಬ್ರಾಹ್ಮಣರು'. ಈ ಎರಡೂ ಕೃತಿಗಳು ಅಧ್ಯಯನ ಅತಿರೇಕಗಳನ್ನು ಸೂಚಿಸುತ್ತವೆ. ತಮ್ಮ ನಂಬಿಕೆಗಳಿಗೆ ಅನುಗುಣವಾಗಿ ಸಾಕ್ಷ್ಯ ಆಧಾರಗಳನ್ನು ಹುಡುಕಾಡುವ ಶ್ರಮವೆದ್ದು ಕಾಣುತ್ತದೆ. ಇದೇ ದಾಟಿಯಲ್ಲಿ ಬಿ.ಎಸ್. ತಲ್ವಾಡಿಯವರು ಪೋಪ್ ದ್ವಿತೀಯ ಜಾನ್‌ಪಾಲರನ್ನು ಕುರಿತು 'ಜಂಗಮ ಜಗದ್ಗುರು' ಪುಸ್ತಕವನ್ನು, ಕ್ರೈಸ್ತ ಧರ್ಮೀಯರು ಭಾರತೀಯ ಸಾಂಸ್ಕೃತಿಕ ನೆಲೆಯಲ್ಲಿ ಜೀವನ ವಿಧಾನವನ್ನು ರೂಪಿಸಿಕೊಳ್ಳುವ ಹಾದಿಗೆ ಮಾರ್ಗದರ್ಶಕರಾದ

ಘಾ: ಅಮಲೋರ್ಪವ ದಾಸ್ ಅವರ ಜೀವನ ಚರಿತ್ರೆಗಳನ್ನು ರಚಿಸಿದ್ದಾರೆ. ಈ ಕೃತಿಗಳಲ್ಲಿ ಮುಖ್ಯವಾಗಿ ಎದ್ದು ಕಾಣುವ ಅಂಶ ಆರಾಧನ ಗುಣ.

ಜಿ.ಎಸ್. ಭಟ್ಟ ಅವರು ತಿಲಕರನ್ನು ಕುರಿತು 'ಲೋಕಮಾನ್ಯ' ಮತ್ತು ಸರ್ದಾರ್ ಪಟೇಲರನ್ನು ಕುರಿತು 'ರಾಷ್ಟ್ರಶಿಲ್ಪಿ' ಎಂಬ ಕೃತಿಗಳನ್ನು ರಚಿಸಿದ್ದಾರೆ. ಟಿ. ಯಲ್ಲಪ್ಪ ಭೂತಯ್ಯನವರು 'ಬಾಬು ಜೀವನ ರಾಮ್ ಜೀವನ ಮತ್ತು ವಿಚಾರ' ಕೃತಿಯನ್ನು ಬರೆದಿದ್ದಾರೆ. ಸಿದ್ಧರಾಮ ಉಪ್ಪಿನ ಅವರು 'ಉಪ್ಪಿನ ಗಂಗಾಧರಪ್ಪ' ಎಂಬುದನ್ನು ಬರೆದಿದ್ದಾರೆ. ಈ ಕೃತಿಗಳಲ್ಲಿ ಒಳನೋಟಗಳನ್ನು ಅಪೇಕ್ಷಿಸುವುದೂ ತಪ್ಪಾಗುತ್ತದೆ. ಗೋವಿಂದ ಮೂರ್ತಿ ದೇಸಾಯರ 'ಹೀಗಿದ್ದರು ಹಣಮಂತರಾಯರು' ಕೃತಿ ನೂರು ವರ್ಷಗಳ ಹಿಂದಿನ ಸಾಂಸ್ಕೃತಿಕ ಪರಿಸರವನ್ನು ಕಟ್ಟಿಕೊಡುತ್ತದೆ. ಇದು ಈ ವರ್ಷ ಬಂದ ಜೀವನ ಚರಿತ್ರೆಗಳಲ್ಲಿ ಗಮನ ಸೆಳೆಯುವ ಕೃತಿ. ಜನ್ಮ ಶತಾಬ್ದಿ ವರ್ಷದ ಪ್ರಕಟಣೆಯಾಗಿ ಬಂದ ಕೆ.ಎಸ್. ನಾರಾಯಣಸ್ವಾಮಿಯವರ 'ಗಾಂಧೀವಾದಿ ಮತ್ತು ಅರ್ಥಶಾಸ್ತ್ರಜ್ಞ ಜೋಸೆಫ್ ಕಾರ್ನಿಲಿಯಸ್ ಕುಮಾರಪ್ಪ'ನವರ ಬದುಕಿಗೆ ಸಂಬಂಧಪಟ್ಟ ಎಲ್ಲ ಮುಖ್ಯಾಂಶಗಳನ್ನು ಒಳಗೊಂಡು ಸರಳವಾದ ಭಾಷೆಯಲ್ಲಿ ಅಚ್ಚುಕಟ್ಟಾಗಿ ನಿರೂಪಿಸಿರುವ ಗ್ರಂಥ.

ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ ವೀರಶೈವ ಅಧ್ಯಯನ ಸಂಸ್ಥೆಯು ವೀರಶೈವ ಪುಣ್ಯಪುರುಷ ಸಾಹಿತ್ಯ ಮಾಲಿಕೆಯಲ್ಲಿ ಸಾಕಷ್ಟು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. 1991ರಲ್ಲಿ ಪ್ರಕಟವಾದ 'ಕಾಜೀನಹಳ್ಳಿಯ ಸಿಂದಗಿ ಮುರಿಗೆಪ್ಪನವರು' 'ತಲ್ಲೂರ ರಾಮನಗೌಡರು' 'ರಾಮದುರ್ಗದ ಬಿ.ಎಸ್. ಮುನವಳ್ಳಿ ವಕೀಲರು' ಹೊತ್ತಿಗೆಗಳಲ್ಲಿ ದೈವಭಕ್ತಿ, ನಾಡಭಕ್ತಿಯೊಡನೆ ಮೂಡಿಬಂದಿರುವ ಅಜ್ಞಾತ ವ್ಯಕ್ತಿಗಳ ಜೀವನ ಚಿತ್ರಗಳು ನಮ್ಮ ಸಾಂಸ್ಕೃತಿಕ ಬದುಕಿನ ಪ್ರಾದೇಶಿಕ ಎಚ್ಚರ ಚರಿತ್ರೆಯ ಅಧ್ಯಯನಕ್ಕೆ ಸಹಾಯಕವಾಗಬಲ್ಲವು.

'ಕಪ್ಪುಹಲಗೆ'ಯ ಯೋಜನೆಯ ಅಡಿಯಲ್ಲಿ ಹೊಸದಾಗಿ ಅಕ್ಷರ ಕಲಿತವರ ಓದಿನ ಆಸಕ್ತಿಯನ್ನು ಹೆಚ್ಚಿಸುವ ದೃಷ್ಟಿಯಿಂದ ಅನೇಕರ ಕಿರು ಜೀವನ ಚರಿತ್ರೆಗಳು, ವ್ಯಕ್ತಿಚಿತ್ರಗಳು ಪ್ರಕಟಗೊಂಡಿವೆ. ಇಲ್ಲಿನ ಬಹುಪಾಲು ಕೃತಿಗಳು ಉದ್ಯಮದ ಹೆಚ್ಚಳಕ್ಕೆ ಕಾರಣವಾಗಿಯೇ ಹೊರತು ಗುಣಮಟ್ಟಕ್ಕಲ್ಲ. ಇಲ್ಲಿ ಹಣದ ಓಡಾಟ ಮುಖ್ಯವಾಗಿದೆಯೇ ಹೊರತು ಬದುಕಿನ ಒಡನಾಟ ಮುಖ್ಯವಾಗಿಲ್ಲ. ಕಾಲಮಿತಿಗೆ ಕಟ್ಟುಬಿದ್ದು, ಸಿಕ್ಕಿದಷ್ಟು ಮಾಹಿತಿಯನ್ನು ರಾಶಿಹಾಕಿ, ವೇಳಾಪಟ್ಟಿಗೆ ಅನುಗುಣವಾಗಿ ರಚಿಸಿದ ಅವಸರದ ಬರವಣಿಗೆಗಳು. ಸರ್ಕಾರದ ಅಂಕಿ–ಅಂಶಗಳನ್ನು ಪೂರೈಸುವ ಮಟ್ಟಿಗೆ ಯಶಸ್ವಿಯಾಗಿವೆ. ಈ ದಾಂಧಲೆಯಲ್ಲಿ ನಿಜವಾದ ಮಕ್ಕಳ ಸಾಹಿತ್ಯ ಮೂಲೆ ಗುಂಪಾಗಿದೆ.

'ಮಾಸ್ತಿ ಸಂಪದ'ದ ಗೆಳೆಯರು 'ಮಾಸ್ತಿ ಕಂಡ ವಿ.ಸೀ' ಮತ್ತು ವಿ.ಸೀತಾರಾಮಯ್ಯ ಎಂಬ ಕಿರುಹೊತ್ತಿಗೆಗಳನ್ನು ಪ್ರಕಟಿಸಿದ್ದಾರೆ. ಮಾಸ್ತಿಯವರ

ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ವಿ.ಸೀ. ಯವರು ಮಾಸ್ತಿಯವರ ಬಗ್ಗೆ ಬರೆದ ಲೇಖನಗಳನ್ನೆಲ್ಲ ಒಂದು ಕಡೆ ಸಂಕಲನ ಮಾಡಿದ್ದಾರೆ. ವಿ.ಸೀ. ಸಮಗ್ರ ಕಾವ್ಯ ಸಂಪುಟ 'ಸ್ನೇಹ–ವಿಶ್ವಾಸ' ಬಿಡುಗಡೆ ಸಂದರ್ಭದಲ್ಲಿ ಎಲ್.ಎಸ್. ಶೇಷಗಿರಿರಾವ್, ಜಿ.ಎಸ್. ಶಿವರುದ್ರಪ್ಪ ಮತ್ತು ಶಿವರಾಮ ಕಾರಂತರು ಮಾಡಿದ ಭಾಷಣಗಳನ್ನು ಲಿಖಿತ ರೂಪದಲ್ಲಿ ಸಂಪಾದಿಸಿ ಪ್ರಕಟಿಸಲಾಗಿದೆ. ಇವೆರಡೂ ಒಳ್ಳೆಯ ಪ್ರಯತ್ನಗಳು. ಹಾ.ಮಾ. ನಾಯಕರ 'ಸೊಡರು' ಪುಸ್ತಕವನ್ನು 'ಕಾವ್ಯಾಲಯ'ದವರು ಪ್ರಕಟಿಸಿದ್ದಾರೆ. ಇದು ವ್ಯಕ್ತಿ ಚಿತ್ರಗಳ, ಪರಿಚಯಗಳ ಒಂದು ಸಂಕಲನ. ನಾಯಕರ 'ಸ್ತವನ' 'ಸ್ಮರಣ' ಪುಸ್ತಕಗಳ ಗುಂಪಿಗೆ ಇದೂ ಸೇರುತ್ತದೆ. ಆತ್ಮೀಯ ಶೈಲಿಯ ನಾಯಕರ ಬರವಣಿಗೆ ಓದುಗರ ಮೆಚ್ಚುಗೆಯನ್ನು ಗಳಿಸುತ್ತದೆ.

ಡಾ: ಸಾ.ಶಿ. ಮರುಳಯ್ಯನವರ 'ಆತ್ಮೀಯ' ಅವರು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ 29 ವ್ಯಕ್ತಿಚಿತ್ರಗಳ ಸಂಕಲನ. ಅವರು ಮುನ್ನುಡಿಯಲ್ಲಿ 'ನಾನಿಲ್ಲಿ ವ್ಯಕ್ತಿಗಳನ್ನು ಕಂಡಿದ್ದೇನೆ' ಎಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ವಿಶೇಷಣಗಳಿಂದ ತುಂಬಿ ಹೋಗಿರುವ ಆಲಂಕಾರಿಕ ಭಾಷೆಯ ಮರೆದಾಟದಿಂದ ವ್ಯಕ್ತಿತ್ವದ 'ಅಂತರಂಗ ದರ್ಶನ' ಕಡೆ ಓದುಗನ ಗಮನ ಹರಿಯುವುದಿಲ್ಲ. ಈ ಸಂಕಲನದಲ್ಲಿ ಎಸ್.ಎನ್. ಭೂಸನೂರಮಠ ಮತ್ತು ಡಿ.ಎಸ್. ಕರ್ಕಿ ಅವರನ್ನು ಕುರಿತ ಬರವಣಿಗೆ ಪರಿಚಯಾತ್ಮಕ ದೃಷ್ಟಿಯಿಂದ ಓದಿಕೊಳ್ಳುವ ಗುಣವನ್ನು ಹೊಂದಿದೆ. ಆರ್.ಎಂ.ಬಿ. ಆರಾಧ್ಯ ಅವರಿಗೆ ಪದ್ಮಶ್ರೀ ಬಂದ ಸಂದರ್ಭದಲ್ಲಿ ಸಂದರ್ಶನ ಮಾಡಿದಾಗ "ಪದ್ಮಶ್ರೀ ಆರ್.ಎಂ.ಬಿ. ಆರಾಧ್ಯರು ಬೆಂಗಳೂರಿನಲ್ಲಿರುವ ಬಹು ದೊಡ್ಡ ಉದ್ದಿಮೆದಾರರು. ಅಷ್ಟೇ ಪ್ರಮಾಣದ ಕೊಡುಗೈ ದಾನಿಗಳು. ಶ್ರೀಯುತರು ಸಾತ್ವಿಕರು, ಮಿತಭಾಷಿಗಳು, ಧರ್ಮಭೀರುಗಳು, ವಿನಯವೇ ಮೈವೆತ್ತಂತಿರುವ ಮುಗ್ಧಮೂರ್ತಿ ಅವರು. ಸಮಾಜ ಸೇವೆ ಅವರ ಹಸಿವು ಹಂಬಲ; ಅದಕ್ಕಾಗಿ ಅವರು ತಮ್ಮನ್ನು ತಾವು ಅರ್ಪಿಸಿಕೊಂಡಿದ್ದಾರೆ; ಶ್ರೀಗಂಧವಾಗಿ ಸವೆದುಕೊಂಡಿದ್ದಾರೆ. ಕರ್ಪೂರವಾಗಿ ಉರಿದುಕೊಂಡಿದ್ದಾರೆ. ಅವರ ಸೇವೆಯನ್ನು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಗುರುತಿಸಿ ಗೌರವಿಸಿವೆ. ಶ್ರೀಯುತರಿಗೆ ಬಂದ ಕೀರ್ತಿ ನಮ್ಮ ಕೀರ್ತಿ, ನಮ್ಮ ಕನ್ನಡ ನಾಡಿಗೇ ಸಂದ ಗೌರವ" ಎಂಬ ಮಾತುಗಳು ಅವರ ಬರವಣಿಗೆಗೆ ಸಾಕ್ಷಿ.

ಹೊಸಗನ್ನಡ ಸಾಹಿತ್ಯದಲ್ಲಿ ಬಹುಪಾಲು ಆತ್ಮಕಥನಗಳು ತೃಪ್ತಿಕರವಾಗಿಲ್ಲ. ಬರೆಯುವ ವ್ಯಕ್ತಿಗಳು ತಮ್ಮ ಬದುಕಿನಲ್ಲಿ ತಮಗೆ ಬೇಕಾದ ಭಾಗಗಳನ್ನು ಪ್ರಶಂಸಿಸುವುದು ಕಂಡು ಬರುತ್ತದೆ. ತಾವು ಮಾಡಿದ ತಪ್ಪುಗಳನ್ನು ಕೆಟ್ಟದಾಗಿ ನಡೆದುಕೊಂಡ ರೀತಿಯನ್ನು ಜಾಣತನದಿಂದ ತೇಲಿಸುತ್ತಾರೆ ಅಥವಾ ಪ್ರಸ್ತಾಪಿಸುವುದೇ ಇಲ್ಲ. ಇದರಿಂದ ವ್ಯಕ್ತಿ ಬದುಕಿದ ರೀತಿಯೇ ಬೇರೆಯಾಗುತ್ತದೆ. ಬರೆದ ಜೀವನ ಚಿತ್ರವೇ ಬೇರೆಯಾಗಿರುತ್ತದೆ.

ಸಮೇತನಹಳ್ಳಿ ರಾಮರಾಯರ 'ಕೋಟೆ ಮನೆ', ಗೊ.ರು. ಚೆನ್ನಬಸಪ್ಪ ಅವರ 'ಗೊಂಡೇನ ಹಳ್ಳಿಯಿಂದ ಬೆಂಗಳೂರಿಗೆ' ಮತ್ತು ಕೆ.ಎಸ್. ಮಲ್ಲೇಗೌಡ ಅವರ 'ಹಳ್ಳಿಯಿಂದ ಡೆಲ್ಲಿಗೆ' ಕೃತಿಗಳು 1991ರಲ್ಲಿ ಮುಖ್ಯವಾಗಿ ಪ್ರಕಟವಾದ ಮೂರು ಆತ್ಮಕಥನಗಳು. ಬೇರೆ ಬೇರೆ ಕ್ಷೇತ್ರಗಳಿಂದ ಬಂದ ಈ ಮೂವರು ತಮ್ಮ ಮನೋಧರ್ಮಕ್ಕೆ ಅನುಗುಣವಾಗಿ ಜನ ಮೆಚ್ಚಬಹುದೆಂದು ಭಾವಿಸಿದ ಬದುಕಿನ ವಿವರಗಳನ್ನು ಪರಿಚಯಿಸಿದ್ದಾರೆ.

ಹೊಸಗನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಒಬ್ಬರಾದ ಸಮೇತನಹಳ್ಳಿ ರಾಮರಾಯರು ತಮ್ಮ ಬಾಳಿನ ಕಥೆಯನ್ನು 'ಕೋಟೆ ಮನೆ'ಯಲ್ಲಿ ದಾಖಲಿಸಿದ್ದಾರೆ. 74 ವರ್ಷದ ರಾಯರ ವ್ಯಕ್ತಿತ್ವದ ವಿಕಾಸವನ್ನು 425 ಪುಟಗಳ ಆತ್ಮಕಥನದಲ್ಲಿ ಕಾಣಬಹುದು. ಈ ಕಥನದಲ್ಲಿ ವ್ಯಕ್ತಿ ಸಂಬಂಧಗಳಿಗೆ ಹೆಚ್ಚು ಒತ್ತು ಕೊಡಲಾಗಿದೆ. ವಿಜ್ಞಾಪನೆಯಲ್ಲ "ನಾನು ನನ್ನ ಜೀವನದ ಎಲ್ಲ ಅನುಭವಗಳನ್ನು ಹೇಳುವುದು ಸಾಧ್ಯ ಆಗಲಿಲ್ಲ. ನಾನು ಜೀವಂತವಾಗಿರುವಾಗಲೇ, ಹರಿದು ತಿನ್ನುವ ಬಯಕೆಯಿಂದ ನನ್ನ ಸುತ್ತನೆರೆದ ರಣಹದ್ದುಗಳ ತಂಡ ದೊಡ್ಡದು. ಎಲ್ಲರನ್ನು ಬಹುಬೇಗ ನಂಬಿ ಅಂತರ್ಯಕ್ಕೆ ತೆಗೆದುಕೊಂಡು ಬಿಡುವ ನನ್ನ ಸ್ವಭಾವ ವಂಚಕರಿಗೆ, ಕೃತಘ್ನರಿಗೆ, ಪೆಣತಿನಿಗಳಿಗೆ ಒಳ್ಳೆಯ ಹುಲುಸಾದ ಕ್ಷೇತ್ರ ಆಯಿತು" ಎಂದು ಹೇಳಿರುವ ಮಾತುಗಳ ಹಿಂದೆ ಕಾಡುತ್ತಿರುವ ನೋವು ಈ ಕೃತಿಗೆ ಶೃತಿಯಾಗಿದೆ. ಆತ್ಮಪ್ರಶಂಸೆಯ ಹೂಗಳಿಂದ ಸಿದ್ಧಗೊಳಿಸಿದ ಆತ್ಮಕಥನದ ಹೂವಿನಹಾರವನ್ನು ಭಗವಂತನಿಗೆ ಅರ್ಪಿಸಿದ್ದಾರೆ.

ಗೊಂಡೇದಹಳ್ಳಿ ರುದ್ರಪ್ಪ ಚನ್ನಬಸಪ್ಪ ಅವರ (ಗೊ.ರು.ಚ) ಬದುಕಿನಲ್ಲಿ ಮರೆಯಲಾಗದ ಸಂಗತಿಗಳ ಸಂಚಯವೇ 'ಗೊಂಡೇದಹಳ್ಳಿಯಿಂದ ಬೆಂಗಳೂರಿಗೆ' ಆತ್ಮಕಥನ ಕೃತಿ. ಹಳ್ಳಿಗನೊಬ್ಬನು ಬೆಳೆದು ಬಂದ ಕಥೆಯನ್ನು ಇಲ್ಲಿ ಕಾಣಬಹುದು. ಜಾನಪದ, ಚಲನಚಿತ್ರ, ಸಮಾಜಸೇವೆ, ಪತ್ರಿಕೋದ್ಯಮ, ಧಾರ್ಮಿಕ ಕ್ಷೇತ್ರ, ಮುಂತಾದ ಕ್ಷೇತ್ರಗಳಲ್ಲಿ ಸಂಘಟನೆಯ ಕೌಶಲದಿಂದ ಮುಂದೆ ಬಂದಿರುವ ಗೊ.ರು.ಚ ಅವರ ಜೀವನ ಚಿತ್ರಗಳು ಅವರ ಸಾಧನೆಯ ಬದುಕಿನ ಮೆಟ್ಟಿಲುಗಳನ್ನು ತಿಳಿಸುತ್ತವೆ. ಅವರ ಎಲ್ಲ ಸಾಧನೆಗಳ ಹಿನ್ನೆಲೆಯಲ್ಲಿ ಸ್ಥಾಯಿಯಾಗಿರುವ ಎಚ್ಚರದ ಸಂಯಮ, ಜಾನಪದ ಮಾತಿನ ಮೋಡಿ, ದೈವಶ್ರದ್ಧೆ, ಕೆಲಸ ಸಾಧಿಸುವ ಹಠ ಮುಖ್ಯವಾದುವು.

ಕೆ.ಎಸ್. ಮಲ್ಲೇಗೌಡರ 'ಹಳ್ಳಿಯಿಂದ ಡೆಲ್ಲಿಗೆ' ಆತ್ಮ ಕಥನವನ್ನು ಕುರಿತು ದೇಜಗೌ ಅವರು ಮುನ್ನಡಿಯಲ್ಲಿ "ಮಲ್ಲೇಗೌಡರು ತಹಸೀಲ್ದಾರರಾಗಲಿ, ಜಿಲ್ಲಾಧಿಕಾರಿಗಳಾಗಲಿ, ರಾಜ್ಯಸಭೆಯ ಸದಸ್ಯರಾಗಲಿ, ಸೇವೆಯಿಂದ ನಿವೃತ್ತರಾಗಲಿ, ಅವರೆಲ್ಲಿಯೇ ಇರಲಿ, ಹಳ್ಳಿಯನ್ನು ಮರೆಯುವುದಿಲ್ಲ" ಎಂದು ಹೇಳಿರುವ ಮಾತಿಗೆ ಆತ್ಮ ಕಥನದ ಪುಟ ಪುಟದಲ್ಲೂ ಆಧಾರ ದೊರೆಯುತ್ತದೆ. ಇದು

ಒಂದು ರೀತಿಯಲ್ಲಿ ಹಳ್ಳಿಯ ಸುಖ ದುಃಖದ ಕಥೆ. ಮಲ್ಲೇಗೌಡರು ರೈತರಿಗೆ ನ್ಯಾಯವನ್ನು ದೊರಕಿಸಿಕೊಟ್ಟ ಅನೇಕ ನಿದರ್ಶನಗಳು ಇಲ್ಲಿ ದಾಖಲಾಗಿವೆ. ರೈತರ ಬಗ್ಗೆ ಅವರಿಗಿದ್ದ ಸಂವೇದನೆಯನ್ನು, ಮುಖ್ಯವಾಗಿ ಅವರು ರೈತರು ಶೋಷಣೆಗೆ ಒಳಗಾಗುವ ರೀತಿಯನ್ನು ಈ ಗ್ರಂಥದಲ್ಲಿ ಸೋದಾಹರಣವಾಗಿ ವಿವರಿಸಿದ್ದಾರೆ. ಕಳೆದ ಮೂವತ್ತು ವರ್ಷಗಳಿಂದ ನ್ಯಾಯಾಂಗ, ಶಾಸನಾಂಗ, ಆಡಳಿತಾಂಗವನ್ನು ದೊಡ್ಡ ಪ್ರಮಾಣದಲ್ಲಿ ಭ್ರಷ್ಟಾಚಾರ ಆವರಿಸಿಕೊಂಡಿರುವ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ಆದರೆ, ಕುಟುಂಬದಲ್ಲಿ "ಮೂರು ಮಕ್ಕಳಿಗಿಂತ ಹೆಚ್ಚು ಮಕ್ಕಳನ್ನು ಪಡೆಯದಂತೆ ಅವರ ಮನವೊಲಿಸಬೇಕು. ಈ ದಿಸೆಯಲ್ಲಿ ಅವರಿಗೆ ಅಗತ್ಯವಾದ ವೈದ್ಯಕೀಯ ನೆರವನ್ನು ನೀಡಬೇಕು. ವಿಶೇಷ ಸಂದರ್ಭಗಳಲ್ಲಿ ಮಾತ್ರ (ದಂಪತಿಗಳಿಗೆ ಮೂರು ಗಂಡು ಮಕ್ಕಳು ಅಥವಾ ಮೂರು ಹೆಣ್ಣು ಮಕ್ಕಳಿದ್ದಾಗ) ಅವರು ಅಪೇಕ್ಷಿಸುವ ಗಂಡು ಅಥವಾ ಹೆಣ್ಣು ಹುಟ್ಟುವವರೆಗೂ ಸಂತಾನ ಪಡೆಯುವ ಅವಕಾಶ ಮುಂದುವರಿಯಬಹುದು (ಪುಟ 214) ಎಂಬ ಮಾತು ಈ ಸಂದರ್ಭದಲ್ಲಿ ಅಸಂಗತವಾಗಿ ಕಂಡು ಬರುತ್ತದೆ. ಮಲ್ಲೇಗೌಡರು ಅಲ್ಲಲ್ಲಿ ಸ್ವವಿಮರ್ಶೆಯನ್ನು ಮಾಡಿಕೊಂಡು ಕೃತಿಯ ಮೌಲ್ಯವನ್ನು ಹೆಚ್ಚಿಸಿದ್ದಾರೆ. 'ಜನಸೇವೆಯಲ್ಲಿ ಅರ್ಧ ಶತಮಾನ', 'ಬಾಳಿನ ಸಿಹಿ–ಕಹಿ' ಮತ್ತು 'ಕೆಲವು ಆಯ್ದ ರಾಜ್ಯ ಸಭಾ ಭಾಷಣಗಳು' ಎಂದು ಮೂರು ಭಾಗವಾಗಿ ಆತ್ಮ ಕಥನವನ್ನು ವಿಂಗಡಿಸಲಾಗಿದೆ. ಮಲ್ಲೇಗೌಡರು ರೈತರ ಬಂಧು ಎಂಬುದನ್ನು ಈ ಭಾಗಗಳು ಸಾದರಪಡಿಸುತ್ತವೆ.

ಈ ಸಮೀಕ್ಷೆ ಒಂದು ರೀತಿಯಲ್ಲಿ ಪಟ್ಟಿಯಾಗುವುದು ಅನಿವಾರ್ಯ. ನನ್ನ ಗಮನಕ್ಕೆ ಬಂದ ಪುಸ್ತಕಗಳನ್ನು ಇಲ್ಲಿ ಸೂಚಿಸಲಾಗಿದೆ. 1991ರಲ್ಲಿ ಪ್ರಕಟನಗೊಂಡಿರುವ ಜೀವನಚರಿತ್ರೆ ಮತ್ತು ಆತ್ಮ ಕಥನಗಳಲ್ಲಿ ವೈವಿಧ್ಯ ಕಂಡುಬಂದಿದೆ. ಆದರೆ ಉತ್ಕೃಷ್ಟ ಕೃತಿಗಳು ಮೂಡಿಬಂದಿಲ್ಲ.

# ಅಭಿನಂದನ ಗ್ರಂಥಗಳು

**ಮಲ್ಲೇಪುರಂ ಜಿ. ವೆಂಕಟೇಶ**

ಕನ್ನಡದಲ್ಲಿ ಅಭಿನಂದನ ಸಾಹಿತ್ಯಕ್ಕೆ ಸುಮಾರು ಐವತ್ತು ವರ್ಷಕ್ಕೂ ಮಿಕ್ಕಿದ ಇತಿಹಾಸ ಇದೆ. ಗೌರವ, ಸ್ಮಾರಕ, ಅಭಿವಂದನ, ಅಭಿನಂದನ, ಈ ಮಾದರಿಯ ಹೆಸರಿನಲ್ಲಿ ಪ್ರತಿವರ್ಷವೂ ಬರುತ್ತಲೇ ಇವೆ. ಇಂತಹ ಗ್ರಂಥಗಳೆಲ್ಲವನ್ನು ಸ್ಥೂಲವಾಗಿ 'ಅಭಿನಂದನ' ಎಂಬ ಹೆಸರಿನಲ್ಲಿ ಒಳಗೊಳ್ಳುವಂತೆ ಇಟ್ಟುಕೊಂಡು ಈ ಮುಂದಿನ ಸಮೀಕ್ಷೆ ಮಾಡಲಾಗಿದೆ. ಸಾಹಿತ್ಯಕ್ಕೆ ಸಂಬಂಧಿಸಿದ ಅಭಿನಂದನ ಗ್ರಂಥಗಳೇ ಈ ವರ್ಷ ಸಿಂಹಪಾಲನ್ನು ಗಿಟ್ಟಿಸಿರುವುದು ಗಮನಿಸತಕ್ಕ ಅಂಶಗಳಲ್ಲಿ ಒಂದು. ಹೀಗೆಂದು ಹೇಳಿದರೆ: ರಾಜಕೀಯ, ಇತಿಹಾಸ, ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ವ್ಯಕ್ತಿಗಳ ಅಭಿನಂದನ ಗ್ರಂಥಗಳು ಬರುತ್ತಿಲ್ಲವೆಂದು ಅಭಿಪ್ರಾಯವಲ್ಲ. ಬಂದರೂ ಒಂದೊ ಎರಡೊ ಅಷ್ಟೆ. ಬಹುತೇಕ ಅವೆಲ್ಲ ಇಂಗ್ಲೀಷಿನಲ್ಲೆ ಪ್ರಕಟಗೊಳ್ಳುತ್ತವೆಂಬುದು ಗಮನಿಸಬಹುದಾದ ಸಂಗತಿಗಳಲ್ಲಿ ಒಂದು.

1991 ಅಭಿನಂದನ ಸಾಹಿತ್ಯಕ್ಕೆ ಹುಲುಸಾದ ವರ್ಷವೆಂದು ಹೇಳುವುದಕ್ಕೆ ಆಗದಿದ್ದರೂ ಈ ಹಿಂದಿನ ವರ್ಷದ ಜತೆಗೆ ಹೋಲಿಸಿಕೊಂಡರೆ ಮಹತ್ವದ ಹಾಗೂ ಗಮನಾರ್ಹವಾದ ಅಭಿನಂದನ ಕೃತಿಗಳು ಬಂದಿವೆ. ಶ್ರೀಲಕ್ಷ್ಮಣ ತೆಲಗಾವಿ ಅವರು ಸಂಪಾದಿಸಿದ, ಡಾ. ಎಂ. ಚಿದಾನಂದ ಮೂರ್ತಿ ಅವರನ್ನು ಗೌರವಿಸುವ 'ಸಂಶೋಧನ' ಸಂಪುಟ ಈ ಸಾಲಿನಲ್ಲಿ ಬೃಹತ್ ಕೊಡುಗೆ. ಇಷ್ಟು ಬೃಹತ್ ಕೃತಿಯಲ್ಲದಿದ್ದರೂ ಪ್ರೊ. ಬಿ.ಸಿ. ಅವರ ಸನ್ಮಾನ ಗ್ರಂಥ 'ಬಹುರೂಪಿ', ಸಿ.ಆರ್. ಸಿಂಹ ಅವರನ್ನು ಕುರಿತ ಸಿಂಹಾಲೋಕ ಕೆ.ವಿ. ಸುಬ್ಬಣ್ಣ ಅವರನ್ನು ಕುರಿತ 'ನಮ್ಮ ಸುಬ್ಬಣ್ಣ', ಮಲ್ಲಾಡಿಹಳ್ಳಿ ರಾಘವೇಂದ್ರ ಸ್ವಾಮೀಜಿ ಅವರನ್ನು ಕುರಿತ 'ಧನ್ಯಜೀವಿ' ಇವುಗಳನ್ನು ಗಮನಿಸಲೇಬೇಕಾಗುತ್ತದೆ. ಇವುಗಳೊಡನೆ ಎಂ.ಕೆ. ಇಂದಿರಾ ಅವರನ್ನು ಕುರಿತ 'ಸುರಗಿ', ಎಂ.ಎಸ್. ಜೋಯಿಸ್ ಅವರನ್ನು ಕುರಿತ 'ಸ್ವಾತಂತ್ರ್ಯದೆಡೆಗೆ' ಅಭಿನಂದನ ಗ್ರಂಥಗಳು ಕಣ್ಣು ಹಾಯಿಸಬಹುದಾದವುಗಳೇ ಸರಿ. ಸಂಖ್ಯೆಯ ಪ್ರಮಾಣದಿಂದ ಇದೇನು ದೊಡ್ಡದಲ್ಲದಿರಬಹುದುದಾದರೂ ಎರಡು—ಮೂರು ಕೃತಿಗಳಂತೂ ಗಮನಿಸತಕ್ಕ, ಶ್ಲಾಘಿಸತಕ್ಕ ಕೃತಿಗಳೇ ಆಗಿವೆ.

ಡಾ. ಎಂ. ಚಿದಾನಂದ ಮೂರ್ತಿ ಅವರಿಗೆ ಅರ್ಪಿಸಿದ ಗೌರವ ಸಂಪುಟ 'ಸಂಶೋಧನ' ಈ ಸಾಲಿನಲ್ಲಿ ತಲೆವಣಿಯಾದ ಕೃತಿ. ಶ್ರೀ ಲಕ್ಷ್ಮಣ ತೆಲಗಾವಿ

ಅವರು ತುಂಬ ಶ್ರಮವಹಿಸಿ, ಲೇಖನಗಳನ್ನು ಸಂಪಾದಿಸಿ, ಅದರ ಅಚ್ಚುಕಟ್ಟುತನಗಳ ಜತೆಗೆ ಹೊರತಂದಿದ್ದಾರೆ. ಕಳೆದ ವರ್ಷಗಳಲ್ಲಿ ಇಷ್ಟೊಂದು ಚೆಂದದ, ಮಹತ್ವಾಕಾಂಕ್ಷೆಯುಳ್ಳ ಕೃತಿಗಳೇ ಬಂದಿಲ್ಲವೆಂದು ಹೇಳಿದರೆ ತಪ್ಪಾಗುವುದಿಲ್ಲ. ಸಾವಿರ ಪುಟಕ್ಕೂ ಮೀರಿರುವ ಈ ಬೃಹತ್ ಗ್ರಂಥ ಎರಡು ಮಾದರಿಯ ಲೇಖನಗಳನ್ನು ತಾತ್ವಿಕವಾಗಿ ಒಳಗೊಂಡಿವೆ. ವಿಶ್ಲೇಷಣಾತ್ಮಕ ಬರೆಹಗಳು ಇರುವಂತೆ ವಿವರಣಾತ್ಮಕ ಹಾಗೂ ಪರಿಚಯಾತ್ಮಕ ಲೇಖನಗಳನ್ನು ಒಳಗೊಂಡಿದೆ. ಇಂಥದೊಂದು ಮಹತ್ವದ ಕೃತಿಸಂಪುಟ ಸಿದ್ಧಪಡಿಸುವಾಗ ಇಂಥವುಗಳು ಅನಿವಾರ್ಯ. ಆದರೆ, ಕೆಲವೊಂದು ಕೊರತೆಗಳು ಇದ್ದರೂ ಸಂಪಾದಕರ ತಾಳ್ಮೆ, ಸಹನೆ, ವಿದ್ವತ್ತು, ನಿರೀಕ್ಷಣೆ, ಇವುಗಳನ್ನು ಮರೆಯಲು ಸಾಧ್ಯವಿಲ್ಲ. ಹೀಗಾಗಿ, 'ಸಂಶೋಧನಾ' ಗೌರವ ಸಂಪುಟಕ್ಕೆ ಗುಣ ಮತ್ತು ಗಾತ್ರದ ದೃಷ್ಟಿಯಿಂದ ಅನನ್ಯ ಸ್ಥಾನವಿದೆ. ಎರಡು ಭಾಗವಿರುವ ಈ ಗ್ರಂಥದಲ್ಲಿ ಭಾಷೆ, ಸಾಹಿತ್ಯ, ಸಂಸ್ಕೃತಿ, ಶಾಸನ, ಚರಿತ್ರೆ, ಕಲೆ ಬಗ್ಗೆ ಒಟ್ಟು ತೊಂಬತ್ತೊಂದು ಬರಹಗಳಿವೆ. ಎರಡನೆಯ ಭಾಗ ಅವರ ಬದುಕು–ಬರಹಗಳ ಕುರಿತು ಹದಿನೈದು ಲೇಖನಗಳಿವೆ. ಕೊನೆಗೆ ಚಿದಾನಂದಮೂರ್ತಿ ಅವರೆ ಬರೆದಿರುವ 'ನನ್ನ ಬದುಕು : ಒಂದು ಕಿರುಚಿತ್ರ' ಓದಬೇಕಾದದ್ದೇ.

ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಬಗೆಗೆ ಅನ್ಯ ಶಿಸ್ತೀಯ ನೆಲೆಗಳಲ್ಲಿ ಬಂದ ಬರಹಗಳೇನೂ ಕಡಿಮೆ. ಈ ದಿಕ್ಕಿನಲ್ಲಿ ಪ್ರಸ್ತುತ ಸಂಪುಟದಲ್ಲಿ ಸಂಯೋಜಿತಗೊಂಡಿರುವ ಬಿ.ಬಿ. ರಾಜ ಪುರೋಹಿತರ 'ಕನ್ನಡದ ಧ್ವನಿವಿಶ್ಲೇಷಣೆಯ ಬೆಳಕಿನಲ್ಲಿ ಇಂದಿನ ಬರವಣಿಗೆಯ ಪುನರಾವಲೋಕನ; ಎಸ್.ಎನ್. ಶ್ರೀಧರ್ ಅವರ 'ಭಾಷಾ ಆಧುನೀಕರಣ; ರಾಜನಿಕ ಮತ್ತು ಸಮಾಜೋಭಾಷಿಕ ಆಯಾಮಗಳು; ಸಂಗಮೇಶ ಸವದತ್ತಿಮಠರ 'ಕಲಬುರ್ಗಿ ಮುಸಲ್ಮಾನರ ಕನ್ನಡ; ಎಂ. ರಾಮು ಅವರ ಕಾಸರಗೋಡು ಕನ್ನಡ ಹವ್ಯಕ ಮತ್ತು ಕೋಟೆ ಕನ್ನಡಗಳಲ್ಲಿ ಕಾಣುವ ಕೆಲವು ಸಾಮ್ಯ–ವ್ಯತ್ಯಾಸಗಳು ; ಬಿ. ರಾಮಚಂದ್ರರಾವ್ ಅವರ 'ಆಂಧ್ರ ಕರ್ನಾಟಕ ಸರಹದ್ದಿನಲ್ಲಿ ಕನ್ನಡ'–ಇವು ಗಮನಿಸಬೇಕಾದವುಗಳು. ರಾಜಪುರೋಹಿತರ ಲೇಖನ ವಿವರಣಾತ್ಮಕ ನೆಲೆಯನ್ನು ಪ್ರಧಾನವಾಗಿ ಅವಲಂಬಿಸಿದೆ. ಆದರೆ, ಎಸ್.ಎನ್. ಶ್ರೀಧರ್ ಅವರ ಲೇಖನ ಇದಕ್ಕಿಂತ ವಿರುದ್ಧ ನೆಲೆಯುಳ್ಳದ್ದು. ಸಮಾಜೋಭಾಷಿಕ ಆಯಾಮಗಳ ಹಿನ್ನೆಲೆಯನ್ನು ತಾತ್ವಿಕವಾಗಿ ತಮ್ಮ ಅಧ್ಯಯನದ ಭಾಗವಾಗಿ ತೆಗೆದುಕೊಂಡಿರುವುದರಿಂದ ಸಹಜವಾಗಿ ಶೋಧನಾತ್ಮಕ ಮತ್ತು ಸಂವಿಶ್ಲೇಷಣಾತ್ಮಕ ನೆಲೆಯನ್ನು ಪಡೆದಿವೆ. ಇದರಿಂದ ಲೇಖನಕ್ಕೆ ಹೊಸ ತಾರುಣ್ಯವೇ ಪ್ರಾಪ್ತವಾಗಿದೆ. ಗಡಿ ಪ್ರದೇಶಗಳಲ್ಲಿ ವಾಸಿಸುವ ಕನ್ನಡಿಗರ ಭಾಷಿಕ ಅಧ್ಯಯನಗಳು ಇನ್ನೂ ಕೆಳಹಂತದಲ್ಲಿಯೇ ಇದೆ. ಸರಿಯಾದ ಕ್ಷೇತ್ರಾಧ್ಯಯನ, ವೈಜ್ಞಾನಿಕ ತಿಳುವಳಿಕೆಯ ಔಚಿತ್ಯ, ಶ್ರಮಸಹಿಷ್ಣುತೆಗಳು ಬೇಕೇ ಬೇಕು. ಇಲ್ಲಿರುವ ಬರೆಹಗಳು ಸಿದ್ಧಗೊಂಡಿರುವ ಕೆಲವು ವಿವರಗಳಿಂದ ವಿಶ್ಲೇಷಣೆಗೆ

ಹೊರಡುವುದರಿಂದ ಲೇಖನಗಳಲ್ಲಿ ಕೊರತೆ ಹಾಗೆ ಉಳಿದು ಬಿಡುತ್ತವೆ. ತಾವು ಮಂಡಿಸುವ ವಿಚಾರಕ್ಕೆ ಬೇಕಾದ ತಾತ್ವಿಕ ಆಕೃತಿಯ ಅಭಾವ ಈ ಮಾದರಿಯ ಲೇಖನಗಳ ಪ್ರಾಧಾನ್ಯ ಭಾಗವಾಗದೇ ಹೋಗಿವೆ. ಈಗಾಗಲೇ ಸಿದ್ಧಗೊಂಡಿರುವ ಜನಪ್ರಿಯ ಮಾದರಿಯ ತಾತ್ವಿಕ ನೆಲೆಗಿಂತ ಇನ್ನೊಂದು ದಿಕ್ಕಿನಿಂದ ನೋಡಬೇಕೆನ್ನುವ ಆಕಾಂಕ್ಷೆಯನ್ನು ಉಂಟು ಮಾಡುತ್ತಿವೆ. ಒಂದಂತೂ ನಿಜ. ಇಲ್ಲಿಯವರೆಗೆ ಕನ್ನಡ ಭಾಷೆ ಮತ್ತು ಸಂಸ್ಕೃತಿಯನ್ನು ಏಕಮುಖೀ ಸ್ಥಿತಿಯ ಶಿಸ್ತಿನಲ್ಲಿ ನಡೆಸುತ್ತಿದ್ದ ಅಧ್ಯಯನವನ್ನು ಹೊಸ ನೀತಿಗಳಿಂದ ನೋಡಲು ತೊಡಗಿಸಿಕೊಳ್ಳುವ ಮನೋವೃತ್ತಿ ಮೇಲಿನ ಲೇಖನಗಳ ವಿಶಿಷ್ಟ ಗುಣಧರ್ಮವಾಗಿದೆ. ಉಳಿದ ಬಹುಪಾಲು ಲೇಖನಗಳು ಪರಿಚಯಾತ್ಮಕ ಹಾಗೂ ವಿವರಣಾತ್ಮಕ ಧಾಟಿಯನ್ನು ಹಿಡಿದು ನಡೆದಿವೆ. ಇಲ್ಲಿನ ಬಹುಪಾಲು ಲೇಖನಗಳಲ್ಲಿ ಒಳನೋಟಗಳ ಅಭಾವ, ಹೊಸ ಚಿಂತನೆಯ ಗತಿಬಿಂಬಗಳು ನೆಲೆಯೂರಿಲ್ಲ. ಇಷ್ಟಾದರೂ ಶೋಧನೆ, ಸಂಶೋಧನೆ, ವಿಶ್ಲೇಷಣೆಯ ಹಂತದಲ್ಲಿರುವ ಭಿನ್ನಮಾದರಿಯ ಲೇಖನಗಳಿಗೆ ಕೊರತೆಯಿಲ್ಲ–ಎನ್ನುವುದನ್ನೂ ಇವುಗಳು ಸಾಬೀತು ಪಡಿಸುತ್ತದೆ.

ಡಾ. ಎಂ. ಚಿದಾನಂದ ಮೂರ್ತಿ ಅವರ 'ಸಂಶೋಧನ' ಬೃಹತ್ ಸಂಪುಟಕ್ಕಿಂತಲೂ ಭಿನ್ನಬಗೆಯ ಬಿ.ಸಿ. ಅವರ ಸನ್ಮಾನ ಗ್ರಂಥ 'ಬಹುರೂಪಿ' ಬಹಳ ಅನ್ವರ್ಥಕವಾದ ಕೃತಿ. ಬಿ. ಚಂದ್ರಶೇಖರ್ ನಾಟಕ ಮತ್ತು ಸಿನಿಮಾ ಪ್ರಪಂಚದಲ್ಲಿ ಕೆಲಸ ಮಾಡಿದವರು. ಕನ್ನಡ ರಂಗಭೂಮಿಗೆ ಹೊಸ ಬಗೆಯ ನೆಲೆಯನ್ನು ಒದಗಿಸಿದವರು. ನಾಟಕದ ಅರ್ಥವಂತಿಕೆಯನ್ನು ಹೆಚ್ಚಿಸಿದವರು. ಕನ್ನಡ ಹವ್ಯಾಸಿ ರಂಗಭೂಮಿ ಇಂಗ್ಲೀಷ್ ರಂಗದೊಡನೆ ರಚಿಸಿಕೊಂಡ ಮುಖ್ಯ ಸೇತುಗಳಲ್ಲಿ ಬಿ.ಸಿ. ಅವರೂ ಒಬ್ಬರಾಗಿದ್ದಾರೆ. ಸುಮಾರು ಐವತ್ತು ವರ್ಷ ರಂಗಭೂಮಿಯನ್ನು ಜೀವಂತವಾಗಿಡಲು ಪ್ರಯತ್ನಿಸಿದವರು. ಈ ಹಿನ್ನೆಲೆಯಲ್ಲಿ ಹೊರತಂದಿರುವ 'ಬಹುರೂಪಿ' ಹೆಸರಿಗೆ ಮತ್ತು ಮಾದರಿಗೆ ಅನ್ವರ್ಥಕವಾದದ್ದೇ ಸರಿ. "ರಂಗ ಶಿಕ್ಷಣಕ್ಕೆ ಪೂರಕವಾದ ಲೇಖನಗಳ ರಂಗಸಿದ್ಧಾಂತಗಳ ಪರಿಚಯವನ್ನು ಮಾಡಿಕೊಡುವ ಸಂಕಲನ" ಎಂಬ ಮಾತಿನಲ್ಲಿ ಎರಡಿಲ್ಲ. ಆದರೆ, ಇಲ್ಲಿರುವ ಹಲವಾರು ಲೇಖನಗಳು ರಂಗಭೂಮಿಯ ತಾತ್ವಿಕ ಪರಿಕರಗಳ ಬಗ್ಗೆ ಯಾವ ಎಗ್ಗೂ ಇಲ್ಲದೆ ನಿರ್ಭೀತಿಯಿಂದ ಮಾತಾಡುತ್ತವೆ. ಇಲ್ಲಿನ ಹದಿನೆಂಟು ಲೇಖನಗಳು ಬೇರೆ ಬೇರೆ ಬಗೆಯ ಕಾರಣಗಳಿಂದ ನಮ್ಮ ಗಮನವನ್ನು ಸೆಳೆಯುತ್ತವೆ. ಗ್ರೀಕ್, ಇಂಗ್ಲೆಂಡ್ ಹಾಗೂ ಜಪಾನ್ ದೇಶದ ನಾಟಕಗಳ ಸ್ವರೂಪ ವಿಚಾರವನ್ನು ತಿಳಿಸಿಕೊಡುವ ಲೇಖನಗಳಲ್ಲಿ ಎಲ್.ಎಸ್. ಶೇಷಗಿರಿರಾವ್ ಅವರು ಹೆಚ್ಚೇನು ಒಳನೋಟಗಳನ್ನು ನೀಡುವುದಿಲ್ಲ. ಆದರೆ, ಗಿರಡ್ಡಿ ಗೋವಿಂದರಾಜರ ಲೇಖನ, ಕೆಲವು ಸಮಕಾಲೀನ ಸವಾಲುಗಳಿಗೆ ಇದಿರೇಟು ಹಾಕುತ್ತವೆ. ಆದರೆ, ಈ ಬಗೆಯ ಬರೆಹ ಜಪಾನಿನ ನಾಟಕಗಳ ಬಗೆಗೆ ಬರೆದಿರುವ ರಾಮಸ್ವಾಮಿ ಅವರದ್ದಲ್ಲ. ರಾಮಸ್ವಾಮಿ ಅವರ ಬರೆಹದ ಹಿಂದೆ ಸರಳವೂ ತಾರ್ಕಿಕವೂ ಆದ ಪರಿಚಯಾತ್ಮಕ ನೆಲೆ ಇರುವುದನ್ನು ತಕ್ಷಣವೇ ಕಾಣಬಹುದು.

ಜಪಾನಿನ ಕಾ–ಬು–ಕಿ ನೃತ್ಯ ನಾಟಕ ಕುರಿತು ಕೇವಲ ಸಾಮಾನ್ಯ ಪರಿಚಯವನ್ನು ಮಾಡಿಕೊಡುತ್ತದೆ. ಎಸ್.ಕೆ.ಆರ್. ಅವರ ಈ ಲೇಖನ ಹೆಚ್ಚಿನ ಆಸಕ್ತಿಯನ್ನು ನಮಗೆ ಕೆರಳಿಸುವುದಿಲ್ಲ. ಅಗತ್ಯವಾಗಿ ಓದಲೇಬೇಕಾದ ಐದಾರು ಲೇಖನಗಳಲ್ಲಿ ಮೂಲ ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಿಸಿ ನೀಡಿರುವ ಲೇಖನಗಳದ್ದು. ಬ್ರೆಕ್ಟ್, ಬಾದಲ್ ಸರ್ಕಾರ್, ಗ್ರೋಟೋವ್ ಸ್ಕಿ ಅವರ ಲೇಖನಗಳ ಅನುವಾದ ಮಹತ್ವದ ಹಾಗೂ ವೈಚಾರಿಕವಾದ ನೆಲೆಗಳನ್ನು ನಮ್ಮ ಮುಂದಿಡುತ್ತವೆ. ನಮ್ಮ ರಂಗಭೂಮಿ ಪಡೆಯಬೇಕಾದ ಹೊಸ ಲೋಕಗಳ ಬಗೆಗೆ ಗಮನ ಸೆಳೆಯುತ್ತವೆ. ಪರಿಸರ ರಂಗಭೂಮಿ ಹಾಗೂ ಮೌನ ರಂಗಭೂಮಿಗಳ ಬಗ್ಗೆ ಎರಡು ಟಿಪ್ಪಣಿರೂಪದ ಲೇಖನಗಳಿವೆ. ದಿವಸ್ಪತಿ ಹೆಗ್ಗಡೆ ಅವರ ಪರಿಸರ ರಂಗಭೂಮಿ ಕುರಿತ ಲೇಖನ, ಖಚಿತವಾದ ಪರಿಕಲ್ಪನೆಯ ನೆಲೆಯಲ್ಲಿ ಮಂಡಿತವಾಗುವುದಿಲ್ಲ. ಆದರೆ, ಮೌನ ರಂಗಭೂಮಿ ಕುರಿತ ಶ್ರೀನಿವಾಸರಾಜು ಅವರ ಲೇಖನ ಪರಿಚಯಾತ್ಮಕವಾಗಿದ್ದರೂ ವಿವರಗಳಿಂದ ಮುಕ್ತವಾಗಿದೆ. ಕಂಬಾರರ ಜನಪದ ರಂಗಭೂಮಿ ಕುರಿತ ಲೇಖನ ಗಮನಾರ್ಹ. ಎಂ.ಎಚ್. ಕೃಷ್ಣಯ್ಯನವರ 'ಕನ್ನಡದಲ್ಲಿ ಅಸಂಗತ ನಾಟಕಗಳು' ಈಗಾಗಲೇ ಪ್ರಚಲಿತಗೊಂಡಿರುವ ಮಾತುಗಳಿಗೆ, ವಾಗ್ವಾದಗಳಿಗೆ ಹೊಸ ವಿವರಗಳೇನನ್ನೂ ಒದಗಿಸುವುದಿಲ್ಲ. ಪ್ರಸನ್ನ ಅವರ ಲೇಖನ ನಾಟಕ–ರಂಗಕೃತಿ, ನಾಟಕೀಯತೆಯ ಪರಿಕಲ್ಪನೆ ಹೊಸ ವಿವರಗಳಿಂದ ಹಾಗೂ ಲವಲವಿಕೆಯ ನೆಲೆಗಳಿಂದ ನಮ್ಮ ಗಮನ ಸೆಳೆಯುವುದು ಮಾತ್ರವಲ್ಲ ನಾಟಕ ಮತ್ತು ರಂಗಕೃತಿಗಳ ನಡುವೆ ಇರಬಹುದಾದ ಒಳನೋಟಗಳ ಸಾಧ್ಯತೆಯನ್ನು ಎತ್ತಿ ತೋರಿಸುತ್ತದೆ. ಈ ಲೇಖನದ ಲವಲವಿಕೆಗೆ ಸಮನಾದದ್ದು ಎಚ್.ಎಸ್. ಶಿವಪ್ರಕಾಶರ 'ಆಗಸ್ಟ್ ಸ್ಟ್ರಿಂಡ್‌ಬರ್ಗ್‌ನ ಅಜ್ಞಾನ ಜಗತ್ತು' ಲೇಖನ. ಸ್ಟ್ರಿಂಡ್‌ಬರ್ಗ್‌ನ ಕೃತಿಗಳೊಳಗಿನ ಅನೇಕ ಲೋಕಗಳ ಬಗ್ಗೆ ನಮ್ಮ ಗಮನ ಸೆಳೆಯುತ್ತಾರೆ. ಕಥೆಗಳ ಲೋಕ, ಕಾದಂಬರಿಗಳ ಲೋಕ, ಆತ್ಮಚರಿತ್ರೆಯ ಲೋಕ, ಇತಿಹಾಸ ಲೋಕ, ಭಾಷಾಶಾಸ್ತ್ರದ ಲೋಕ, ವಿಜ್ಞಾನ ಲೋಕ, ನಾಟಕ ಲೋಕ ಹೀಗೆ ಬಹುರೂಪಿಯಾದ ಲೋಕಗಳನ್ನು ಅವುಗಳ ಅಂತರ್ ನೆಲೆಗಳನ್ನು ಕುರಿತು ಆಳವಾದ ಒಳನೋಟಗಳಲ್ಲಿ ದಾಖಲಿಸುತ್ತಾರೆ. ಸ್ವೀಡನ್ನಿನ ಜಗತ್ತನ್ನು ತಲ್ಲಣಗೊಳಿಸುವಷ್ಟು ಪ್ರಭಾವಶಾಲಿಯಾದ ಸ್ಟ್ರಿಂಡ್‌ಬರ್ಗ್ ಬಗ್ಗೆ ಕನ್ನಡದಲ್ಲಿ ಬಂದ ಅತ್ಯುತ್ತಮ ಲೇಖನ. 'ಬಹುರೂಪಿ' ತನ್ನ ಘನತೆಯಿಂದ, ಸತ್ವಯುಕ್ತವಾದ ಲೇಖನಗಳಿಂದ ಈಚಿನ ವರ್ಷಗಳಲ್ಲಿ ನಾಟಕಲೋಕದ ಬಗೆಗಿನ ಮಹತ್ವದ ಕೃತಿಗಳಲ್ಲಿ ಒಂದಾಗಿದೆ.

ಸುಬ್ಬಣ್ಣ, ಹೆಗ್ಗೋಡನ್ನು ಸಾಂಸ್ಕೃತಿಕ ಜಗತ್ತಾಗಿ ನೆಲೆನಿಲ್ಲಿಸಿದವರು. ಅವರಿಂದ ಸಾಹಿತ್ಯ, ನಾಟಕ, ಕಲೆಗಳ ಸಮೃದ್ಧತೆಗೆ ಜೀವ ಬಂದಿತು. ಮ್ಯಾಗ್ಸೇಸೆ ಪ್ರಶಸ್ತಿ ಪಡೆದ ಮೊದಲ ಕನ್ನಡಿಗನೆಂಬ ಹೆಗ್ಗಳಿಕೆ. ಈ ಸಂದರ್ಭದ ಪುಸ್ತಕ 'ನಮ್ಮ ಸುಬ್ಬಣ್ಣ'. ಅವರ ಸ್ನೇಹಿತರು, ಅಭಿಮಾನಿಗಳು ಅರ್ಪಿಸಿದ ಕೃತಿ. ಸಹಜವಾಗಿ ಸುಬ್ಬಣ್ಣನವರ ಕಾರ್ಯಗಳ ಬಗ್ಗೆ, ಅವರ ವ್ಯಕ್ತಿತ್ವದ ಬಗ್ಗೆ, ಅವರು

ಹಮ್ಮಿಕೊಂಡ ಸಾಂಸ್ಕೃತಿಕ ಜಗತ್ತಿನ ಬಗ್ಗೆ, ಹೆಗ್ಗೋಡಿನ ಬಗ್ಗೆ–ಇವೆಲ್ಲದರ ಬಗ್ಗೆ ಹದಿನಾರು ಲೇಖನಗಳು ಕನ್ನಡದಲ್ಲಿವೆ. ಯು.ಆರ್. ಅನಂತಮೂರ್ತಿ ಅವರು ಬರೆದ ಗೆಳೆಯ ಸುಬ್ಬಣ್ಣ ಓದಿ ಸವಿಯಬೇಕಾದ ಲೇಖನ. ಗುಲ್ವಾಡಿ, ಕೆ.ಎಚ್. ಶ್ರೀನಿವಾಸ, ಶೂದ್ರ, ಅಶೋಕ, ಈಶ್ವರಯ್ಯ, ರಾಜಾರಾಂ ತಲ್ಲೂರು, ಬಾಬು ಕೃಷ್ಣಮೂರ್ತಿ, ರಮಾನಂದ ಐನಕೈ, ಎಸ್ಸಾರ್, ದೀಪಕ್ ಸಾಗರ, ಪಾಟೀಲ ಪುಟ್ಟಪ್ಪ, ರಾಮಮೂರ್ತಿ ತೆಮೆಮನೆ, ಹಾಸಾಕೃ. ಇವರುಗಳ ಲೇಖನಗಳು ಒಂದೇ ಮಾದರಿಯವುಗಳಲ್ಲ. ಆದರೆ, ಸುಬ್ಬಣ್ಣನವರು, ನಾಟಕ ಸಾಹಿತ್ಯ ಜಗತ್ತನ್ನು ಗ್ರಹಿಸಿಕೊಂಡ ಕ್ರಮವನ್ನು ಮಂಡಿಸುವಾಗ ಒಂದೇ ನಿಲುಮೆಯನ್ನು ತಾಳುತ್ತಾರೆ. ಸುಬ್ಬಣ್ಣನವರ ಕ್ರಿಯಾಶಕ್ತಿ, ಕ್ರಿಯಾ ವಿವೇಕದ ಬಗ್ಗ ಆಸ್ಥೆ, ಪ್ರೀತಿಯನ್ನು ತಾಳುತ್ತಾರೆ. ಇದರೊಡನೆ ಒಂಭತ್ತು ಇಂಗ್ಲಿಷ್ ಲೇಖನಗಳಿದ್ದು ಭಾರತೀಯ ನಾಟಕ ಸಾಹಿತ್ಯದ ಸಮಕಾಲೀನ ಸಂದರ್ಭದ ಅಗತ್ಯದ ವೇಳೆಯಲ್ಲಿ ಸುಬ್ಬಣ್ಣನವರ ಐಂದ್ರಿಯಿಕ ಜಗತ್ತು ಅವರು ತಾಳಿದ ಆಸಕ್ತಿಗಳ ಬಗ್ಗೆ ಪ್ರೀತಿಯಿಂದ ಬರೆಯುತ್ತಾರೆ. ಇಡಿ ಪುಸ್ತಕ 'ಪ್ರೀತಿ'ಯ ನೆಲೆಯನ್ನು ಹಿಡಿದು ನಡೆದಿದ್ದು ಅನಂತಮೂರ್ತಿ, ಅಶೋಕ, ಇವರ ಲೇಖನಗಳು ಹೆಚ್ಚು ವಸ್ತುನಿಷ್ಠವಾಗಿವೆ.

ನಮ್ಮ ಸುಬ್ಬಣ್ಣ ಪುಸ್ತಕವನ್ನೆ ಸ್ಥೂಲವಾಗಿ ಹೋಲುವುದಾದರೂ 'ಸಿಂಹಾಲೋಕ' ಅದಕ್ಕಿಂತ ತಾತ್ವಿಕವಾಗಿ ಬೇರೆಯದೇ. ಸುಬ್ಬಣ್ಣನವರ ಬಗ್ಗೆ ತೋರಿಸುವ ಆತ್ಮೀಯತೆ ಮತ್ತು ಪ್ರೀತಿಗಳಿರುವು ಸಿಂಹಾಲೋಕದಲ್ಲಿದ್ದು ಹೆಚ್ಚು ವಸ್ತುನಿಷ್ಠವಾಗಿದೆ. ನಾಟಕ ಮತ್ತು ಸಿನಿಮಾ ಜಗತ್ತಿನ ಅತ್ಯುತ್ತಮ ನಟನಾಗಿ ಬೆಳೆದ ಸಿ.ಆರ್. ಸಿಂಹ ಕುರಿತ ಆಕರ್ಷಕ ಪುಸ್ತಕ ಇದಾಗಿದೆ. ಒಳಪುಟಗಳಲ್ಲಿ ಮೈವೆತ್ತಿರುವ ಚಿತ್ರಗಳು ಇಲ್ಲಿ ಸಂಕಲನಗೊಂಡಿರುವ ಲೇಖನ, ಚಿತ್ರನಿರೂಪದ ಲೇಖನಗಳಿಗೆ ಒಮ್ಮೆಯನ್ನು ದಯಪಾಲಿಸಿವೆ. ಆರು ಅಂಕಗಳಿರುವ ಈ ಪುಸ್ತಕಕ್ಕೆ ತಾತ್ವಿಕ ಅಧಿಕೃತತೆ ಪ್ರಾಪ್ತವಾಗಿರುವುದೇ ವಿಶೇಷ ಸಂಗತಿ. ಅಂಕ ಒಂದರ 'ನಾಂದಿ' ಭಾಗದಲ್ಲಿ ಶ್ರೀನಾಥ್, ಕೆ.ಎಂ. ಶ್ರೀನಿವಾಸಗೌಡ, ಸಿ.ಆರ್. ಸಿಂಹರ ಪ್ರಚಂಡ ಪ್ರತಿಭೆಯನ್ನು ತಮ್ಮ ಒಳನೋಟಗಳಿಂದ ಹೇಳುತ್ತಾರೆ. ಇದಕ್ಕೆ ಕ್ರಿಯಾತ್ಮಕ ನೆಲೆಯಲ್ಲಿ ಸಿ.ಆರ್. ಸಿಂಹ 'ನಾನು ನಮ್ಮ ಹಿಸ್ಟ್ರಿಯಾನಿಕ್ ಕ್ಲಬ್ಬೂ' ಲೇಖನ ಜಾಳಾದ ಪ್ರತಿಕ್ರಿಯೆಯನ್ನು ಸಾದರಪಡಿಸುತ್ತದೆ. ಕೃತಿಯ ಮುಖಾಂತರ ಆಶಯ ನಿರೂಪಣೆಯಾಗುವ ಬಗೆಗೆ ಈ ಲೇಖನ ಒಂದು ಮಾದರಿ. ಎರಡನೆಯ 'ಅಂಕ'ದಲ್ಲಿ ಅನ್ನಿಸಿಕೆಗಳು ಇವೆ. ಬಿ.ವಿ. ಕಾರಂತ, ಕಂಬಾರ, ಶಿವಮೊಗ್ಗ ವೆಂಕಟೇಶ್ ಇವರ ಲೇಖನಗಳು. ಪ್ರೀತಿಯು ಆರ್ದ್ರತೆಯಿಂದ ನಳನಳಿಸುತ್ತವೆ. ಸಿಂಹ ಅವರ ಮಗುಮನಸ್ಸು, ನಾಟಕಲೋಕ, ನಟನೆಯ ಹುಚ್ಚು, ಎಲ್ಲವೂ ತಾನಾಗಿ ನಿಂತ ಸಂದರ್ಭಗಳನ್ನು ಆತ್ಮೀಯತೆಯಿಂದ ಅದೇ ವೇಳಗೆ ನಿಷ್ಠುರತೆಯಿಂದಲೂ ಹೇಳುತ್ತವೆ. ಅಂಕ ಮೂರರಲ್ಲಿ 'ತುಘಲಕ್' ಕುರಿತ ಕುರ್ತಕೋಟಿ ಅವರ ವಿಮರ್ಶೆ ಓದುವಂಥದ್ದು. ನಟರಂಗ ಸಾದರಪಡಿಸಿದ ನಾಟಕಗಳ ಬಗ್ಗೆ ನಾಲ್ಕನೆಯ ಅಂಕದಲ್ಲಿದೆ.

ಕಾಕನಕೋಟೆ, ಚೆಗೆವಾರ. ನಾಡೊ, ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಂ, ಒಥೆಲೊ, ಸಂಕ್ರಾಂತಿ, ದಿ ಕಕೇಷಿಯನ್ ಚಾಕ್ ಸರ್ಕಲ್, ಸೂರ್ಯಶಿಕಾರ್, ಮೃಚ್ಛಕಟಿಕ, ಇವುಗಳ ಬಗ್ಗೆ ಒಂದು ಟಿಪ್ಪಣಿರೂಪದ ಲೇಖನವಿದ್ದು ಆ ಸಂದರ್ಭದಲ್ಲಿ ಪತ್ರಿಕೆಗಳಲ್ಲಿ ಬಂದ ವಿಮರ್ಶೆಯನ್ನು ಕೊಡುತ್ತ ಹೋಗಿದ್ದಾರೆ. ವಿಮರ್ಶೆಗೆ ಬಂದ ಎಲ್ಲ ಲೇಖನಗಳೂ ಒಂದೆಡೆ ಸೇರಿದೆ. ಸಾಂಸ್ಕೃತಿಕ ಸಂದರ್ಭದ ಹಿನ್ನೆಲೆಯಿಂದ ಇದು ಸರಿಯಾದ ಸಂಕಲನವೇ. ಒಂದೆಡೆ ಆಯಾ ನಾಟಕಗಳ ಕುರಿತ ಒಟ್ಟು ವಿಮರ್ಶೆ ಆಗುತ್ತಿದ್ದಂತೆಯೇ ಮತ್ತೊಂದೆಡೆ ಸಿ.ಆರ್. ಸಿಂಹ ಅವರ ನಟನೆ, ನಾಟಕ ಲೋಕದೊಳಗೆ ತನ್ನನ್ನು ಐಕ್ಯಗೊಳಿಸಿಕೊಂಡ ಕ್ರಮವನ್ನು ಒಟ್ಟಿಗೆ ಹೇಳಲು ತೊಡಗುತ್ತದೆ. ಈ ದೃಷ್ಟಿಯಿಂದ ಇಲ್ಲಿನ ಲೇಖನಗಳಿಗೆ ವಸ್ತುಸಂದರ್ಭ ಪ್ರಾಪ್ತವಾಗಿದೆ. ದಾಖಲೆ, ವಸ್ತುನಿಷ್ಠ ವಿಮರ್ಶೆ, ನಾಟಕಗಳನ್ನು ಗ್ರಹಿಸಿಕೊಂಡ ರೀತಿ, ವಸ್ತುನಿಷ್ಠ ವಿದ್ವಾಂಸರ– ನಾಟಕಾಸಕ್ತರ ಟಿಪ್ಪಣಿ ಇವುಗಳು ಒಮ್ಮೆ ಪಡೆದುಕೊಂಡ ಬಗೆಗಳಾಗಿವೆ. ಅಂಕ ಐದು 'ವೇದಿಕೆ' ಸಾದರ ಪಡಿಸಿದ ನಾಟಕಗಳ ಬಗ್ಗೆ ಸದ್ದಿಲ್ಲದೆ ನಿರೂಪಿಸುತ್ತದೆ. ಕೈಲಾಸಂ ಅವರನ್ನು ಕುರಿತು ಡಿ.ವಿ.ಜಿ., ಶ್ರೀರಂಗ, ಅವರ ಲೇಖನಗಳು ಆದ ಮೇಲೆ 'ಟಿಪಿಕಲ್ ಟಿ.ಪಿ. ಕೈಲಾಸಂ' ನಾಟಕದ ಅನನ್ಯತೆ ಬಗ್ಗೆ ಹೊಸ ಸಂವೇದನೆಯನ್ನು ಮಂಡಿಸುತ್ತದೆ. ಇದರೊಡನೆ ಭೈರವಿ, ಕರ್ಣ ರಂಗನಾಟಕಗಳ ಬಗೆಗೂ ವಿವರಗಳಿವೆ. ಶಾರದಾಸಿಂಹರ ವೇದಿಕೆ ಕಟ್ಟಿದ್ದು ಕುತೂಹಲಕಾರಿಯಾಗಿದೆ. ಕನ್ನಡದ ಮಟ್ಟಿಗೆ 'ಸಿಂಹಾಲೋಕ' ಒಂದು ವಿಶಿಷ್ಟ ಬಗೆಯ ಪುಸ್ತಕ. ಒಬ್ಬ ವ್ಯಕ್ತಿಯ ಅಖಂಡ ಪ್ರತಿಭೆಯ ಬೆಳಕಿನ ಜತೆಗೆ ಆ ಕಾಲದ ಸಾಂಸ್ಕೃತಿಕ ಚರಿತ್ರೆಯನ್ನು ಜತೆಜತೆಗೆ ಕಟ್ಟಿಕೊಡುವ ಪ್ರಯತ್ನ ಇಲ್ಲಿ ಆಗಿದೆ. ರಂಗನಾಟಕಗಳ ಚರಿತ್ರೆ ಆಗಿರುವಂತೆ ಚರಿತ್ರೆಯ ದಾಖಲೆ ಒದಗಿಸಿಕೊಡುವ ನೆಲೆಯಲ್ಲಿ ಸಿಂಹ ನಡೆದ ಹೆಜ್ಜೆಗಳನ್ನು ಗುರುತಿಸಬಹುದಾಗಿದೆ. ಸುಬ್ಬಣ್ಣನವರ ಬಗೆಗೆ ಹೊರತಂದಿರುವ 'ನಮ್ಮ ಸುಬ್ಬಣ್ಣ' ಪುಸ್ತಕದ ಜತೆಗೆ ಹೋಲಿಸಿದರೆ : ಸುಬ್ಬಣ್ಣನ ವೈವಿಧ್ಯತೆಯನ್ನೂ ಏಕತಾನದಲ್ಲೇ, ಒಂದೇ ಮಾಪನದಲ್ಲಿ ಹೇಳಿದರೆ 'ಸಿಂಹಾಲೋಕ' ಇಂಥ ವಿಭಿನ್ನತೆಗಳನ್ನೂ ವೈವಿಧ್ಯತೆಗಳನ್ನು ಸಾದರ ಪಡಿಸುತ್ತದೆಂಬುದು ಕುತೂಹಲದ ಅಂಶ.

ಎಂ.ಕೆ. ಇಂದಿರಾ ಕನ್ನಡದ ಮುಖ್ಯ ಮಹಿಳಾ ಕಾದಂಬರಿಕಾರ್ತಿಯರಲ್ಲಿ ಒಬ್ಬರು. ಅವರು ಎಪ್ಪತ್ತೈದಕ್ಕೆ ಮುಟ್ಟಿದ ಸಂದರ್ಭದಲ್ಲಿ ಅವರನ್ನು ಸಮೀಪದಿಂದ ಬಲ್ಲ ಕರ್ನಾಟಕ ಲೇಖಕಿಯರ ಸಂಘ ಅರ್ಪಿಸಿದ ಅಭಿನಂದನಾ ಗ್ರಂಥ 'ಸುರಗಿ'. ಹೆಸರು ಧ್ವನಿಪೂರ್ಣವಾಗಿದೆ. ಮಲೆನಾಡಿನ ಕುಗ್ರಾಮದಲ್ಲಿ ಹುಟ್ಟಿ ತನ್ನ ಅನುಭವವನ್ನು 'ಸಾಚಾತನದಿಂದ ಎರೆದು ನೋಡಲು ಪ್ರಯತ್ನಿಸಿದ ಕಾದಂಬರಿಕಾರ್ತಿ ಇಂದಿರಾ ಅವರು. ಎರಡು ಭಾಗಗಳಲ್ಲಿರುವ ಈ ಸಂಪುಟದಲ್ಲಿ ಮಲೆನಾಡ ಕಂಪಾದ ಇಂದಿರಾ ಅವರ ಬದುಕು–ಬರಹ, ಜೀವನದೃಷ್ಟಿ, ನಡೆದ ದಾರಿ, ಪ್ರತಿಭೆ, ಸರಳ ನಂಟು, ಸ್ನೇಹಭಾವ, ಮುಂತಾದ ನೆಲೆಗಳಲ್ಲಿ ಇಂದಿರಾ ಅವರನ್ನು

ಸಮೀಪದಿಂದ ನೋಡಲಾಗಿದೆ. ಪು.ತಿ.ನ, ಅನುಪಮಾ, ವೇಣುಗೋಪಾಲರಾವ್, ಎಚ್.ಕೆ. ರಂಗನಾಥ್, ವೆಂಕಟೇಶ್, ಇವರ ಲೇಖನಗಳು–ಆತ್ಮೀಯತೆಯಿಂದ ಲವಲವಿಕೆಯಿಂದ ಕೂಡಿವೆ. ಎರಡನೆಯ ಭಾಗದಲ್ಲಿ ಇಂದಿರಾ ಅವರ ಕೃತಿಚಿಂತನೆ ನಡೆದಿದೆ. ಸುಮಾರು ಇಪ್ಪತ್ತು ಮೂರು ಲೇಖನಗಳಿರುವ ಈ ಭಾಗ ಹೆಚ್ಚು ಪರಿಚಯಾತ್ಮಕ ಹಾಗೂ ವಿವರಣಾತ್ಮಕ ನೆಲೆಯನ್ನು ಮಾತ್ರ ಅಪ್ಪಿವೆ. ಹೀಗಾಗಿ, ಲೇಖನಗಳಲ್ಲಿ ಒಳನೋಟಗಳು ಮರೆಯಾಗಿವೆ. ವಿಶ್ಲೇಷಣಾತ್ಮಕ ಹಾಗೂ ತುಲನಾತ್ಮಕ ಬರಹಗಳು ಇಲ್ಲಿಲ್ಲ. ಕುರ್ತಕೋಟಿ ಅವರ 'ತುಂಗಭದ್ರ' ಕುರಿತ ಲೇಖನ, ಶಾಂತಾನಾಗರಾಜ್ ಅವರ ಎಂ.ಕೆ. ಇಂದಿರಾ ಅವರ ಸೃಜನೇತರ ಕೃತಿಗಳ ಒಂದು ನೋಟ; ಬಿ.ಎಸ್. ವೆಂಕಟಲಕ್ಷ್ಮಿ ಅವರ 'ಇಂದಿರಾ ಅವರ ಪ್ರಗತಿಪರ ನಿಲುವು' ಸುಮಿತ್ರಾಬಾಯಿ ಅವರ 'ಇಂದಿರಾ ಕಾದಂಬರಿಗಳಲ್ಲಿ ಸ್ತ್ರೀಪರ ದೃಷ್ಟಿ' ವೈದೇಹಿ ಅವರ ತುಂಗಭದ್ರದ ಕೃಷ್ಣವೇಣಿ, ಎನ್. ಗಾಯತ್ರಿ ಅವರ ಇಂದಿರಾ ಕೃತಿಗಳಲ್ಲಿ ಸಾಮಾಜಿಕ ಪ್ರಜ್ಞೆ ಒಂದು ಟಿಪ್ಪಣಿ, ಗಮನಿಸಬಹುದಾದ ಲೇಖನಗಳು. ಇವುಗಳು ಇಂದಿರಾ ಅವರ ಕಾದಂಬರಿಗಳ ವಸ್ತುಸ್ವರೂಪವನ್ನು ಕುರಿತು ಚಿಂತನೆಗೆ ತೊಡಗುತ್ತವೆಯೇ ಹೊರತು ಕಾದಂಬರಿ ಚರಿತ್ರೆಯ ಭಿನ್ನ ಕಾಲಘಟ್ಟದಲ್ಲಿ ಇಂದಿರಾ ಅವರ ಕಾದಂಬರಿಗಳ ಸ್ವರೂಪ ವಿನ್ಯಾಸಗಳ ಕಡೆ ಗಮನ ಹರಿಸುವುದಿಲ್ಲ. ಹೀಗಾಗಿ, ಇಲ್ಲಿನ ಲೇಖನಗಳಲ್ಲಿ ಒಂದೇ ಮಾದರಿಯ ಮಾತುಗಳು, ಸಿದ್ಧ ಹೇಳಿಕೆಗಳು, ಜಾರ್ಗನ್ನಾದ ನುಡಿಗಳು, ಜನಪ್ರಿಯ ಮಾತುಗಳು, ಕ್ಲೀಷೆಯ ನೆಲೆಯಿಂದ ಹೇಳಲು ತೊಡಗುತ್ತವೆ. ಪ್ರೇಮಾಕಾರಂತರ 'ನಾನೇಕೆ ಫಣಿಯಮ್ಮ ಚಿತ್ರ ಮಾಡಿದೆ'? ಲೇಖನ ಕುತೂಹಲಕಾರಿಯಾಗಿದೆ. ಸಂಪಾದಕಿ ಎಚ್.ಎಸ್. ಪಾರ್ವತಿ ಅವರು ಲೇಖನಗಳನ್ನು ಸಂಯೋಜಿಸುವುದರಲ್ಲಿ ಭಿನ್ನ ಮಾದರಿಯನ್ನು ಅನುಸರಿಸಬಹುದಿತ್ತು. ಕೃತಿಗಳ ಮುಖಾಂತರ ಕೃತಿಕಾರನೊಬ್ಬನ ಒಟ್ಟು ಬದುಕಿನ ಆಶಯವನ್ನು ಹೇಳುವಂತಹ ಲೇಖನಗಳು ಇದ್ದಿದ್ದರೆ 'ಸುರಗಿ'ಯ ಜತೆಗೆ ಸಂವಾದಕ್ಕೆ ಅನುಕೂಲವಾಗಬಹುದಿತ್ತು.

ಮಲ್ಲಾಡಿ ಹಳ್ಳಿಯನ್ನು ತಮ್ಮ ಸೇವಾಕ್ಷೇತ್ರವನ್ನಾಗಿಸಿಕೊಂಡ ಶ್ರೀರಾಘವೇಂದ್ರ ಸ್ವಾಮೀಜಿ ಅವರ ನೂರನೆಯ ವರ್ಷಕ್ಕೆ ತಂದ ಸವಿಸಂಪುಟ 'ಧನ್ಯಜೀವಿ' ಈಗಾಗಲೇ ಸಿದ್ಧಗೊಂಡಿರುವ ಅಭಿನಂದನ ಗ್ರಂಥಗಳ ಜನಪ್ರಿಯ ಧಾಟಿಗೆ ಹೋಲುತ್ತದೆ. ನಮ್ಮ ಗಮನ ಸೆಳೆಯುವುದು ಮಲ್ಲಾಡಿಹಳ್ಳಿ ಸ್ವಾಮೀಜಿ ಅವರನ್ನು ಸಮೀಪದಿಂದ ಬಲ್ಲವರು ಬರೆದಿರುವ ಲೇಖನಗಳಲ್ಲಿ ಮಾತ್ರ. ಆರ್.ವಿ. ಸದಾಶಿವಮೂರ್ತಿ ಅವರ 'ವ್ಯಾಯಾಮ ಮೇಷ್ಟ್ರು' ಲೇಖನ ಹೆಚ್ಚು ಗಮನ ಸೆಳೆಯುತ್ತದೆ. ವೈದ್ಯ, ವೇದಾಂತ, ಸಾಹಿತ್ಯ, ಇತರೆ ಎಂಬ ಶೀರ್ಷಿಕೆಯಲ್ಲಿ ಇಲ್ಲಿನ ಲೇಖನಗಳು ಸಂಯೋಜಿತಗೊಂಡಿವೆ. ಒಂದು ವಿಚಿತ್ರವೆಂದರೆ 'ವೇದಾಂತ' ಎಂಬ ಶೀರ್ಷಿಕೆಯ ಒಳಗಡೆ ಆರ್ಯರು ಭಾರತದ ಮೂಲನಿವಾಸಿಗಳೆ ಅಲ್ಲವೆ? ಎಂಬ ನ. ಸುಬ್ರಹ್ಮಣ್ಯಂ ಅವರ ಲೇಖನ, ಪ. ನಾಗರಾಜಯ್ಯ ಅವರ ಮಂಜಯ್ಯ ಹೆಗ್ಡೆ,

ಈ ಮಾದರಿಯ ಲೇಖನಗಳು ಸೇರಿವೆ. ಚರಿತ್ರೆ ಮತ್ತು ಜೀವನ ಚರಿತ್ರೆಯ ಭಾಗಕ್ಕೆ ಸೇರುವ ಇಂಥ ಲೇಖನಗಳು ವೇದಾಂತದ ಜತೆಗೆ ಸೇರಿಕೊಂಡಿವೆ. ಇಲ್ಲಿನ ಲೇಖನಗಳು ತೀರ ಬಾಲಿಶ. ಹತ್ತಾರು ಪುಸ್ತಕಗಳನ್ನು ಓದಿ ಸಂಕಲಿಸಿಕೊಂಡಿರುವ ಬರೆಹಗಳು. ಬರೆಹಗಳ ಹಿಂದೆ ಚಾಲ್ತಿಯಲ್ಲಿರುವ ಸಿದ್ಧಮಾದರಿಯೊಂದು ಕೆಲಸ ಮಾಡಿದೆ. 'ಸಾಹಿತ್ಯ'ವೆಂಬ ಶೀರ್ಷಿಕೆಯ ಭಾಗದಲ್ಲಿ ದೇಶ ಕುಲಕರ್ಣಿ, ಎಚ್.ಎಸ್. ರಾಘವೇಂದ್ರರಾವ್, ಅವರ ಲೇಖನ ಓದಲು–ಚಿಂತಿಸಲು ಹಚ್ಚುತ್ತವೆ. ಉಳಿದ ಲೇಖನಗಳಲ್ಲಿ ಅತಿಯಾದ ಪ್ರಶಂಸೆ, ವಿಶೇಷಣಗಳ ಮುಖಾಂತರ ನಿಯೋಜಿತಗೊಳ್ಳುವ ಬರೆಹಗಳಾಗಿ ವಿಜೃಂಭಿತಗೊಳ್ಳುತ್ತವೆ. ಗಂಭೀರವಾದ ಓದು, ಸ್ಪಷ್ಟವಾದ ಆಲೋಚನೆ, ತರ್ಕಾತೀತವಾದ ನಿಲುವು, ಜೀವನ ಶೋಧನೆಗಳ ಅಭಾವ ಎದ್ದು ಕಾಣುತ್ತವೆ. ಲೇಖನಗಳ ಸಂಯೋಜನೆಯಲ್ಲೂ ತಾತ್ವಿಕವಾದ ಮುಖ್ಯ ನೆಲೆಗಳು ಇಲ್ಲ. ಸುಮಾರು ಆರುನೂರು ಪುಟಗಳ ಬೃಹತ್ ಸಂಪುಟ ಹೊಸ ನೆಲೆಗಳ ಹುಡುಕಾಟವಿಲ್ಲದೆ ಸಿದ್ಧ ಮಾತುಗಳೊಡನೆ ಮಂಡಿತವಾಗುವ ಬಗೆ ನಿರಾಸೆಯನ್ನೇ ತರುತ್ತದೆ.

ಎಂ.ಎಸ್. ಜೋಯಿಸ್ ಹಿಂದಿನ ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳವಳಿಗೆ ಮೊಟ್ಟಮೊದಲೇ ಧುಮುಕಿದ ಅಗ್ರಪಂಕ್ತಿಯ ನಾಯಕರಲ್ಲಿ ಒಬ್ಬರು. ಅವರ ತ್ಯಾಗ, ಕಷ್ಟಸಹಿಷ್ಣುತೆ, ಧೈರ್ಯ, ಸಮಯ ಸ್ಫೂರ್ತಿ ಮತ್ತು ಅದಮ್ಯ ದೇಶಭಕ್ತಿಗಳನ್ನು ಈ ಸಂಪುಟದ ಲೇಖನಗಳಲ್ಲಿ ಕಾಣಬಹುದು. ಇಲ್ಲಿನ ಲೇಖನಗಳಲ್ಲಿ ಸ್ತುತಿಪರವಾದ ನೆಲೆಗಳೇ ಪ್ರಾಧಾನ್ಯತೆಯನ್ನು ಪಡೆದಿವೆ. ಇಷ್ಟು ಹೇಳಿದರೆ ಸಾಕು, ಮುದ್ರಣ, ಅಚ್ಚುಕಟ್ಟು ಮಾತ್ರ ಹಿತವಾಗಿದೆ.

ಕನ್ನಡದ ಅಭಿನಂದನ ಗ್ರಂಥಗಳನ್ನು ಒಟ್ಟಾರೆಯಾಗಿ ಹಿಡಿದು ನೋಡಿದಾಗ ಈಗಾಗಲೇ ವ್ಯಕ್ತಿವೈಭವ ಹಾಗೂ ಕೃತಿಗಳ ಪ್ರಶಂಸೆಯನ್ನೇ ಬಂಡವಾಳವನ್ನಾಗಿಸಿಕೊಂಡ ಅಭಿನಂದನ ಗ್ರಂಥಗಳು ಜತೆಗೆ ಸಾಂಸ್ಕೃತಿಕವಾಗಿ ಮಹತ್ವದ ನೆಲೆಗಳನ್ನು ಕಂಡುಕೊಂಡಂತಹ ವಿಶ್ಲೇಷಣಾತ್ಮಕ ಹಾಗೂ ವಿವರಣಾತ್ಮಕವಾದ ಅಭಿನಂದ ಗ್ರಂಥಗಳಾಗಿ ಹೊರಬರುತ್ತಿವೆ. ಆದರೆ, ಒಂದಂತೂ ನಿಜ ಬಹುರೂಪಿ, ನಮ್ಮ ಸುಬ್ಬಣ್ಣ, ಸಿಂಹಾಲೋಕ–ಇಂಥ ಗ್ರಂಥಗಳು ಹೊಸ ಚೌಕಟ್ಟಿನೊಳಗೆ ಹೊಸ ಬಗೆಯ ರೂಪಗಳನ್ನು ತೊಡಿಸುತ್ತವೆ. ಕಳೆದ ಐವತ್ತು ವರ್ಷಗಳಿಂದ ವೈಭವೀಕರಿಸಲ್ಪಟ್ಟ ನೆಲೆಯಲ್ಲೂ ಪರಿಚಯಾತ್ಮಕವಾದ ವಿಮರ್ಶೆಗಳಲ್ಲೂ ತುಳುಕುತ್ತಿದ್ದ ಅಭಿನಂದನ ಗ್ರಂಥಗಳಿಗೆ ಹೊಸ ಸಂವೇದನೆ ಹಾಗೂ ಹೊಸ ಉಸಿರನ್ನು ತಂದು ಕೊಡಲು ಸಾಧ್ಯವಾಗಿದೆ. ಹೀಗಿದ್ದೂ ಧನ್ಯಜೀವಿ, ಸ್ವಾತಂತ್ರ್ಯದೆಡೆಗೆ ಇಂಥ ಸಂಪುಟಗಳು ಗುಣ ಮತ್ತು ಸಂವಿಶ್ಲೇಷಣಾತ್ಮಕ ನೆಲೆಯಿಂದ ಹೊಸ ದಿಕ್ಕನ್ನು ಹೊಸ ಗಾಳಿಯನ್ನು ಪಡೆಯಬಹುದಾಗಿದೆ. ಇದು, ಮುಂದಿನ ಅಭಿನಂದನ ಗ್ರಂಥಗಳ ಸಾಹಿತ್ಯವು ಹೊಸ ಬಗೆಯ ಹೊಸ ತೊಡವುಗಳನ್ನು ಪಡೆಯಲು ಕಾರಣಗಳ ದಿಕ್ಸೂಚಿಯೂ ಆಗುತ್ತಿದೆ.

# ವಿಜ್ಞಾನವನ್ನು ಕುರಿತ ಕೃತಿಗಳು

ಶ್ರೀಕಂಠೇಶ್ವರಸ್ವಾಮಿ
ಎಂ. ಆರ್. ನಾಗರಾಜು

ಯಾವುದೇ ಭಾಷೆಯಲ್ಲಿ ಸೃಜನಶೀಲ ಕೃತಿಗಳಿಗೆ ಹೋಲಿಸಿದರೆ ಸೃಜನೇತರ ಪುಸ್ತಕಗಳಾದ ವಿಚಾರ ಸಾಹಿತ್ಯ ಮತ್ತು ಶಾಸ್ತ್ರ ಸಾಹಿತ್ಯ, ಕಡಿಮೆ ಪ್ರಮಾಣದಲ್ಲಿರುತ್ತವೆ. ಕನ್ನಡದ ಮಟ್ಟದಲ್ಲಿ ಹೇಳುವುದಾದರೆ ಸೃಜನಶೀಲತೆಯ ಅಗಾಧತೆಯ ಮುಂದೆ ವಿಚಾರ ಸಾಹಿತ್ಯ ನಗಣ್ಯವೆನಿಸುವಷ್ಟು ಕಡಿಮೆ, ಇದರ ವಿಭಾಗವಾದ ವಿಜ್ಞಾನ ಹಾಗೂ ತಂತ್ರಜ್ಞಾನವನ್ನು ಕುರಿತಾದ ಪುಸ್ತಕಗಳ ಸಂಖ್ಯೆ ಇನ್ನೂ ಕಡಿಮೆ. ವಿಜ್ಞಾನ ಹಾಗೂ ತಂತ್ರಜ್ಞಾನ ಜನಸಾಮಾನ್ಯರ ಜೀವನ ಮಟ್ಟವನ್ನು ಸುಧಾರಿಸಿದೆಯೇ ಹೊರತು ಇನ್ನು ಚಿಂತನಾಕ್ರಮವಾಗಿ ಜನಜೀವನದಲ್ಲಿ ಬೆರಿತಿಲ್ಲವೆಂಬ ಕಾರಣವು ಸಹ ಇರಬಹುದು.

ವಿಜ್ಞಾನ ಸಾಹಿತ್ಯಗಳ ಪೈಕಿ ಬಹುಳ್ಯದ ದೃಷ್ಟಿಯಿಂದ ವೈದ್ಯಕೀಯ ವಿಜ್ಞಾನ ಸಾಹಿತ್ಯಕ್ಕೆ ಮೊದಲ ಸ್ಥಾನ ದೊರಕಿದೆ. ಏಕೆಂದರೆ ವೈದ್ಯಕೀಯ ಕ್ಷೇತ್ರಗಳ ಮಾಹಿತಿಯು ಜನಸಾಮಾನ್ಯರಿಗೆ ನೇರ ಉಪಯುಕ್ತತೆಯನ್ನು ನೀಡುತ್ತದೆಂಬ ಕಾರಣವಿರಬಹುದು. ಬೇರೆ ಬೇರೆ ವಿಜ್ಞಾನ ಕ್ಷೇತ್ರಗಳಲ್ಲಿನ ಮಾಹಿತಿಯು ಜನಸಾಮಾನ್ಯರಿಗೆ ದೊರೆತರೆ ತಮ್ಮ ಜೀವನಮಟ್ಟ ಸುಧಾರಿಸಿಕೊಳ್ಳಲು ಸಹಾಯವಾಗಬಹುದು.

ಇಂತಹ ಸಂಕ್ರಮಣ ಸ್ಥಿತಿಯಲ್ಲಿ ಪುಸ್ತಕಗಳ ಕೊರತೆ ತೀವ್ರವಾಗಿ ಇರುವಾಗ ಕಟುವಾದ ವಿಮರ್ಶೆ ಪುಸ್ತಕಗಳ ಬೆಳವಣಿಗೆಯನ್ನು ಕುಂಠಿತಗೊಳಿಸಬಹುದು. ಈ ಲೇಖನವು ಯಾವುದೇ ಪುಸ್ತಕದ ವಿಮರ್ಶೆಯ ಗೋಜಿಗೆ ಹೋಗದೆ, ಓದುಗರು ಆ ಕೃತಿಯಲ್ಲಿ ನಿರೀಕ್ಷಿಸಬಹುದಾದ್ದದ್ದೇನು? ಆ ಕೃತಿಯ ಪ್ರಸಕ್ತತೆ ಏನು? ಎಂದು ಪರಿಚಯ ಮಾಡಿಕೊಡುವ ಒಂದು ಪ್ರಯತ್ನವಾಗಿದೆ. 1991ನೇ ಸಾಲಿನಲ್ಲಿ ಪ್ರಕಟವಾದ ವಿಜ್ಞಾನ ಸಾಹಿತ್ಯದ ಕೃತಿಗಳಲ್ಲಿ ಕೆಲವನ್ನು ನಮಗೆ ಒದಗಿಸಿದ್ದು ಆ ಕೃತಿಗಳ ಪರಿಚಯವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಈ ಪುಸ್ತಕಗಳೇ ಅಲ್ಲದೆ ವಿಜ್ಞಾನದ ನಿಯತಕಾಲಿಕೆಗಳಲ್ಲಿ ಬರುವ ಲೇಖನಗಳು (ಉದಾಃ ಬಾಲ ವಿಜ್ಞಾನ) ದೈನಿಕ, ಸಾಪ್ತಾಹಿಕ, ಮಾಸಿಕ, ಸ್ಮರಣ ಸಂಚಿಕೆಗಳಲ್ಲಿ ಆಗಿಂದ್ದಾಗ್ಗೆ ಪ್ರಕಟವಾಗುವ ವಿಜ್ಞಾನ ಲೇಖನಗಳು ಸಾಕಷ್ಟು

ಪ್ರಮಾಣದಲ್ಲಿ ಇರುತ್ತವೆಂಬುದು ನಾವು ಮರೆಯುವಂತಿಲ್ಲ. 1991ರಲ್ಲಿ ಪ್ರಕಟವಾದ ಕೆಲ ವಿಜ್ಞಾನ ಕೃತಿಗಳ ಪರಿಚಯ :–

ಅ) **ಮಾನವನ ಮಿದುಳು** : ಲೇಖಕರು : ಯಮುನಾ ಬಾಯಿ ಆರ್. ರಾವ್ ಮತ್ತು ಎಂ. ಆರ್. ರಾಘವೇಂದ್ರರಾವ್.

ಮಿದುಳಿನ ಸಾಮರ್ಥ್ಯಕ್ಕೆ ಸವಾಲೆಸೆಯುವ ಕಂಪ್ಯೂಟರ್ ಯುಗ ಪ್ರಾರಂಭವಾದ ನಂತರವು ಸಹ ಮಿದುಳು ಒಂದು ನಿಗೂಢ ಪೆಟ್ಟಿಗೆಯಾಗಿದೆ (Black Box) ಕೇವಲ ಚಿಂತನೆ, ತಾರ್ಕಿಕತೆಯಲ್ಲದೆ, ಜೀವಕೋಶಗಳ ನಿರ್ವಹಣೆ ಹಾಗೂ ಭಾವ ಸಂವೇದನೆಗಳಿಗೂ ಕೇಂದ್ರವಾಗಿರುವ ಮಿದುಳು ತನ್ನ ವಿಶಿಷ್ಟತೆಗಳನ್ನು ಕಾಯ್ದುಕೊಂಡು ಬಂದಿದೆ. ಇತ್ತೀಚಿನ ಸಂಶೋಧನೆಗಳ ಫಲಿತಾಂಶದಿಂದ ಉಂಟಾದ ಅರಿವನ್ನು ಜನರಿಗೆ ಒದಗಿಸುವುದು ಈ ಕೃತಿಯ ಉದ್ದೇಶವಾಗಿದೆ. ವಿಜ್ಞಾನದ ಸಂಶೋಧನಾ ಪತ್ರಿಕೆಗಳಲ್ಲಿಯೂ ಆಗಿಂದಾಗ್ಗೆ ಸಮಕಾಲಿನ ಬೆಳವಣಿಗೆಯವರೆಗಿನ ಮಾಹಿತಿಯನ್ನು ಸಮಗ್ರೀಕರಿಸುವ (up-dating) ಪ್ರಯತ್ನ ಇಲ್ಲಿ ನಡೆದಿರುತ್ತದೆ. ಇಲ್ಲಿ ಒದಗಿಸಿರುವ ಮಾಹಿತಿಯು ಅತ್ಯಂತ ಉಪಯುಕ್ತವಾಗಿರುವುದು ಮತ್ತು ನೇರವಾದ ನಿರೂಪಣೆಯಿಂದ ಕೂಡಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ಇಂತಹ ಕೃತಿಗಳು ಆಕರಗ್ರಂಥವಾಗಬಲ್ಲವು ಹಾಗೂ ಈ ಕ್ಷೇತ್ರಗಳಲ್ಲಿ ಬೋಧನೆ ಹಾಗೂ ಅಭ್ಯಾಸ ಮಾಡುವ ಶಿಕ್ಷಕರಿಗಂತೂ ಇಂತಹ ಕೃತಿಗಳ ಅಗತ್ಯವಿದೆಯೆಂದು ಬೇರೆ ಹೇಳಬೇಕಾಗಿಲ್ಲ. ವಿವಿಧ ಕ್ಷೇತ್ರಗಳ ಪರಿಣಿತರು ತಂತಮ್ಮ ಕ್ಷೇತ್ರಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಕನ್ನಡದಲ್ಲಿ ಒದಗಿಸಲು ಮನಸ್ಸು ಮಾಡಿದರೆ ಕನ್ನಡಿಗರ ಜ್ಞಾನಭಿವೃದ್ಧಿ, ಕನ್ನಡಾಭಿವೃದ್ಧಿಗಳೆರಡು ಏಕಕಾಲದಲ್ಲಿ ನಡೆಯುವುದು. ಈ ಕೃತಿ ರಚನೆಯಲ್ಲಿ ಲೇಖಕರ ವೈಜ್ಞಾನಿಕ ಮನೋಭಾವದ ಚಿಂತನೆಯನ್ನು ಸಹ ಗಮನಿಸಬಹುದಾಗಿದೆ.

ಆ) **ಜೀವ ಸಂಕುಲಗಳ ಉಗಮ** : (ಚಾರ್ಲ್ಸ್ ಡಾರ್ವಿನ್‌ನ ದಿ ಆರಿಜನ್ ಆಫ್ ಸ್ಪೀಷಿಸ್‌ನ ನೇರ ಅನುವಾದ) **ಅನುವಾದಕರು : ಕೆ. ಪುಟ್ಟಸ್ವಾಮಿ**

ಚಾರ್ಲ್ಸ್ ಡಾರ್ವಿನ್‌ನು ಎಚ್.ಎಂ. ಎಸ್. ಬೀಗಲ್ ಹಡಗಿನಲ್ಲಿ ಕುಳಿತು ಐದು ವರ್ಷಗಳಲ್ಲಿ ಸಂಗ್ರಹಿಸಿದ ಜೀವಿಗಳ ಹಾಗೂ ಭೂವೈಜ್ಞಾನಿಕ ಸಂಬಂಧದ ವಿವರಗಳನ್ನು ತನ್ನ "ದಿ ಆರಿಜನ್ ಆಫ್ ಸ್ಪೀಷಿಸ್' ಎಂಬ ಗ್ರಂಥದಲ್ಲಿ ಪ್ರಕಟಿಸಿದ್ದಾನೆ. ಈ ಗ್ರಂಥದ ನೇರ ಅನುವಾದವೇ 'ಜೀವ ಸಂಕುಲಗಳ ಉಗಮ'.

ಓದುವ ಹವ್ಯಾಸ ಕಡಿಮೆಯಾಗಲು ಪುಸ್ತಕಗಳ ಕೊರತೆಯು ಒಂದು ಕಾರಣ. ಅದರಲ್ಲೂ ವಿಜ್ಞಾನದ ವಿದ್ಯಾರ್ಥಿಗಳು ಪಠ್ಯಪುಸ್ತಕಗಳನ್ನು ಓದದೇ ಅಧ್ಯಾಪಕರ ನೋಟ್ಸನ್ನು ಅವಲಂಬಿಸುವ ವಿಚಿತ್ರ ಪರಿಪಾಠ ಚಾಲ್ತಿಯಲ್ಲಿದೆ. ಓದಬಯಸುವ ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ವಿಜ್ಞಾನದ ಪಠ್ಯಪುಸ್ತಕಗಳು ಸಾಕಷ್ಟು ಸಂಖ್ಯೆಯಲ್ಲಿ ಲಭ್ಯವಿಲ್ಲ. ಆದರೆ ಕೇವಲ ಪಠ್ಯಪುಸ್ತಕಗಳೇ ಅಲ್ಲದೆ,

ವಿಜ್ಞಾನಿಯ ಸಂಶೋಧನೆಗಳ ಬಗ್ಗೆ ಮೂರನೇ ಹಂತದ ಮಾಹಿತಿ ಪಡೆಯುವ ವಿದ್ಯಾರ್ಥಿಗಳಿಗೆ ಅವರ ವಿದ್ಯಾರ್ಥಿ ದೆಸೆಯಲ್ಲೂ, ಅನಂತರದ ದಿನಗಳಲ್ಲೂ ವಿಜ್ಞಾನಿಯ ಮೂಲಕೃತಿಯನ್ನು ಓದಬೇಕೆಂಬ ಕುತೂಹಲವೆನಿಸಿದರೆ ಅಂತಹ ಪುಸ್ತಕಗಳ ಅಗತ್ಯವೂ ಇದ್ದದ್ದೆ. ಆ ಅಗತ್ಯವನ್ನು ಕನ್ನಡದಲ್ಲಿ ಪೂರೈಸಲು ಮಾಡಿರುವ ಅಪರೂಪದ ಪ್ರಯತ್ನವೇ ''ಜೀವ ಸಂಕುಲಗಳ ಉಗಮ'' ಕೃತಿಯ ಅನುವಾದ. ಕೇವಲ ನಾಲ್ಕು ಶಬ್ದಗಳಲ್ಲಿ ವಿಸ್ತಾರವಾಗಿ ವಿವರಿಸುವ ಡಾರ್ವಿನ್‌ನ ವಿಕಾಸವಾದದಲ್ಲಿ ವಿಜ್ಞಾನಿಯ ಸೂಕ್ಷ್ಮಾವಲೋಕನವಾಗಲಿ, ಸೂಕ್ಷ್ಮಭಿಜ್ಞತೆಯಾಗಲಿ ಸ್ಪಷ್ಟವಾಗುವುದಿಲ್ಲ. ವಿಕಾಸವಾದವನ್ನು ಜನಪ್ರಿಯಗೊಳಿಸುವ ಪ್ರಯತ್ನ ಇದಲ್ಲವಾದರೂ ಸಹ ಈ ಕೃತಿಗೆ ತನ್ನದೇ ಆದ ಮಹತ್ವವಿದೆ. ಈ ಕೃತಿಯಲ್ಲಿ ವಿಜ್ಞಾನದ ಪರಿಕಲ್ಪನೆಗಳ ಹಿಂದಿರುವ ಪರಿಶ್ರಮದ ಪರಿಚಯ ಮಾಡಿಕೊಡಲಾಗಿದೆ. ಈ ಪ್ರಶಂಸನೀಯ ಪ್ರಯತ್ನಕ್ಕೆ ಲೇಖಕರು ಸ್ತುತ್ಯಾರ್ಹರು.

(ಇ) **ಪ್ಲಾಂಕ್ ಐನ್‌ಸ್ಟೈನ್ ಬೋರ್** : ಜಿ.ಟಿ. ನಾರಾಯಣರಾವ್ : ಈ ಕೃತಿ ಮೂವರು ಭೌತಶಾಸ್ತ್ರದ ಮೇರು ವ್ಯಕ್ತಿಗಳ ಕುರಿತಾದ ಬರವಣಿಗೆಯ ಸಂಕಲನ. ಇದು ಪ್ಲಾಂಕ್, ಐನ್‌ಸ್ಟೈನ್ ಬೋರ್ ಅವರುಗಳ ಜೀವನ ಚರಿತ್ರೆ ಹಾಗೂ ಸಾಧನೆಗಳನ್ನು ಪೂರವಾಗಿ ಒಳಗೊಂಡ ಅಪೂರ್ವ ಪ್ರಯತ್ನ. ಸ್ವತಃ ಅಧ್ಯಾಪಕರು, ನುರಿತ ಬರಹಗಾರರು, ವಿವಿಧ ಕ್ಷೇತ್ರಗಳಲ್ಲಿ ಆಸಕ್ತಿ ತಳೆದ ಲೇಖಕರು ನಿರೂಪಣೆಯಲ್ಲಿ ಖಚಿತತೆಗೆ ಕುಂದುಬಾರದ ರೀತಿಯಲ್ಲಿ ವಿವರಣೆ ನೀಡಿದ್ದಾರೆ. ವಿಜ್ಞಾನ ಬೋಧನೆಯಲ್ಲಿ ನೀರಸತೆಗೆ ಪ್ರತಿಕ್ರಿಯೆ ನೀಡುವ ಸಲುವಾಗಿ ಲೇಖಕರು ಸಂದರ್ಭಕ್ಕೆ ತಕ್ಕಂತೆ ಭಾವ ಸನ್ನಿವೇಶಗಳನ್ನು ತಾವೇ ರೂಪಿಸಿಕೊಂಡ ವಾಕ್ಯಗಳಲ್ಲಿ ಬಣ್ಣಿಸಿರುವುದನ್ನು ಗಮನಿಸಬಹುದಾಗಿದೆ. ಜನ ಸಾಮಾನ್ಯರಿಗೆ ಈ ಲೇಖಕರ ಬರವಣಿಗೆಯನ್ನು ಗ್ರಹಿಸುವುದು ಕಷ್ಟ. ಆದರೂ ವಿಜ್ಞಾನ ವಿಷಯುಗಳಲ್ಲಿ ಲೇಖನಗಳನ್ನು ಬರೆಯುವವರಿಗೆ ವಿಶಿಷ್ಟ ರೀತಿಯಲ್ಲಿ ಕೆಲವು ಮಾದರಿಗಳನ್ನು ಈ ಕೃತಿ ಒದಗಿಸಬಲ್ಲದು. ಇವರ ಇತರೇ ಕೃತಿಗಳ ಹಿನ್ನೆಲೆಯಲ್ಲಿ ಈ ಕೃತಿಯನ್ನು ಅವಲೋಕಿಸಿದಾಗ ಲೇಖಕರನ್ನು ಕಾಡಿದ ಸಂಗತಿರೂಪಕಗಳು ಇಲ್ಲಿ ಪುನರಾವರ್ತನೆಯಾಗಿರುವುದನ್ನು ಗಮನಿಸಬಹುದಾಗಿದೆ.

**(ಈ)** (i) **ಭೂಮಿಯ ವಯಸ್ಸು** (ii) **ಭೂಗರ್ಭಯಾತ್ರೆ** : ಟಿ.ಆರ್. ಅನಂತರಾಮು. : ಜನಪ್ರಿಯ ವಿಜ್ಞಾನ ಲೇಖನವನ್ನು ರಚಿಸುವಾಗ ಪಾರಿಭಾಷಿಕ ಪದಗಳ ಗೊಂದಲವಿಲ್ಲದೆ ಸರಳ ಭಾಷೆಯ ಬಳಕೆ ವಿಜ್ಞಾನದ ಮಾಹಿತಿಗಳನ್ನು ನೀಡುವಾಗ ಕುತೂಹಲಕರ ಅನ್ವೇಷಣೆಯಂತೆ ವಿವರಿಸಬೇಕು. ಈ ಸೂತ್ರಗಳನ್ನಲ್ಲದೆ ಜನರಿಗೆ ಸುಪರಿಚಿತವಾದ ನುಡಿಗಟ್ಟು, ಮುಂತಾದ ಭಾಷಾ ಕಸರತ್ತುಗಳನ್ನು ಬಳಸಿ ಸುಲಭವಾಗಿ ಈ ಕೃತಿಗಳಲ್ಲಿ ಅಳವಡಿಸಿ ವಿಷಯ ವಿವರಣೆ ನಿರೂಪಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ಈ ಕೃತಿಗಳಲ್ಲಿ ಲೇಖಕರು ಭೂಮಿಯ

ವಯಸ್ಸನ್ನು ಕುರಿತಂತೆ ಬಂದ ವಾದ ವಿವಾದಗಳಲ್ಲಿ ಪ್ರಮುಖವಾದವುಗಳನ್ನು ಕಾಲಾನುಕ್ರಮಣಿಕೆಯಲ್ಲಿ ಜೋಡಿಸಿದ್ದಾರೆ ಮತ್ತು ಭೂಮಿಯ ಅಂತರಾಳದಲ್ಲಿನ ನಿಸರ್ಗ ಸಂಪತ್ತಿನ ಬಗ್ಗೆ ಹಾಗೂ ಮನುಷ್ಯನ ಬದುಕಿಗೆ ಮಾರಕವಾಗುವಂತಹ ವಿಸ್ಮಯ ಕ್ರಿಯೆಗಳಾದ ಭೂಕಂಪ, ಜ್ವಾಲಾಮುಖಿಗಳ ಬಗ್ಗೆ ವಿವರಣೆ ನೀಡಿದ್ದಾರೆ. ಲೇಖಕರು ಸ್ವತಃ ಭೂಗರ್ಭ ವಿಜ್ಞಾನಿಯಾಗಿರುವುದರಿಂದ ಜನಸಾಮಾನ್ಯರಿಗೆ ಹಾಗೂ ಮಕ್ಕಳಿಗೆ ಭೂ ವಿಷಯಗಳನ್ನು ಅವರ ವ್ಯಾಪ್ತಿ ಇತಿಮಿತಿಗಳಿಗನುಗುಣವಾಗಿ ತಿಳಿಸಲು ಪ್ರಯತ್ನಿಸಿದ್ದಾರೆ. ಲೇಖಕರು ವಿಷಯ ನಿರೂಪಣೆಯಲ್ಲಿ ಲವಲವಿಕೆಯನ್ನು ಪ್ರದರ್ಶಿಸಿರುವುದು ಗಮನಾರ್ಹ, ಹೀಗಾಗಿ ಜನಸಾಮಾನ್ಯರಲ್ಲದೆ ಜನಪ್ರಿಯ ವಿಜ್ಞಾನ ಲೇಖಕರು ಈ ಕೃತಿಗಳನ್ನು ಓದಬಹುದು.

(ಉ) **ಮಗು ಮತ್ತು ಮರ** : ಎಸ್. ಜಿ. ಶ್ರೀಕಂಠೇಶ್ವರಸ್ವಾಮಿ. ಈ ಕಿರುಹೊತ್ತಿಗೆಯಲ್ಲಿ ಮಗುವೊಂದು ಮರದ ಉಪಯುಕ್ತತೆಯನ್ನು ಹಂತಹಂತವಾಗಿ ಕಲಿತುಕೊಳ್ಳುವ ವಿಧಾನವನ್ನು ಸಚಿತ್ರ ವಿವರಣೆಯೊಂದಿಗೆ ನೀಡಲಾಗಿದೆ. ಇಲ್ಲಿ ಮರದ ಬಗ್ಗೆ ವಿವರಣೆ ದೊರೆಯುವುದಲ್ಲದೆ ಕಲಿಕೆಯ ಕ್ರಮದ ಬಗ್ಗೆ, ವೈಜ್ಞಾನಿಕ ವಿಧಾನವಾದ ಅವಲೋಕನೆ ಬಗ್ಗೆ ಪ್ರಸ್ತಾಪಿಸಲಾಗಿದೆ. ಇಲ್ಲಿ ಮರದ ಸಂರಕ್ಷಣೆಯು ಕಥೆಯ ರೂಪದಲ್ಲಿರುವುದರಿಂದ ಮಕ್ಕಳನ್ನು ಆಕರ್ಷಿಸುವುದು. ಕನಿಷ್ಠ ಪ್ರಮಾಣದ ಬರವಣಿಗೆಯಿರುವ ಈ ಕಿರುಹೊತ್ತಿಗೆ ನವಸಾಕ್ಷರರಿಗೆ, ಸಾಕ್ಷರತೆ ಸಾಧಿಸ ಹೊರಟವರಿಗೆ, ಸಾಕ್ಷರತೆಯೊಂದಿಗೆ ವೈಜ್ಞಾನಿಕ ಸಾಕ್ಷರತೆಯನ್ನು ಸಾಧಿಸಬಯಸುವವರಿಗೆ ಉಪಯುಕ್ತವಾದೀತು. ಮರಗಳನ್ನು ಬೆಳೆಸುವುದು ಪ್ರಸ್ತುತದ ಪರಿಸ್ಥಿತಿಯಲ್ಲಿ ಉಪಯುಕ್ತ ಪರಿಹಾರವಾದಿತೆಂಬ ಆಶಾವಾದದಲ್ಲಿ ಅಂತ್ಯವಾಗಿದೆ, ಹಾಗೂ ನೇರ ಸಂವಹನಕ್ಕೆ ಸಹ ನೆರವಾಗುತಿದೆ.

(ಊ) **ಅತೀಂದ್ರಿಯ ವಿಜ್ಞಾನ** : ಬಿ.ವಿ. ಪಟ್ಟಾಭಿರಾಮ್ : Extrasensory Perception ಎಂಬ ಪದಕ್ಕೆ ಸಂವಾದಿಯಾಗಿ ಅತೀಂದ್ರಿಯ ಜ್ಞಾನವೆಂಬ ಶಬ್ದವೇ ಹೆಚ್ಚು ಸಮರ್ಪಕವಾದದ್ದು, ಇದನ್ನು ಅತೀಂದ್ರಿಯ ಜ್ಞಾನವೆಂಬ ಪದದಿಂದ ಗುರುತಿಸಿದರೆ ಈ ಕೃತಿಯ ಶೀರ್ಷಿಕೆಯೇ ಪ್ರಶ್ನಾರ್ಹ. ಇಡೀ ಕೃತಿಯಲ್ಲಿ ಅತೀಂದ್ರಿಯ ಅನುಭವಗಳ ಬಗ್ಗೆ ಪ್ರಶ್ನಿಸಿ, ಸಂದೇಹಿಸಿ, ವಿಶ್ಲೇಷಿಸುವ ಪ್ರಯತ್ನವನ್ನು ಮಾಡದೇ ಕೇವಲ ನಂಬಿಸುವ ಪ್ರಯತ್ನವೇ ಕಂಡುಬರುತ್ತದೆ. ಪ್ರಖ್ಯಾತ ವಿಜ್ಞಾನಿಗಳ ಹೆಸರನ್ನು ಪ್ರಸ್ತಾಪ ಮಾಡಿ, ಅವರೇ ಒಪ್ಪಿಕೊಂಡಿರುವರೆಂಬ ಅಂಶವನ್ನು ಪದೇ ಪದೇ ಪ್ರಸ್ತಾಪಿಸಲಾಗಿದೆ (ಆಪ್ತವಚನ ದೋಷ!) ಇಲ್ಲಿ ವಿಷಯಗಳ ವಿವರವಾದ ಅಧ್ಯಯನವಾಗಲಿ (Case studies) ಇಲ್ಲದೆ ಕೇವಲ ಮಾಹಿತಿಗಳ ಸಂಗ್ರಹ ಎಂಬುದನ್ನು ಬಿಟ್ಟರೆ ವೈಜ್ಞಾನಿಕ ವಿಧಾನವಾಗಲಿ, ಮಾಹಿತಿಯಾಗಲಿ ದೊರೆಯುವುದಿಲ್ಲ.

(ಎ) **ಅರ್ಧ ತಲೆ ನೋವು**, ನಿಮ್ಮ ಸ್ನೇಹ ನಿಮ್ಮ ಪ್ರಭಾವ, ಉನ್ಮಾದ, ಸಂಧಿವಾತ, ಯಾವ ವ್ಯಾಧಿಗೆ ಯಾವ ಪಥ್ಯ,) ಲಕ್ವ ಪಾರ್ಶ್ವವಾಯು. ನಿಮ್ಮ

ಬೆನ್ನು, ನಿಮ್ಮ ಮೂತ್ರಜನಕಾಂಗ ಕಿಡ್ನಿ, ಜಾಂಡೀಸ್ ಕಾಮಾಲೆ, ಇದು ನಿಮಗೆ ತಿಳಿದಿರಲಿ, ಜ್ಞಾಪಕ ಶಕ್ತಿ, ಈ ಎಲ್ಲಾ ಪುಸ್ತಕಗಳ ಲೇಖಕರು ಡಾ. ಎನ್. ಕಪನೀಪತಯ್ಯ.

ಡಾ. ಎನ್. ಕಪನೀಪತಯ್ಯನವರು ಬರೆದಿರುವ ಕೃತಿಗಳು ಉಪಯುಕ್ತವಾದ ವಿಷಯಗಳಿಗೆ ಸಂಬಂಧಿಸಿರುವಂತಹವು ಎಂಬುದು ನಿರ್ವಿವಾದ. ಆದರೆ ಲೇಖಕರು ತಮ್ಮ ಕೃತಿಗಳಲ್ಲಿ ವೈದ್ಯರ ಅಪ್ಪಣೆ ಚೀಟಿಯಲ್ಲಿ ಅಲ್ಲಲ್ಲಿ ಮಾತ್ರ ಅಕ್ಷರಗಳು ಕಾಣುವಂತೆ, ಅಲ್ಲಲ್ಲಿ ಮಾಹಿತಿಗಳನ್ನು ಕಾಣಬಹುದೇ ವಿನಾ ಬಹುತೇಕ ಅಂಶಗಳು ಗೊಂದಲಮಯ ಹಾಗೂ ಕೆಲಮೊಮ್ಮೆ ತಪ್ಪು ವಿವರಣೆಗಳಿಂದ ವಿಷಯಕ್ಕೆ ಕಡಿವಾಣ ಹಾಕಿದಂತೆ ಭಾಸವಾಗುತ್ತದೆ. ಒಮ್ಮೊಮ್ಮೆ ವಿಷಯಗಳು ಹುಸಿ ವಿಜ್ಞಾನವಷ್ಟೆ ಅಲ್ಲ ತಾರ್ಕಿಕವಾಗಿಯೂ ಅಸಮಂಜಸ ವಿವರಣೆ ನೀಡುತ್ತವೆ. ಕೆಲ ಕೃತಿಗಳಲ್ಲಿ ಸಂಸ್ಕೃತವಾಕ್ಯಗಳನ್ನು ಆಧರಿಸಿ ಬರೆದಿರುವ ಸಂಗತಿಗಳನ್ನು ವಿವರಿಸುತ್ತಿರುವವರೆನ್ನುವುದಕ್ಕಿಂತ, ಸಮರ್ಥಿಸಲು ಹೆಣಗುತ್ತಿರುವಂತೆ ಕಾಣುತ್ತದೆ.

ವೃತ್ತಿಪರ ಲೇಖಕರು, ಪರಿಣಿತರಿಂದ ವಿಷಯ ಸಂಗ್ರಹಣೆ ಮಾಡಿ ಆಕರ್ಷಕವಾಗಿ ನಿರೂಪಿಸಬಲ್ಲ ಭಾಷಾ ಪಂಡಿತರು, ಪರಿಣಿತರು, ಕನ್ನಡ ವಿಜ್ಞಾನ ಸಾಹಿತ್ಯ ಕ್ಷೇತ್ರದಲ್ಲಿ ದೊರೆಯುವವರೆಗೆ ಇಂತಹ ಪಜೀತಿ ತಪ್ಪಿದ್ದಲ್ಲ.

(ಬಿ) 1. ವಿಶ್ವವಿಖ್ಯಾತ ಸಂಶೋಧಕರು–ಸಾಧನೆಗಳು,

2. ವಿಶ್ವವಿಖ್ಯಾತ ಪ್ರಕೃತಿಯ ನಿಗೂಢಗಳು,

3. ವಿಶ್ವವಿಖ್ಯಾತ ಒಳನಾಡ ಜಲರಾಶಿ,

ಈ ಮೂರು ಕೃತಿಗಳ ಶ್ರೀ ಸೂರ್ಯಕಾಂತ, ಅವರು ತಮ್ಮ ಕಿರುಹೊತ್ತಿಗೆಗಳಲ್ಲಿ ಅನೇಕ ವಿಷಯಗಳ ಬಗ್ಗೆ ತಿಳಿಸಲು ಪ್ರಯತ್ನಿಸಿ, ತೀರಾ ತೆಳುವಾದ ವಿಷಯ ನಿರೂಪಣೆಗೆ ದಾರಿ ಮಾಡಿದ್ದಾರೆ. ಸಂಶೋಧಕರು – ಸಾಧನೆ ಎಂಬ ಕೃತಿಯಲ್ಲಿ 100 ಪುಟಗಳಲ್ಲಿ 80 ವಿಜ್ಞಾನಿಗಳ ಪರಿಚಯ ನೀಡಿದ್ದಾರೆ. ಈ ಪರಿಚಯ ಸಂದರ್ಶನಗಳಲ್ಲಿ ಹೊಸ ಮಾದರಿ ಪ್ರಶ್ನೆಗಳಿಗೆ ಉತ್ತರ ಬರೆಯಲು ಕೆಲವು ಅಂಶ ಒದಗಿಸುತ್ತವೆಂಬ ಕಾರಣಕ್ಕಾಗಿ ವ್ಯಾವಹಾರಿಕ ಪ್ರಯೋಜನ ಹೊಂದಿದ ಕೃತಿಯಾಗಿದೆ. ಒಳನಾಡು ಜಲರಾಶಿ ಕೃತಿಯಲ್ಲಿ ಪ್ರಪಂಚದಲ್ಲಿರುವ ವಿವಿಧ ಸರೋವರಗಳ, ನದಿಗಳ, ಜಲಪಾತಗಳ, ಚಿಲುಮೆಗಳ ಪರಿಚಯ ಮಾಡಿದ್ದಾರೆ. ಕೊನೆಯಲ್ಲಿ ಜಲಮಾಲಿನ್ಯವೆಂಬ ಅಧ್ಯಾಯವನ್ನು ಅನವಶ್ಯಕವಾಗಿ ಸೇರಿಸಿದ್ದಾರೆ. ಪ್ರಕೃತಿಯ ನಿಗೂಢಗಳು ಎಂಬ ಕೃತಿಯಲ್ಲಿ ಖಚಿತವಾಗಿ ಉತ್ತರ ಹೇಳಲು ಸಾಧ್ಯವಿಲ್ಲದ ಕೆಲ ವಿವರಗಳನ್ನು ತಿಳಿಸಿದ್ದಾರೆ. ಲೇಖಕರು ಪ್ರತಿಯೊಂದು ಅದ್ಯಾಯಕ್ಕೆ ನೀಡಿರುವ ಶೀರೋನಾಮೆ ಕೆಲವರನ್ನು ಆಕರ್ಷಿಸಬಹುದು. ಒಟ್ಟಾರೆ ಈ ಕೃತಿಗಳ ಬಗ್ಗೆ ಹೇಳುವುದಾದರೆ ಸಂಕ್ಷೇಪವಾಗಿ ತಿಳಿಸಿರುವ ಸಂಗತಿಗಳ ಬಗ್ಗೆ ಇನ್ನು ಹೆಚ್ಚು ತಿಳಿದುಕೊಳ್ಳುವ ಹಾಗೂ ಜ್ಞಾನ ದಾಹವನ್ನು ಹಿಂಗಿಸುವಲ್ಲಿ ಈ ಕೃತಿಗಳು

ಅಷ್ಟೇನು ಸಫಲವಾಗಿಲ್ಲ. ಅಗತ್ಯ ಮಾಹಿತಿಯನ್ನು ನೀಡಹೊರಟಿರುವ ಈ ಕೃತಿಗಳಲ್ಲಿ ಮಾಹಿತಿಗಳ ಆಯ್ಕೆ ಕ್ರಮದ ಬಗ್ಗೆ, ಅದರ ಹಿಂದಿನ ಸೂತ್ರಗಳ ಬಗ್ಗೆ, ಆಧಾರ ಗ್ರಂಥಗಳ ಬಗ್ಗೆ ಸೂಚನೆ ಇಲ್ಲ. ಈ ಕೃತಿಗಳು ವರ್ಗೀಕೃತ ಮಾಹಿತಿ ಒದಗಿಸಿದರೂ ಸಹ ಅವುಗಳ ನಿರೂಪಣೆಗೆ ಎಲ್ಲೂ ಕುಂದುಬಾರದಿರುವುದು ಸಮಾಧಾನಕರ.

(೩) ವೈದ್ಯರೊಂದಿಗೆ ಮಾತುಕತೆ ಭಾಗ –1 – ಡಾ. ಸಿ. ಅನ್ನಪೂರ್ಣಮ್ಮ ಅವರು ಮಂಗಳಾ ವಾರಪತ್ರಿಕೆಯಲ್ಲಿ ಓದುಗರು ಕೇಳಿದ ಪ್ರಶ್ನೆಗಳಿಗೆ ನೀಡಿದ ಉತ್ತರಗಳ ಸಂಗ್ರಹ ಈ ಕೈಪಿಡಿ. ಇದು ದೂರ ಶಿಕ್ಷಣದ ಒಂದು ಮಾದರಿ ರೂಪವಾಗಿದೆ. ಆದರೆ ಈ ಉತ್ತರಗಳು ವಿಧಿ ನಿಷೇದಗಳನ್ನು ಹಾಗೂ ಸೂಚನೆಗಳನ್ನು ನೀಡುವುದೇ ವಿನಾಃ ಪ್ರಶ್ನೆ ಮಾಡುವವರಿಗೆ ಅಥವಾ ಅವರ ವೈಯುಕ್ತಿಕ ಆರೋಗ್ಯಕ್ಕೆ ಸಂಬಂಧಿಸ್ಪಿದಂತೆ ವಿವರ ತಿಳಿಯುವವರಿಗೆ ಈ ಕೈಪಿಡಿ ಉಪಯೋಗವಾಗುವುದಿಲ್ಲ. ಈ ಕೈಪಿಡಿ ಮೌಖಿಕ ಸಂಹವನ ರೂಪದಲ್ಲಿದ್ದು ವಿವರಣೆ ನೀಡಿದ್ದರೂ ಸಹ ರೋಚಕವಾಗಿ ಓದಿಸಿಕೊಂಡು ಹೋಗುವುದಿಲ್ಲ. ಲೇಖಕರು ಕೆಲ ಪ್ರಶ್ನೆಗಳಿಗೆ ಉತ್ತರ ನೀಡುವಾಗ ಪಾರಿಭಾಷಿಕ ಶಬ್ಧಗಳನ್ನು ಬಳಸಿ ವಿವರಣೆ ನೀಡಿದ್ದರೆ ಸಮಂಜಸವಾಗುತ್ತಿತ್ತೇನೊ ಎಂದು ಭಾಸವಾಗುತ್ತದೆ. ಒಟ್ಟಾರೆ ಹೇಳುವುದಾದರೆ ವೈದ್ಯರೊಡನೆ ನೇರ ಸಂಭಾಷಣೆಯಿಂದ ಪಡೆಯಲಾಗದ್ದನ್ನು ಬರವಣಿಗೆಯಲ್ಲಿ ನಿರೀಕ್ಷಿಸಿದರೆ ನಿರಾಶೆಯಾಗುತ್ತದೆ.

(೨) ಪ್ರಾಣಾಯಾಮ : ಹೊ.ಶಾ. ಅರುಣ್ : ಯೋಗಾಭ್ಯಾಸವನ್ನು ಕುರಿತಂತೆ ಹೊ.ಶಾ. ಅರುಣ್ ಅವರು ಬರೆದಿರುವ "ಪ್ರಾಣಾಯಾಮ" ಎಂಬ ಕೃತಿ ಇತರರಿಂದ ಸಂಗ್ರಹಿಸಿದ ವಿಷಯವನ್ನು ಲಿಖಿತರೂಪಕ್ಕಿಳಿಸುವ ಪ್ರಯತ್ನವಾಗಿದೆ. ಇಲ್ಲಿ ಸ್ವಾನುಭವದ ಅಶಗಳಾಗಲಿ, ಆಧುನಿಕ ವೈದ್ಯಶಾಸ್ತ್ರದೊಡನೆ ಹೋಲಿಕೆ ಪ್ರಾಚೀನ ವೈದ್ಯಶಾಸ್ತ್ರದೊಡನೆ ಹೋಲಿಕೆ ಮಾಡಿ ನೋಡುವುದಾಗಲಿ ಈ ಪುಸ್ತಕದ ವ್ಯಾಪ್ತಿಗೆ ಬಂದಿಲ್ಲ. ಪೌರಾತ್ಯ ಪ್ರಾಚೀನ ವೈದ್ಯಶಾಸ್ತ್ರದ ಪರಿಭಾಷೆಯಲ್ಲಿ ಬರೆದ ಈ ಪುಸ್ತಕದಲ್ಲಿ ಕೆಲವು ಮೂಲ ಅಂಶಗಳನ್ನು ಪಾತಂಜಲಿಯ ಯೋಗ ಸೂತ್ರದಿಂದ ಉದ್ಧರಿಸಲಾಗಿದೆ.

(೧೦) ನಿಮ್ಮ ಹೃದಯ : ಡಾ. ವಿ.ಎನ್. ಮೂರ್ತಿಯವರ ಕೃತಿ "ನಿಮ್ಮ ಹೃದಯ" ದಲ್ಲಿ ತಿಳಿಭಾಷೆಯಲ್ಲಿ ಹೃದಯದ ಬಗೆಗೆ ವಿವರಣೆ ನೀಡಲಾಗಿದೆ. ಆದರೆ ಚಿಕಿತ್ಸೆಯ ದೃಷ್ಟಿಯಿಂದ ಔಷಧಿಗಳ ಬಗ್ಗೆ ನೀಡಿರುವ ಮಾಹಿತಿ ಅರೆಬರೆಯಾಗಿ ಪ್ರಯೋಜನಕಾರಿಯಾಗುವುದಿಲ್ಲ. ಇದು ಯಾರಿಗಾಗಿ? ಯಾವ ಕಾರಣಕ್ಕಾಗಿ? ಬರೆಯಲಾಗಿದೆ ಎಂಬ ಪ್ರಶ್ನೆ ಲೇಖಕರನ್ನು ಸದಾ ಎಚ್ಚರಿಸಬೇಕಾಗಿರುವುದರ ಅಗತ್ಯವನ್ನು ನೆನಪು ಮಾಡಿಕೊಡಲಿದೆ.

ವಿಜ್ಞಾನ ಪುಸ್ತಕಗಳ ಅವಲೋಕನ ಮಾಡಿದರೆ ಕನ್ನಡದ ಮಟ್ಟಿಗೆ ವೈವಿಧ್ಯಮಯ ಮಾದರಿಗಳಿಗೆ ಏನು ಕೊರತೆ ಇಲ್ಲ. ವಿವಿದ ವಿಷಯಗಳಿಗೆ ಸಂಬಂಧಿಸಿದಂತೆ ವಿಷಯ ಸಂಗ್ರಹಣೆಯಲ್ಲದೆ ಆಕರ್ಷಕವಾಗಿ ಹೇಳುವ ವಿವಿಧ ಪ್ರಯತ್ನಗಳಿವೆ.

ವಿಜ್ಞಾನ ಹಾಗೂ ತಂತ್ರಜ್ಞಾನಕ್ಕೆ ಸಂಬಂದಿಸಿದಂತೆ ಜನರಿಗೆ ಮಾಹಿತಿ ಒದಗಿಸುವಾಗ ಎದುರಾಗುವ ಸಮಸ್ಯೆ ಕೇವಲ ಪಾರಿಭಾಷಿಕ ಶಬ್ದಗಳದ್ದು ಮಾತ್ರವಲ್ಲ, ನಾವು ಒದಗಿಸುವ ಮಾಹಿತಿ ಜನರಿಗೆ ಪ್ರಸಕ್ತವಾದುದ್ದೆ, ಅವರ ಚಿಂತನೆಯಲ್ಲಿ ವಿಷಯ ನಿರೂಪಣೆ ಹೇಗೆ ಎಂಬ ಸಮಸ್ಯೆಗಳ ನಡುವೆ ಲೇಖಕ ತನ್ನ ಶೈಲಿಯನ್ನು ರೂಪಿಸಿಕೊಳ್ಳಬಹುದಾದ ಅಗತ್ಯ ಇದೆ. ಉದಾಹರಣೆಗೆ ಡಾ. ಬಿ.ಜಿ. ಎಲ್. ಸ್ವಾಮಿಯಂತಹ ಲೇಖಕರು ಸೃಜನೇತರ ಕೃತಿಯನ್ನು ಸೃಜನ ಶೀಲ ಸಾಹಿತ್ಯದ ಜಾಡಿನಲ್ಲಿಯೇ ಒಯ್ಯುವ ಪ್ರಯತ್ನ ಮಾಡಿದ್ದಾರೆ. ಇಂತಹ ಅನೇಕ ಮಾದರಿಗಳನ್ನು ಅನುಸರಿಸಿ ಕನ್ನಡಕ್ಕೆ ಪರಿಚಯಿಸಬೇಕಾಗಿರುವ ಅನೇಕ ಅಧ್ಯಯನ ಕ್ಷೇತ್ರಗಳಲ್ಲಿ ಕೃತಿಗಳು ಇನ್ನು ಬರಬೇಕಾಗಿವೆ. ಈ ದಿಸೆಯಲ್ಲಿ ವಿವಿಧ ಕ್ಷೇತ್ರ ಪರಿಣಿತರು ತಮ್ಮ ಕ್ಷೇತ್ರದಲ್ಲಿ ಸಾಧನೆಯಲ್ಲದೇ ಕನ್ನಡಿಗರಿಗೆ ಆ ಕ್ಷೇತ್ರದ ಪರಿಚಯ ಮಾಡಿಕೊಡುವ ಸಾಮಾಜಿಕ ಹೊಣೆಗಾರಿಕೆ ಬಗ್ಗೆ ಜಾಗೃತರಾಗಲು ಈಗಾಗಲೇ ಪ್ರಕಟವಾಗಿರುವ ಕೃತಿಗಳು ಸ್ಫೂರ್ತಿ ನೀಡಲಿ ಎಂದು ಹಾರೈಸುತ್ತೇವೆ.

# ಸಾಹಿತ್ಯಕ ಸಂಶೋಧನೆ

***ಕರಿಗೌಡ ಬೀಚನಹಳ್ಳಿ***

೧೯೯೧ರ ಸಾಹಿತ್ಯಕ ಸಂಶೋಧನೆಗಳ ಸಮೀಕ್ಷೆಯಲ್ಲಿ ಒಟ್ಟು ಎಂಟು ಗ್ರಂಥಗಳು ಸಮಾವೇಶಗೊಂಡಿವೆ. ಇವುಗಳಲ್ಲಿ ಐದು ಪಿಎಚ್.ಡಿ. ಗ್ರಂಥಗಳು ಒಂದು, ನೇರವಾಗಿ ಜನಾಂಗವೊಂದರ ಸಂಸ್ಕೃತಿ–ಭಾಷೆಯ ಅಧ್ಯಯನಕ್ಕೆ ಸಂಬಂಧಿಸಿದ ಪುಸ್ತಕ; ಇನ್ನೊಂದು, ಗ್ರಾಮವೊಂದರ ಜಾನಪದೀಯ ಅಧ್ಯಯನಕ್ಕೆ ಸಂಬಂಧಿಸಿದ ಕೃತಿ; ಮತ್ತೊಂದು ವಿವಿಧ ಲೇಖಕರು ದಾಸ ಸಾಹಿತ್ಯದ ಬಗ್ಗೆ ಕುರಿತು ಬರೆದ ಬಿಡಿಲೇಖನಗಳ ಸಂಗ್ರಹ. ಇವುಗಳಿಗೆಲ್ಲಾ ಇರುವ ಒಂದು ಸಮಾನ ಅಂಶವೆಂದರೆ, ಇವು ಮೂಲತಃ ಸಾಹಿತ್ಯಕ ಸಂಶೋಧನೆಗಳು ಎನ್ನುವುದು. ಕೆಲವು ಕೃತಿಗಳಿಗೆ ಸಾಹಿತ್ಯ ಅಧ್ಯಯನದ ಮೂಲ ಸಾಮಗ್ರಿಯಾದರೆ, ಮತ್ತೆ ಕೆಲವು ಕೃತಿಗಳಿಗೆ ಸಾಹಿತ್ಯ ಮತ್ತು ಶಾಸನಗಳೆರಡೂ ಅಧ್ಯಯನದ ಮೂಲ ಸಾಮಗ್ರಿಗಳಾಗಿವೆ.

'ಕರ್ನಾಟಕದಲ್ಲಿ ಸತಿಪದ್ಧತಿ' ಕುರಿತ ಗ್ರಂಥ ಡಾ. ಬಿ.ಎಸ್. ಶೇಠೆ ಅವರು ಪಿ.ಎಚ್.ಡಿ. ಮಹಾಪ್ರಬಂಧ. ಇದಕ್ಕೆ ಕರ್ನಾಟಕ ವಿಶ್ವವಿದ್ಯಾನಿಲಯವು ಪಿ.ಎಚ್.ಡಿ. ಪದವಿಯನ್ನು ನೀಡಿದೆ. 'ಸತಿಪದ್ಧತಿ' ಜಾಗತಿಕ ವ್ಯಾಪ್ತಿಯ ಪ್ರಾಚೀನ ಜನಜೀವನದ ಒಂದು ಮುಖ್ಯ ಆಚರಣೆ. ಭಾರತದಲ್ಲಿ, ಹಾಗೆಯೇ ಕರ್ನಾಟಕದಲ್ಲಿ ಇದಕ್ಕೆ ಸುದೀರ್ಘವಾದ ಇತಿಹಾಸವಿದೆ. ಕರ್ನಾಟಕದ ಭಿನ್ನ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ದಾಖಲಾಗುತ್ತ ಬಂದಿರುವ ಈ ವಿಶಿಷ್ಟ ಸತಿಪದ್ಧತಿಯನ್ನು ಆದರೆಲ್ಲಾ ಆಕರಗಳ ಅಧ್ಯಯನದಿಂದ ಈ ಮಹಾ ಪ್ರಬಂಧವನ್ನು ರಚಿಸಲಾಗಿದೆ. ಮುಖ್ಯವಾಗಿ ಇದರ ರಚನೆಗೆ ಶಾಸನ, ಜನಪದ ಸಾಹಿತ್ಯ, ಇತಿಹಾಸ, ಸಂಸ್ಕೃತಿ, ಸ್ಮಾರಕಗಳು, ಗುಡಿಗಳು, ಮಾಸ್ತಿಕಲ್ಲುಗಳು, ಆಚರಣೆ ಹಾಗೂ ನಂಬಿಕೆಗಳು– ಹೀಗೆ ವಿವಿಧ ಆಕರಗಳು ಮೂಲ ಸಾಮಗ್ರಿಗಳಾಗಿವೆ.

ಈ ಮಹಾಪ್ರಬಂಧದ ಮಾರ್ಗದರ್ಶಕರಾದ ಡಾ. ಎಂ.ಎಂ. ಕಲಬುರ್ಗಿ ಅವರು ತಮ್ಮ ''ಮುನ್ನುಡಿ''ಯಲ್ಲಿ ''ಕರ್ನಾಟಕದಲ್ಲಿ ಸತಿಪದ್ಧತಿಯನ್ನು ಕುರಿತು ಈವರೆಗೆ ಕೇವಲ ಶಾಸನ ಪಾಠವನ್ನು, ಒಂದೆರಡು ಪ್ರಮುಖ ಕಾವ್ಯಗಳನ್ನು ಗಮನಿಸಿ ಮಾತ್ರ ಈ ವಿಷಯದ ಅಧ್ಯಯನ ನಡೆದಿದ್ದಿತು. ಇದರಿಂದಾಗಿ

ಸತಿಪದ್ಧತಿಯ ಅನೇಕ ಆಯಾಮಗಳು ಉಪೇಕ್ಷಿತವಾಗಿದ್ದವು: ಈ ಪ್ರಬಂಧದಲ್ಲಿ ಶಾಸನ ಪಾಠದೊಂದಿಗೆ ಶಾಸನಶಿಲ್ಪವನ್ನೂ, ಪ್ರಮುಖಕಾವ್ಯಗಳೊಂದಿಗೆ ಅಪ್ರಮುಖ (ಮಾಸ್ತಿ ದೃಷ್ಟಿಯಿಂದ ಪ್ರಮುಖ) ಕಾವ್ಯಗಳನ್ನೂ ಬಳಸಿಕೊಂಡುದಲ್ಲದೆ, ಪ್ರಥಮ ಬಾರಿಗೆ ಸಮಗ್ರ ಜನಪದ ಗದ್ಯ-ಪದ್ಯ ಸಾಹಿತ್ಯವನ್ನು ಅಳವಡಿಸಿಕೊಳ್ಳಲಾಗಿದೆ. ಇಷ್ಟರಿಂದಲೂ ಈ ಅಧ್ಯಯನ ಅಪೂರ್ಣವೆಂಬುದನ್ನು ಮನಗಂಡು ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ನಡೆಸಿ ವಿಷಯವನ್ನು ಸಂಗ್ರಹಿಸಿಕೊಂಡುದು ಈ ಪ್ರಬಂಧದ ಬಹುಮುಖ್ಯ ಸಾಧನೆಯಾಗಿದೆ. ಇದರ ಫಲವಾಗಿ ಕಂಡುಬರುವ ಮಾಸ್ತಿ ಕುರುಹುಗಳು, ಅವಳ ಹೆಸರಿನಲ್ಲಿ ನಿಲ್ಲಿಸಿದ ಅನೇಕ ಬಗೆಯ ಸ್ಮಾರಕಗಳು, ಆಕರಗಳಾಗಿ ಬಂದು, ಈ ಪ್ರಬಂಧಕ್ಕೆ ಪರಿಪೂರ್ಣತೆಯನ್ನೊದಗಿಸಿವೆ'' ಎಂದಿದ್ದಾರೆ.

ಕರ್ನಾಟಕದಲ್ಲಿನ 'ಸತಿಪದ್ಧತಿ' ಕುರಿತಂತೆ ಈ ಗ್ರಂಥದಲ್ಲಿ ಒಂದು ಸ್ಪಷ್ಟ ಚಿತ್ರಣವನ್ನು ಕಟ್ಟಿಕೊಡಲಾಗಿದೆ. ನಿಬಂಧಕಾರರು ಈ ಕ್ಷೇತ್ರದ ಬಗ್ಗೆ ತಾವು ತಾನೇ ನಡೆಸಿರುವ ಅನೇಕ ಕೃತಿಗಳ ಅಧ್ಯಯನ ಹಾಗೂ ಕ್ಷೇತ್ರಕಾರ್ಯದ ಪರಿಕರಗಳನ್ನು ಇದರ ರಚನೆಗೆ ವ್ಯವಸ್ಥಿತ ರೂಪದಲ್ಲಿ ಬಳಸಿಕೊಂಡಿದ್ದಾರೆ. ಈ ಹಿಂದೆಯೇ, ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ, ಬಸವರಾಜ ಕಲ್ಗುಡಿ ಅವರು ಆಳವಾಗಿ ಹಾಗೂ ವ್ಯಾಪಕವಾಗಿ ಅಧ್ಯಯನ ನಡೆಸಿ ಬರೆದ, 'ಮಹಾಸತಿ ಆಚರಣೆ : ಒಂದು ಅಧ್ಯಯನ' (1985) ಎಂಬ ಸಂಶೋಧನಾ ಪ್ರೌಢ ಗ್ರಂಥವನ್ನು ಬೆಂಗಳೂರು ವಿಶ್ವವಿದ್ಯಾಲಯ ಪ್ರಸಾರಂಗ ಪ್ರಕಟಿಸಿದೆ. ಇದರಲ್ಲಿರುವ ಮಾಸ್ತಿಕಾವ್ಯ ಜನಪದ ಗದ್ಯ-ಪದ್ಯ ಸಾಹಿತ್ಯ ಪ್ರಸ್ತುತ ಡಾ. ಶೆಟ್ಟಿ ಅವರ ಅಧ್ಯಯನಕ್ಕೆ ವಿಶೇಷ ನೆರವಿಗೆ ಬಂದಿರುವುದು ಗೊತ್ತಾಗುತ್ತದೆ. ಗತಕಾಲದ ಸಮಾಜದ ಪುನಾರಚನೆಗೆ ಅನೇಕ ಮಾಧ್ಯಮಗಳು ಇಂದು ಒದಗಲ್ಲಾಗಿವೆ. ಆದರೆ ಡಾ.ಶೆಟ್ಟಿ ಅವರು ತಮ್ಮ ವಿಷಯದ ಪುನಾರಚನೆಗೆ ವಿಶೇಷವಾಗಿ ಜನಪದ ಸಾಹಿತ್ಯ ಹಾಗೂ ಶಾಸನ ಸಾಮಗ್ರಿಯನ್ನು ಬಳಸಿಕೊಂಡಿದ್ದಾರೆ. ಇಂತಹ ವಿಷಯಗಳನ್ನು ವಿವರಿಸಿಕೊಳ್ಳಲು ಶಾಸನ ಒಂದೇ ಮಾಧ್ಯಮವಾಗಲಾರದು, ಅದು ಏನಿದ್ದರೂ ಒಂದು ಪಾರ್ಶ್ವಿಕ ನೋಟವನ್ನು ಮಾತ್ರ ಆ ವಿಷಯದ ಮೇಲೆ ಬೆಳಕು ಚೆಲ್ಲುವುದು - ಎಂಬ ಅರಿವು ಇತ್ತೀಚಿನ ಕೆಲವು ನಿಬಂಧಕಾರರಿಗೆ ಬರುತ್ತಿರುವುದು ಉತ್ತಮ ಪ್ರಯತ್ನವಾಗಿದೆ. ಇಂದಿನ ಕಾಲದಲ್ಲಿ ಅರ್ಥಹೀನವಾಗಿ ಕಾಣುವ ಈ 'ಸತಿಪದ್ಧತಿ' ಅಂದಿನ ಕಾಲದ ಕರ್ನಾಟಕದಲ್ಲಿ ಗಂಡನ ಮರಣದ ತಕ್ಷಣ ನಿಧನ ಹೊಂದುವ ಪತ್ನಿಯ ಆಚರಣೆಗೆ ಒಂದು ಪ್ರಮುಖ ಸಾಂಸ್ಕೃತಿಕ ಮೌಲ್ಯವಾಗಿತ್ತೆಂಬುದನ್ನು ಈ ಗ್ರಂಥದ ಅಧ್ಯಯನದಿಂದ ಅರಿಯಬಹುದಾಗಿದೆ.

ಹತ್ತು ಅಧ್ಯಾಯಗಳಲ್ಲಿ ರೂಪುಗೊಂಡಿರುವ ಈ ಗ್ರಂಥ ತನ್ನ ಸರಳ ಶೈಲಿಯಿಂದಾಗಿ ಓದುಗರ ಗಮನ ಸೆಳೆಯುತ್ತದೆ. ಅಧ್ಯಯನದ ಸ್ವರೂಪ, ಸತಿಪದ್ಧತಿಯ ಉಗಮ ಮತ್ತು ವಿಕಾಸ, ಸ್ಮಾರಕ ಅವಶೇಷಗಳು, ಸತಿ ಪದ್ಧತಿಯ

ಕಾರಣಗಳು, ಕರ್ನಾಟಕದಲ್ಲಿ ಸತಿಘಟನೆಗಳು, ಸತಿಸಂಬಂಧದ ವಿಧಿಗಳು, ಮಾಸ್ತಿಕಲ್ಲು ಹಾಗೂ ಶಿಲ್ಪಿಗಳು – ಹೀಗೆ ಉಪಯುಕ್ತವಾದ ಅಧ್ಯಾಯಗಳಿಂದ ಈ ಗ್ರಂಥ ನಿರ್ಮಾಣವಾಗಿದೆ. ಪ್ರತಿಯೊಂದು ಅಧ್ಯಾಯದಲ್ಲಿಯೂ ಶೀರ್ಷಿಕೆಗಳಿದ್ದು, ವಿಷಯ ಮಂಡನೆಗೆ ಖಚಿತತೆಯನ್ನು ತಂದುಕೊಟ್ಟಿವೆ. ಪ್ರತಿ ಅಧ್ಯಾಯದ ಕೊನೆಯಲ್ಲಿ ಅಡಿಟಿಪ್ಪಣಿ ಹಾಗೂ ಸತಿಪದ್ಧತಿಗೆ ಸಂಬಂಧಿಸಿದ ಕೆಲವು ಚಿತ್ರಗಳನ್ನೂ ಕೊಡಲಾಗಿದೆ. ಹೆರೂರು ಮಾಸ್ತಿಕಲ್ಲಂತು ಇಂತಹ ಎಲ್ಲಾ ಸಂಶೋಧನಾ ಕೃತಿಗಳಲ್ಲೂ ದೊರೆಯುತ್ತದೆ! ಈ ಕ್ಷೇತ್ರ ಹೇಗೆ ಸಂಶೋಧಕರಿಗೆ ಇನ್ನೂ ಹೇಗೆ 'ಬತ್ತಲಾರದ ಗಂಗೆ'ಯಾಗಿದೆ ಎಂಬುದರ ಬಗ್ಗೆ ನಿಬಂಧಕಾರರು ತಮ್ಮ 'ಸಮಾರೋಪ' ದಲ್ಲಿ "ಕರ್ನಾಟಕದಲ್ಲಿ ಸತಿಹೋದ ಅಮರ ಸ್ತ್ರೀಯರ ಚರಿತ್ರೆ ಹಲವು ಆಕರಗಳಲ್ಲಿ ಹಂಚಿಹೋಗಿದೆ. ಶಾಸನ, ಶಿಲ್ಪ, ಗುಡಿ, ಗೊಂಬೆ, ಸಾಹಿತ್ಯ (ಗ್ರಂಥ–ಜನಪದ–ದಿನಚರಿ–ಸಾಹಿತ್ಯ) ಇವುಗಳಲ್ಲದೆ ಮರ, ಹಳ್ಳ, ಹೊಲ, ಕಾಡು, ಕಳಸ, ಕನ್ನಡಿ, ಸೀರೆ, ವ್ಯಕ್ತಿನಾಮ, ಮನೆತನ ಈ ಮೊದಲಾದ ಆಕರಗಳಲ್ಲೂ ಸತಿಯರ ಇತಿಹಾಸ ಅಡಕಗೊಂಡಿದೆ. ಈ ಎಲ್ಲವುಗಳನ್ನೂ ಸಾಧ್ಯವಿದ್ದಮಟ್ಟಿಗೆ ಒಂದೆಡೆ ಸಂಗ್ರಹಿಸಿ, ವಿಶ್ಲೇಷಿಸಿ, ಸತಿಪದ್ಧತಿ, ಸತಿಪದ್ಧತಿಯ ಕುರಿತಾದ ಸಮಗ್ರ ಅಧ್ಯಯನ ಕೈಗೊಂಡ ಪ್ರಯತ್ನವಿದು. ಆದರೂ ಈ ವಿಷಯದಲ್ಲಿ ಇನ್ನೂ ಹಲವರಿಗೆ ಕೆಲಸ ಮಾಡಲು ಅವಕಾಶ ಇದ್ದೇ ಇದೆ. ಪ್ರತಿಜಿಲ್ಲೆಯ ಹಳ್ಳಿ–ಹಳ್ಳಿಗಳಲ್ಲಿರುವ ಸತಿಸಂಗತಿಗಳನ್ನು ಸಂಗ್ರಹಿಸುವ ಕಾರ್ಯ ಇನ್ನೂ ವ್ಯಾಪಕವಾಗಿ ನಡೆಯಬೇಕಾಗಿದೆ. ಹೀಗೆ ಕೆಲಸ ಕೈಗೊಳ್ಳುವವರಿಗೆ ಈ ಕಾರ್ಯಕ್ಷೇತ್ರ ಒಂದು ನಿಧಿಯಾಗಿದೆ" ಎಂದು ಹೇಳಿದ್ದಾರೆ. ಈ ಕ್ಷೇತ್ರದ ಬಗ್ಗೆ ತಮ್ಮದೇ ಅಂತಿಮ ನಿರ್ಣಯ ಎಂಬುದು ಈ ನಿಬಂಧಕಾರರಿಗೆ ಇಲ್ಲ; ನಿಜವಾಗಿ ಸಂಶೋಧಕನಿಗೆ ಈ ಹಮ್ಮು ಇರಲೂಬಾರದು. ಶೇರೆ ಅವರು ಇದುವರೆಗೆ ಕನ್ನಡದಲ್ಲಿ ನಡೆದಿರುವ ಸತಿಪದ್ಧತಿಯ ಅಧ್ಯಯನವನ್ನು ಮತ್ತಷ್ಟು ವಿಸ್ತರಿಸಿದ್ದಾರೆ. ಇದಕ್ಕಾಗಿ ಅವರು ಅಭಿನಂದನೆಗೆ ಪಾತ್ರರಾಗಿದ್ದಾರೆ. ಬೆಳಗಾವಿಯ ಶ್ರೀ ನಾಗನೂರು ರುದ್ರಾಕ್ಷಿ ಮಠದವರು ಇದನ್ನು ಪ್ರಕಟಿಸಿ ಉಪಕಾರ ಮಾಡಿದ್ದಾರೆ.

'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ' ಕುರಿತ ಗ್ರಂಥ ಡಾ. ಚೆನ್ನಕ್ಕ ಎಲಿಗಾರ ಅವರ ಪಿ.ಎಚ್.ಡಿ. ಮಹಾಪ್ರಬಂಧವಾಗಿದೆ. ಇದಕ್ಕೆ ಕರ್ನಾಟಕ ವಿಶ್ವವಿದ್ಯಾನಿಲಯವು ಪಿ.ಎಚ್.ಡಿ. ಪದವಿ ನೀಡಿದೆ. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ ಹೇಗೆ ಅನಾವರಣಗೊಂಡಿದೆ ಎಂಬುದರ ದಟ್ಟ ಚಿತ್ರಣವನ್ನು ಈ ನಿರೂಪಿಸಲಾಗಿದೆ. ಪ್ರಾಚೀನ ಕಾಲದ ಸಮಾಜದಲ್ಲಿ ಮಹಿಳೆಯರಿಗಿದ್ದ ಸ್ಥಾನಮಾನಗಳನ್ನು ಸಂಕ್ಷಿಪ್ತವಾಗಿ ಕಣ್ಣಿಗೆ ಕಟ್ಟುವಂತೆ ಬಣ್ಣಿಸುವ ರೀತಿಯು ಈ ಗ್ರಂಥದ ಮಹತ್ವದ ಅಂಶವಾಗಿದೆ. ಇದರಲ್ಲಿ ಹದಿಮೂರು ಅಧ್ಯಾಯಗಳಿವೆ. ಪ್ರತಿಯೊಂದಕ್ಕೂ ಒಳ ಅಧ್ಯಾಯಗಳನ್ನೂ ರೂಪಿಸಿಕೊಳ್ಳಲಾಗಿದೆ. ಸಂಶೋಧಕಿಯ ವ್ಯವಸ್ಥಿತವಾದ ಸಂಶೋಧನಾ ವಿಧಿ ವಿಧಾನ ಹಾಗೂ ಎಚ್ಚರಗಳು ಎಲ್ಲಾ

ಹಂತದಲ್ಲೂ ಎದ್ದುಕಾಣುತ್ತದೆ. ಗೃಹಣಿ ಸಮಾಜ, ಸೂಳೆ ಸಮಾಜ, ಸಾಮಾಜಿಕ ಹಾಗೂ ಆಡಳಿತ ರಂಗ ಕುರಿತ ಅಧ್ಯಾಯಗಳು ಪ್ರಾಚೀನ ಸಮಾಜದಲ್ಲಿ ಮಹಿಳೆಯ ಸ್ಥಿತಿಗತಿಗಳು ಹೇಗಿದ್ದವು ಎಂಬುದನ್ನು ವಿವರಿಸುವ ವಿಶಿಷ್ಟವಾದ ಭಾಗಗಳಾಗಿವೆ. ಗೃಹಿಣಿ ಮತ್ತು ಸೂಳೆಯರ ಬದುಕನ್ನು ಕುರಿತ ವಿವರಗಳು ಅತ್ಯಂತ ಸೂಕ್ಷ್ಮವಾಗಿವೆ. ಮಹಿಳೆಯ ವಿದ್ಯಾಭ್ಯಾಸ, ಕಲೆ, ಧರ್ಮ, ಬಲಿದಾನ, ಮಹಾಸತಿ, ವೀರಮರಣ ಕುರಿತ ವಿವರಗಳನ್ನು ಈ ಸಂಶೋಧಕಿ ಶ್ರಮಪಟ್ಟು ಕಲೆಹಾಕಿದ್ದಾರೆ. ತಮ್ಮ ಅಧ್ಯಯನಕ್ಕೆ ಬರೀ ಶಾಸನಗಳನ್ನು ಮಾತ್ರ ಇವರು ಸಾಮಗ್ರಿಯನ್ನಾಗಿ ನಂಬಿಲ್ಲ. ಅದಕ್ಕೆ ಪೂರಕವಾಗಿ ಶಿಷ್ಟ ಹಾಗೂ ಜನಪದ ಸಾಹಿತ್ಯದ ಸಾಮಗ್ರಿಯನ್ನೂ ಬಳಸಿಕೊಂಡಿರುವುದು ಮೆಚ್ಚತಕ್ಕ ಸಂಗತಿಯಾಗಿದೆ. ಡಾ. ಚೆನ್ನಕ್ಕ ಎಲಿಗಾರ ಅವರು ಇದರ ಬಗ್ಗೆ ತಮ್ಮ 'ನಿವೇದನೆ'ಯಲ್ಲಿ, 'ಶಾಸನಗಳಲ್ಲಿ ಯಾವುದೇ ಕ್ಷೇತ್ರಕ್ಕೆ ಸಂಬಂಧಿಸಿದ ವಿಷಯ ಸಿಗುವುದು ತುಂಡು ತುಂಡು ರೂಪಗಳಲ್ಲಿ ಅಲ್ಲೊಂದು ಇಲ್ಲೊಂದು ಇವುಗಳನ್ನು ಆಯ್ದುಕೊಂಡು, ಸಾಧ್ಯವಿದ್ದಲ್ಲಿ ಶಾಸನ ಪಾಠ ದೋಷಗಳನ್ನು ಪರಿಹರಿಸಿಕೊಂಡು, ಅವುಗಳ ನಿಜ ಅರ್ಥವನ್ನು ಪರಸ್ಪರ ಸಂಬಂಧವನ್ನೂ ಮನವರಿಕೆ ಮಾಡಿಕೊಂಡು ಸಂಯೋಜಕ ಪ್ರತಿಭೆಯಲ್ಲಿ ಎರಕ ಹೊಯ್ಯಬೇಕಾಗುತ್ತದೆ'' ಎಂಬ ಎಚ್ಚರವನ್ನು ಸಹಜವಾಗಿಯೇ ಹೊಂದಿದ್ದಾರೆ. ಇವರ ಮಾರ್ಗದರ್ಶಕರಾದ ಡಾ. ಎಂ. ಎಂ. ಕಲಬುರ್ಗಿ ಅವರು ತಮ್ಮ 'ಮುನ್ನುಡಿ' ಯಲ್ಲಿ ಇದರ ರಚನೆಗೆ ಬೇಕಾದ ಪೂರ್ವಸಿದ್ಧತೆ ಹಾಗೂ ಪರಿಕರಗಳ ಬಗ್ಗೆ ಕುರಿತು ''ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜವೆಂಬ ಈ ಅಧ್ಯಯನಕ್ಕೆ ಪ್ರಥಮ ಸಾಮಗ್ರಿ ಶಾಸನ, ದ್ವಿತೀಯ ಸಾಮಗ್ರಿ ಸಾಹಿತ್ಯವಾಗಿದ್ದರೂ ಇಲ್ಲಿ ಇವೆರಡರ ಸಹಾಯ ಅಗತ್ಯ. ಈ ಉಭಯ ಕ್ಷೇತ್ರಗಳ ತರಬೇತಿ ಶಕ್ತಿಯಿಂದ ವಿಷಯದುರ್ಗವನ್ನು ಪ್ರವೇಶಿಸಿದ ಡಾ. ಎಲಿಗಾರ ಅವರು ಇತಿಹಾಸದ ವಿದ್ಯಾರ್ಥಿಗಿಂತ ಭಿನ್ನವಾಗಿಯೇ ಈ ಪ್ರಬಂಧ ರಚಿಸಿದುದು ಸಹಜವೆನಿಸಿದೆ. ಈ ಸಂದರ್ಭದಲ್ಲಿ ಶಾಸನಗಳಿಂದ ವ್ಯಕ್ತವಾಗುವ ಸ್ತ್ರೀ ಸಮಾಜದ ಸಂಗತಿಗಳನ್ನು ಇವರು ಸಾಹಿತ್ಯದಿಂದ ಸಮರ್ಥಿಸಿಕೊಂಡಿದ್ದಾರೆ. ಸರಿಪಡಿಸಿಕೊಂಡಿದ್ದಾರೆ. ಹೀಗಾಗಿ ಎರಡು ಆಕರಗಳ ಏಕೀಕೃತ ಅಭ್ಯಾಸ ಇಲ್ಲಿ ಉದ್ದಕ್ಕೂ ಕಂಡು ಬರುತ್ತದೆ''– ಎಂದು ಹೇಳಿದ್ದಾರೆ. ಶಾಸನಕ್ಕಿಂತ ಸಾಹಿತ್ಯ ಕೃತಿಗೆ ಇರುವ ಉಜ್ವಲತೆಯನ್ನು ಇವರು ಮನಗಂಡಿದ್ದಾರೆ. ಬರೀ ಶಾಸನದಿಂದ ಪ್ರಾಚೀನ ಸಮಾಜದ ಮಹಿಳೆಯ ವಿವಿಧ ಅವಸ್ಥೆಗಳು, ಯಾತನೆಗಳು ದೊರೆಯಲಾರವು. ಆದರ ಅಧ್ಯಯನಕ್ಕೆ ಸಾಹಿತ್ಯಕೃತಿಯೂ ಮುಖ್ಯ ಆಕರವೆಂಬುದನ್ನು ಇವರು ಅರ್ಥೈಸಿಕೊಂಡಿರುವುದು ಶ್ಲಾಘ್ಯವಾದುದು.

ಮುಖ್ಯವಾಗಿ ಈ ಗ್ರಂಥ, ಕ್ರಿ.ಶ. ೪೫೦ ರ ಕದಂಬರಿಂದ ಮೊದಲ್ಗೊಂಡು ಕ್ರಿ.ಶ. ೧೩೩೬ರ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಕಾಲದವರೆಗಿನ ಸ್ತ್ರೀಸಮಾಜದ ಇತಿಹಾಸವನ್ನು ಒಳಗೊಂಡಿದೆ. ಕನ್ನಡ ನಾಡಿನ ಶಾಸನಗಳ

ಜೊತೆಗೆ ಅವಶ್ಯವೆನ್ನಿಸಿದ ಕಡೆ ಹೊರನಾಡಿನ ಶಾಸನಗಳನ್ನೂ ಇದರ ರಚನೆಗೆ ಬಳಸಿಕೊಂಡಿರುವುದು ಕಂಡುಬರುತ್ತದೆ. ಕನ್ನಡ ನಾಡಿನ ಇತಿಹಾಸದ ಉದ್ದಕ್ಕೂ ಬೆರತು ನಿಂತ ಮಹಿಳಾವರ್ಗವನ್ನು ಕೆಲವು ಯತ್ನಗಳ ಮೂಲಕ ವಿವರಿಸುವ ಪ್ರಬುದ್ಧವಾದ ಪ್ರಯತ್ನ ಇಲ್ಲಿ ನಡೆದಿದೆ. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಗೆ ಇರುವ ಸ್ಥಾನಮಾನ, ವಿವಿಧ ಸೌಲಭ್ಯಗಳಿಂದ ವಂಚಿತವಾದ ಅವಳ ಪ್ರತಿಭೆ, ಅವಳ ಸಮರ್ಪಣಾ ಜೀವನ ಹೀಗೆ ಮಹಿಳೆಯ ಹತ್ತಾರು ಬದುಕಿನ ರಂಗಗಳನ್ನು ಇಲ್ಲಿ ಅವಲೋಕಿಸಲಾಗಿದೆ. ಈ ಹಲವಾರು ಕಾರಣಗಳಿಂದ ಡಾ. ಚೆನ್ನಕ್ಕ ಎಲಿಗಾರ ಅವರು ಒಂದು ಉತ್ತಮ ಗ್ರಂಥವನ್ನು ಕನ್ನಡಕ್ಕೆ ನೀಡಿದ್ದಾರೆ. ತಮ್ಮ ಈ ಅಧ್ಯಯನಕ್ಕೆ ಪ್ರಾಚೀನ ಹಾಗೂ ಆಧುನಿಕ ಕನ್ನಡ ಗ್ರಂಥಗಳು, ಶಾಸನಗಳು– ಇವುಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಪ್ರತಿಯೊಂದು ಪುಟದ ಕೆಳಗೆ ಅಡಿಟಿಪ್ಪಣಿಗಳನ್ನು ನೀಡಿದ್ದಾರೆ. ತಮ್ಮ ಗ್ರಾಂಥಿಕ ಭಾಷೆಯ ನಿರೂಪಣೆಯಿಂದ ಇದಕ್ಕೆ ಒಂದು ಖಚಿತತೆಯನ್ನು ತಂದುಕೊಳ್ಳಲು ಯತ್ನಿಸಿದ್ದಾರೆ. ಸತಿಪದ್ಧತಿಗೆ ಸಂಬಂಧಿಸಿದ ಚಿತ್ರಗಳನ್ನು ಇವರೂ ಕೊಟ್ಟಿದ್ದಾರೆ. ಪದಸೂಚಿ, ಶಾಸನ ಗ್ರಂಥಗಳು, ಪತ್ರಿಕೆಗಳು, ಲೇಖನಗಳು, ಇಂಗ್ಲೀಷ್ ಗ್ರಂಥಗಳು; ಹಿಂದಿ, ಮರಾಠಿ, ಸಂಸ್ಕೃತ ಗ್ರಂಥಗಳು; ಪ್ರಾಚೀನ ಹಾಗೂ ಆಧುನಿಕ ಕನ್ನಡ ಗ್ರಂಥಗಳು– ಹೀಗೆ ಸಹಾಯಕ ಸಾಹಿತ್ಯದ ಪಟ್ಟಿಯನ್ನು ದೀರ್ಘವಾಗಿ ಕೊಟ್ಟಿದ್ದಾರೆ. ಇದು ತುಂಬಾ ಉಪಯುಕ್ತವಾದ ಆಕರ ಪಟ್ಟಿಯಾಗಿದೆ. ಕರ್ನಾಟಕ ವಿಶ್ವವಿದ್ಯಾನಿಲಯದ ಪ್ರಸಾರಾಂಗವು ಈ ಗ್ರಂಥವನ್ನು ಪ್ರಕಟಿಸಿರುವುದು ಅಭಿನಂದನೀಯ.

"ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು'' ಕುರಿತ ಗ್ರಂಥ ಡಾ. ವಿ.ಜಿ. ಪೂಜಾರ ಅವರ ಪಿ.ಎಚ್.ಡಿ. ಮಹಾ ಪ್ರಬಂಧವಾಗಿದೆ. ಇದಕ್ಕೆ ಗುಲ್ಬರ್ಗ ವಿಶ್ವವಿದ್ಯಾನಿಲಯವು ಪಿ.ಎಚ್.ಡಿ ಪದವಿ ನೀಡಿದೆ. ವೀರಶೈವ ಸಾಹಿತ್ಯದಲ್ಲಿ ಪವಾಡಗಳಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಅಸಮಾನ್ಯವಾದ ಆಶ್ಚರ್ಯವನ್ನುಂಟುಮಾಡುವ ಲೋಕ ವಿಲಕ್ಷಣವಾದ ಅದ್ಭುತ ಘಟನೆಯೇ ಪವಾಡಗಳು ಎಂದು ಹೇಳಲಾಗಿದೆ. ಬಾರತೀಯ ಸಾಹಿತ್ಯದಲ್ಲಿ ಪವಾಡ ಕಥೆಗಳು ಅಸಂಖ್ಯಾತ. ಅದರಲ್ಲೂ ವೀರಶೈವ ಸಾಹಿತ್ಯದಲ್ಲಿ ಅತ್ಯಧಿಕ. ಅವುಗಳನ್ನು ಅರ್ಥೈಸುವ, ವಿಶ್ಲೇಷಿಸುವ ಪ್ರಯತ್ನ ಈ ಗ್ರಂಥದಲ್ಲಿ ನಡೆದಿದೆ. ಇದರಲ್ಲಿ ಹರಿಹರನಿಂದ ಶಾಂತಲಿಂಗದೇಶಿಕನ ಕಾಲದವರೆಗೆ, ಅಂದರೆ ಕ್ರಿ.ಶ. ೧೨೦೦ ರಿಂದ ಕ್ರಿ.ಶ. ೧೬೭೨ ರವರೆಗಿನ, ವೀರಶೈವ ಸಾಹಿತ್ಯದಲ್ಲಿನ ಪವಾಡ ಕಥೆಗಳ ವಿವೇಚನೆ ನಡೆದಿದೆ. ಪವಾಡಗಳು ಮನುಷ್ಯನ ನಂಬಿಕೆಯನ್ನು ಪರೀಕ್ಷಿಸುತ್ತವೆ; ಮತ್ತು ಶೋಧನೆಗೆ ಒಳಗುಮಾಡುತ್ತವೆ. ಅವುಗಳ ಒಡಲಿನಲ್ಲಿ ಒಂದು ಕಾಲದ ಮನುಷ್ಯನ ಜನಜೀವನದ ವಿಧಿ ವಿಧಾನ ಹಾಗೂ ಅವನ ಮನೋಧರ್ಮದ ವಿವಿಧ ನೆಲೆಗಳು ಅಡಕವಾಗಿರುತ್ತವೆ. ಒಂದು ನಿರ್ದಿಷ್ಟ ಕಾಲಘಟ್ಟದ ಮನುಷ್ಯನ ಮನಸ್ಥಿತಿಯನ್ನು ನಿಬಂಧಕಾರರು ತಮ್ಮ ವಿಚಾರಶೀಲವಾದ ಸಮತೋಲನ

ದೃಷ್ಟಿಯಿಂದ ಸಹಜವಾಗಿಯೇ ಇದರಲ್ಲಿ ವಿವರಿಸಿದ್ದಾರೆ.

ಪ್ರಸ್ತುತ ಗ್ರಂಥದಲ್ಲಿ ಏಳು ಅಧ್ಯಾಯಗಳಿವೆ. ಪವಾಡಗಳ ಪರಿಕಲ್ಪನೆ, ಬೆಳವಣಿಗೆ, ಪ್ರೇರಣೆ, ಆಶಯ–ಮುಂತಾದವುಗಳ ಬಗ್ಗೆ ಇಲ್ಲಿ ದೀರ್ಘವಾಗಿ ಚರ್ಚಿಸಲಾಗಿದೆ. ಮುಖ್ಯವಾಗಿ, ಪವಾಡಗಳನ್ನು ಕ್ರಮವಾಗಿ ವಿಂಗಡಿಸಿ ಅವುಗಳನ್ನು ಸಾಹಿತ್ಯವಾಗಿ, ತೌಲನಿಕವಾಗಿ, ವೈಚಾರಿಕವಾಗಿ ಪರಾಮರ್ಶಿಸಲಾಗಿದೆ. ನಿಬಂಧಕಾರರು ಯಾವುದೇ ಪವಾಡವನ್ನು ಸಮರ್ಥಿಸುವುದನ್ನಾಗಲೀ, ತಿರಸ್ಕರಿಸುವುದನ್ನಾಗಲೀ ಮಾಡುವುದಿಲ್ಲ; ಸಮತೋಲನವನ್ನು ಕಾಯ್ದುಕೊಂಡಿದ್ದಾರೆ. ಡಾ. ಪೂಜಾರರು ತಮ್ಮ ಮಹಾಪ್ರಬಂಧದ ಉದ್ದೇಶವನ್ನು ವಿವರಿಸುತ್ತ, "ಪವಾಡಗಳ ಸತ್ಯಾಸತ್ಯತೆ ಏನೇ ಇರಲಿ, ಈ ಕಥೆಗಳು ನಮ್ಮ ಸಾಹಿತ್ಯದಲ್ಲಿ ಬೆಳೆದುಕೊಂಡು ಬಂದಿವೆ. ಈ ಕಥೆಗಳಿಗೆ ಪ್ರೇರಣೆಯಾಗಿ ಇದ್ದ ದಾರ್ಶನಿಕ ಅಂಶಗಳು, ಪರಂಪರೆಯ ಶ್ರದ್ಧೆಗಳು ಇವುಗಳನ್ನು ಕಂಡು ಕೊಳ್ಳುವುದು ಮತ್ತು ಈ ಕಥೆಗಳನ್ನೆಲ್ಲಾ ವೈಚಾರಿಕ ಸ್ಥರದಲ್ಲಿ ಅರ್ಥೈಸುವುದು ಒಂದು ಸಫಲವಾದ ಅಧ್ಯಯನವೆಂದು ನನ್ನಭಾವನೆ. ಅಲ್ಲದೆ ಸಾಹಿತ್ಯ ರಚನೆಗಳಾಗಿ ಈ ಕಥೆಗಳು ಬೆಳೆದುಕೊಂಡು ಬಂದಿರುವ ಕ್ರಮವೂ ಒಂದು ಕೂತೂಹಲಕಾರಿಯಾದ ಅಂಶ. ಈ ಎರಡೂ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನನ್ನೀ ಅಧ್ಯಯನ ನಡೆದಿದೆ'' ಎಂದು ತಮ್ಮ ದೃಷ್ಟಿಕೋನವನ್ನು ಹೇಳಿಕೊಂಡಿರುವುದು ಗಮನಾರ್ಹವಾದ ಅಂಶ.

ನಿಬಂಧಕಾರರು ತಮ್ಮ ವಿಷಯದ ನಿರೂಪಣೆಯಲ್ಲಿ ಭಾಷೆಯನ್ನು ಸಹಜವಾಗಿ, ನೇರವಾಗಿ ಬಳಸಿದ್ದಾರೆ. ಪ್ರತಿ ಅಧ್ಯಾಯದ ಕೊನೆಯಲ್ಲಿ ಅಡಿಟಿಪ್ಪಣಿಗಳನ್ನು ನೀಡುವಲ್ಲಿ, ವಿಪುಲವಾದ ಕಲೆಹಾಕಿದ ಸಾಮಗ್ರಿಯನ್ನು ಸರಿಯಾದ ಕ್ರಮದಲ್ಲಿ ವಿಂಗಡಿಸಿಕೊಳ್ಳುವಲ್ಲಿ ಡಾ. ಪೂಜಾರರು ತಮ್ಮ ಜಾಣ್ಮೆಯನ್ನು ತೋರಿದ್ದಾರೆ. ಅನುಬಂಧದಲ್ಲಿ ಪವಾಡ ಕಥೆಗಳ ಆಕರ ಗ್ರಂಥಗಳು ಹಾಗೂ ಪವಾಡ ಕಥೆಗಳ ಸಂಖ್ಯಾವಿವರ, ಗ್ರಂಥಸೂಚಿ, ಶಬ್ಧ ಸೂಚಿಗಳ ವಿವರಗಳನ್ನೂ ನೀಡಿದ್ದಾರೆ. ಇವು ತುಂಬಾ ಉಪಯುಕ್ತವಾಗಿದೆ. ಪವಾಡಗಳ ವಿವರಗಳನ್ನು ಕುರಿತು ವಿವರವಾಗಿ ಒಳಗೊಂಡು ಪ್ರಕಟವಾಗಿರುವ ಈ ಗ್ರಂಥ, ಈ ಕ್ಷೇತ್ರಕ್ಕೆ ಒಂದು ಗಮನಾರ್ಹ ಕೊಡುಗೆಯಾಗಿದೆ. ಪವಾಡಗಳನ್ನು ಸಾಂಸ್ಕೃತಿಕ ಮಾನವ ಶಾಸ್ತ್ರದ ಹಿನ್ನೆಲೆಯ ಜೊತೆಗೆ, ಈ ಗ್ರಂಥದ 'ಮುನ್ನುಡಿ' ಯಲ್ಲಿ ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು ಹೇಳುವ ಹಾಗೆ, "ಆಧುನಿಕ ಮನಶಾಸ್ತ್ರೀಯ ಹಿನ್ನಲೆಯಲ್ಲಿ ಪವಾಡಗಳನ್ನು ವಿಶ್ಲೇಷಿಸುವುದು ಇನ್ನೂ ಹೆಚ್ಚು ಉಪಯುಕ್ತವಾಗಬಹುದು ಅನ್ನಿಸುತ್ತದೆ. ಇದನ್ನು ಕಲ್ಬುರ್ಗಿಯ ಪುಸ್ತಕ ಅಕಾಡೆಮಿ ಸಂಸ್ಥೆಯ ಪ್ರಕಟಿಸಿ ಅಭಿನಂದನೆಗೆ ಪಾತ್ರವಾಗಿದೆ.

'ಹರಿದಾಸ ಆಂದೋಲನ' ಕುರಿತ ಗ್ರಂಥ, ಡಾ. ಎಸ್.ಕೆ. ರಾಮಶೇಷನ್' ಅವರ ಪಿ. ಎಚ್. ಡಿ ಮಹಾ ಪ್ರಬಂಧ. ಇದಕ್ಕೆ ಬೆಂಗಳೂರು ವಿಶ್ವವಿದ್ಯಾನಿಲಯವು

ಪಿ.ಎಚ್.ಡಿ. ಪದವಿ ನೀಡಿದೆ. ಇದು ತಿರುಮಲ ತಿರುಪತಿ ದೇವಸ್ಥಾನದವರ ಧನ ಸಹಾಯದಿಂದ ಪ್ರಕಟವಾಗಿದೆ. ಭಕ್ತ ಕವಿಗಳು ಮತ್ತು ಸಂತರು ತಮ್ಮ ವಿಶಿಷ್ಟ ಚಳುವಳಿಯಿಂದಾಗಿ ಮದ್ಯಕಾಲೀನ ಭಾರತೀಯ ಇತಿಹಾಸದಲ್ಲಿ ತುಂಬಾ ಕುತೂಹಲಿಗಳು. ಗಾತ್ರದಲ್ಲಿ ದೊಡ್ಡದಾದ ಈ ಗ್ರಂಥ, ಗುಣದಲ್ಲಿ ಕೆಲವು ಕೊರತೆಗಳನ್ನು ಎದುರಿಸುವುದನ್ನು ಕಾಣಬಹುದು. ಹರಿದಾಸ ಆಂದೋಲನ, ಉಗಮ, ಸ್ವರೂಪ, ವೈಶಿಷ್ಟ್ಯ, ಸಂಪ್ರದಾಯ, ಧರ್ಮ, ಸಂಗೀತ–ಮುಂತಾದ ಒಂಭತ್ತು ಅಧ್ಯಾಯಗಳಿಂದ ಕೂಡಿದೆ. ಹರಿದಾಸರು–ವಚನಕಾರರು–ಆಳ್ವಾರರು ಇವರನ್ನು ಕುರಿತ ತೌಲನಿಕ ಅಧ್ಯಾಯ ಗಮನಾರ್ಹವಾಗಿದೆ. ಡಾ. ರಾಮಶೇಷನ್ ಅವರು ತಮ್ಮ 'ಕೃತಜ್ಞತೆ'ಯ ಮಾತುಗಳಲ್ಲಿ ಈ ಗ್ರಂಥದ ಸ್ವರೂಪವನ್ನು ಕುರಿತು, ''ಜಗತ್ತಿನ ವಿವಿದೆಡೆ ನಡೆದ ಭಕ್ತಿಯ ಆಂದೋಲನಗಳಲ್ಲಿ ವಚನ ಆಂದೋಲನ, ಹರಿದಾಸ ಆಂದೋಲನ, ಸ್ಥಾಯಿ ಆಗಿವೆ. ಅವುಗಳು ವಿಶ್ವ ಸಂಸ್ಕೃತಿಗೆ ಒಂದು ಸ್ಥಿರ ಕೊಡುಗೆ. ಹರಿದಾಸ ಆಂದೋಲನ ಸಾತ್ವಿಕ ಸೌಮ್ಯ ಸ್ವರೂಪದ ಆಂದೋಲನ. ಈ ಅಧ್ಯಯನ ನಡೆಸುವ ಪ್ರಯತ್ನ ಕೈಗೊಂಡಿದ್ದೇನೆ. ನನ್ನದು ವೃತ್ತಿಯಲ್ಲಿ ಕಾರಕೂನಿಕೆ, ಪ್ರವೃತ್ತಿ– ಸಾಹಿತ್ಯ ಪರಿಚರ್ಯೆ, ಓದುವುದು, ತಿಳಿದವರ ಬಳಿ ತಿಳಿಯಲೆತ್ನಿಸುವ ಹಂಬಲ ನನ್ನದು. ಅಂತೆಯೇ ನನ್ನ ಅಧ್ಯಯನದಲ್ಲಿ ಆಳ, ಆಳವು ಇಲ್ಲವೇನೊ ಎಂಬ ಕೊರತೆ ಅನೇಕ ಬಾರಿ ಬಾಧಿಸಿದೆ'' ಎಂದು ವಿವರಿಸಿ ತಮ್ಮ ವಿನಯವನ್ನು ಪ್ರಕಟಿಸಿದ್ದಾರೆ.

ಇದರ ವ್ಯಾಪ್ತಿ ವಿಸ್ತಾರವಾದದ್ದರಿಂದ ನಿಬಂಧಕಾರರು ವಿಷಯವನ್ನು ಅಧ್ಯಯನಕ್ಕೆ ಒಗ್ಗಿಸಿಕೊಳ್ಳುವಲ್ಲಿ ಹೆಣಗಾಡಿದ್ದಾರೆ. ಹಾಗೂ, ಕೆಲವು ವೇಳೆ ಹರಿದಾಸರ ಎಷ್ಟೋ ಕೆಲವು ಕೃತಿಗಳನ್ನು ಸಹ ತಮ್ಮ ಅಧ್ಯಯನದ ತೆಕ್ಕೆಗ ತೆಗೆದುಕೊಳ್ಳಲಾಗಿಲ್ಲ. ಇದರಿಂದ ಆಗುವ ತೊಂದರೆಗಳನ್ನು ಈ ಕೃತಿಯ 'ಮುನ್ನುಡಿ''ಯಲ್ಲಿ ಡಾ. ಹಾ. ಮಾ. ನಾಯಕರು ಸರಿಯಾಗಿಯೇ ಹೇಳಿದ್ದಾರೆ. ''ಪಿ. ಎಚ್. ಡಿ. ಮಹಾಪ್ರಬಂಧ ರಚನೆಯಲ್ಲಿ ಬಹಳ ಮುಖ್ಯವಾದ ಕೆಲಸವೆಂದರೆ ಆಯ್ಕೆ ಅಭ್ಯರ್ಥಿ ಸಮರ್ಪಕವಾದ ವಿಷಯವನ್ನು ಆಯ್ಕೆ ಮಾಡಿಕೊಂಡನೆಂದರೆ ಅವನ ಕೆಲಸದ ಕಾಲುಭಾಗ ಮುಗಿಯಿತೆಂದೇ ಅರ್ಥ! ಆಯ್ದುಕೊಳ್ಳುವ ವಿಷಯದ ವ್ಯಾಪ್ತಿಯನ್ನು ಗೊತ್ತುಮಾಡಿಕೊಳ್ಳುವುದೂ ಮಹತ್ವದ ಸಂಗತಿ. ವಿಷಯದ ವ್ಯಾಪ್ತಿ ವಿಶಾಲವಾದಷ್ಟೂ ಆಳ ಕಡಿಮೆಯಾಗುತ್ತಾ ಹೋಗುತ್ತದೆ. ಡಾ. ರಾಮಶೇಷನ್ ಅವರ ಪ್ರಸ್ತುತ ಮಹಾಪ್ರಬಂಧ ಈ ಕೊರತೆಯಿಂದ ನರಳುತ್ತದೆಂದು ನನಗನ್ನಿಸುತ್ತದೆ. ಇದರಲ್ಲಿ ಅವರು ದಾಸಸಾಹಿತ್ಯದ ಸಮಗ್ರ ಆಂದೋಲವನ್ನು ಅಧ್ಯಯನ ಮಾಡಲು ಪ್ರಯತ್ನಿಸಿದ್ದಾರೆ. ನೂರಾರು ವರ್ಷಗಳ ವ್ಯಾಪ್ತಿಯ, ಹಲವಾರು ವ್ಯಕ್ತಿಗಳ ಕೊಡುಗೆಗಳಿಂದ ಕೂಡಿದ ಈ ಆಂದೋಲನವನ್ನು ಇಂಥದೊಂದು ಅಧ್ಯಯನದಲ್ಲಿ ಅಳವಡಿಸುವುದು ಸಾಧ್ಯವಾಗುವ ಮಾತಲ್ಲ. ಈ ಆಂದೋಲನದಲ್ಲಿ ಭಾಗಿಗಳಾದ ಪುರಂದರದಾಸರು, ಕನಕದಾಸರು,

ಮಹೀಪತಿದಾಸರು, ಜಗನ್ನಾಥದಾಸರು, ಪ್ರಸನ್ನವೆಂಕಟದಾಸರು – ಮೊದಲಾದವರ ಜೀವನ ಸಾಧನೆಗಳನ್ನು ಕುರಿತು ಪ್ರತ್ಯೇಕ ಮಹಾಪ್ರಬಂಧಗಳೇ ಸಿದ್ಧಗೊಂಡಿವೆ. ಆಂದೋಲನದ ಕೆಲವು ಸಂಗತಿಗಳಾದ ಉಗಮ–ವಿಕಾಸ, ಪರಂಪರೆ, ಭಕ್ತಿ, ಸಾಹಿತ್ಯ ಮೌಲ್ಯ ಮುಂತಾದುವುಗಳ ಬಗೆಗೆ ವಿಶೇಷ ಅಧ್ಯಯನಗಳೂ ನಡೆದಿವೆ. ಇಂಥ ಪರಿಸ್ಥಿತಿಯಲ್ಲಿ ಸಮಗ್ರ ಆಂದೋಲನದ ಬಗೆಗೆ ಬರೆಯುವುದು ಅನಿವಾರ್ಯವಾಗಿ ಸ್ಥೂಲ ಸಮೀಕ್ಷೆಯಾಗುತ್ತದೆ. ಇದು ಇಲ್ಲಿ ಸ್ಪಷ್ಟವಾಗಿದೆ''. ಡಾ. ಹಾ. ಮಾ. ನಾಯಕರ ಈ ಮಾತುಗಳಲ್ಲಿ ಪ್ರಸ್ತುತ ಕೃತಿಯ ಬಗ್ಗೆ ಉತ್ಪ್ರೇಕ್ಷೆ ಇಲ್ಲ. ಈ ಆಂದೋಲನದ ಬಗ್ಗೆ ಈ ಕೃತಿ ಒಂದು ಸ್ಥೂಲ ಸಮೀಕ್ಷೆಯನ್ನು ಕಟ್ಟಿಕೊಡುತ್ತದೆ. ಈ ಆಂದೋಲನವನ್ನು ಭಿನ್ನ ನೆಲೆಗಳಿಂದ ನೋಡಿ ಅಧ್ಯಯನ ಮಾಡುವ ಸಾಧ್ಯತೆ ಇತ್ತು. ಅಂದರೆ ಸಾಮಾಜಿಕ ಹಾಗೂ ಮಾನವಶಾಸ್ತ್ರದ ನೆಲೆಯಿಂದ ಸಹ ಈ ಅಧ್ಯಯನವನ್ನು ಬೆಳಸಬಹುದಿತ್ತು.

ಹರಿದಾಸ ಸಾಹಿತ್ಯ ತುಂಬಾ ವಿಸ್ತಾರವಾದುದು; ಹರಿದಾಸರು ಮೊದಲು ಭಕ್ತರು; ಅನಂತರ ಕವಿಗಳು. ಸಾಹಿತ್ಯ ಸೃಷ್ಟಿ ಅವರ ಉದ್ದೇಶವಾಗಿರಲಿಲ್ಲ. ಆದರೆ ಧರ್ಮ ಪ್ರಸಾರ, ತಾವು ನಂಬಿದ ನಂಬಿಕೆಗಳ ಮಂಡನೆ, ಆತ್ಮನಿವೇದನೆ, ಸತ್ಯದ ಸಾಕ್ಷಾತ್ಕಾರ ಇವುಗಳಿಗೆ ಅವರು ಕೃತಿಗಳು ತಕ್ಕ ಮಾಧ್ಯಮಗಳಾಗಿದ್ದವು. ಆ ಸಾಹಿತ್ಯ ಕಲಾತ್ಮಕ ಗುಣಗಳಿಂದ ಅಭಿವ್ಯಕ್ತಿ ಪಡೆಯಿತು. ಇದನ್ನೆಲ್ಲಾ ಡಾ. ರಾಮಶೇಷನ್ ಅವರ ಅನೇಕ ಆಕರಗಳ ಮೂಲಕ ಸಶಕ್ತವಾಗಿ ಅವಲೋಕಿಸಿದ್ದಾರೆ. ತಮ್ಮ ನಿರೂಪಣೆಯ ರೀತಿಯಲ್ಲಿ, ನಿರ್ಣಯದಲ್ಲಿ, ಖಚಿತತೆಯಲ್ಲಿ ಭಾಷೆಯನ್ನು ಇನ್ನೂ ಸರಳತೆಗೆ ದುಡಿಸಿಕೊಳ್ಳಬಹುದಿತ್ತು. ಪ್ರತಿ ಅಧ್ಯಾಯದ ಕೊನೆಯಲ್ಲಿ ಅಡಿಟಿಪ್ಪಣಿಗಳನ್ನು ನೀಡಿದ್ದರೂ, ಲೇಖಕರ ಹಾಗೂ ಕೃತಿಸೂಚಿಯ ವಿವರಗಳನ್ನು ನೀಡಲಾಗಿಲ್ಲ. ಅನೇಕ ಮಿತಿಗಳ ನಡುವೆಯೂ ಹರಿದಾಸ ಆಂದೋಲನದ ಸ್ವರೂಪ ಹಾಗೂ ಅವರ ಇತಿಮಿತಿಗಳನ್ನು ಈ ಮಹಾಪ್ರಬಂಧದಲ್ಲಿ ವ್ಯಾಖ್ಯಾನಿಸಲಾಗಿದೆ. ಈ ಕಾರಣದಿಂದಾಗಿ ಹರಿದಾಸ ಸಾಹಿತ್ಯ ಕ್ಷೇತ್ರಕ್ಕೆ ಇದೊಂದು ಮುಖ್ಯ ಆಕರ ಗ್ರಂಥವಾಗಿದೆ. ನಿಬಂಧಕಾರರ ಈ ಪ್ರಯತ್ನಕ್ಕಾಗಿ ಅಭಿನಂದನಾರ್ಹರು.

'ಎಂ.ಕೆ. ಇಂದಿರಾ : ಸಮಗ್ರ ಅಧ್ಯಯನ' ಕುರಿತ ಗ್ರಂಥ ಡಾ. ಮಂದಾಕಿನಿ ಪುರೋಹಿತ ಅವರ ಪಿಎಚ್.ಡಿ. ಮಹಾಪ್ರಬಂಧ. ಇದಕ್ಕೆ ಕರ್ನಾಟಕ ವಿಶ್ವವಿದ್ಯಾನಿಲಯವು ಪಿಎಚ್.ಡಿ. ಪದವಿ ನೀಡಿದೆ. ಎಂ.ಕೆ. ಇಂದಿರಾ ಅವರು ಹೊಸಗನ್ನಡದ ನವೋದಯ ಕಾಲದ ಲೇಖಕಿ. ಮಲೆನಾಡಿನ ಪರಿಸರದಿಂದ ಬಂದ ಇವರು ತಮ್ಮ ಸಾಹಿತ್ಯಕೃತಿಗಳಲ್ಲಿ ಪ್ರಗತಿಯ ಪರಂಪರೆಯನ್ನು ಸೃಷ್ಟಿಸಲು ಹೋರಾಡಿದವರು. ಇವರ ಕಥೆ, ಕಾದಂಬರಿ, ಪ್ರವಾಸ ಕಥನಗಳಿಗೆ ತಮ್ಮ ಸುತ್ತಲಿನ ಪರಿಸರದ ದಟ್ಟ ಸಮಸ್ಯೆಗಳೇ ಮೂಲ ಕೇಂದ್ರ ವಸ್ತು. ಆಧುನಿಕ ಕನ್ನಡದ ಲೇಖಕರನ್ನು, ಅದರಲ್ಲೂ ನಮ್ಮ ಸಮಕಾಲೀನದಲ್ಲಿ ಬದುಕಿರುವವರನ್ನು

ಇಂತಹ ನಿಬಂಧಗಳಿಗೆ ಅಧ್ಯಯನಕ್ಕೆ ವಸ್ತುವಾಗಿ ಆಯ್ಕೆ ಮಾಡಿಕೊಂಡಾಗ ಅನೇಕ ಬಿಕ್ಕಟ್ಟುಗಳೂ, ಸಮಸ್ಯೆಗಳೂ ಎದುರಾಗುತ್ತವೆ. ಸಮಕಾಲೀನ ಬರಹಗಾರ್ತಿ ಅಥವಾ ಬರಹಗಾರರ ಬರಹಗಳನ್ನು ಕುರಿತು ಬೆಲೆಕಟ್ಟುವುದಕ್ಕೆ ಅವರ ಬದುಕು, ಸಾಹಿತ್ಯ ದಿನಚರಿ, ಮುಂತಾದ ಆಕರಗಳು ಸಹಾಯಕ್ಕೆ ಬಂದರೂ ಅದರ ಮೂಲಕ ಎಷ್ಟರ ಮಟ್ಟಿನ ನಿಜಬೆಲೆ ಕಟ್ಟುವುದಕ್ಕೆ ಸಾಧ್ಯ ಎಂಬ ಪ್ರಶ್ನೆ ಕೊನೆಗೂ, ಸಂಶಯವಾಗಿಯೇ ಉಳಿಯುತ್ತದೆ.

'ಗೆಜ್ಜೆಪೂಜೆ', 'ಫಣಿಯಮ್ಮ' ಕಾದಂಬರಿಗಳ ಮೂಲಕ ಕನ್ನಡ ಕಾದಂಬರಿ ಲೋಕದಲ್ಲಿ ಎಂ.ಕೆ. ಇಂದಿರಾ ಅವರು ಅನನ್ಯವಾಗಿ ಉಳಿದಿದ್ದಾರೆ. ಇಂತಹ ಮಹತ್ವದ ಲೇಖಕಿಯ ಸಾಹಿತ್ಯವನ್ನು ಕೆ. ಮಂದಾಕಿನಿ ಅವರು ಸಮಗ್ರವಾಗಿ ಅಧ್ಯಯನ ಮಾಡುವ ಸಲುವಾಗಿ ಬೇರೆ ಬೇರೆ ಸಾಹಿತಿಗಳ ಭೇಟಿ, ಶ್ರೀಮತಿ ಇಂದಿರಾ ಅವರ ಜೊತೆ ಸಂದರ್ಶನ ಹಾಗೂ ಕ್ಷೇತ್ರಕಾರ್ಯ ಮಾಡಿ ತಮ್ಮ ಅಧ್ಯಯನಕ್ಕೆ ಒಂದು ಅಧಿಕೃತತೆಯನ್ನು ತಂದುಕೊಳ್ಳಲು ಸಾಕಷ್ಟು ಶ್ರಮಿಸಿದ್ದಾರೆ. ಡಾ. ಮಂದಾಕಿನಿ ಅವರು ಈ ಮಹಾ ಪ್ರಬಂಧವನ್ನು ನಿದ್ಧಪಡಿಸುವುದಕ್ಕೆ ಮುಂಚೆ ತಾವು ಮಾಡಿದ ಕ್ಷೇತ್ರಕಾರ್ಯವನ್ನು ತಮ್ಮ 'ನಿವೇದನೆ'ಯಲ್ಲಿ, ''ಇಂದಿರಾ ಅವರನ್ನು ಸಂದರ್ಶಿಸಿ ಅವರೊಡನೆ ಕೆಲಕಾಲ ಇದ್ದು ಅವರು ಮನೆತನ, ಬಾಲ್ಯಜೀವನ, ಶಿಕ್ಷಣ, ಮದುವೆ, ಸಾಂಸಾರಿಕಜೀವನ ಇವೇ ಮೊದಲಾದ ಜೀವನದ ಮಹತ್ವದ ಘಟ್ಟಗಳನ್ನು ಅವರ ಕೃತಿಗಳ ಅಧ್ಯಯನಕ್ಕೆ ಪೂರಕವಾಗಿ ತಿಳಿದುಕೊಳ್ಳುವ ಪ್ರಯತ್ನವನಿಲ್ಲಿ ಮಾಡಿದ್ದೇನೆ. ಕಥಾವಸ್ತುವಿಗನುಗುಣವಾಗಿ ಅವರ ಕಾದಂಬರಿಗಳನ್ನು ವರ್ಗೀಕರಿಸಿ ಪರಿಶೀಲಿಸಿದ್ದೇನೆ. ವಿವೇಚನೆ ಮಾಡಿದ್ದೇನೆ. ಇದುವರೆಗೆ ಅವರು ಬರೆದ ಕಥಾ ಸಂಕಲನ ಹಾಗೂ ಮತ್ತಿತರ ಕೃತಿಗಳನ್ನು ಸಮೀಕ್ಷೆ ಮಾಡಿದ್ದೇನೆ. ಅವರು ಕಾದಂಬರಿಗಳಲ್ಲಿಯ ಪಾತ್ರಗಳು ಹಾಗೂ ಅವರ ಶೈಲಿಯ ವೈಶಿಷ್ಟ್ಯ ಅವರ ಮನೋಧರ್ಮ ಹಾಗೂ ಜೀವನ ದೃಷ್ಟಿಯನ್ನು ಕುರಿತು ಅವರ ಕೃತಿಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ್ದೇನೆ'' ಎಂದು ವಿವರಣೆ ನೀಡಿದ್ದಾರೆ.

ಮಂದಾಕಿನಿ ಅವರ ಈ ಮಾತುಗಳನ್ನು ಈ ಮಹಾಪ್ರಬಂಧದ ಮಾರ್ಗದರ್ಶಕರಾದ ಬಿ.ಸಿ. ಜವಳಿ ಅವರು ತಮ್ಮ 'ಮುನ್ನುಡಿ'ಯ ಮಾತುಗಳಿಂದ ಹೀಗೆ ದೃಢೀಕರಿಸಿದ್ದಾರೆ. "ಶ್ರೀಮತಿ ಎಂ.ಕೆ. ಇಂದಿರಾ ಅವರ ಕೃತಿಗಳ ಅಧ್ಯಯನಕ್ಕೆ ಪೂರ್ವಭಾವಿಯಾಗಿ, ಅವರು ಜೀವನ ಚರಿತ್ರೆಯ ಹಲವು ಸಂಗತಿಗಳನ್ನು, ಲೇಖನ ಕೌಶಲ್ಯಕ್ಕೆ ಪ್ರೇರಣೆ ನೀಡಿದ ಅಂಶಗಳನ್ನು ಡಾ. ಮಂದಾಕಿನಿ ಪುರೋಹಿತ ಅವರು ಸುಮಾರು ಎರಡು ತಿಂಗಳ ಕಾಲ, ಶ್ರೀಮತಿ ಇಂದಿರಾ ಅವರು ಬಳಿಯೇ ಇದ್ದು, ಅವರ ತವರೂರು, ಗಂಡನ ಮನೆ ಎಲ್ಲವನ್ನೂ ಸಂದರ್ಶಿಸಿ ಅವರೆಲ್ಲರಿಂದ ಮಾಹಿತಿ ಪಡೆದು ಬೇರೆಲ್ಲಿಯೂ ದೊರೆಯದ ಸಾಮಗ್ರಿಯನ್ನು ಮೊದಲಬಾರಿಗೆ ಈ ಅಧ್ಯಯನದ ಪ್ರಬಂಧದಲ್ಲಿ ತೋರಿದ್ದಾರೆ. ಡಾ. ಮಂದಾಕಿನಿ ಅವರು ಪಟ್ಟ ಪರಿಶ್ರಮ ಸಾರ್ಥಕವಾಗಿದೆ''. ಎಂದಿದ್ದಾರೆ. ಪ್ರಸ್ತುತ ಗ್ರಂಥದಲ್ಲಿ ಒಂಭತ್ತು ಅಧ್ಯಾಯಗಳಿವೆ.

ಇವುಗಳಲ್ಲಿ ಗಮನಾರ್ಹವಾದ ಅಧ್ಯಾಯಗಳೆಂದರೆ, ಎಂ.ಕೆ. ಇಂದಿರಾ ಅವರ ಜೀವನ ದೃಷ್ಟಿ, ಶೈಲಿ ಹಾಗೂ ಅವರ ಕಾದಂಬರಿಗಳಲ್ಲಿ ಬರುವ ಮಲೆನಾಡಿನ ಚಿತ್ರ.

ಆದರೆ ಡಾ. ಮಂದಾಕಿನಿ ಅವರು ಶ್ರೀಮತಿ ಇಂದಿರಾ ಅವರ ಕಾದಂಬರಿಗಳು ಮತ್ತು ಕಥಾಸಂಕಲಗಳನ್ನು ಕುರಿತು ಬರೆದಿರುವ ಅಧ್ಯಾಯಗಳಲ್ಲಿ ನಿಬಂಧಕಾರ್ತಿ ನಾಲ್ಕೈದು ಸಾಲುಗಳಲ್ಲಿ ಅವುಗಳ ಕಥೆ ಹೇಳುವ ಸ್ಥೂಲ ಸಮೀಕ್ಷೆ ಇದೆಯೇ ಹೊರತು, ಆಳವಾದ ವಿಮರ್ಶೆ ಇಲ್ಲ. ಅವರ ಬದುಕು ಮತ್ತು ಬರಹಗಳನ್ನು ಅರ್ಥಮಾಡಿಕೊಳ್ಳಲು ಅವರ ಕೃತಿಗಳೇ ಪ್ರಥಮ ಪಠ್ಯಗಳು; ಅವುಗಳನ್ನು ನಿರ್ಮಿಸಿದ ಸಾಮಾಜಿಕ ಪ್ರೇರಣೆ, ಒತ್ತಾಸೆಗಳು ದ್ವಿತೀಯ ಪರಿಕರಗಳು; ಅವರ ಸಾಹಿತ್ಯವನ್ನು ಕುರಿತು ಬರೆದಿರುವ ವಿಮರ್ಶೆ, ಲೇಖನ, ಹೇಳಿಕೆ, ದಿನಚರಿ ಇತ್ಯಾದಿಗಳು ತೃತೀಯ ಮಟ್ಟದ ಸಹಾಯಕ ಆಕರಗಳು. ಆದರೆ ಡಾ. ಮಂದಾಕಿನಿ ಅವರು ಈ ವಿಷಯವನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿದ್ದರೂ ಅದನ್ನು ಪ್ರಸ್ತುತ ಅಧ್ಯಯನಕ್ಕೆ ಸರಿಯಾಗಿ ಹೊಂದಿಸಿಕೊಳ್ಳುವಲ್ಲಿ ತಮ್ಮ ಜಾಣ್ಮೆಯನ್ನು ತೋರಿಸಲು ಸಾಧ್ಯವಾಗಿಲ್ಲ. ಆಧುನಿಕ ಕನ್ನಡ ಸಾಹಿತ್ಯದ ಅಥವಾ ಲೇಖಕರ ಅಥವಾ ಲೇಖಕಿಯರ ಸಾಹಿತ್ಯದ ಸಂಶೋಧನೆ ಎಂದರೆ, ಅದು ಗಾಢವಾದ, ವ್ಯವಸ್ಥಿವಾದ ವಿವರಣೆ, ವ್ಯಾಖ್ಯಾನ, ವಿಮರ್ಶೆ, ನಿರ್ಣಯ ಎಂಬುದನ್ನು ತಿಳಿಯಬೇಕು. ಎಂ.ಕೆ. ಇಂದಿರಾ ಅವರ ಕಾದಂಬರಿ ಲೋಕದಲ್ಲಿ ಹೊಳೆಯುವ ಬೆಳವಣಿಗೆ, ವೈವಿಧ್ಯತೆ, ಸರಳತೆ, ಕಲಾಭಿರುಚಿ, ಹೆಣ್ಣಿನ ದಿಟ್ಟತನ, ಕೌಟುಂಬಿಕ ಸಮಸ್ಯೆ, ದಾಂಪತ್ಯದ ಸುಖದುಃಖ, ಬಾಲ್ಯ ವಿಧವಾ ವಿವಾಹ, ಅಂತರ್ಜಾತಿಯ ವಿವಾಹ, ವೇಶ್ಯಾಸಮಸ್ಯೆ– ಈ ಮುಂತಾದ ಸಂಕೀರ್ಣ ಸಮಸ್ಯೆಗಳನ್ನು ವಿವಿಧ ನಿಟ್ಟಿನಿಂದ ನೋಡುವ ವಿಶ್ಲೇಷಣೆ ಒಳಗುಪಡಿಸಬಹುದಾಗಿತ್ತು. ಯಾಕೋ ಡಾ. ಮಂದಾಕಿನಿಯವರಿಗೆ ಶ್ರೀಮತಿ ಎಂ.ಕೆ. ಇಂದಿರಾ ಅವರ ಬಗ್ಗೆ ಒಂದು ರೀತಿಯ ಪ್ರೀತಿ, ಗೌರವ, ಅನುಕಂಪ ಬಂದು ತಮ್ಮ ವಿಮರ್ಶೆಯನ್ನು ತಾವೇ ತಮ್ಮ ಸೌಮ್ಯಶೈಲಿಯಲ್ಲಿ ಕಟ್ಟಿಹಾಕಿಕೊಂಡಿದ್ದಾರೆ ಅನ್ನಿಸುತ್ತದೆ. ಅನುಬಂಧದಲ್ಲಿ ನೀಡಿರುವ ಕೃತಿಗಳ ವಿವರ, ಇಂದಿರಾ ಅವರ ಜೀವನದ ಪ್ರಮುಖ ಘಟನೆಗಳು, ಸಹಾಯಕ ಸಾಹಿತ್ಯ ಇವೆಲ್ಲಾ ಉಪಯುಕ್ತವಾದ ಮಾಹಿತಿಗಳಾಗಿವೆ. ನಿಬಂಧದ ಆಯಾಯ ಪುಟದಲ್ಲಿಯೇ ಅಡಿಟಿಪ್ಪಣಿ ನೀಡಲಾಗಿದೆ. ಆದರೆ ಈ ಗ್ರಂಥದ ಮುಖಪುಟದಲ್ಲಿ ಅಂದವಾದ ಶ್ರೀಮತಿ ಇಂದಿರಾ ಅವರ ಭಾವಚಿತ್ರ ಬಿಟ್ಟರೆ, ಗ್ರಂಥ ರಚಿಸಿದ ಲೇಖಕಿಯ ಹೆಸರೇ ಇರದಿರುವುದು ಹಾಸ್ಯಾಸ್ಪದ. ಆದರೆ ಶ್ರೀಮತಿ ಇಂದಿರಾ ಅವರ ಸಮಗ್ರ ಸಾಹಿತ್ಯವನ್ನು ಕುರಿತ ಒಂದು ಅವಲೋಕನಕ್ಕೆ ಯತ್ನಿಸಿರುವ ಡಾ. ಮಂದಾಕಿನಿ ಅವರ ಸಾಹಸವನ್ನು ಅಲ್ಲಗಳೆಯುವಂತಿಲ್ಲ. ಈ ಕಾರಣದಿಂದ ಅವರು ಅಭಿನಂದನೀಯರು. ಈ ಕೃತಿಯನ್ನು ಬೆಂಗಳೂರಿನ ಹೇಮಂತ ಸಾಹಿತ್ಯ ಪ್ರಕಾಶನ ಪ್ರಕಟಿಸಿರುವುದು ಪ್ರಶಂಸನೀಯ.

"ಸಂಕೇತಿ ಜನಾಂಗ, ಸಂಸ್ಕೃತಿ ಮತ್ತು ಭಾಷೆ' ಡಾ. ಸಿ.ಎಸ್. ರಾಮಚಂದ್ರ ಅವರು ಚೊಚ್ಚಲ ಅಧ್ಯಯನ. ಸ್ವತಃ ಸಂಕೇತಿ ಜನಾಂಗದಿಂದ ಬಂದ ಇವರು ತಮ್ಮ ಸಮುದಾಯದ ಬಗೆಗೆ ಅನೇಕ ಮಾಹಿತಿಗಳನ್ನು ಸಂಗ್ರಹಿಸಿ, ಅವುಗಳನ್ನು ಸ್ಪಷ್ಟವಾಗಿ ವಿವರಿಸುವುದರ ಮೂಲಕ ಈ ಸಂಶೋಧನಾ ಪುಸ್ತಕವನ್ನು ಸಿದ್ಧಪಡಿಸಿದ್ದಾರೆ. ಹಳೆಯ ಮೈಸೂರು ರಾಜ್ಯದಲ್ಲಿ ಸಂಕೇತಿಗಳು ಒಂದು ವಿಶಿಷ್ಟವಾದ ಪಂಗಡಕ್ಕೆ ಸೇರಿದವರು. ಈಗ ಸುಮಾರು ೨೫ ಸಾವಿರ ಸಂಕೇತಿ ಜನಗಳು ಇದ್ದಾರೆಂದು ಹೇಳಲಾಗಿದೆ. ಲೇಖಕರು ಈ ಪುಸ್ತಕದ ಪೀಠಿಕೆಯಲ್ಲಿ ತಮ್ಮ ಕೃತಿಯ ಸ್ವರೂಪವನ್ನು ಹೀಗೆ ವಿವರಿಸಿದ್ದಾರೆ. "ಸಂಕೇತಿಗಳು ಕರ್ನಾಟಕದ ದಕ್ಷಿಣ ಜಿಲ್ಲೆಗಳಾದ ಹಾಸನ, ಮಂಡ್ಯ, ಮೈಸೂರು, ಬೆಂಗಳೂರು, ಚಿಕ್ಕಮಗಳೂರು ಮತ್ತು ಶಿವಮೊಗ್ಗಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. "ಸಂಕೇತಿ" ಶಬ್ದವು ಶೈವ ಸ್ಮಾರ್ತ ಬ್ರಾಹ್ಮಣ ಪಂಗಡವನ್ನೂ, ಅವರ ಮನೆಮಾತನ್ನೂ ಸೂಚಿಸುತ್ತದೆ. ಒಂದೇ ಶಬ್ದ ಜನಾಂಗ ಮತ್ತು ಭಾಷೆ ಎರಡನ್ನೂ ತಿಳಿಸುತ್ತದೆ. 'ಸಂಕೇತಿ' ಜಾತಿ ಸೂಚಕವೂ ಹೌದು, ಭಾಷಾ ಸೂಚಕವೂ ಹೌದು. ಸಂಕೇತಿ ಜನಾಂಗದಲ್ಲಿ .ಭೌಗೋಳಿಕವಾಗಿ ನಾಲ್ಕು ಪ್ರಮುಖ ಒಳವಿಭಾಗಗಳನ್ನು ಕಾಣುತ್ತವೆ. ಕೌಶಿಕ ಸಂಕೇತಿಗಳು, ಬೆಟ್ಟದಪುರದ ಸಂಕೇತಿಗಳು, ಮತ್ತೂರು ಸಂಕೇತಿಗಳು ಮತ್ತು ಅಧಿಕ ಸಂಖ್ಯೆಯಲ್ಲಿರುವ ಪ್ರಮುಖ ಪಂಗಡ. ಆ ಕಾರಣದಿಂದಾಗಿ ಕೌಶಿಕ ಸಂಕೇತಿಗಳ ಸಂಸ್ಕೃತಿಯನ್ನು ಬಹುಪಾಲು ಗಮನಿಸಲಾಗಿದೆ. ಪ್ರಸ್ತುತ ಅಧ್ಯಯನವು ವಿವರಣಾತ್ಮಕ ಅಧ್ಯಯನವೇ ಹೊರತು ತೌಲನಿಕ ಅಧ್ಯಯನವಲ್ಲ."

ಶೈವ ಸ್ಮಾರ್ತ ದ್ರಾವಿಡ ತಮಿಳು ಪಂಗಡಕ್ಕೆ ಸೇರಿದ ಸಂಕೇತಿಗಳು ಕ್ರಮೇಣ ತಮ್ಮದೇ ಆದ ಭಾಷೆ, ಸಂಸ್ಕೃತಿಯನ್ನು ರೂಢಿಸಿಕೊಂಡಿದ್ದಾರೆ. ಈ ಜನಾಂಗದಲ್ಲಿಯೇ ಈಗ ಉಪಪಂಗಡಗಳು ಸೃಷ್ಟಿಯಾಗಿವೆ. ಇದುವರೆಗೆ ಈ ಜನಾಂಗದ ಸಂಸ್ಕೃತಿ ಮತ್ತು ಭಾಷೆಯನ್ನು ಕುರಿತು ಅಲ್ಲಲ್ಲಿ ನಡೆದಿರುವ ಕೆಲವು ಕಿರುಪುಸ್ತಕಗಳನ್ನೂ, ಬಿಡಿಲೇಖನಗಳನ್ನೂ ಲೇಖಕರು ತಮ್ಮ ಈ ಕೃತಿಯ ನಿರ್ಮಾಣಕ್ಕೆ ಸಾಮಗ್ರಿಯನ್ನಾಗಿ ಉಪಯೋಗಿಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ಕೆಲವು ವಿಶಿಷ್ಟವಾದ ಪ್ರದೇಶಗಳಲ್ಲಿ ನೆಲೆಸಿರುವ ಈ ಸಂಕೇತಿ ಜನಾಂಗಗಳಲ್ಲಿರುವ ಕೆಲವು ಹಿರಿಯ ವಕ್ತೃಗಳನ್ನು ಭೇಟಿ ಮಾಡಿ, ಆ ಜನಾಂಗದ ಸಂಪ್ರದಾಯ, ಭಾಷಿಕ, ಧಾರ್ಮಿಕ ನಂಬಿಕೆಗಳು ಹಾಗೂ ಆಚರಣೆಗಳ ಬಗ್ಗೆ ಇರುವ ವಿವರಗಳನ್ನು ಲೇಖಕರು ಅಗಾಧವಾಗಿ ಕಲೆ ಹಾಕಿದ್ದಾರೆ. ಸಂಕೇತಿ ಜನಾಂಗಗಳ ಜಾತ್ರೆ, ಧಾರ್ಮಿಕ ಕೇಂದ್ರಗಳಲ್ಲಿ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂದರ್ಶಿಸಿ, ವಿಸ್ತಾರವಾದ ಕ್ಷೇತ್ರಕಾರ್ಯ ಮಾಡಿದ್ದಾರೆ. ಅನಂತರ ಹಿರಿಯರ ಜೊತೆ ಚರ್ಚಿಸಿ, ಸೂಕ್ತವಾಗಿ ಅದನ್ನು ಅತ್ಯಂತ ಶ್ರದ್ಧೆಯಿಂದ ವಿವರಿಸಿದ್ದಾರೆ.

ಐದು ಅಧ್ಯಾಯಗಳಲ್ಲಿ ಈ ಪುಸ್ತಕದ ವ್ಯಾಪ್ತಿ ಇದೆ. ಸಂಕೇತಿಗಳ ಚಾರಿತ್ರಿಕ ಪರಿಚಯ, ಸಾಮಾಜಿಕ ಹಾಗೂ ಧಾರ್ಮಿಕ ಜೀವನ, ಸಂಪ್ರದಾಯ – ಆಚರಣೆಗಳು, ಹಬ್ಬ ಹರಿದಿನಗಳು – ನಂಬಿಕೆ ನಿಷೇಧಗಳು ಒಳಪಂಗಡ, ಆಹಾರ, ಉಡುಗೆ ತೊಡುಗೆ, ಉಪಭಾಷೆ, ಸಂಕೇತಿ ಗ್ರಾಮಗಳು, ಅವರ ಹಾಡುಗಳು, ಗಾದೆಗಳು, ಐತಿಹ್ಯಗಳು, ದಂತಕಥೆಗಳು, ಪಾರಿಭಾಷಿಕ ಶಬ್ದಸೂಚಿ, ಗ್ರಂಥ ಸೂಚಿ – ಹೀಗೆ ಹತ್ತಾರು ಸಂಗತಿಗಳು ಹಿನ್ನೆಲೆಯಲ್ಲಿ ಸಂಕೇತಿ ಜನಾಂಗದ ನಿರ್ದಿಷ್ಟ ಸಂಸ್ಕೃತಿ ಮತ್ತು ಭಾಷೆಯನ್ನು ಅಧ್ಯಯನ ಮಾಡಲಾಗಿದೆ ತಮ್ಮ ಹೊಸ ಆಲೋಚನೆಯ ಮೂಲಕ ಲೇಖಕರು ಈ ಕೃತಿಯ ಉಪಯುಕ್ತತೆಯನ್ನು ಹೆಚ್ಚಿಸಿದ್ದಾರೆ. ಸಂಕೇತಿ ಜನಾಂಗದ ಬಗ್ಗೆ ವಿಸ್ತಾರವಾದ ಜಾನಪದ ಸಾಹಿತ್ಯ ಇರುವ ಸಾಧ್ಯತೆ ಇದೆ ಎಂದು ಈ ಪುಸ್ತಕ ಓದಿದ ಮೇಲೆ ತಿಳಿಯುತ್ತದೆ. ಹಾಗಾಗಿ ಕೆಲವು ಜನಪದ ಹಾಡು, ಗಾದೆ, ಕಥೆಗಳ ಮೂಲಕ ಈ ಸಂಕೇತಿ ಜನಾಂಗವನ್ನು ವಿವರಿಸಲು ಲೇಖಕರು ಶ್ರಮಪಟ್ಟಿರುವುದು ಕಂಡು ಬರುತ್ತದೆ. ಕೆಲವು ಉತ್ತಮ ವಾದ ಸಂಕೇತಿ ಜನಾಂಗದ ಜನಪದ ಹಾಡುಗಳನ್ನೂ ಸಂಗ್ರಹಿಸಿ, ಪುಸ್ತಕದ ಕೊನೆಯಲ್ಲಿ ಕೊಟ್ಟಿದ್ದಾರೆ. ಸಂಕೇತಿಗಳ ಸಮಗ್ರ ಬದುಕು ಮತ್ತು ಭಾಷೆ ಪರಿಚಯ ಇದರಲ್ಲಿದೆ ಎಂದು ಲೇಖಕರೇ ಹೇಳಿಕೊಂಡಿದ್ದಾರೆ. ಆದರೆ ಸಂಕೇತಿಜನಾಂಗದ ಬಗ್ಗೆ ಇರುವ ಒಟ್ಟು ಜಾನಪದ ಸಾಹಿತ್ಯದ ಸಂಗ್ರಹ, ಅಧ್ಯಯನ ಆಗಬೇಕಾಗಿದೆ. ಒಟ್ಟಾರೆ ಕನ್ನಡದ ಸಾಂಸ್ಕೃತಿಕ ಮಾನವ ಶಾಸ್ತ್ರ ಅಧ್ಯಯನ ಕ್ಷೇತ್ರಕ್ಕೆ ಈ ಪುಸ್ತಕ ಒಂದು ಅಪರೂಪದ ಸೇರ್ಪಡೆಯಾಗಿದೆ. ಡಾ. ಹಾಮಾ. ನಾಯಕರು ಈ ಪುಸ್ತಕದ 'ಸ್ನೇಹನುಡಿ' ಯಲ್ಲಿ ಹೇಳಿರುವಂತೆ, 'ಇದು ಸಂಕೇತಿಗಳ ಸಾಂಸ್ಕೃತಿಕ ಕೈಪಿಡಿಯಾಗಿದೆ'. ಈ ಕಾರಣಕ್ಕಾಗಿ ಡಾ. ಸಿ. ಎಸ್. ರಾಮಚಂದ್ರ ಅವರು ಅಭಿನಂದನೆಗೆ ಪಾತ್ರರಾಗಿದ್ದಾರೆ. ಇದನ್ನು ಮೈಸೂರಿನ ಚಿತ್ರಪಲ್ಲವಿ ಪ್ರಕಾಶನ ಪ್ರಕಟಿಸಿ ಉತ್ತಮ ಕೆಲಸ ಮಾಡಿದೆ.

'ಒಂದು ಗ್ರಾಮದ ಜಾನಪದೀಯ ಅಧ್ಯಯನ' ಇದರ ಹೆಸರೇ ಸೂಚಿಸುವಂತೆ ಡಾ. ಚೆನ್ನಣ್ಣ ವಾಲೀಕಾರ ಅವರ ಒಂದು ಗ್ರಾಮದ ಜಾನಪದ ಅಧ್ಯಯನ ಕುರಿತ ಕೃತಿ. ಇದನ್ನು ಸಾಗರದ ಅಕ್ಷರ ಪ್ರಕಾಶದವರು ಪ್ರಕಟಿಸಿದ್ದಾರೆ. ಗುಲ್ಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿನ ಸಂಕರಡಗಿ ಎಂಬ ಗ್ರಾಮದ ಜನರ ವೃತ್ತಿ, ಪ್ರವೃತ್ತಿ, ಕಲೆ, ಜನಪದ ಸಾಹಿತ್ಯ ಕುರಿತು ನಡೆಸಿದ ಅಧ್ಯಯನ ಇದು. ಸಂಶೋಧಕರು ತಾವು ಈಗ ನಿಂತಿರುವ ವರ್ತಮಾನದ ನೆಲೆಯಿಂದ ಭೂತಕಾಲದ ತಮ್ಮ ಊರಿನ ಬದುಕನ್ನು ಸಾಹಿತ್ಯ ಕಲೆಗಳ ಮೂಲಕ ಪುನಾರಚನೆ ಮಾಡಿದ್ದಾರೆ. ಮಿಗಿಲಾಗಿ ತಮ್ಮ ಬಾಲ್ಯದ ಅನುಭವ ಹಾಗೂ ಈ ಹಳ್ಳಿಯ ಅಂದಿನ ದಿನಗಳನ್ನು ಇಂದಿನ ಬದಲಾವಣೆಗಳ ಜೊತೆ ಹೋಲಿಸಿ ನೋಡುವುದನ್ನು ಕಾಣಬಹುದು. ಈ ಕೃತಿಯ ಪುಟಗಳಲ್ಲಿ ಇಂತಹ ಬದಲಾವಣೆಗಳನ್ನು ಅಡಿಟಿಪ್ಪಣಿಗಳಲ್ಲಿ ನೀಡುತ್ತಾ ಹೋಗಿದ್ದಾರೆ. ಅವರೇ ಒಂದು ಕಡೆ ಹೇಳುವ ಹಾಗೆ, "ಶಂಕರಾಚಾರ್ಯರಂತೆ ಪರರ

ಅನುಭವಕ್ಕಾಗಿ ಪರಕಾಯ ಪ್ರವೇಶ ಮಾಡಿ ಅನುಭವ ಹೊಂದಿ ಬರೆಯುವುದು ಎರಡನೆ ದರ್ಜೆಯ ಬರಹವೆಂದು ನಂಬಿದವ ನಾನು ಸ್ವತಃ ಅನುಭವ ಹೊಂದಿ ಬರೆಯುವುದು ಗಟ್ಟಿ ಮತ್ತು ಬಂಗಾರ ಬರಹವಾಗುವುದು. ಆ ಕಾರಣಕ್ಕಾಗಿ ನನ್ನ ರಕ್ತವಾದ, ಒಡಲಾಳವಾದ ನನ್ನ ಹುಟ್ಟಿದೂರಾದ ಸಂಕರಡಗಿಯನ್ನು ಆರಿಸಿಕೊಂಡು ಅದನ್ನೇ ನನ್ನ ಕಾರ್ಯಕ್ಷೇತ್ರ ಮತ್ತು ಕ್ಷೇತ್ರಕಾರ್ಯ ಮಾಡಿಕೊಂಡು ನನ್ನೂರಿನ ಅಧ್ಯಯನದ ಮೂಲಕ ನಮ್ಮ ನಾಡಿನ, ನಮ್ಮ ದೇಶದ ಏಶಿಯಾ ಖಂಡದ, ವಿಶ್ವದ ಮೂಲ ಜನಾಂಗದ ಜೀವನ ವಿಧಿ ವಿಧಾನ, ರೀತಿ ನೀತಿ, ಗುಣ ಸ್ವಭಾವ, ರೂಢಿ, ಸಂಪ್ರದಾಯ ತಿಳಿದುಕೊಳ್ಳುವ ಉದ್ದೇಶದಿಂದ ಈ ಅಧ್ಯಯನಕ್ಕೆ ತೊಡಗಿದ್ದು. ಹಲವಾರು ಅಡೆತಡೆ, ತಾಪತ್ರಯ ತೊಂದರೆ ಮತ್ತೆ ನನ್ನ ವೈಯುಕ್ತಿಕ ಕೆಲವು ಸೀಮಿತನಗಳ ಮೂಲಕ ಒಂದು ಗ್ರಾಮದ ಇಡೀ ಸರ್ವಾಂಗೀಣ ಅಧ್ಯಯನ ಮಾಡಲಾಗಿದಿದ್ದರೂ ಇಂದಲ್ಲ ನಾಳೆ ಇದರ ಮೇಲೆ ಮಹಾಪ್ರಬಂಧ ಬರೆಯುವವರಿಗೆ ಕೈಪಿಡಿಯಾಗಲಿ ಎಂಬ ಉದ್ದೇಶದಿಂದ ಈ ಕೃತಿ ರಚನೆಗೆ ತೋಡಗಿದ್ದು'' ಎಂದು ವಿವರಿಸಿದ್ದಾರೆ.

ಪಶುಪಕ್ಷಿಗಳ, ದೇವದೇವತೆಯರ, ಧರ್ಮ, ಜಾತಿ, ಪಂಗಡಗಳ, ಭೂಮಿ ಆಕಾಶಗಳ, ಗಾಳಿ ನೀರು, ದಿಕ್ಕು ದೆಸೆಗಳ ಹೀಗೆ ಸಕಲೊಂಬತ್ತು ಸಂಗೀತಗಳ ಜೊತೆ ಮನುಷ್ಯ ಹೊಂದಿರುವ ಭಾವ ಸಂಬಂಧಗಳನ್ನು ಈ ಕೃತಿಯಲ್ಲಿ ಡಾ. ಚೆನ್ನಣ್ಣ ಅವರು ಸ್ವಾರಸ್ಯವಾಗಿ ನಿರೂಪಿಸಿದ್ದಾರೆ. ಹಳ್ಳಿಯ ಜನಜೀವನದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಸಂದರ್ಭಗಳಲ್ಲಿ ಸ್ಕೂಲುಗಳು ಉಂಟುಮಾಡುವ ಬದಲಾವಣೆಯ ಸ್ವರೂಪವನ್ನು ಇದರಲ್ಲಿ ಕಾಣಬಹುದು. ಲೇಖಕರು ತಮ್ಮ ಸೃಜನಶೀಲವಾದ ಭಾಷೆಯ ನಿರೂಪಣೆಯ ಮೂಲಕ ಸಹಜವಾಗಿಯೇ ತಮ್ಮ ಕೃತಿಯ ಉದ್ದಕ್ಕೂ ಓದುಗರ ಗಮನವನ್ನು ಸೆಳೆಯುತ್ತಾರೆ. ಒಂದು ಹಳ್ಳಿಯ ಸೂಕ್ಷ್ಮತೆಗಳು, ಒಳನೋಟಗಳು ಇಲ್ಲಿ ಅನಾವರಣಗೊಂಡಿವೆ. ಈ ಕೃತಿಯ 'ಮೊದಲ ಮಾತು'ವಿನಲ್ಲಿ ಡಾ. ಚಂದ್ರಶೇಖರ ಕಂಬಾರ ಅವರು ಹೇಳುವ ಹಾಗೆ "ಇಂದಿನ ಭಾರತದ ಒಂದು ಹಳ್ಳಿಯ ಜನಜೀವನವನ್ನು ಅನೇಕ ನೆಲೆಗಳಲ್ಲಿ ಅಧ್ಯಯನ ಮಾಡುವವರಿಗೆ ಇದು ತುಂಬ ಉಪಯುಕ್ತ ಮಾಹಿತಿ ಒದಗಿಸಿಕೊಡುವುದರಲ್ಲಿ ಸಂದೇಹ ಇಲ್ಲ. ಮಾತ್ರವಲ್ಲ, ಒಂದು ಅವಧಿಯು ನಮ್ಮ ನಾಡಿನಲ್ಲಾದ ಬದಲಾವಣೆಗಳನ್ನು ಒಂದು ಹಳ್ಳಿಯ ಉದಾಹರಣೆಯ ಮೂಲಕ ತಿಳಿಯಲಿಕ್ಕೂ ಇದು ಸಹಾಯಕಾರಿಯಾಗಿದೆ''. ಡಾ. ಚೆನ್ನಣ್ಣನವರು ಒಂದು ಹಳ್ಳಿಯನ್ನು ಅಲ್ಲಿನ ಸಾಹಿತ್ಯ, ಕಲೆಗಳ ಮೂಲಕ ಅಧ್ಯಯನ ಮಾಡುವುದಕ್ಕೂ, ಒಬ್ಬ ಸಮಾಜ ವಿಜ್ಞಾನಿ ಅಥವಾ ಇತಿಹಾಸಕಾರ ಅಧ್ಯಯನ ಮಾಡುವುದಕ್ಕೂ ವ್ಯತ್ಯಾಸವಿದೆ ಎಂಬುದನ್ನು ಈ ಕೃತಿಯ ಅಧ್ಯಯನದ ಮೂಲಕ ತೋರಿಸಿದ್ದಾರೆ. ಈ ಕಾರಣದಿಂದಾಗಿ ಡಾ. ಚೆನ್ನಣ್ಣ ಅವರಿಗೆ ಅಭಿನಂದನೆಗಳು ಸಲ್ಲಬೇಕು.

‘ದಾಸ ಸಾಹಿತ್ಯ ಸುಧೆ’ ಎಂಬ ಲೇಖನಗಳ ಸಂಗ್ರಹವನ್ನು ಮೈಸೂರಿನ ಗಾನಭಾರತಿ ಸಂಘವು ಡಾ. ಟಿ.ಎನ್ . ನಾಗರತ್ನ ಅವರ ಸಂಪಾದಕತ್ವದಲ್ಲಿ ಪ್ರಕಟಿಸಿದೆ. ಈ ಹಿಂದೆ ಇದೇ ಸಂಘವು ದಾಸಸಾಹಿತ್ಯಕ್ಕೆ ಸಂಬಂಧಿಸಿದಂತೆಯೇ ‘ಕಲ್ಲು ಸಕ್ಕರೆ (೧೯೮೦) ‘ಕನಕ ಸಂಪುಟ’ (೧೯೮೨) ‘ಹರಿದಾಸರ ವಾಙ್ಮಯ’ (೧೯೮೫) ಎಂಬ ಕೃತಿಗಳನ್ನು ಹೊರತಂದಿದೆ. ಪ್ರಸ್ತುತ ‘ದಾಸಸಾಹಿತ್ಯ ಸುಧೆ’ ಸಂಗ್ರಹದಲ್ಲಿ ಹನ್ನೊಂದು ಲೇಖನಗಳಿವೆ. ಡಾ. ಆರ್ವಿಯಸ್ ಅವರ ‘ಭಾರತೀಯ ಭಕ್ತಿ ಸಾಹಿತ್ಯ’ ಎಂಬ ಲೇಖನ ಪ್ರಾಚೀನ ಕಾಲದಿಂದ ಹಿಡಿದು ಪುರಂದರದಾಸರ ತನಕದ ಭಕ್ತಿ ಸಾಹಿತ್ಯ ಹಿನ್ನೆಲೆ ಹಾಗೂ ಬೆಳವಣಿಗೆಯನ್ನು ವಿವರಿಸುತ್ತದೆ. ತಮಿಳಿನ ಆಳ್ವಾರರ, ತೆಲುಗಿನ ಅನ್ನಮಾಚಾರ್ಯರ ಮಲಯಾಳೀ ಸಂತರ, ಮರಾಠಿ ಸಂತರ ಹಾಗೂ ಕಬೀರ, ಮೀರಾಬಾಯಿ, ಸೂರದಾಸ, ಬಸವಣ್ಣ, ಚೈತನ್ಯದೇವ, ಜಯದೇವ ಕವಿ– ಇವರ ಬದುಕು, ಬರಹ ಮತ್ತು ಭಕ್ತಿ ಸಾಧನೆಗಳ ಜೊತೆ ಪುರಂದರ ದಾಸರ ಬದುಕು ಹಾಗೂ ಸಾಹಿತ್ಯ ರಚನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ ಹನ್ನೊಂದು ಜನ ವಿದ್ವಾಂಸರು ಬರೆದ ಲೇಖನಗಳು ಇದರಲ್ಲಿ ಸೇರ್ಪಡೆಯಾಗಿವೆ.

ಈ ಭಕ್ತಿ ಕವಿಗಳ ಬದುಕು, ಭಕ್ತಿ, ಸಾಧನೆ, ಸಾಹಿತ್ಯ ರಚನೆಯನ್ನು ಕುರಿತು ಆಳವಾಗಿ ಅಧ್ಯಯನ ಮಾಡಿ ಬರೆದ ಲೇಖನಗಳು ಇವಾಗಿವೆ. ಕೃಷ್ಣವೇಣಿ, ಟಿ.ಕೆ. ಇಂದುಬಾಯಿ, ಅಕ್ಕಮಹಾದೇವಿ, ಸಿ. ಕಮಲಾದೇವಿ, ಸೀತಾರಾಮ ಜಾಗೀರ್‌ದಾರ್, ಲಕ್ಷ್ಮೀನಾರಾಯಣ ಅರೋರಾ, ಉಮಾ ಅರೋರಾ, ಎ.ಎಂ. ರಾಮಚಂದ್ರ, ವಿ.ಜಿ. ಕೃಷ್ಣಮೂರ್ತಿ, ಎಂ.ವಿ. ವರದರಾಜನ್ ಅವರುಗಳು ವಿಶೇಷ ಶ್ರಮ ಹಾಗೂ ಆಸಕ್ತಿ ವಹಿಸಿರುವುದಕ್ಕೆ ಈ ಲೇಖನಗಳು ಸಾಕ್ಷಿಯನ್ನು ಒದಗಿಸುತ್ತವೆ. ಈ ಕೃತಿಯನ್ನು ಡಾ. ಟಿ.ಎನ್. ನಾಗರತ್ನ ಅವರು ಅಚ್ಚುಕಟ್ಟಾಗಿ ಸಂಪಾದಿಸಿದ್ದಾರೆ. ಈ ಸಂತರಿಗೆ ಪ್ರಾಂತ್ಯ, ಭಾಷೆ ಬೇರೆಬೇರೆಯಾದರೂ ಅವರು ಹೊಂದಿರುವ ಭಕ್ತಿಯ ಮಾರ್ಗ ಮಾತ್ರ ಒಂದೇ; ಅದು ತಮ್ಮ ಬದುಕು ಮತ್ತು ಬರಹದ ಮೂಲಕ ಸತ್ಯದ ಸಾಕ್ಷಾತ್ಕರಾದ ಹಂತ ತಲುಪುವುದು. ತಮ್ಮ ಬದುಕು ಹಾಗೂ ಪ್ರತಿಭೆಯ ಮೂಲಕ ಈ ಸಂತರು ಹೀಗೆ ವಿಭಿನ್ನತೆಯಲ್ಲಿ ಏಕತೆಯನ್ನು ಸಾಧಿಸಿದವರು ಎಂಬುದನ್ನು ಈ ಲೇಖನಗಳು ವಿವರವಾಗಿ ವ್ಯಾಖ್ಯಾನಿಸುತ್ತವೆ. ಈ ಸಂತರು ಮೇಲುವರ್ಗದ ಏಕದೇವತೋಪಾಸನೆಗೆ ಒತ್ತುಕೊಟ್ಟವರು. ಹಾಗಾಗಿ ಬಹಳಷ್ಟು ಸಂತರು ಕೆಳವರ್ಗದ ಗ್ರಾಮದೇವತೆಗಳ ಪೂಜೆಯನ್ನು ಖಂಡಿಸಿದ್ದಾರೆ. ಇದು ಕನಕದಾಸರಲ್ಲೂ ಕಂಡುಬರುತ್ತದೆ. ಜನಪದ ಸಂಸ್ಕೃತಿಯನ್ನು ಕುರಿತು ಉಗ್ರಟೀಕೆ ಮಾಡಿರುವುದನ್ನು ಕಾಣಬಹುದು. ಕೆಲವು ಲೇಖನಗಳಲ್ಲಿ ಈ ಅಂಶಗಳನ್ನು ಉದಾಹರಣೆಗಳ ಸಹಿತ ಚೆನ್ನಾಗಿ ವಿವರಿಸಲಾಗಿದೆ. ಆದರೆ ಈ ಎಲ್ಲಾ ಭಕ್ತರಿಗೆ ಸಂಸ್ಕೃತ ಒಂದೇ ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿರಲಿಲ್ಲ ಎಂಬುದು ವಿಶೇಷ ಸಂಗತಿ. ತಂತಮ್ಮ ಮಾತೃಭಾಷೆಗಳ ಮೂಲಕ ತಮ್ಮ ಅನುಭವ ಹಾಗೂ

ಸಾಧನೆಗಳನ್ನು ಅಭಿವ್ಯಕ್ತಪಡಿಸುವುದು ಗಮನಾರ್ಹವಾದ ಅಂಶ. ದಾಸಸಾಹಿತ್ಯ ಕುರಿತು, ಅದರಲ್ಲೂ ಪುರಂದರದಾಸರ ಕುರಿತು ಅಧ್ಯಯನ ಮಾಡುವವರಿಗೆ ಇದೊಂದು ಮುಖ್ಯ ಸಹಾಯಕ ಕೃತಿಯಾಗಿದೆ.

ಒಟ್ಟಾರೆ, ಶಾಸನ, ಸಾಹಿತ್ಯ ಕಲೆ, ಜಾನಪದ, ಸಂಸ್ಕೃತಿ, ಭಾಷೆ ಮುಂತಾದ ಸಾಹಿತ್ಯಕ ಸಂಶೋಧನೆಗಳ ಅಧ್ಯಯನದ ಮೂಲಕ ಹೊರಟಾಗ ತೆರೆದುಕೊಳ್ಳುವ ಬದುಕಿನ ವೈವಿಧ್ಯಮಯವಾದ ಸಾಧ್ಯತೆಗಳನ್ನು ಈ ಕೃತಿಗಳು ವಿವರಿಸುತ್ತವೆ. ಇತಿಹಾಸ, ಸಮಾಜಶಾಸ್ತ್ರ ಮುಂತಾದ ಇತರೆ ಶಿಸ್ತುಗಳಿಗಿಂತಲೂ ಭಿನ್ನವಾದ, ವಿಶಿಷ್ಟವಾದ ಅನನ್ಯತೆ ಹಾಗೂ ವಸ್ತುನಿಷ್ಠತೆ ಸಾಹಿತ್ಯಕ ಸಂಶೋಧನೆಗಳ ಅಧ್ಯಯನದಿಂದ ಅರಿಯಬಹುದೆಂಬುದನ್ನು ಈ ಗ್ರಂಥಗಳು ವಿವರಿಸುತ್ತವೆ.

# ಸಂಶೋಧನೆ (ವೈಚಾರಿಕ)

ಮಲ್ಲೇಪುರಂ ಜಿ. ವೆಂಕಟೇಶ

## ಪ್ರಾಸ್ತಾವಿಕ

೧೯೯೧ರ ವರ್ಷದಲ್ಲಿ ಪ್ರಕಟವಾದ 'ವೈಚಾರಿಕ ಸಂಶೋಧನೆ' ಕೃತಿಗಳ ಸಮೀಕ್ಷೆ ಮಾಡುವುದು ನನ್ನ ಕೆಲಸವಾಗಿದೆ. ಪ್ರಸ್ತುತ ಸಮೀಕ್ಷೆ ಶುರು ಮಾಡುವ ಮೊದಲು ಕೆಲವು ಮಿತಿಗಳನ್ನು ಹೇರಿಕೊಳ್ಳುವುದು ಅಗತ್ಯವಾಗಿದೆ. ಮುಖ್ಯವಾಗಿ ೧೯೯೧ರಲ್ಲಿ ಪ್ರಕಟವಾದ ಎಲ್ಲಾ ಕೃತಿಗಳ ಸಮಗ್ರ ಸಮೀಕ್ಷೆಯನ್ನು ಇಲ್ಲಿ ಮಾಡಲಾಗಿಲ್ಲ. ಇದಕ್ಕೆ ಹಲವಾರು ಕಾರಣಗಳಿದ್ದರೂ ಪುಸ್ತಕಗಳು ದೊರಕುವುದು ದುರ್ಲಭ. ಸಿಕ್ಕಷ್ಟು ಕೃತಿಗಳನ್ನು ಪ್ರಾಮಾಣಿಕವಾಗಿ ಇಲ್ಲಿ ವಿಮರ್ಶೆಗೆ ಒಳಪಡಿಸಲಾಗಿದೆ. ವೈಚಾರಿಕ ಸಂಶೋಧನೆ ಎನ್ನುವ ಪರಿಕಲ್ಪನೆಯನ್ನು ಸ್ವಲ್ಪ ವಿವರಿಸಬಹುದೆಂದು ತೋರುತ್ತದೆ. 'ಸಂಶೋಧನೆ' ಪರಿಕಲ್ಪನೆಯ ಅರ್ಥವ್ಯಾಪ್ತಿ, ಈ ಶತಮಾನದ ಆದಿಯಿಂದ ಬಂದದ್ದು, ಚರಿತ್ರೆಯ ಬಗೆಗಿನ ಶೋಧನ ತನ್ನ ಇತಿಹಾಸವನ್ನು ನೋಡಿಕೊಳ್ಳಬೇಕೆನ್ನುವ ತವಕ ಸಂಶೋಧನೆಗೆ ಮೂಲ ಧಾತುವಾಯಿತು. ಇದನ್ನು ಈ ಕ್ಷೇತ್ರದ ವ್ಯಾಸಂಗಿಗಳು ಬಲ್ಲರು. ಆ ನಂತರದಲ್ಲಿ 'ಸಂಶೋಧನೆ'ಯ ವಿನ್ಯಾಸ, ಅದರ ಪರಿಕ್ರಮಗಳು ಬೇರೆ ಬೇರೆ ಘಟ್ಟಗಳಲ್ಲಿ ಬೆಳೆದುಬಂದಿತು. ಸಾಹಿತ್ಯಕ ಸಂಶೋಧನೆ ಚಾರಿತ್ರಿಕ ಸಂಶೋಧನೆ, ಕಾವ್ಯ ಸಂಶೋಧನೆ, ಹೀಗೆ ಸಂಶೋಧನೆಗೆ ಹಲವು ತೆರೆನಾದ ಸ್ತರಗಳು ಹಾಗೂ ಹೊಸ ಹೊಸ ನೆಲೆಗಳು ಬಂದು ಸೇರಿಕೊಂಡವು. ಇವೆಲ್ಲವೂ ಅಂತರ್‌ರಾಷ್ಟ್ರೀಯ ಅಧ್ಯಯನದ ಮಾದರಿಗಳಾಗಿ ಕನ್ನಡದಲ್ಲಿ ರೂಪುಗೊಂಡವು. ಸಂಶೋಧನೆ ಎನ್ನುವುದು ಕೇವಲ, ಕವಿ–ಕಾಲ–ದೇಶ ಎನ್ನುವ ಪ್ರಾಥಮಿಕ ವಿಚಾರದ ಹಿನ್ನೋಟದಿಂದ ಹಿಡಿದು ಸದ್ಯ ಸಮಾಜಶಾಸ್ತ್ರೀಯ ಮಾನವಶಾಸ್ತ್ರೀಯ ನೆಲೆಗಳ ಆಚೆಗೆ ಹೊಸ ಆಯಾಮಗಳನ್ನು ಕಳೆದ ಒಂದೆರಡು ದಶಕಗಳಿಂದ ಪಡೆಯುತ್ತಿದೆ. ಇದಕ್ಕಾಗಿಯೇ ನಾನು ಹೇಳಿದ್ದು ಅಂತರ್‌ಶಾಸ್ತ್ರೀಯ ಅಧ್ಯಯನವು, ಸಂಶೋಧನೆಯ ಏಕಮುಖೀ ನೆಲೆಗಳನ್ನು ಬದಲಿಸಿ; ಹೊಸತಾರುಣ್ಯ ಹಾಗೂ ಸಂಶೋಧನೆಯನ್ನು ಜೀವನಸ್ಥ ಆಕೃತಿ ಮತ್ತು ಆಶಯಗಳ ನೆಲೆಯಾಗಿ ರೂಪಿಸಿದೆ. 'ವೈಚಾರಿಕ ಸಂಶೋಧನೆ'ಯ ಈ ಬಗೆಯ ಮುಖ್ಯ ನೆಲೆಗಳನ್ನು ಧಾರಣೆ ಮಾಡಿದೆ ಎಂದು ನಾನು ತಿಳಿದಿದ್ದೇನೆ.

ಒಂದು ವರ್ಷದಲ್ಲಿ ಪ್ರಕಟವಾದ ಕೃತಿಗಳು ಒಟ್ಟಾರೆಯಾಗಿ ಸಂಸ್ಕೃತಿಯ ಮನಸ್ಸಿನಲ್ಲಾದ ಬೆಳವಣಿಗೆಯನ್ನು ತೋರಿಸುತ್ತದೆಂದು ಗ್ರಹಿಸುವುದು ಅವಸರದ ಮಾತಾಗುತ್ತದೆ. ಏಕೆಂದರೆ ಸಂಶೋಧಕನ ವೈಚಾರಿಕ ಮನಸ್ಸು, ಒಂದು ವಿಷಯಕ್ಕೆ ತೊಡಗುವ ಸಮಯದ ದೃಷ್ಟಿಯಿಂದ ನೋಡಿದರೆ ಕೃತಿಯ ಪ್ರಕಟಣೆಯ ವರ್ಷವೇ ಸಂಶೋಧನ ಕೃತಿಯ ಅಳತೆಗೋಲು ಆಗಲಾರದೆಂದು ನಾನು ತಿಳಿದಿದ್ದೇನೆ. ಸಂಶೋಧನೆಯ ಹಿನ್ನೆಲೆ ಬೇರೆ ಬೇರೆ ಸಂಗತಿಗಳನ್ನು ಸದಾ ಕೂಡಿಕೊಂಡು ಹೆಜ್ಜೆ ಹಾಕುವುದರಿಂದ ಈ ಬಗೆಯ ಅಧ್ಯಯನದ ಹಿನ್ನೆಲೆ–ಮುನ್ನೆಲೆಗಳನ್ನು ತಿಳಿಯಬೇಕಾಗುತ್ತದೆ. ಇಷ್ಟೂ ಅಲ್ಲದೆ, ಕೃತಿಯನ್ನು ಬರೆಹಗಾರರ ಹಿಂದಿನ ಈ ಬಗೆಯ ಸಂಶೋಧನಾ ಕೃತಿಯ ಜತೆಗೆ ಹೋಲಿಸಿ ನೋಡಬೇಕಾಗುತ್ತದೆ. ಆದರೆ, ಪ್ರಸ್ತುತ ಸಮೀಕ್ಷೆಯಲ್ಲಿ ಮುಖ್ಯ ಕೃತಿಗಳನ್ನು ಮಾತ್ರ ಪರಿಶೀಲಿಸಿ, ಇತರ ಕೃತಿಗಳನ್ನೂ ಅನುಷಂಗಿಕವಾಗಿ ಮಾತ್ರ ಚರ್ಚಿಸಬೇಕಾಗುತ್ತದೆ. ಒಂದು ಸಂಶೋಧನಾ ಕೃತಿಯ ವೈಚಾರಿಕ ಹುಟ್ಟು ಕೂಡ, ಕಾಲದ ಸಾಂಸ್ಕೃತಿಕ ಸಾಧ್ಯತೆಗಳ ಪರಿಪ್ರೇಕ್ಷ್ಯದ ನೆಲೆಯಲ್ಲಿ ನಿಲ್ಲಿಸುವುದರಿಂದ ದಕ್ಕಬಹುದಾದ 'ವೈಚಾರಿಕ ನಿಲುಮೆ' ಮಹತ್ವದ ಅಂಶಗಳನ್ನು ಹೊರಹಾಕುತ್ತದೆ. ಸದ್ಯದ ಸ್ಥಿತಿಯಲ್ಲಿ ಈ ಬಗೆಯ ವಿಧಾನ ಹೆಚ್ಚು ಅನುಕೂಲ ಮತ್ತು ಸಾಂಸ್ಕೃತಿಕವಾಗಿ ಮಹತ್ವದ ಅಂಶವಾಗಿದೆ.

೧೯೯೧ರ ವರ್ಷದಲ್ಲಿ ಕೆಲವಾದರೂ ಉತ್ತಮ ವೈಚಾರಿಕ ಸಂಶೋಧನಾ ಕೃತಿಗಳು ಪ್ರಕಟವಾಗಿವೆ ಎನ್ನುವುದು ಖುಷಿ ಕೊಡುವ ಸಂಗತಿಯಾಗಿದೆ. ಸದ್ಯ ಬಿಡಿಬಿಡಿ ಲೇಖನಗಳನ್ನು ಇವುಗಳೊಡನೆ ಚರ್ಚಿಸಲು ಸಾಧ್ಯವಾಗಿಲ್ಲ. ಬಿಡಿ ಲೇಖನಗಳು ಇಡಿಯಾಗಿ ಪ್ರಕಟವಾದಾಗ ವೈಚಾರಿಕ ನೆಲೆಗಳ ತಾರುಣ್ಯವನ್ನು ತಿಳಿಯಬಹುದು. ಪ್ರಕಟಗೊಂಡಿರುವ ವೈಚಾರಿಕ ಸಂಶೋಧನಾ ಕೃತಿಗಳು ಭಿನ್ನ ಬಗೆಯ ನೆಲೆಗಳನ್ನು ಪಡೆದಿರುವುದನ್ನು ನಾವು ಕಾಣಬಹುದಾಗಿದೆ. ಕಾಲದ ಸಾಮಾಜಿಕ ವಿಚಾರಗಳು, ಆರ್ಥಿಕ ಆಯಾಮಗಳು, ಸಾಂಸ್ಕೃತಿಕ ಬಿಕ್ಕಟ್ಟುಗಳು ಬೇರೆ ಬೇರೆ ಚಳುವಳಿಗಳ ಹಿನ್ನೆಲೆಗಳಲ್ಲಿ ಬೆಳೆದು ಬಂದ ತಾತ್ವಿಕ ವಿನ್ಯಾಸಗಳು ಸೂಕ್ಷ್ಮವಾಗಿಯಾದರೂ ಪ್ರಕಟಗೊಂಡಿರುವ ಕೃತಿಗಳ ಮೇಲೆ ಪ್ರಭಾವ ಬೀರಿರುತ್ತವೆ. ಹೀಗೆ ಬೀರುವುದು ಅನಿವಾರ್ಯ ಮತ್ತು ಅಗತ್ಯವೂ ಹೌದು! ಅದರ ಪ್ರಾಮುಖ್ಯತೆ ಸಾಮಾಜಿಕವಾಗಿಯೂ ಮಹತ್ವದ್ದು ಎಂಬ ಅಂಶವನ್ನು ಬಗೆಬಗೆಯಾಗಿ ತೋರಿಸಬೇಕಾಗುತ್ತದೆ. ಮುಂದಿನ ನನ್ನ ಸಮೀಕ್ಷೆಯಲ್ಲಿ ಇದು ಹೆಚ್ಚು ರುಜುವಾತಾಗುತ್ತದೆಂದು ತಿಳಿದಿದ್ದೇನೆ.

**ದೇವರು– ಎ.ಎನ್. ಮೂರ್ತಿರಾವ್**

ಸಾಮಾಜಿಕ ನಂಬಿಕೆಯ ಸ್ವರೂಪವನ್ನು ಸಾಂಸ್ಕೃತಿಕ ಪಾತಳಿಯ ನೆಲೆಯಲ್ಲಿ ವ್ಯಾಖ್ಯಾನಿಸಲು ಹೊರಡುವ 'ದೇವರು' ಪುಸ್ತಕ ಒಂದು ವಿಶಿಷ್ಟ ಮಾದರಿಯದು. ಮೂರ್ತಿರಾಯರು ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ.

"ಈ ಪುಸ್ತಕದಲ್ಲಿ ನಮ್ಮ ಹಿಂದೂಧರ್ಮವನ್ನು ಹಿಂದು ದೇವತೆಗಳನ್ನು ಕುರಿತಂತೆ ಹೊಗಳಿಕೆಯಲ್ಲದ ಮಾತು ಆಗಾಗ ಬಂದಿದೆ. ಅದರಿಂದಾಗಿ, "ಇವನಿಗೆ ಹಿಂದೂಮತವನ್ನು ಕಂಡರಾಗದು; ಅದನ್ನು ವಿರೋಧಿಸುವುದಕ್ಕೆ ಹೆಚ್ಚು ಸ್ಥಳ ಕೊಟ್ಟಿದ್ದಾನೆ'' ಎಂಬ ಭಾವನೆ ಬಂದರೂ ಬರಬಹುದು. ನನ್ನಲ್ಲಿ ಹಿಂದೂ ಧರ್ಮಕ್ಕಾಗಲಿ ಇತರ ಧರ್ಮಗಳಿಗಾಗಲಿ ವಿರೋಧವಾದ ಪೂರ್ವಾಗ್ರಹ ಏನೇನೂ ಇಲ್ಲ. ಎಲ್ಲ ದೇವರು ಮತಗಳನ್ನು ಕುರಿತ ಸಮಸ್ಯೆಗಳನ್ನು ನಾನು ವೈಚಾರಿಕ ದೃಷ್ಟಿಯಿಂದ ಪರಿಶೀಲಿಸಲು ಹೊರಟಿದ್ದೇನೆಯೇ ಹೊರತು ಹೀಯಾಳಿಸುವ ಉದ್ದೇಶದಿಂದಲ್ಲ.''

ಅವರ 'ಮುನ್ನುಡಿ'ಯಲ್ಲಿರುವ 'ವೈಚಾರಿಕ' ನೆಲೆಯನ್ನು ತಮ್ಮ ಪುಸ್ತಕದ ಧಾತು ಆಗಿರುವುದನ್ನು ಸ್ಪಷ್ಟವಾಗಿಯೇ ಹೇಳಿದ್ದಾರೆ. ಡಿ.ವಿ.ಜಿ. ಅವರ 'ದೇವರು' ಎಂಬ ಸಣ್ಣ ಪುಸ್ತಕವನ್ನು ಓದಿದ ಮೇಲೆ – ಈ ಪುಸ್ತಕ ಬರೆಯಬೇಕೆಂಬ ಪ್ರೇರಣೆ ಹುಟ್ಟಿದುದನ್ನು ಮೂರ್ತಿಯವರು ದಾಖಲಿಸಿದ್ದಾರೆ. ಸಾಂಪ್ರದಾಯಿಕ ಆಲೋಚನೆ ಡಿ.ವಿ.ಜಿ. ಅವರ ಪುಸ್ತಕದ ವಸ್ತುಸಂಗತಿಗಳಾಗಿವೆ. ದೇವರ ಮಹಿಮೆ, ಲೀಲೆ, ಆಳ್ವಿಕೆ, ಇತ್ಯಾದಿ ವಿಷಯಗಳಿಗೆ ಅದರಲ್ಲಿ ಪ್ರಾಮುಖ್ಯವಿದೆ. ಅಲ್ಲಿ ಮೌಲ್ಯಗಳ ಕುರಿತ ಮಾತು ಇಲ್ಲ. ಈ ಜಾಡು ಮೂರ್ತಿರಾಯರಿಗೆ ಆಧಾರವಾಗಿದೆ. ಹೀಗಾಗಿ ತಮ್ಮ ಪುಸ್ತಕದಲ್ಲಿ ಒಂದು ಕಡೆ 'ಮೌಲ್ಯ'ಗಳ ಹಿನ್ನೆಲೆಯಲ್ಲಿ ದೇವರ ಭಾವನೆಗಳನ್ನು, ಮಿಥ್‌ಗಳಲ್ಲಿ ಕಾಣಿಸಿಕೊಂಡಿರುವ ದೇವರ ಕಲ್ಪನೆಗಳನ್ನು ಕುರಿತು ಚರ್ಚಿಸಲು ತೊಡಗುತ್ತಾರೆ. ಮೊದಮೊದಲ ಕಲ್ಪನೆಗಳಲ್ಲಿ ಮನುಷ್ಯ ದೇವರ ಕಲ್ಪನೆಯನ್ನು ಕಂಡ ಬಗೆಯನ್ನು ಮಾನವಶಾಸ್ತ್ರ ಮತ್ತು ದೇವತಾಶಾಸ್ತ್ರಗಳ ನೆಲೆಯನ್ನು ತಮ್ಮ ವಿಚಾರಗಳಿಗೆ ಆಧಾರವಾಗಿ ಸ್ವೀಕರಿಸುತ್ತಾರೆ. ಹೀಗೆ ಅನ್ಯಶಾಸ್ತ್ರೀಯ ನೆಲೆಯೊಂದನ್ನು ಕೈ ಹಿಡಿದಿದ್ದರಿಂದ ಅವರ ಬರವಣಿಗೆಗೆ ಮಹತ್ವದ ವೈಚಾರಿಕ ಕೊಂಡಿಗಳು ಬಂದು ಸೇರಿಕೊಳ್ಳುತ್ತವೆ. ಇಂದ್ರ, ಅಗ್ನಿ, ವಾಯುಗಳು ವಾಸ್ತವವಾಗಿ ನಾಮರೂಪ ಪಡೆದ ಶಕ್ತಿಗಳೆಂಬ ವಿವರವನ್ನು ಮೂರ್ತಿರಾಯರು ಹೇಳಿ ಪ್ರಕೃತಿದೇವತೆಗಳಿಗಿಂತ ಭಿನ್ನವಾದ, ಯಾವ ದೇವರಿಗೂ ಇಲ್ಲದ ವಿಶಿಷ್ಟಗುಣವನ್ನುಳ್ಳ ಗಣಪತಿ ಕುರಿತು ಎರಡನೆಯ ಅಧ್ಯಾಯದಲ್ಲಿ ಚರ್ಚೆಗೆ ತೆಗೆದುಕೊಳ್ಳುತ್ತಾರೆ. ಗಣಪತಿಯು ವೈದಿಕ ದೇವತೆ ಎನ್ನುವುದಕ್ಕಿಂತ ಹೆಚ್ಚಾಗಿ ಅವೈದಿಕ ದೇವತೆ ಎನ್ನುವುದು ಸಂಶೋಧನೆಯಿಂದ ಈಗಾಗಲೇ ತಿಳಿದಿರುವ ಸಂಗತಿ. ಆ ಬಗ್ಗೆ ದೇವತಾಶಾಸ್ತ್ರಜ್ಞರೂ ಸಂಸ್ಕೃತಿವ್ಯಾಸಂಗಿಗಳೂ ಬಗೆಬಗೆಯ ನಿಲುಮೆಗಳಿಂದ ಅಭ್ಯಾಸ ಮಾಡಿದ್ದಾರೆ. ಮೂರ್ತಿರಾಯರು ಇದನ್ನೆಲ್ಲ ಗಮನಿಸಿದ್ದಾರೆ. ಗಣಪತಿಯ ಜನ್ಮದ ವಿಷಯದಲ್ಲಿ ಹಲವಾರು ಕಥೆಗಳಿವೆ. ಅದರಲ್ಲಿ ಒಂದು ಕಥೆಯನ್ನು ಹೇಳಿ; ಹೀಗಾಗಲು ಸಾಧ್ಯವೇ, ಎಂಬ ಪ್ರಶ್ನೆಯನ್ನು ಎತ್ತುತ್ತಾರೆ. ಜತೆಗೆ ಈ ಬಗೆಯ ಕೆಲವು ಪ್ರಸಂಗಗಳನ್ನು ಉಲ್ಲೇಖಿಸಿ ಗಣಪತಿಯು ಸಾಮಾಜಿಕ ವಿನ್ಯಾಸದಲ್ಲಿ ಪಡೆದುಕೊಂಡ ಬಗೆಗಳ ಬಗ್ಗೆ

ಕುತೂಹಲವನ್ನು ತಾಳುತ್ತಾರೆ. ಅಲ್ಲಿಂದ ಮುಂದೆ ತ್ರಿಮೂರ್ತಿಗಳ ಬಗೆಗೆ ರೂಢಿಯಲ್ಲಿರುವ ಕಥೆಗಳು, ಪ್ರಸಂಗಗಳು, ದೇವತಾಶಾಸ್ತ್ರಗಳಲ್ಲಿ ನಿರ್ಮಾಣಗೊಂಡಿರುವ ಭಾವನೆಗಳನ್ನು ಕುರಿತಂತೆ ಮಾತಾಡುತ್ತಾರೆ. ನಮ್ಮಲ್ಲಿ ಇರುವ ವಿಷ್ಣು–ಶಿವ ಭೇದವನ್ನು ತೋರಿಸಿ–ಕೃಷ್ಣನ ಕಡೆ ಇರುವ ಪ್ರೀತಿಯನ್ನು ತೋರಿಸುತ್ತಾರೆ. ಒಬ್ಬ ಹೀಗೆ ಹೇಳಿದ್ದಾನೆ.

"ನಾನು ಶೈವ. ಸಂದೇಹವಿಲ್ಲ; ಸಂತತವಾಗಿ ಪಂಚಾಕ್ಷರೀ ಜಪ ಮಾಡುತ್ತೇನೆ. ಆದರೂ ನನ್ನ ಮನಸ್ಸು, ಆಗಲೇ ಹೂವಿನ ಕಾಂತಿಯುಳ್ಳ, ನಗುಮುಖದ ಗೋಪಿಯರ ಮುದ್ದು ಮಗು ಕೃಷ್ಣನನ್ನು ಸ್ಮರಿಸುತ್ತದೆ'' (ಪು. ೧೪)

ಈತ ಚರ್ಚೆಗಿಂತ ತನ್ನ ಭಾವನೆಗಳಿಗೆ ನೆಮ್ಮಿಕೊಂಡಿದ್ದಾನೆ. ಇಂತಹ ಭಾವನೆಗಳ ಮುಖಾಂತರ ಸಾಮಾಜಿಕ ಮನಸ್ಸಿನ ವಿನ್ಯಾಸವನ್ನು ಮೂರ್ತಿರಾಯರು ಹೆಕ್ಕಿ ತೋರಿಸುತ್ತಾರೆ. ದೇವತೆಗಳನ್ನು ಕುರಿತ ಕಥೆಗಳಂತೂ ಸ್ವಾರಸ್ಯವಾಗಿವೆ. ಪ್ರಪಂಚದ ಹಲವು ದೇವತೆಗಳನ್ನು, ಅವರು ಮಾಡುವ ಕುಯುಕ್ತಿ, ವ್ಯಭಿಚಾರ, ಕೊಲೆಗಳನ್ನು ಕುರಿತು ಸ್ವಾರಸ್ಯವಾದ ವಿವರಗಳಿವೆ. ಇಂತಹ ವಿವರಗಳಿಗೆ ಕೇವಲ ಭಾರತವೇ ಸಾಕ್ಷಿಯಾಗಬೇಕಿಲ್ಲ. ಪಶ್ಚಿಮ ಮತ್ತು ಪೂರ್ವದೇಶಗಳ ವಿವರಗಳೂ ಒಟ್ಟೊಟ್ಟಿಗೆ ಬಂದು ಸೇರಿಕೊಳ್ಳುತ್ತವೆ. ದೇವರ ಅಸ್ತಿತ್ವವನ್ನು ಒಪ್ಪುವಂತಹ ಎಲ್ಲ ಮತಗಳೂ ದೇವರನ್ನು ಮನುಷ್ಯರೂಪದಲ್ಲಿ ಕಲ್ಪಿಸಿಕೊಂಡಿವೆ. ಆದರೆ, ಸಂಪ್ರದಾಯ ದೇವರು ತನ್ನ ರೂಪದಲ್ಲೇ ಮಾನವನನ್ನು ಸೃಷ್ಟಿಸಿವೆ ಎಂದು ಸದಾ ಉದ್‌ಘೋಷಿಸುತ್ತದೆ. ಇದರೊಡನೆ ಜನರ ಮನಸ್ಸಿನಲ್ಲಿರುವ ಅನೇಕ ಬಗೆಯ ನಂಬಿಕೆಗಳಿವೆ. ಅವುಗಳಿಗೆಲ್ಲ ಅನೇಕ ಕಥೆಗಳು ರೂಪುಗೊಂಡಿವೆ. ಈ ಬಗೆಯ ಅನೇಕ ಕಥೆಗಳ ಹಿಂದಿನ 'ಮಾನವ ಸ್ವಭಾವ' ಅವನು ಕಲ್ಪಿಸಿಕೊಂಡ ವಿಧಾನಗಳ ರೀತಿ–ನೀತಿಯನ್ನು ಚರ್ಚಿಸುತ್ತಾರೆ. ಈ ವಿಷಯದ ಕೊನೆಗೆ 'ಇದೆಲ್ಲ ವಿಷಯಗಳಲ್ಲೂ ದೇವರು ನಮ್ಮಂತೆಯೇ ಇದ್ದಾನೆ ಎಂದು ಕಥೆಗಳು ಹೇಳುತ್ತವೆ. ಅದು ನಿಜವಾದರೆ, ದೇವರ ಹೆಚ್ಚುಗಾರಿಕೆಯೇನು? ಅವನು ನಿಜವಾಗಿ ದೇವರೇ ಅಲ್ಲ ಎಂದು ಹೇಳಬೇಕಾಗುತ್ತದೆ'' (ಪು. 37) ಇಂತಹ ಮಾತುಗಳ ಹಿಂದಿರುವ ಸತ್ಯಾನ್ವೇಷಕವಾದ ವೈಚಾರಿಕ ಸಂಶೋಧನೆ ಹೊಸ ತಿಳಿವಿನ ಕಡೆ ತನ್ನ ಹೆಜ್ಜೆ ಊರುತ್ತದೆ!

ನಮ್ಮ ಸಂಸ್ಕೃತಿಯಲ್ಲಿ ಹಲವಾರು ದೇವರುಗಳಿದ್ದಂತೆ ಒಬ್ಬನೇ ದೇವರು ಎಂಬ ಕಲ್ಪನೆಯೂ ಇದೆ. ಮೂರ್ತಿರಾಯರಿಗೆ ಇದರ ಬಗ್ಗೆ ಕುತೂಹಲ. ಇಂತಹ ಕುತೂಹಲಕ್ಕೆ ಮಾರುಹೋಗಿ 'ಏಕದೇವತೋಪಾಸನೆ'ಯ ವಿವರಗಳ ಕಡೆ ಕೈಚಾಚುತ್ತಾರೆ. ದೇವರ ಕಲ್ಪನೆಯ ಹಿಂದೆ ಇರುವ ವಿರೋಧಾಭಾಸಗಳ ಸಂತೆಯನ್ನು ಮೂರ್ತಿರಾಯರು ಗಮನಿಸಿಯೂ ಇದ್ದಾರೆ. ಅವರ ಬರಹಗಳಲ್ಲಿ 'ಇಂಡಕ್ಟಿವ್ ಕ್ರಮ' ಇರುವ ಹಾಗೆಯೇ 'ಡಿಡಕ್ಟಿವ್ ಕ್ರಮ'ವೂ ಇದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ ಬರುವ

"ಏಕೋ ದೇವಃ ಸರ್ವಭೂತೇಷು ಗೂಢ" ಎಂಬ ಮಂತ್ರಭಾಗವನ್ನು ತೆಗೆದುಕೊಂಡು ಡಿ.ವಿ.ಜಿ. ಅವರು ನಡೆಸಿರುವ ವ್ಯಾಖ್ಯಾನಕ್ಕಿಂತ ಭಿನ್ನ ನೆಲೆಯ ವ್ಯಾಖ್ಯಾನಕ್ಕೆ ತೊಡಗುತ್ತಾರೆ. ಉಪನಿಷನ್ಮಂತ್ರದಲ್ಲಿರುವ ವಿರೋಧಾಭಾಸಗಳನ್ನೂ ಎತ್ತಿ ಹೇಳುವ ವಿವರಗಳು ಹಿಂದಿನ ಅಧ್ಯಾಯಗಳ ಜತೆಗೆ ಮೈಗೂಡುತ್ತವೆ. ಮುಂದಿನ ಎರಡು ಮೂರು ಅಧ್ಯಾಯಗಳಲ್ಲಿ ದೇವರಿಗೂ; ಕೇಡು, ಸ್ವಾತಂತ್ರ್ಯ, ಸಂಕಟ, ಲೀಲೆಗಳಂತಹ ಪರಿಕಲ್ಪನೆಗೂ ಇರುವ ಸಂಬಂಧವನ್ನು ಒಂದು ಕಡೆ ಹೇಳುತ್ತ; ಸ್ತೋತ್ರ ಮತ್ತು ಸೇವೆಗಳ ಮುಖಾಂತರ ಮನುಷ್ಯ ನಂಬಿಕೊಂಡಿರುವ ರೀತಿ–ರಿವಾಜುಗಳ ಬಗೆಗೆ ಚಿಂತನೆಗೆ ಒಳಪಡಿಸುತ್ತಾರೆ. ಪ್ರೇಮಸ್ವರೂಪನಾದ ದೇವರು ಮತ್ತು ದೇವರು ಇದ್ದಾನೆ; ಈ ಅಧ್ಯಾಯಗಳಲ್ಲಿ ಕ್ರಿಸ್ತಶಕೆಯಿಂದ ದೃಷ್ಟಾಂತಗಳನ್ನು ಹೆಕ್ಕಿಕೊಂಡು ಮನುಷ್ಯ ತನ್ನ ಪ್ರೇಮಸ್ವರೂಪದ ಇಚ್ಛಾ ಪಾತಳಿಯನ್ನು ದೇವರಿಗೆ ಮಾತ್ರ ಬಿಟ್ಟುಕೊಟ್ಟು ತನ್ನ ಬಳಿ ದ್ವೇಷವನ್ನು ಹೆಕ್ಕಿಕೊಂಡಿರುವ ಔಚಿತ್ಯವನ್ನು ಪ್ರಶ್ನಿಸುತ್ತಾರೆ. ದೇವರು ಇಲ್ಲ ಎಂಬ ನೇತಿವಾದ ಇರುವ ಹಾಗೆಯೇ, ಇದ್ದಾನೆ ಎಂಬ ಪ್ರೇತಿವಾದವೂ ಉಂಟು. ಇದಕ್ಕೆ ಸ್ವಾರಸ್ಯವಾದ ಪ್ರಶ್ನೆಯನ್ನು ಉಲ್ಲೇಖಿಸುತ್ತಾರೆ.

ಪ್ರಶ್ನೆ : ದೇವರು ಇದ್ದಾನೆಯೆ?

ಭಕ್ತರು : ಇದ್ದಾನೆ, ಏಕೆಂದರೆ ಶ್ರುತಿ ಹಾಗೆ ಹೇಳುತ್ತದೆ.

ಪ್ರಶ್ನೆ : ಶ್ರುತಿಯ ಮಾತು ನಿಜವೆ?

ಭಕ್ತರು : ದೇವರು ಹೇಳಿದ ಮಾತು ನಿಜವಲ್ಲದೆ ಮತ್ತೇನು? (ಪು. 86)

ಇದಕ್ಕಿಂತ ಹೆಚ್ಚಿಗೆ ವ್ಯಾಖ್ಯಾನಿಸುವುದು ತರವಲ್ಲ.

ಗೀತೆಯಲ್ಲಿ ಬರುವ ಒಂದು ಮಾತು ಎಲ್ಲರಿಗೂ ತಿಳಿದ ಸಂಗತಿ. 'ಸಾಧುಗಳನ್ನು ರಕ್ಷಿಸುವುದಕ್ಕೆ ದುಷ್ಟರನ್ನು ಶಿಕ್ಷಿಸುವುದಕ್ಕೆ ಧರ್ಮವನ್ನು ಸ್ಥಾಪಿಸುವುದಕ್ಕೆ ಯುಗಯುಗಗಳಲ್ಲೂ ಅವತರಿಸುತ್ತೇನೆ ಎಂದು ಕೃಷ್ಣ ಹೇಳಿದ್ದಾನೆ. ಆದರೆ 3000 ವರ್ಷಗಳ ಹಿಂದೆ ಆಡಿದ ಮಾತು ಏನೇನೂ ಪರಿಣಾಮ ಬೀರಿಲ್ಲ. ಈ ಕಡೆ ಮೂರ್ತಿರಾಯರು ನಮ್ಮ ಗಮನವನ್ನು ಸೆಳೆದು ಮೌಲ್ಯಗಳು ಸೋಲುತ್ತಿವೆಯೋ ಗೆಲ್ಲುತ್ತಿವೆಯೋ?' ಎಂದು ಪ್ರಶ್ನೆ ಕೇಳುತ್ತಾರೆ. 'ಮೌಲ್ಯಗಳು ಉಳಿದಿದ್ದರೆ ಅವುಗಳಿಗೆ ಬೆಲೆ ಕೊಡುವ ಬದಲು 'ದೇವರನ್ನೇ ಮೌಲ್ಯ' ಎಂದು ಕರೆದರೆ, ಆ ನೀತಿಯಲ್ಲೇ ಬದುಕಿದ್ದರೆ ಬಂದ ಪ್ರಯೋಜನ ಏನು ಎಂಬ ಉಪಪ್ರಶ್ನೆಯನ್ನು ನಮ್ಮ ಮುಂದೆ ಎಸೆಯುತ್ತಾರೆ. ಈ ಬಗೆಯ ಹಲವಾರು ಪ್ರಶ್ನೆಗಳು, ಉಪಪ್ರಶ್ನೆಗಳು, ಪುಸ್ತಕದಲ್ಲಿ ವಿಚಾರಗಳ ನಡುವೆ ಮೈದಾಳಿ ನಿಲ್ಲುತ್ತವೆ. 'ದೇವರು' ಪುಸ್ತಕ ಮೂರ್ತಿರಾಯರ ಗಹನವಾದ ಓದು, ಹಲವು ಶಾಸ್ತ್ರಗಳ ತಿಳಿಯಾದ ಅನುಸಂಧಾನ, ತಾರ್ಕಿಕಕ್ಕಿಂತ ಅನುಭವಕ್ಕೆ ನೀಡುವ ಪರಮ ಪ್ರಮಾಣಗಳು, ಮಿಥಕಗಳ ಹಿಂದಿನ ಸಾಂಕೇತಿಕ ಸೂಚನೆಗಳು ಹೇರಳವಾಗಿವೆ.

ಇವನ್ನೆಲ್ಲ ಒಂದೆಡೆ ವೈಚಾರಿಕ ಕೊಂಡಿಯಲ್ಲಿ ಬೆಸೆಯುವ ಮೂರ್ತಿರಾಯರ 'ನಿಲುಮೆ'ಯನ್ನು ಒಪ್ಪದವರೂ ಸಹ ಒಮ್ಮೆ ಓದುತ್ತ ಹೋದಂತೆ ಮೂರ್ತಿರಾಯರ ವೈಚಾರಿಕ ಪಾತಳಿಯನ್ನು ಸುಲಭವಾಗಿ ಕಡೆಗಣಿಸುವಂತೆಯೂ ಇಲ್ಲವಾಗಿದೆ.

## ವೇದಾಂತ ರೆಜಿಮೆಂಟ್ ಮತ್ತು ಇತರ ವೈಚಾರಿಕ ಬರಹಗಳು

*– ಬಿ.ವಿ. ವೀರಭದ್ರಪ್ಪ*

'ವೇದಾಂತ ರೆಜಿಮೆಂಟ್' ಕನ್ನಡದ ವಿಶಿಷ್ಟ ಪುಸ್ತಕ. ಒಂದರ್ಥದಲ್ಲಿ ಈ ಬಗೆಯ ಪುಸ್ತಕ ಸಾಮಾಜಿಕ ಅರಿವಿನ ವಿಸ್ತಾರವನ್ನು ಬೇಡುವಂಥದ್ದು. ಒಂದು ಕಡೆ ಸಾಂಸ್ಕೃತಿಕ ಒಳವಿನ್ಯಾಸದ ನೆಯ್ಗೆಯನ್ನು ಮತ್ತೊಂದು ಕಡೆ ಸಾಮಾಜಿಕ ಸಂಗತಿಗಳನ್ನೂ ಇವೆರಡನ್ನು ಒಂದೇ ನೆಲೆಯಲ್ಲಿ ನೋಡಲು ಹೊರಟಂತಹ ಪುಸ್ತಕ! ಲೇಖಕರೇನೊ "ವೈಚಾರಿಕ ಲೇಖನ"ಗಳೆಂದು ಕರೆದಿದ್ದಾರೆ. ಲಂಕೇಶರ ತಮ್ಮ ಒಂದು ಮಾತಿನಲ್ಲಿ "ಇಲ್ಲಿಯ ಎಲ್ಲ ಬರಹಗಳು 'ವೈಚಾರಿಕ' ಎಂಬ ಗುಂಪಿಗೆ ಸೇರುವುದಿಲ್ಲ" ಎಂದು ಹೇಳಿದ್ದಾರೆ. ಮುಂದೆ ಅವರು ಹೇಳುತ್ತ "ನಾನು ಒಣ ವೈಚಾರಿಕತೆಯನ್ನು ನೀಚ ಕಂದಾಚಾರವನ್ನೂ ಒಟ್ಟಾಗಿಯೇ ತಿರಸ್ಕರಿಸುತ್ತೇನೆ. ಅರ್ಥಪೂರ್ಣ, ಕ್ರಿಯಾಶೀಲ ಬದುಕು ಮುಖ್ಯ. ಈ ನಾಡಿನ ಮೌಢ್ಯ ಹೇಗಿದೆಯೆಂದರೆ ಇದರ ವಿರುದ್ಧ ಮಾತನಾಡುತ್ತಾ, ಮನುಷ್ಯನ ಧ್ವನಿ ಕರ್ಕಶವಾಗುತ್ತದೆ, ಆತನ ಜೀವಂತ ವಿಚಾರ ಕಾಡುಹರಟೆಯಾಗಿ ಕಾಣತೊಡಗುತ್ತದೆ. ಇದನ್ನರಿತು ತರ್ಕಬದ್ಧವಾಗಿ, ಸ್ಪಷ್ಟವಾಗಿ, ಕಂದಾಚಾರದ ದುರಂತ ಮತ್ತು ವೈಚಾರಿಕ ಜೀವನದ ಸಂಕೀರ್ಣತೆಯನ್ನರಿತು ಮಾತಾಡಬಲ್ಲವರು ಬಿ.ವಿ. ವೀರಭದ್ರಪ್ಪ". ಈ ಎಚ್ಚರದ ಮಾತುಗಳನ್ನು ಗಮನದಲ್ಲಿಟ್ಟುಕೊಂಡು ನಾಲ್ಕು ಮಾತುಗಳನ್ನು ಬರೆಯಬಹುದು.

ಸಂಶೋಧನೆಯು ವೈಚಾರಿಕ ರೂಪದ ನೆಲೆಯನ್ನು ಪಡೆಯುವುದು ಅದು ಜೀವನ ಸಂಮುಖ ನೆಲೆಗಳನ್ನು ಪಡೆದುಕೊಂಡಾಗ ಮಾತ್ರ. ಆಗ ಸಂಶೋಧನೆಯು ಕಳಕಳೆಯಿಂದ ನೀಗಿಸುತ್ತದೆ. ನಲ್ವತ್ತನಾಲ್ಕು ಲೇಖನಗಳುಳ್ಳ ಪುಸ್ತಕದಲ್ಲಿ ಮುಖ್ಯವಾಗಿ ಧರ್ಮ, ಜಾತಿ, ವರ್ಗ, ಪುರೋಹಿತ, ವಿದ್ಯೆಗಳ ಬಗ್ಗೆ ಒಂದು ಕಡೆ, ಮದ್ಯಪಾನ, ಹಾದರ, ಮರಮಾನ್ಯ, ದೆವ್ವಗಳ ಭ್ರಮೆ, ಅತೀಂದ್ರಿಯ ಮುಂತಾದವುಗಳನ್ನು ಮತ್ತೊಂದು ಕಡೆ ಚರ್ಚಿಸಲು ತೊಡಗುತ್ತಾರೆ. ಬಿ.ವಿ. ವೀರಭದ್ರಪ್ಪನವರಿಗೆ ಇವುಗಳನ್ನು ಸಮಾಜ ಕೇಂದ್ರಿತ ನೆಲೆಗಳಿಂದಲೇ ನೋಡುತ್ತಾರೆ. ಹೀಗೆ ನೋಡುವುದರಿಂದ ಹೊಸ ಹೊಸ ಆಯಾಮಗಳು ದಕ್ಕುತ್ತವೆ. ಒಣ ವೈಚಾರಿಕತೆ ಮಾಯವಾಗಿ, ಅಲ್ಲಿ ವೈಚಾರಿಕ ಜೀವನದ ಸಂಕೀರ್ಣತೆ ಮೈದೋರುತ್ತದೆ! ಪುಸ್ತಕದ ಕೊನೆಯಲ್ಲಿರುವ 'ಅಂಬೇಡ್ಕರ್ ವಿಚಾರಧಾರೆ' ಕುರಿತ ನಾಲ್ಕು ಲೇಖನಗಳು, ಅಶ್ವಮೇಧವನ್ನು ಕುರಿತ ಲೇಖನದಲ್ಲೂ –ಸಂಶೋಧನೆಯು ವ್ಯಾಪ್ತಗೊಂಡಿರುವ ವೈವಿಧ್ಯವನ್ನು ನೋಡಬಹುದು. ಸಮಾಜವಿಜ್ಞಾನ ಹಾಗೂ ಚರಿತ್ರೆಯನ್ನು ತೆರೆದ ಕಣ್ಣುಗಳಿಂದ ನೋಡಿದಾಗ,

ಅದನ್ನು ಉಪಯೋಗಿಸಿಕೊಂಡು ಆ ನೆಲೆಗಳನ್ನು ಪ್ರಶ್ನಿಸುತ್ತ, ಹುಡುಕಲು ತೊಡಗಿದಾಗ ಮೂಡುವ ವಿವರಗಳು ಹೊಸ ಲಾವಣ್ಯಗಳಿಂದ ನಮ್ಮ ಮನಸ್ಸನ್ನು ಸೆಳೆಯುತ್ತದೆ! ಹಿಂದೂಗಳು ಮತ್ತು ಗೋಮಾಂಸ ಭಕ್ಷಣೆ ಎನ್ನುವ– ಅಂಬೇಡ್ಕರ್ ವಿಚಾರಧಾರೆಯ ಮೊದಲ ಲೇಖನದಲ್ಲಿ ಬರುವ ಒಂದು ಮಾತು ಹೀಗಿದೆ ''ಹಿಂದೂಗಳ ಸಾಮಾಜಿಕ ಇತಿಹಾಸದ ಒಂದು ಮುಖ ಮಾತ್ರ ವೈಭವೀಕರಣಗೊಂಡು; ಅದರ ಉಳಿದ ಮುಖಗಳ ವಸ್ತುನಿಷ್ಠ ಅರಿವಿಗೆ ಬಾಧಕವಾಗಿದೆ'' (ಪು. ೧೬೪) ಈ ಮಾತು ಇಲ್ಲಿನ ಲೇಖನಗಳಲ್ಲಿ ಮೈದೋರಿರುವ ವಸ್ತುನಿಷ್ಟ ಸಂಗತಿಗಳಿಗೂ ಅನ್ವಯವಾಗುತ್ತದೆ! ಅಂಬೇಡ್ಕರ್ ಸಂಶೋಧನೆಯ ಸಾರವನ್ನು ವೈಚಾರಿಕವಾಗಿ ಗುರುತಿಸುವ ಬಿ.ವಿ. ವೀರಭದ್ರಪ್ಪನವರು ನಾಲ್ಕು ಮುಖ್ಯ ಸಂಗತಿಗಳನ್ನು ಇಲ್ಲಿನ ನಾಲ್ಕು ಲೇಖನಗಳಲ್ಲಿ ಪ್ರಸ್ತಾಪಿಸುತ್ತಾರೆ. ಹಿಂದೂಗಳು ಎಂದೂ ಗೋಮಾಂಸ ತಿನ್ನುತ್ತಿರಲಿಲ್ಲವೆ? ಹಿಂದೂಗಳು ಗೋಮಾಂಸ ತಿನ್ನುವುದನ್ನು ಕೈಬಿಡಲು ಕಾರಣವೇನು; ಬ್ರಾಹ್ಮಣರು ಸಸ್ಯಾಹಾರಿಗಳಾಗಲು ಕಾರಣವೇನು?; ಗೋಮಾಂಸ ಸೇವನೆ ಅದೇಕೆ ಅಸ್ಪೃಶ್ಯತೆಗೆ ಕಾರಣವಾಯಿತು? ಈ ಪ್ರಶ್ನೆಗಳು ಸಮಾಜವಿಜ್ಞಾನ ಹಾಗೂ ಸಾಂಸ್ಕೃತಿಕ ಮನೋವಿಜ್ಞಾನದ ದೃಷ್ಟಿಯಿಂದ ತುಂಬ ಮಹತ್ವದವುಗಳು. ಅಸ್ಪೃಶ್ಯತೆಯ ಸ್ವರೂಪವನ್ನು ತಿಳಿಯಲು ಇವುಗಳ ಜತೆಗೆ ಇದರಲ್ಲಿ ಇನ್ನೂ ಎರಡು ಲೇಖನಗಳು ಪರ್ಯಾಯವಾಗಿ ನಮ್ಮ ನೆರವಿಗೆ ಬರುತ್ತವೆ. ಒಟ್ಟು ಪುಸ್ತಕ ನಮ್ಮ ಸಾಮಾಜಿಕ ಆರೋಗ್ಯದ ಬಗ್ಗೆ ನೇರವಾದ ಕಾಳಜಿಯನ್ನು ವಹಿಸುತ್ತದೆ. ಹೀಗೆ ವಹಿಸುವುದರಿಂದಲೇ ಪುಸ್ತಕದ ಬರಹಕ್ಕೆ ಒಂದು ರೀತಿಯ ಲವಲವಿಕೆ ಪ್ರಾಪ್ತವಾಗಿದೆ! ವೈಚಾರಿಕ ಸಾಹಿತ್ಯಕ್ಕೆ ಬೆಲೆಯುಳ್ಳ ಕೃತಿಯಿದು.

## ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು

*– ಎನ್. ಪಿ. ಶಂಕರ ನಾರಾಯಣ ರಾವ್*

ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯವನ್ನು ಮಾಡಿಕೊಡುವ ಈ ಕೃತಿಯ ತಾತ್ವಿಕ ಹಿನ್ನೆಲೆ ತುಂಬ ಗಟ್ಟಿಮುಟ್ಟಾದುದು. ವಸಾಹತುಶಾಹಿ ಆಕ್ರಮಣವಾದ ಪರಿಣಾಮವಾಗಿ ಭಾರತದ ಆರ್ಥಿಕ ಬೆನ್ನೆಲುಬು ಹೇಗೆ ಜರ್ಜರಿತಗೊಂಡಿತೆಂದು ತಿಳಿಯದೆ ಇಲ್ಲಿ ನಡೆದ ಸ್ವಾತಂತ್ರ್ಯ ಹೋರಾಟವನ್ನು ವ್ಯಾಖ್ಯಾನಿಸುವುದು ಅಸಮರ್ಪಕವಾದ ವಿಧಾನವಾಗಿದೆ. ಹೀಗೆ ಯಾವುದು ಅಸಮರ್ಪಕ ವಿಧಾನವೊ ಅದನ್ನು ಮುರಿದು ಖಚಿತ ನೆಲೆಯ ತಾತ್ವಿಕ ವಿಧಾನವನ್ನು ಕೈ ಹಿಡಿದಿದ್ದರಿಂದ ಕಳೆದ ಐನೂರು ವರ್ಷಗಳ ಭಾರತದ ಇತಿಹಾಸವನ್ನು ಮುಕ್ತವಾಗಿ ಚಿತ್ರಿಸಲು ತೊಡಗುತ್ತದೆ. ಆದ್ದರಿಂದ ದೇಶದ ಮಹಾರೋಗವಾದ ಜಾತೀಯತೆಯ ಸಮಸ್ಯೆ, ಸ್ವಾತಂತ್ರ್ಯ ಪಡೆದೇ ತೀರಬೇಕೆಂಬ ಛಲ–ಉತ್ಕಟ ಬಯಕೆಗಳ ಫಲಗಳ ನೆಲೆಗಳು ಮೈರೂಪ ಪಡೆಯಲು ಸಹಾಯಕವಾಗಿದೆ.

ಈ ತರಹದ ವಿಮರ್ಶೆ ಮತ್ತು ವ್ಯಾಖ್ಯಾನಗಳಿಂದ ಕೂಡಿದ ಸಂಶೋಧನೆಯು ವೈಚಾರಿಕ ಮನಸ್ಸಿನ ಬೆನ್ನನ್ನು ಹತ್ತಿದಿರುವುದೇ ಇದರ ಶ್ರೇಷ್ಠ ಬರಹಕ್ಕೆ ಒಂದರ್ಥದಲ್ಲಿ ಕಾರಣವಾಗಿದೆ.

ನಮಗೆಲ್ಲ ತಿಳಿದಿರುವಂತೆ ರಾಷ್ಟ್ರೀಯ ಚಳುವಳಿಯೆಂದರೆ ತಿಲಕ್–ಗಾಂಧಿ, ಪರಂಪರೆಯ ನಾಯಕತ್ವದಲ್ಲಿ ನಡೆದ ಕಾಂಗ್ರೆಸ್ ಚಳುವಳಿ ಮಾತ್ರವಲ್ಲ; ಸಂವಿಧಾನ ಮಾರ್ಗಗಳಿಗೆ ಬದ್ಧರಾಗಿದ್ದ ಮಂದವಾದಿಗಳೂ ಇದ್ದರು. ರಕ್ತದ ಹೊಳೆ ಹರಿಸಿ ನಮ್ಮ ಹೃದಯವನ್ನು ಸೂರೆಗೊಂಡಿರುವ ಕ್ರಾಂತಿಕಾರಿಗಳೂ ಇದ್ದರು. ಸಮಾಜವಾದದ ಸಂದೇಶ ಸಾರಿ ಹೊಸ ಆಯಾಮಗಳನ್ನೂ ನೀಡಿದ ನಾನಾ ಪಂಥಗಳ ಸಮಾಜವಾದಿಗಳೂ ಇದ್ದರು. ಇವರೊಡನೆ ಬಚರ್ರೈತ, ಕಾರ್ಮಿಕ ವರ್ಗಗಳ ಹೋರಾಟ, ಮತೀಯ ಜಾತೀಯ ಬಣ್ಣದ ಆಂದೋಲಗಳೂ ಸೇರುತ್ತವೆ; ಬಹುಮುಖ್ಯವಾಗಿ ಭಾರತದ ಆದಿವಾಸಿಗಳ ದಂಗೆಯೂ ಸೇರುತ್ತದೆ. ಇವೆಲ್ಲದರ ಒಟ್ಟು ಚಿಂತನೆಯಲ್ಲಿ ಇಲ್ಲಿನ ಬರವಣಿಗೆಗೆ ಒಂದು ರೀತಿಯ ನೈತಿಕ, ವೈಚಾರಿಕ, ಸಾಮಾಜಿಕ ನೆಲೆಗಳು ಕ್ರಮಪ್ರಾಪ್ತವಾಗಿ ದೊರಕಿವೆ. ಇಲ್ಲಿ ಇತಿಹಾಸದ ಬಗೆಗಿನ ಸ್ಪಷ್ಟ ನೆಲೆಗಳು ದೊರಕುವ ಹಾಗೆ; ಲೇಖಕರ ಮನೋಭಿತ್ತಿಗೆ ವೈಚಾರಿಕ ನೆಲೆಯ ಹಾಸು ಮತ್ತು ಹೊಕ್ಕು ಇವೆರಡೂ ಜತೆಜತೆಗೆ ಕೈಹಿಡಿದು ನಡೆದಿವೆ. ಇಲ್ಲದೆ ಹೋಗಿದ್ದರೆ ಇಲ್ಲಿನ ಬರವಣಿಗೆಗೆ ಒಣಚರಿತ್ರೆಯ ಸ್ವರೂಪ ಬರುತ್ತಿತ್ತು. ಸಾಮಾಜಿಕ ಅಧ್ಯಯನದ ಜತೆಗೆ ಆರ್ಥಿಕ ಹಾಗೂ ರಾಜಕೀಯ ಅಧ್ಯಯನಗಳು ಸ್ಥೂಲ ಹಿನ್ನೆಲೆಗೆ ಬಂದಿವೆ. ಲೇಖಕರೇನೊ "ಇದು ಸ್ವತಂತ್ರ ಸಂಶೋಧನೆಯ ಆಧಾರದ ಮೇಲೆ ಬರೆದ ಪುಸ್ತಕವಲ್ಲ. ನಾನಾ ಮೂಲಗಳಿಂದ ಸಂಗ್ರಹಿಸಿರುವ ಮಾಹಿತಿಗಳು ಇದರಲ್ಲಿ ಬಳಕೆಯಾಗಿವೆ". (ಪು. XII) ಎಂದು ಹೇಳಿದ್ದಾರೆ. ಆದರೆ, ನಾನಾ ಮೂಲಗಳಿಂದ ಮಾಹಿತಿ ಸಂಗ್ರಹಣೆ, ಅವುಗಳನ್ನು ವ್ಯಾಖ್ಯಾನಿಸಿಕೊಳ್ಳುವ ಬಗೆಯ ಪುಸ್ತಕಕ್ಕೆ ಇರುವ ಇತಿ–ಮಿತಿಗಳನ್ನು ಪರ್ಯಾಯವಾಗಿ ಸೂಚಿಸಿದ್ದಾರೆ. ಇಷ್ಟು ಸೂಕ್ಷ್ಮ ವೈಚಾರಿಕತೆ ದಕ್ಕದೆ ಹೋಗಿದ್ದರೆ "ನಮ್ಮ ಸ್ವಾತಂತ್ರ್ಯಾಂದೋಲನದೊಳಗಿನ ಸಣ್ಣ ಮತ್ತು ದೊಡ್ಡ ಪ್ರವೃತ್ತಿಗಳೆಲ್ಲವನ್ನು ಗುರುತಿಸುವ ಪ್ರಯತ್ನದ ಫಲ ಸಿಗುತ್ತಿರಲಿಲ್ಲ" ಇಷ್ಟು ಮಾತ್ರವಲ್ಲ. "ಪ್ರಸ್ತುತ ಕೃತಿ ಯಾವ ಅಂಗವನ್ನೂ ಕಡೆಗಣಿಸದೆ, ಯಾವ ಅಂಗವನ್ನು ಉತ್ಪ್ರೇಕ್ಷೆ ಮಾಡದೆ ಪ್ರತಿಯೊಂದಕ್ಕೂ ಅದರದರ ಮೌಲ್ಯವನ್ನು ನೀಡಿರುವಂತಹ ನೈಜ ಚಿತ್ರವನ್ನೇ ನಮ್ಮ ಮುಂದೆ ಇರಿಸುತ್ತಿರಲಿಲ್ಲ, ಸ್ವಾತಂತ್ರ್ಯ ಚಳುವಳಿಯ ಅಂತಶ್ಶಕ್ತಿಯನ್ನು ಅದರೊಳಗೆ ಹುದುಗಿದ್ದ ದೌರ್ಬಲ್ಯಗಳನ್ನೂ ತೋರಿಸುತ್ತಿರಲಿಲ್ಲ.

ಬ್ರಿಟಿಷರು ಹದಿನೇಳನೆಯ ಶತಮಾನದ ಆರಂಭಕ್ಕೆ ಬಂದರು. ಇಲ್ಲಿಗೆ ಈ ಮೊದಲೆ ಬಂದಿದ್ದವರನ್ನು ಗುಳೆ ಎಬ್ಬಿಸಿ, ತಮ್ಮ ಪ್ರಾಬಲ್ಯ ಸ್ಥಾಪಿಸಿದರು. ಇಲ್ಲಿ ಆಳುತ್ತಿದ್ದವರ ದೌರ್ಬಲ್ಯ ತಿಳಿಗೇಡಿತನ, ಒಳಜಗಳಗಳನ್ನು ಬಳಸಿಕೊಂಡ ರಾಜ್ಯ ಕಟ್ಟಿದರು. 1757ರಲ್ಲಿ ಸಂಪೂರ್ಣವಾಗಿ ತಮ್ಮ ಆಧಿಪತ್ಯಕ್ಕೆ ಭಾರತವನ್ನು

ಒಳಪಡಿಸಿಕೊಂಡರು. ಅದಾದ ಮೇಲೆ 100 ವರ್ಷಗಳ ಕಾಲ ಬ್ರಿಟಿಷರು ಭಾರತದ ಜನರನ್ನು ಸುಲಿದರುಚಿ ಸಂಪತ್ತನ್ನು ದೋಚಿದರು. ಹೀಗಾಗಿ ಬ್ರಿಟಿಷರು ರೂಪಿಸಿದ ಆಡಳಿತ ಪದ್ಧತಿಯಿಂದ ಭಾರತದ ಅರ್ಥವ್ಯವಸ್ಥೆ ಹಾಗೂ ಸ್ವಯಂಪೂರ್ಣ ಗ್ರಾಮಪದ್ಧತಿಯನ್ನು ನಿರ್ಮೂಲನ ಮಾಡಿತು. ಬ್ರಿಟಿಷ್ ಆಡಳಿತದ ಪರಿಣಾಮಗಳನ್ನು ಕುರಿತು ಕಾರ್ಲ್ ಮಾರ್ಕ್ಸ್‌ರವರು ನೀಡಿರುವ ವಿವರಣೆ, ಬ್ರಿಟಿಷರ ಬಂಡವಾಳಶಾಹೀ ವಿಸ್ತರಣೆ, ಸಾಮ್ರಾಜ್ಯಶಾಹೀ ಆಡಳಿತ ಕ್ರಮಗಳ ಮೇಲೆ ಚೆಲ್ಲಿರುವ ಬೆಳಕು ಪ್ರಸ್ತುತ ಲೇಖಕರ ವಿಶ್ಲೇಷಣೆಯಲ್ಲಿ ಪ್ರತಿಫಲನಗೊಂಡಿದೆ. 1857ರಲ್ಲಿ ಪರಾಜಯ ಹೊಂದಿದ ಬಳಿಕ "ಭಾರತ ತನ್ನ ಸನ್ನಿವೇಶಕ್ಕೆ ಹೊಂದಿಕೊಳ್ಳುವಂತಹ ಹೋರಾಟದ ಕ್ರಮ ಹಾಗೂ ನಾಯಕತ್ವವನ್ನು ಅರಸಲಾರಂಭಿಸಿತು" ಎಂದು ಸರಿಯಾಗಿಯೇ ಗುರುತಿಸಿದ್ದಾರೆ. ಅನಂತರದ ಒಂಭತ್ತು ದಶಕಗಳ ಸ್ವಾತಂತ್ರ್ಯಾಂದೋಲನದ ಇತಿಹಾಸವನ್ನು ನಿರ್ಮಮಕಾರವಾಗಿ ನವಜಾಗೃತಿಯ ಉಗಮ, ತಾತ್ವಿಕ ಪುನರಾಲೋಚನೆ, ಸಮಾಜ ಸುಧಾರಣೆಯ ಯತ್ನಗಳು, ಇಂಗ್ಲಿಷ್ ಶಿಕ್ಷಣ ನಿರ್ವಹಿಸಿದ ಪಾತ್ರ, ಇತಿಹಾಸ ಪ್ರಜ್ಞೆಯ ಬೆಳವಣಿಗೆ, ಪುರಾತತ್ವ ಸಂಶೋಧನೆ ಭಾರತೀಯ ಭಾಷೆಗಳ ಅಧ್ಯಯನ ಇತ್ಯಾದಿಗಳನ್ನು ಪಾಶ್ಚಿಮಾತ್ಯರ ಪಾತ್ರ ಹಾಗೂ ಇವೆಲ್ಲವು ಭಾರತದ ಸ್ವಾತಂತ್ರ್ಯ ಚಳುವಳಿಯ ಮೇಲೆ ಬೀರಿದ ಪ್ರಭಾವ ಏನೆಂಬುದನ್ನು ಸರಿಯಾಗಿಯೇ ಗುರುತಿಸಿದ್ದಾರೆ. ಇಂಥ ಗುರುತಿಸುವಿಕೆಯೇ ಲೇಖಕರ ಒಟ್ಟು ಆಲೋಚನೆ ಮತ್ತು ಪುಸ್ತಕದ ವಿವಿಧ ನೆಲೆಗಳನ್ನು ಗಮನವಿಟ್ಟು ಓದುವಂತೆ ಮಾಡಿವೆ.

ಭಾರತದಲ್ಲಿ ಬೆಳೆದ ಜನಾಂದೋಲನ, ಸ್ವದೇಶಿ ಮತ್ತು ಸ್ವರಾಜ್ಯ, ಅಸಹಕಾರ, ಖಿಲಾಫತ್–ಮುಂತಾದ ಪರಿಕಲ್ಪನೆಗಳನ್ನು ಖಚಿತವಾಗಿಯೂ ಸಮಗ್ರವಾಗಿಯೂ ನಾನಾ ನಿಟ್ಟುಗಳಿಂದ ನೋಡಿಕೊಂಡಿದ್ದು ವಿಶೇಷವಾದ ಸಂಗತಿಯೇ. ಇವುಗಳ ಜತೆಗೆ ಸ್ವಾತಂತ್ರ್ಯ ಚಳುವಳಿಯೊಂದಿಗೆ ಮುಖ್ಯ ಪಾತ್ರವನ್ನು ನಿರ್ವಹಿಸಿದ ಕಾಂಗ್ರೆಸ್ ಸೋಷಲಿಸ್ಟ್ ಪಕ್ಷ, ರೈತ ಕಾರ್ಮಿಕ ಪಕ್ಷ, ಕಮ್ಯೂನಿಸ್ಟ್ ಪಕ್ಷಗಳೇ ಮೊದಲಾದ ಸಮಾಜವಾದಿ ಚಳುವಳಿಗಳನ್ನು 'ವಸ್ತುನಿಷ್ಠ'ವಾಗಿಯೇ ಚರ್ಚಿಸಿದ್ದಾರೆ. ಲೇಖಕರು ಕೊನೆಗೆ ಹೇಳುವ ಮಾತಿನ ಮೂಲಕ ಮುಗಿಸಬಹುದು. "ಭಾರತ ತನ್ನ ದೀರ್ಘ ಇತಿಹಾಸದಲ್ಲಿ ಹಲವಾರು ಏಳು–ಬೀಳುಗಳನ್ನು ಕಂಡಿದೆ. ಹಲವು ಬಾರಿ ಪರರ ಧಾಳಿಗೆ, ಆಕ್ರಮಣಕ್ಕೆ ತುತ್ತಾಗಿದೆ. ಅಂತಹ ವಿಷಮ ಸಂದರ್ಭಗಳನ್ನೆಲ್ಲ ತಾಳ್ಮೆಯಿಂದ, ಆತ್ಮವಿಶ್ವಾಸದಿಂದ, ಎದುರಿಸಿದೆ. ಭಾರತ ಆಕ್ರೋಶದಿಂದ ಬಿರಿಯುತ್ತಾ ಮೇಲೆದ್ದು ನಿಂತು ಹೋರಾಡುವುದಿಲ್ಲ; ತನ್ನ ಸಮಯಕ್ಕಾಗಿ ತಾಳ್ಮೆಯಿಂದ ಕಾದು ನಿಲ್ಲುತ್ತದೆ. ಈ ದೇಶ ತಗ್ಗಬಲ್ಲದು ಮತ್ತು ಬಗ್ಗಬಲ್ಲದು, ಆದರೆ ಮುರಿದು ಬೀಳುವುದಿಲ್ಲ. ಸಮಾಧಾನದಿಂದ ತನ್ನ ಅಂತಶ್ಚೈತನ್ಯವನ್ನು ಕೂಡಿಸಿಕೊಂಡು ಎದ್ದು ನಿಲ್ಲುತ್ತದೆ. ಬ್ರಿಟಿಷ್ ಆಕ್ರಮಣ, ಅದನ್ನು ಎದುರಿಸಿ ನಿಂತ ರಾಷ್ಟ್ರೀಯ ಚಳುವಳಿ ಭಾರತದ ಈ ವಿಶಿಷ್ಟ ಲಕ್ಷಣಗಳಿಗೆ

ಇತ್ತೀಚಿನ ನಿದರ್ಶನ (ಪು. 543–44) ಈ ಮೇಲಿನ ಮಾತಿನಲ್ಲಿ ಲೇಖಕರ ಒಟ್ಟು ಧೋರಣೆ, ನಿಲುವು, ಬರೆವಣಿಗೆಯ ರೀತಿ, ಆಲೋಚನೆಯ ಸ್ಥಿತ್ಯಂತರಗಳು ಎದ್ದು ಕಾಣುತ್ತವೆ.

## ಆರ್ಯರ ಆಕ್ರಮಣ : ಬುಡವಿಲ್ಲದ ವಾದ

— *ಡಾ: ಎನ್.ಆರ್. ವರ್ಹಾಡಪಾಂಡೆ*

ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಟಿಸಿರುವ ಈ ಪುಸ್ತಕದ ಅನುವಾದಕರು ಎಸ್.ಆರ್. ರಾಮಸ್ವಾಮಿ ಅವರು. 1989ರಲ್ಲಿ ಪ್ರಕಟಿಸಿದ ARYAN INVASION : A Myth ಎಂಬ ವಿದ್ವತ್ಪೂರ್ಣ ಹಾಗೂ ಸ್ವತಂತ್ರ ಗ್ರಂಥದ ಸಂಗ್ರಹಾನುವಾದ. ಪುಸ್ತಕದ ಒಟ್ಟು ಉದ್ದೇಶ ಇರುವುದು "ಆರ್ಯರೆಂಬುವರು ಹೊರಗಿನಿಂದ ಬಂದು ಭಾರತದ ಮೇಲೆರಗಿದರು; ಮೂಲ ನಿವಾಸಿಗಳೊಡನೆ ಯುದ್ಧಮಾಡಿ ಅವರ ನೆಲವನ್ನು ವಶಪಡಿಸಿಕೊಂಡರು; ದ್ರಾವಿಡರನ್ನು ದಕ್ಷಿಣಕ್ಕೆ ಅಟ್ಟಿ ಉತ್ತರ ಭಾರತದಲ್ಲಿ ತಮ್ಮ ಪ್ರಾಬಲ್ಯ ಸ್ಥಾಪಿಸಿದರು" ಎಂಬ ವಾದವನ್ನು ಪೂರಾ ಸುಳ್ಳು ಎಂದು ರುಜುವಾತುಪಡಿಸಲು ವರ್ಹಾಡಪಾಂಡೆ ಅವರು ಈ ಕೃತಿಯನ್ನು ಬರೆದಿದ್ದಾರೆ. ಆರ್ಯರು ಭಾರತದ ಮೂಲದವರೇ ಎನ್ನುವುದಕ್ಕೆ ಗಂಗನಾಥ ಝಾ, ಡಿ.ಎಸ್. ತ್ರಿವೇದಿ, ಎಲ್.ಡಿ. ಕಲ್ಲಾ, ಕೆ.ಎಂ. ಮುನ್ಷಿ, ಎಸ್. ಶ್ರೀಕಂಠಶಾಸ್ತ್ರೀ ಮುಂತಾದವರು ಬಿಡಿ ಲೇಖನಗಳಲ್ಲಿ ಪ್ರತಿಪಾದಿಸಿದ್ದರು. ವರ್ಹಾಡಪಾಂಡೆ ಇವರೆಲ್ಲರ ಚರ್ಚಿತ ಅಂಶಗಳನ್ನು ಒಟ್ಟು ಬಳಸಿಕೊಂಡು ಅದರಾಚೆಗೆ ಇತಿಹಾಸ, ಭಾಷಾಶಾಸ್ತ್ರ, ವೇದಸಾಹಿತ್ಯ, ಪುರಾತತ್ವಶಾಸ್ತ್ರ, ಮಾನವಶಾಸ್ತ್ರ, ಜ್ಯೋತಿಷ್ಯಶಾಸ್ತ್ರ ಇವೆಲ್ಲವನ್ನೂ ತೀಕ್ಷ್ಣ ತರ್ಕದ ನೆಲೆಯಲ್ಲಿ ಒಡ್ಡಿ ಪರಿವೀಕ್ಷಣೆ ನಡೆಸಿದ್ದಾರೆ. ಮೇಲು ನೋಟಕ್ಕೆ ವರ್ಹಾಡಪಾಂಡೆ ಅವರ ವಾದಸರಣಿ ಸರಿಯೆನಿಸಬಹುದಾದರೂ ಪೂರ್ವಾಗ್ರಹದ ನಿಲುವೇ ಅವರ ಪ್ರಮೇಯವನ್ನು ಎತ್ತಿಹಿಡಿಯುತ್ತದೆ. ಸಂಶೋಧನೆಯಲ್ಲಿ ಪ್ರತಿಪಾದನೆಯೇ ಮೇಲುಗೈ ಆದಾಗ, ಒಂದು ಪಂಥಾಭಿಮಾನವೇ ಉಚ್ಛಸ್ಥಾಯಿಯಲ್ಲಿ ಏಕನಾದಗೊಂಡಾಗ–ಎಲ್ಲ ವಿವರಗಳು ಅವರ ಆಲೋಚನೆಗೆ ತಕ್ಕಂತೆ ಬಾಗುತ್ತವೆ. ಇಡಿಯಾಗಿ ಇಲ್ಲಿನ ಲೇಖನಗಳನ್ನು ಓದುತ್ತ ಹೋದಂತೆ ಮನವರಿಕೆಯಾಗುವ ಸತ್ಯ. 'ಆರ್ಯ' ಎಂಬ ಪರಿಕಲ್ಪನೆಗೆ ಸರಿಯಾದ ನಿಲುವುದು ಇನ್ನೂ ಸಿಕ್ಕಿಲ್ಲ. ಕಳೆದ ನೂರುವರ್ಷಕ್ಕೂ ಮೀರಿ ಇದರ ಬಗ್ಗೆ ಚರ್ಚೆಗಳು ನಡೆದಿವೆ. ಈ ಚರ್ಚೆಗಳು ಫಲಿತರೂಪಕ್ಕಿಂತ ವಿಶ್ಲೇಷಣಾತ್ಮಕ ನೆಲೆಗೆ ದಾಟುವಂಥವು. ವರ್ಹಾಡಪಾಂಡೆ ಅವರಿಗೆ ಇದು ತಿಳಿಯದ ಸಂಗತಿಯೇನೂ ಅಲ್ಲ. 'ಭಾಷೆಯ ವರ್ಗೀಕರಣ'ದಲ್ಲಿ 'ಇಂಡೋ–ಯೂರೋಪಿಯನ್' ಎಂಬ ಜನಕ ಭಾಷೆಯೊಂದನ್ನು ಹುಟ್ಟು ಹಾಕಿದರು ಎಂಬ ಮಾತಿಗೆ ಇನ್ನಷ್ಟು ವಿವರಗಳು ಬೇಕಿತ್ತು. ಸಿಂಧೂ ಸಂಸ್ಕೃತಿಯಲ್ಲಿ ಇರುವುದು 'ಆರ್ಯ ಸಂಸ್ಕೃತಿ'ಯೇ ಎಂಬ ಮಾತನ್ನು ಸಮರ್ಥಿಸಲು ನೀಡಿರುವ ಆಧಾರಗಳು

ಹೊರತೋರಿಕೆಗೆ ನಿಲುಕಬಹುದಾದವುಗಳೇ. ಒಟ್ಟು ಪುಸ್ತಕದ ಕೇಂದ್ರಧಾತು; 'ಸಂಸ್ಕೃತಿ'ಯನ್ನು ಏಕಕೇಂದ್ರಿತ ತಾತ್ವಿಕ ನೆಲೆಯಲ್ಲಿ ಇಟ್ಟು ನೋಡುವುದೇ ಆಗಿದೆ. ಪುಸ್ತಕದ ಮುಖ್ಯ ಧಾತು ಅದೇ ಆಗಿರುವುದರಿಂದ 'ಜನಪ್ರಿಯ'ವಾದ ಧಾಟಿಯೊಂದು 'ವೈಚಾರಿಕ ಸಂಶೋಧನೆ'ಯಲ್ಲಿ ತಲೆಹಣಿಕಿ ಹಾಕಿದೆ. ಪ್ರಕಾಶಕರು ತಮ್ಮ ಮಾತಿನಲ್ಲಿ ಸಂಗ್ರಹಾನುವಾದವೆಂದೂ ಕೊನೆಯಲ್ಲಿ 'ಕನ್ನಡ ರೂಪಾಂತರ'ವೆಂದೂ ಕರೆದಿದ್ದಾರೆ. ಅನುವಾದಕ್ಕೂ ರೂಪಾಂತರಕ್ಕೂ ವ್ಯತ್ಯಾಸ ಇಲ್ಲವೇ?

**ವೇದಗಳ ನಾಡಿನಲ್ಲಿ** – ಇ.ಎಂ.ಎಸ್. ನಂಬೂದರಿಪಾದ್

**ಆರ್ಯರ ಆಕ್ರಮಣ :** ಬುಡವಿಲ್ಲದ ವಾದದಲ್ಲಿ ಪಂಥನಿಷ್ಠ ಬರೆವಣಿಗೆ ಇದ್ದಂತೆ ನಂಬೂದರಿಪಾದ್ ಅವರ ಬರೆವಣಿಗೆಯ ಹಿಂದೆ ಅದು ಇಲ್ಲವೆಂದು ಹೇಳುವಂತಿಲ್ಲವಾದರೂ 'ವಾಸ್ತವ ಸತ್ಯ'ದೊಂದಿಗೆ ಮಾತುಕತೆಗೆ ಶುರುಮಾಡುತ್ತಾರೆ. ಗತ ಇತಿಹಾಸದ ಮುಖಾಂತರ ಹೀಗಿದ್ದಿರಬಹುದೆಂದು ಊಹಿಸುತ್ತಾ ಚರಿತ್ರೆಯ ಸತ್ಯಗಳನ್ನು ಹುಡುಕುವುದು ಒಂದು ಮಾದರಿಯಾದರೆ; ವರ್ತಮಾನ ಜಗತ್ತಿನ ಕ್ಲೀಷೆಗಳನ್ನು ಅರ್ಥಮಾಡಿಕೊಳ್ಳುತ್ತ ಗತಚರಿತ್ರೆಯ ವಿನ್ಯಾಸಗಳನ್ನು ತಿಳಿಯುವುದು ಮತ್ತೊಂದು ಮಾದರಿ. ಇ.ಎಂ.ಎಸ್. ಅವರು ಎರಡನೆಯ ಮಾದರಿಯ ರಚನೆಗೆ ತಮ್ಮ ಆಲೋಚನಾ ವಿಧಾನವನ್ನು ತೂಗಿಸುತ್ತಾರೆ. ಹೀಗೆ ತೂಗಿಸುವುದರಿಂದ ವರ್ತಮಾನ ಕಾಲದ ಬದುಕನ್ನು ನಿಕಷದಲ್ಲಿಟ್ಟು ನೋಡಲು ಸಾಧ್ಯವಾಗಿದೆ. ಎಂ.ಇ.ಎಸ್. ಅವರ ಬರೆವಣಿಗೆಯ ಹಿಂದೆ ಇರುವುದು ಈ ಬಗೆಯ ಹಿನ್ನೆಲೆಯಾದರೂ ಅದಕ್ಕೆ ತಕ್ಕ ಚೌಕಟ್ಟು ಮತ್ತು ನೆಯ್ಗೆ ಪಡೆದಿಲ್ಲ. ಕೇವಲ "ಗತಕಾಲದ ಸಂಪ್ರದಾಯಗಳು ಮತ್ತು ಸಂಸ್ಕೃತಿಗಳು ಭಾರತೀಯ ಸಮಾಜದಲ್ಲಿ ಗಾಢವಾಗಿ ಅಚ್ಚೊತ್ತಿರುವ ಭಾವನೆಗಳನ್ನು ರೂಪಿಸಿದ ವ್ಯವಸ್ಥೆಯನ್ನು ಜೀವನ ವಿಧಾನವನ್ನು ಅರಿತಿರಬೇಕಾಗುತ್ತದೆ" (ಬೆನ್ನುಡಿ) ಇದಿಷ್ಟೆ ತೆಳುವಾದ ನೆಲೆಯಲ್ಲಿ–ಇಲ್ಲಿನ ಬರೆವಣಿಗೆ ರೂಪುಗೊಂಡಿದ್ದರೂ, ಬರೆವಣಿಗೆಯ ಹಿಂದೆ ತಾರ್ಕಿಕ ಸಮ್ಮತವಾದ ಸಂಮೃದ್ಧವಾದ ನೆಲೆಯೂ ಮೈಗೂಡಿಕೊಂಡಿದೆ. ಆರ್ಯರು ಭಾರತಕ್ಕೆ ಬರುವ ಮುನ್ನ, ಇಲ್ಲಿ ಇದ್ದ 'ಸಂಸ್ಕೃತಿ'ಯ ವಿನ್ಯಾಸವನ್ನು, ಆರ್ಯರು ಬಂದ ಮೇಲೆ ಬಿದ್ದ ಸಾಂಸ್ಕೃತಿಕ ಮತ್ತು ಸಾಮಾಜಿಕ ಒತ್ತಡದ ಆಯಾಮಗಳನ್ನು ಒಂದೇ ಕಾಲದಲ್ಲಿ ಹೇಳಲು ತೊಡಗುತ್ತಾರೆ. ಹೀಗಾಗಿ ಬರೆವಣಿಗೆಯ ಹಿಂದೆ ಒಂದು 'ಸಮಗ್ರತೆ' ಇದೆ. ಜತೆಗೆ ಇ.ಎಂ.ಎಸ್. ಅವರ ಚಿಂತನಾ ಧಾಟಿಗೆ ಈ ಕೆಲವು ಮಾತುಗಳನ್ನು ಗಮನಿಸಬಹುದು; "ಸಿಂಧೂ ಸಂಸ್ಕೃತಿಯನ್ನಾಗಲೀ ದಕ್ಷಿಣ ಭಾರತದ ದ್ರಾವಿಡ ಸಂಸ್ಕೃತಿಯನ್ನಾಗಲೀ ಉತ್ಪ್ರೇಕ್ಷಿಸಿ ಹೇಳುವುದಾಗಲೀ ಅಥವಾ ಆರ್ಯರಿಂದ ಸೃಷ್ಟಿಸಲ್ಪಟ್ಟ ವೈದಿಕ ಸಂಸ್ಕೃತಿಯನ್ನು ದ್ರಾವಿಡ ಸಂಸ್ಕೃತಿಗೆ ಹೋಲಿಸುವುದಾಗಲೀ ಸರಿಯಲ್ಲ. ವೈದಿಕ ಸಂಸ್ಕೃತಿಗಿಂತ ಪುರಾತನವಾದರೂ,

ಅದಕ್ಕಿಂತಲೂ ಎಷ್ಟೋ ಅಭಿವೃದ್ಧಿ ಹೊಂದಿದ್ದರೂ 'ಸಿಂಧೂಸಂಸ್ಕೃತಿ' ಇಂದು ಉಳಿದಿಲ್ಲ'' (ಪು. ೮), ಬರವಣಿಗೆಯ ಹಿಂದೆ ಚರಿತ್ರೆಯ ಸತ್ಯಗಳನ್ನೂ ಹೊರತೆಗೆದು ಹೇಳುವಾಗಲೂ, ಸಂಗತಿಗಳನ್ನೂ ದಾಖಲಿಸುವಾಗಲೂ ಇ.ಎಂ.ಎಸ್ ಎಲ್ಲೂ ಭಾವೋದ್ವೇಗದಿಂದ ಮುರುಟುಗೊಳ್ಳುವುದಿಲ್ಲ: ಅಥವಾ ಪೂರ್ವನಿಶ್ಚಿತ ಧೋರಣೆಯಿಂದ ಮಾತಾಡಲು ತೊಡಗುವುದಿಲ್ಲ. ಇಂಥ ತಾತ್ವಿಕ ನೆಲೆಗಳು ಅವರ ಬರವಣಿಗೆ ಮತ್ತು ಆಲೋಚನಾ ವಿಧಾನದ ಹಿಂದೆ ಕೆಲಸ ಮಾಡಿದೆ. ಇದಕ್ಕೆ ಈ ಮಾತನ್ನು ಗಮನಿಸಬಹುದು "ತಮ್ಮೊಂದಿಗೆ ಬೆರತು ಹೋದ ಸಂಸ್ಕೃತಿಯನ್ನು ವೈಭವೀಕರಿಸಿ ನೋಡುವುದು. ಇತರ ಸಂಸ್ಕೃತಿಗಳ ಅಂಶಗಳನ್ನು ಕೀಳಾಗಿ ಕಾಣುವುದು ಇದನ್ನು ಬಹಳ ಮಂದಿ ಮಾಡುತ್ತಿದ್ದಾರೆ. ಆರ್ಯ–ದ್ರಾವಿಡ ಸಂಸ್ಕೃತಿಗಳನ್ನು ಪರಸ್ಪರ ಹೋಲಿಕೆ ಮಾಡುವುದನ್ನೇ ಇದಕ್ಕೆ ನಿದರ್ಶನವನ್ನಾಗಿ ಕೊಡಬಹುದು'' ಒಟ್ಟಾಗಿ ವೈಚಾರಿಕ ನೆಲೆಯೇ ಇಲ್ಲಿನ ಬರೆಹಗಳ ಮೂಲ ಪ್ರೇರಣೆ. ಮೇಲಿನ ಎರಡು ಪ್ಯಾರಾಗಳನ್ನು ಗಮನಿಸಿದರೆ ಇ.ಎಂ.ಎಸ್. ಅವರ ಒಟ್ಟು ಚಿಂತನೆಯ ನೆಲೆ ತನ್ನ ಸುತ್ತ ಮುತ್ತಣ ಬದುಕನ್ನೂ ನಡೆದಿರುವ ವಾಗ್ವಾದಗಳನ್ನೂ ತಿಳಿದು ಬರೆಯುತ್ತ ಹೋಗಿರುವುದು ಗಮನೀಯ ಹಾಗೂ ಸಂತೋಷ ತರುವ ಸಂಗತಿ. ಅನುವಾದ ಸುಲಲಿತವಾಗಿಲ್ಲ. ವಾಕ್ಯ ರಚನೆಯಲ್ಲಿ ಎಷ್ಟೆಷ್ಟೋ ಕರ್ಮಣಿ ಪ್ರಯೋಗಗಳು ಬರುತ್ತವೆ. ಅವು ಕಿವಿಗೆ ಹೊಂದಿಕೊಳ್ಳುವುದಿಲ್ಲ. ಸಮಾಜವಾದೀ ನೆಲೆಗಳಿಂದ ಚರಿತ್ರೆಯನ್ನು ನೋಡುವವರಿಗೆ ಇದು ಉಪಯುಕ್ತ–ಹೊತ್ತಗೆ.

**ಕೋಮು ಸೌಹಾರ್ದ** —ಎಚ್.ಎಸ್. ದೊರೆಸ್ವಾಮಿ.

'ಕೋಮು' ಪರಿಕಲ್ಪನೆಯನ್ನು ವಿವಿಧ ಘಟ್ಟಗಳಲ್ಲಿ, ಬೇರೆ ಬೇರೆ ಸ್ತರಗಳಲ್ಲಿ ವ್ಯಾಖ್ಯಾನಿಸಿಕೊಳ್ಳಲು ಹೊರಟಂತಹ ಪುಸ್ತಿಕೆ. ಮುಸ್ಲಿಂ ಮತ್ತು ಹಿಂದೂಗಳ ಬಗ್ಗೆ ಈಚಿನ ವರ್ಷಗಳಲ್ಲಿ ಎದ್ದಿರುವ 'ಭುಗಿಲು' ಆದ ಅನಾಹುತಗಳನ್ನು ಚಾರಿತ್ರಿಕ ಕಾಲ ಘಟ್ಟಗಳ ಸಂದರ್ಭದಲ್ಲಿ ವಿವೇಚಿಸಲು ತೊಡಗುತ್ತದೆ. ಅಲ್ಲಲ್ಲಿ ಜನಪ್ರಿಯ ಹೇಳಿಕೆಗಳು ಬಂದರೂ ಒಟ್ಟು ಸೌಹಾರ್ದದ ನೆಲೆಗಳನ್ನು ವ್ಯಾಖ್ಯಾನಿಸಿಕೊಳ್ಳಲು ನೆರವಾಗುತ್ತದೆ: ಭಾರತ ಇಬ್ಭಾಗವಾದ ಕಾಲ ಮೌಂಟ್‌ಬ್ಯಾಟನ್ ಗೌರ್ನರ್ ಜನರಲ್ ಆಗಿದ್ದ ಸಮಯ. ಆಗ ಪಂಜಾಬ್ ಹಾಗೂ ಬಂಗಾಳಗಳಲ್ಲಿ ಕೋಮು ಘರ್ಷಣೆ ನಡೆದು ಹೋಯಿತು. ಆಗ ಗಾಂಧೀಜಿ ಅವರು ತಮ್ಮ ಸಹಚರರೊಡನೆ ಬಂಗಾಳಕ್ಕೆ ಹೋಗಿ 'ಶಾಂತಿ'ಯ ಮಂತ್ರ ಹೇಳಿದರು. ಅದೇ ಕಾಲಕ್ಕೆ ಪಂಜಾಬ್ ಗಲಾಟೆ ತಡೆಯಲು 5500 ಜನ ಸಶಸ್ತ್ರ ಪಡೆಯನ್ನು ಪಂಜಾಬಿಗೆ ಗೌರ್ನರ್ ಕಳುಹಿಸಿಕೊಟ್ಟರು. ಗಾಂಧೀಜಿ ಹಳ್ಳಿಹಳ್ಳಿಗೂ ಹೋಗಿ ಕೋಮು ದುಳ್ಳುರಿಯನ್ನು ಶಮನಗೊಳಿಸುತ್ತ ವಿವೇಕ ಹೇಳಿದರು. ಹಿಂಸಾಕೃತ್ಯದಲ್ಲಿ ತೊಡಗದ ಹಾಗೆ ನೋಡಿಕೊಂಡರು. ಆದರೆ, ಪಂಜಾಬಿಗೆ ಹೋದ ಸಶಸ್ತ್ರ ಪಡೆ

ಕೊಲೆಗಡುಕರನ್ನು ದಮನಮಾಡಿ ಹಿಂಸಾಕೃತ್ಯಗಳು ನಡೆಯದಂತೆ ತಡೆಗಟ್ಟಿದರು. ಇವೆರಡರ ಉಲ್ಲೇಖಗಳು ಈ ಪುಸ್ತಿಕೆಯಲ್ಲಿ ಬಂದಿವೆ. ಲೇಖಕರು ಗಾಂಧೀ ಚಿಂತನೆಯ ನೆರಳಲ್ಲಿ ಸೌಹಾರ್ದದ ಕಲ್ಪನೆಯನ್ನು ವಿಶ್ಲೇಷಿಸುವ ರೀತಿಗೆ ಗಮನೀಯವಾದ ಒಂದು ಉದಾಹರಣೆ.

**ರಾಮಜನ್ಮಭೂಮಿ ಬಾಬ್ರಿ ಮಸೀದಿ** – ವಿವಿಧ ಲೇಖಕರು

ನಾಲ್ಕು ಜನ ಇತಿಹಾಸಕಾರರ ಅಭಿಪ್ರಾಯಗಳನ್ನು, ಅವರ ವಿಶ್ಲೇಷಣೆಯನ್ನು ಒಟ್ಟಾಗಿ ಕೊಡುವ ಪುಸ್ತಿಕೆ. ವಿಶ್ವಹಿಂದೂ ಪರಿಷತ್ ಮಂಡಿಸುವ ಐತಿಹಾಸಿಕ ವಾದಕ್ಕೆ ಪ್ರತಿವಾದವನ್ನು ಮಂಡಿಸುವುದಷ್ಟೇ ಈ ಪುಸ್ತಿಕೆಯ ಉದ್ದೇಶವಲ್ಲ. ವಾದದ ಕಲ್ಪನೆಯೇ ಸುಳ್ಳು ಮತ್ತು ಸತ್ಯಗಳ ನಡುವೆ ಓಡಾಡುತ್ತದೆ. ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂದರ್ಭದ ಸಮಯದಲ್ಲಂತೂ ಇದು ಹದ್ದು ಮೀರಿ ಬೆಳೆಯುತ್ತದೆ. ಆರ್.ಎಸ್.ಎಸ್ ನವರ ನೆಲೆಯೂ ಈ ಬಗೆಯದೇ. ಅದಕ್ಕೆ ಪರಿಹಾರೋಪಾಯವಾಗಿ ಮಂಡಿಸಬಹುದಾದದ್ದು ಕೇವಲ FACTS ಮಾತ್ರವೇ, ಇಲ್ಲಿನ ಆರ್.ಎಸ್. ಶರ್ಮ, ಅತ್ತರ್ ಅಲಿ, ಡಿ.ಎನ್. ಝಾ ಮತ್ತು ಸೂರಜ್ ಭಾನು– ಇತಿಹಾಸ ಪ್ರಾಚ್ಯಶಾಸ್ತ್ರ, ಉತ್ಖನನಗಳ ನೆಲೆಯಲ್ಲಿ FACTS ಗಳನ್ನು ಮಾತ್ರ ಮಂಡಿಸುತ್ತಾರೆ. ಕುತೂಹಲದ ಪುಸ್ತಿಕೆಯೇ ಸರಿ.

**ಪದಾರ್ಥ ಚಿಂತಾಮಣಿ** – ಪಾ. ವೆಂ. ಆಚಾರ್ಯ

ಸಂಶೋಧನೆಯೆಂದೂ ವೈಚಾರಿಕ ಸಾಹಿತ್ಯವೆಂದೂ ಅಥವಾ ವೈಚಾರಿಕ ಸಂಶೋಧನೆಯೆಂದೂ ವ್ಯಾಖ್ಯಾನಿಸುವುದು ಕಷ್ಟವಾದರೂ ಇಲ್ಲಿನ ಬರೆಹಗೆಯನ್ನು ಹಾಗೂ ಚಿಂತನಾ ವಿಧಾನವನ್ನೂ ಕಂಡರೆ ಇವೆಲ್ಲವೂ ಬೇರೆ ಬೇರೆ ರೂಪಗಳಲ್ಲಿ ಒಮ್ಮೆಲೆ ಪಡೆದಿರುವುದಂತೂ ಸತ್ಯ. ಭಾಷಿಕ ಆಕೃತಿಗಳ ಮುಖಾಂತರ ಸಾಂಸ್ಕೃತಿಕ ಆಶಯಗಳನ್ನು ಗ್ರಹಿಸುವ ಇಲ್ಲಿನ ಬರೆವಣಿಗೆ ಚೇತೋಹಾರಿಯಾಗಿದೆ. ಓದಿ ಮೆಚ್ಚಬಲ್ಲ, ಪದೇ ಪದೇ ಓದಬಲ್ಲ ಗಣ್ಯಪುಸ್ತಕಗಳಲ್ಲಿ ಇದೊಂದೆಂದು ಸಂತೋಷದಿಂದ ಹೇಳಬಹುದು.

ಮೇಲೆ ತಿಳಿಸಿದ ಪುಸ್ತಕಗಳ ಜತೆ ಸ್ಥೂಲವಾಗಿ ಗಮನಿಸಬಹುದಾದ ಪುಸ್ತಕಗಳಲ್ಲಿ ಸಿದ್ದಲಿಂಗಯ್ಯ ಬನ್ನಂಗಾಡಿ ಅವರ 'ದತ್ತಗುರು ಶ್ರೀ ಸದಾನಂದ ಮಹಾರಾಜರು ಮತ್ತು ಭಕ್ತಿಪಂಥಗಳು' ಎನ್. ಗಾಯತ್ರಿ ಅವರ 'ಮಹಿಳೆ ಬಿಡುಗಡೆಯ ಹಾದಿಯಲ್ಲಿ' ಇವೆರಡೂ ವೈಚಾರಿಕ ನೆಲೆಗಳನ್ನೇ ಬಂಡವಾಳವನ್ನಾಗಿ ಮಾಡಿಕೊಂಡಿವೆ. ಆದರೆ, ಗಾಯತ್ರಿ ಅವರ ಪುಸ್ತಕದ ಹಿಂದೆ ಖಚಿತವಾದ ಚಾರಿತ್ರಿಕ ನೆಲೆಗಟ್ಟುಗಳಿವೆ ಮಾತ್ರವಲ್ಲ 'ಸ್ತ್ರೀವಾದಿ ನೆಲೆ'ಯೂ ಪ್ರಬಲವಾದ ತಾತ್ವಿಕ ನೆಲೆಯಾಗಿ ರೂಪುಗೊಂಡಿದೆ. ಆದರೆ, ಸಿದ್ದಲಿಂಗಯ್ಯ ಬನ್ನಂಗಾಡಿ ಅವರದ್ದು ಖಚಿತ ನೆಲೆಯಿಲ್ಲದ ವೈಚಾರಿಕ ಕೃತಿ. ಇದಕ್ಕಿಂತ ಹೆಚ್ಚಿಗೆ ಬರೆಯಲು

ಪುಸ್ತಕ ನಮಗೆ ತೊಡಗಿಸುವುದಿಲ್ಲ.

ಇಲ್ಲಿನ ಕೆಲವು ಪುಸ್ತಕಗಳನ್ನು ಬೇರೆ ಬೇರೆ ವರ್ಗಗಳಲ್ಲಿ ವಿಂಗಡಿಸಿ ನೋಡಬಹುದೆಂದು ತೋರುತ್ತದೆ. ಆದರೆ, ಪುಸ್ತಕಗಳ ಮೂಲಧಾತು 'ವೈಚಾರಿಕ'ವೇ ಆಗಿದ್ದರೆ ಅಂಥವುಗಳನ್ನು ಇಲ್ಲಿ ನೋಡಲಾಗಿದೆ. ಇಷ್ಟಾದರೂ 'ವೈಚಾರಿಕ ಸಂಶೋಧನೆ' ಎನ್ನುವುದು ಇನ್ನೂ ಅಗತ್ಯವಾಗಿ ಖಚಿತವಾದ ಹಾಗೂ ತಾತ್ವಿಕ ನೆಲೆಗಳನ್ನು ಪಡೆಯಬೇಕಾಗಿದೆ. ಕನ್ನಡದ ಮಟ್ಟಿಗೆ ಈ ಬಗೆಯ ಬರೆಹ, ಇನ್ನೂ ಅಂಬೆಗಾಲಿಡುವ ಸ್ಥಿತಿಯಲ್ಲಿರುವುದನ್ನು ಅನಿವಾರ್ಯವಾಗಿ ಒತ್ತಿ ಹೇಳಬೇಕಾಗಿದೆ, ಶಂಬಾಜೋಶಿ, ಅವರಂತಹವರನ್ನು ಹೊರತುಪಡಿಸಿದರೆ ಕನ್ನಡದಲ್ಲಿ ಆ ಸಮೃದ್ಧತೆ ಹಾಗೂ ಚಿಂತನೆ ಎಲ್ಲಿ ಸಿಕ್ಕೀತು? ಇಂಥ ಅಸಮಾಧಾನಗಳು ನನ್ನನ್ನು ಕಾಡಿವೆ. ಹೀಗಿದ್ದೂ ಇಲ್ಲಿನ ಪುಸ್ತಕಗಳು ಸ್ವಲ್ಪ ಉಸಿರಾಡಲು ಅವಕಾಶ ಕಲ್ಪಿಸಿಕೊಡುತ್ತವೆಂಬುದು ಸಮಾಧಾನದ ಅಂಶವೂ ಆಗಿದೆ.

# ಓಲೆಗರಿಗಳ ಸಂಶೋಧನೆ : ಕೆಲವು ವಿವರಗಳು

ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದ ಶ್ರೀ ಎಸ್. ಶಿವಣ್ಣನವರು ಕರ್ನಾಟಕದ ಬೇರೆ ಬೇರೆ ಮಠಗಳಲ್ಲಿ ಇರುವ ಸಂಗ್ರಹದಲ್ಲಿ ದೊರಕಿದ, ಬೇರೆ ಬೇರೆ ಸಾಹಿತ್ಯ ಪ್ರಕಾರಗಳಲ್ಲಿ ಅಭಿವ್ಯಕ್ತಿಗೊಂಡ ಕೃತಿಗಳನ್ನು ಮೊದಲಬಾರಿಗೆ ಗುರುತಿಸಿದ್ದಾರೆ. ಆ ಕೃತಿಕಾರರು ಹಾಗೂ ಕೃತಿಗಳು ಹೀಗಿವೆ.

**ಅ. ಚಿತ್ರದುರ್ಗ – ಬೃಹನ್ಮಠದ ಸಂಗ್ರಹ**

| | |
|---|---|
| 1. ಇಮ್ಮಡಿ ಗುರುಸಿದ್ಧ (–1729) | : 1. ಅನ್ಯಮತ ಖಂಡನೆಯ ಹೋಳಿಪದ<br>2. ಕರಣ ಹಸಿಗೆ ಟೀಕೆ |
| 2. ಉದ್ದಾನ ಸಿದ್ಧ ಲಿಂಗದೇವ (1750) | : 1. ಆಭವಕಂದ (ಸಂಕಲನ)<br>2. ಶಂಕರದೇವರ ಕಂದ (ಸಂಕಲನ) |
| 3. ಕನಕಪುರವರಾಧೀಶ್ವರ (1500) | : ಷಡುಸ್ಥಲದ ವಚನ (ಸಂಕಲನ) |
| 4. ಕಸ್ತೂರಿ ಸಿದ್ಧ (1700) | : ಇಕ್ಕದ ಮಾರಗೊಂಡನ ತಾರಾವಳಿ |
| 5. ಕಾಶಿ ಗುರುಲಿಂಗದೇವ (1720) | : ವಿಶೇಷಾರ್ಥ ಪ್ರಕಾಶಿಕೆ ಟೀಕೆ |
| 6. ಗದುಗಿನ ಬಸವ (?) | : ಒಪ್ಪತ್ತಿನ ಚೆನ್ನಬಸವೇಶ್ವರ ಸ್ತೋತ್ರದ ಗದ್ಯ |
| 7. (ಚೆನ್ನಬಸವ) (?) | : ಮನೋವ್ಯಾಕುಲ ನಿರಸನ ರಗಳೆ |
| 8. ಜ್ವಲಕಂಠ ಮಹಾಂತಸ್ವಾಮಿ | : ಛಂದಸ್ಸಿನ ಗಣನೆಯ ವಾರ್ಧಿಕ |
| 9. ಧರಣಿದೇವ (?) | : ಚಿತ್ಪಿಂಡದ ಹಸುಗೆ |
| 10. ಮರಿ ರಾಚವಟ್ಟೇಶ (1720) | : ಅಲ್ಲಮ ಪ್ರಭು ಸ್ತೋತ್ರ ಷಟ್ಪದಿ |
| 11. ವೆಂಕಟದಾಸ (1750) | : 1. ಅಖಂಡಾನಂದ ಸ್ವರೂಪ<br>2. ಕೀರ್ತನೆ<br>3. ತತ್ವಜ್ಞಾನ<br>4. ಪಂಚೀಕರಣ |

12. ಸ್ವಾದಿ ಬಸವಲಿಂಗ (1720) : 1. ಗುರುಸಿದ್ದೇಶ್ವರ ಸ್ತೋತ್ರ
2. ಹಾಡು

13. ಸ್ವಾದಿ ಸದಾಶಿವರಾಜ (17ನೇ ಶತಮಾನ) : ಸದಾಶಿವ ರಾಜೀಯ

14. ಸಿದ್ಧರಾಮ (1160) : ಅಕ್ಷರಾಂಕ

15. ಸೋಮೇಕಟ್ಟೆ ಚೆನ್ನವೀರ ಸ್ವಾಮಿ (1700) : 1. ಆಚರಣೆಯ ತ್ರಿವಿಧಿ
2. ಇಷ್ಟಲಿಂಗ ಚಾರಿತ್ರ
3. ಗಣನಾಮ ತಾರಾವಳಿ
4. ಗುರುಕರುಣಾಮೃತ
5. ಚೆನ್ನಬಸವನ ಸ್ತೋತ್ರ
6. ಹಾಡು

16. ಹಂಡೆ ಮಲ್ಲಪ್ಪ (1400?) : ಹಂಡೆ ಮಲ್ಲಪ್ಪ ಮಾಡಿದ ವಚನ

17. ಹಂಪೆಯ ಹರಿಹರ (1200) : ಹರೀಶ್ವರ ದೇವರ ಕಂದ (102 ಕಂದಗಳು)

18. ಹುಮನಾಬಾದಿನ ನಿರಂಜನಸ್ವಾಮಿ (1800) : ಷಟ್ಸ್ಥಲ ಜ್ಞಾನ ಸಾರಾಮೃತ ಟೀಕೆ

19. ಹೊನ್ನಾಳಿ ಸಿದ್ಧಲಿಂಗಪ್ಪ : ಪ್ರಮಥ ಸ್ತೋತ್ರ

**ಆ. ಹೊನ್ನಾಳ್ಳಿ ಸಿದ್ದವೀರೇಶ್ವರ ಮಠದಲ್ಲಿನ ಕೃತಿಗಳು (ತಿಪಟೂರು)**

(1) 6000 ವಚನಗಳ ಕಟ್ಟು ಇಲ್ಲಿ ಇದ್ದು – ಇವುಗಳಲ್ಲಿ ನೀಲಮ್ಮನ 288 ವಚನಗಳೂ, ಅಕ್ಕ ಮಹಾದೇವಿಯ 223 ವಚನಗಳೂ, ಸಿದ್ಧರಾಮನ 1325 ವಚನಗಳಿವೆ.

(2) ಹೊನ್ನವಳ್ಳಿ ಸಿದ್ಧವೀರೇಶ್ವರನ ಪವಾಡ

(3) ಸಿದ್ದವೀರೇಶ್ವರನ ನವರತ್ನಮಾಲೆ

(4) ಸೋಮೇನಕಟ್ಟೆ ಚೆನ್ನವೀರಸ್ವಾಮಿಗಳ 21 ಕೃತಿಗಳು ಮತ್ತು ಸ್ವರ ವಚನಗಳು

**ಇ. ಸಿದ್ದಗಂಗೆ ಮಠದ ಸಂಗ್ರಹ**

(1) ಮರುಳ ಸಿದ್ದೇಶ್ವರ ಸಾಂಗತ್ಯ

(2) ಶತಕ ಸಂಕಲನಗಳು

ಬ್ರಹನ್ಮಠದಲ್ಲಿರುವ 'ಹರೀಶ್ವರ ದೇವರ ಕಂದ'ವು ಹಂಪಿಯ ಹರಿಹರದೇವ ಕೃತ ಶತಕವೆಂದು ಶಿವಣ್ಣನವರು ಗುರುತಿಸಿದ್ದಾರೆ. ಕಂದ ಪದ್ಯಗಳಲ್ಲಿ 'ಹಂಪೆಯ ಹರಿಗ' 'ಹಂಪೆಯ ಹರಿಹರ'ನೆನ್ನುವ ಪದಗಳನ್ನು ಅನೇಕ ಕಡೆಗಳಲ್ಲಿ ಕವಿ ಬಳಸುತ್ತಾನೆ. ಹರಿಹರನ ಉಳಿದ ಶತಕಗಳಂತೆ ಇಲ್ಲಿ ಭಕ್ತಿಯ ಭಾವದ

ಔನ್ನತ್ಯವನ್ನು ಗುರುತಿಸಬಹುದು. ಹರೀಶ್ವರ ಕಂದದ ಕೆಲವು ಕಂದಪದ್ಯಗಳನ್ನು ಕವಿಯ ಶೈಲಿಯ ಭಿನ್ನ ಸ್ವರೂಪವನ್ನು ಅರಿಯುವ ಕಾರಣಕ್ಕಾಗಿ ಕೆಳಗೆ ಉದಾಹರಿಸಿದೆ:

ಹಾಡಿ ವಿರಾಪಾಕ್ಷಾಯೆನು
ತಾಡಿ ವಿರೂಪಾಕ್ಷಾಯೆನುತೆ ತಣಿಯದೆ ಮೈ
ಗೂಡಿ ವಿರೂಪಾಕ್ಷಾಯೆನು
ತೀಡಿರೆವೆನದೆಂದೊ ಹಂಪೆಯ ವಿರೂಪಾಕ್ಷಾ

ಸವೆಯದ ಸವಿಯೇ ತೀರದ
ತವರಾಜವೆ ಕರಗದಾಲಿವರಲೆಲೆ ಕಣ್ಗೊ
ಪ್ಪುವ ರೂಹಿನಮೃತವೇ ಸೋಂ
ಕುವ ಸುಖವೇ ನೋಡು ಹಂಪೆಯ ವಿರೂಪಾಕ್ಷಾ

ಬರೆ ಬರೆ ಉರದೊಳ್ಪೆಸರ
ಕ್ಷರಮುಮನೊತ್ತೊತ್ತು ಮುಡುಹಿನೊಳ್ಲಿಂಗಮುಮಂ
ಕಿರಿಕಿರಿ ತಲೆಯಂ ತೂಳ್ದು
ಗಿರಿಸಿರಿಸಿರಿಸಯ್ಯಾ ಹಂಪೆಯ ವಿರೂಪಾಕ್ಷಾ

ಅತ್ತ ಇತ್ತಂ ಚರಿಸದೆ
ಮತ್ತೊಂದಂ ನೆನೆಯದನುದಿನಂ ನಿಮ್ಮಡಿಯಂ
ಪತ್ತಿ ಚೆಗುರ್ತು ಕೊನರ್ತು ತ
ಳಿರ್ತು ಸಾರ್ವನಯ್ಯ ಹಂಪೆಯ ವಿರೂಪಾಕ್ಷಾ

* * *

ಹೊನ್ನವಳ್ಳಿ ಸಿದ್ಧವೀರೇಶ್ವರ ಮಠದಲ್ಲಿ ಸಿಕ್ಕ ಅಕ್ಕಮಹಾದೇವಿಯ ಹೊಸ ವಚನಗಳನ್ನು ಶಿವಣ್ಣನವರು ಪ್ರತಿಮಾಡಿಟ್ಟುಕೊಂಡಿದ್ದು ಅವುಗಳಲ್ಲಿ ಹಲವಾರು ವಚನಗಳು, ಶೈಲಿ, ಭಾವ, ಲಯದ ದೃಷ್ಟಿಯಿಂದ ಹೊಸ ಅನುಭವವನ್ನು ಕೊಡುವಂತಿವೆ. ಕೆಲವನ್ನು ಇಲ್ಲಿ ಉದಾಹರಣೆಗಾಗಿ ಕೊಟ್ಟಿದೆ.

ಗಂಡ ಮನೆಗೆ ಒಡೆಯನಲ್ಲ
ಹೆಂಡತಿ ಮನೆಗೆ ಒಡತಿಯೇ? ಒಡತಿಯಲ್ಲ.
ಗಂಡ ಹೆಂಡಿರ ಸಂಬಂಧವಿಲ್ಲಯ್ಯ ಗಂಡುಗಲಿಯೇ
ಚೆನ್ನಮಲ್ಲಿಕಾರ್ಜುನಾ ನೀ ಮನೆಯೊಡೆಯನೆಂದು
ನಾ ದುಡಿವೆ ತೊತ್ತುಗೆಲಸವನು ॥

ಸಾವಿರ ಹೊನ್ನಿಂಗೆ ಸಾದ ಕೊಂಡು
ಸುಣ್ಣವ ಬೆರಸಿದಂತೆ
ಮಾಡಿದೆಯಲ್ಲಯ್ಯ
ನೂರು ಲಕ್ಷದ ಬೆಲೆಗೆ ರತ್ನವ ಕೊಂಡು
ಮಡುವಿನಲ್ಲಿ ಇಟ್ಟಂತೆ ಮಾಡಿದೆಯಯ್ಯಾ.
ಚೆನ್ನಮಲ್ಲಿಕಾರ್ಜುನಯ್ಯ
ಎನ್ನ ಮುಟ್ಟಿ ಪಾವನವ ಮಾಡಿ
ಕಷ್ಟ ಸಂಸಾರಿಗೊಪ್ಪಿಸುವಂತೆ ಮಾಡಿದೆಯಯ್ಯ ॥

ಎನ್ನ ತುಂಬಿದ ಜವ್ವನ ತುಳುಕದ ಮೋಹನವ
ನಿನಗೆ ಇಂಬು ಮಾಡಿಕೊಂಡಿರ್ದೆನಲ್ಲಾ ಎಲೆಯಯ್ಯಾ?
ಎನ್ನ ಲಂಬಿಸುವ ಲಾವಣ್ಯದ ರೂಪುರೇಖೆಗಳ
ನಿನ್ನ ಕಣ್ಣಿಗ ಕಯಿವಿಡಿದಂತೆ ಮಾಡಿರ್ದೆನಲ್ಲಯ್ಯ
ನಿನ್ನ ಮುಂದಿಟ್ಟಗಲಸನ್ಯರು ಕೊಂಡೊಯಿವಾಗ
ಲೆಂತು ಸೈರಿಸಿದೆ ಹೇಳಾ
ಚೆನ್ನಮಲ್ಲಿಕಾರ್ಜುನಾ ॥

# ನಮ್ಮನ್ನಗಲಿದ ಸಾಹಿತಿಗಳು

ಎಚ್. ಎಸ್. ರಾಘವೇಂದ್ರರಾವ್



## ಅನುಪಮಾ ನಿರಂಜನ
## (1934–1991)

ಕನ್ನಡದ ಇಂದಿನ ಸಾಂಸ್ಕೃತಿಕ ಸಂದರ್ಭದ ಪ್ರಮುಖ ಧಾರೆಗಳಲ್ಲಿ ಒಂದಾಗಿ ರೂಪು ತಳೆಯಲು ಹವಣಿಸುತ್ತಿರುವ, ಸ್ತ್ರೀವಾದೀ/ಸ್ತ್ರೀಪರ ಚಳುವಳಿಯ 'ಮಾದರಿ'ಗಳಲ್ಲಿ ನೇತಾರರಲ್ಲಿ ಒಬ್ಬರಾಗಿದ್ದ, ಕನ್ನಡದ ಪ್ರಮುಖ ಲೇಖಕಿ ಅನುಪಮಾ ನಿರಂಜನ ಅವರದು ಆ ಪದದ ಹಲವು ಅರ್ಥಗಳಲ್ಲಿ ಧೀರಜೀವನ. ಅಸಹನೀಯವಾದ ದೈಹಿಕ ಯಾತನೆಯನ್ನು ಹಲ್ಲು ಕಚ್ಚಿ ಸಹಿಸುವುದರಿಂದ ಹಿಡಿದು, ಮದುವೆ, ಉದ್ಯೋಗ, ಬರವಣಿಗೆ ಮುಂತಾದ ಕ್ಷೇತ್ರಗಳಲ್ಲಿ ಅಂದಿಗೆ ಕ್ರಾಂತಿಕಾರಕವೆನ್ನಿಸಿದ್ದನ್ನು ಮಾಡಿತೋರಿಸುವರೆಗೆ ಅವರ ಧೀರತೆ ಹರಡಿಕೊಂಡಿತ್ತು. ಕನ್ನಡದಲ್ಲಿ ಮಹಿಳೆಯರ ವಿಕಸನ ಪಥದ ನಕ್ಷೆಯೊಂದನ್ನು ತಯಾರಿಸಿದಾಗ ಅದರಲ್ಲಿ ಅನುಪಮಾ ಅವರಿಗೆ ಅನನ್ಯವಾದ ಸ್ಥಾನವೊಂದು ಮೀಸಲಾಗಿರುತ್ತದೆ.

ಪ್ರಮುಖವಾಗಿ ಕಥೆ–ಕಾದಂಬರಿಗಳಿಗೆ ಸೀಮಿತವಾಗಿದ್ದ ಅನುಪಮಾ (ಜ. 1934) ಅವರ ಸೃಜನಶೀಲ ಬರವಣಿಗೆಯನ್ನು, ಜನಪ್ರಿಯ ಸಾಹಿತ್ಯದಿಂದ ಸ್ತ್ರೀವಾದಿ ಬರವಣಿಗೆಯ ಕಡೆಗೆ ನಡೆಸಿದ ಪ್ರಯಾಣವೆಂದು ಗುರುತಿಸಲು ಸಾಧ್ಯ. ಎರಡೂ ಹಂತಗಳಲ್ಲಿ ಅವರ ಬರವಣಿಗೆಯ ಒತ್ತು ಬೀಳುವುದು ಹೆಣ್ಣಿನ ಸಮಸ್ಯೆಗಳ ಮೇಲೆಯೇ, ಮೊದಮೊದಲ ಕಥೆ–ಕಾದಂಬರಿಗಳಲ್ಲಿ ಹೆಣ್ಣಿನ ನೋವು, ತ್ಯಾಗ, ರಮ್ಯ ದೃಷ್ಟಿ ಆದರ್ಶಪ್ರಿಯತೆ ಮುಂತಾದ ಗುಣಗಳನ್ನು

ವೈಭವೀಕರಿಸುವ ಪ್ರಯತ್ನಗಳು ಕಾಣುತ್ತವೆ. ಅದು ಹೆಣ್ಣಿನ ಪರವಾಗಿ ಮಾತನಾಡುವಾಗಲೂ ಆವೇಗ ಭಾವನಾತ್ಮಕವಾದ ಒತ್ತಾಸೆಯನ್ನು ನೀಡುವ ಪ್ರಯತ್ನ ಮಾತ್ರ. 'ಅನಂತಗೀತೆ', 'ಹೃದಯವಲ್ಲಭ' 'ಚಿತ್ತಮೋಹನ' ಮುಂತಾದ ಕೃತಿಗಳು ಈ ಹಂತದಲ್ಲಿ ಪ್ರಾತಿನಿಧಿಕವಾಗಿದೆ. ಕ್ರಮೇಣ ಅವರು ಹೆಣ್ಣಿನ ಸಮಸ್ಯೆಯನ್ನು ಅದರ ಸಾಮಾಜಿಕ ನೆಲೆಗಳಲ್ಲಿ, ಎಂದರೆ ಪುರುಷ ಪ್ರಧಾನ ಸಂಸ್ಕೃತಿಯಿಂದಾಗುವ ಶೋಷಣೆಯಾಗಿ ಗುರುತಿಸತೊಡಗಿದರು. 'ಮುಕ್ತಚಿತ್ರ', 'ಆಳ', 'ಘೋಷ' ಮುಂತಾದ ಕೃತಿಗಳು ಈ ದಿಕ್ಕಿನಲ್ಲಿ ಮುಖ್ಯವಾದವು. ಇವೆಲ್ಲಕ್ಕಿಂತ ಹೆಚ್ಚಾಗಿ ಪುರಾಣಗಳಲ್ಲಿ ಬರುವ ಹೆಣ್ಣೊಬ್ಬಳು ಊಹೆಗೂ ಮೀರಿದ ಲೈಂಗಿಕ ಶೋಷಣೆಯ ದಾರಿಯಲ್ಲೇ ಸ್ವಪ್ರಜ್ಞೆಯನ್ನು ಸಂಪಾದಿಸಿಕೊಳ್ಳುವ ಕಥೆಯನ್ನು ನಿರೂಪಿಸುವ 'ಮಾಧವಿ' ಅನುಪಮಾ ಅವರ ಪ್ರಮುಖ ಕೃತಿಯಾಯಿತು. ಅವರ ಸ್ತ್ರೀವಾದವು ಕೆಲವು ಕಡೆ ಚರ್ಚಾಸ್ಪರ್ಧೆಗೆ ಸಹಜವಾದ ಚೀರುದನಿಯನ್ನು ಪಡೆದುಕೊಂಡರೂ ಒಟ್ಟಂದದಲ್ಲಿ ಅವರ ಸಮಗ್ರ ಕಾಳಜಿಗಳನ್ನು, ಸತ್ಯಪರತೆಯನ್ನು ಅಲ್ಲಗಳೆಯಲಾಗುವುದಿಲ್ಲ. ಅಲ್ಲದೆ ಪಾತ್ರಗಳ ಸಂಕೀರ್ಣತೆಯನ್ನು ಬದಿಗಿಟ್ಟು ಪ್ರಾತಿನಿಧಿಕತೆಯನ್ನು ಅರಸಿಕೊಳ್ಳುವ 'ಪ್ರಗತಿಶೀಲ' ಮಾದರಿ. ಅವರು ತಮ್ಮ 'ಏಳಿ', 'ಕೊಳಚೆಕೊಂಪೆಯ ದಾನಿಗಳು' ಮುಂತಾದ ಕೃತಿಗಳಲ್ಲಿ ಕೆಳವರ್ಗದವರೆಂದು ಅಲಕ್ಷಿತವಾಗಿದ್ದ ಜನರ ಬದುಕಿನ ಏರುಪೇರುಗಳನ್ನು ಸಹಾನುಭೂತಿಸಹಿತವಾದ ವಾಸ್ತವ ಮಾರ್ಗದಲ್ಲಿ ಹಿಡಿದಿಡುವ ಪ್ರಯತ್ನ ನಡೆಸಿದರು. ಒಟ್ಟಿನಲ್ಲಿ ಅವರು ತಮ್ಮ ಸುತ್ತಲಿನ ಮಹಿಳಾಸಾಹಿತ್ಯದಲ್ಲಿ ಆಗುತ್ತಿದ್ದ ಬದಲಾವಣೆಗಳನ್ನು ತೆರೆದ ಕಣ್ಣುಗಳಿಂದ ನೋಡುತ್ತಾ ಬಂದವರು. ಅವುಗಳಿಂದ ಪಾಠ ಕಲಿತವರು. ಕೃತಿಯ ಕಲಾತ್ಮಕತೆಗಿಂತ ಅದರ ಆಶಯಗಳ ಖಚಿತತೆಯ ಕಡೆಗೆ ಸದಾ ತುಡಿದವರು. ಅಂಥ ನಿಲುವಿನ ಲಾಭ ನಷ್ಟಗಳೆರಡನ್ನೂ ಅನುಭವಿಸಿದವರು.

ಲೇಖಕಿಯೊಬ್ಬಳು ತನ್ನ ಅಸ್ತಿತ್ವವನ್ನು, ಅನನ್ಯತೆಯನ್ನು ಕ್ರಮೇಣ ಕಂಡು ಕೊಂಡ ಬಗೆಯ ದಾಖಲೆಗಳಾಗಿ, ಅವರ ಆತ್ಮಕಥೆಗಳಾದ 'ನೆನಪು : ಸಿಹಿ–ಕಹಿ' ಮತ್ತು 'ಬರಹಗಾರ್ತಿಯ ಬದುಕುಗಳು' ಮುಖ್ಯವಾಗುತ್ತವೆ.

ಕನ್ನಡ ಮಾತ್ರ ಬಲ್ಲ ಓದುಗರ ನಿಜವಾದ ಅಗತ್ಯವೊಂದನ್ನು ಗುರುತಿಸಿ, ಅದನ್ನು ಪೂರೈಸುವ ಪ್ರಾಮಾಣಿಕ ಪ್ರಯತ್ನದ ಫಲವಾಗಿ ಅನುಪಮಾ ಅವರ ವೈದ್ಯಕೀಯ ಕ್ಷೇತ್ರದ ಬರಹಗಳು ಮೂಡಿಬಂದಿವೆ. ಸ್ವತಃ ಸಮರ್ಥ ವೈದ್ಯೆಯೂ, ಭಾಷೆಯ ಮೇಲೆ ಪ್ರಭುತ್ವವುಳ್ಳವರೂ ಆಗಿದ್ದ, ಅನುಪಮಾ ಅವರು 'ವಧುವಿಗೆ ಕಿವಿಮಾತು', 'ತಾಯಿ–ಮಗು', 'ದಾಂಪತ್ಯ ದೀಪಿಕೆ', ಮುಂತಾದ ಉಪಯುಕ್ತವಾದ ಕೃತಿಗಳನ್ನು ರಚಿಸಿದರು. ತಜ್ಞರಾಗಲೀ, ವೈದ್ಯಕೀಯ ವಿದ್ಯಾರ್ಥಿಗಳಿಗಾಗಲೀ ಉದ್ದೇಶಿತವಲ್ಲದ ಈ ಪುಸ್ತಕಗಳ ಮುಖ್ಯ ಗುಣಗಳೆಂದರೆ ಅವುಗಳ ಸರಳತೆ, ಸ್ಪಷ್ಟತೆ ಮತ್ತು ಸಂಕ್ಷಿಪ್ತತೆಗಳು. ಅದೇ ರೀತಿಯಲ್ಲಿ ಅವರು ಮಕ್ಕಳಿಗಾಗಿ

ಮುನ್ನೂರು ಅರವತ್ತೈದು ಕಥೆಗಳನ್ನು 'ದಿನಕ್ಕೊಂದು ಕಥೆ' ಎಂಬ ಹೆಸರಿನಲ್ಲಿ ಸಂಗ್ರಹಿಸಿಕೊಟ್ಟರು.

ಅನುಪಮಾ ಸಾಹಿತ್ಯ ಸೃಷ್ಟಿಯು ಸಾಕಷ್ಟು ಮನ್ನಣೆಯನ್ನು ಸಂಪಾದಿಸಿತು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ (1978), ಕರ್ನಾಟಕ ರಾಜ್ಯೋತ್ಸವದ ಬೆಳ್ಳಿಹಬ್ಬದ ಪ್ರಶಸ್ತಿ, (1983) 'ನೆನಪು ಸಿಹಿ–ಕಹಿ' ಎಂಬ ಕೃತಿಗೆ ದೊರೆತ ನಂಜನಗೂಡು ತಿರುಮಲಾಂಬಾ ಪ್ರಶಸ್ತಿ ಮುಂತಾದವು ಅವರಿಗೆ ದೊರೆತ ಗೌರವಗಳಲ್ಲಿ ಕೆಲವು.

ಕನ್ನಡದ ಲೇಖಕಿಯರು ಒಂದು ನಿರ್ದಿಷ್ಟವಾದ ಸಾಮಾಜಿಕ, ಐತಿಹಾಸಿಕ, ಸಂದರ್ಭದಲ್ಲಿ ತಲುಪಬಹುದಾಗಿದ್ದ ಎತ್ತರಗಳನ್ನು ತಲುಪಲು ಅನುಪಮಾ ಅವರಿಗೆ ಸಾಧ್ಯವಾಯಿತು. ತಮ್ಮ ಕಣ್ಣೆದುರಿಗೇ ಸ್ಥಿತ್ಯಂತರ ಪಡೆಯುತ್ತಿದ್ದ ಹೊಸಗನ್ನಡ ಸಾಹಿತ್ಯ ಪರಿವರ್ತನಶೀಲ ನೆಲೆಗಳನ್ನು ಸರಿಯಾಗಿ ಗುರುತಿಸದ ಹೋಗಿದ್ದು ಅವರ ಸೃಜನಶೀಲ ಸಂವೇದನೆಯ ಪರಿಮಿತಿಯಾಯಿತು. ಆದರೆ ತನ್ನ ಒಟ್ಟಂದದಲ್ಲಿ ಅನುಪಮಾ ಅವರದು ಬಹು ಮಹತ್ವದ ಸಾಧನೆ.

* * *

## ವಿಷ್ಣು ಗೋವಿಂದ ಭಟ್ಟ (1923–1991)

ಗುಣದ ದೃಷ್ಟಿಯಿಂದ ಕೆಲವು ವಿಶಿಷ್ಟ ಲಕ್ಷಣಗಳನ್ನು ಹೊಂದಿರುವ, ಗಾತ್ರದ ದೃಷ್ಟಿಯಿಂದ ಹದಿನೈದಕ್ಕೂ ಹೆಚ್ಚು ಸಂಕಲನಗಳಲ್ಲಿ ಹರಡಿಕೊಂಡಿರುವ ವಿ. ಜಿ. ಭಟ್ಟರ (ಜ. 1923) ಕಾವ್ಯದ ಬೆಳವಣಿಗೆ ಮತ್ತು ಅದಕ್ಕೆ ದೊರೆತಿರುವ ವಿಮರ್ಶಾತ್ಮಕ ಪ್ರತಿಕ್ರಿಯೆಗಳು, ಇಪ್ಪತ್ತನೆಯ ಶತಮಾನದ ಕನ್ನಡ ಕವಿತೆಯು ಪಡೆದುಕೊಂಡಿರುವ ಒಟ್ಟಂದದ ಸ್ವರೂಪದ ಬಗ್ಗೆ ಮಹತ್ವದ ಒಳನೋಟಗಳನ್ನು ನೀಡಬಲ್ಲವು.

ಭಟ್ಟರ ಕಾವ್ಯವು ಮೊದಮೊದಲ ಪ್ರೇರಣೆ, ಪೋಷಣೆಗಳನ್ನು ಪಡೆದಿದ್ದು ವಿ. ಕೃ. ಗೋಕಾಕ್ ಮತ್ತು ರಂ. ಶ್ರೀ. ಮುಗಳಿಯವರಿಂದ ರೂಪಿತವಾಗಿದ್ದ 'ವರುಣ ಕುಂಜ'ದಲ್ಲಿ. ಆದರೆ ಭಟ್ಟರ ಕಾವ್ಯವು ಗೋಕಾಕರ ಬವರಣಿಗೆಯ ಪ್ರಗತಿಪರ ಆಯಾಮಗಳಿಂದ ಪ್ರಭಾವಿತವಾಯಿತೇ ವಿನಾ, ರಮ್ಯ ಅಥವಾ ನವ್ಯ ನೆಲೆಗಳಿಂದ ಅಲ್ಲ. ನಿರಂಜನ ಮತ್ತು ಕುರ್ತಕೋಟಿಯವರು ಸರಿಯಾಗಿಯೇ ಗುರುತಿಸಿರುವಂತೆ ಭಟ್ಟರು ಪ್ರಗತಿಶೀಲತೆ ಮತ್ತು ವಿಡಂಬನೆಗಳ ಜೋಡಿಬಾವಟಿಗಳನ್ನು ಹಿಡಿದುಕೊಂಡೇ ಬರೆಯತೊಡಗಿದವರು. 'ಆತ್ಮ'ದ ಹುಡುಕಾಟವನ್ನು ಕಿಟಲ್ ನಿಘಂಟಿನ ಪುಟಗಳಲ್ಲಿ ಮುಕ್ತಾಯ ಮಾಡುವ ಈ ಧೋರಣೆ, ಭಾವನಾತ್ಮಕತೆ ಮತ್ತು ಆದರ್ಶಪ್ರಿಯತೆಗಳಿಂದ ನಿರ್ದೇಶಿತವಾಗಿದ್ದ ಆ ದಶಕಗಳಲ್ಲಿ ಒಂಟಿದನಿಯಾಗಿ

ಉಳಿದುದರಲ್ಲಿ ಆಶ್ಚರ್ಯವೇನೂ ಇಲ್ಲ. 'ಪಲಾಯನ', ರಕ್ತಾಂಜಲಿ', 'ಕಾವ್ಯವೇದನೆ. ಮುಂತಾದ ಸಂಕಲನಗಳಲ್ಲಿ ಅವರು ಸಮಾಜದ ರೋಗರುಜಿನಗಳನ್ನು ಗೇಲಿಮಾಡುತ್ತಾರೆ. ಭಾವನಾತ್ಮಕ ತಲ್ಲೀನತೆಯನ್ನು ತಪ್ಪಿಸಿಕೊಳ್ಳಲೋ ಎಂಬಂತೆ, ಚಮತ್ಕಾರಿಕವಾದರೂ, 'ಸುಂದರ' ಆಗಬಯಸದ ಭಾಷೆಯನ್ನು ಬಳಸುತ್ತಾರೆ. ಹಾಗೆ ನೋಡಿದರೆ ಕಾವ್ಯಭಾಷೆಯ ಅನನ್ಯತೆ ಮತ್ತು ವಿಶಿಷ್ಟತೆಗಳನ್ನು ಬೇಕೆಂದೇ ನಿರಾಕರಿಸಿದವರು ಭಟ್ಟರು. ಲಯಗಳ ದೃಷ್ಟಿಯಿಂದ ನೋಡಿದಾಗಲೂ ಅವರದು ಲಿಮರಿಕ್, ಚಾಟೂಕ್ತಿ, ಸುಭಾಷಿತಗಳಂಥ ಕಿರುಗಾತ್ರದ ರಚನೆಗಳ ಗದ್ಯಗಂಧಿಯಾದ ಲಯವೇ ಹೊರತು, ಗೇಯತೆಯ ಅಂಚಿನಲ್ಲಿ ಚಲಿಸುವ ರೆಟರಿಕ್ ತುಂಬಿದ ಲಯವಲ್ಲ. ಅವರ ವಿಡಂಬನೆಯ ಮೂಲದಲ್ಲಿಯೂ ತೀವ್ರವಾದ ಭ್ರಮನಿರಸನ ಮತ್ತು ನಿರ್ಲಿಪ್ತತೆಗಳಿವೆ. ವಿಷಾದಕ್ಕಿಂತ ವಿದೂಷಕ ಸಂಹಿತೆಗೆ ಅವರು ಮನ್ನಣೆ ನೀಡುತ್ತಾರೆ. ಆದ್ದರಿಂದಲೇ ಲಂಕೇಶರು ತಮ್ಮ 'ಅಕ್ಷರ ಹೊಸ ಕಾವ್ಯ'ದ ಮುನ್ನುಡಿಯಲ್ಲಿ ವಿ. ಜಿ. ಭಟ್ಟರ ಕವಿತೆಯಲ್ಲಿ ಸಂವೇದನೆಯ ನವ್ಯತೆಯನ್ನು ಗುರುತಿಸಿದರು. ಆದರೆ ಸ್ವತಃ ನವ್ಯರೂ ಕೂಡ ಭಾವನಾತ್ಮಕತೆಯನ್ನು ಕೈಬಿಟ್ಟವರಲ್ಲವಾದ್ದರಿಂದ ಆ ಪರಿಸರದಲ್ಲೂ ವಿ. ಜಿ. ಭಟ್ಟರು ಆಗಂತುಕರಾಗಿಯೇ ಉಳಿದರು. ಅವರು ಇತರರನ್ನು ಅನುಕರಿಸಲಿಲ್ಲ. ಇತರರು ಅನುಕರಿಸಬಹುದಾದಷ್ಟು ಸಮರ್ಥವಾದ ಮಾದರಿಯನ್ನು ರೂಪಿಸಲೂ ಇಲ್ಲ. ಆಮೇಲೆ ಬರೆದ 'ಅರಣ್ಯರೋದನ', 'ಕಿಷ್ಕಿಂದೆ' ಮುಂತಾದ ಸಂಕಲನಗಳಲ್ಲಿ ವಿಡಂಬನೆಯ ಮೊನಚು ಕಡಿಮೆಯಾದರೂ ಜೀವನ ಪ್ರೀತಿ ಕಾಣಿಸಿಕೊಂಡರೂ, ಕಾವ್ಯರೂಪ ಮತ್ತು ಭಾಷೆಗಳಿಗೆ ಸಂಬಂಧಪಟ್ಟ ಅವರ ನಿಲುವುಗಳಲ್ಲಿ ಮಹತ್ವದ ಬದಲಾವಣೆಯೇನೂ ಆಗಲಿಲ್ಲ. 'ಉತ್ತರ ಕಾಂಡ' ದಂಥ ಸಂಕಲನಗಳೂ ಸೇರಿದಂತೆ ಹಲವು ಕಡೆ ಅವರು ಗಂಡು–ಹೆಣ್ಣಿನ ಸಂಬಂಧವನ್ನು ಉದಾತ್ತೀಕರಿಸದ ನೆಲೆಯಿಂದ ನೋಡುತ್ತಾರೆ. ಹಾಗೆಂದು ಅದು ಕಾಮದಂಥ ಶಕ್ತಿಗಳ ವೈಭವೀಕರಣವೂ ಅಲ್ಲ. ಎಲ್ಲವನ್ನೂ ಅನುಮಾನಿಸುವ ನಗೆಗೀಡು ಮಾಡುವ ನೆಲೆಯಲ್ಲೇ ಅವರು ಇಲ್ಲಿಯೂ ಕವಿತಾರಚನೆ ಮಾಡುತ್ತಾರೆ.

ಕುತೂಹಲದ ಸಂಗತಿಯೆಂದರೆ, ಋಳೆಂಟು ವರ್ಷಗಳ ವಿಶ್ರಾಂತಿಯ ನಂತರ, 1980 ರಲ್ಲಿ ಮೊದಲಾದ ಭಟ್ಟರ ಕಾವ್ಯ ಕೃಷಿಯ ಎರಡನೆ ಹಂತವು, ಸಂಪೂರ್ಣವಾಗಿ ಬೇರೆ ಬಗೆಯ ಕಾಳಜಿಗಳನ್ನು ಬೆಳೆಸಿಕೊಂಡಿದೆ. 'ಮರಳಿ ಬಂದ ಕವಿತೆ', 'ಧ್ಯಾನಪೀಠ', 'ಸ್ವಾಗತಂ', 'ಬಿಂದು ಬಿಂದು ಸಾರ' ಮುಂತಾದ ಸಂಕಲನಗಳು ಅವರು ಹಿಂದೆ ನಿರಾಕರಿಸಿದ ಆಧ್ಯಾತ್ಮ ವಿಚಾರ. ಅನುಭಾವಿಕ ಬೋಧನೆ ಇತ್ಯಾದಿ ಸಂಗತಿಗಳು ಓತಪ್ರೋತವಾಗಿವೆ. ಆಚಾರ್ಯ ರಜನೀಶ್, ಜೆ. ಕೃಷ್ಣಮೂರ್ತಿ ಮುಂತಾದವರ ಚಿಂತನೆಯ ಗಾಢ ಪರಿವಲಯದಲ್ಲಿ, ವೈಯಕ್ತಿಕ ಪಕ್ವತೆಯ ನೆಲೆಯಲ್ಲಿ ಬರೆದ ಈ ಕವಿತೆಗಳು ಬೇಂದ್ರೆಯವರ ಕೊನೆಕೊನೆಯ ಕವಿತೆಗಳನ್ನು ಹೋಲುವುದೊಂದು ಗಮನೀಯ ಸಂಗತಿ. ಅವರ

ಆಶಯಗಳ ಈ ಪುನರ್ಜನ್ಮ, ಕೂಡ ಕವಿತೆಯ ರೂಪದ ಬಗೆಗಿನ ಮರುಚಿಂತನೆ ದಾರಿಮಾಡಿಕೊಡುವುದಿಲ್ಲ. 'ಜಾಣತನ'ದ ಬದಲಾಗಿ ಬರುವ 'ವಿವೇಕ' ಕೂಡ ಸಾಂಪ್ರದಾಯಿಕವಾದ ಅರ್ಥದಲ್ಲಿ ಕಾವ್ಯ ಪರಿಧಿಯಿಂದ ಆಚೆಗೇ ಉಳಿಯುತ್ತದೆ.

ವಿ. ಜಿ. ಭಟ್ಟರ ನಿಜವಾದ ನೆಲೆಯಿರುವುದು ವಿಡಂಬನ ಕಾವ್ಯ ಮತ್ತು ಮಕ್ಕಳ ಕವಿತೆಗಳ ಪರಂಪರೆಯಲ್ಲಿ. ಅವರು ದಿನಕರ ದೇಸಾಯಿ, ಕೈಲಾಸಂ, ಅ. ರಾ. ಸೇ. ಮುಂತಾದವರಿಗಿಂತ ಹೆಚ್ಚು ವ್ಯಾಪಕವಾದ, ಹರಿತವಾದ ವಿಡಂಬನ ಕಾವ್ಯವನ್ನು ಸೃಷ್ಟಿಸಿದ್ದಾರೆ. ಅಂಥ ಕವಿತೆಗಳಲ್ಲಿ ಕೇವಲ ನಗುವನ್ನು ಮೂಡಿಸಬೇಕೆಂಬ ತವಕವಿಲ್ಲ. ಬದುಕನ್ನು ಕುರಿತಾದ ಚಿಂತನೆ, ತಿಳಿವಳಿಕೆಗಳೂ ಕೆಲಸ ಮಾಡುತ್ತಿರುತ್ತವೆ. ಲಂಕೇಶರು ಗುರುತಿಸಿರುವ "ಬುದ್ಧಿ, ಕಾಮನ್ ಸೆನ್ಸ್, ವ್ಯಂಗ್ಯ, ತಿಳಿವಳಿಕೆಗಳು" ಹಾಗೂ "ಭ್ರಮೆಯಿಲ್ಲದ ಕಾಳಜಿ ಮತ್ತು ಭಾವಾಡಂಬರವಿಲ್ಲದ ಅನುಕಂಪ, ಎಚ್ಚರಗಳು" ಯಾವ ಮಾದರಿಯ ಕಾವ್ಯವನ್ನು ಯಾವ ಪ್ರಮಾಣದಲ್ಲಿ ಸೃಷ್ಟಿಸಬಲ್ಲವು ಎಂಬುದಕ್ಕೆ ಭಟ್ಟರು ಈ ರೀತಿಯ ಕವನಗಳಲ್ಲಿ ನಿದರ್ಶನಗಳು ಸಿಗುತ್ತವೆ. ಇಲ್ಲಿ ವಿಡಂಬನೆಯ ವಸ್ತುವಾಗುವುದು ಎಲ್ಲ ಕಾಲದ, ಎಲ್ಲ ದೇಶದ ಮನುಷ್ಯ ಸ್ವಭಾವವೇ ಆಗಿದೆ.

1946 ರಷ್ಟು ಹಿಂದೆಯೇ ಭಟ್ಟರು ಮಕ್ಕಳಿಗೆಂದು ಬರೆದ 'ತುಂಟನ ಪದಗಳು', ಮರೆತುಹೋಗಿರುವ ಮಹತ್ವದ ಸಂಕಲನ. ಇಲ್ಲಿನ ರಚನೆಗಳು ಚುಟುಕಗಳು, ನಿರರ್ಥಕ ಕವಿತೆಗಳು (Non-Sense Verse) ಮತ್ತು ಶಿಶುಗೀತೆಗಳೆಂಬ ಮೂರು ಬಗೆಗಳನ್ನು ಒಳಗೊಂಡಿವೆ. ಅದರ ಮುನ್ನುಡಿಯಲ್ಲಿ ಗೋಕಾಕರು ಗುರುತಿಸಿರುವಂತೆ "ಎಳೆತನದ ಬೆರಗು, ಬಿನ್ನಾಣ, ವಿನೋದ ಪ್ರಿಯತೆ, ಕಲ್ಪನಾವೈಚಿತ್ರ್ಯಗಳು" (Fantasy) ಭಟ್ಟರ ಸಹಜ ಸಿದ್ಧಗುಣಗಳು.

ಭಟ್ಟರು ಕೆಲವು ಸಣ್ಣ ಕತೆಗಳ ಸಂಕಲನಗಳನ್ನೂ ಹೊರತಂದಿದ್ದಾರೆ. 'ಸಹ್ಯಾದ್ರಿ', 'ಉತ್ತರ ಕನ್ನಡದ ಜೀವನ ಚಿತ್ರಗಳು', 'ಪೆದ್ದಂ ಕತೆಗಳು' ಮುಂತಾದ ಈ ಕೃತಿಗಳು ಯಾವುದೇ ಉತ್ಸಾಹವನ್ನು ಮೂಡಿಸಿದಂತೆ ತೋರುವುದಿಲ್ಲ.

ಹೀಗೆ ವಿ. ಜಿ. ಭಟ್ಟರ ಕಾವ್ಯವು, ಆಧುನಿಕ ಕನ್ನಡ ಕಾವ್ಯದ ನಕ್ಷೆಯಲ್ಲಿ ತನಗೇ ವಿಶಿಷ್ಟವಾದ ಕೆಲವು ಲಕ್ಷಣಗಳನ್ನು ಹೊಂದಿವೆಯೆಂಬುದರಲ್ಲಿ ಸಂದೇಹವಿಲ್ಲ. ಅವಗಳನ್ನು ವಿಸ್ತೃತವಾಗಿ ಅಧ್ಯಯನ ಮಾಡುವುದರಿಂದ ಮಾತ್ರವೇ ಆ ಮಾರ್ಗದ ಇನ್ನಷ್ಟು ಸಾಧ್ಯತೆಗಳನ್ನು ಗ್ರಹಿಸಲು, ಮುಂದುವರಿಸಲು ಸಾಧ್ಯ.

* * *

## ಶಂಕರ ಬಾಳದೀಕ್ಷಿತ ಜೋಶಿ
## (1896–1991)



ಇಪ್ಪತ್ತನೆಯ ಶತಮಾನದ ಸೂಕ್ಷ್ಮ ಕನ್ನಡ ಚಿಂತನೆಯ ಸಮಗ್ರ ಅಧ್ಯಯನವೊಂದು ನಡೆದಾಗ ಅದರಲ್ಲಿ ಶಂ. ಬಾ. ಜೋಶಿಯವರ (ಜ. 1896) ಬರವಣಿಗೆಗೆ ಅತ್ಯಂತ ಮಹತ್ವದ ಸ್ಥಾನವೊಂದು ಮೀಸಲಾಗಿರುತ್ತದೆ. ಏಕೆಂದರೆ ಅದು ಪಾಶ್ಚಾತ್ಯಚಿಂತನೆಯ ಮರುಮಂಡನೆಯಲ್ಲ; ಅದಕ್ಕೆ ತೋರಿಸಿದ ಪ್ರತಿಕ್ರಿಯಾತ್ಮಕವಾದ ಚಿಂತನಲಹರಿಯೂ ಅಲ್ಲ; ಕೇವಲ ಬುದ್ಧಿಶಕ್ತಿ, ಕಲ್ಪನೆ, ವಿವೇಕಗಳನ್ನು ಅವಲಂಬಿಸಿದ ಆಲೋಚನೆಗಳೂ ಅಲ್ಲ. ಬದಲಾಗಿ ಅಧ್ಯಯನ, ಸಂಶೋಧನೆ ಹಾಗೂ ಸ್ವಂತ ಚಿಂತನೆಗಳನ್ನು ಬಹಳ ಅರ್ಥಪೂರ್ಣವಾಗಿ ಸಂಯೋಜನೆ ಮಾಡಿಕೊಂಡು, ಸ್ವಲ್ಪ ಪೆಡಸಾದ ಶೈಲಿಯಲ್ಲಿ ಮಂಡಿಸುವ ಕಾರ್ಯವು ಜೋಶಿಯವರಿಂದ ನಡೆದಿದೆ. ಅವರ ಮನಸ್ಸು –ಸಾಮಾನ್ಯವಾಗಿ ಆಗುವಂತೆ– ಕೇವಲ ಸಾಹಿತ್ಯಕವಾದ ಅಧ್ಯಯನದಿಂದ ರೂಪಿತವಾದುದಲ್ಲ. ಹಾಗೆ ನೋಡಿದರೆ ಅಂತರ್ ಶಿಸ್ತೀಯ ಅಧ್ಯಯನವನ್ನು ನಡೆಸಿರುವ ಕನ್ನಡ ಲೇಖಕರಲ್ಲಿ ಶಂಬಾ ಅಗ್ರಗಣ್ಯರು. ಸಮಾಜಶಾಸ್ತ್ರ, ತತ್ತ್ವಶಾಸ್ತ್ರ, ಸಂಕೇತಗಳ ಅಧ್ಯಯನ ಭಾಷಾಶಾಸ್ತ್ರ ಮುಂತಾದ ಹತ್ತು ಹಲವು ಜ್ಞಾನಶಾಖೆಗಳನ್ನು ಓದಿ, ಅರಗಿಸಿಕೊಂಡು, ಅದೆಲ್ಲವನ್ನೂ ಭಾರತೀಯ ಸಂಸ್ಕೃತಿ ಹಾಗೂ ಕನ್ನಡ ಸಂಸ್ಕೃತಿಯ ನಿಜವಾದ ಇತಿಹಾಸದ ಶೋಧನೆಯಲ್ಲಿ ತೊಡಗಿಸಿದ್ದು ಜೋಶಿಯವರ ಜೀವನದ ಮಹತ್ಸಾಧನೆ. ಅವರ ಅಧ್ಯಯನವು ಭಾರತೀಯ ಸಂಸ್ಕೃತಿಯ ಬಹುಮುಖತೆಯನ್ನು, ಅದರ ಒಂದು ಧಾರೆಯು ಮತ್ತೊಂದನ್ನು ನುಂಗಿ ನೀರು ಕುಡಿದ ಇತಿಹಾಸವನ್ನು ತೋರಿಸಿಕೊಟ್ಟಾಗ, ಅವರು ಯಾವ ದಾಕ್ಷಿಣ್ಯವೂ ಇಲ್ಲದೆ ಸಾಂಪ್ರದಾಯಿಕ ಪಾಂಡಿತ್ಯವನ್ನು ಪ್ರಶ್ನಿಸಿದರೂ ತಮಗೆ ಸಮಕಾಲಿಕವಾದ ವೈದಿಕ ಸಂಸ್ಕೃತಿಯನ್ನು ಕಟುವಾಗಿ ಟೀಕಿಸುವುದರಿಂದಲೇ ಕೆಲವು ದಶಕಗಳ ಕಾಲ ಒಂದು ಬಗೆಯ ಸಾಂಸ್ಕೃತಿಕ ಬಹಿಷ್ಕಾರವನ್ನು ಅನುಭವಿಸಿದರು. ಆದರೂ ಏಕಾಂಗಿಯಾದ ತಮ್ಮ ಒಂಟಿಹಾದಿಯಲ್ಲಿ ಹೊಸಹೆಜ್ಜೆಗಳನ್ನು ಹಾಕುತ್ತಲೇ ಉಳಿದರು. ಅವರು ಬಳಸಿಕೊಳ್ಳುವ ಆಕರಗಳು ಕೂಡ ಬಹಳ ಅಪರೂಪದವು. ಇಂಗ್ಲಿಷ್

ಹೊರತಾದ ಇತರ ಯೂರೋಪಿಯನ್ ಭಾಷೆಗಳ ಕೃತಿಗಳನ್ನು ಅಭ್ಯಾಸಮಾಡುವುದರ ಮೂಲಕ ಶಂ. ಬಾ. ಅವರು ವಸಾಹತು ಶಾಹಿಯ ಫಲವಾದ ಕೆಲವು ಸೀಮಿತತೆಗಳಿಂದ ತಪ್ಪಿಸಿಕೊಳ್ಳುತ್ತಾರೆ.

ಅವರದು ಸ್ವಯಂ–ಶಿಕ್ಷಿತವಾದಿ ವ್ಯಕ್ತಿತ್ವ. ಈ ಮಾತು ಪದವಿಗಳನ್ನು ಪಡೆದಿಲ್ಲವೆಂಬ ಅರ್ಥದಲ್ಲಿ ಮಾತ್ರವಲ್ಲ, ಯಾವುದೇ ಒಬ್ಬ ಮಹಾಪುರುಷ/ಪುರುಷರಿಂದ ಗಾಢವಾಗಿ ಪ್ರಭಾವಿತರಾಗಿ ಅವರ ಚಿಂತನೆಯ ಬೆಳಕಿನಲ್ಲಿ ತಮ್ಮ ಆಲೋಚನೆಗಳನ್ನು ರೂಪಿಸಿಕೊಂಡಿಲ್ಲವೆಂಬ ಅರ್ಥದಲ್ಲಿಯೂ ಇದು ನಿಜ. ಅಂಥ ವ್ಯಕ್ತಿಪೂಜೆಯ ಪರಿಕಲ್ಪನೆಯೇ ಜೋಶಿಯವರಿಗೆ ಬಾಹಿರವಾದುದು.

ಶಂ. ಬಾ. ಅವರ ಒಟ್ಟು ಬರವಣಿಗೆಯನ್ನು ವಿದ್ವಾಂಸರು ಮೂರು ಗುಂಪುಗಳಾಗಿ ವಿಗಂಡಿಸಿದ್ದಾರೆ. ಮೊದಲನೆಯದು ಕನ್ನಡ, ಕನ್ನಡಿಗರು ಮತ್ತು ಕನ್ನಡ ಸಂಸ್ಕೃತಿಗಳ ಉಗಮ ಮತ್ತು ವಿಕಾಸಕ್ಕೆ ಸಂಬಂಧಪಟ್ಟಹಾಗೆ ಅವರು ಬರೆದಿರುವ ಕೃತಿಗಳು. 'ಕಂನುಡಿಯ ಹುಟ್ಟು'. 'ಕಂನುಡಿಯ ಜೀವಾಳ'. 'ಕನ್ನಡನುಡಿಯ ಹುಟ್ಟು', ಕನ್ನಡದ ನೆಲೆ', ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ' ಈ ಗುಂಪಿಗೆ ಸೇರುವ ಕೆಲವು ಗ್ರಂಥಗಳು. ಈ ಅಧ್ಯಯನದ ಮುಂದುವರಿಕೆಯೋ ಎನ್ನುವಂತೆ ಒಟ್ಟು ಮಾನವ ಸಂಸ್ಕೃತಿಯ ಅಧ್ಯಯನದಲ್ಲಿ ತೊಡಗಿ, ಪ್ರಾಣಿನೆಲೆಯಿಂದ ಹಿಡಿದು ಮಾನವನಾಗುವವರೆಗಿನ ಎಲ್ಲ ಸಾಧ್ಯತೆಗಳೂ ವ್ಯಕ್ತಿಯಲ್ಲಿಯೇ ಅಡಗಿವೆಯೆಂಬ ಸಂಗತಿಯನ್ನು ತರ್ಕಬದ್ಧವಾಗಿ ನಿರೂಪಿಸಿದರು. ಕ್ರಮೇಣ ಅವರ ಆಸಕ್ತಿಯು ಭಾರತೀಯ ಸಂಸ್ಕೃತಿಯು ವೇದ–ಉಪನಿಷತ್ತುಗಳಿಗೂ ಹಿಂದಿನ ಕಾಲದಿಂದ ಇಂದಿನವರೆಗೆ ಪಡೆದುಕೊಂಡಿರುವ ಸ್ಥಿತ್ಯಂತರಗಳ ಕಡೆಗೆ ಚಲಿಸಿತು. ಒಂದು ಕಡೆ ಒಟ್ಟು ಸಮುದಾಯದ ಹಿತ ಮತ್ತೊಂದು ಕಡೆ ಆಯ್ಕೆ ವರ್ಗ, ವರ್ಣಗಳ ಹಿತಗಳ ನಡುವೆ ನಡೆದ ಸಂಘರ್ಷವನ್ನು ಅವರು ಗುರುತಿಸಿದರು. ಹಾಗೆಯೇ 'ಮೋಕ್ಷಕಾಮೀ ಮನೋಧರ್ಮ' ಮತ್ತು ಜನಹಿತಕಾಮೀ ಮನೋಧರ್ಮಗಳ ತಾಕಲಾಟವೂ ಅವರ ಗಮನಕ್ಕೆ ಬಂತು. ಈ ವಿಚಾರವಾದ ಚರ್ಚೆಯನ್ನು "ಪ್ರವಾಹ ಪತಿತರ ಕರ್ಮ 'ಹಿಂದೂ' ಎಂಬ ಧರ್ಮ"; "ಋಗ್ವೇದ ಸಾರ–ನಾಗಪ್ರತಿಮಾವಿಚಾರ"; "ಬುಧನ ಜಾತಕ", "ವೈವಸ್ವತ ಮನುಪ್ರಣೀತ ಮಾನವ ಧರ್ಮದ ಆಕೃತಿ" ಮುಂತಾದ ಕೃತಿಗಳು ಒಳಗೊಂಡಿವೆ.

ಇವಲ್ಲದೆ ಜೋಶಿಯವರು ಕೆಲವು ಜೀವನ ಚರಿತ್ರೆಗಳನ್ನೂ, (ತಿಲಕ್, ಅರವಿಂದರು) ಹಾಗೆಯೇ "ಕರ್ಣನ ಮೂರು ಚಿತ್ರಗಳು" ಎಂಬ ವಿಮರ್ಶಾಕೃತಿಯನ್ನೂ ರಚಿಸಿದ್ದಾರೆ. ರಾನಡೆಯವರ 'ಉಪನಿಷದ್ರಹಸ್ಯ', ಸಾತವೇಳಕರ್ ಅವರ 'ಶ್ರೀಮದ್ ಭಗವದ್ಗೀತಾ' ಎಂಬ ಕೃತಿಗಳನ್ನು ಮರಾಠಿಯಿಂದ ಕನ್ನಡಕ್ಕೆ ತಂದಿದ್ದಾರೆ. ಆದರೂ ಸಾಹಿತ್ಯಸೃಷ್ಟಿ ಮತ್ತು ಸಾಹಿತ್ಯಮಾರ್ಗಗಳೆರಡೂ ಶಂ. ಬಾ. ಅವರ ಆಸಕ್ತಿಯನ್ನು ಚೋದಿಸಲಿಲ್ಲ.

ಶಂ. ಬಾ. ರವರ ಸಂಶೋಧನೆಗಳು ಮತ್ತು ವಿಚಾರಗಳ ಅತ್ಯಂತ ಸಂಗ್ರಹವಾದ ನಿರೂಪಣೆಗೂ ಈ ಬರವಣಿಗೆಯ ಚೌಕಟ್ಟಿನಲ್ಲಿ ಅವಕಾಶವಿಲ್ಲ. ಕೃತಿಯಿಂದ ಕೃತಿಗೆ ಅವರ ವಿಚಾರಗಳು ವಿಕಸನಗೊಂಡಿರುವ ರೀತಿಯು, ಅವರ ಶೈಲಿಯ ವಿಕ್ಷಿಪ್ತತೆಗಳ ನಡುವಿನಿಂದ ಸ್ಪಷ್ಟ ಆಕಾರವನ್ನು ಪಡೆದು ಹೊರಬರಬೇಕಾಗಿದೆ. ಪ್ರಮುಖವಾದ ಕೃತಿಗಳ ಸಾರಸಂಗ್ರಹದ ಇಂಗ್ಲಿಷ್ ಅನುವಾದವು ಹೆಚ್ಚು ವ್ಯಾಪಕವೂ, ಅರ್ಥಪೂರ್ಣವೂ ಆದ ಚರ್ಚೆಗಳಿಗೆ ದಾರಿಮಾಡಿಕೊಡಬಹುದು. ಆದರೂ ಶಂ. ಬಾ. ಅವರ ವಿಚಾರಗಳ ಪ್ರಸ್ತುತತೆಯನ್ನು ಸ್ಪಷ್ಟಪಡಿಸುವ ಕೆಲವು ಅಂಶಗಳನ್ನು ಇಲ್ಲಿ ಗುರುತಿಸಲಾಗಿದೆ.

1. ಸಮಷ್ಟಿಯ ಹಿತರಕ್ಷಣೆಯೇ ಪ್ರಧಾನವಾದ ಮೌಲ್ಯವ್ಯವಸ್ಥೆ ಮತ್ತು ವ್ಯಕ್ತಿಪೂಜೆಯೇ ಮೊದಲ ಸ್ಥಾನ ಪಡೆಯುವ ಜೀವನಕ್ರಮಗಳ ನಡುವಿನ ಸಂಘರ್ಷವನ್ನು ಕುರಿತ ಅವರ ಆಲೋಚನೆಗಳು.

2. ಈ ಲೋಕದ ಬದುಕಿನ ಅರ್ಥಪೂರ್ಣತೆ ಮತ್ತು ಅಭ್ಯುದಯಗಳನ್ನು ಸಾಧಿಸಲು ಅಡಚಣೆಯಾದ ಮೋಕ್ಷಕಾಮೀ ಪ್ರವೃತ್ತಿಗಳನ್ನೂ, ಅವುಗಳ ಫಲವಾದ ಸ್ವಾರ್ಥದ ವಿಕಾಸವನ್ನೂ ಅವರು ಗುರುತಿಸಿರುವುದು.

3. ಮನುಷ್ಯನಲ್ಲಿ ಇರಬೇಕಾದ ನೈತಿಕತೆಗೆ, ದೈವಭಕ್ತಿಮೂಲವಲ್ಲದ, ನಾಸ್ತಿಕನೆಲೆಯ ಸಮರ್ಥನೆಯನ್ನು ನೀಡುವ ಅವರ ವಿಚಾರಗಳು.

4. ಸಾಹಿತ್ಯದ ಮಾರ್ಗ ಮತ್ತು ವಿಚಾರ ಮಾರ್ಗಗಳಲ್ಲಿ ಇರುವ ಅಂತರವನ್ನು ಖಚಿತವಾಗಿ ಗುರುತಿಸಿ ಅವುಗಳ ವಿಶಿಷ್ಟತೆ ಹಾಗೂ ಪರಿಮಿತಿಗಳನ್ನು ಹೇಳುವುದು. ಆಶಯನಿಷ್ಠ ವಿಮರ್ಶೆಯ ಕಡೆಗಿನ ಅವರ ಒಲವು.

5. ಬ್ರಾಹ್ಮಣ ರೂಪಿತವಾದ ನೀತಿ ಸಂಹಿತೆಗೂ, ಜಾನಪದ ಪ್ರಜ್ಞೆಯಿಂದ ರೂಪಿತವಾದ ನೀತಿ ಸಂಹಿತೆಗೂ ಇರುವ ವ್ಯತ್ಯಾಸಗಳ ಸಂಕೀರ್ಣ ನಿರೂಪಣೆ.

ಶಂ. ಬಾ. ರವರ ವಿಚಾರಗಳೆಲ್ಲವೂ ಸಮ್ಮತಿಯನ್ನು ಪಡೆಯಬೇಕೆಂದಿಲ್ಲ. ಅಂಥದೊಂದು ಸಾರಾಸಗಟಾದ ನಿಲುವನ್ನು ಅವರೂ ಬಯಸುವುದಿಲ್ಲ. ಆದರೆ ಅವರು ಹೇಳುವುದನ್ನು ಗಮನವಿಟ್ಟು ಕೇಳುವ, ಚಿಂತಿಸುವ, ಚರ್ಚಿಸುವ ವ್ಯವಧಾನವನ್ನಂತೂ ಆ ಕೃತಿಗಳು ನಿಸ್ಸಂದೇಹವಾಗಿ ಪಡೆಯಬೇಕಾಗಿದೆ.

ಜೋಶಿಯವರ ಕೃತಿಗಳಿಗೆ ಆಳವಾದ ಅಧ್ಯಯನದ ಮರ್ಯಾದೆ ಇನ್ನುಮೇಲೆ ಸಿಗಬೇಕಾಗಿದೆ. ಹಲವಾರು ಗೌರವಗಳು ಪ್ರಶಸ್ತಿಗಳು ಅವರನ್ನು ಅರಸಿಕೊಂಡು ಬಂದಿವೆ. ತಮ್ಮ ಬದುಕಿನ ಬಹುಭಾಗವನ್ನು ಧಾರವಾಡದ ವಿಕ್ಟೋರಿಯಾ ಪ್ರೌಢಶಾಲೆಯ ಶಿಕ್ಷಕರಾಗಿ ಕಳೆದ ಶಂ. ಬಾ. 1971 ರಲ್ಲಿ ಮೈಸೂರು ವಿಶ್ವವಿದ್ಯಾಲಯದ, ಗೌರವ ಡಾಕ್ಟರೇಟ್ ಪದವಿಯನ್ನು ಪಡೆದರು. ಅವರ 'ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ' ಗ್ರಂಥಕ್ಕೆ 1971 ರಲ್ಲಿ ಕೇಂದ್ರ ಸಾಹಿತ್ಯ

ಅಕಾಡೆಮಿಯ ಬಹುಮಾನ ಬಂತು. ಅವರು 1981 ರಲ್ಲಿ ಮಡಿಕೇರಿಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಅವರ ವ್ಯಕ್ತಿತ್ವ–ವಿಚಾರಗಳ ಪರಿಚಯ ಹಾಗೂ ವಿಮರ್ಶೆಯನ್ನು ನಡೆಸುವ 'ಅಧ್ಯಯನ' ಮತ್ತು 'ಶಂ. ಬಾ. ಕೃತಿ ಸಮೀಕ್ಷೆ' ಎಂಬ ಎರಡು ಗ್ರಂಥಗಳು ಪ್ರಕಟವಾಗಿವೆ. ಇವುಗಳಲ್ಲಿ ಎರಡನೆಯದರ ಬೆನ್ನುಡಿಯಲ್ಲಿ ಉಕ್ತವಾಗಿರುವ ಕೆಲವು ಮಾತುಗಳಿಂದ ಈ ಶ್ರದ್ಧಾಂಜಲಿಯನ್ನು ಮುಕ್ತಾಯ ಮಾಡಬಹುದು.

"ಡಾ. ಶಂ. ಬಾ. ಜೋಶಿಯವರು ತಮ್ಮ ವಿದ್ವತ್‌ಪೂರ್ಣ ಚಿಂತನೆಗಳಿಂದ ಕರ್ನಾಟಕದ ಸಾಂಸ್ಕೃತಿಕ ಹಾಗೂ ಬೌದ್ಧಿಕಕ್ಷೇತ್ರಕ್ಕೆ ಹೊಸ ಆಯಾಮ ನೀಡಿದವರು. ಕಂನಾಡ ಸಂಸ್ಕೃತಿ ಮತ್ತು ಭಾರತೀಯ ಸಂಸ್ಕೃತಿಯ ಚಿಂತನೆಗಳ ಮೂಲಕ ಮಾನವ ಸಂಸ್ಕೃತಿಯ ಅನ್ವೇಷಣೆಗೆ ಹೊರಟವರು.... ಆಕರಗಳ ಬೆಳಕಿನಲ್ಲಿ ನೂತನ ನೆಲೆಗಳನ್ನೂ ಕಂಡವರು. ಸಾಂಪ್ರದಾಯಿಕ ಇತಿಹಾಸ ಸಂಶೋಧನಾ ಪ್ರಕಾರಗಳೊಂದಿಗೆ ಭಾಷಾ ವಿಶ್ಲೇಷಣೆ ಪದ್ಧತಿಯನ್ನೂ, ಮನೋವೈಜ್ಞಾನಿಕ ವಿಚಾರಗಳನ್ನೂ, ಧಾರ್ಮಿಕ ಚಿಂತನೆಗಳನ್ನೂ ಬೆರೆಸಿಕೊಂಡು ಪ್ರಾಚೀನ ಸಂಸ್ಕೃತಿಯ ವಿವರಗಳನ್ನು ಸಮಕಾಲೀನ ಮೌಲ್ಯಗಳ ದೃಷ್ಟಿಯಿಂದ ದಾರ್ಶನಿಕವಾಗಿ ವಿಶ್ಲೇಷಿಸಲು ಹೋರಟ ಶಂ. ಬಾ. ಅವರಂತರಹ ವಿದ್ವಾಂಸರು ಭಾರತೀಯ ವಿದ್ವತ್ ಜಗತ್ತಿನಲ್ಲಿ ತೀರ ಅಪರೂಪ"

* * *

## ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್

**(1904–1991)**

ಕನ್ನಡ ನವೋದಯ ಸಾಹಿತ್ಯದ ಸಂದರ್ಭದಲ್ಲಿ ನಡೆದ ಸಂಸ್ಕೃತಿ ವಿಶ್ಲೇಷಣೆಯ ಕೆಲಸದಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರಿಗೆ ಒಂದು ವಿಶಿಷ್ಟವಾದ ಸ್ಥಾನವು ಮೀಸಲಾಗಿದೆ. ತಮ್ಮ ಜೀವನವಿಧಾನ, ಮನೋಧರ್ಮ, ಆರಿಸಿಕೊಂಡ ಸಾಹಿತ್ಯ ಪ್ರಕಾರ ಮುಂತಾದ ಹಲವು ನೆಲೆಗಳಲ್ಲಿ ಗೊರೂರರು ನವೋದಯದ ಆದ್ಯರಿಗಿಂತ ಭಿನ್ನವಾಗಿದ್ದರು. ಸ್ವಾತಂತ್ರ್ಯ ಚಳುವಳಿಯಲ್ಲಿ ನೇರವಾಗಿ ಭಾಗವಹಿಸಿದ ಅನುಭವ, ಗಾಂಧೀಯುಗದ ಹಲವು ಪ್ರಗತಿಪರವಾದ ಮೌಲ್ಯಗಳನ್ನು ಮೈಗೂಡಿಸಿಕೊಂಡುದರ ಫಲವಾದ, ನೈಷ್ಠಿಕ ಆದರೆ ಮುಕ್ತ ನಡೆ–ನುಡಿ, ಗ್ರಾಮೀಣ ಜೀವನದ ನಿಕಟಪರಿಚಯ ಮತ್ತು ಸಹಜವಾದ ಹಾಸ್ಯ ಪ್ರಜ್ಞೆಗಳನ್ನು ಗೊರೂರರ ವ್ಯಕ್ತಿತ್ವದ ಹಿಂದಿನ ಪ್ರಮುಖ ಪ್ರೇರಣೆಗಳೆಂದು ಗುರುತಿಸಬಹುದು. ಅವರ ಬರವಣಿಗೆಯನ್ನು ಅನುಭವ ಕಥನವೆಂದೋ, ನಗೆಬರಹಗಳೆಂದೋ, ಲಲಿತ

ಪ್ರಬಂಧಗಳೆಂದೋ ನೋಡಿ ಸಾಹಿತ್ಯಕ ಮೌಲ್ಯಮಾಪನ ಮಾಡುವುದರ ಜೊತೆಗೆ, 'ಗ್ರಾಮೀಣ ಸಂಸ್ಕೃತಿ'ಯನ್ನು ಒಂದು ನಿರ್ದಿಷ್ಟ ನೆಲೆಗಟ್ಟಿನಿಂದ ನೋಡಿದ ಪ್ರಯತ್ನವೆಂದು ಅಧ್ಯಯನ ಮಾಡುವುದು ಹೆಚ್ಚು ಸೂಕ್ತವಾಗುತ್ತದೆ. ಆಗ ಅವರ ಬರಹದ ಸಾಧನೆ ಪರಿಮಿತಿಗಳೆರಡೂ ಸ್ಪಷ್ಟವಾಗುತ್ತವೆ.

1904 ರಲ್ಲಿ ಹಾಸನ ಜಿಲ್ಲೆಯ ಗೊರೂರಿನಲ್ಲಿ ಜನಿಸಿದ ರಾಮಸ್ವಾಮಿ ಅಯ್ಯಂಗಾರ್ ಅವರು ಆ ಪದದ ಒಳ್ಳೆಯ ಅರ್ಥದಲ್ಲಿ ಅ–ಶಿಕ್ಷಿತರಾದವರು. ವಸಾಹತುಶಾಹೀ ಶಿಕ್ಷಣವ್ಯವಸ್ಥೆಯ ಮೌಲ್ಯಗಳಿಂದ ನೇರವಾಗಿ ಪ್ರಭಾವಿತರಾಗದವರು. ಸ್ವಾತಂತ್ರ್ಯಪೂರ್ವದಲ್ಲಿ ಮತ್ತು ನಂತರ, ಪತ್ರಿಕೋದ್ಯಮ, ಸಮಾಜ ಸೇವಾಕಾರ್ಯ, ಗಾಂಧೀಜಿಯವರಿಂದ ಪ್ರೇರಿತವಾದ ರಚನಾತ್ಮಕ ಚಟುವಟಿಕೆಗಳು ಮುಂತಾದ ಕೆಲಸಗಳಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡವರು. 1952 ರಷ್ಟು ಹಿಂದೆಯೇ ಕರ್ನಾಟಕ ರಾಜ್ಯ ವಿಧಾನ ಪರಿಷತ್ತಿಗೆ ನಾಮಕರಣ ಹೊಂದಿದವರು. ಇದೆಲ್ಲದರ ಜೊತೆಗೆ ಸತತವಾಗಿ ಲೇಖನಕಾರ್ಯದಲ್ಲಿ ತೊಡಗಿಸಿಕೊಂಡವರು.

ಗೊರೂರರ ಬರವಣಿಗೆಯನ್ನು ಲಲಿತ ಪ್ರಬಂಧಗಳು, ಕಥೆಗಳು, ಕಾದಂಬರಿಗಳು, ಪ್ರವಾಸ ಕಥನಗಳು, ವಿಮರ್ಶೆ, ರಚನಾತ್ಮಕ ಬರಹಗಳು ಮತ್ತು ಅನುವಾದಗಳೆಂಬ ಬೇರೆ ಬೇರೆ ವಿಭಾಗಗಳಲ್ಲಿ ಬೆಲೆಕಟ್ಟಬಹುದು.

ಡಿ. ವಿ. ಜಿ. ಯವರು ತಮ್ಮ ಕೃತಿಗಳ ಸರಣಿಯೊಂದಕ್ಕೆ ಶೀರ್ಷಿಕೆಯಾಗಿ ಬಳಸಿದ 'ಜ್ಞಾಪಕ ಚಿತ್ರಶಾಲೆ' ಎಂಬ ಹೆಸರನ್ನು ಗೊರೂರರ ಬರವಣಿಗೆಗೆ ಅದರಲ್ಲೂ ಲಲಿತಪ್ರಬಂಧಗಳು ಮತ್ತು ವಿನೋದ ಚಿತ್ರಗಳಿಗೆ ಅಷ್ಟೇ ಸಾರ್ಥಕವಾಗಿ ಉಪಯೋಗಿಸಬಹುದು. 'ಹಳ್ಳಿಯ ಚಿತ್ರಗಳು', 'ನಮ್ಮ ಊರಿನ ರಸಿಕರು', 'ಗರುಡ ಗಂಬದ ದಾಸಯ್ಯ', 'ಕಮ್ಮಾರ ವೀರಭದ್ರಾಚಾರಿ', 'ಬೆಸ್ತರ ಕರಿಯ' ಮುಂತಾದ ಸಂಕಲನಗಳ ಮೂಲಕ ಅವರು ಹೊಸದೊಂದು ಸಾಹಿತ್ಯ ಪ್ರಕಾರವೊಂದನ್ನೇ ಕನ್ನಡದಲ್ಲಿ ಪ್ರಾರಂಭಿಸಿದರು. ಆ ಪ್ರಬಂಧಗಳು ಸ್ವಾನುಭವ ಕೇಂದ್ರಿತವಾದರೂ ಸ್ವ–ಕೇಂದ್ರಿತ ಅಲ್ಲ. ವಿಚಾರ ಮತ್ತು ಭಾವನೆಗಳು ಅವುಗಳ ಹಿನ್ನೆಲೆಯಲ್ಲಿ ತೀವ್ರವಾಗಿ ಕೆಲಸ ಮಾಡುತ್ತಿದ್ದರೂ, ಅವು ತಮ್ಮ ಮೂಲ ಆಕೃತಿಯಲ್ಲಿ ಅನುಭವ ಮಂಡನೆಯನ್ನೆ ಹೊಂದಿರುತ್ತವೆ. ಮಡಿಮಡಿಯೆಂದು ಒದ್ದಾಡುವ ಅವರ ಭಾವನವರಿಂದ ಹಿಡಿದು ಶಾಲುಸಾಬಿ, ರಂಗೇಗೌಡ, ಶೀನಪ್ಪ, ನಾಣಿ, ರತ್ನ, ಗುಂಡಪ್ಪ, ಭಟ್ಟ, ಕರಿಯ, ಜೋಡಿದಾರರು ಮುಂತಾದ ಪಾತ್ರಗಳ ಜಗತ್ತನ್ನೇ ಚಿತ್ರಿಸಿದ್ದಾರೆ. ಏಕಕಾಲದಲ್ಲಿ ಪ್ರಾತಿನಿಧಿಕವೂ, ವಾಸ್ತವಿಕವೂ ಆದ ಈ ವ್ಯಕ್ತಿಗಳಲ್ಲಿ ಗೊರೂರರು ಯಾರನ್ನೂ ಲವಲೇಶವೂ ದ್ವೇಷಿಸುವುದಿಲ್ಲ. ಅವರು ಮಾಡುವ ಅನ್ಯವಿಮರ್ಶೆ–ಆತ್ಮವಿಮರ್ಶೆಗಳೆರಡೂ ಪ್ರೀತಿಯ ಸೆಲೆಯಿಂದಲೇ ಹೊರಡುತ್ತವೆ. ಅವರ ಬರೆಹದ ಪ್ರಮುಖ ಸಂಕೇತಗಳಲ್ಲಿ ಒಂದಾದ 'ಹೇಮಾವತಿ' ನದಿಯಂತೆ ತಮ್ಮ ಕಣ್ಣೆದುರಿಗೆ ಹರಿದು ಹೋಗುತ್ತಿದ್ದ ಜೀವನವನ್ನು

ಅದರ ಎಲ್ಲ ವಿವರಗಳಲ್ಲಿ, ನಿರ್ಲಿಪ್ತವಾಗಿ ಹಿಡಿದಿಡುವ ಪ್ರಯತ್ನವನ್ನು ಅವರು ಮಾಡಿದರು. ಆದರೆ ಸೃಜನಶೀಲ ಪ್ರತಿಭೆಯ ಬಲದಿಂದ, ತಾವು ಕಾಣುತ್ತಿರುವ ಜಗತ್ತಿಗೆ ಸಂವಾದಿಯಾದರೂ, ಕಥನಾತ್ಮಕವಾದ (Fictional) ಹೊಸ ಜಗತ್ತನ್ನು ಕಟ್ಟುವ ಕೆಲಸದಲ್ಲಿ ಅವರು ಯಶಸ್ವಿಯಾಗಲಿಲ್ಲ. ಏಕೆಂದರೆ ಅವರಲ್ಲಿ ಕಂಡುಬರುವುದು, ಲೇಖಕ 'ಪಡೆದ, ಕಂಡ' ಅನುಭವಗಳ ಸೃಜನಶೀಲ ಮಂಡನೆಯೇ ಹೊರತು, ಅವನೇ 'ಕಟ್ಟಿದ, ಸಂಯೋಜಿಸಿದ' ಅನುಭವಗಳ ಲೋಕವಲ್ಲ.

ಗಾಂಧೀಜಿಯವರ ಆದರ್ಶಗಳ ಬಗೆಗಿದ್ದ ನಿಷ್ಠೆಯು, ಗೊರೂರರಿಗಿದ್ದ ಬಹು ಹರಿತವಾದ ವಾಸ್ತವ ಪ್ರಜ್ಞೆಯನ್ನು ಮೊಂಡುಮಾಡಲಿಲ್ಲ. ಆದ್ದರಿಂದಲೂ ಅವರಲ್ಲಿ ಹುಸಿ ರೊಮ್ಯಾಂಟಿಕ್ ನೆಲೆಗಳನ್ನು ಗುರುತಿಸಲಾಗುವುದಿಲ್ಲ; ಕಳೆದುಹೋದುದರ ಬಗ್ಗೆ ಅವರು ತೋರಿಸುವ ಹಳಹಳಿಕೆಯು ಹೊಸದನ್ನು ವಿರೋಧಿಸುವ ಜಡತನವಾಗಲಿಲ್ಲ. ಆ ಪಾತ್ರಗಳ ಜೀವನೋತ್ಸಾಹ ಮತ್ತು ಜಾಣತನಗಳು ಅನನ್ಯನಾದವು.

ಇನ್ನೊಂದು ಮಹತ್ವದ ಪ್ರಶ್ನೆಯನ್ನೂ ಎತ್ತಬಹುದು. ಅದು ಗೊರೂರರು ಚಿತ್ರಿಸುವ ಗ್ರಾಮಜೀವನದ ಅಧಿಕೃತತೆಯನ್ನು ಕುರಿತು. ಇಡೀ ಹಳ್ಳಿಯ ಜೀವನವನ್ನು, ಪ್ರಾಯಶಃ 'ಆ' ಹಳ್ಳಿಯ ಕೇಂದ್ರವೂ ಆದ ಮಧ್ಯಮವರ್ಗದ ಬ್ರಾಹ್ಮಣ ದೃಷ್ಟಿಕೋನದಿಂದ ನೋಡಿದ ಗೊರೂರರ ಬರವಣಿಗೆಯಲ್ಲಿ ಜಾತೀಯತೆಯ ದೋಷವಿಲ್ಲ. ಆದರೆ ಆ ಚಿತ್ರಣವು ಹಳ್ಳಿಯ ಜೀವನದ ವರ್ಣ–ವರ್ಗ ಸಮನ್ವಿತವಾದ, ಸ್ವರೂಪವನ್ನು ಅದರ ದ್ವಂದ್ವಗಳು, ಸಂಕೀರ್ಣತೆಗಳು ಮತ್ತು ವಿಷಮತೆಗಳ ಸಮೇತವಾಗಿ ಕಟ್ಟಿಕೊಡುತ್ತದೆಯೇ ಎಂಬ ಚರ್ಚೆಗೆ ಮಾತ್ರ ಖಂಡಿತವಾಗಿಯೂ ಅವಕಾಶವಿದೆ. ಇದು ಗೊರೂರರ ಪರಿಮಿತಿಗಳ ಕಡೆಗೆ ಬೆರಳು ಮಾಡುವ ಪ್ರಶ್ನೆಯಲ್ಲ. ಬದಲಾಗಿ ಒಂದು ಶತಮಾನದ ಹಿಂದೆ ಭಾರತೀಯ ಸಮುದಾಯದಲ್ಲಿ ಇತ್ತು ಎಂದು ಹೇಳಲಾದ ಸಮನ್ವಯ ಮತ್ತು ಸಹಜೀವನಗಳು ಕಾಲ್ಪನಿಕವೋ ಅಥವಾ ಅಂದು ಇದ್ದು ಇಂದು ಮಾಯವಾಗಿವೆಯೋ ಎಂಬ ಆಲೋಚನೆಗಳು ಇಲ್ಲಿ ಕೆಲಸ ಮಾಡುತ್ತಿವೆ. ಸ್ವಾತಂತ್ರ್ಯೋತ್ತರ ಬೆಳವಣಿಗೆಯು ಸ್ಪಷ್ಟವಾಗಿ ತೋರಿಸಿಕೊಟ್ಟಿರುವಂತೆ, ಆ ಗ್ರಾಮ ಸಮಾಜದ ಶಾಂತಿ, ಸಮಾಧಾನಗಳು ಕೇವಲ ತೋರಿಕೆಯವಾಗಿದ್ದವು. ಅಭಿವ್ಯಕ್ತಿಗೇ ಅವಕಾಶವೇ ಇಲ್ಲದಂತೆ ಹಿಡಿದಿಡಲ್ಪಟ್ಟ ಭಾವನೆಗಳ ಜ್ವಾಲಾಮುಖಿಯನ್ನು ಗೊರೂರರು ಗ್ರಹಿಸಲಿಲ್ಲ. ಕುವೆಂಪುರವರ ಕಾದಂಬರಿಗಳು ಗ್ರಾಮಜೀವನದಲ್ಲಿ ತಲ್ಲೀನವಾಗಿ ಅದರೊಳಗಿನ ವೈಷಮ್ಯದ ಒಳಸುಳಿಗಳನ್ನು ದಾಖಲೆ ಮಾಡುವ ಬಗೆಯನ್ನು ನೆನಪು ಮಾಡಿಕೊಂಡಾಗ ಗೊರೂರರ ಬರವಣಿಗೆಯ ನೆಲೆಯು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಗೊರೂರರ ಬರೆಹಗಳ ಮರುಓದು ಮುಖ್ಯವಾದ ಸಾಂಸ್ಕೃತಿಕ ಚರ್ಚೆಗೆ ದಾರಿಮಾಡಿಕೊಡಬಹುದು.

ಚುಚ್ಚುಮಾತು, ಕಟಕಿ, ವಿಡಂಬನೆಗಳ ಸ್ಪರ್ಶವೂ ಇಲ್ಲದ ನಿರ್ಮಲವಾದ

ಹಾಸ್ಯಕ್ಕೆ ಗೊರೂರರ ಲಲಿತಪ್ರಬಂಧಗಳಿಗಿಂತ ಶ್ರೇಷ್ಠವಾದ ನಿದರ್ಶನಗಳನ್ನು ಕೊಡಲು ಕನ್ನಡದಲ್ಲಂತೂ ಸಾಧ್ಯವಿಲ್ಲ. ಆ ಹಾಸ್ಯವು ಸ್ವಭಾವ ವಿಶಿಷ್ಟತೆ, ಸನ್ನಿವೇಶಗಳ ನಿರ್ಮಾಣ ಮತ್ತು ಭಾಷಿಕನೆಲೆಗಳಿಂದ ಮೂಡಿಬರುತ್ತವೆ. ಅವು ನಗುವಿನ ಲೇಪ ಪಡೆದ ಜೀವನದ ಮೀಮಾಂಸೆಯಾಗಿರುವುದರಿಂದ, ನಗೆಲೇಖನಗಳಿಗಿಂತ ಬಹುಮೇಲೆ ಹೋಗುತ್ತವೆ. ಕ್ರಮೇಣ ನಾಗರಿಕತೆಯ ಆಘಾತಗಳಿಗೆ ತೆರೆದು ಕೊಳ್ಳುತ್ತಿರುವ ಹಳ್ಳಿಯ ಬದುಕು, ತಲೆಮಾರುಗಳ ನಡುವೆ ಸ್ಪಷ್ಟವಾಗಿ ಕಾಣಿಸುತ್ತಿರುವ ಸಂವೇದನೆಯ ಅಂತರ, ಇವೆಲ್ಲದರ ನಡುವೆ ಚಿಮ್ಮುವ ಜೀವನೋಲ್ಲಾಸಗಳು ಅವರ ಪ್ರಬಂಧಗಳಲ್ಲಿ ಹಾಸುಹೊಕ್ಕಾಗಿವೆ. ಪ್ರತಿಯೊಂದು ಸನ್ನಿವೇಶವನ್ನೂ ಹೀಗೆ ವಿನೋದದಿಂದ, ವಿವೇಕದಿಂದ ನೋಡುವ ಕ್ರಮವನ್ನು 'ವಿದೂಷಕ ಸಂಹಿತ' ವೆಂದು ಕರೆಯಬಹುದೇನೋ. ಇಂಥ ದಾರಿಗೆ 'ಅಮೆರಿಕಾದಲ್ಲಿ ಗೊರೂರು' ಶ್ರೇಷ್ಠ ನಿದರ್ಶನ.

ಗೊರೂರರು ಕಥೆ–ಕಾದಂಬರಿಗಳನ್ನೂ ರಚಿಸಿದ್ದಾರೆ. 'ಪುನರ್ಜನ್ಮ', 'ಮೆರವಣಿಗೆ' 'ಹೇಮಾವತಿ' ಮತ್ತು 'ಊರ್ವಶಿ'ಗಳು ಕಾದಂಬರಿಗಳಾದರೆ, 'ವೈಯ್ಯಾರಿ', 'ಶಿವರಾತ್ರಿ', 'ಉಸುಬು', 'ಗೋಪುರದ ಬಾಗಿಲು' ಮುಂತಾದವು ಕಥಾಸಂಕಲನಗಳು. ಅವರ ಪ್ರಬಂಧಗಳಿಗೂ ಕಥೆಗಳಿಗೂ ನಡುವಿನ ಗಡಿಗೆರೆಯೂ ಬಹಳ ತೆಳುವಾದುದು. ಕಾದಂಬರಿಗಳ ವಾಚನೀಯತೆಯು ಸಂದೇಹಾತೀತವಾದರೂ, ಸೃಜನಶೀಲತೆಯು ಸೀಮಿತವಾದುದು. ಅತಿ ಪ್ರಸಿದ್ಧವಾದ 'ಬೂತಯ್ಯನ ಮಗ ಅಯ್ಯು' ಕೂಡ ಈ ಮಾತಿಗೆ ಅಪವಾದವಲ್ಲ. ಅತಿ ವಿಶಿಷ್ಟವಾದ ಅನುಭವದ ಹಿನ್ನೆಲೆಯನ್ನು ಹೊಂದಿದ್ದರೂ, ಅದೆಲ್ಲವನ್ನೂ ಪ್ರಬಂಧಗಳಲ್ಲಿ ಅಮರವಾಗಿಸಿದ್ದರೂ, ಅವರ ಕಥೆ–ಕಾದಂಬರಿಗಳು ಮಾತ್ರ ಶ್ರೀಮಂತವೂ, ಸಂಕೀರ್ಣವೂ ಆಗಲಿಲ್ಲ.

ಕನ್ನಡದ ಪ್ರವಾಸ ಕಥನಗಳಲ್ಲಿ 'ಅಮೆರಿಕದಲ್ಲಿ ಗೊರೂರು' ಕೃತಿಗೆ ವಿಶಿಷ್ಟ ಸ್ಥಾನವು ಮೀಸಲಾಗಿದೆ. ಇನ್ನೊಬ್ಬ ಹಿರಿಯ ಲಲಿತಪ್ರಬಂಧಕಾರಾದ ಎ. ಎನ್. ಮೂರ್ತಿರಾಯರ 'ಅಪರವಯಸ್ಕನ ಅಮೆರಿಕಾಯಾತ್ರೆ' ಯೊಂದಿಗೆ ಇದನ್ನು ಹೋಲಿಸಿದಾಗ ಈ ಎರಡು ಮನೋಧರ್ಮಗಳ ವಿಶಿಷ್ಟತೆ ಹಾಗೂ ಪರಸ್ಪರ ಪೂರಕತೆಗಳು ವಿದಿತವಾಗುತ್ತವೆ. ಭಾರತೀಯ ಸಂಸ್ಕೃತಿಯ ಬಗೆಗಿನ ಅಭಿಮಾನದಿಂದ ಬೀಗಿಕೊಂಡು ಅಥವಾ ಪಾಶ್ಚಾತ್ಯ ಸಂಸ್ಕೃತಿಯ ಬಗೆಗಿನ ಅಭಿಮಾನದಿಂದ ಬೀಗಿಕೊಂಡು ಅಥವಾ ಪಾಶ್ಚಾತ್ಯ ಸಂಸ್ಕೃತಿಯ ಆಕರ್ಷಣೆಯಲ್ಲಿ ಕಳೆದುಕೊಂಡು, ಅವಸರದ ಹೆಜ್ಜೆ ಹಾಕುವ ಪ್ರವಾಸ ಕಥನಗಳಿಗೆ ಹೋಲಿಸಿದಾಗ ಈ ಹಿರಿಯರ ಕುತೂಹಲ, ಸಹಾನುಭೂತಿ ಮತ್ತು ಆತ್ಮವಿಶ್ವಾಸಗಳು ಮನಮೆಚ್ಚಿಸುತ್ತವೆ.

'ಸಾಹಿತ್ಯ ರಶ್ಮಿ' ಗೊರೂರರ ವಿಮರ್ಶಾತ್ಮಕ ಲೇಖನಗಳ ಸಂಕಲನ. ಜಾನಪದದ ಬಗೆಗಿನ ಕುತೂಹಲ ಮತ್ತು ಪಾಂಡಿತ್ಯಗಳು ಪ್ರಾರಂಭದಶೆಯಲ್ಲಿದ್ದ ಕಾಲದಲ್ಲಿಯೇ ಗೊರೂರರ 'ಹಳ್ಳಿಯ ಬಾಳು', 'ಹಳ್ಳಿಯ ಹಾಡುಗಳು' 'ಜನಪದ

ಜೀವನ ಮತ್ತು ದರ್ಶನ' ದಂಥ ಕೃತಿಗಳನ್ನು ರಚಿಸಿದರು. ಸಂಗ್ರಹ ಮತ್ತು ವಿಶ್ಲೇಷಣೆಗಳು ಅಲ್ಲಿನ ಪ್ರಮುಖ ನೆಲೆಗಳು. ಅವರು ಗಾಂಧೀ ಸಾಹಿತ್ಯ; ತಮಿಳು, ಮರಾಠೀ, ಹಿಂದೀ ಮುಂತಾದ ಭಾಷೆಯ ಕೃತಿಗಳು ಮುಂತಾಗಿ ಹದಿನೈದಕ್ಕೂ ಹೆಚ್ಚು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. (ವಿವರಗಳಿಗೆ ನೋಡಿ : 'ಸಾಲುದೀಪಗಳು', ಕರ್ನಾಟಕ ಸಾಹಿತ್ಯ ಅಕಾಡೆಮಿ; 1990; ಪುಟ 367)

ಎಂಬತ್ತೇಳು ವರ್ಷಗಳ ತುಂಬುಜೀವನದಲ್ಲಿ ಹಲವು ಗೌರವಗಳನ್ನು ಪಡೆದಿದ್ದಾರೆ. 'ಅಮೆರಿಕದಲ್ಲಿ ಗೊರೂರು' ಪುಸ್ತಕಕ್ಕೆ ಬಂದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1980), ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, (1969) ಮೈಸೂರು ವಿಶ್ವವಿದ್ಯಾಲಯದ ಡಿ.ಲಿಟ್., ಪದವಿ, (1974), ಶಿರಸಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ (1982) ಮತ್ತು ಅವರಿಗೆ ಅರ್ಪಿತವಾದ ಗೊರೂರು ಗೌರವಗ್ರಂಥಗಳು ಇವುಗಳ ಪೈಕಿ ಮುಖ್ಯವಾದವು. ಎಲ್ಲಕಿಂತ ಹೆಚ್ಚಾಗಿ ಕನ್ನಡ ಸಾಹಿತ್ಯದ ಚಿರಂತನ ಆಸ್ತಿಯಾಗಬಲ್ಲ ಕೆಲವು ಮಹತ್ವ ಕೃತಿಗಳನ್ನು ರಚಿಸುವುದರ ಮೂಲಕ, ಜನಮನದಲ್ಲಿ ಅವರು ಪಡೆದಿರುವ ಸ್ಥಾನವೇ ಅವರಿಗೆ ಸಂದಿರುವ ಶ್ರೇಷ್ಠತಮ ಮನ್ನಣೆ.

* * *

## ರಾ.ಯ. ಧಾರವಾಡಕರ್ (1919–1991)

ಹಳೆಯ ಮೈಸೂರಿನ ಹಾಗೆಯೇ ಉತ್ತರ ಕರ್ನಾಟಕದಲ್ಲಿಯೂ ಸಾಹಿತ್ಯ ಮತ್ತು ಶಿಕ್ಷಣಗಳೆರಡರಲ್ಲೂ ಸಕ್ರಿಯವಾದ ಆಸಕ್ತಿಯನ್ನು ತೋರಿಸಿ ಸಂಸ್ಕೃತಿರೂಪಣ, ನಿರೂಪಣಗಳಲ್ಲಿ ತೊಡಗಿದ್ದ ಹಿರಿಯರ ಪರಂಪರೆಯಿದೆ. ಡಾ। ರಾಜೇಂದ್ರ ಯಲಗುರ್ದರಾವ್ ಧಾರವಾಡಕರ್ ಅವರು (ಜ. 1919) ಈ ಬಗೆಯ ಹಿರಿಯರು. 1946 ರಲ್ಲಿ ಎಂದರೆ 27 ರಷ್ಟು ಚಿಕ್ಕವಯಸ್ಸಿನಲ್ಲಿ ಧಾರವಾಡದ ಜೆ.ಎಸ್.ಎಸ್. ಕಾಲೇಜಿನ ಪ್ರಿನ್ಸಿಪಾಲರಾದ ಅವರು ನಂತರ ಇಪ್ಪತ್ತೊಂಬತ್ತು ವರ್ಷಗಳ ಕಾಲ ಆ ಹುದ್ದೆಯನ್ನು ನಿರ್ವಹಿಸಿದರು. ಇದರ ಜೊತೆಗೆ ಅಧ್ಯಾಪನದ ಕೆಲಸವಂತೂ ನಡೆದೇ ಇತ್ತು. ಶೈಕ್ಷಣಿಕ ಮಹತ್ವದ ಹಲವು ಯೋಜನೆಗಳನ್ನು ರೂಪಿಸುವುದರಲ್ಲಿ ಅನುಷ್ಠಾನಕ್ಕೆ ತರುವುದರಲ್ಲಿ ಅವರು ನಿರ್ಣಾಯಕವಾದ ಪಾತ್ರಗಳನ್ನು ವಹಿಸಿದರು.

ಧಾರವಾಡಕರ್ ಅವರ ಬರವಣಿಗೆಯು ತನ್ನ ವೈವಿಧ್ಯ, ಸೃಜನಶೀಲತೆ ಮತ್ತು ಪಾಂಡಿತ್ಯಗಳಿಂದ ಗಮನ ಸೆಳೆಯುತ್ತವೆ. ಅವರ ಬೇರೆ ಬೇರೆ ಕೃತಿಗಳಲ್ಲಿ ಈ ಗುಣಗಳು ವಿವಿಧ ಪ್ರಮಾಣದಲ್ಲಿ ಕಂಡುಬರುತ್ತವೆ.

ಲಲಿತ ಪ್ರಬಂಧಗಳು ಮತ್ತು ಸಣ್ಣಕಥೆಗಳನ್ನು ಅವರು ತಮ್ಮ ಸೃಜನಶೀಲ ಅಭಿವ್ಯಕ್ತಿಯ ಮಾಧ್ಯಮಗಳಾಗಿ ಆರಿಸಿಕೊಂಡರು. ಅನುಭವ ನಿರೂಪಣೆ ಹಾಗೂ

ವೈಚಾರಿಕತೆಗಳು ಈ ಬರವಣಿಗೆಯ ಹಿಂದಿನ ಮುಖ್ಯ ಪ್ರೇರಣೆಗಳು. 'ಧೂಮ್ರವಲಯಗಳು', 'ತೂರಿದ ಚಿಂತನಗಳು' ಮತ್ತು 'ನವಿಲುಗರಿ' ಅವರ ಪ್ರಬಂಧ ಸಂಕಲನಗಳು. ಹಾಗೆಯೇ ಅವರು ತಮಗೆ ಅರ್ಪಿಸಿದ ಅಭಿನಂದನ ಗ್ರಂಥವಾದ 'ಪ್ರಬಂಧ ಪ್ರಪಂಚ' (1990) ದಲ್ಲಿ ಬರೆದಿರುವ 'ಮರಳಿ ನೋಡಿದಾಗ' ಎಂಬ ಬರವಣಿಗೆಯು ಆತ್ಮಕಥನಾತ್ಮಕವಾಗಿಯೂ, ಉತ್ತರ ಕರ್ನಾಟಕದ ಒಂದು ವರ್ಗದ ಜೀವನಕ್ರಮಕ್ಕೆ ಬೆಳಕಿಂಡಿಯಾಗುತ್ತವೆ. ಲಘುವೂ, ಸರಸವೂ ಆದ ಧಾಟಿಯಲ್ಲಿ ಮಹತ್ವದ ಅನುಭವ, ಅನಿಸಿಕೆಗಳನ್ನು ಮಂಡಿಸುವುದರಿಂದ ಈ ಕೃತಿಗಳು ಧಾರವಾಡಕರರ ಮಹತ್ವ ಕೊಡುಗೆಗಳಾಗಿವೆ. ಹಾಗೆಯೇ ಎಪ್ಪತ್ತರ ಹರೆಯದಲ್ಲಿ 'ಅಮೆರಿಕದ ನಿಗ್ರೋ ಕಥೆಗಳು' ಮತ್ತು 'ಸಾಗರೋತ್ತರ ಕಥೆಗಳು' ಎಂಬ ಎರಡು ಸಂಕಲನಗಳನ್ನು ಹೊರತಂದರು. ಎಂದೋ ಕಂಡು ಕೇಳಿದ ಅಮೆರಿಕನ್ ನಿಗ್ರೋಗಳ ಜೀವನ ಚಿತ್ರಗಳನ್ನು ಕುರಿತು ಧ್ಯಾನಿಸುವುದರ ಫಲವಾಗಿ ಕನ್ನಡದಲ್ಲಿ 'ಅನುಸೃಷ್ಟಿ' ಯಾಗಿರುವ 'ನಿಗ್ರೋ ಕಥೆಗಳು' ಒಂದು ವಿಶಿಷ್ಟ ಪ್ರಯೋಗ. 'ತೆರೆಯ ಹಿಂದೆ' ಅವರದೇ ಸ್ವಂತ ಕಥೆಗಳ ಸಂಕಲನ. ಸ್ವಾರಸ್ಯಕರವಾದ ಅನುಭವ ಮಂಡನೆಯ ನೆಲೆಯಿಂದ ಇವು ಮೇಲೇರುವುದಿಲ್ಲ. ರಾಜ್ಯ ಅಕಾಡೆಮಿಯ ಬಹುಮಾನ ಪಡೆದ ಪ್ರವಾಸ ಕಥನ 'ನಾನು ಕಂಡ ಅಮೇರಿಕ' ಅವರ ಸಂವೇದನಾಶೀಲತೆ ಮತ್ತು ಸುಸಂಸ್ಕೃತ ಮನಸ್ಸುಗಳಿಂದ ಪ್ರಬುದ್ಧತೆಯನ್ನು ಪಡೆದುಕೊಂಡಿದೆ. 'ಸಾಹಿತ್ಯ ಸಮೀಕ್ಷೆ' ಮತ್ತು 'ಆರು ಪ್ರಬಂಧಗಳು' ಸಹೃದಯ ವಿಮರ್ಶೆಯ ಕ್ಷೇತ್ರದಲ್ಲಿ ಅವರು ನಡೆಸಿದ ಪ್ರಯೋಗಗಳಿಗೆ ನಿದರ್ಶನಗಳು.

ತಮ್ಮ ಆಡಳಿತಾತ್ಮಕ ಜವಾಬ್ದಾರಿಗಳ ನಡುವೆಯೂ, ಅವರು ಸಂಶೋಧನೆಯ ಬಗೆಗಿನ ಒಲವುಗಳನ್ನು ಬೆಳೆಸಿಕೊಂಡಿದ್ದು ಕುತೂಹಲಕಾರಿಯಾದ ವಿಷಯ. ಪತ್ರಿಕೋದ್ಯಮ, ಭಾಷಾಶಾಸ್ತ್ರ ಮತ್ತು ಹೊಸಗನ್ನಡ ಸಾಹಿತ್ಯದ ಉದಯಕಾಲವನ್ನು ಕುರಿತ ಚಿಂತನೆಗಳು ಅವರ ಸಂಶೋಧನೆಯ ಪ್ರಮುಖ ನೆಲೆಗಳು. ಇಂದು ಅಲಭ್ಯವಾಗಿರುವ ಆಕರಗಳಿಂದ ಮಾಹಿತಿಗಳನ್ನು ಸಂಗ್ರಹಿಸಿರುವುದು ಪತ್ರಿಕೋದ್ಯಮವನ್ನು ಕುರಿತ ಕೃತಿಗಳ ಮುಖ್ಯ ಲಕ್ಷಣ. 'ನಮ್ಮ ದೇಶದ ಯೋಜನೆಗಳು' , 'ಕನ್ನಡದಲ್ಲಿ ಕಾನೂನು ಸಾಹಿತ್ಯ' ಆಯಾ ವಿಷಯಗಳನ್ನು ಕುರಿತ ಸಂಶೋಧನೆ, ಸಮೀಕ್ಷೆಗಳನ್ನು ಒಳಗೊಂಡಿವೆ.

ನಲವತ್ತೆರಡು ವರ್ಷಗಳ ಹಿಂದೆ ಧಾರವಾಡಕರ್ ಅವರು ಬರೆದ 'ಕನ್ನಡ ಭಾಷಾ ಶಾಸ್ತ್ರ'ವು ಇಂದಿಗೂ ಸಾಹಿತ್ಯ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಕೃತಿಯಾಗಿರುವುದು, ಆ ಪುಸ್ತಕದ ಯೋಗ್ಯತೆಗೆ ಹೇಗೋ ಹಾಗೆಯೇ ಆ ಕ್ಷೇತ್ರಕ್ಕೆ ಸಂಬಂಧಪಟ್ಟ ಬೆಳವಣಿಗೆಯಲ್ಲಿ ಕನ್ನಡದ ರಿಕ್ತ ಸ್ಥಿತಿಗೂ ಸಾಕ್ಷಿಯಾಗಿದೆ. ಭಾಷೆಯ ಉಗಮ, ಮತ್ತು ಬೆಳವಣಿಗೆ, ಕನ್ನಡ ಶಬ್ದಕೋಶ, ವ್ಯಾಕರಣ, ಉಪಭಾಷೆಗಳು, ಭಾಷೆಯ ಮೂಲಕ ನಡೆಸಬಹುದಾದ ಸಂಸ್ಕೃತಿ ವಿಶ್ಲೇಷಣ

ಮುಂತಾದ ಹಲವು ಮಹತ್ವದ ವಿಷಯಗಳನ್ನು ಆ ಕಾಲಕ್ಕೆ ಖಚಿತ ಮತ್ತು ವೈಜ್ಞಾನಿಕವೆನ್ನಬಹುದಾದ ಧಾಟಿಯಲ್ಲಿ ಅವರು ಮಂಡಿಸಿದ್ದಾರೆ. ಶಾಸ್ತ್ರವು ಬೆಳೆದಂತೆ ಇಂಥ ಕೃತಿಗಳು 'ಐತಿಹಾಸಿಕ ಮಹತ್ವ'ವನ್ನು ಪಡೆದುಕೊಳ್ಳುತ್ತವೆ. ಧಾರವಾಡಕರ್ ಅವರ ಪಿಎಚ್.ಡಿ. ಪ್ರಬಂಧವಾದ 'ಹೊಸಗನ್ನಡ ಸಾಹಿತ್ಯದ ಉದಯಕಾಲ' (1975) ಹತ್ತೊಂಬತ್ತನೆಯ ಶತಮಾನದ, ಉತ್ತರ ಕರ್ನಾಟಕದಲ್ಲಿ ನಡೆದ ಸಾಹಿತ್ಯ ಕೃಷಿಯನ್ನು ಕುರಿತು ಮಹತ್ವದ ದಾಖಲೆಗಳನ್ನು, ಮಾಹಿತಿಗಳನ್ನು ಸಂಗ್ರಹಿಸುವ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದೆ. ತಮ್ಮೆಲ್ಲ ಪ್ರತಿಭೆಯನ್ನೂ ಸಂಶೋಧನೆಯ ಕಡೆಗೆ ಹರಿಸುವ ಅವಕಾಶ ಪಡೆಯಲಿಲ್ಲವಾದ್ದರಿಂದ ಈ ಕೃತಿಗಳು ಅವರಿಗಿದ್ದ ಸಾಧ್ಯತೆಗಳನ್ನೂ ವಿನಾ, ಆ ಕ್ಷೇತ್ರದ ಶಿಖರಗಳೆನ್ನಿಸಿಕೊಳ್ಳುವುದಿಲ್ಲ.

ತಮ್ಮ ಪ್ರದೇಶದ ಕೆಲವು ಹಿರಿಯರ ಸಂಕ್ಷಿಪ್ತ ಜೀವನ ಚಿತ್ರಗಳನ್ನು ರಚಿಸಿಕೊಟ್ಟಿದ್ದು ಧಾರವಾಡಕರರ ಮತ್ತೊಂದು ಸಾಧನೆ. 'ವೆಂಕಟರಂಗೋ ಕಟ್ಟಿ' 'ಡಾ. ನಂದೀಮಠ ನೆನಪು' ಮತ್ತು 'ಶ್ರೀನಮನ' ಗಳನ್ನು ಹೆಸರಿಸಬಹುದು. ಇವಲ್ಲದೆ ಇನ್ನೆಷ್ಟೋ ಗ್ರಂಥಗಳ ಸಂಪಾದನೆ, ಅನುವಾದಗಳನ್ನು ಅವರು ಮಾಡಿದ್ದಾರೆ. ಇದುವರೆಗಿನ ಇಲ್ಲೇಖಗಳೇ ಅವರು ಬಹುಮುಖ ಆಸಕ್ತಿಗಳನ್ನು ಹಲವು ಜವಾಬ್ದಾರಿಗಳ ನಡುವೆ ಬರಣಿಗೆಯಲ್ಲೂ ತೋರಿಸಿದ ಕಾರ್ಯ ತತ್ಪರತೆಯನ್ನು ತೋರಿಸಿಕೊಡುತ್ತವೆ.

1989ರಲ್ಲಿ ಪಡೆದ ರಾಜ್ಯ ಸಾಹಿತ್ಯ ಅಕಾಡೆಮಿಯ ವೈಯುಕ್ತಿಕ ಪ್ರಶಸ್ತಿ ಮತ್ತು ಎರಡು ಬಾರಿ ಪಡೆದ ಪುಸ್ತಕ ಬಹುಮಾನಗಳು ಅವರಿಗೆ ಮನ್ನಣೆ ಸಲ್ಲಿಸಿವೆ. ಹಾಗೆಯೇ ಅವರಿಗೆ ಎಪ್ಪತ್ತು ವರ್ಷಗಳು ತುಂಬಿದ ಸಂದರ್ಭದಲ್ಲಿ 'ಪ್ರಬಂಧ ಪ್ರಪಂಚ' ಎಂಬ 'ಲೇಖನ ಸಂಪುಟ'ವೊಂದು ಅವರಿಗೆ ಅರ್ಪಿತವಾಯಿತು.

ಧಾರವಾಡಕರರಂಥ ಅನೇಕ ನುಡಿಸೇವಕರ, ಬಿಡಿಬಿಡಿ ಬದುಕುಗಳ ಫಲವಾಗಿಯೇ ಒಂದು ನಾಡಿನ ಸಾಹಿತ್ಯ ಸಂಸ್ಕೃತಿಯು ರೂಪು ಪಡೆಯುತ್ತದೆ.

* * *

## ಕೆ. ವೆಂಕಟರಾಮಪ್ಪ ( –1991)

ಹೊಸಗನ್ನಡ ಸಾಹಿತ್ಯದ ಆರಂಭದ ಕೆಲವು ದಶಕಗಳಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಮತ್ತು ಇಂಗ್ಲೀಷ್ ಪ್ರಾಧ್ಯಾಪಕ ಪರಂಪರೆಯು ವಹಿಸಿದ ಪಾತ್ರವು ಮಹತ್ವಪೂರ್ಣವಾದುದು. ಅವರು ಸಾಹಿತ್ಯ ರಚನೆ, ಸಾಹಿತ್ಯ ಪರಿಚಯ, ಅಭಿರುಚಿ ನಿರ್ಮಾಣ, ಸಾಹಿತಿಗಳ ಲಾಲನೆ ಮುಂತಾದ ಬಹುಮುಖ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಪ್ರೊ.ವೆಂಕಟರಾಮಪ್ಪ

ಅವರು ಆ ಪರಂಪರೆಗೆ ಸೇರಿದವರು. ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಪಾಂಡಿತ್ಯ ಮತ್ತು ಅತ್ಯುತ್ತಮವಾದ ಭಾಷಣ ಕಲೆಗಳನ್ನು ವೆಂಕಟರಾಮಪ್ಪನವರ ವಿಶಿಷ್ಟ ಲಕ್ಷಣಗಳೆಂದು ಪರಿಗಣಿಸಬಹುದು. ಅವರ ಬರವಣಿಗೆಯೂ ಅವರಿಗಿದ್ದ ಈ ಸೌಲಭ್ಯಗಳಿಗೆ ಅನುಗುಣವಾಗಿಯೇ ರೂಪುಗೊಂಡಿತೆಂದು ತೋರುತ್ತದೆ.

ಲಲಿತ ಪ್ರಬಂಧಗಳ ರಚನೆ, ತೆಲುಗು ಸಾಹಿತ್ಯದಿಂದ ಅನುವಾದ ಹಾಗೂ ಆ ಭಾಷೆಯ ಕೃತಿ, ಕೃತಿಕಾರರ ಪರಿಚಯ, ಸಾಹಿತ್ಯ ಪರಿಚಯ ಮತ್ತು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದ ಬರೆಹಗಳು ಮತ್ತು ಗ್ರಂಥ ಸಂಪಾದನೆಗಳನ್ನು ವೆಂಕಟರಾಮಪ್ಪನವರ ಬರವಣಿಗೆಯ ಮುಖ್ಯನೆಲೆಗಳೆಂದು ಪರಿಗಣಿಸಬಹುದು. ಅಂಥದೊಂದು ಶಾಸ್ತ್ರವು ಪ್ರಾರಂಭವಾಗುವುದಕ್ಕೆ ಮೊದಲೇ ತೌಲನಿಕ ಸಾಹಿತ್ಯ ಅಧ್ಯಯನಕ್ಕೆ ಬೇಕಾಗಿದ್ದ ಪೂರ್ವಸಿದ್ಧತೆ ಹಾಗೂ ಬಹುಭಾಷಾ ಪಾಂಡಿತ್ಯಗಳನ್ನು ಪಡೆದಿದ್ದರು ವೆಂಕಟರಾಮಪ್ಪನವರು. ಅವರ ಬರವಣಿಗೆಯ ಮುಖ್ಯಭಾಗವು, ಅವರು ವಿಶ್ವವಿದ್ಯಾಲಯದ ಪ್ರಾಧ್ಯಾಪಕವೃತ್ತಿಯಿಂದ ನಿವೃತ್ತರಾದ ಮೇಲೆಯೂ ಮುಂದುವರಿಯಿತು.

'ಕಾವ್ಯಮಂಥನ', 'ಕೋಣನ ಮಂತ್ರ' ಮತ್ತು 'ವಿಚಾರ ಲಹರಿ'ಗಳು ವೆಂಕಟರಾಮಪ್ಪನವರ ಪ್ರಮುಖ ಪ್ರಬಂಧ ಸಂಕಲನಗಳು. ದೇವರಾದ ಆಂಜನೇಯನಿಂದ ಹಿಡಿದು ತೆಲುಗು ಕವಿ ಶ್ರೀನಾಥನವರೆಗೆ ಇಲ್ಲಿನ ಲೇಖನಗಳ ಹರಹಿದೆ. ಲೇಖಕರ ಬಹುಶ್ರುತತ್ವ ಮತ್ತು ಸರಸಿಯಾದ ಮನೋಧರ್ಮಗಳಿಗೆ ಇಲ್ಲಿ ಅನೇಕ ನಿದರ್ಶನಗಳು ದೊರಕುತ್ತವೆ. ಆದರೆ ಗಟ್ಟಿಯಾದ ಸಾಹಿತ್ಯ ವಿಮರ್ಶೆಯನ್ನಾಗಲೀ, ಸೃಜನಶೀಲತೆಯಿಂದ ದೀಪ್ತವಾದ ಲಲಿತ ಪ್ರಬಂಧಗಳನ್ನಾಗಲೀ ಇಲ್ಲಿ ಹುಡುಕ ಹೊರಟರೆ ನಿರಾಶೆಯಾಗುತ್ತದೆ. ಲಘುವಾದರೂ ಉಪಯುಕ್ತವಾದ ವಾಚನೀಯತೆ ಇವರ ಬರಹಗಳ ಗುರುತು.

ವೆಂಕಟರಾಮಪ್ಪನವರು ಮಾಡಿದ ಮಹತ್ವದ ಕೆಲಸವೆಂದರೆ ಸೋದರ ಭಾಷೆಯಲ್ಲಿದ್ದ ತೆಲುಗಿನ ಪ್ರಾಚೀನ ಮತ್ತು ಆಧುನಿಕ ಕೃತಿ, ಕೃತಿಕಾರರನ್ನು ಕನ್ನಡಕ್ಕೆ ತಂದುಕೊಟ್ಟದ್ದು. ಮೈಸೂರು ವಿಶ್ವವಿದ್ಯಾಲಯದ ಪ್ರಸಾರ ಪುಸ್ತಕಮಾಲೆಗೆಂದು ಬರೆದ 'ತೆಲುಗು ಚಾಟುಪದ್ಯಗಳು', 'ಶ್ರೀನಾಥ' ಮತ್ತು 'ವೇಮನ' ಎಂಬ ಪುಸ್ತಕಗಳು ಗುಂಪಿಗೆ ಸೇರುತ್ತವೆ. 'ಪಂಪ–ನನ್ನಯ್ಯ–ಒಂದು ಸಮೀಕ್ಷೆ' ಎನ್ನುವುದು ಸುಮಾರು ಇನ್ನೂರು ಪುಟಗಳ ತೌಲನಿಕ ಸಮೀಕ್ಷೆ. ತೆಲುಗು ಮತ್ತು ಕನ್ನಡ ಕವಿಗಳಿಬ್ಬರಿಗೂ ಪೋಷಕನಾಗಿದ್ದ ಕೃಷ್ಣದೇವರಾಯನ ಕಾಲದ ಸಾಹಿತ್ಯದ ವಿವರವಾದ ಸಮೀಕ್ಷೆಯು, 'ಶ್ರೀ ಕೃಷ್ಣದೇವರಾಯನ ಕಾಲದ ಕರ್ನಾಟಕಾಂಧ್ರ ಸಾಹಿತ್ಯ ಸಮೀಕ್ಷೆ' ಎಂಬ ಪುಸ್ತಕದಲ್ಲಿದೆ. ಹಾಗೆಯೇ ಕೇಂದ್ರ ಸಾಹಿತ್ಯ ಅಕಾಡಮಿಗೆಂದು ವೇಮನನನ್ನು ಕುರಿತ ಜೀವನಚರಿತ್ರೆಯನ್ನು ಬರೆದುಕೊಟ್ಟಿದ್ದಾರೆ. ನೋರಿ ನರಸಿಂಹ ಶಾಸ್ತ್ರಿಗಳ

'ರುದ್ರಮದೇವಿ' ಎಂಬ ಐತಿಹಾಸಿಕ ಕಾದಂಬರಿಯನ್ನು ತೆಲುಗಿನಿಂದ ಮತ್ತು 'ಮಹರ್ಷಿ ದೇವೇಂದ್ರನಾಥ ಠಾಕೂರ್ ಎಂಬ ಜೀವನ ಚರಿತ್ರೆಯನ್ನು ಅನುವಾದಿಸಿದ್ದಾರೆ.

ಶ್ರೀ ಕೃಷ್ಣನ ಜೀವನ ಮತ್ತು ವ್ಯಕ್ತಿತ್ವಗಳು ವೆಂಕಟರಾಮಪ್ಪನವರಿಗೆ ಅಪಾರ ಆಕರ್ಷಣೆಯನ್ನು ಹೊಂದಿದ್ದವು. ಭಾಗವತದ ಹಲವು ಸ್ಕಂದಗಳನ್ನು ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ. 'ಶ್ರೀ ಕೃಷ್ಣಚರಿತ್ರೆ' ಮತ್ತು 'ಶ್ರೀ ಕೃಷ್ಣನ ಕಥೆ' ಎಂಬ ಎರಡು ಕೃತಿಗಳನ್ನು ರಚಿಸಿದ್ದಾರೆ. ಇದಲ್ಲದೆ ವಯಸ್ಕರ ಶಿಕ್ಷಣ ಸಮಿತಿಗೆಂದು ನಾನೂರು ಪುಟಗಳ 'ವಚನ ಭಾಗವತ'ವನ್ನು ಬರೆದುಕೊಟ್ಟಿದ್ದಾರೆ. ಇವೆಲ್ಲ ಅವರ ಕೃಷ್ಣಾಸಕ್ತಿಯ ಫಲತೆಗಳು.

ಪ್ರಾಚೀನ ಕನ್ನಡ ಸಾಹಿತ್ಯದ ಪರಿಚಯವನ್ನು ಮಾಡಿಕೊಡುವ ಹೊಣೆಯನ್ನು ನಿರ್ವಹಿಸಲು ಅವರು 'ಕನಕದಾಸರು', 'ಕವಿ ರಾಘವಾಂಕ' 'ದುರ್ಗಸಿಂಹ' ಮುಂತಾದ ಪುಸ್ತಕಗಳನ್ನು ರಚಿಸಿದರು. 'ಪಂಪಭಾರತ ದರ್ಶನ' ವನ್ನು ಬರೆದರು. 1939ರಷ್ಟು ಹಿಂದೆ ಬರೆದ 'ಕನ್ನಡ ಸಾಹಿತ್ಯ' ಎಂಬ ಕಿರುಪುಸ್ತಕ ಮತ್ತು ಅದರದೇ ವಿಸ್ತೃತ ಆವೃತ್ತಿಗಳು ವಿದ್ಯಾರ್ಥಿ ಸಮುದಾಯದಲ್ಲಿ ಜನಪ್ರಿಯವಾಗಿದ್ದವು. 'ಲೀಲಾವತಿ ಪ್ರಬಂಧಂ' ಮತ್ತು 'ನಯಸೇನ ವಿರಚಿತ ಧರ್ಮಾಮೃತಂ'ಗಳು ಗ್ರಂಥ ಸಂಪಾದನೆಯ ಕ್ಷೇತ್ರದಲ್ಲಿ ಅವರ ಸಾಧನೆಗಳು. 'ಇಂಗ್ಲೀಷ್ ನಾಟಕ ಕಥೆಗಳು' ಬೇರೊಂದು ಭಾಷೆಯ ಕೃತಿ ಪರಿಚಯದ ಪ್ರಯತ್ನ.

ವೆಂಕಟರಾಮಪ್ಪನವರಂಥ ಪ್ರಾಧ್ಯಾಪಕರ ಸಾಧನೆಯು ಅವರ ಬಿಡಿಕೃತಿಗಳ ಮೊತ್ತಕ್ಕಿಂತ ಹೆಚ್ಚಿನದು. ಅವರುಗಳ ವ್ಯಕ್ತಿತ್ವ ಹಾಗೂ ಅಧ್ಯಾಪನಗಳು ಬೀರಿದ ಪ್ರಭಾವವನ್ನು ಸಾಹಿತ್ಯ ವಿಮರ್ಶೆಯ ಮಾನದಂಡಗಳಿಂದ ಅಳೆಯಲು ಸಾಧ್ಯವಿಲ್ಲ. ಒಟ್ಟು ಸಾಹಿತ್ಯ ಸಂಸ್ಕೃತಿಯ ನಿರ್ಮಾಣದಲ್ಲಿ ಇವರು ಮಾಡಿದ ಕೆಲಸವು ಸದಾ ಗೌರವನೀಯವಾಗಿಯೇ ಉಳಿಯುತ್ತದೆ.

* * *

## ನವರತ್ನರಾಮ್ (1933–1991)

ಕನ್ನಡ ಸಾಹಿತ್ಯ ಮತ್ತು ರಂಗಭೂಮಿಗಳೆರಡರಲ್ಲೂ, ತಜ್ಞರ ಮನ್ನಣೆಯನ್ನು ವಿಶೇಷವಾಗಿ ಪಡೆಯದ, ಆದರೆ ಜನಪ್ರಿಯವಾದ ರಚನೆಗಳ ಧಾರೆಯೊಂದು ಸದಾ ಅಸ್ತಿತ್ವದಲ್ಲಿದೆ. ಒಟ್ಟು ಸಮುದಾಯದ ಸಾಂಸ್ಕೃತಿಕ ಆಸಕ್ತಿಗಳನ್ನು ಜೀವಂತವಾಗಿಡುವುದರಲ್ಲಿ ಅಥವಾ ಮನರಂಜನೆಯ ಅಗತ್ಯವನ್ನು ಪೂರೈಸುವುದರಲ್ಲಿ ಈ ಧಾರೆಯು ತನ್ನದೇ ಆದ ಸೀಮಿತವಾದ ಪಾತ್ರವನ್ನು ವಹಿಸುತ್ತದೆ. ಇದು ಕಳೆದ ದಶಕದಲ್ಲಿ ಪ್ರಬಲವಾದ ವಾಣಿಜ್ಯ ಸಂಸ್ಕೃತಿಯ ಹಿಡಿತದಲ್ಲಿ ಸಿಕ್ಕಿಕೊಂಡಿದೆ.

ಆದರೆ ನವರತ್ನರಾಮ್‌ರಂತಹ ನಾಟಕಕಾರರು, ರಂಗಕಲಾವಿದರು ಸಕ್ರಿಯರಾಗಿದ್ದ ಅರವತ್ತು ಎಪ್ಪತ್ತರ ದಶಕಗಳಲ್ಲಿ ಅದು ನಿಜವಾಗಿಯೂ ಕಲಾವಿಲಾಸೀ ಚಟುವಟಿಕೆಯಾಗಿತ್ತು. ಆದ್ದರಿಂದಲೇ ಅವರ ಬರವಣಿಗೆಯಲ್ಲಿ ಸರಳವಾದರೂ ಸಟೆಯಿಲ್ಲದ ಆದರ್ಶವಾದವನ್ನು ಗುರುತಿಸಬಹುದು. ಒಂದು ಮಟ್ಟದ ನೈತಿಕನೆಲೆಯ ಸಾಮಾಜಿಕ ಕಳಕಳಿಯನ್ನು ಕಾಣಬಹುದು.

1933ರಲ್ಲಿ ಜನಿಸಿದ ನವರತ್ನರಾಮ ಅವರ ಒಟ್ಟು ಸಾಧನೆಯನ್ನು ಲೇಖಕ, ರಂಗಕರ್ಮಿ, ಚಲನಚಿತ್ರ ಸಂಭಾಷಣಕಾರ ಮತ್ತು ಪತ್ರಿಕೋದ್ಯಮಿ ಎಂಬ ನಾಲ್ಕು ನೆಲೆಗಳಲ್ಲಿ ಗುರುತಿಸಬಹುದು. ಈ ಎಲ್ಲ ಚಟುವಟಿಕೆಗಳ ಹಿಂದೆ ಕೆಲಸಮಾಡಿರುವುದು ಸಾಹಿತ್ಯಕವಾದ ಸಂವೇದನೆಯೇ. ಆದರೆ ಅದು ಕನ್ನಡ ಸಾಹಿತ್ಯದ ಪ್ರಮುಖ ಆಗು–ಹೋಗುಗಳ ಜೊತೆಗೆ ನಿಕಟವಾದ ಸಂಪರ್ಕವನ್ನು ಹೊಂದಿದ್ದ, ಆದರಿಂದ ಪಾಠ ಕಲಿತ ಸಂವೇದನೆಯಲ್ಲ.

ಅವರ ಬಹುಪಾಲು ನಾಟಕಗಳು ತಮ್ಮ ಕಾಲದ ಬೆಂಗಳೂರಿನ ರಂಗಭೂಮಿಯ ತುರ್ತುಗಳಿಂದ ಮೂಡಿಬಂದವು. 'ಚಿತ್ರಕಲಾವಿದರು' ಮುಂತಾದ ಅಂದಿನ ರಂಗತಂಡಗಳಿಗಾಗಿ ಅವರು ಸುಮಾರು ಐವತ್ತು ನಾಟಕಗಳನ್ನು ಬರೆದರು. ಹಲವಾರು ರಂಗಕರ್ಮಿಗಳ ಸಹಯೋಗದಲ್ಲಿ ಅವು ಪ್ರದರ್ಶಿತವಾದವು. ಅವುಗಳಲ್ಲಿ ಕೆಲವು ಬಾನುಲಿ ನಾಟಕಗಳು. ಕೈಲಾಸಂ ಮತ್ತು ಶ್ರೀರಂಗರ ಉಚ್ಛ್ರಾಯದ ನಂತರದ ದಿನಗಳಲ್ಲಿ, ಪ್ರಹಸನ ಹಾಗೂ ನಗೆನಾಟಕಗಳಿಗಿಂತ ಭಿನ್ನವಾದ ನಾಟಕಗಳನ್ನು ಬರೆದವರಲ್ಲಿ ನವರತ್ನರಾಮ್ ಅವರೂ ಒಬ್ಬರು. ಅವರ 'ಅಕ್ಕ–ಪಕ್ಕ', 'ಕನಸು–ನನಸು', 'ಕೆಂಬೂತ', 'ಆತ್ಮ ಯಾವ ಕುಲ, ಜೀವ ಯಾವ ಕುಲ' ಮುಂತಾದ ನಾಟಕಗಳು ಭಾವುಕತೆ ಮತ್ತು ತೆಳು ಭಾವನಾತ್ಮಕತೆಗಳ ಮಿಶ್ರಣದಿಂದ, ಒಂದು ವರ್ಗದ ಕಲಾವಿದರು ಮತ್ತು ಪ್ರೇಕ್ಷಕರ ಮೆಚ್ಚಿಗೆಯನ್ನು ಸಂಪಾದಿಸಿಕೊಂಡವು. ನವ್ಯನಾಟಕ, ಅಸಂಗತನಾಟಕ ಹಾಗೂ ಅನ್ಯಭಾರತೀಯ ಭಾಷೆಗಳಿಂದ ಅನುವಾದಿತವಾದ ನಾಟಕಗಳ ಆಗಮನದೊಂದಿಗೆ ಇಂಥ ಕೃತಿಗಳು ಹಿನ್ನೆಲೆಗೆ ಸರಿದವು.

ನವರತ್ನರಾಮ್ ಅವರು ಬರೆದ ಅನೇಕ ಕಾದಂಬರಿಗಳು ಈ ಪ್ರಮಾಣದ ಗಮನವನ್ನೂ ಸೆಳೆಯಲಿಲ್ಲ. 'ಹಾಲಾಹಲ' ಮುಂತಾದ ಕೃತಿಗಳು ಅವಕ್ಕೆ ಸಮಕಾಲಿಕವಾಗಿ ರಚಿತವಾಗುತ್ತಿದ್ದ ಜನಪ್ರಿಯ ಕಾದಂಬರಿಗಳ ಮಹಾಪೂರದಲ್ಲಿ ಸೇರಿಹೋದವು.

ಅವರ ನಿಜವಾದ ಸಾಹಿತ್ಯಕ ಸಾಧ್ಯತೆಗಳ ಪರಿಚಯವಾಗುವುದು, 'ಪ್ಯಾರಿಸಿನಿಂದ ಪ್ರೇಯಸಿಗೆ' ಎಂಬ ಪತ್ರ ಸಂಕಲನದಲ್ಲಿ. ತಾರುಣ್ಯಕ್ಕೆ ಸಹಜವಾದ ಉಲ್ಲಾಸ, ಉದ್ವೇಗಗಳೊಂದಿಗೆ, ಅನ್ಯ ಸಂಸ್ಕೃತಿಯೊಂದಕ್ಕೆ ತೆರೆದುಕೊಳ್ಳುತ್ತಿರುವ ಕ್ಷಣಗಳ ರೋಮಾಂಚನವನ್ನು ಈ ಕೃತಿಯು ಆಕರ್ಷಕವಾಗಿ ದಾಖಲು ಮಾಡುತ್ತದೆ.

ಸುಮಾರು ಇಪ್ಪತ್ತೈದು ಕನ್ನಡ ಚಲನಚಿತ್ರಗಳಿಗೆ ಚಿತ್ರಕಥೆ ಅಥವಾ ಸಂಭಾಷಣೆಯನ್ನು ಬರೆಯುವ ಕೆಲಸದಲ್ಲಿ ಕೂಡ ನವರತ್ನರಾಮ್ ಅವರು ತಮ್ಮನ್ನು ತಾವು ತೊಡಗಿಸಿಕೊಂಡರು. ಅವುಗಳಲ್ಲಿ 'ಗೆಜ್ಜೆಪೂಜೆ' ಮತ್ತು 'ಉಪಾಸನೆ' ಚಿತ್ರಗಳಿಗೆ ಬರೆದ ಸಂಭಾಷಣೆಗಳು ಜನಪ್ರಿಯತೆಯೊಂದಿಗೆ ರಾಜ್ಯಪ್ರಶಸ್ತಿಯನ್ನು ಕೂಡ ಪಡೆದುಕೊಂಡವು.

'ಸುಧಾ' ವಾರ ಪತ್ರಿಕೆಯ 'ನೀವು ಕೇಳಿದಿರಿ' ಎಂಬ ಅಂಕಣದಲ್ಲಿ ಓದುಗರ ಪ್ರಶ್ನೆಗಳಿಗೆ 'ಚಿತ್ತಾ' ಎಂಬ ಹೆಸರಿನಲ್ಲಿ ಉತ್ತರಗಳನ್ನು ನೀಡುತ್ತಿದ್ದವರು ನವರತ್ನರಾಮ್ ಅವರೇ. ಆ ಉತ್ತರಗಳು ಹಾಸ್ಯ, ವಿಡಂಬನೆ, ಪಕ್ವತೆ ಮತ್ತು ವಿವೇಕಗಳಿಂದ ಕೂಡಿರುತ್ತಿದ್ದವು.

ಗಂಭೀರವಾದ ಸಾಹಿತ್ಯದಲ್ಲಿ ತೊಡಗಿಸಿಕೊಳ್ಳಲಾರದ, ಮಧ್ಯಮವರ್ಗದ ನಾಗರಿಕ ಸಮುದಾಯದ ನಾಡಿಮಿಡಿತವನ್ನು ಗುರುತಿಸಿ, ಅವರ ಅಗತ್ಯಗಳನ್ನು ಪೂರೈಸುವುದರಲ್ಲಿ ಶ್ರೀ ನವರತ್ನರಾಮ್ ಅವರಂಥ ಲೇಖಕರ ಪಾತ್ರವು ಮುಖ್ಯವಾದುದು.

* * *

# ಚಿತ್ರಕಲೆ

ಅ.ಲ. ನರಸಿಂಹನ್

ಕಲಾವಿದನಿಗೆ 1991ನೇ ಇಸವಿ ಸಮ್ಮಿಶ್ರ ಅನುಭವನ್ನು ನೀಡುವಂತಿತ್ತು. ಹಿಂದಿನ ಲಲಿತಕಲಾ ಅಕಾಡೆಮಿ ಜುಲೈ 1990ರಲ್ಲಿ ಮುಕ್ತಾಯಗೊಂಡ ನಂತರ 30ನೇ ಅಕ್ಟೋಬರ್ 1991ರ ವರೆವಿಗೂ ಅಕಾಡೆಮಿಗಳ ರಚನೆ ಆಗಲಿಲ್ಲ. ಆಗಲೂ ಅಧ್ಯಕ್ಷರ ನೇಮಕವಷ್ಟೇ ಆಯಿತಾದರೂ ಸದಸ್ಯರ ನೇಮಕ ಆಗಿದ್ದು 1992ರ ಮಾರ್ಚಿಯಲ್ಲಿ. 1991ರ ವರ್ಷಾರಂಭದ ಮೊದಲ ದಿನವೇ ಕಲಾವಿದ ಕುಕ್ಕೆಯವರು ತೀರಿಕೊಂಡರೆ ಮೂರು ದಿನಗಳ ನಂತರದಲ್ಲೇ ಕಲಾವಿದರಾದ ಹನುಮಯ್ಯನವರು ನಿಧನಹೊಂದಿದ್ದು ಆಘಾತಕರವಾಗಿತ್ತು. ಈ ವರ್ಷಾವಧಿಯಲ್ಲೇ ಎರಡು ಖಾಸಗಿ ಪ್ರದರ್ಶನಾಲಯಗಳು ಬೆಂಗಳೂರಿನಲ್ಲಿ ತೆರೆಯಿತಲ್ಲದೆ ಇವೂ ಸೇರಿದಂತೆ ಉಳಿದೆಲ್ಲ ಗ್ಯಾಲರಿಗಳಲ್ಲೂ ವರ್ಷವಿಡೀ ಚಿತ್ರಕಲಾ ಪ್ರದರ್ಶನಗಳು ನಿರಂತರವಾಗಿಯೇ ನಡೆದವು. ರಾಜ್ಯದ ಪ್ರಮುಖ ಕ್ರಿಯಾಶೀಲ ಕಲಾವಿದರುಗಳಲ್ಲಿ ಮುಖ್ಯರಾದ ಎಸ್.ಜಿ. ವಾಸುದೇವ್, ಜೆ.ಎಸ್. ಶೆಟ್ಟಿ, ಯೂಸುಫ್ ಅರಕ್ಕಲ್, ಬಾಲನ್ ನಂಬಿಯಾರ್ ಮುಂತಾದವರು ಬೆಂಗಳೂರಿನಲ್ಲಿ ಏಕವ್ಯಕ್ತಿ ಪ್ರದರ್ಶನಗಳನ್ನು ನೀಡಿದರು. ಅಧಿಕ ಸಂಖ್ಯೆಯಲ್ಲಿ ಹೊರಗಿನ ಕಲಾವಿದರು ಬೆಂಗಳೂರಿನಲ್ಲಿ ಈ ವರ್ಷಾವಧಿಯಲ್ಲಿ ಪ್ರದರ್ಶನ ಏರ್ಪಡಿಸಿದ್ದು ಹೊಸ ಬೆಳವಣಿಗೆ. ರಾಷ್ಟ್ರದ ಪ್ರತಿಷ್ಠಿತ ಏಳನೆಯ ತ್ರಿನಾಲೆ ದೆಹಲಿಯಲ್ಲಿ ನಡೆದು ರಾಜ್ಯದ ಮೂವರು ಪಾಲುಗೊಂಡಿದ್ದರು. ಚಿತ್ರಕಲೆಯನ್ನು ಕುರಿತ 4 ಪುಸ್ತಕಗಳು ಪ್ರಕಟವಾದವು. ಹೆಸರಾಂತ ಕಲಾವಿದ ಹುಸೇನ್ ಬೆಂಗಳೂರಿನಲ್ಲಿ ಮನೆ ಹಾಗೂ ಪ್ರದರ್ಶನಾಂಗಣ ಒಂದನ್ನು ಕಟ್ಟಿದರು. ಆದರೆ ಕಲಾಮೇಳದಂತಹ ಯಾವುದೇ ಸಂಘಟನೆ ರಾಜ್ಯದಲ್ಲಿ ನಡೆಯಲಿಲ್ಲ. ಪ್ರೌಢಶಾಲೆಗಳ ಉಪಾಧ್ಯಾಯರುಗಳು ಒಂದು ಸಮ್ಮೇಳನವನ್ನು ಬೆಂಗಳೂರಿನಲ್ಲಿ ನಡೆಸಿದರು.

**ಜನವರಿ :**

13–1–91ರಂದು ರಾಜಾಜಿನಗರದ ರಾಮಮಂದಿರದ ಬಳಿ ಬಯಲಲ್ಲಿ "ಏಕತೆಗಾಗಿ ನಾವು ನೀವು" ಎಂಬ ಸಂಘ ನೂರಾರು ಸಾಹಿತಿಗಳು ಹಾಗೂ ಕಲಾವಿದರುಗಳನ್ನು ಒಂದೆಡೆ ಸೇರಿಸಿ ಮತೀಯ ಸಾಮರಸ್ಯದ ಸಂದೇಶಕ್ಕೆ ಕರೆ

ನೀಡಿದ್ದು ರಾಜ್ಯದ ಎಲ್ಲೆಡೆಯಿಂದ ಅನೇಕ ಹಿರಿಯ ಕಿರಿಯ ಕಲಾವಿದರು ಪಾಲುಗೊಂಡಿದ್ದರಲ್ಲದೆ ಸುಮಾರು 200 ಅಡಿ ಉದ್ದದ ಕ್ಯಾನ್‌ವಾಸ್ ಮೇಲೆ ಎಲ್ಲ ಕಲಾವಿದರೂ ಒಟ್ಟಾಗಿ ಒಂದೇ ವಸ್ತುವನ್ನು ಹಲವಾರು ತಂತ್ರ, ಮಾಧ್ಯಮಗಳಲ್ಲಿ ಚಿತ್ರಿಸಿದರು. ಭಾವನಾತ್ಮಕವಾಗಿ ಇದೊಂದು ಮಹತ್ವದ ಪ್ರಯತ್ನ. ಕೇಂದ್ರ ಲಲಿತಕಲಾ ಅಕಾಡೆಮಿ ಜನವರಿ 5 ರಿಂದ 14ರ ವರೆಗೆ ಚಿತ್ರಕಲಾ ಪರಿಷತ್ತಿನಲ್ಲಿ ಸ್ವಾತಂತ್ರ್ಯೋತ್ತರ ಭಾರತೀಯ ಕಲಾವಿದರ 49 ಕೃತಿಗಳು (ನಾಲ್ಕು ಶಿಲ್ಪ ಸೇರಿದಂತೆ) ಪ್ರದರ್ಶಿಸಿದ್ದು ಕಲೆಯ ಒಂದು ಹಂತದ ಮನೋಭಾವವನ್ನು ಕಾಣಬಹುದಾಗಿತ್ತಾದರೂ ಕರ್ನಾಟಕದ ಯಾವ ಕೃತಿಯೂ ಇರದೇ ಹೋಗಿದ್ದು ಆಶ್ಚರ್ಯಕರವಾಗಿತ್ತು.

ಐರೋಪ್ಯ ಕಲಾವಿದರಾದ ರಾಯ್ ಕೀಗನ್ ಮತ್ತು ರಾಬರ್ಟ್ ಗೀಸಿಂಕ್ ಅವರುಗಳು ರಚಿಸಿದ ಹಂಪಿಯ ಭೂದೃಶ್ಯ ಹಾಗೂ ಲಂಬಾಣಿಗಳ ಚಿತ್ರ ಪ್ರದರ್ಶನವನ್ನು ಚಿತ್ರಕಲಾಪರಿಷತ್ತಿನಲ್ಲಿ ಅಂತರರಾಷ್ಟ್ರೀಯ ಸಂಗೀತ ಮತ್ತು ಕಲಾ ಸೊಸೈಟಿಯುವರು ತಿಂಗಳ ಕೊನೆಯ ವಾರದಲ್ಲಿ ಏರ್ಪಡಿಸಿದ್ದು ವಿಮರ್ಶಕರಿಂದ ಅಕೆಡೆಮಿಕ್ ಶೈಲಿಯಲ್ಲಿ ಇವು ಇದ್ದುವೆಂದು ಕರೆಸಿಕೊಂಡಿತು. ಯುವ ಛಾಯಾಚಿತ್ರ ಸೊಸೈಟಿಯುವರು ಹೆಸರಾಂತ ಛಾಯಾಚಿತ್ರ ಗ್ರಾಹಕ ಟಿ.ಎಸ್.ಎ.ಪೆರುಮಾಳ್‌ರು ತೆಗೆದ ಚಿತ್ರಗಳೊಂದಿಗೆ ಸ್ಪರ್ಧೆಗೆ ಬಂದಿದ್ದ ಹಲವಾರು ಛಾಯಾಚಿತ್ರಗಳ ಪ್ರದರ್ಶನವನ್ನು ಜನವರಿ ಮೂರನೇ ವಾರದಲ್ಲಿ ಯವನಿಕಾದಲ್ಲಿ ಪ್ರದರ್ಶಿಸಿದ್ದಲ್ಲದೆ: ಬಸವ ಭವನದಲ್ಲಿ ರಾಷ್ಟ್ರದ ನಾನಾ ಭಾಗಗಳಿಂದ ಬಂದಿದ್ದ ಕರಕುಶಲ ವಸ್ತುಗಳ ಪ್ರದರ್ಶನ ಜನವರಿ 26ರ ವರೆಗೆ ನಡೆಯಿತು.

ಬೆಂಗಳೂರಿನಿಂದ ಹೊರಗೆ ಧಾರವಾಡದಲ್ಲಿ ಕಲಾಶಾಲೆಯ ಹಿರಿಯ ಕಲಾವಿದ ಡಿ.ವಿ. ಹಾಲಭಾವಿ ಅವರ 84ನೇ ಜನ್ಮದಿನದ ಅಂಗವಾಗಿ ಹುಬ್ಬಳ್ಳಿ–ಧಾರವಾಡ ಮಹಾನಗರಗಳ ಚಿತ್ರಕಲಾ ಶಾಲೆಗಳ ವಿದ್ಯಾರ್ಥಿಗಳಿಗಾಗಿ ಕಲಾಸ್ಪರ್ಧೆಯೊಂದು ಏರ್ಪಡಿಸಿದ್ದು ಎಂಬತ್ತು ವಿದ್ಯಾರ್ಥಿಗಳು ರಚಿಸಿದ ಸಮಕಾಲೀನ ಸಮಸ್ಯೆ ಕುರಿತಾದ, ಈ ಚಿತ್ರಗಳು ನಂತರ ಪ್ರದರ್ಶನಗೊಂಡವು. ದಕ್ಷಿಣ ಕನ್ನಡ ಜಿಲ್ಲೆಯ ಕಲಾವಿದರುಗಳಾದ ಮೋಹನ ಸೋನ, ಸುರೇಶ್ ಶೆಟ್ಟಿಗಾರ್, ಗೋಪಡ್ಕರ್, ಎಂ.ಜಿ. ಕಜೆ. ಮತ್ತು ನಳಿನಿಕಜೆ ಅವರು ಸೇರಿ 'ನಿರತ ನಿರಂತ' ಎಂಬ ಹೆಸರಿನಲ್ಲಿ ಸಾಕ್ಷರತಾ ಆಂದೋಲನವನ್ನು ಬಿಂಬಿಸುವ ಹಲವಾರು ಕೃತಿಗಳನ್ನು ರಚಿಸಿ ಇಡೀ ಜಿಲ್ಲೆಯಲ್ಲಿ ಪ್ರದರ್ಶಿಸುವ ಮಹತ್ ಕಾರ್ಯಕ್ರಮವೊಂದನ್ನು ಜನವರಿ ಒಂದರಂದು ಆರಂಭಿಸಿದರು. ಉತ್ತರ ಕನ್ನಡ ಜಿಲ್ಲೆಯ ಶಿರಸಿಯಲ್ಲಿ ಬ್ಯಾಂಕ್ ಉದ್ಯೋಗಿ ಸದಾನಂದ ತಲ್ಲೂರು ಅವರು ರಚಿಸಿದ ಭಾರತದ ಪ್ರಮುಖ ಪ್ರೇಕ್ಷಣೀಯ ಸ್ಥಳಗಳ ವರ್ಣ ಪಾರದರ್ಶಿಕೆಗಳ ಪ್ರದರ್ಶನ ನಡೆಯಿತು.

## ಫೆಬ್ರವರಿ :

ಫೆಬ್ರವರಿಯಲ್ಲಿ ಕೇಂದ್ರದ ಸಾಂಸ್ಕೃತಿಕ ಸಚಿವಾಲಯ ಹಾಗೂ ರಾಜ್ಯ ಪುರಾತತ್ವ ಇಲಾಖೆಗಳು ಆಶ್ರಯದಲ್ಲಿ ಸ್ವೀಡನ್ ದೇಶದ ದೈನಂದಿನ ಬಳಕೆಯ ಉಪಕರಣಗಳ ಪ್ರದರ್ಶನವಾಗಿದ್ದು ಉಪಯೋಗಿ ವಸ್ತುಗಳು ಕಲಾತ್ಮಕವಾಗಿಯೂ ಹೇಗೆ ಇರಬಲ್ಲವೆಂಬುದಕ್ಕೆ ಉತ್ತಮ ಉದಾಹರಣೆಯಾಗಿತ್ತು. ತಿಂಗಳ ಆರಂಭದಲ್ಲಿ 'ವೆಲ್‌ಕಮ್‌ಗ್ರೂಪ್' ಅವರು ಮಂಗಳೂರಿನಲ್ಲಿ ದಕ್ಷಿಣ ಭಾರತದ ಕಲಾವಿದರ ಶಿಬಿರವೊಂದನ್ನು ಏರ್ಪಡಿಸಿದ್ದರು. ಎ. ಎಸ್. ಜಿ. ವಾಸುದೇವ್, ರೆಡ್ಡಪ್ಪನಾಯ್ಡು, ಮುರಳೀಧರನ್, ಬಿ.ವಿ. ಸುರೇಶ್, ನಟರಾಜ ಶರ್ಮ ಮುಂತಾದ ಹತ್ತು ಮಂದಿ ಕಲಾವಿದರು ಶಿಬಿರದಲ್ಲಿ ಭಾಗವಹಿಸಿದ್ದು ನಂತರ ಇವರುಗಳು ರಚಿಸಿದ ಕೃತಿಗಳನ್ನು ಬೆಂಗಳೂರಿನ ವಿಂಡ್ಸರ್ ಮ್ಯಾನರ್‌ನಲ್ಲಿ ಪ್ರದರ್ಶಿಸಲಾಯಿತು. ಬ್ರಿಟಿಷ್ ಕೌನ್ಸಿಲ್‌ನ ಲಲಿತಕಲೆಗಳ ಸಲಹಾ ಸಮಿತಿಯ ಲೇಡಿ ಮರಿನಾ ವಾಯ್ಸಿ ಅವರು ಫೆಬ್ರವರಿ 21ರಂದು ಚಿತ್ರಕಲಾ ಪರಿಷತ್ತಿನಲ್ಲಿ ಬ್ರಿಟಿಷ್ ಸಮಕಾಲಿನ ಕಲೆಯನ್ನು ಕುರಿತು ಉಪನ್ಯಾಸ ನೀಡಿದರು. ಪ್ರತಿಷ್ಠಿತ ಏಳನೆಯ ತ್ರಿನಾಲೆ (ಮೂರು ವರ್ಷಗಳಿಗೆ ಒಮ್ಮೆ ದೆಹಲಿಯಲ್ಲಿ ನಡೆಯುವ ಅಂತರ ರಾಷ್ಟ್ರೀಯ ಕಲಾ ಪ್ರದರ್ಶನ) ಫೆಬ್ರವರಿ 12 ರಿಂದ ದೆಹಲಿಯಲ್ಲಿ ನಡೆದಿದ್ದು ಕರ್ನಾಟಕದಿಂದ ಜೆ.ಎಸ್. ಖಂಡೇರಾವ್, ಜಿ.ಎಸ್. ಶಣೈ ಮತ್ತು ಅಜಿತ್ ದುಬೆ ಅವರುಗಳ ಕಲಾ ಕೃತಿಗಳು ಪ್ರದರ್ಶನಕ್ಕೆ ಆಹ್ವಾನಿತವಾಗಿದ್ದವು. ಬೆಂಗಳೂರಿನ ಅಲೆಯಾನ್ಸ್ ಫ್ರಾಂಕೆಯಲ್ಲಿ ಫ್ರೆಂಚ್ ಕಲಾವಿದ ಪುಆರ್ಡ್ ಅವರ ಮಾರ್ಗದರ್ಶನದಲ್ಲಿ ಹಳೆಯ ಎಗ್ ಟೆಂಪರ್ ಮಾಧ್ಯಮದ ತಂತ್ರಗಳನ್ನು (ಮೊಟ್ಟೆಯ ಲೋಳೆಯೊಂದಿಗೆ ಜಲವರ್ಣದಲ್ಲಿ ಕೃತಿ ರಚಿಸುವ ಪದ್ಧತಿ) ಕಲಿಸುವ ಕಾರ್ಯಾಗಾರವೊಂದು ಫೆಬ್ರವರಿ ತಿಂಗಳಿನಲ್ಲಿ ನಡೆಯಿತು.

ದಕ್ಷಿಣ ಭಾರತದ UNICEF ಘಟಕದವರು ಮಕ್ಕಳ ಚಿತ್ರಕಲಾಸ್ಪರ್ಧೆಯನ್ನು ಏರ್ಪಡಿಸಿ ಆಯ್ದ ಕೆಲವು ಕೃತಿಗಳನ್ನು ಹರಾಜು ಮೂಲಕ ವಿತರಿಸಿದಾಗ ಒಂದು ಕೃತಿ 21,000 ರೂ. ಗಳಿಗೆ ಹರಾಜಾಯಿತು. ಫೆಬ್ರವರಿ 27 ರಂದು ನಡೆದ (ಬೆಂಗಳೂರಿನಲ್ಲಿ) ಈ ಕಾರ್ಯಕ್ರಮದಲ್ಲಿ ಅಂಗವಿಕಲ ಬಾಲಕ ಮಂಜುನಾಥನಿಗೆ 2,000 ರೂ. ಗಳ ಪ್ರಥಮ ಬಹುಮಾನ ಸಂದಿತು. ಘಟಕದವರು ಈ ಕಾರ್ಯಕ್ರಮದಿಂದ ಸುಮಾರು ಎರಡು ಲಕ್ಷ ರೂ. ಗಳನ್ನು ಸಂಗ್ರಹಿಸಿದ್ದು ಅದನ್ನು ಮಕ್ಕಳ ಕಲ್ಯಾಣಕ್ಕಾಗಿ ಬಳಸುವುದಾಗಿ ತಿಳಿಸಿದರು.

## ಮಾರ್ಚಿ :

1ನೇ ಮಾರ್ಚಿಯಿಂದ ಒಂದು ವಾರಗಳ ಕಾಲ ಕೆನ್ ಕಲಾಶಾಲೆಯ ಉಪನ್ಯಾಸಕ ವೆಂಕಟಪತಿ ನಾಯ್ಕು ಅವರ ರೇಖಾಚಿತ್ರಗಳ ಪ್ರದರ್ಶನವಿದ್ದು

ಆರಂಭದ ದಿನದಂದು ಗಣ್ಯ ವಿಮರ್ಶಕರಿಂದ ಸ್ಥಳದಲ್ಲೇ ಕೃತಿಗಳನ್ನು ವಿಮರ್ಶಿಸುವ ಅಪರೂಪದ ಕಾರ್ಯಕ್ರಮವೊಂದು ನಡೆಯಿತು. ಮಾರ್ಚ್ 15 ರಿಂದ ಕ್ರಿಮ್‌ಸನ್ ಪ್ರದರ್ಶನಾಲಯದಲ್ಲಿ ಯು. ಭಾಸ್ಕರರಾವ್ ಅವರ ಚಿತ್ರಗಳ ಪ್ರದರ್ಶನವಿದ್ದು ತಂತ್ರ, ಶೈಲಿ, ಬಣ್ಣಗಾರಿಕೆಗಳಿಂದ ಮೆಚ್ಚುಗೆಗೆ ಪಾತ್ರವಾದವು. ಈ ತಿಂಗಳಿನಲ್ಲಿ ಚಿತ್ರಕಲಾ ಪರಿಷತ್ತಿನಲ್ಲಿ ಎರಡು ಉತ್ತಮ ಪ್ರದರ್ಶನಗಳ ಕಾರ್ಯಕ್ರಮವಿದ್ದು ಒಂದನ್ನು ಪರಿಷತ್ತು ಮದರಾಸಿನಲ್ಲಿರುವ ವಿಭಾಗೀಯ ಲಲಿತ ಕಲಾ ಅಕಾಡೆಮಿಯ ಸಹಯೋಗದೊಂದಿಗೆ ಏರ್ಪಡಿಸಿದ್ದು ದಕ್ಷಿಣ ಭಾರತದ ಕಲಾವಿದರ ಸುಮಾರು 102 ಕೃತಿಗಳನ್ನು ಪ್ರದರ್ಶಿಸಿದ್ದರೆ ಇನ್ನೊಂದು ಚಿತ್ರಕಲಾ ಪರಷತ್ತಿನದೇ ಆದ 13ನೆಯ ಅಖಿಲ ಭಾರತ ಕಲಾ ಪ್ರದರ್ಶನವಾಗಿದ್ದು 188 ಕೃತಿಗಳು ಪ್ರದರ್ಶನಗೊಂಡಿದ್ದವು. ಇವೆರಡೂ ಸಮಕಾಲೀನ ಕಲಾಪ್ರವಾಹದ ದಿಕ್ಕನ್ನು ಅರಿಯಲು ಸಹಾಯಕವಾಗುವಂತಿದ್ದವು. ರಾಷ್ಟ್ರೀಯ ಕೈಮಗ್ಗದ ಅಭಿವೃದ್ಧಿ ನಿಗಮದವರು ವೆಂಕಟಪ್ಪ ಚಿತ್ರಶಾಲೆಯಲ್ಲಿ ಮಾರ್ಚ್ 16 ರಿಂದ "ಕೈಮಗ್ಗದ ಬಟ್ಟೆಯ ಮೇಲೆ ಪಶು ಪಕ್ಷಿಗಳ ವಿನ್ಯಾಸ" ಎಂಬ ಶೀರ್ಷಿಕೆಯಲ್ಲಿ ಪ್ರದರ್ಶನವೊಂದನ್ನು ಏರ್ಪಡಿಸಿದ್ದರು.

ಗಣರಾಜ್ಯೋತ್ಸವದ ಅಂಗವಾಗಿ ಧಾರವಾಡದ ಸರ್ಕಾರಿ ಚಿತ್ರಕಲಾಶಾಲೆಯಲ್ಲಿ ರವೀಂದ್ರ ನಾಯಿಕ, ಎನ್.ಎಂ. ಗುಡಗುಡಿ, ಚಂದ್ರಕಾಂತ ವಿ. ಭಟ್ಟರವರುಗಳ ಪ್ರದರ್ಶನವಿದ್ದು ರಾಜಧಾನಿಯಿಂದ ಹೊರಗೆ ಪ್ರಮುಖ ನಗರದಲ್ಲಿ ಸಮಕಾಲೀನ ಕಲೆಯ ಸ್ಪಂದನ ತಿಳಿದು ಬರುವಂತಿತ್ತು.

## ಏಪ್ರಿಲ್ :

ಏಪ್ರಿಲ್ 6 ರಿಂದ 16ರವರೆಗೆ ಚಿತ್ರಕಲಾ ಪರಿಷತ್ತಿನಲ್ಲಿ ಬ್ರಿಟಿಷ್ ಕೌನ್ಸಿಲ್ ಸಹಯೋಗದೊಂದಿಗೆ ಬ್ರಿಟನ್ನಿನ ಕಲಾವಿದೆ ಗಿಲಿಯಾನ್ ಏಯರೀಸ್ ಅವರ ಕಲಾ ಪ್ರದರ್ಶನವಿದ್ದು ನಗರದ ಕಲಾವಿದರು ಹಾಗೂ ವಿಮರ್ಶಕರನ್ನು ಬಹಳವಾಗಿ ಸೆಳೆದವು. ವಿಶಾಲ ಹರಹಿನಲ್ಲಿ ರಬಟೆಯಾಗಿ ಬಣ್ಣಗಳನ್ನು ಹಚ್ಚಿದಂತಿದ್ದ ಇವರ ಅಮೂರ್ತ ಕೃತಿಗಳು ಬೆರಗು ಹುಟ್ಟಿಸುವಂತಿದ್ದವು. ಈ ಕಲಾವಿದೆಗೆ 1991ನೇ ವರ್ಷದಲ್ಲಿ ಟ್ರಿನಾಲೆ ಪ್ರದರ್ಶನದಲ್ಲಿ ಬಹುಮಾನ ಬಂದಿತ್ತು. ಈ ತಿಂಗಳ ಇನ್ನೊಂದು ಪ್ರಮುಖ ವಿಷಯವೆಂದರೆ ಮದರಾಸಿನ ಸಾಕ್ಷಿ ಗ್ಯಾಲರಿಯವರು ಬೆಂಗಳೂರಿನಲ್ಲಿಯೂ ಅದೇ ಹೆಸರಿನಲ್ಲಿ ತಮ್ಮ ಒಂದು ಪ್ರದರ್ಶನಾಂಗಣವೊಂದನ್ನು ತೆರೆದಿದ್ದು. ಮೊದಲ ಪ್ರದರ್ಶನದಲ್ಲಿ ಎಸ್. ಜಿ. ವಾಸುದೇವ್ ಅವರ ಕೃತಿಯೂ ಸೇರಿದಂತೆ ಆದಿಮೂಲಂ, ಪಳನಿಯಪ್ಪ, ಡೊಗ್ಲಾಸ್ ಇತ್ಯಾದಿ ಎಂಟು ಕಲಾವಿದರ ಚಿತ್ರ ಹಾಗೂ ಶಿಲ್ಪಗಳ ಪ್ರದರ್ಶನವಿತ್ತು. ಅಲ್ಲಿಯೇ ಎರಡನೆಯ ಪ್ರದರ್ಶನ ಮುಂಬಯಿಯ ಪ್ರಭಾಕರ ಕೋಲ್ತೆ ಅವರು ಅಮೂರ್ತ ಕೃತಿಗಳದಾಗಿತ್ತು. ಸ್ವಿಡ್ಜರ್‌ಲ್ಯಾಂಡ್‌ನ ಕಲಾ ಕೌನ್ಸಿಲ್ ಅವರು ಕೇಂದ್ರ ಸಾಂಸ್ಕೃತಿಕ ಸಂಬಂಧ

ಸಂಸ್ಥೆ ಹಾಗೂ ರಾಜ್ಯ ಪುರಾತತ್ವ ಇಲಾಖೆಯವರು ಸಹಯೋಗದೊಂದಿಗೆ ಛಾಯಾಚಿತ್ರಗಳ ಪ್ರದರ್ಶನವನ್ನು 12ನೇ ಏಪ್ರಿಲ್ ನಿಂದ ವೆಂಕಟಪ್ಪ ಚಿತ್ರಶಾಲೆಯಲ್ಲಿ ಸಂಯೋಜಿಸಿದ್ದರು. ತಿಂಗಳ ಕೊನೆಯ ವಾರದಲ್ಲಿ ಪೂರ್ಣಿಮಾ ಲೋಕೇಶ್ ಅವರ ಚಿತ್ರಗಳು ಅಲೆಯನ್ಸ್ ಫ್ರಾಂಕೆಯಲ್ಲಿ ಪ್ರದರ್ಶನಗೊಂಡರೆ, ಆರ್.ಟಿ.ನಗರದ ಫೋಟೋಫೌಂಡೇಶನ್‌ರವರು ಪ್ರೇಮ್ ಮಾರ್ಟಿನ್ ಮತ್ತು ಆಶಾರಾಮ್ ಮೋಹನ್ ಅವರ ಕಲಾಕೃತಿಗಳ ಪ್ರದರ್ಶನ ನಡೆಸಿದರು. ಬೆಂಗಳೂರಿನ ನಿರ್ಮಲ್ ಆರ್ಟ್ ಗ್ಯಾಲರಿಯವರು ಮಕ್ಕಳಿಗಾಗಿ ವಿವಿಧ ಗ್ರಾಫಿಕ್ ಮಾಧ್ಯಮ ಕಲಿಸುವ ಕಾರ್ಯಾಗಾರವೊಂದನ್ನು ಏಪ್ರಿಲ್ ಅಂತ್ಯದಲ್ಲಿ ಹಮ್ಮಿಕೊಂಡಿದ್ದು ಅಲ್ಲಿ ರಚಿಸಿದ ಕಲಾಕೃತಿಗಳ ಪ್ರದರ್ಶನ ಮೇ 5 ರವರೆವಿಗೂ ಇತ್ತು. ಮಕ್ಕಳು ಮೊದಲ ಬಾರಿಗೆಂಬಂತೆ ರಚಿಸಿದ ಇಲ್ಲಿಯ ಹಲವಾರು ಕೃತಿಗಳಲ್ಲಿ ಸೃಜನಶೀಲತೆಯ ಅಂಶ ಕಾಣಬಹುದಿತ್ತು.

ಮೇ :

ಮೇ 9 ರಿಂದ 14ರವರೆಗೆ ಟಿ. ಜೆ. ಸುಜಾತ ಅವರ ಕೃತಿಗಳು ವೆಂಕಟಪ್ಪ ಚಿತ್ರಶಾಲೆಯಲ್ಲಿಯೂ, ಮೀರಾಕುಮಾರ್, ಚಿತ್ರ, ಎನ್ ಮತ್ತು ಕೆ.ಜಿ. ಲಿಂಗದೇವರು ಅವರುಗಳ ಸಮೂಹ ಪ್ರದರ್ಶನ ಮೇ 22 ರಿಂದ 28ರ ವರೆಗೆ ಚಿತ್ರಕಲಾ ಪರಿಷತ್ತಿನಲ್ಲಿಯೂ ನಡೆಯಿತು. ಸುಜಾತರವರು ಗುಲ್ಬರ್ಗಾದಿಂದ ಹಾಗೂ ಉಳಿದರು ಬೆಂಗಳೂರಿನ ಕಲಾಮಂದಿರದಿಂದ ಚಿತ್ರಕಲೆಯ ಪದವಿಯನ್ನು ಪಡೆದಿದ್ದು ಸಮಕಾಲೀನ ಕಲೆಗೆ ಸ್ಪಂದಿಸಿದ್ದನ್ನು ಕಾಣಬಹುದಿತ್ತು. ಯೂರೋಪಿನಲ್ಲಿ 2ನೇ ಮಹಾಯುದ್ಧದ ನಂತರ ಫ್ಯೂಚರಿಸ್ಟ್ ಪಂಥದವರಲ್ಲಿ (ಹಳೆಯದೆಲ್ಲ ನಿರ್ನಾಮಗೊಳಿಸಿ ಹೊಸದನ್ನು ಮೂಲದಿಂದ ಸೃಷ್ಟಿಸಬಯಸಿದ, ಸಂಪ್ರದಾಯ ಕಲೆ ತಿರಸ್ಕರಿಸಿದ ಒಂದು ಪಂಥ) ಒಬ್ಬರಾದ ದಾರ್‍ಲೋಕಾದ್ರ ರಚಿಸಿದ ರೇಖಾ ಚಿತ್ರಗಳ ಪ್ರದರ್ಶನ ವೆಂಕಟಪ್ಪ ಚಿತ್ರಶಾಲೆಯಲ್ಲಿ ನೆರವೇರಿದ್ದು ಆ ಪಂಥದ ಬಗ್ಗೆ ಹೆಚ್ಚಿನ ನಿರೀಕ್ಷೆ ಇದ್ದವರಿಗೆ ಸ್ವಲ್ಪ ಮಟ್ಟಿಗೆ ನಿರಾಶೆಗೊಳಿಸುವಂತಹ ಕೃತಿಗಳು ಬಂದಿದ್ದವು. ಮ್ಯಾಕ್ಸ್ ಮುಲ್ಲರ್ ಭವನದಲ್ಲಿ ಜರ್ಮನ್ ಛಾಯಾಚಿತ್ರಗಳ ಪ್ರದರ್ಶನ ಈ ತಿಂಗಳಲ್ಲಿ ನಡೆಯಿತು. ಶಿರಸಿಯ 'ಬಣ್ಣ ಬೆಳಕು' ಹವ್ಯಾಸಿ ತಂಡದವರು ವಿಜಯ ಜಿ. ಕುರ್ಡೇಕರ್ ಅವರ ಲೋಹದ ಹಾಳೆಯ ಉಬ್ಬಚ್ಚು, ತೈಲಚಿತ್ರ ಹಾಗೂ ಎಂಬ್ರಾಯಡರಿ ಕೃತಿಗಳ ಪ್ರದರ್ಶನ ನಡೆಸಿದರು. ತುಮಕೂರಿನಲ್ಲಿ ರವೀಂದ್ರ ಕಲಾ ನಿಕೇತನ ಮತ್ತು ಕನ್ನಡ ಸಂಸ್ಕೃತಿ ನಿರ್ದೇಶನಾಲಯದವರು ಹಲವಾರು ಇಲಾಖೆಯವರೊಂದಿಗೆ ಸೇರಿ ಮೂರು ದಿನಗಳ ಕಲಾ ಶಿಬಿರವನ್ನು ಮೇ 5 ರಿಂದ ಏರ್ಪಡಿಸಿದ್ದು ರಾಜ್ಯದ ವಿವಿಧ ಭಾಗಗಳಿಂದ 28 ಕಲಾವಿದರು ಭಾಗವಹಿಸಿದ್ದರು. ಉಪನ್ಯಾಸಗಳು, ವರ್ಣಪಾರದರ್ಶಿಕೆಗಳ ಪ್ರದರ್ಶನ ಇತ್ಯಾದಿಗಳು ಇದ್ದವು.

ಜೂನ್ :

ಜೂನ್ ತಿಂಗಳ ಒಂದರಿಂದ ಐದವರವರೆಗೆ ಲಲಿತಕಲಾ ಅಕಾಡೆಮಿಯ ಸಹಯೋಗದೊಂದಿಗೆ ಮೈಸೂರಿನ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ (ಕಾವಾ)ಯ 127 ಮಂದಿ ವಿದ್ಯಾರ್ಥಿಗಳ 145 ಕೃತಿಗಳು ವೆಂಕಟಪ್ಪ ಚಿತ್ರಶಾಲೆಯಲ್ಲಿ ಪ್ರದರ್ಶನಗೊಂಡಿತು. ಕಾವಾದಲ್ಲಿ ವಿದ್ಯಾರ್ಥಿಗಳು ಕಲಿಯುವುದರಲ್ಲಿ ಮುಕ್ತ ವಾತಾವರಣವಿದ್ದು ವಿದ್ಯಾರ್ಥಿದೆಸೆಯಲ್ಲಿಯೇ ತನ್ನತನವೊಂದನ್ನು ಕಂಡುಕೊಳ್ಳುವ, ಅಭಿವ್ಯಕ್ತಿಸುವ ಅವಕಾಶವಿದ್ದು ಅವು ಈ ಚಿತ್ರಗಳಲ್ಲಿ ನಿಚ್ಚಳವಾಗಿ ಕಂಡು ಬರುತ್ತಿತ್ತು. ಆದರೆ ಕ್ರಮಬದ್ಧವಾದ ಕಲಿಕೆಯಿಂದ ಇವರುಗಳು ಹೊರಹೋಗಿದ್ದಾರೆಯೇ ಎಂಬ ಆತಂಕವೂ ಉಂಟಾಗುವಂತಿತ್ತು. ಇಲ್ಲಿ ಶಿಲ್ಪಗಳೂ ಅಧಿಕ ಸಂಖ್ಯೆಯಲ್ಲಿದ್ದು ಕರ್ನಾಟಕದಲ್ಲಿ ಸಮಕಾಲೀನ ಶಿಲ್ಪ ಕಲಾವಿದರ ಕೊರತೆಯನ್ನು ನೀಗಿಸುವರೆಂದು ನಿರೀಕ್ಷಿಸಬಹುದಾಗಿತ್ತು. ಅಂತೆಯೇ ಶಿವಮೊಗ್ಗೆಯ ಹಾರನಹಳ್ಳಿಯ ಕುಂಬಾರ ಕುಟುಂಬದ ಬಸವರಾಜು ಮತ್ತು ಗಂಗಮ್ಮ ದಂಪತಿಗಳು ಸುಡಾವೆ ಮಣ್ಣಿನಲ್ಲಿ (ಟೆರಕೋಟ) ರಚಿಸಿದ ಸಂಪ್ರದಾಯ ಶೈಲಿಯ ಆದರೆ ಆಧುನಿಕ ಸಂವೇದನೆಯ ಶಿಲ್ಪಗಳ ಪ್ರದರ್ಶನ ಚಿತ್ರಕಲಾ ಪರಿಷತ್ತಿನಲ್ಲಿ ತಿಂಗಳ ಮೊದಲಲ್ಲಿ ನಡೆಯಿತು. ಅಲ್ಲಿಯೇ, ಅದೇ ಕಾಲೇಜಿನಲ್ಲಿ ಅಭ್ಯಸಿಸಿದ ಸುಪ್ರಿಯ ಅಂಬೇಕರ್ ಮತ್ತು ಸ್ಮಿತಾ ಕಾರ್ಯಪ್ಪ ವಿವಿಧ ಮಾಧ್ಯಮಗಳಲ್ಲಿ ರಚಿಸಿದ ಕೃತಿಗಳ ಪ್ರದರ್ಶನವಿದ್ದು ಅವು 'ಮನೋಲೋಕ ವಿಹಾರ' ದಂತೆ ಭ್ರಾಮಕ ಜಗತ್ತಿನ ಆಕೃತಿಗಳಂತೆ ಕಂಡುಬರುತ್ತಿದ್ದವೆಂದು ವಿಮರ್ಶಿಸಲ್ಪಟ್ಟವು. ಎಂ.ಕೆ.ಎಸ್. ಅಯ್ಯಂಗಾರ್ ಅವರು ವಿಸ್ತೃತ ಪ್ರಮಾಣದಲ್ಲಿ ಬೆರಳಚ್ಚಿನ ಮೂಲಕ ರಚಿಸಿದ ಕೃತಿಗಳು ಸಾಕಷ್ಟು ಅದ್ದೂರಿಯಿಂದ ಇಲ್ಲಿಯೇ ತಿಂಗಳ ಮೊದಲ ವಾರ ಪ್ರದರ್ಶನಗೊಂಡಿತು. ಅಲೆಯನ್ಸ್‌ಫ್ರಾಂಕೆಯಲ್ಲಿ ಕೆನ್ ಕಲಾಶಾಲೆಯ ಎಂ.ಸಿ.ರಮೇಶ್, ಓ.ಸಿ. ಸ್ಟೀಫನ್, ಕೆ. ವೇಲು ಅವರುಗಳು ತಿಂಗಳ ಕೊನೆಯಲ್ಲಿ ಚಿತ್ರ ಪ್ರದರ್ಶನ ನಡೆಸಿದರು. ಡಿಸೈನ್ ಸೆಂಟರಿನ ಎಸ್. ಕೃಷ್ಣಪ್ಪ ಅವರು ಮೋಹಕ ವರ್ಣ ಮೇಳಗಳಲ್ಲಿ ರಚಿಸಿದ ಚಿತ್ರಗಳ ಪ್ರದರ್ಶನ ಕೃತ್ತಿಕಾ ಆರ್ಟ್• ಗ್ಯಾಲರಿಯಲ್ಲಿ ತಿಂಗಳ ಮಧ್ಯದಲ್ಲಿ ನಡೆಯಿತು. ವಿವಿಧ ವಾದ್ಯಗಾರರ ರೇಖಾ ಪ್ರಧಾನ ಸಾಂಕೇತಿಕ ಆಕೃತಿಗಳ ಹಿನ್ನೆಲೆಯಲ್ಲಿ ಬಣ್ಣಗಳ ಹರಹುಗಳಿದ್ದು ರಾಗಮಾಲ ಚಿತ್ರಗಳ ಅನುಭವ ನೀಡುವಂತಿದ್ದವು. ಜೂನ್ ತಿಂಗಳ ಅಂತ್ಯದಲ್ಲಿ ನಡೆದ ಪ್ರಮುಖ ಪ್ರದರ್ಶನವೆಂದರೆ ಯೂಸುಫ್ ಅರಕ್ಕಲ್ ಅವರು ಸಾಕ್ಷಿ ಗ್ಯಾಲರಿಯಲ್ಲಿ ನಡೆಸಿದ ಪ್ರದರ್ಶನ. ಸಾಕಷ್ಟು ಹೆಸರು ಮಾಡಿರುವ, ಪ್ರಶಸ್ತಿ–ಬಹುಮಾನಗಳಿಸಿರುವ ಇವರ ಕೃತಿಗಳಲ್ಲಿ ಎಂದಿನಂತೆ ಮಾನವೀಯತೆಯ ಕಾಳಜಿಯನ್ನು ನೇರವಾಗಿ ಮನಸ್ಸಿಗೆ ತಟ್ಟುವಂತೆ, ಹೃದಯಂಗಮವಾಗಿ ಜೊತೆಗೆ ಕಲಾತ್ಮಕವಾಗಿ ಹೇಳುವ ಜಾಣ್ಮೆ ಕಂಡು ಬರುತ್ತಿತ್ತು. ನಳಿನಿ ಮನಾಲಿ, ಬಹುನ್ ಕಕರ್ ಹಾಗೂ ವಿವನ್ ಸುಂದರಂ ಅವರ

ಕೃತಿಗಳೊಂದಿಗೆ ಸಂದರ್ಶನ ಹಾಗೂ ವ್ಯಾಖ್ಯಾನಗಳನ್ನೊಳಗೊಂಡ ಚಲನಚಿತ್ರ 'ಫಿಗರ್ಸ್ ಆಫ್ ಥಾಟ್ಸ್'ನ ಪ್ರದರ್ಶನ ಬಾದಾಮಿ ಹೌಸ್ ನಲ್ಲಿ 22-6-91 ರಂದು ಇದ್ದು ಚಿತ್ರದ ನಂತರ ಬೆಂಗಳೂರಿನಿಂದಲ್ಲದೆ ಮೈಸೂರು ಇತ್ಯಾದಿ ಕಡೆಗಳಿಂದಲೂ ಬಂದಿದ ಸಮಕಾಲೀನ ಕಲಾವಿದರು ದೀರ್ಘವಾಗಿ ಪ್ರಶ್ನೋತ್ತರ ಕಾರ್ಯಕ್ರಮದಲ್ಲಿ ಪಾಲುಗೊಂಡರು.

## ಜುಲೈ :

ಚಿತ್ರಕಲಾ ಪರಿಷತ್ತಿನಲ್ಲಿ ಜುಲೈ 4 ರಿಂದ 10ರ ವರೆಗೆ ಗಿರಿಜಾ ಖನ್ನಾರವರ 'ಇಂಪ್ರಷನಿಸ್ಟ್ ರೂಪಗಳು' ಹಾಗೂ ಎರಡನೇ ವಾರದಲ್ಲಿ ಮೇಜರ್ ಮೋತಿಧರ್ ಅವರ ಜಲವರ್ಣ 68 ಕೃತಿಗಳು ಪ್ರದರ್ಶನಗೊಂಡವು. ಕೊನೆಯವಾರದಲ್ಲಿ ಸಿಸ್ಟಾನ್ ಆರ್ಟ್ ಗ್ಯಾಲರಿಯಲ್ಲಿ ನವದೆಹಲಿಯ ಎ. ರಾಮಚಂದ್ರ ಅವರ 'ಡೆಕೊರೇಟಿವ್' ಶೈಲಿಯ ಜಲವರ್ಣದ ಚಿತ್ರಗಳು ಪ್ರದರ್ಶನಗೊಂಡವು. ಸಾಕ್ಷಿ ಗ್ಯಾಲರಿಯಲ್ಲಿ ತಿಂಗಳ ಅಂತ್ಯದಲ್ಲಿ ಮುಂಬಯಿಯ ರಿನಿ ಧುಮುಲ್ ಹಾಗೂ ರೇಖಾರಾವ್ ಅವರ ತೈಲವರ್ಣದ ಚಿತ್ರಗಳು ಪ್ರದರ್ಶನಗೊಂಡು ಆಗಸ್ಟ್ 5 ರವರೆಗೆ ಮುಂದುವರೆಯಿತು. ಇವು ಸ್ತ್ರೀ ಸಂವೇದನೆಯ ಅಭಿವ್ಯಕ್ತಿ ಎಂದು ಚಿ.ಸು. ಕೃಷ್ಣಸೆಟ್ಟಿಯವರು ವಿಮರ್ಶಿಸಿದ್ದು ಸ್ತ್ರೀ ಬುದ್ಧಿಜೀವಿಗಳ ಪ್ರತಿಭಟನೆಗೆ ಕಾರಣವಾಯಿತು. ತಿಂಗಳ ಆರಂಭದಲ್ಲಿ ಕೆ.ಕೆ. ವೆಂಕಟೇಶ್ವರನ್ ಅವರು ರೆಂಬ್ರಾಂಟ್, ಟರ್ನರ್ ಮೊದಲಾದ ಖ್ಯಾತ ಪಾಶ್ಚಿಮಾತ್ಯ ಹಳೆಯ ಕಲಾವಿದರ ಕೃತಿಗಳನ್ನು ನಕಲು ಮಾಡಿದ್ದು ಕೃತ್ತಿಕಾ ಗ್ಯಾಲರಿಯಲ್ಲಿ ಪ್ರದರ್ಶಿಸಿದರು. ಜೊತೆಗೆ ತಮ್ಮ ಸ್ವಂತ ರಚನೆಯೂ ಇದ್ದು ಕಲಾವಿದನ ಸ್ವಂತಿಕೆಯ ದೃಷ್ಟಿಯಿಂದ ಅವಷ್ಟೇ ಸಾಕಾಗಿತ್ತು. ಜುಲೈ 12 ರಿಂದ 14 ರವರೆಗೆ ಚಿತ್ರದುರ್ಗದಲ್ಲಿ ಮೋಹನ ಮುರುಳಿ ಅವರ ಜಲವರ್ಣದ ಭೂದೃಶ್ಯಗಳ ಪ್ರದರ್ಶನ ನಡೆದಿದ್ದು ಜಿಲ್ಲಾ ಮಟ್ಟದಲ್ಲಿ ವಿಷಯ ಪ್ರಧಾನವಾದ ಚಿತ್ರಗಳಿಗೆ ಮಾನ್ಯತೆ ಇರುವುದರ ದ್ಯೋತಕವಾಗಿತ್ತು.

## ಆಗಸ್ಟ್ :

ಆಗಸ್ಟ್ ತಿಂಗಳ ಮೂರರಿಂದ ಸಿಸ್ಟಾಸ್ ಆರ್ಟ್ ಗ್ಯಾಲರಿಯಲ್ಲಿ ಕೇರಳದ ಜಿ. ರಘು ಅವರ ಕಾಷ್ಟ ಶಿಲ್ಪಗಳು ಪ್ರದರ್ಶನ ನಡೆದು ವಿವಿಧ ರಸಭಾವಗಳನ್ನು ಸೂಸುವ ಶಿರೋಭಾಗವಷ್ಟೇ ಹೆಚ್ಚಿನ ಸಂಖ್ಯೆಯಲ್ಲಿದ್ದವು. ಚಿತ್ರಕಲಾಪರಿಷತ್ತಿನಲ್ಲಿ ದೆಹಲಿಯ ಪ್ರೊ. ಚಾರಲ್ಸ್ ಸ್ಟ್ಯೊ ಅವರು ಗ್ರಾಫಿಕ್ ಕುರಿತು ಸಾದೋಹರಣವಾಗಿ ವಿದ್ಯಾರ್ಥಿಗಳಿಗೆ ವಿವರಿಸಿದರಲ್ಲದೆ ಪರಿಷತ್ತಿನ ಉಪಾಧ್ಯಾಯರಾದ ಅಜಿತ್ ದುಬೆಯವರು ತಮ್ಮ ಗ್ರಾಫಿಕ್ ಕೃತಿಗಳನ್ನು ಪ್ರದರ್ಶಿಸಿದರು. ನಮ್ಮ ಕ್ರಿಯಾಶೀಲ ಪ್ರಮುಖ ಕಲಾವಿದರಲ್ಲಿ ಒಬ್ಬರಾದ ಎಂ.ಬಿ. ಪಾಟೀಲರು 'ಮನೆ 91' ಎಂಬ ಸರಣಿಯಲ್ಲಿ ರಚಿಸಿದ ತೈಲವರ್ಣದ ಚಿತ್ರಗಳನ್ನು ಕೃತ್ತಿಕಾ

ಗ್ಯಾಲರಿಯಲ್ಲಿ ಆಗಸ್ಟ್ 20 ರಿಂದ 30ರ ವರೆಗೆ ಪ್ರದರ್ಶಿಸಿದರು. ನಿರ್ವಹಣೆ ಹಾಗೂ ಬಣ್ಣಗಾರಿಕೆಯಲ್ಲಿ ಸಿದ್ಧಿ ಪಡೆದ ಇವರ ಚಿತ್ರಗಳು ಸಹೃದಯರ ಗಮನ ಸೆಳೆಯಿತು. ಇದೇ ತಿಂಗಳಲ್ಲಿ ಅಂತರ ರಾಷ್ಟ್ರೀಯ ಖ್ಯಾತಿಯ ಕನ್ನಡ ಕಲಾವಿದ ಎಸ್.ಜಿ. ವಾಸುದೇವ್ ಅವರ ರೇಖಾ ಚಿತ್ರಗಳ ಪ್ರದರ್ಶನ ಪ್ರಥಮ ಬಾರಿಗೆ ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ 19 ರಿಂದ 31ರವರೆಗೆ ನಡೆಯಿತು. ರೇಖಾ ಚಿತ್ರಗಳು ಸೇರಿದಂತೆ ಹಲವಾರು ಮಾಧ್ಯಮಗಳಲ್ಲಿ ಚಿತ್ರ, ಶಿಲ್ಪಗಳಲ್ಲಿ ವಾಸು ಅವರು ರಚಿಸಿದ್ದರೂ ಪೂರ್ಣ ಪ್ರಮಾಣದಲ್ಲಿ ಕೇವಲ ರೇಖಾ ಚಿತ್ರಗಳೇ ಇದ್ದ ಈ ಪ್ರದರ್ಶನ ಕೃತಿಕಾರನನ್ನು ಅಭ್ಯಸಿಸಲು ನೆರವಾಗುವಂತಿದ್ದವು. ಸಹಕಲಾವಿದರು, ಸಹೃದಯರು, ಸಾಮಾನ್ಯರು ಹಾಗೂ ಗ್ರಾಹಕರುಗಳಿಂದ ಮೆಚ್ಚಿಗೆ ಪಡೆದ 1991ರಲ್ಲಿ ನೆನಪುಳಿಯುವ ಯಶಸ್ವೀ ಪ್ರದರ್ಶನಗಳಲ್ಲಿ ಇದೊಂದೆಂದರೆ ತಪ್ಪಲ್ಲ. ತಿಂಗಳ ಕೊನೆಯಲ್ಲಿ ಕೆನ್ ಕಲಾಶಾಲೆಯ ಎಚ್. ಶಿವಾನಂದ ಅವರ ಅರೆ ಸಂಪ್ರಾದಾಯಿಕ ಅರೆ ಆಧುನಿಕ ಶೈಲಿಯ ಮರದ ಶಿಲ್ಪಗಳು ವೆಂಕಟಪ್ಪ ಚಿತ್ರಶಾಲೆಯಲ್ಲಿ ನೆರವೇರಿತು.

## ಸೆಪ್ಟಂಬರ್ :

ಸೆಪ್ಟಂಬರ್ ತಿಂಗಳ ಮಧ್ಯದಲ್ಲಿ ಹಿರಿಯ ಕಲಾವಿದ ಕೆ.ವಿ. ಸೂರ್ಯ ಅವರು ರಚಿಸಿದ ಸಂಪ್ರದಾಯ ದೇವಾನುದೇವತೆಗಳ ಹಾಗೂ ರವಿವರ್ಮನಿಂದ ಪ್ರೇರಿತವಾದ ಪೌರಾಣಿಕ ಚಿತ್ರಗಳೊಂದಿಗೆ ನವೋದಯ ಕಾಲದ 'ರಮ್ಯ'ವಾದದ ಪ್ರಕೃತಿ ದೃಶ್ಯಗಳು ಮತ್ತು ಭಾವಚಿತ್ರಗಳ ಸುಮಾರು 60 ಕೃತಿಗಳು ಪ್ರದರ್ಶನಗೊಂಡದ್ದು ವಿಂಡ್ಸರ್ ಮ್ಯಾನರ್‌ನಲ್ಲಿ. ಪ್ರತಿಭಾವಂತ ಕಲಾವಿದ ಶ್ಯಾಮ್‌ಸುಂದರ್ ಮತ್ತು ಬಾಬು ಕ್ಸೇವಿಯರ್ ಅವರ ಚಿತ್ರಗಳು ಈ ತಿಂಗಳ 26ರ ವರೆಗೆ ಸಿಸ್ಟಾಸ್ ಗ್ಯಾಲರಿಯಲ್ಲಿ ನಡೆಯಿತು. ಸ್ವಲ್ಪ ಅತಿರೇಕವಿದ್ದರೂ ಸ್ಪಷ್ಟವಾದ, ಭಾವಪೂರ್ಣವಾದ, ಮನುಷ್ಯಾಕಾರದ ಆಕಾರಗಳನ್ನೇ ಪ್ರಧಾನವಾಗಿ ಸಂಯೋಜಿಸಿ ನಿಗೂಢವಾದ ಚಿತ್ರಣ ನೀಡುವುದರಲ್ಲಿ ಶ್ಯಾಮ್ ಸುಂದರ್ ಯಾವುದೇ ಮಾಧ್ಯಮವನ್ನಾದರೂ ಯಶಸ್ವಿಯಾಗಿ ದುಡಿಸಿಕೊಳ್ಳಬಲ್ಲವರಿದ್ದು ಆ ಅಂಶಗಳನ್ನು ಇಲ್ಲಿಯೂ ಕಾಣಬಹುದಿತ್ತು. ಈ ತಿಂಗಳ ಗಮನಾರ್ಹ ಪ್ರದರ್ಶನವೆಂದರೆ ಸುಮಾರು ಒಂಭತ್ತು ವರ್ಷಗಳ ನಂತರ ಮೌನ ಮುರಿದು ಚಿತ್ರ ಪ್ರದರ್ಶನ ಮಾಡಿದ ಸಾವಿತ್ರಿಯವರದು. ಮೊದಲಿಗೆ ತನ್ನ, ನಂತರ ಪರ ಪುರುಷನ ನಗ್ನ ಚಿತ್ರಗಳನ್ನು ರಚಿಸಿ ಪ್ರಪಂಚದಾದ್ಯಂತ ಸುದ್ದಿಯಾಗಿದ್ದ ಸಾವಿತ್ರಿಯವರ ಚಿತ್ರದಲ್ಲಿ 'ಗಂಡು–ಹೆಣ್ಣು'ಗಳ ಜೊತೆ 'ಮಗು' ಸಹ ಬಂದಿತ್ತು. ಎಲ್ಲಿಯೂ ನೇರವಾಗಿ 'ಮಗು'ವಿನ ಚಿತ್ರಣವಿಲ್ಲದೆ ಅದರ ಆಟದ ವಸ್ತುಗಳು, ಅದು ರಚಿಸಿದ ಚಿತ್ರಗಳೇ ಪ್ರಧಾನವಾಗಿ ಹಿನ್ನೆಲೆಯಲ್ಲಿ ಗಂಡು ಹೆಣ್ಣುಗಳು ವಿವಿಧ ಭಾವ ಭಂಗಿಯಲ್ಲಿ ಮಿಲನ ಗೊಂಡಿರುವಂತೆ ಅಸ್ಪಷ್ಟವಾಗಿ ಚಿತ್ರಿಸಿದ್ದು ಇಲ್ಲಿಯೂ 'ಕಾಮ ಕೇಂದ್ರಿತ

ಕಾಳಜಿ'ಯನ್ನು ಕಾಣಬಹುದಿತ್ತು. ದೇಹ ಪ್ರದರ್ಶನ ಗೀಳಿನಿಂದ ಹೊರಬರಲು ಸಾವಿತ್ರಿ ಅವರಿಗೆ ಇನ್ನಷ್ಟು ಕಾಲಾವಕಾಶ ಬೇಕಾಗಬಹುದು. ಈ ತಿಂಗಳು ಮೈಸೂರಿನ ಆಲೋಕದಲ್ಲಿ ಯುವ ಕಲಾವಿದರ ಶಿಬಿರ ಏರ್ಪಟ್ಟಿದ್ದು ಅಲ್ಲಿ ರಚಿತವಾದ ಕೃತಿಗಳ ಪ್ರದರ್ಶನ ಮೈಸೂರಿನ ಕಲಾ ಮಂದಿರದಲ್ಲಿ ಪ್ರದರ್ಶನಗೊಂಡಿತಲ್ಲದೆ ಅಕಾಡೆಮಿ ಪ್ರಕಟಿಸಿದ ಎರಡು ಕೃತಿಗಳು ಬಿಡುಗಡೆಯಾದುವು. ಸೆಪ್ಟಂಬರ್ ಕೊನೆಯ ವಾರದಲ್ಲಿ ಗದಗ್‌ನಲ್ಲಿ ಅಖಿಲ ಭಾರತ ಚಿತ್ರಕಲಾ ಸ್ಪರ್ಧೆಯಲ್ಲಿ ಭಾಗವಹಿಸಿದ ಕಲಾಕೃತಿಗಳ ಪ್ರದರ್ಶನ ನಡೆಯಿತು. ತಾಲ್ಲೂಕು ಮಟ್ಟದಲ್ಲಿ ಸಮಕಾಲೀನ ಕಲೆಯನ್ನು ಪರಿಚಯಿಸುವ ಕೆಲಸವನ್ನು ಅಲ್ಲಿಯ ವಿಜಯಕಲಾ ಶಾಲೆಯವರು ಸಂಘಟಿಸಿದ್ದು ಭಾರತಾದ್ಯಂತದಿಂದ ಬಂದ 242 ಕೃತಿಗಳನ್ನು ಪ್ರದರ್ಶಿಸಿದ್ದು ಪ್ರಶಂಸನೀಯ. ತಿಂಗಳ ಕೊನೆಯಲ್ಲಿ ಬೆಂಗಳೂರಿನ ಕಲಾಮಂದಿರದಲ್ಲಿ ಅ.ನ. ಸುಬ್ಬರಾಯರ ಜನ್ಮಶತಾಬ್ಧಿ ವರ್ಷದ ಅಂಗವಾಗಿ ಶಾಲಾ ವಿದ್ಯಾರ್ಥಿಗಳ ಪ್ರದರ್ಶನ ಅಲ್ಲಿಯೇ ನಡೆಯಿತು. ಭಾವಪೂರ್ಣ ಮಾನವಾಕೃತಿಗಳೇ ಪ್ರಧಾನ ವಸ್ತುವಾಗಿದ್ದವು. ಬರೋಡಯಲ್ಲಿ ಕಲಿತ ವಿ. ರಮೇಶ್ ಅವರ ಚಿತ್ರಗಳು ಸೆಪ್ಟಂಬರ್ 27 ರಿಂದ ಅಕ್ಟೋಬರ್ 12ರ ವರೆಗೆ ಸಾಕ್ಷಿ ಗ್ಯಾಲರಿಯಲ್ಲಿ ಪ್ರದರ್ಶನಗೊಂಡವು. ನೆರಳು ಬೆಳಕು, ಆಕಾರದಲ್ಲಿ ನೈಜತೆ, ಕಡಲ ತಡಿಯ ಜನರ ನೈಜ ಅಳತೆಯ ಚಿತ್ರಗಳು (ಲೈಫ್ ಸೈಜ್) ಬೆಸ್ತರ ನೋವು ನಲಿವುಗಳನ್ನು ಕಲಾತ್ಮಕವಾಗಿ ರೂಪಿಸಿದ್ದು, ಸಾಂದ್ರ ಅನುಭವ ನೀಡುವಂತಿದ್ದು ಪ್ರಭಾವಶಾಲಿಗಳಾಗಿದ್ದವು.

## ಅಕ್ಟೋಬರ್ :

ಅಕ್ಟೋಬರ್ ತಿಂಗಳ 4 ರಿಂದ 8 ರವರೆಗೆ ತುಮಕೂರು ಕಲಾಶಾಲೆಯ ಪ್ರಾಧ್ಯಾಪಕ ಎಸ್.ಕೆ. ಅಶೋಕ್ ಅವರ ಚಿತ್ರಗಳು ಬೆಂಗಳೂರಿನ ವೆಂಕಟಪ್ಪ ಚಿತ್ರಕಲಾಶಾಲೆಯಲ್ಲಿ ಪ್ರದರ್ಶನವಾಗಿದ್ದು ಆ ಕೃತಿಗಳಲ್ಲಿ ಶ್ರೀಯುತರು ಕಲಿತ ಗುಲಬರ್ಗಾದ ಆದರ್ಶ ಕಲಾ ವಿದ್ಯಾಲಯದ ಶೈಲಿ ಪರೋಕ್ಷವಾಗಿ ಕಾಣುವಂತಿದ್ದವು. ಮುಂಬಯಿಯಲ್ಲಿ ಕಲಿತ ಲಕ್ಷ್ಮಣ್ ಭಟ್ ಅವರ ಜ್ಯಾಮಿತಿ ಆಕಾರಗಳನ್ನು ಹೋಲುವ ಕೃತಿಗಳು ವೆಂಕಟಪ್ಪ ಚಿತ್ರಶಾಲೆಯಲ್ಲಿ ಅಕ್ಟೋಬರ್ 14ರ ವರೆಗೆ ನಡೆಯಿತು. ಹಿಮಾಲಯ ಅನೇಕ ಕಲಾವಿದರಿಗೆ ಹಲವಾರು ರೀತಿ ಕಂಡಂತೆ, ಸ್ಫೂರ್ತಿ ನೀಡಿದಂತೆ ಮುಂಬಯಿಯ ವಿ. ಜಿ. ನಾಗೇಶ್ವರನ್ ಅವರಿಗೂ ವಸ್ತುವಾಗಿದ್ದು ಆ ಕುರಿತ ಕಲಾಕೃತಿಗಳ ಪ್ರದರ್ಶನ ಚಿತ್ರಕಲಾ ಪರಿಷತ್ತಿನಲ್ಲಿ ಅಕ್ಟೋಬರ್ 21ರ ವರೆಗೆ ನಡೆಯಿತು. ಮೂಲತಃ ಮೈಸೂರಿನವರಾದ ಸ್ವಂತ ಪರಿಶ್ರಮದಿಂದ ಕಲಿತ ಘಾಟ್ನ ವಿಜಿ ಅವರ ಈ ಚಿತ್ರಗಳಲ್ಲಿ ವರ್ಣಶೋಭೆ ಪ್ರಧಾನವಾಗಿತ್ತು. ಅಲ್ಲಿಯೇ ಇದೇ ಮುಂಬಯಿಯ ಮುಕುಂದ್ ಕೇಳ್ಕರ್ ಮತ್ತು ಶೋಭೆಘಾಟ್ಗೆ ಅವರ ಪ್ರಕೃತಿ ದೃಶ್ಯಗಳು 23ರವರೆಗೆ ಪ್ರದರ್ಶನಗೊಂಡವು.

ಈಗ ಶಾಂತಿನಿಕೇತನದಲ್ಲಿ ನೆಲೆಸಿರುವ ಕೆ. ಜಿ ಸುಬ್ರಹ್ಮಣ್ಯಂ ಅವರ ಕಲಾಕೃತಿಗಳ ಪ್ರದರ್ಶನ ಸಿಸ್ಟಾಸ್ ಗ್ಯಾಲರಿಯಲ್ಲಿ ಈ ತಿಂಗಳ ಅಂತ್ಯದವರೆಗೆ ನಡೆಯಿತು. ವ್ಯಂಗವೇ ಪ್ರಧಾನವಾದ, ಪರೋಕ್ಷವಾಗಿ ಲೈಂಗಿಕ ಸಂಕೇತಗಳುಳ್ಳ, ಸುಲಭವಾಗಿ ಆಕಾರಗಳನ್ನು ಸಂಯೋಜಿಸಬಲ್ಲ ಅದಕ್ಕಿಂತ ಉತ್ತಮ ವಾಗ್ಮಿ, ಲೇಖಕ, ಉಪಾಧ್ಯಾಯ ಆಗಿರುವ 'ಮಣಿ'ಯವರ ಚಿತ್ರಗಳು ಕರ್ನಾಟಕವೂ ಸೇರಿದಂತೆ ಭಾರತದ ನೂರಾರು ಕಲಾವಿದರಿಗೆ ಸ್ಫೂರ್ತಿಯಾಗಿದೆ. ಜೈಪುರದ ಗೋಪಾಲಶರ್ಮಾ, ಹರಿಶಂಕರ ಗುಪ್ತ, ಜಗಮೋಹನ್ ಮಥೋರಿಯಾ ಅವರ ಕೃತಿಗಳ ಪ್ರದರ್ಶನ ವೆಂಕಟಪ್ಪ ಚಿತ್ರ ಶಾಲೆಯಲ್ಲಿ 22 ರಿಂದ 26ರ ವರೆಗೆ ನಡೆಯಿತು. ಸ್ವಂತ ಕ್ಷೇತ್ರದಲ್ಲಿ ಹೆಚ್ಚು ಹೆಸರು ಮಾಡಿರುವ ಈ ಕಲಾವಿದರು ಇದೇ ಪ್ರಥಮ ಬಾರಿಗೆ ದಕ್ಷಿಣಕ್ಕೆ ಬಂದಿರುವುದು. ಉಡುಪಿಯ ರಮೇಶ್‌ರಾವ್ ಅವರು ಸ್ವತಂತ್ರವಾಗಿ ಅಕ್ಟೋಬರ್ 25ರಿಂದ 6ನೇ ನವಂಬರ್‌ವರೆಗೆ ಕ್ರಿಮ್‌ಸನ್ ಗ್ಯಾಲರಿಯಲ್ಲಿ ಪ್ರದರ್ಶನ ನಡೆಸಿದರು. ಭಾವನಾತ್ಮಕ ಆದರೆ ಸ್ತಬ್ಧ ಮಾನವಾಕಾರಗಳೇ ಪ್ರಧಾನವಾಗಿರುವ ಅತಿ ನೈಜತೆಯಿಂದ ಕೂಡಿದ ಇವರ ಚಿತ್ರಗಳಲ್ಲಿ ಸ್ಟಿಲ್‌ಲೈಫ್ ಚಿತ್ರಣದಂತೆ ಉಳಿದ ಪದಾರ್ಥಗಳ ಮೈವಳಿಕೆಯನ್ನು ನಿರ್ವಹಿಸಿರುವ ರೀತಿ ಹಾಗೂ ಆಕೃತಿಗಳನ್ನು ಇರಿಸುವಲ್ಲಿ ಪರಿಣಾಮ ಬೀರುವ ನಿಗೂಢತ್ವ ಅನನ್ಯವಾದುದು. ಸಾಗರದಲ್ಲಿ ಲಕ್ಷ್ಮೀನಾರಾಯಣ, ಜೋಗ, ಮೋಹನ ಹೆಗಡೆ ಹಾಗೂ ಆರು ಮಂದಿ ವ್ಯಂಗ್ಯ ಚಿತ್ರಕಲಾವಿದರ ಕೃತಿಗಳ ಪ್ರದರ್ಶನ, ಪ್ರಾತ್ಯಕ್ಷಿಕೆ, ವರ್ಣ ಪಾರದರ್ಶಿಕೆ ಇತ್ಯಾದಿಗಳನ್ನು ಯೂತ್ ಹಾಸ್ಟಲ್ ಅಸೋಸಿಯೇಷನ್, ಸಾಗರ ಘಟಕವು ನಿಯೋಜಿಸಿದ್ದು ವಿಚಾರ ಪ್ರಚೋದಕವಾಗಿದ್ದವು. ರಷ್ಯಾದಲ್ಲಿ ರಾಜಕೀಯ ಬದಲಾವಣೆಗಳಾಗಿ ಶಿಲ್ಪಗಳು ಭಂಜಿಸಲ್ಪಟ್ಟಾಗ ನಗರದ ಜಾನ್‌ದೇವರಾಜ್ ಅವರು ಅದನ್ನು ಪ್ರತಿಭಟಿಸುವಂತೆ ಶಿಲ್ಪವೊಂದನ್ನು ರಚಿಸಿ ಪ್ರದರ್ಶಿಸಿದರು.

## ನವಂಬರ್ :

ನವೆಂಬರ್ ತಿಂಗಳ ಮೊದಲ ವಾರದಲ್ಲಿ ರಾಜಸ್ಥಾನಿ ಚಿಕಣಿ ಚಿತ್ರಗಳ ನಕಲು ಹಾಗೂ ಅದೇ ಶೈಲಿಯಲ್ಲಿ ರಚಿಸಿದ ಚಿತ್ರಗಳ ಮಾರಾಟ, ಪ್ರದರ್ಶನ ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ಇದೇ ವರ್ಷಾರಂಭದಲ್ಲಿ ತೀರಿಕೊಂಡ ಹನುಮಯ್ಯನವರ ಕೃತಿಗಳ ಪ್ರದರ್ಶನ 2 ರಿಂದ 15ರವರೆಗೆ ವೆಂಕಟಪ್ಪ ಚಿತ್ರಶಾಲೆಯಲ್ಲಿ ನಡೆಯಿತು. ಮುಂಬಯಿಯಲ್ಲಿ ನೆಲೆಸಿರುವ ಕನ್ನಡಿಗ ವಾಸುದೇವ ಕಾಮತರ ಜಲವರ್ಣದ ಭೂದೃಶ್ಯಗಳು ಮತ್ತು ಭಾವಚಿತ್ರಗಳು ಚಿತ್ರಕಲಾ ಪರಿಷತ್ತಿನಲ್ಲಿ ಈ ತಿಂಗಳ 11 ರಿಂದ 20ರ ವರೆಗೆ ನಡೆಯಿತು. ಹಾಳೆಯ ಮೇಲೆ ತೆಳುವಾದ ಬಣ್ಣಗಳಿಂದ ಆರಂಭಿಸಿ ಗಾಢವಾಗಿ ಪದರ ಪದರವಾಗಿ ಹೆಚ್ಚುತ್ತಾ ಹೋಗುವ ಛಾಯಾಗ್ರಹಣದಲ್ಲಿ ದೃಶ್ಯವೊಂದನ್ನು ಚೌಕಟ್ಟಿಗೆ ಅಳವಡಿಸಿಕೊಳ್ಳುವಂತೆ (ಫ್ರೇಮಿಂಗ್) ಭಾವ ಮುದ್ರಾಪಂಥದ ಚಿತ್ರಗಳ ಅನುಭವ ನೀಡುವಂತೆ ಈ ಚಿತ್ರಗಳು ಕಂಡು

ಬರುತ್ತಿದ್ದವು. ಲಂಡನ್‌ನಲ್ಲಿ ಕಲಿತು ಬಂದ ಕರ್ನಾಟಕದ ಕೆಲವೇ ಕಲಾವಿದರಲ್ಲಿ ಒಬ್ಬರಾದ ಬಿ.ವಿ.ಸುರೇಶ್ ಹಾಗೂ ಬರೋಡೆಯಲ್ಲಿ ಕಲಿತು ಬಂದ ಕರ್ನಾಟಕದ ಬಿ. ಬಸವರಾಜ್ ಅವರ ಚಿತ್ರಗಳ ಪ್ರದರ್ಶನ ವೆಂಕಟಪ್ಪ ಚಿತ್ರಶಾಲೆಯಲ್ಲಿ 21 ರಿಂದ 25ರ ವರೆಗೆ ನಡೆಯಿತು. ಯುದ್ಧ, ದಾರಿದ್ರ್ಯ ಇತ್ಯಾದಿ ಸುತ್ತಮುತ್ತಲ ಸಮಾಜದಲ್ಲಿ ಕಂಡು ಬರುವ ವಸ್ತುಗಳನ್ನು ತಮ್ಮದೇ ಆದ ಶೈಲಿಯಲ್ಲಿ ಇರಿಸಿದ್ದು ಕೃತಿಗಳನ್ನು ಆಸ್ವಾದಿಸಲು ವೀಕ್ಷಕನಲ್ಲಿ ಉನ್ನತ ಮಟ್ಟದ ಪೂರ್ವ ಸಿದ್ಧತೆಯನ್ನು ಅಪೇಕ್ಷಿಸುತ್ತಿದ್ದವು. ತಿಂಗಳ ಕೊನೆಯಲ್ಲಿ ವಿಶ್ವಮಾನ್ಯರಾದ ಹಾಗೂ ಭಾರತದಲ್ಲಿ ಅಧಿಕ ಬೇಡಿಕೆಯುಳ್ಳ ಇಬ್ಬರು ಹೊರಗಿನ ಕಲಾವಿದರ ಕೃತಿಗಳ ಪ್ರದರ್ಶನ ಬೆಂಗಳೂರಿನಲ್ಲಿ ನಡೆಯಿತು. ಕುತೂಹಲಕರ ಜನಪದ ಕಥೆಯನ್ನು ಚಿತ್ರಗಳಲ್ಲಿ ಹೇಳುವಂತೆ ಸಿದ್ಧವಾದ ಕೆಲವೇ ಆಕಾರಗಳನ್ನು ಬೇರೆ ಬೇರೆ ರೀತಿಯಲ್ಲಿ ಜೋಡಿಸಿದಂತೆ ತಮ್ಮದೇ ಆದ ರೇಖಾ ಪ್ರಧಾನವಾದ ಶೈಲಿಯೊಂದನ್ನು ರೂಢಿಸಿಕೊಂಡಿರುವ ಬದರಿ ನಾರಾಯಣ್ ಅವರ ಚಿತ್ರಗಳು ಸಾಕ್ಷಿ ಗ್ಯಾಲರಿಯಲ್ಲಿ ತಿಂಗಳ ಕೊನೆಯಲ್ಲಿ ಆರಂಭವಾಗಿ ಡಿಸಂಬರ್ 10ರ ವರೆಗೆ ಮುಂದುವರೆಯಿತು. ಉದ್ಘಾಟನೆಯ ವೇಳೆಯಲ್ಲಿ ಸ್ವತಃ ಕಲಾವಿದರೂ ಇದ್ದು ಒಂದು ಸಂವಾದ ಕಾರ್ಯಕ್ರಮವೂ ನಡೆಯಿತು. ಇಂತಹದೇ ನಿಗೂಢ ರಚನೆಯಲ್ಲಿ (ಮಿಸ್ಟಿಕ್) ಸಿದ್ಧ ಹಸ್ತರಾದ ಎಡಪಂಥೀಯರಾದ ಬಿಕಾಶ್ ಭಟ್ಟಾಚಾರ್ಯ ಅವರ ಕೃತಿಗಳು ಸಿಸ್ಟಾಸ್ ಆರ್ಟ್ ಗ್ಯಾಲರಿಯಲ್ಲಿ 3 ರಿಂದ 30ನೇ ತಾರೀಖಿನವರೆಗೆ ನಡೆಯಿತಾದರೂ ಆರಂಭದ ದಿನವೇ ಎಲ್ಲ ಕೃತಿಗಳೂ (ಕೃತಿಯೊಂದಕ್ಕೆ ರೂ. 25,000ಗಳು) ಮಾರಾಟವಾಗಿದ್ದವು. ಎಲ್ಲವೂ ಕೇವಲ ಮುಖಭಾವದ ಚಿತ್ರವೇ ಆಗಿದ್ದು ನೈಜತೆಯೊಂದಿಗೆ ಬಣ್ಣಗಾರಿಕೆಯಲ್ಲಿ ವಿಶಿಷ್ಟವಾದ ಮೈವಳಿಕೆ (ಟೆಕ್ಸ್‌ಚರ್) ಯನ್ನು ತಂದಿದ್ದು ಚಿತ್ರಣಗಳು ಭಾವೋದ್ದೀಪಕವಾಗಿದ್ದವು. ಮಧುಬನಿ ಜಿಲ್ಲೆಯ (ಉತ್ತರ ಪ್ರದೇಶದ) ರಾಂತಿ ಗ್ರಾಮದ ಬುಚಿದೇವಿ ರಚಿಸಿದ ಜಾನಪದ ಶೈಲಿಯ ಮಧುಬನಿ ಚಿತ್ರಗಳು 18 ರಿಂದ ಕ್ರಾಫ್ಟ್ ಬಜಾರ್‌ನಲ್ಲಿ ವ್ಯಾಪಾರೀ ಉದ್ದೇಶದಿಂದ ಪ್ರದರ್ಶಿತಗೊಂಡರೆ; ಸಫಿನಾ ಪ್ಲಾಜಾದಲ್ಲಿ 17ರಿಂದ ಪ್ರಾಚೀನ ಹಾಗೂ ಸಮಕಾಲೀನ ಕೃತಿಗಳ ನಕಲುಗಳ ಪ್ರದರ್ಶನ ನಡೆಯಿತು. ಸ್ವಿಡ್ಜರ್‌ಲ್ಯಾಂಡ್‌ನ ಹಲವು ವರ್ಗಗಳ ವಿಭಿನ್ನ ಕಾಯಕದಲ್ಲಿ ತೊಡಗಿರುವ, ಹಳ್ಳಿ, ಪಟ್ಟಣಗಳ, ಹಲವು ವಯೋಮಾನದ ಸ್ತ್ರೀ-ಪುರುಷ ಮುಖಭಾವ ಪ್ರದರ್ಶನವೊಂದು ವೆಂಕಟಪ್ಪ ಚಿತ್ರಶಾಲೆಯಲ್ಲಿ 29-11 ರಿಂದ 7-12 ರ ವರೆಗೆ ನಡೆಯಿತು.

## ಡಿಸಂಬರ್ :

ಡಿಸಂಬರ್ 6 ರಿಂದ 21ರ ವರೆಗೆ ಕ್ರಿಮ್‌ಸನ್ ಗ್ಯಾಲರಿಯಲ್ಲಿ ಜೆ.ಎಸ್. ಶಷ್ಟ ಅವರ ಚಿತ್ರಗಳು ಪ್ರದರ್ಶನಗೊಂಡವು. ಫಲಕದ ಮೇಲೆ ಲೀಲಾಜಾಲವಾಗಿ

ಬಣ್ಣಗಳ ಹರಹುಗಳಿಂದ ಆಕೃತಿಗಳನ್ನು ಮೂಡಿಸುವುದು ಕಂಡಾಗ ಶೆಣೈ ಅವರಿಗೆ ಚಿತ್ರರಚನೆ ತೀರಾ ಸುಲಭವಾಗಿದೆಯೆಂದು ಅನ್ನಿಸಿದರೂ ಕುಂಚ ಹಾಗೂ ವರ್ಣಗಳ ಮೇಲೆ ಅವರಿಗಿರುವ ನಿಯಂತ್ರಣ ಯಾರಿಗಾದರೂ ಗೋಚರವಾಗುವಂತಿದ್ದವು. ಎರಡನೇ ವಾರದಲ್ಲಿ ಸಿಸ್ಟಾಸ್ ಗ್ಯಾಲರಿಯಲ್ಲಿ ಹುಸೇನ್ ಅವರ ಚಿತ್ರಗಳಿದ್ದು ಅವರ ಸಿದ್ಧ ಶೈಲಿಯಲ್ಲಿ ಸಮಕಾಲೀನ ಸಮಾಜದ ವಿಡಂಬನೆ ಮಾಡಿದ್ದರು. ಚಿತ್ರಕಲಾ ಪರಿಷತ್ತಿನಲ್ಲಿ ಗ್ರಾಫಿಕ್ ಉತ್ಸವವೊಂದು ಡಿಸಂಬರ್ 23ರಿಂದ 31ರವರೆಗೆ ದೆಹಲಿಯ ಪ್ರಿಂಟ್ ಮೇಕರ್ಸ್ ಗಿಲ್ಡ್ ತಂಡ ಏರ್ಪಡಿಸಿದ್ದು ವಿವಿಧ ಮಾಧ್ಯಮಗಳಲ್ಲಿ ಮುದ್ರಿಸಿದ 60 ಗ್ರಾಫಿಕ್ ಕೃತಿಗಳನ್ನು ಪ್ರದರ್ಶಿಸಿದ್ದರು. ವರ್ಷಾಂತ್ಯದಲ್ಲಿ ಕೊಲ್ಲಿ ಯುದ್ಧ ಕಲಾಕೃತಿಗಳ ಮಾರಾಟಕ್ಕೆ ಸ್ವಲ್ಪ ಧಕ್ಕೆ ತಂದಿತಾದರೂ ಕೆಲವು ಕಲಾವಿದರಿಗೆ ಯುದ್ಧದ ಬರ್ಬರತೆಯೂ ವಸ್ತುವಾಯಿತು. ಅಂತೆಯೇ ವಿವನ್ ಸುಂದರಂ ಅವರು ರಚಿಸಿದ ಚಿತ್ರಗಳು ಸಾಕ್ಷಿ ಗ್ಯಾಲರಿಯಲ್ಲಿ ಪ್ರದರ್ಶನಗೊಂಡವು. ಅಮೂರ್ತ ಹಾಗೂ ವಿಕೃತ (ಡಿಸ್‌ಟಾರ್ಟ್‌ಡ್) ಆಕೃತಿಗಳೇ ಇದ್ದು ಕೆಲ ಚಿತ್ರಗಳ ಮುಂದೆ ತಟ್ಟೆಯಲ್ಲಿ ಕಲ್ಲೆಣ್ಣೆ (?) ಇರಿಸಿ ಸತ್ತ ಹಕ್ಕಿಯ ಚಿತ್ರ ರಚಿಸಿ ಪರಿಸರ ಚಿತ್ರದ ಪ್ರಯತ್ನ ಮಾಡಿದ್ದರು. 'ಕೌಶಲ್ಯ' ದವರು ಏರ್ಪಡಿಸಿದ ತಂಜಾವೂರು ಶೈಲಿಯ ಚಿತ್ರಗಳ ಪ್ರದರ್ಶನ ತಿಂಗಳ ಮಧ್ಯದಲ್ಲಿ ನಡೆಯಿತು. ಹೊಸದಾಗಿ ಜಯನಗರದಲ್ಲಿ ಆರಂಭವಾದ ಅಂಜಲಿ ಆರ್ಟ್ ಎಂಡ್ ಕ್ರಾಫ್ಟ್ ಎಂಬ ಪ್ರದರ್ಶನಾಲಯದಲ್ಲಿ ಗುಲಬರ್ಗಾದ ಟಿ.ಜೆ ಸುಜಾತರ ಅಲಂಕರಣದ ಆಶಯವುಳ್ಳ ಚಿತ್ರಗಳು ಪ್ರದರ್ಶಿತವಾದವು. ಅಂತರ ರಾಷ್ಟ್ರೀಯ ಆಯುರ್ವೇದ ಮತ್ತು ಪರ್ಯಾಯ ವೈದ್ಯ ಪದ್ಧತಿಯ 4ನೇ ವಿಶ್ವ ಸಮ್ಮೇಳನದ ಅಂಗವಾಗಿ ಬಿ. ಡಿ. ಜಗದೀಶ್ ಅವರ ಕೃತಿಗಳ ಪ್ರದರ್ಶನ ಅಶೋಕ ಹೋಟಲ್‌ನಲ್ಲಿ 29–12–91 ರಂದು ನಡೆದಿದ್ದು ಸಾಮಾಜಿಕ ಕಳಕಳಿಯ ಇವರ ಚಿತ್ರಗಳು ಇನ್ನಷ್ಟು ಪಕ್ವವಾಗಬೇಕಲ್ಲದೆ ಹೆಚ್ಚು ಜನರಿಗೆ ಮುಟ್ಟುವಂತಾಗಬೇಕಿದೆ. ಸುಂದರ ಹಾಗೂ ಮನಮುಟ್ಟುವಂತೆ ಸಂಜಯ ಚಟರ್ಜಿ ಅವರು ತೆಗೆದ ಛಾಯಾಚಿತ್ರಗಳ ಪ್ರದರ್ಶನ ತಿಂಗಳ 3ನೇ ವಾರದಲ್ಲಿ ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ರಾಯಚೂರಿನಲ್ಲಿ ಶಾಲಾ ಮಕ್ಕಳಿಗಾಗಿ 'ಚಿಕ್ಕ ಸಂಸಾರ–ಚೊಕ್ಕ ಸಂಸಾರ' ಎಂಬ ಶೀರ್ಷಿಕೆಯಲ್ಲಿ ಚಿತ್ರಕಲಾ ಸ್ಪರ್ಧೆ ಏರ್ಪಡಿಸಿದ್ದು 120 ಅಭ್ಯರ್ಥಿಗಳ ಪೈಕಿ ನಾಗರಾಜ ಸಿಂದೆ ಮೊದಲ ಹಾಗೂ ಅನುರಾಧ ಎರಡನೆಯ ಬಹುಮಾನ ಪಡೆದರು

## ಶ್ರದ್ಧಾಂಜಲಿ

1991ರ ಜನವರಿ 1 ರಂದು ಎಸ್. ಎಸ್. ಕುಕ್ಕೆಯವರು (73) ಹಾಗೂ ಆದೇ ತಿಂಗಳ 4 ರಂದು ಹನುಮಯ್ಯನವರು (81) ನಿಧನ ಹೊಂದಿದರು. ಇಬ್ಬರು ಹಳೆಯ ತಲೆಮಾರಿನ ನವೋದಯ ಶೈಲಿಯ ಖ್ಯಾತ ಕಲಾವಿದರು. ಪಂಡಿತರತ್ನ

ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳ ಮಗ ಕುಕ್ಕೆ ಶ್ರೀಕಂಠಶಾಸ್ತ್ರಿ ಅವರು 1933 ರಲ್ಲಿ ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಅಭ್ಯಸಿಸಿ ಬೆಂಗಳೂರಿನಲ್ಲಿ ಕುಕ್ಕೆ ಆರ್ಟ್ ಎಂಡ್ ಫೋಟೋ ಸ್ಟುಡಿಯೋವನ್ನು 25 ವರ್ಷಗಳ ಕಾಲ ನಡೆಸಿ ಅಂತಿಮ ಕಾಲದಲ್ಲಿ ಮನೆಯಲ್ಲಿಯೇ ಒಂದು ಗ್ಯಾಲರಿಯನ್ನು ರೂಪಿಸಿ ತಮ್ಮ ಚಿತ್ರಗಳನ್ನು ವ್ಯವಸ್ಥಿತವಾಗಿ ಪ್ರದರ್ಶಿಸಿದ್ದರು. ಭಾವ ಚಿತ್ರಗಳಿಗಿಂತ ಸಂಯೋಜಿತ ಚಿತ್ರ ಕುಕ್ಕೆ ಅವರಿಗೆ ಪ್ರಿಯವಾದುದು. ಮೆರವಣಿಗೆಯ ದೃಶ್ಯಗಳು ಬುದ್ಧನ ಮನ ಪರಿವರ್ತಿಸಲು ಬಂದ ಅಪ್ಸರೆಯರು ಇತ್ಯಾದಿ ಜಲವರ್ಣದ ಚಿತ್ರಗಳಲ್ಲಿ ಅಜಂತೆಯ ಬಣ್ಣಗಾರಿಕೆ ಹಾಗೂ ಅವರು ಕಲಿತ ಬನಸ್ಥಳೀಯ ಭಿತ್ತಿಚಿತ್ರ ರಚನಾ ತಂತ್ರದ ಪ್ರಭಾವ ಕಾಣಬಹುದು. ಹನುಮಯ್ಯನವರು ಹೆಚ್ಚಾಗಿ ರಚಿಸಿದ್ದು ಪ್ರಕೃತಿ ದೃಶ್ಯಗಳು ಬಹಳಷ್ಟು ಕಡೆಗಳಲ್ಲಿ ಇವರ ಚಿತ್ರಗಳು ಸಂಗ್ರಹಿತವಾಗಿದ್ದು ಮೇಲುನೋಟಕ್ಕೆ ಪ್ರತೀ ಚಿತ್ರಗಳಲ್ಲೂ ಹೆಚ್ಚಿನ ವ್ಯತ್ಯಾಸ ಕಂಡುಬರುವುದಿಲ್ಲವೆನ್ನಿಸಿದರೂ, ತೈಲವರ್ಣವನ್ನು ಪದರ ಪದರವಾಗಿ ದಪ್ಪವಾಗಿ ಹಚ್ಚುತ್ತಿದ್ದ ರೀತಿ ನೆರಳು ಬೆಳಕಿನ ವ್ಯತ್ಯಾಸ, ಕೆಂಪು–ಹಳದಿ ವರ್ಣಗಳಲ್ಲಿ ಅವರಿಗಿದ್ದ ಹತೋಟಿ ಹನುಮಯ್ಯನವರ ಸಮಕಾಲೀನರಿಗಿಂತ ಮೀರಿದ್ದಾಗಿತ್ತು. ಇಬ್ಬರ ನಿಧನದಿಂದ ಎರಡು ವಿಶಿಷ್ಟ ಶೈಲಿಗಳ ಅಂತ್ಯವಾಯಿತೆಂದು ಹೇಳಬಹುದು.

## ಪ್ರಶಸ್ತಿಗಳು

1991ರ ರಾಜ್ಯೋತ್ಸವ ಪ್ರಶಸ್ತಿ 119 ಮಂದಿಗೆ ನೀಡಿದ್ದು ಅದರಲ್ಲಿ ಲಲಿತ ಕಲೆಗೆ ವಿ.ಜಿ. ಸಿಂಧೂರ (ಜಮಖಂಡಿ) ಕೆ. ರಾಮರಾಯ ಆಚಾರ್ಯ (ದ.ಕ) ವಿ.ಎಸ್. ಪದ್ಮನಾಭಾಚಾರ್ಯ (ಶಿವಾರ ಪಟ್ಟಣ); ಮಾಯಾಚಾರ್ಯ (ಬಾಗಲಕೋಟೆ) ಮತ್ತು ಷಣ್ಮುಖಪ್ಪ ಕಾಳಪ್ಪ ಯರಕದ (ಹುನಗುಂದ) ಅವರುಗಳಿಗೆ ನೀಡಲಾಯಿತು. ಲಲಿತಕಲೆ ಹಾಗೂ ಸಮಾಜಸೇವೆಗೆ 'ಝೇಂಕಾರ ಸಾಂಸ್ಕೃತಿಕ ಸಂಸ್ಥೆ' 'ಕರ್ನಾಟಕ ರತ್ನ' ಪ್ರಶಸ್ತಿ ನೀಡಿ ನವಂಬರ್ ತಿಂಗಳಲ್ಲಿ ಗೌರವಿಸಿದಾಗ ಕಲಾವಿದ ಆರ್. ಎಂ. ಹಡಪದ್ ಅವರಿಗೂ ಈ ಗೌರವ ಸಂದಿತು.

ರಾಜ್ಯ ಸರ್ಕಾರ 1991ರಲ್ಲಿ 4 ಕಲಾವಿದರಿಗೆ ಕುಶಲಕರ್ಮಿ ಪ್ರಶಸ್ತಿ ನೀಡಿತು. ಅವರೆಂದರೆ ಕೆ.ಜಿ. ಶಾಂತಪ್ಪ ಗುಡಿಗಾರ್ (ಶಿವಮೊಗ್ಗ), ದೇವದಾಸ್ ದತ್ತಾ ಸೇಟ್ (ಕುಮುಟ) ಅಬ್ದುಲ್ ರಾವುಫ್ (ಬೀದರ್) ಮತ್ತು ವೈ.ಐ. ಶೆಟ್ಟಿ (ಧಾರವಾಡ) ಹಾಗೂ ಸೋಮಣ್ಣ ಮೆಂಕೋಬಪ್ಪ ಚಿತ್ರಗಾರ್ (ಕೊಪ್ಪಳ) ಎಸ್.ಪಿ. ಜಯಣ್ಣಾಚಾರ್ (ಚಿಕ್ಕಮಗಳೂರು), ಎಂ. ಪರಮೇಶ್ವರಾಚಾರ್ (ಚನ್ನಗಿರಿ ತಾ। ) ಅವರುಗಳಿಗೆ ಪ್ರಶಸ್ತಿ ಪತ್ರ ನೀಡಿತು.

ರಾಜ್ಯ ಲಲಿತ ಕಲಾ ಅಕಾಡಮಿ 1991ನೇ ಸಾಲಿನ ಪ್ರಶಸ್ತಿ ವಿಜೇತರ ಪಟ್ಟಿಯನ್ನು ಪ್ರಕಟಿಸಿದೆ. ಅದರಂತೆ ಕಿನ್ನಾಳದ ಮೆಂಕೋಬಪ್ಪ ಕೃಷ್ಣಪ್ಪ

ಚಿತ್ರಗಾರ ; ಗುಲಬರ್ಗದ ಎ.ಎಸ್. ಪಾಟೀಲ್, ಧಾರವಾಡದಲ್ಲಿ ನೆಲೆಸಿದ್ದ ದಿವಂಗತ ಬಸವರಾಜ ಹಳಿಜೋಳ ; ದಾವಣಗೆರೆ ಕಲೆ ಮತ್ತು ಕರಕುಶಲ ಕಲಾಶಾಲೆಯ ಪ್ರಾಂಶುಪಾಲ ವಿ. ಚಿ. ಹಿರೇಗೌಡರ್ ಮತ್ತು ನಾಗಮಂಗಲ ಪುಟ್ಟಾಚಾರ್ಯ ಶ್ರೀನಿವಾಸಾಚಾರ್ಯ ಅವರುಗಳು ಈ ಗೌರವಕ್ಕೆ ಪಾತ್ರರಾಗಿದ್ದಾರೆ.

## ಭಿತ್ತಿಚಿತ್ರ ಪ್ರದರ್ಶನ :

ಮೈಸೂರಿನ ರಂಗಾಯಣದವರು ತಮ್ಮ ಎರಡನೆಯ ವಾರ್ಷಿಕೋತ್ಸವದ ಅಂಗವಾಗಿ ಮೈಸೂರಿನಲ್ಲಿ 15–1–91 ರಿಂದ ನೂರಾರು ರಂಗ ಭಿತ್ತಿ ಚಿತ್ರಗಳ ಪ್ರದರ್ಶನ ನಡೆಸಿದ್ದು ಕೆ.ಕೆ. ಹೆಬ್ಬಾರರಿಂದ ಉದ್ಘಾಟನೆಗೊಂಡಿತು. ಹೆಚ್ಚಿನ ಸಂಖ್ಯೆಯಲ್ಲಿ ವಿದೇಶಿ ರಂಗ ಭಿತ್ತಿಪತ್ರಗಳೇ ಇದ್ದು. ನಾಟಕದ ಜಾಹಿರಾತಿಗಿಂತ ಮಿಗಿಲಾದ ಕಲಾತ್ಮಕತೆ ಅದರಲ್ಲಿ ತಂದು ಭಿತ್ತಿಪತ್ರವನ್ನೂ ಕಲಾತ್ಮಕವಾಗಿ ರೂಪಿಸುವ ಸಾಧ್ಯತೆ ತಿಳಿದು ಬರುವಂತಿತ್ತು. ಭಿತ್ತಿಚಿತ್ರಗಳು ಬೆಳದು ಬಂದ ಬಗೆ ಕುರಿತು, ಕಲಾವಿದರ ಕಾಣಿಕೆ ಕುರಿತು ಹಲವಾರು ಲೇಖನಗಳಿದ್ದ ಸ್ಮರಣ ಸಂಚಿಕೆಯೊಂದು ಅದೇ ವೇಳೆಯಲ್ಲಿ ಸಿ.ಡಿ. ನರಸಿಂಹಯ್ಯ ಅವರಿಂದ ಬಿಡುಗಡೆಯಾಯಿತು.

## ದತ್ತಿ ಉಪನ್ಯಾಸ :

ಬಿ. ಎಂ. ಶ್ರೀ ಸ್ಮಾರಕ ದತ್ತಿ ಉಪನ್ಯಾಸದಲ್ಲಿ 23.2.91 ರಂದು ಪ್ರೊ। ಎಂ.ಎಚ್. ಕೃಷ್ಣಯ್ಯ ಅವರು "ಸಾಹಿತ್ಯ–ಚಿತ್ರಕಲೆ" ಪರಸ್ಪರ ಪ್ರೇರಣೆ, ಪ್ರಭಾವಗಳು ಕುರಿತು ಮಾತನಾಡಿದರು. ಪ್ರತಿಷ್ಠಾನದ ಸ್ಥಾಪಕ ದಿವಂಗತ ಎಂ.ವಿ.ಸೀ ಯವರು ಈ ಹಿಂದೆ ಇದೇ ವಿಷಯ ಕುರಿತು ಪುಸ್ತಕವೊಂದನ್ನು ರಚಿಸಿದ್ದರು. ಚಿತ್ರಕಲಾವಿದರೂ ಆಗಿದ್ದ ಎಂ.ವಿ.ಸೀ. ಅವರು ರಚಿಸಿದ ಚಿತ್ರಗಳು ಮೇಲಿನ ಉಪನ್ಯಾಸ ಕಾರ್ಯಕ್ರಮದ ವೇಳೆಯಲ್ಲಿ ಪ್ರದರ್ಶಿತವಾಗಿತ್ತು.

## ಶಿಕ್ಷಕರ ಸಮ್ಮೇಳನ :

ಕರ್ನಾಟಕ ಪ್ರೌಢ ಹಾಗೂ ಪ್ರಾಥಮಿಕ ಶಾಲೆಯ ಚಿತ್ರಕಲಾ ಶಿಕ್ಷಕರು 91ರ ಮಾರ್ಚ್ 4 ಮತ್ತು 5 ರಂದು ಬೆಂಗಳೂರಿನಲ್ಲಿ ಬೃಹತ್ ಪ್ರಮಾಣದಲ್ಲಿ ಸಮ್ಮೇಳನವೊಂದನ್ನು ರೂಪಿಸಿದರು. ತಮ್ಮ ಹತ್ತು ಹಲವು ಸಮಸ್ಯೆಗಳ ಚರ್ಚೆಗಳ, ಜೊತೆಯಲ್ಲಿಯೇ ಚಿತ್ರಕಲೆಗೆ ಸಂಬಂಧಿಸಿದಂತೆ ಉಪನ್ಯಾಸ ಇತ್ಯಾದಿಗಳನ್ನು ಏರ್ಪಡಿಸಿದ್ದರಲ್ಲದೆ ಶಿಕ್ಷಕರು ರಚಿಸಿದ ಚಿತ್ರಗಳ ಪ್ರದರ್ಶನವೂ ಇತ್ತು. ಚಿತ್ರಕಲೆಯಲ್ಲಿ ಮಕ್ಕಳ ಅಭಿವ್ಯಕ್ತಿ ಕುರಿತ ಹಾಗೂ ಮಕ್ಕಳಿಗೆ ಚಿತ್ರಕಲಾ ಶಿಕ್ಷಣ ಕುರಿತ ಹಲವು ಲೇಖನಗಳನ್ನೊಳಗೊಂಡ ಸ್ಮರಣ ಸಂಚಿಕೆಯೊಂದು ಇದೇ ವೇಳೆಯಲ್ಲಿ ಹೊರತರಲಾಯಿತು. ಬಿಜಾಪುರದ ಚಂದಕಾವಟೆಯ ಚಿತ್ರಕಲಾ

ಶಿಕ್ಷಕ ಜಿ.ಎಸ್. ಭೂಸಗೊಂಡ ಅವರಿಗೆ 1991ನೇ ಸಾಲಿನ ಆದರ್ಶ ಚಿತ್ರಕಲಾ ಶಿಕ್ಷಕ ಎಂದು ಜಿಲ್ಲಾ ಪ್ರಶಸ್ತಿ ಬಂದಿತು.

## ಅ.ನ.ಸು ಜನ್ಮಶತಾಬ್ದಿ :

ಕರ್ನಾಟಕ ಚಿತ್ರಕಲಾ ಕ್ಷೇತ್ರದಲ್ಲಿ ಅನೇಕ ವಿಷಯಗಳಲ್ಲಿ ಮೊದಲಿಗರಾದ ದಿ। ಅ.ನ.ಸುಬ್ಬರಾಯರ ಜನ್ಮಶತಾಬ್ದಿ ವರ್ಷ 91 ರ ಸೆಪ್ಟಂಬರ್ 28 ರಂದು ಆರಂಭವಾಯಿತು. 1928 ರಲ್ಲಿಯೇ ಕಲಾಶಾಲೆಯನ್ನು ಪ್ರಥಮವಾಗಿ ಆರಂಭಿಸಿದ ಅನಸು ಅವರು 1930 ರಿಂದ 56ರ ವರೆಗೆ 'ಕಲಾ' ಎಂಬ ಮಾಸಪತ್ರಿಕೆಯನ್ನು ತಂದರು. ಕಲೆ ಮತ್ತು ಕರಕುಶಲ ಕಲೆಯ ಏಳಿಗೆಗಾಗಿ ಅವಿಶ್ರಾಂತ ದುಡಿದ ಅನಸು ಅವರ ನೆನಪಿಗಾಗಿ ಕಲಾಪ್ರದರ್ಶನ,, ಉಪನ್ಯಾಸ, ವಿಚಾರಗೋಷ್ಠಿ ಕಲಾಶಿಬಿರ ಇತ್ಯಾದಿ ಹತ್ತಾರು ಕಾರ್ಯಕ್ರಮಗಳಿದ್ದು ಅವು ಅಂದಿಗಷ್ಟೇ ಸೀಮಿತವಾಗದೆ ಇಡೀ ವರ್ಷ ಪೂರ್ತಿ ನಡೆಯಿತು. ಅದೇ ವೇಳೆಯಲ್ಲಿ ಎ.ಎನ್. ಮೂರ್ತಿ ಅವರು ಅನಸು ಅವರನ್ನು ಕುರಿತು ಲೇಖನವೊಂದನ್ನು ಪತ್ರಿಕೆಯೊಂದರಲ್ಲಿ ಧಾರಾವಾಹಿಯಾಗಿ ಬರೆಯುತ್ತಿದ್ದರು.

## ಅಕಾಡಮಿ (ಲಲಿತಕಲಾ)

ಪ್ರದರ್ಶನಗಳಿಂದ ಹೊರತಾಗಿ ಶಿಬಿರಗಳು, ಪುಸ್ತಕ ಪ್ರಕಟಣೆ, ಕಲಾಕೃತಿಗಳ ಸಂಗ್ರಹಣೆ, ದಾಖಲೆ ಮುಂತಾದ ಅನೇಕ ಕೆಲಸಗಳನ್ನು ಅಕಾಡಮಿ ಕೈಗೊಳ್ಳುವಂತಿದ್ದು 1990ರ ಜುಲೈನಲ್ಲಿ ಹಿಂದಿನ ಅಕಾಡಮಿಯು ಮುಕ್ತಾಯಗೊಂಡ ನಂತರ 30 ನೇ ಅಕ್ಟೋಬರ್ 1991ರಲ್ಲಿ ಪಿ.ಆರ್. ತಿಪ್ಪೇಸ್ವಾಮಿಯವರು ಅಧ್ಯಕ್ಷರಾಗಿ ನೇಮಕಗೊಳ್ಳುವವರೆಗೆ ನಿಷ್ಕ್ರಿಯವಾಗಿತ್ತು. ಅಕಾಡಮಿ ರಚನೆಯಾಗಿಲ್ಲದ ಕಾಲದಲ್ಲಿ ಪ್ರತಿಕೆಗಳಲ್ಲಿ ಹಲವಾರು ಪತ್ರಗಳು, ಅಭಿಪ್ರಾಯಗಳು ಬಂದವು. ರಚನೆಯ ಕಾರ್ಯ ನಡೆಯುತ್ತಿದೆಯೆಂದು ಸಂಬಂಧಪಟ್ಟ ಮಂತ್ರಿಗಳು ಭರವಸೆ ನೀಡುತ್ತಿದ್ದರು. ಮುಂದಿನ ಅಕಾಡಮಿಗಳ ಹೇಗಿರಬೇಕೆಂದು ಚಿ.ಸು. ಕೃಷ್ಣಸೆಟ್ಟಿ ಅವರ ನೇತೃತ್ವದಲ್ಲಿ ಗಿರೀಶ್ ಕಾರ್ನಾಡ್, ಲಂಕೇಶ್, ಶಿವರುದ್ರಪ್ಪ, ಹಡಪದ್ ಮುಂತಾದ ಅನೇಕ ಗಣ್ಯರಿಂದ ವಿಚಾರ ಸಂಕಿರಣವೊಂದು ನಡೆಯಿತು. ಅಕಾಡಮಿಗಳ ನೇಮಕಕ್ಕೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದ 91ರ ಫೆಬ್ರವರಿಯಲ್ಲಿ ಬೆಂಗಳೂರು ಮತ್ತು ಮೈಸೂರುಗಳಲ್ಲಿ ಆಯಾ ಕ್ಷೇತ್ರದಲ್ಲಿ ಅನೇಕ ಗಣ್ಯರುಗಳನ್ನು ಆಹ್ವಾನಿಸಿ ಸಲಹೆಗಳನ್ನು ಪಡೆಯಲಾಯಿತು. ಇದೇ ಅವಧಿಯಲ್ಲಿ ಚಿತ್ರಕಲಾ ಕಾಲೇಜು, ಸಂಗ್ರಹಾಲಯ ಇತ್ಯಾದಿಗಳ ಉಸ್ತುವಾರಿಗೆ ವರಿಷ್ಠ ಅಧಿಕಾರಿಯೊಬ್ಬರನ್ನು ನೇಮಕ ಮಾಡುವುದಾಗಿ ಸರ್ಕಾರ ಪ್ರಕಟಿಸಿತು. (6-5-91) ರಲ್ಲಿ ಲಲಿತಕಲಾ ಅಕಾಡಮಿಗೆ, ಅಧ್ಯಕ್ಷರಾಗಿ ಆಯ್ಕೆಯಾದ ನಂತರ ಪಿ. ಆರ್. ತಿಪ್ಪೇಸ್ವಾಮಿಯವರಿಗೆ ಮೈಸೂರಿನ ನಾಗರೀಕರೂ (30-12-91ರಂದು) ಸೇರಿದಂತೆ ಅನೇಕ ಕಡೆ

ಸನ್ಮಾನಗಳು ನಡೆಯಿತು. ಅಧ್ಯಕ್ಷರ ಆಯ್ಕೆಗೆ ಮೊದಲೇ ಸೆಪ್ಟಂಬರ್ 2 ರಿಂದ 7ರ ವರೆಗೆ ತಂಜಾವೂರಿನ ದಕ್ಷಿಣ ವಲಯ ಸಾಂಸ್ಕೃತಿಕ ಕೇಂದ್ರದ ಸಹಯೋಗದೊಂದಿಗೆ ಮೈಸೂರಿನ ಆಲೋಕದಲ್ಲಿ ಕಲಾವಿದರ ಶಿಬಿರವೊಂದನ್ನು ರಾಜ್ಯ ಲಲಿತ ಕಲಾ ಅಕಾಡಮಿಯ ಕಾರ್ಯಾಲಯ ಹಮ್ಮಿಕೊಂಡಿದ್ದು ಎಸ್.ಜಿ. ವಾಸುದೇವ್ ಮತ್ತು ಜೆ.ಎಸ್. ಖಂಡೇರಾವ್ ಅವರು ನಿರ್ದೇಶಿಸಿದರು. ಕರ್ನಾಟಕದ ವಿವಿಧ ಭಾಗಗಳಿಂದ ಸುಮಾರು 20 ವಿದ್ಯಾರ್ಥಿಗಳು ಪಾಲುಗೊಂಡಿದ್ದರು. ಇಲ್ಲಿ ರಚನೆಯಾದ ಚಿತ್ರಗಳು 29 ರಂದು ಕಲಾ ಮಂದಿರದಲ್ಲಿ ಪ್ರದರ್ಶನಕ್ಕೆ ಉದ್ಘಾಟಿಸಿದಾಗ, ಬಿ. ವಿ. ಕಾರಂತರಿಂದ ಲಲಿತಕಲಾ ಅಕಾಡಮಿ ಪ್ರಕಟಿಸಿದ ಎರಡು ಪುಸ್ತಕಗಳು ಬಿಡುಗಡೆಯಾದವು. 22–3–91 ರಂದು ಒರಿಸ್ಸಾ ಲಲಿತಕಲಾ ಅಕಾಡಮಿಯ ಸಹಯೋಗದೊಂದಿಗೆ ರಾಜ್ಯ ಅಕಾಡೆಮಿ ಕಲಾ ಪ್ರದರ್ಶನವೊಂದನ್ನು ಭುವನೇಶ್ವರದಲ್ಲಿ ಏರ್ಪಡಿಸಿತು. ಅಂತೆಯೇ 21–10–91 ರಂದು ದಕ್ಷಿಣವಲಯ ಸಾಂಸ್ಕೃತಿಕ ಕೇಂದ್ರ, ತಂಜಾವೂರು ಅವರ ಪ್ರಾಯೋಜಿತದಲ್ಲಿ ರಾಜಾಸ್ಥಾನಿ ಲಲಿತಕಲಾ ಅಕಾಡಮಿಯ ಸಹಯೋಗದಿಂದ ಜೈಪುರದಲ್ಲಿ ಒಂದು ಪ್ರದರ್ಶನ ನೀಡಿತು. ಇವೆರಡೂ ಪ್ರದರ್ಶನಗಳಲ್ಲಿ ಕರ್ನಾಟಕದ ಹಿರಿಯ ಹಾಗೂ ಸಮಕಾಲೀನ ಕಲಾವಿದರ ಸುಮಾರು 50 ಕೃತಿಗಳು ಪ್ರದರ್ಶನಗೊಂಡವು.

## ಗಡಿಯಾಚೆಯ ಕಾರ್ಯಕ್ರಮಗಳು

ದಕ್ಷಿಣ ಮಧ್ಯವಲಯ ಸಾಂಸ್ಕೃತಿಕ ಕೇಂದ್ರದವರು ಮಹಾರಾಷ್ಟ್ರದ ಪುಣೆಯಲ್ಲಿ ಮಾರ್ಚಿ 1991ರಲ್ಲಿ ಕರ್ನಾಟಕದ ಕಲಾವಿದ, ಶೆಟ್ಟಿ, ವಾದಿರಾಜ್ ಅವರ ನೇತೃತ್ವದಲ್ಲಿ ಶಿಲ್ಪರಚನಾ ಶಿಬಿರವನ್ನು ಏರ್ಪಡಿಸಿದ್ದರು. ಶಿಬಿರದ ಉದ್ದೇಶ ಭಾವಶಿಲ್ಪ (ಪೋರ್‌ಟ್ರೇಟ್) ರಚನೆ–ಭಾಗವಹಿಸಿದ 16 ಕಲಾವಿದರಲ್ಲಿ ವಾದಿರಾಜ್ ಅಲ್ಲದೆ ವೆಂಕಟಾಚಲಪತಿ, ಕೆ.ವಿ. ಸೋಮಶೇಖರ್, ವಿ.ಎ. ದೇಶಪಾಂಡೆ, ಕನಕಾಮೂರ್ತಿ, ನಾಗಲಿಂಗಶೆಟ್ಟಿ ಮತ್ತು ಶ್ಯಾಮಾಚಾರ್ ಅವರುಗಳು ಸಕ್ರಿಯವಾಗಿ ಪಾಲುಗೊಂಡರು.

ಕರ್ನಾಟಕದ ಹಲವಾರು ಸ್ಥಳಗಳಲ್ಲಿ ಭಿತ್ತಿಚಿತ್ರ (ಮೂರೆಲ್) ರಚನೆ ಮಾಡಿದ ಜಿ. ಎಸ್. ಶೆಣೈ ಅವರು ಮುಂಬಯಿಯ ಸ್ಟಾಂಡರ್ಡ್ ಚಾರ್ಟೆಡ್ ಬ್ಯಾಂಕ್ ಅವರಿಗಾಗಿ ಸುಮಾರು 16 ಅಡಿ ಉದ್ದದ ಲೋಹದ ಹಾಳೆಯ ಮೇಲೆ ಉಬ್ಬೆತ್ತಿದ ಹಾಗೂ ಬಣ್ಣಗಳಿಂದ ಅಲಂಕೃತವಾದ ಕಲಾಕೃತಿಯೊಂದನ್ನು ರಚಿಸಿಕೊಟ್ಟರು. ಇದೇ ಮುಂಬಯಿಯ ಜಹಾಂಗೀರ್ ಆರ್ಟ್ ಗ್ಯಾಲರಿಯಲ್ಲಿ ಗುಲಬರ್ಗದ ಕಾಲೇಜ್ ಆಫ್ ವಿಶುಯಲ್ ಆರ್ಟ್ಸನಿಂದ 'ವಿ. ಸೆವೆನ್' ಎಂಬ ಶೀರ್ಷಿಕೆಯಲ್ಲಿ ವಿ.ಜಿ ಅಂದಾನಿ, ಎಂ.ಬಿ. ಲೋಹರ್, ಬಸವರಾಜ್ ಜಾನೆ ಇತ್ಯಾದಿ ಏಳು ಕಲಾವಿದರ ಚಿತ್ರ ಮತ್ತು ಗ್ರಾಫಿಕ್ ಕೃತಿಗಳ ಪ್ರದರ್ಶನ ಸೆಪ್ಟಂಬರ್ 23 ರಿಂದ

29ವರೆಗೆ ನಡೆಯಿತು. ಜುಲೈ ತಿಂಗಳಿನಲ್ಲಿ ಮೈಸೂರಿನ ಪುಷ್ಪಮಾಲ ಮತ್ತು ಅಲೆಕ್ಸ್ ಮ್ಯಾಥ್ಯು ಅವರುಗಳು ಮುಂಬಯಿಯ ಜಹಾಂಗೀರ್ ಕಲಾಶಾಲೆಯಲ್ಲಿ ಸುಡಾವೆ ಮಣ್ಣಿನ ಶಿಲ್ಪಗಳ ಪ್ರದರ್ಶನ ನೀಡಿದರು. ಟ್ರಿನಾಲೆ ಪ್ರಶಸ್ತಿ ವಿಜೇತೆ ಪುಷ್ಪಮಾಲ ಅವರು ವ್ಯಂಗ್ಯ, ವಿಡಂಬನೆಗಳ ಕೃತಿಗಳಿಗೆ ಹೆಸರಾದವರು. ಇಲ್ಲಿಯೂ ಅದೇ ಬಗೆಯಲ್ಲಿ ಸರ್ಕಸ್ ವಿದೂಷಕರ ಶಿಲ್ಪಗಳೂ ಸೇರಿದಂತೆ ಹಲವಾರು ಕೃತಿಗಳಿದ್ದವು.

ಬೆಂಗಳೂರಿನ ರವಿಕುಮಾರ್ ಕಾಶಿ ಬರೋಡೆಯಲ್ಲಿ ಉನ್ನತ ಪದವಿ ಪಡೆದಿದ್ದು 1991ರಲ್ಲಿ ಶ್ರೀಯುತರು ದೆಹಲಿಯ ಘಾಡಿ (garhi) ಯಲ್ಲಿ "ಕ್ರಿಯಾಶೀಲ ಕಲಾವಿದರ ತಂಡ" ದವರೊಂದಿಗೆ ಗ್ರಾಫಿಕ್ ಪ್ರದರ್ಶನವನ್ನು; ಎಂ. ಇ. ಸಿ. ಗ್ಯಾಲರಿಯಲ್ಲಿ ಗುಂಪು ಪ್ರದರ್ಶನವನ್ನೂ ದೆಹಲಿಯ ಸಮಕಾಲೀನ ಕಲಾ ಕೇಂದ್ರದಲ್ಲಿ "ಮೂವರು ಗ್ರಾಫಿಕ್ ಕಲಾವಿದರು" ಶೀರ್ಷಿಕೆಯಲ್ಲಿ ಪ್ರದರ್ಶನವನ್ನೂ ನೀಡಿದ್ದು ಮುಂಬಯಿಯ ಪೆಂಡೋಲೆ ಆರ್ಟ್ ಗ್ಯಾಲರಿಯಲ್ಲಿ 30 ರಿಂದ 12–10–91ರ ವರೆಗೆ ಗಾಜಿನ ಫಲಕದ ಮೇಲಿನ ಚಿತ್ರಗಳು ಹಾಗೂ ರೇಖಾ ಚಿತ್ರಗಳ ಪ್ರದರ್ಶನ ನೀಡಿದರು. ಅಂತೆಯೆ ಗುಲಬರ್ಗದ ವಿ. ಬಿ. ಬಿರಾದಾರ್ ಅವರು ಮುಂಬಯಿಯ ಬ್ರೀಜ್ ಕ್ಯಾಂಡಿಯಲ್ಲಿ ನವೆಂಬರ್ 18ರಿಂದ 30ರವರೆಗೆ ತಮ್ಮ ಭೂದೃಶ್ಯಗಳ ಪ್ರದರ್ಶನ ನಡೆಸಿದರು.

ಸಾಕಷ್ಟು ವರ್ಷಗಳಿಂದ ಮುಂಬಯಿಯಲ್ಲಿಯೇ ನೆಲೆಸಿರುವ ಕನ್ನಡಿಗ ಕೆ.ಕೆ. ಹೆಬ್ಬಾರ್ ಅವರಿಗೆ 1991ರ ಜೂನ್ 15ಕ್ಕೆ 80 ವರ್ಷ ತುಂಬಿತು. ಆ ಸಂದರ್ಭದಲ್ಲಿ ಅಲ್ಲಿ ಕೆಲವು ಸನ್ಮಾನಗಳು ನಡೆದವಲ್ಲದೆ ಹೆಬ್ಬಾರರ ನೂರಾರು ಕೃತಿಗಳನ್ನು ಬಣ್ಣದಲ್ಲಿ ಅಂದವಾಗಿ ಮುದ್ರಿಸಿದ ಗ್ರಂಥವೊಂದನ್ನು ಟಾಟಾ ಸಂಸ್ಥೆಯವರು ಹೊರತಂದರು.

1991ರಲ್ಲಿ ಉಡುಪಿಯ ರಮೇಶ್‌ರಾವ್ ಅವರು ಮದ್ರಾಸ್‌ನ 'ದ ಗ್ಯಾಲರಿ'ಯಲ್ಲಿಯೂ ಹಾಸನದ ಕೆ. ಟಿ. ಶಿವಪ್ರಸಾದ್ ಅವರು 4 ರಿಂದ 20ನೇ ಜನವರಿವರೆಗೆ ಮದರಾಸಿನ ಸಾಕ್ಷಿ ಗ್ಯಾಲರಿಯಲ್ಲೂ ಏಕವ್ಯಕ್ತಿ ಪ್ರದರ್ಶನ ಮಾಡಿದರು. ಅದೇ ಸಾಕ್ಷಿ ಗ್ಯಾಲರಿಗೆ ಐದು ವರ್ಷ ತುಂಬಿದ ನೆನಪಿಗಾಗಿ ಮಾಲಿಕರು ಏರ್ಪಡಿಸಿದ ಗುಂಪು ಪ್ರದರ್ಶನದಲ್ಲಿ ಎಸ್.ಜಿ. ವಾಸುದೇವ್ ಅವರೂ ಪಾಲುಗೊಂಡಿದ್ದರು. ಹಿಮಾಚಲ ಪ್ರದೇಶದ ಸರ್ಕಾರಿ ವಸ್ತು ಪ್ರದರ್ಶನಾಲಯದವರ ಅಖಿಲ ಭಾರತ ಕಲಾಪ್ರದರ್ಶನದಲ್ಲಿ ಎನ್. ಮರಿಶಾಮಾಚಾರ್ ಅವರಿಗೆ 91ನೇ ಸಾಲಿನ ಪ್ರಶಸ್ತಿ ದೊರೆತು ಪ್ರದರ್ಶನ ಸಿಮ್ಲಾದಲ್ಲಿ ನಡೆಯಿತು.

## ಹುಸೇನ್‌ರವರ 'ಸಂಕಲನ'

ಬೆಂಗಳೂರು ಔದ್ಯೋಗಿಕ ನಗರವಾದರೂ ಮೊದಲಿನಿಂದಲೂ ರಾಜ್ಯದ

ಹೊರಗಿನ ವಿವಿಧ ಉದ್ಯಮಿಗಳನ್ನು ಆದರ್ಶಿಸಿದಂತೆ ಎಲ್ಲ ರಂಗದ ಕಲಾವಿದರುಗಳನ್ನೂ ಕೈಬೀಸಿ ಕರೆದಿದೆ. ಹೊರಗಿನ ಕೆಲವು ಕಲಾವಿದರ ಕೃತಿಗಳಿಗೆ ಬೆಂಗಳೂರಿನಲ್ಲಿ ಬೇಡಿಕೆಯಿರುವುದು ಅವರುಗಳು ಇಲ್ಲಿ ಪ್ರದರ್ಶಿಸುವ ಅಥವ ಬಂದು ನೆಲಸುವ ಅಥವಾ ಆಗಾಗ್ಗೆ ಬಂದು ಕೃತಿ ರಚಿಸಲು ಅನುಕೂಲವಾಗುವಂತೆ ಸ್ಟುಡಿಯೋ ರಚಿಸಿಕೊಳ್ಳುವ ಸಾಧ್ಯತೆಗಳು ಹೆಚ್ಚುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ. ಬೆಂಗಳೂರಿನ ಎಲ್ಲ ಖಾಸಗೀ ಪ್ರದರ್ಶನಾಲಯಗಳು ಸ್ಥಳೀಯರಿಗಿಂತ ತೀರಾ ಅಧಿಕ ಪ್ರಮಾಣದಲ್ಲಿ ಹೊರಗಿನವರಿಂದ ಕೃತಿಗಳನ್ನು ತರುತ್ತಿವೆ. ಈ ದಿಸೆಯಲ್ಲಿ ಈಗಾಗಲೇ ಭಾರತದಲ್ಲಿ ಹಲವಾರು ಕಡೆಗಳಲ್ಲಿ ತಮ್ಮ ಭವ್ಯ ಬಂಗಲೆ ಹಾಗೂ ಪ್ರದರ್ಶನಾಲಯವನ್ನು ತೆರೆದಿರುವ ಎಂ.ಎಫ್. ಹುಸೇನ್ ಅವರು ಬೆಂಗಳೂರಿನಲ್ಲಿ 'ಸಂಕಲನ' ಎಂಬ ಹೆಸರಿನ ಮನೆಯನ್ನು 1991ರ ಸೆಪ್ಟಂಬರ್ 29ರಂದು 'ಗೃಹ ಪ್ರವೇಶ' ಮಾಡಿದರು. ಮಕ್ಕಳ ಚಿತ್ರಕಲಾ ಸ್ಪರ್ಧೆಯೊಂದಿಗೆ ಆರಂಭವಾದ ಮನೆ ಯಾ ಗ್ಯಾಲರಿಯಲ್ಲಿ ವಿಚಾರ ವಿನಿಮಯ. ಸಾಂಸ್ಕೃತಿಕ ಕಾರ್ಯಕ್ರಮ ಇತ್ಯಾದಿಗಳನ್ನು ಹಮ್ಮಿಕೊಳ್ಳುವ ಇಚ್ಛೆ ಹುಸೇನರದು.

## ಪುಸ್ತಕಗಳು

1991ರ ಅವಧಿಯಲ್ಲಿ ಮರಿಶಾಮಚಾರ್ ಅವರ 'ಭಾರತದ ಜನಪದ ಚಿತ್ರಕಲೆ' ಗವೀಶ್ ಹಿರೇಮಠರ 'ಸೃಜನಶೀಲ ಕಲಾವಿದರು'; ಕೆ. ಎಸ್. ಶ್ರೀನಿವಾಸಮೂರ್ತಿ ಅನುವಾದಿಸಿದ ಪೌಲ್‌ಕ್ಲೇಯ 'ಆಧುನಿಕ ಕಲೆ' ಮತ್ತು ಬಿ.ವಿ.ಕೆ ಶಾಸ್ತ್ರಿ ಅವರು ಸಂಪಾದಿಸಿದ 'ರೇಖಾ ಚಿತ್ರ' ನಾಲ್ಕು–ಪುಸ್ತಕಗಳು ಹೊರಬಂದವು. ಇವುಗಳಲ್ಲಿ ಕೊನೆಯ ಎರಡು ಪುಸ್ತಕಗಳನ್ನು ಲಲಿತಕಲಾ ಅಕಾಡಮಿ ಪ್ರಕಟಿಸಿದವು. ಜಾನಪದ ಚಿತ್ರಕಲೆ 60 ಪುಟಗಳ ಪುಸ್ತಕವಾಗಿದ್ದು ವಿಫುಲವಾಗಿ ಛಾಯಾಚಿತ್ರಗಳನ್ನು ಹೊಂದಿದೆ. ಉತ್ತರ ಭಾರತದಲ್ಲಿ ವೈವಿಧ್ಯಮಯವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಜಾನಪದ ಚಿತ್ರಗಳು ಇದ್ದು ಈಗಾಗಲೇ ಈ ಕುರಿತು ಪ್ರಕಟವಾಗಿರುವ ಪುಸ್ತಕ ಹಾಗೂ ಲೇಖನಗಳ ಆಧಾರದಿಂದ ರಚಿಸಿರುವರಾದರೂ ಈ ವಿಷಯ ಕುರಿತ ಪುಸ್ತಕಗಳು ಕನ್ನಡದಲ್ಲಿ ಇದೇ ಮೊದಲೆಂಬುದು ಗಮನಾರ್ಹ. ಕರ್ನಾಟಕದ 21 ಮಂದಿ ಸಮಕಾಲೀನ ಕಲಾವಿದರನ್ನು ಸಂದರ್ಶಿಸಿ ಅವರು ಸಾಧನೆಗಳ ಪಟ್ಟಿ (ಬಯೋಡೇಟ) ಇರಿಸಿಕೊಂಡು ಬೇರೆಯವರ ಹೇಳಿಕೆಗಳನ್ನೂ ಗಮನಿಸಿ ರಚಿಸಿದ ಪುಸ್ತಕ 'ಸೃಜನಶೀಲ ಕಲಾವಿದರು'. ಕಲಾವಿದರ ಭಾವಚಿತ್ರದೊಂದಿಗೆ ಒಂದು ಕೃತಿಯ ಛಾಯಾಚಿತ್ರವೂ ಇದ್ದು ಕಲಾ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಆಕರ ಗ್ರಂಥವಾಗಿದೆ.

ಪೂರ್ವ ಜರ್ಮನಿಯ ಕಲಾವಿದ ಪಾಲ್ ಕ್ಲೇ 1924ರಲ್ಲಿ ಉಪನ್ಯಾಸ ನೀಡಿದುದರ ಫಲವಾಗಿ ಬಂದ 'On Modern Art" ಎಂಬ ಕಿರುಹೊತ್ತಿಗೆಯ ಭಾಷಾಂತರ 65 ವರ್ಷಗಳ ನಂತರ ಕನ್ನಡದಲ್ಲಿ ಬೆಳಕು ಕಂಡಿದೆ. ಪೌಲ್ ಕ್ಲೇ

ಇದನ್ನು ರಚಿಸಿದಾಗ ಆಧುನಿಕ ಕಲೆ ಜನರ ಬಳಿಗೆ ಹೋಗಲು ಈ ಬಗೆಯ ಲೇಖನದ ಅವಶ್ಯಕತೆಯಿತ್ತು. ಚಿತ್ರದಲ್ಲಿ ವಸ್ತುವಿಗಿಂತ ಬಣ್ಣ ಹಾಗೂ ಭಾವನೆಗಳೇ ಮುಖ್ಯವೆಂದು ಚಿತ್ರವನ್ನು ಸಂಗೀತದಂತೆ ಅನುಭವಿಸಬೇಕಲ್ಲದೆ ಸಾಹಿತ್ಯದಂತೆ ಓದಬಾರದೆಂದು ಹಲವಾರು ದೃಷ್ಟಾಂತಗಳ ಮೂಲಕ ಹೇಳಬೇಕಾದ ಪರಿಸ್ಥಿತಿಯಿತ್ತು. ನಮ್ಮಲ್ಲಿಯೂ ನವ್ಯಕಾವ್ಯ ಬಂದಾಗ ಅದನ್ನು ಸಮರ್ಥಿಸುವ ಅನೇಕ ಲೇಖನಗಳು ಬಂದವು. ಈ ದಿಸೆಯಲ್ಲಿ ಸಾಕಷ್ಟು ರೇಖಾ ಚಿತ್ರಗಳಿಂದ ಹೊರಬಂದಿರುವ ಈ ಅನುವಾದ ಜನಸಾಮಾನ್ಯರಿಗಿಂತ ವಿಚಾರಶೀಲರಿಗೆ ಉಪಯುಕ್ತವಾದುದೆಂದು ಹೇಳಬಹುದು. ಕೆಲವು ಬಣ್ಣಗಳಿಂದಲೇ ನಿರ್ವಹಿಸಬಹುದಾದ ಆಧುನಿಕ ಚಿತ್ರಕಲೆಯ ಒಂದು ಪ್ರಕಾರದ ವಿನಾ ಪ್ರಪಂಚದಾದ್ಯಂತ ಉಳಿದ ಚಿತ್ರಕಲೆಗಳೆಲ್ಲಾ ರೇಖಾ ಪ್ರಧಾನವಾದುದು. ರೇಖಾ ಚಿತ್ರವನ್ನು ವರ್ಣಚಿತ್ರದ ಪಿತೃ ಎಂದು ಕರೆಯುವುದುಂಟು. ರೇಖಾಚಿತ್ರ ಪುಸ್ತಕದಲ್ಲಿ ರೇಖಾಚಿತ್ರಗಳ ಐತಿಹಾಸಿಕ ಬೆಳವಣಿಗೆ, ಸಾಧ್ಯಾಸಾಧ್ಯತೆ, ಬಳಕೆಯಾಗಿರುವ ರೀತಿ ಇತ್ಯಾದಿ ಕುರಿತು ವಿವಿಧ ಲೇಖಕರ ಏಳು ಕೃತಿಗಳಿದ್ದು ಸಂಪಾದಕರು ತಮ್ಮ ಮಾತಿನಲ್ಲಿ ಇನ್ನಷ್ಟು ವಿವರಗಳನ್ನು ನೀಡಿದ್ದಾರೆ. ಮುಖಪುಟಕ್ಕೆ ಹೆಬ್ಬಾರರು ರಚಿಸಿದ ರೇಖಾಚಿತ್ರ ಹಾಕಿರುವುದೂ ಔಚಿತ್ಯಪೂರ್ಣವಾಗಿದೆ.

ಚಿತ್ರಕಲೆಯನ್ನು ಕುರಿತು ಕನ್ನಡದಲ್ಲಿ ಸದ್ಯಕ್ಕೆ ಏಕೈಕವಾಗಿ ಹೊರಬರುತ್ತಿರುವ 'ಕ್ಯಾನ್ವಾಸ್' ಪತ್ರಿಕೆಯ ಆರು ಸಂಚಿಕೆಗಳು 1991ರಲ್ಲಿ ಬಂದವು. ಸಂಪಾದಕರಾದ ಎಂ. ಎಸ್. ಮೂರ್ತಿ ಕಲಾವಿದರೂ ಹೌದು. ಪತ್ರಿಕೆಯಲ್ಲಿ ವಾಸುದೇವ್ ಅವರ ಜೀವನ ಚರಿತ್ರೆಯೂ ಸೇರಿದಂತೆ ಸಮಕಾಲೀನ ಕಲೆ ಕುರಿತ ಹಲವಾರು ಉಪಯುಕ್ತ ಲೇಖನಗಳು ಇದ್ದವು. ಉಳಿದಂತೆ ಕರ್ನಾಟಕದ ಎಲ್ಲ ಪ್ರಮುಖ ಕನ್ನಡ ಮತ್ತು ಇಂಗ್ಲಿಷ್ ಪತ್ರಿಕೆಗಳು ಕರ್ನಾಟಕದ ಚಿತ್ರಕಲೆಯನ್ನು, ಕಲಾವಿದರನ್ನು ಕುರಿತು ಸಾಕಷ್ಟು ಲೇಖನಗಳನ್ನು ಈ ಅವಧಿಯಲ್ಲಿ ಪ್ರಕಟಿಸಿದರಲ್ಲದೆ ಪ್ರದರ್ಶನಗಳ ವಿಮರ್ಶೆಗಳನ್ನು ನಿಯಮಿತವಾಗಿ ಮಾಡಿದವು. (ಪ್ರಸ್ತುತ ಲೇಖನಕ್ಕೆ ಮುಖ್ಯ ಆಧಾರ ಈ ಪತ್ರಿಕಾ ಪ್ರಕಟಣೆಗಳೇ ಆಗಿವೆ)

## ಕಲಾಶಾಲೆಗಳು

ಹಲವಾರು ವರ್ಷಗಳ ಹೋರಾಟದಿಂದ ಕರ್ನಾಟಕದ ನಾಲ್ಕು ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿ ಪದವಿ ಹಾಗೂ ಸ್ನಾತಕೋತ್ತರ ಪದವಿಯನ್ನು ಚಿತ್ರಕಲೆಯನ್ನೇ ಪ್ರಧಾನ ವಿಷಯವಾಗಿ ತೆಗೆದುಕೊಂಡು ಅಭ್ಯಸಿಸುವ ಅವಕಾಶ ಕರ್ನಾಟಕದಲ್ಲಿ ಈಗ ಇದೆ. ವಿಶ್ವವಿದ್ಯಾಲಯ ಆಯ್ಕೆ ಮಾಡಿದ ಕಲಾಶಾಲೆಗಳಲ್ಲಿ ಈ ಸೌಲಭ್ಯವಿದ್ದು 1991ನೇ ಸಾಲಿನಲ್ಲಿ ಈ ಶಾಲೆಗಳು ವೈಯುಕ್ತಿಕವಾಗಿ ಕಲೆಯನ್ನು ಕುರಿತು ಸಾಕಷ್ಟು ಕೆಲಸ ಮಾಡಿದ್ದು ಇಲ್ಲಿ ದಾಖಲಾಗಬೇಕಾದದ್ದು ಅತ್ಯವಶ್ಯಕ.

## ಆದರ್ಶ ಕಲಾಶಾಲೆ, ಗುಲಬರ್ಗಾ

ಗುಲಬರ್ಗಾ ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿರುವ ಆದರ್ಶ ಕಲಾಶಾಲೆಯ (ಐಡಿಯಲ್ ಫೈನ್ ಆರ್ಟ್ ಸೊಸೈಟಿಯವರ ಅಂಗ ಸಂಸ್ಥೆ) ಆಶ್ರಯದಲ್ಲಿ ಕೇಂದ್ರ ಲಲಿತಕಲಾ ಅಕಾಡಮಿಯ ದಕ್ಷಿಣ ವಲಯದವರು 15–1–91 ರಂದು ಸುಡಾವೆ ಮಣ್ಣಿನ ಶಿಲ್ಪಗಳ (ಟೆರಕೋಟ) ಶಿಬಿರವೊಂದನ್ನು ಏರ್ಪಡಿಸಿದ್ದು ದಕ್ಷಿಣ ರಾಜ್ಯಗಳ 15 ಕಲಾವಿದರು ಭಾಗವಹಿಸಿದ್ದರು. 23 ರಂದು ಅದರ ಮುಕ್ತಾಯ ಸಮಾರಂಭ ಹಾಗೂ ಪ್ರದರ್ಶನ ಏರ್ಪಟ್ಟಿತ್ತು. ಫೆಬ್ರವರಿ 16 ರಿಂದ 28 ರ ವರೆಗೆ ದೆಹಲಿಯಲ್ಲಿ ನಡೆದ ನಾಲ್ಕನೆಯ ರಾಷ್ಟ್ರೀಯ ಕಲಾಮೇಳದಲ್ಲಿ ಇಲ್ಲಿಯ ವಿದ್ಯಾರ್ಥಿಗಳು ಪಾಲುಗೊಂಡರು. 20–3. ರಿಂದ ಕಾಲೇಜಿನಲ್ಲಿ 1991ರ 'ಕಲಾ ಮಹೋತ್ಸವ' ವಿದ್ದು ಬಹುಮಾನಗಳೊಂದಿಗೆ ವಾರ್ಷಿಕೋತ್ಸವವನ್ನು ಆಚರಿಸಲಾಯಿತು. ಪ್ರಧಾನಿ ನರಸಿಂಹರಾವ್ ಅವರ ಪುತ್ರಿ ಕಲಾವಿದೆ ಎಸ್. ವಾಣಿದೇವಿ ಅವರು ಜುಲೈ ತಿಂಗಳಿನಲ್ಲಿ ಅತ್ಯಂತ ಬಂದೋಬಸ್ತಿನಲ್ಲಿ ಶಾಲೆಗೆ ಭೇಟಿ ನೀಡಿ ತಮ್ಮ ಮೆಚ್ಚುಗೆಯನ್ನು ಪ್ರಕಟಿಸಿದರು. 22–8ರಂದು ಭಾರತಿ ಶಿವಾಜಿ ಅವರು ಭರತನಾಟ್ಯ 'ಸ್ಪಿಕ್ ಮ್ಯಾಕೆ' ಅವರ ಆಶ್ರಯದಲ್ಲಿ ನಡೆಯಿತು. ಅದೇ ತಿಂಗಳು ಬಳ್ಳಾರಿಯಲ್ಲಿ ನಡೆದ ರಾಷ್ಟ್ರೀಯ ಭಾವೈಕ್ಯತಾ ಶಿಬಿರದಲ್ಲಿ ಪಾಲುಗೊಂಡಿದ್ದ ಶಾಲೆಯ ವಿದ್ಯಾರ್ಥಿಗಳಾದ ಎಸ್. ಹುಲಿಮನಿ ಮತ್ತು ಎನ್.ವಿ. ಶರಣಬಸವೇಶ್ ಅವರುಗಳು ಪ್ರಶಸ್ತಿ ವಿಜೇತರಾದರು. ಮೇ ತಿಂಗಳಿನಲ್ಲಿ ತುಮಕೂರಿನಲ್ಲಿ ನಡೆದ ಕಲಾ ಶಿಬಿರದಲ್ಲಿ ಪ್ರಾಧ್ಯಾಪಕರಾದ ಎಂ.ಬಿ. ಲೋಹರ್, ಮೋಹನ್ ಸಿತನೂರ್ ಮತ್ತು ಬಸವರಾಜ ಜಾನೆ ಅವರುಗಳು ಭಾಗವಹಿಸಿದ್ದರು.

ಸೆಪ್ಟಂಬರ್ 5 ರಿಂದ 14ರ ವರೆಗೆ ವಿಜಯ ಬಾಗೋಡಿ ಅವರ ನಿರ್ದೇಶನದಲ್ಲಿ ಮರಗೆತ್ತನೆ ಶಿಬಿರವೊಂದು ನಿಯೋಜಿತವಾಗಿತ್ತು. 26ರಿಂದ ಎಂಟು ದಿನಗಳ ಕಾಲ ಕಾಶ್ಮೀರದ ರಾಜೇಂದ್ರ ಪಟವಾರಿ ಅವರಿಂದ ಮರಗೆತ್ತನೆಯ ಪ್ರಾತ್ಯಕ್ಷಿಕೆ ನಡೆಯಿತು. ಅಕ್ಟೋಬರ್ 1 ರಿಂದ 10ರ ವರೆಗೆ ಗ್ರಾಫಿಕ್ ಕ್ಯಾಂಪ್ ಹಾಗೂ 10 ರಿಂದ 15ರ ವರೆಗೆ ಜಲವರ್ಣ ಚಿತ್ರಗಳ ಪ್ರದರ್ಶನ ನಡೆಯಿತು. ಸಿಕಂದರಾಬಾದಿನ ಪಿ.ಎಸ್. ಚಂದ್ರಶೇಖರ್ ಅವರು 24–9–ರಿಂದ ನಾಲ್ಕು ದಿನಗಳ ಕಾಲ ಸಂದರ್ಶಕ ಪ್ರಾಧ್ಯಾಪಕರಾಗಿ ಬಂದಿದ್ದರು. 28–9ರಲ್ಲಿ ಗದಗ್‌ನ ವಿಜಯ ಕಲಾವಿದ್ಯಾಲಯದ ಕಲಾಪ್ರದರ್ಶನದಲ್ಲಿ ಆದರ್ಶ ಶಾಲೆಯ ವಿದ್ಯಾರ್ಥಿಗಳಾದ ಈರಣ್ಣ, ಲಕ್ಷ್ಮೀಕಾಂತ್, ಅನಿಲ್ ಕುಮಾರ್, ಪ್ರಕಾಶ್ ಕುರ್ಜಗಿ ಹಾಗೂ ಉಪಾಧ್ಯಾಯ ಬಸವರಾಜ ಜಾನೆ ಅವರುಗಳು ಪ್ರಶಸ್ತಿ ಪಡೆದರು. 7–10 ರಿಂದ ಮೂರು ದಿನ ಹೈದ್ರಾಬಾದ್‌ನ ಕೃಷ್ಣನಿಶ್ಯಾಮ್ ಅವರಿಂದ ಛಾಯಾಚಿತ್ರ ಕಲೆ ಕುರಿತು ಪ್ರಾತ್ಯಕ್ಷಿಕೆ ಉಪನ್ಯಾಸ ನೆರವೇರಿತು. 1991ನೇ ಸಾಲಿನ ಮೈಸೂರು ದಸರಾ ಪ್ರದರ್ಶನದಲ್ಲಿ (10–9–91) ಶಾಲೆಯ ವಿದ್ಯಾರ್ಥಿಗಳಾದ ಆರ್.ಜಿ. ಈರಣ್ಣ,

ಬಿ. ದಿನೇಶ್, ಬಿ. ಬಸವರಾಜ್, ಎಂ.ಎಸ್. ಅಮೃತ್, ಪಂಪಾವತಿ, ಸುಗುಣ, ಎಂ.ಬಿ. ಪಾಟೀಲ್ ವಿ.ಎಂ. ಚಂದ್ರಶೇಖರ್ ಅವರುಗಳು ಬಹುಮಾನ ಪಡೆದರು.

ಅಕ್ಟೋಬರ್ 15ರಿಂದ ಪಾಂಡಿಚೇರಿಯಲ್ಲಿ ನಡೆದ ಅಖಿಲಭಾರತ ರೇಖಾ ಚಿತ್ರ ಶಿಬಿರದಲ್ಲಿ ಪ್ರಕಾಶ್ ಕುರ್ಜಿಗಿ ಮತ್ತು ಚಿತ್ರಶೇಖರ್ ಅವರು ಭಾಗವಹಿಸಿ ತಲಾ 2000 ರೂ ಗಳ ಬಹುಮಾನವನ್ನು ಪಡೆದರು. 12–11 ರಿಂದ 21ರ ವರೆಗೆ ಸೊಂಡೂರಿನ ನಂದಿಹಳ್ಳಿಯಲ್ಲಿ ನಡೆದ ಎಸ್.ಎಸ್.ಎಸ್. ಕ್ಯಾಂಪ್‌ನಲ್ಲಿ ಎಂ. ಗೌರೀಶಂಕರ್ ಮತ್ತು ಕೇದಾರ್‌ನಾಥ್ ಅವರು ಪಾಲುಗೊಂಡಿದ್ದರು. 20–11ರಿಂದ ತಿಂಗಳ ಕಾಲ ನಾಗಪುರದಲ್ಲಿ ನಡೆದ ದಕ್ಷಿಣ ಭಾರತ ವಲಯದವರ ನಾಟಕ ಶಿಬಿರದಲ್ಲಿ ಶಾಲೆಯಿಂದ 30 ವಿದ್ಯಾರ್ಥಿಗಳು ಪಾಲುಗೊಂಡು ಕೊನೆಯ ದಿನ ನಾಟಕವೊಂದನ್ನು ಪ್ರದರ್ಶಿಸಿದರು. 18–12ರಲ್ಲಿ ಗುಲಬರ್ಗ ವಿಶ್ವವಿದ್ಯಾಲಯದವರ ಚಿತ್ರಕಲಾ ಪ್ರದರ್ಶನದಲ್ಲಿ ಕಾಲೇಜಿನ ಎಂ.ಬಿ ಲೋಹರ್, ಬಸವರಾಜ್, ಜಿ. ಪ್ರಕಾಶ್ ಅವರು ತಲಾ 2,000 ರೂ. ಗಳ ಬಹುಮಾನ ಪಡೆದರು. 23–12. ರಿಂದ ದೆಹಲಿಯಲ್ಲಿ ಆರಂಭವಾದ ಐದನೆಯ ರಾಷ್ಟ್ರೀಯ ಕಲಾಮೇಳದಲ್ಲಿ ಶಾಲೆಯಿಂದ 26 ಕಲಾವಿದರು ಭಾಗವಹಿಸಿದ್ದರಲ್ಲದೆ ಪ್ರದರ್ಶನಮಳಿಗೆಯಲ್ಲಿ "ಉತ್ತಮ ಪ್ರದರ್ಶನ" (ಬೆಸ್ಟ್ ಡಿಸ್‌ಪ್ಲೇ) ಪ್ರಶಸ್ತಿಯನ್ನೂ ಪಡೆದರು.

ತನ್ನದೇ ಆದ ಭವ್ಯ ಕಟ್ಟಡ ಹೊಂದಿರುವ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆ ಕಲಾಶಾಲೆ, ಕಲಾ ಕಾಲೇಜು, ಪ್ರದರ್ಶನಾಂಗಣ, ವಸ್ತು ಪ್ರದರ್ಶನಾಲಯ, ಉತ್ತಮ ಗ್ರಂಥಾಲಯ ಸುಸಜ್ಜಿತ ಗ್ರಾಫಿಕ್ ಸ್ಟುಡಿಯೋ ಇತ್ಯಾದಿ ಎಲ್ಲ ಸೌಲಭ್ಯಗಳನ್ನು ಹೊಂದಿದ್ದು ಕಲಾವಿದ ಪ್ರೊ। ವಿ.ಜಿ. ಅಂದಾನಿ ಅವರ ನೇತೃತ್ವದಲ್ಲಿ ಕಳೆದ 26 ವರ್ಷಗಳಿಂದ ನಿರಂತರವಾಗಿ ಬೆಳೆಯುತ್ತಲಿದೆ.

## ಕಲಾಶಾಲೆ, ದಾವಣಗೆರೆ

ಸರ್ಕಾರಿ ಕಲೆ ಮತ್ತು ಕರಕುಶಲ ಶಾಲೆ ದಾವಣಗೆರೆಯಲ್ಲಿ 1963 ರಲ್ಲಿ ಸ್ಥಾಪಿತವಾಗಿದ್ದು 1991ನೇ ಸಾಲಿನಲ್ಲಿ ಏಪ್ರಿಲ್ 11 ರಿಂದ ಮೂರು ದಿನಗಳ ಕಾಲ ಕಲಾ ಮಹೋತ್ಸವವನ್ನು ಆಚರಿಸಿದ್ದು ಅದೇ ಅವಧಿಯಲ್ಲಿ ಮಂಗಳೂರಿನ ಪೀಟರ್ ಲೂಯಿಸ್ ಅವರಿಂದ ಪ್ರಾತ್ಯಕ್ಷಿಕೆ ಉಪನ್ಯಾಸ ಏರ್ಪಟ್ಟಿತ್ತು. ಇದೇ ಸಂದರ್ಭದಲ್ಲಿ ಶಾಲೆಯ ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳು ಸೇರಿ ಕಲಾ ಶಿಬಿರ ನಡೆಸಿದರು. ನವೆಂಬರ್ 19 ರಂದು ಇಂದಿರಾ ಗಾಂಧಿ ಅವರ ಜನ್ಮದಿನದ ಅಂಗವಾಗಿ 'ಇಂದಿರ ಅವರ ಸಾಧನೆ' ಗಳನ್ನು ಚಿತ್ರಕಲಾ ಸ್ಪರ್ಧೆಯ ಮೂಲಕ ಸ್ಥಳೀಯ ಕಾಂಗ್ರೆ ಘಟಕದವರ ವತಿಯಿಂದ ಏರ್ಪಡಿಸಿದ್ದು ಶಾಲೆಯ 90 ವಿದ್ಯಾರ್ಥಿಗಳಲ್ಲಿ ಭಾವುರಾಯ ಪತ್ತಾರ್, ವಿಘ್ನೇಶ್ವರ ಹೆಗಡೆ, ಮತ್ತು

ರವೀಂದ್ರ ವಿಶ್ವಜ್ಞ ಅವರುಗಳು ಕ್ರಮವಾಗಿ ಪ್ರಥಮ, ದ್ವಿತೀಯ ಹಾಗೂ ತೃತೀಯ ಬಹುಮಾನಗಳನ್ನು ಪಡೆದರು. ನವೆಂಬರ್ 26 ರಿಂದ 28ರವರೆಗೆ ಚಿತ್ರದುರ್ಗದಲ್ಲಿ ನಡೆದ 'ಚಿತ್ರದುರ್ಗ ಉತ್ಸವ'ದಲ್ಲಿ ಶಾಲೆಯಿಂದ 50 ವಿದ್ಯಾರ್ಥಿಗಳು ಹಾಗೂ ಉಪನ್ಯಾಸಕರಾದ ಬಿ.ವಿ. ಗಣೇಶಗುಡಿ, ಬಿ.ಆರ್. ಕೊರ್ತಿ, ಮತ್ತು ರವೀಂದ್ರ ಕಮ್ಮಾರ್ ಅವರು ಭಾಗವಹಿಸಿ ದುರ್ಗದ ಭೂದೃಶ್ಯಗಳನ್ನು ಚಿತ್ರಿಸಿ ಪ್ರದರ್ಶಿಸಿದರು. ರವೀಂದ್ರ ಕಮ್ಮಾರ್ ಅವರು ಮೈಸೂರಿನಲ್ಲಿ ನಡೆದ ಯುವ ಕಲಾವಿದರ ಶಿಬಿರದಲ್ಲಿ (26–9) ಭಾಗವಹಿಸಿದರು. ಡಿಸೆಂಬರ್ ತಿಂಗಳಲ್ಲಿ ಗದಗಿನ ವಿಜಯ ಕಲಾ ಸಂಸ್ಥೆಯವರ ಅಖಿಲ ಭಾರತ ಪ್ರದರ್ಶನದಲ್ಲಿ ಬಿ.ವಿ. ಗಣೇಶಗುಡಿ ಅವರಿಗೆ 'ಅರ್ಹತಾ ಪತ್ರ' ದೊರೆತಿದ್ದು ಪ್ರಾಚಾರ್ಯ ವಿ.ಬಿ. ಹಿರೇಗೌಡರ್ ಅವರೂ ಸೇರಿದಂತೆ ಉಪನ್ಯಾಸಕ ವರ್ಗದ ಶಂಕರ್ ಪಾಟೀಲ್, ವೈ. ಎಚ್. ಸೂಗೂರ್ ಮತ್ತು ಕೆ.ಡಿ. ಪತ್ತಾರ್ ಅವರುಗಳ ಕೃತಿಗಳು ಪ್ರದರ್ಶನಗೊಂಡವು. ಅಂತೆಯೇ ಐಡಿಯಲ್ ಫೈನ್ ಆರ್ಟ್ಸ್ ಕಾಲೇಜಿನವರು ನಡೆಸಿದ ಅಖಿಲ ಭಾರತ ಕಿರು ಗಾತ್ರದ (ಚಿಕಣಿ) ಚಿತ್ರಕಲಾಪ್ರದರ್ಶನದಲ್ಲಿ ಮೇಲ್ಕಂಡ ಉಪನ್ಯಾಸ ವರ್ಗದವರಲ್ಲದೆ ಪ್ರಾಚಾರ್ಯರೊಂದಿಗೆ (ಶಂಕರಪಾಟೀಲರ ವಿನಾ) ಬಿ.ಆರ್. ಕೊರ್ತಿ, ಸಯಿದಾಬೇಗಂ ಅವರುಗಳ ಕಲಾಕೃತಿಗಳಿಗೂ ಪ್ರದರ್ಶನಗೊಂಡವು. ವಿ.ಬಿ. ಹಿರೇಗೌಡರಿಗೆ ನಾಗಪುರದಲ್ಲಿ ನಡೆದ ಆರನೆಯ ಅಖಿಲ ಭಾರತ ಕಲಾ ಪ್ರದರ್ಶನದಲ್ಲಿ 3,000ರೂಗಳ ಬಹುಮಾನ ಬಂದಿತಲ್ಲದೆ ಕರ್ನಾಟಕ ರಾಜ್ಯ ಲಲಿತಕಲಾ ಅಕಾಡಮಿಯು 1991ನೇ ಸಾಲಿನ ಪ್ರಶಸ್ತಿಗೆ ಶ್ರೀಯುತರನ್ನು ಆಯ್ಕೆ ಮಾಡಿದೆ.

ಶಾಲೆಯ ವಿದ್ಯಾರ್ಥಿಗಳು ವರ್ಷವಿಡೀ ಗ್ರಾಮಾಂತರ ಪ್ರದೇಶಗಳಿಗೆ ಆಗಾಗ್ಗೆ ಹೋಗಿ ಪ್ರಾತ್ಯಕ್ಷಿಕೆ ಹಾಗೂ ಚಿತ್ರಕಲಾ ಪ್ರದರ್ಶನ ನೀಡಿ ಸಮಕಾಲೀನ ಕಲೆ ಪ್ರಚುರಪಡಿಸುವ ಕಾರ್ಯಕ್ರಮ ಯಶಸ್ವಿಯಾಗಿ ನಡೆಸಿದರು.

## ಕಾವ, ಮೈಸೂರು

ಮೈಸೂರಿನ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ (CAVA) ಗೆ 1991ನೇ ಸಾಲಿನಲ್ಲಿ ಸ್ಥಿರವಾದ ಆಡಳಿತಾಧಿಕಾರಿಯಿಲ್ಲದೆ ಪಠ್ಯೇತರ ಕಾರ್ಯಕ್ರಮಗಳು ವಿಶೇಷವಾಗಿ ನಡೆಯಲಿಲ್ಲ. ಮೈಸೂರು ವಿಶ್ವವಿದ್ಯಾನಿಲಯದ ಅಧೀನದಲ್ಲಿರುವ ಕಾಲೇಜಿನ ಕಟ್ಟಡಗಳು ಇಲವಾಲದ ಪ್ರಕೃತಿಮಡಿಲಿನ 'ಆಲೋಕ' ಹಾಗೂ ನಗರ ಪ್ರದೇಶದ ಕಟ್ಟಡದಲ್ಲಿ (ಸಯ್ಯಾಜಿರಾವ್ ರಸ್ತೆಯ) ಹಂಚಿ ಹೋಗಿದೆ. ಸುಸಜ್ಜಿತ ಗ್ರಾಫಿಕ್ ಸ್ಟುಡಿಯೋ, ಸುಡಾವೆ ಮಣ್ಣಿನ ಕೃತಿಗಳನ್ನು ಬೇಯಿಸಲು ಆಧುನಿಕ ಬೃಹತ್ ಒಲೆ, ಶಿಲ್ಪ ಹಾಗೂ ತೈಲ ಚಿತ್ರರಚನೆಗೆ ಸ್ಟುಡಿಯೋ ಹಾಗೂ ಛಾಯಚಿತ್ರಗಳನ್ನು ಸಂಸ್ಕರಿಸಲು ಅಗತ್ಯವಾದ ಕೊಠಡಿಗಳಿದ್ದು ಶಾಲೆಯ 127 ವಿದ್ಯಾರ್ಥಿಗಳು ಸುಮಾರು 145 ಕಲಾಕೃತಿಗಳನ್ನು ಬೆಂಗಳೂರಿನ ವೆಂಕಟಪ್ಪ

ಚಿತ್ರಶಾಲೆಯಲ್ಲಿ ಜೂನ್ ಒಂದರಿಂದ ವಾರಗಳ ಕಾಲ ಪ್ರದರ್ಶಿಸಿದರು. ಜಲ ತೈಲ, ಗ್ರಾಫಿಕ್, ಶಿಲ್ಪಗಳು, ಛಾಯಾಚಿತ್ರ ಇತ್ಯಾದಿ ಎಲ್ಲ ಪ್ರಕಾರದ ಕೃತಿಗಳೂ ಇದ್ದು ಆಧುನಿಕ ಸಂವೇದನೆಯನ್ನು ವಿದ್ಯಾರ್ಥಿ ದಿಸೆಯಲ್ಲಿಯೇ ಕಾಣಬಹುದಾಗಿತ್ತು. ಜನವರಿ ಎಂಟರಂದು ಮದ್ರಾಸ್‌ನಲ್ಲಿ ನಡೆದ ಕೇಂದ್ರ ವಲಯ ಲಲಿತಕಲಾ ಅಕಾಡಮಿಯ ಪ್ರದರ್ಶನದಲ್ಲಿ 'ಕಾವಾ'ದ ಪ್ರಾಧ್ಯಾಪಕ ಎನ್.ಎಸ್. ಪ್ರದೀಪ್‌ಕುಮಾರ್ ಅವರಿಗೆ ಅರ್ಹತಾಪತ್ರ ದೊರೆಯಿತು. ಮಾರ್ಚಿಯಲ್ಲಿ ದಕ್ಷಿಣ ವಲಯ ಕೇಂದ್ರದವರು ಪುಣೆಯಲ್ಲಿ ಏರ್ಪಡಿಸಿದ್ದ ಶಿಲ್ಪ ಶಿಬಿರದಲ್ಲಿ ಇನ್ನೊಬ್ಬ ಪ್ರಾಧ್ಯಾಪಕ ವಿ.ಎ. ದೇಶಪಾಂಡೆ ಅವರು ಭಾಗವಹಿಸಿದ್ದರು. ಕಾಲೇಜಿನಲ್ಲಿ ಕಲಾವಿದ ಬಿ.ವಿ. ಸುರೇಶ್ ಅವರ ನೇತೃತ್ವದಲ್ಲಿ ತೈಲ ಚಿತ್ರದ ಶಿಬಿರವೊಂದು ಈ ಅವಧಿಯಲ್ಲಿ ನೆರವೇರಿತು.

ಒಟ್ಟಿನಲ್ಲಿ 1991ರಲ್ಲಿ ರಾಜಧಾನಿಯಲ್ಲಿ ಹೆಚ್ಚಿನ ಕಲಾಪ್ರದರ್ಶನಗಳೂ ಜಿಲ್ಲಾ ಹಾಗೂ ತಾಲೂಕು ಕೇಂದ್ರಗಳಲ್ಲಿ ಕಲಾಪ್ರದರ್ಶನ, ಶಿಬಿರ, ಸಮ್ಮೇಳನ ಇತ್ಯಾದಿಗಳೂ ನಡೆದವು. ಬೆಂಗಳೂರಿನಲ್ಲಿ ಹೊರ ರಾಜ್ಯ ಕಲಾವಿದರಿಗೂ ಜಿಲ್ಲಾ ಮಟ್ಟದಲ್ಲಿ ಸ್ಥಳೀಯ ಕಲಾವಿದರಿಗೂ ಪ್ರೋತ್ಸಾಹ ದೊರೆಯಿತು. ಕರ್ನಾಟಕದ ಹಲವಾರು ಕಲಾವಿದರು ಹೊರ ರಾಜ್ಯದಲ್ಲಿ ಪ್ರದರ್ಶನ ನಡೆಸಿ ಹೆಸರು ಗಳಿಸಿದರು. ಅಕಾಡಮಿ ಇಲ್ಲವಾದರೂ ಕಾರ್ಯಾಲಯದ ಸಿಬ್ಬಂದಿಗಳು ರಾಜ್ಯ–ಹೊರರಾಜ್ಯಗಳಲ್ಲಿ ಹಲವಾರು ಉಪಯುಕ್ತ ಕಾರ್ಯಕ್ರಮ ನೆರವೇರಿಸಿದರು. ರಾಜ್ಯದ ಕಲಾವಿದರು, ಕಲಾ ಸಹೃದಯರು, ವಿಮರ್ಶಕರು ಹಾಗೂ ಗ್ರಾಹಕರುಗಳಿಗೆ ಬಿಡುವಿಲ್ಲದಷ್ಟು ಚಟುವಟಿಕೆಗಳು ಈ ಅವಧಿಯಲ್ಲಿ ನೆರವೇರಿತು.

* * *

ಕುಕ್ಕೆಯವರ ಕೃತಿ 'ಮೇಘಸಂದೇಶ'



ಹನುಮಯ್ಯ ಅವರ ಕೃತಿ 'ನಿಸರ್ಗ'





ವಾಸುದೇವ್ ಅವರ 'ಸೂರ್ಯ'

ಸುಬ್ರಹ್ಮಣ್ಯಂ ಅವರ ಕೃತಿ



ರಮೇಶ್‌ರಾವ್ ಅವರ ಕೃತಿ





ಶೆಣೈಯವರ ‘ಬಂಡೆಗಳು’



ಗಾಯತ್ರಿಯವರ ಕೃತಿ

**1991ರ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ ವಿಜೇತರು**

1. ವೆಂಕೋಬಪ್ಪ ಕೃಷ್ಣಪ್ಪ ಚಿತ್ರಗಾರ
   ಎ.ಎಸ್. ಪಾಟೀಲ್
   ದಿ॥ ಬಸವರಾಜ ಹಳಿಜೋಳ
   ವಿ.ಬಿ. ಹಿರೇಗೌಡರ್
   ನಾಗಮಂಗಲ ಪುಟ್ಟಾಚಾರ್ಯ ಶ್ರೀನಿವಾಸಾಚಾರ್ಯ

## ಛಾಯಾಚಿತ್ರಕ್ಕಾಗಿ ಪ್ರಶಸ್ತಿ

ಮೈಸೂರು ಫೋಟೋಗ್ರಾಫಿಕ್ ಆಸೋಸಿಯೇಷನ್ನಿನ ಅಧ್ಯಕ್ಷರಾದ ಎಸ್. ತಿಪ್ಪೇಸ್ವಾಮಿ ಅವರಿಗೆ ಈ ವರ್ಷ ಪ್ರಕೃತಿ ಛಾಯಾಚಿತ್ರ ವಿಭಾಗದಲ್ಲಿ ಅವರು ಮಾಡಿದ ಗಣನೀಯ ಕೆಲಸಕ್ಕಾಗಿ ಗ್ರೇಟ್ ಬ್ರಿಟನ್ನಿನ ರಾಯಲ್ ಫೋಟೋಗ್ರಾಫಿಕ್ ಸಂಸ್ಥೆ ತನ್ನ ಫೆಲೋಶಿಫ್ ಪ್ರಶಸ್ತಿ ನೀಡಿ ಗೌರವಿಸಿದೆ.

ನಿಸರ್ಗ ಛಾಯಾಚಿತ್ರ ವಿಭಾಗದಲ್ಲಿ ವರ್ಣಚಿತ್ರಕ್ಕಾಗಿ ಈ ಪ್ರಶಸ್ತಿ ಅವರಿಗೆ ದೊರಕಿದೆ. ಇಂಥ ಪ್ರಶಸ್ತಿಗಳಿಸಿದ ಭಾರತೀಯರಲ್ಲಿ ಇವರೇ ಮೊದಲಿಗರು.

ಮೈಸೂರು ವಿಶ್ವವಿದ್ಯಾಲಯದ ಪತ್ರಿಕೋದ್ಯಮ ಮತ್ತು ಸಮೂಹ ಸಂಪರ್ಕ ಸ್ನಾತಕೋತ್ತರ ವಿಭಾಗದಲ್ಲಿ ಶ್ರೀ ತಿಪ್ಪೇಸ್ವಾಮಿಯವರು ಕೆಲಸ ಮಾಡುತ್ತಿದ್ದಾರೆ. ಅನೇಕ ರಾಷ್ಟ್ರೀಯ ಅಂತರಾಷ್ಟ್ರೀಯ ಛಾಯಾಸ್ಪರ್ಧೆಯಲ್ಲಿ ಭಾಗವಹಿಸಿ ಬಹುಮಾನ ಗಳಿಸಿದ್ದಾರೆ. 1988ರಲ್ಲಿ ಬೆಲ್ಜಿಯಂನ 'ಫೆಡರೇಶನ್ ಆಫ್ ಇಂಟರ್ ನ್ಯಾಶನಲ್ ಆರ್ಟ್ ಆಫ್ ಫೋಟೋಗ್ರಾಫಿ' ಸಂಸ್ಥೆಯ ಪ್ರಶಸ್ತಿಯೂ ಇವರಿಗೆ ಲಭ್ಯವಾಗಿದೆ. ಪ್ರಶಸ್ತಿಗೆ ಆಯ್ಕೆಯಾದ ಚಿತ್ರಗಳಲ್ಲಿ ಎರಡನ್ನೂ ಇಲ್ಲಿ ಮುದ್ರಿಸಲಾಗಿದೆ.

ನಗರದ ಹೆಸರಾಂತ ಪಕ್ಷಿಗಳ ಛಾಯಾಗ್ರಾಹಕ ಸುದರ್ಶನಂ ಶ್ರೀಧರ್ ಅವರಿಗೂ ಈ ವರ್ಷ ಪ್ರತಿಷ್ಠಿತ ಗ್ರೇಟ್ ಬ್ರಿಟನ್ನಿನ ರಾಯಲ್ ಫೋಟೋಗ್ರಾಫಿಕ್ ಸೊಸೈಟಿಯ ಪ್ರಶಸ್ತಿಯು ದೊರಕಿದೆ.

# ಸಂಗೀತ ಚಟುವಟಿಕೆ

ಬಿ. ವಿ. ಕೆ. ಶಾಸ್ತ್ರಿ

## ಅಂತರಾಷ್ಟ್ರೀಯ ಉತ್ಸವದಲ್ಲಿ ಕರ್ನಾಟಕ ಕಲಾವಿದರು

1991ನೇ ಸಾಲಿನಲ್ಲಿ ರಾಜ್ಯದ ಸಂಗೀತ ಕ್ಷೇತ್ರಕ್ಕೆ ಸಂಬಂಧಿಸಿದ ಬಹು ಮುಖ್ಯ ಘಟನೆಯೆಂದರೆ ಜರ್ಮನಿಯಲ್ಲಿ ನಡೆದ ಫೆಸ್ಟಿವಲ್ ಆಫ್ ಇಂಡಿಯಾ ಅಥವಾ ಭಾರತ ಮಹೋತ್ಸವದಲ್ಲಿ ಕರ್ನಾಟಕದ ಕಲಾವಿದರ ಮುಖ್ಯ ಪಾತ್ರ. ಭಾರತ ಸರಕಾರವು ಏರ್ಪಡಿಸುವ ಅಂತರಾಷ್ಟ್ರೀಯ ಮಟ್ಟದ ಉತ್ಸವಗಳಲ್ಲಿ ಕರ್ನಾಟಕವು ಕಾಣಬರುವುದು ಬಹು ಅಪರೂಪ ಸಂಗತಿಯೇ. ಆದರೆ 1991ರಲ್ಲಿ ಪ್ರಾರಂಭವಾಗಿ 1992ರ ಪೂರ್ವ ಭಾಗದಲ್ಲಿ ಅಂತ್ಯವಾದ ಈ ಉತ್ಸವದಲ್ಲಿ ಪ್ರಾರಂಭೋತ್ಸವ ಮತ್ತು ಮುಕ್ತಾಯ ಸಮಾರಂಭಗಳಲ್ಲಿ ಕರ್ನಾಟಕದ ಕಲಾವಿದರನ್ನು ಭಾಗವಹಿಸಲು ಆಹ್ವಾನಿಸಲಾಯಿತು. ಈ ರೀತಿ ಅಂದರೆ ಉತ್ಸವದ ಪ್ರಾರಂಭ ಮತ್ತು ಅಂತ್ಯ ಎರಡನ್ನೂ ನಡೆಸಲು ಕರ್ನಾಟಕದ ಕಲಾವಿದರು ಆಹ್ವಾನಿತರಾದುದು ಇದೇ ಮೊದಲೆನ್ನಬಹುದು.

ಉತ್ಸವವು ಸಾಂಪ್ರದಾಯಿಕವಾಗಿ 7–9–1991ರಂದು ಜರ್ಮನಿಯ ರಾಜಧಾನಿಯಾದ ಬಾನ್ ನಗರದಲ್ಲಿ ಪ್ರಾರಂಭವಾಯಿತು. ಅದು ನಡೆದ ಸ್ಥಳ– ಆಪೆಡರ್ ಸ್ಟ್ಯಾಟ್–ಅಥವಾ ನಗರದ ಆಪೇರಾ ಹೌಸ್ ಸಭಾಂಗಣ. ಈ ಪ್ರಾರಂಭೋತ್ಸವವನ್ನು ವಿಧಿವತ್ತಾಗಿ ಪ್ರಾರಂಭಿಸಿದವರು ಭಾರತದ ಪ್ರಧಾನಿ ಶ್ರೀ ಪಿ.ವಿ. ನರಸಿಂಹರಾವ್ ಮತ್ತು ಜರ್ಮನಿಯ ಛಾನ್ಸೆಲರ್ ಅವರಾದ ಹೆರ್ ಹೆಲ್ಮುಟ್ ಕೋಹಲ್‌ರವರು. ಪ್ರಾರಂಭ ವಿಧಿಗಳಾದ ನಂತರ ಅರ್ಪಿಸಲಾದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಪಂಚವೀಣಾ ಕಾರ್ಯಕ್ರಮ ಪ್ರಧಾನವಾದುದು.

ಈ ಪಂಚವೀಣಾ ವೃಂದದ ನಾಯಕರು–ಕರ್ನಾಟಕದ ಖ್ಯಾತ ವೈಣಿಕ ವಿ. ದೊರೆಸ್ವಾಮಿ ಅಯ್ಯಂಗಾರರು. ಈ ವೃಂದದಲ್ಲಿದ್ದ ಇತರ ವೈಣಿಕರು ಸಿ. ಕೃಷ್ಣಮೂರ್ತಿ, ವಿ. ದೇಶಿಕಾಚಾರ್, ಡಿ. ಬಾಲಕೃಷ್ಣ ಮತ್ತು ಶಶಿಕಾಂತ್. ಪಕ್ಕವಾದ್ಯಕಾರರಾಗಿ ವಿ. ರಾಜಗೋಪಾಲ್ (ಮೃದಂಗ ಮತ್ತು ಎಂ.ಎ. ಕೃಷ್ಣಮೂರ್ತಿ (ಘಟ) ಇಬ್ಬರೂ ಹೋಗಿದ್ದರು. ಬಾನ್ ನಗರದಲ್ಲಿ ಪ್ರಾರಂಭೋತ್ಸವವಾದ ನಂತರ, ಈ ಕರ್ನಾಟಕ ವೈಣಿಕ ವೃಂದವು ಜರ್ಮನಿಯ

ಇತರ ಪ್ರಮುಖ ನಗರಗಳಾದ ಕೊಲೋನ್, ಬರ್ಲಿನ್, ಸ್ಟುಟ್‌ಗಾರ್ಟ್, ಹ್ಯಾಂಬರ್ಗ್, ಡಾರಮ್‌ಸ್ಟಾಟ್, ಫ್ರೆಡ್ರಿಕ್‌ಷೇಮ್, ಜೆಮಿನಿಟ್ಸ್, ಬೈಲ್‌ಫೀಲ್ಡ್ ಫ್ರೀಬರ್ಗ್, ಕ್ಯಾಸಲ್ ಮತ್ತು ಉಪ್ಪರ್ ಸ್ಟಾಲ್‌ನಲ್ಲಿ ಕಚೇರಿಗಳನ್ನು ಮಾಡಿ ಬಹು ಮೆಚ್ಚಿಗೆ ಗಳಿಸಿದರು. ಈ ಪ್ರತಿಷ್ಠಿತ ಕಲಾ ಮಹೋತ್ಸವದ ಪ್ರಾರಂಭ ಮತ್ತು ಸಮಾರೋಪ ಎರಡೂ ಸಮಾರಂಭಗಳಲ್ಲಿಯೂ ಕರ್ನಾಟಕದ ಸಂಗೀತ ಸಿರಿ ಮೊಳಗಿಸಿದುದು ಉತ್ಸವಕ್ಕೆ ವರ್ಚಸ್ಸು ಮತ್ತು ನಮಗೆ ಹೆಮ್ಮೆಯ ವಿಷಯ

## ಗೌರವ ಪ್ರಶಸ್ತಿಗಳು

ಈ ವರುಷ ರಾಷ್ಟ್ರಮಟ್ಟದಲ್ಲಿ ಪುರಸ್ಕೃತರಾದ ಕಲಾವಿದರಲ್ಲಿ ಮೊದಲನೆಯದಾಗಿ ಸಿ. ಹೊನ್ನಪ್ಪ ಭಾಗವತರು. ಕೇಂದ್ರ ಸಂಗೀತ ನಾಟಕ ಅಕಾಡೆಮಿಯು 1991ರ ವಾರ್ಷಿಕ ಪ್ರಶಸ್ತಿಯನ್ನು ಇತ್ತು ಗೌರವಿಸಿತು. ''ಸಂಗೀತಕ್ಕೆ ಅದರಲ್ಲಿಯೂ ನಾಟ್ಯಸಂಗೀತಕ್ಕೆ ಅವರು ಸಲ್ಲಿಸಿದ ಏಕಪ್ರಕಾರವಾದ ಸೇವೆಯನ್ನು ಮನ್ನಿಸಿ ಅಕಾಡೆಮಿಯು ಪ್ರಶಸ್ತಿಯಿತ್ತು ಗೌರವಿಸುತ್ತಿದೆ'' ಎಂದು ಪ್ರಶಸ್ತಿ ಪತ್ರವು ಸಾರಿದೆ. ಈ ರಾಷ್ಟ್ರಪ್ರಶಸ್ತಿ ದೂರವವರೆಗೂ ಭಾಗವತರು ನಡೆದು ಬಂದ ದಾರಿ ಗಮನಾರ್ಹವಾಗಿದೆ. ಎಷ್ಟು ತೊಡಕುಗಳಿದ್ದರೂ ಕಷ್ಟಗಳು ಒದಗಿದರೂ, ಕಲೆಗೆ ನಿಷ್ಠೆಯಿಂದ ಏಕಪ್ರಕಾರವಾಗಿ ಸಲ್ಲಿಸಿದ ಸೇವೆಗೆ, ಎಂದಾದರೂ ಮಾನ್ಯತೆ ಬಂದೇ ಬರುತ್ತದೆ ಎಂಬ ಅಂಶವನ್ನು ಎತ್ತಿ ತೋರುವಂತಿದೆ.

ಹೊನ್ನಪ್ಪನವರು ಹುಟ್ಟಿದುದು ನೆಲಮಂಗಲ ತಾಲೂಕಿನ ಚೌಡಸಂದ್ರ ಗ್ರಾಮದಲ್ಲಿ. ಬಹು ಬಡಕುಟುಂಬದಲ್ಲಿ. ತಂದೆ ಚಿಕ್ಕಲಿಂಗಪ್ಪನವರು ನೇಯಿಗೆಯ ವೃತ್ತಿ. ಆದರೆ ಗಮಕದ ಗೀಳು. ಆದುದರಿಂದ ಮನೆಯಲ್ಲಿ ಸದಾ ಸಂಗೀತ ವಾತಾವರಣ. ಅದರ ಮಧ್ಯೆ ಬೆಳೆದ ಬಾಲಕ ಹೊನ್ನಪ್ಪನಿಗೆ ಚಿಕ್ಕಂದಿನಿಂದಲೂ ಸಂಗೀತದ ಬಗೆಗೆ ಒಲವು ಮೂಡಿಬಂದುದು ಸಹಜವೇ. ಆದರೆ ಬಹು ಚಿಕ್ಕವನಾಗಿದ್ದಾಗಲೇ ತಂದೆ ತೀರಿ ಹೋಗಿ ಜೀವನಕ್ಕಾಗಿ ಅಲೆವ ಸಂದರ್ಭ ಬಂದಿತು. ಕೊನೆಗೆ ಬೆಂಗಳೂರು ಸೇರಿದ ಹೊನ್ನಪ್ಪನಿಗೆ ಕಷ್ಟದ ದುಡಿಮೆಯ ಕೆಲಸ ದೊರಕಿತು. ತಿಂಗಳ ಸಂಬಳ ಎರಡು ರೂಪಾಯಿ. ಇದರಲ್ಲಿಯೇ ಊಟ ವಸತಿಗಳನ್ನು ನಿರ್ವಹಿಸಿಕೊಂಡ ಈ ಬಾಲಕನಿಗೆ ಸಂಗೀತದ ಗೀಳು ಮಾತ್ರ ತಪ್ಪಲಿಲ್ಲ. ಬೆಳಗಿನ ಹೊತ್ತು ದುಡಿತ. ರಾತ್ರಿಯ ಪಾಠಶಾಲೆಯಲ್ಲಿ ಓದು ಬರಹಗಳ ಕಲಿಕೆ. ಭಜನ ಮಂದಿರಗಳಲ್ಲಿ ಸಂಗೀತದ ಕಲಿಕೆ. ಕ್ರಮೇಣ ಹಾಡುಗಾರಿಕೆ, ಹಾರ್ಮೋನಿಯಂ ತಬಲ ಮುಂತಾದ ವಾದ್ಯಗಳನ್ನು ನುಡಿಸುವುದರ ಕಲಿಕೆ. ಮಧ್ಯೆಮಧ್ಯೆ ತಮ್ಮ ಊರಿನಲ್ಲಿ ನಡೆಯುತ್ತಿದ್ದ ಬಯಲಾಟಗಳಲ್ಲಿ ಪಾತ್ರ ಮಾಡುವುದು. ಹೊನ್ನಪ್ಪನ ಬಾಲ್ಯ ಹೀಗೆ ಕಳೆಯಿತು. ಮುಂದೆ ಸಂಗೀತದ ಕ್ರಮಬದ್ಧ ಕಲಿಕೆ. ಮೊದಲು ಹರಿಕಥಾ ವಿದ್ವಾಂಸರಾದ ಪಾರ್ಥಸಾರಥಿ ಭಾಗವತರು, ಅನಂತರ ಅವರ ಶಿಷ್ಯ ಸಂಬಂಧ ಮೂರ್ತಿ ಭಾಗವತರು, ಮುಂದೆ

ಪ್ರಸಿದ್ಧ ಹಾರ್ಮೋನಿಯಂ ವಿದ್ವಾಂಸರಾದ ಅರುಣಾಚಲಪ್ಪನವರಲ್ಲಿ ನಡೆಯಿತು. ಒಳ್ಳೆಯ ಕಂಠಮಾಧುರ್ಯವುಳ್ಳ ಈ ತರುಣನಿಗೆ ಸಂಗೀತ ಕಚೇರಿಯ ವೇದಿಕೆಯ ಮೇಲೆ ಪ್ರೋತ್ಸಾಹ ದೊರೆಯಲಾರಂಭವಾಯಿತು. ಇಂತಹ ಒಂದು ಕಚೇರಿ ಮಾಡಲು ತಮಿಳುನಾಡಿನ ಸೇಲಂ ನಗರದ ರಸಿಕರು ಆಹ್ವಾನಿಸಿದರು. ಸಂದರ್ಭ– ತ್ಯಾಗರಾಜಾರಾಧನೆ. ಆಗ ಹೊನ್ನಪ್ಪನಿಗೆ ವಯಸ್ಸು 21, ತರುಣನ ಸುಶ್ರಾವ್ಯ ಸಂಗೀತದಿಂದ ಸಂತೋಷಪಟ್ಟ ಅಲ್ಲಿನ ಕಲಾಭಿಮಾನಿಗಳು, ತರುಣ ಹೊನ್ನಪ್ಪನನ್ನು ಹೊನ್ನಪ್ಪ ಭಾಗವತರ್ ಎಂದು ಕರೆದರು. ಅದೇ ಹೆಸರು ನಿಂತಿತು. ಹೆಚ್ಚು ಕಡಿಮೆ ಅದೇ ಸಮಯದಲ್ಲಿ ತಮಿಳು ಚಿತ್ರನಟ ತ್ಯಾಗರಾಜ ಭಾಗವತರು ಯಾವುದೋ ಮೊಕದ್ದಮೆಯಲ್ಲಿ ಸಿಕ್ಕಿ ಜೈಲಿಗೆ ಹೋಗಬೇಕಾಯಿತು. ಆಗ ಅವರು ನಟಿಸುತ್ತಿದ್ದ ಚಿತ್ರದ ತಯಾರಿಕೆ ಪ್ರಾರಂಭವಾಗಿತ್ತು. ಈ ಸಂದಿಗ್ಧದಲ್ಲಿ ನಿರ್ಮಾಪಕರ ಕಣ್ಣಿಗೆ ಹೊನ್ನಪ್ಪ ಭಾಗವತರು ಕಂಡುಬಂದರು. ತಕ್ಷಣ ತ್ಯಾಗರಾಜರ ಭಾಗವತರ ಸ್ಥಾನಕ್ಕೆ ಅವರನ್ನು ಕರೆತರಲಾಯಿತು. ಚಿತ್ರವು ಯಶಸ್ವಿಯಾಗಿ, ಜಯಭೇರಿ ಹೊಡೆಯಿತು. ಹೊನ್ನಪ್ಪ ಭಾಗವತರು ಜನಪ್ರಿಯ ನಟರಾದರು. ಏಳು ತಮಿಳು, ಎಂಟು ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದರು. ಸ್ವತಃ ಚಿತ್ರ ತಯಾರಿಸಿದರು. ಅದರಲ್ಲಿ ಕವಿರತ್ನ ಕಾಳಿದಾಸ ಎಂಬ ಚಿತ್ರ ಬಹು ಪ್ರಸಿದ್ಧವಾಯಿತು. ಬಿ. ಸರೋಜಾದೇವಿಯವರನ್ನು ಬೆಳಕಿಗೆ ತಂದಿತು. ಇದಲ್ಲದೆ ಗುಬ್ಬಿ ವೀರಣ್ಣನವರ ಆಹ್ವಾನದಂತೆ ಚನ್ನಬಸವೇಶ್ವರಸ್ವಾಮಿ ಕಂಪೆನಿಯಲ್ಲಿ ಹಲವಾರು ವರುಷ ಸಂಗೀತಮಯ ನಾಟಕಗಳಲ್ಲಿ ಪಾತ್ರವಹಿಸಿದರು.

1964ರಲ್ಲಿ ಬೆಂಗಳೂರಿನಲ್ಲಿ ನಾದಬ್ರಹ್ಮ ಸಂಗೀತ ವಿದ್ಯಾಲಯವನ್ನು ಸ್ಥಾಪಿಸಿದರು. ಅದರಲ್ಲಿ ಅನೇಕರಿಗೆ ವಿದ್ಯಾದಾನ ಮಾಡುತ್ತಿದ್ದಾರೆ. ಇದಲ್ಲದೆ ಸ್ವತಃ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಇವು ಬಹುಪಾಲು ಕನ್ನಡ, ಅನಂತರ ಸಂಸ್ಕೃತ ತೆಲುಗು ಭಾಷೆಗಳಲ್ಲಿವೆ. ಅಲ್ಲದೆ ಕರ್ನಾಟಕ ಗಾನಕಲಾಪರಿಷತ್ತಿನ ಸ್ಥಾಪಕರಲ್ಲೊಬ್ಬರಾಗಿ ಅನಂತರ ಅದರ ಅಧ್ಯಕ್ಷರಾಗಿ ಕಲೆಯ ಮತ್ತು ಕಲಾವಿದರ ಏಳಿಗೆಗೆ ಶ್ರಮಿಸಿದ್ದಾರೆ. ಅರ್ಧ ಶತಮಾನಕ್ಕೂ ಮೀರಿ ಸಂಗೀತ ಕ್ಷೇತ್ರದಲ್ಲಿ ಅವರು ಮಾಡಿರುವ ಸೇವೆ ಮತ್ತು ಸಾಧನೆಗಳನ್ನು ಪುರಸ್ಕರಿಸಿ, ಕರ್ನಾಟಕ ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಇತ್ತು ಗೌರವಿಸಿದೆ. ಹಾಗೆಯೇ ಕರ್ನಾಟಕ ಸರ್ಕಾರದ ರಾಜ್ಯ ಪ್ರಶಸ್ತಿ ದೊರೆತಿದೆ. ಇದೆಲ್ಲಕ್ಕೂ ಕಳಶಪ್ರಾಯವಾಗಿ ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ದೊರೆಯಿತು.

## ಸಮ್ಮೇಳನಗಳು

### ೧. ಕರ್ನಾಟಕ ಗಾನಕಲಾ ಪರಿಷತ್

ವರುಷದ ಪ್ರಾರಂಭದಲ್ಲಿ ಎಂದಿನಂತೆ ಕರ್ನಾಟಕ ಗಾನಕಲಾ ಪರಿಷತ್ತಿನ 21ನೇ ವಾರ್ಷಿಕ ಸಂಗೀತ ವಿದ್ವಾಂಸರ ಸಮ್ಮೇಳನವು ನಡೆಯಿತು. 27ನೇ

ಜನವರಿಯಿಂದ 31ರವರೆಗೆ ಐದು ದಿನಗಳ ಕಾಲ ಬೆಂಗಳೂರಿನ ಗವೀಪುರ ಬಡಾವಣೆಯ ಶ್ರೀ ನಿಜಗುಣರ ಜಂಗಮ ಮಠದ ಸಭಾಂಗಣದಲ್ಲಿ ನಡೆದ ಈ ಸಮ್ಮೇಳನದ ವಿಶೇಷ ಕಾರ್ಯಕ್ರಮವಾಗಿ ಖ್ಯಾತ ವಾಗ್ಗೇಯಕಾರ ಮೈಸೂರು ವಾಸುದೇವಾಚಾರ್ಯರ 125ನೇ ಜಯಂತ್ಯುತ್ಸವವನ್ನು ಆಚರಿಸಲಾಯಿತು. ಕರ್ನಾಟಕ ಗಾನಕಲಾ ಪರಿಷತ್ತು ಸಂಗೀತ ವಿದ್ವಾಂಸರೇ ಒಟ್ಟು ಸೇರಿ ಕಟ್ಟಿದ ಸಂಸ್ಥೆ. ಭಾರತ ಸ್ವಾತಂತ್ರ್ಯಾನಂತರ, ಅರಸೊತ್ತಿಗೆ ಅಳಿದುಹೋದ ಕಾಲದಲ್ಲಿ ಮೈಸೂರಿನ ಸಂಗೀತ ಪರಂಪರೆ ಒಂದು ಸಂದಿಗ್ಧ ಸ್ಥಿತಿಯನ್ನು ಎದುರಿಸಬೇಕಾಯಿತು. ಅರಮನೆಯ ಪ್ರೋತ್ಸಾಹವು ತಪ್ಪಿತು. ಆದರೆ ಸಾರ್ವಜನಿಕವಾಗಿ ನೆರೆ ರಾಜ್ಯಗಳ ಕಲಾವಿದರಿಗೆ ಅಗ್ರಮರ್ಯಾದೆ ನೀಡುವ ಪ್ರವೃತ್ತಿ ಬೆಳೆದು ರಾಜ್ಯದ ಸಂಗೀತ ವಿದ್ವಾಂಸರನ್ನು ಎರಡನೆಯ ದರ್ಜೆಗೆ ದೂಡಲಾಗಿತ್ತು. ಈ ಸ್ಥಿತಿಯಲ್ಲಿ ರಾಜ್ಯದ ಸಂಗೀತ ಪರಂಪರೆಯನ್ನು ಸಂರಕ್ಷಿಸಿ, ಬೆಳಗುವುದು ರಾಜ್ಯದ ಸಂಗೀತ ಕಲಾವಿದರಲ್ಲಿ ಐಕಮತ್ಯ ಬೆಳೆಸುವುದು ಮತ್ತು ರಾಜ್ಯದ ಸಂಗೀತ ಕಲೆಯ ಮುನ್ನಡೆಯನ್ನು ಸಾಧಿಸುವುದು ಮುಂತಾದ ಧ್ಯೇಯಗಳನ್ನು ಇಟ್ಟುಕೊಂಡು ಸಂಗೀತಗಾರರೇ ಕಟ್ಟಿದ ಸಂಸ್ಥೆ ಗಾನಕಲಾ ಪರಿಷತ್ತು. ಈ 20 ವರುಷಗಳಲ್ಲಿ ಈ ಕ್ಷೇತ್ರದಲ್ಲಿ ಸಾಕಷ್ಟು ಸಾಧನೆ ಮಾಡಿದೆ. ಕಚೇರಿ ಮತ್ತು ಇತರ ಕಾರ್ಯಕ್ರಮಗಳ ಮೂಲಕ ನಾಡಿನ ಹಿರಿಯ ಮತ್ತು ಕಿರಿಯ ಸಂಗೀತ ಕಲಾವಿದರ ಪರಿಚಯ ಮತ್ತು ಪ್ರೋತ್ಸಾಹ, ಇತಿಹಾಸ, ಶಾಸ್ತ್ರ ಮತ್ತು ಪ್ರಯೋಗಗಳಿಗೆ ಸಂಬಂಧಿಸಿದ, ಭಾಷಣ, ಪ್ರಾತ್ಯಕ್ಷಿಕೆಗಳು, ಕರ್ನಾಟಕದ ಸಂಗೀತ ಪರಂಪರೆಗೇ ಸಂಬಂಧಿಸಿದ ವಿಶೇಷ ಕಾರ್ಯಕ್ರಮಗಳು, ಇತರ ಸಂಗೀತ ಪದ್ಧತಿಗಳ ಮತ್ತು ಸಂಪ್ರದಾಯಗಳ ಬಗೆಗೆ ತಿಳುವಳಿಕೆ ನೀಡುವ ಕಾರ್ಯಕ್ರಮಗಳು ಇದಲ್ಲದೆ, ಕರ್ನಾಟಕದ ಸಂಗೀತ ಕೇಂದ್ರಗಳ, ಸಂಗೀತ ವಿದ್ವಾಂಸರ ಚಿತ್ರಗಳ ಮತ್ತು ಕಲೆಗೆ ಸಂಬಂಧಿಸಿದ ಇತರ ವಸ್ತುಗಳ ಪ್ರದರ್ಶನ ಮುಂತಾದುವುಗಳ ಮೂಲಕ ಸಾರ್ವಜನಿಕರ ಮತ್ತು ಕಲಾವಿದರ ಜ್ಞಾನಾಭಿವೃದ್ಧಿ ಹಾಗೂ ಅಭಿರುಚಿಗಳನ್ನು ಉತ್ತಮಗೊಳಿಸಲು ಯತ್ನಿಸಿದೆ.

ಈ 21ನೆಯ ಸಂಗೀತ ವಿದ್ವತ್ ಸಮ್ಮೇಳನದ ಅಧ್ಯಕ್ಷರಾಗಿ ಆಯಿಕೆಯಾದವರು ವಿದ್ವಾನ್ ಡಿ. ಶೇಷಪ್ಪ, ರಾಜ್ಯದ ಹಿರಿಯ ತಾಳವಾದ್ಯ ಧುರೀಣರು. ಇವರದು ಸಂಗೀತ ಮನೆತನ, ಇವರ ತಂದೆ ಖಂಡೆ ದಾಸಪ್ಪನವರು ಮೈಸೂರು ಅರಮನೆಯ ತಬಲವಾದ್ಯ ವಿದ್ವಾಂಸರಾಗಿದ್ದರು. ಈ ಕುಟುಂಬದ ವಿಶೇಷವೆಂದರೆ ಕರ್ನಾಟಕ ಮತ್ತು ಹಿಂದೂಸ್ತಾನಿ ಎರಡೂ ಪದ್ಧತಿಗಳಲ್ಲಿಯೂ ಪ್ರಾವೀಣ್ಯತೆ. ಎರಡೂ ಪದ್ಧತಿಯ ಕಚೇರಿಗಳಿಗೂ ತಬಲವನ್ನೇ ಪಕ್ಕವಾದ್ಯವಾಗಿ ನುಡಿಸುತ್ತಿದ್ದರು. ಇದಕ್ಕೆ ಮುಖ್ಯ ಕಾರಣವೆಂದರೆ ಮೈಸೂರು ಆಸ್ಥಾನದಲ್ಲಿ ಎರಡೂ ಪದ್ಧತಿಯ ಸಂಗೀತ ವಿದ್ವಾಂಸರಿದ್ದರು. 85 ವರುಷದ ಶೇಷಪ್ಪನವರಿಗೂ ತಬಲಾ ವಾದ್ಯಕ್ಕೂ 75 ವರುಷಗಳಷ್ಟು ನಿಕಟ ಸಂಬಂಧ. ಅವರ ಹತ್ತನೆಯ ವಯಸ್ಸಿನಿಂದಲೇ ಸಂಗೀತ ಕಚೇರಿಗಳಲ್ಲಿ ತಬಲಾ ಪಕ್ಕವಾದ್ಯ ನುಡಿಸುತ್ತಿದ್ದರು. ಅವರಿಗೆ ಇವರಲ್ಲಿ

ಬಹು ಹಳೆಯ ನೆನಪೆಂದರೆ ಭೈರವಿ ಕೆಂಪೇಗೌಡರ ಜೊತೆಯಲ್ಲಿ ತಬಲಾ ನುಡಿಸುತ್ತಿದ್ದುದು. ಅನಂತರ ಮೈಸೂರಿನ ಪ್ರಸಿದ್ಧ ವಿದ್ವಾಂಸರುಗಳಾದ ಬಿಡಾರದ ಕೃಷ್ಣಪ್ಪ, ವಾಸುದೇವಾಚಾರ್, ವೆಂಕಟಗಿರಿಯಪ್ಪ, ಚಿಕ್ಕರಾಮರಾವ್, ಮುಂತಾದವರೇ ಅಲ್ಲದೆ ಹೊರಗಿನಿಂದ ಬಂದ ಅನೇಕ ವಿದ್ವಾಂಸರಿಗೂ ತಬಲ ಸಹವಾದನ ನೀಡಿದ್ದಾರೆ. ಇದಲ್ಲದೆ ಫೈಯಾಜ್ ಖಾನ್‌ರವರ ಬಳಿ ಶಿಷ್ಯವೃತ್ತಿ ಮಾಡಿ, ಫೈಯ್ಯಾಜ್ ಖಾನರೇ ಅಲ್ಲದೆ, ವಿಲಾಯಿತ್ ಹುಸೇನ್ ಖಾನ್, ಹಾಫಿಸ್ ಖಾನ್, ಬಷೀರ್ ಖಾನ್, ಗೋವಿಂದರಾವ್ ಟೊಂಬೆ, ಬರಕುತುಲ್ಲಾ ಖಾನ್ ಮುಂತಾದ ಹಿಂದೂಸ್ತಾನಿ ಖ್ಯಾತ ಕಲಾವಿದರಿಗೂ ತಬಲ ಸುತ್ತಿ ಮಾಡಿದ್ದಾರೆ. ಲಂಡನ್ನಿನಲ್ಲಿಯೂ ಕಾರ್ಯಕ್ರಮವಿತ್ತು ಪ್ರಶಂಸಾಪತ್ರ ಪಡೆದು ಬಂದಿದ್ದಾರೆ. ಪರಿಷತ್ತಿನ ಈವರೆಗೆ ನಡೆದ ಸಂಗೀತ ಸಮ್ಮೇಳನಗಳಲ್ಲಿ ಅಧ್ಯಕ್ಷತೆ ವಹಿಸಿದ ತಾಳವಾದ್ಯ ವಿದ್ವಾಂಸರಲ್ಲಿ ಇವರು ಎರಡನೆಯವರು.

ವಾಸುದೇವಾಚಾರ್ಯರ 125ನೇ ವರ್ಧಂತ್ಯುತ್ಸವದ ಪ್ರಯುಕ್ತ ಸಮ್ಮೇಳನದ ವಿದ್ವತ್‌ಗೋಷ್ಠಿಯ ಕಾರ್ಯಕ್ರಮಗಳು ಆಚಾರ್ಯರ ಜೀವನ, ಅವರು ರಚಿಸಿದ ಕೃತಿಗಳು, ಅವುಗಳ ರಾಗ, ಲಯ, ಭಾವ, ವೈವಿಧ್ಯಗಳ ಮೇಲೆ ಹೆಚ್ಚು ಕೇಂದ್ರೀಕೃತವಾಗಿದ್ದುವು. ಮದರಾಸಿನ ಅಡಿಯಾರ್ ಕಲಾಕ್ಷೇತ್ರದಿಂದ ಬಂದ ವಿದ್ವಾಂಸರ ಮತ್ತು ಕಲಾವಿದರ ತಂಡದವರು ವಾಸುದೇವಚಾರ್ಯರ ಸುಪ್ರಸಿದ್ಧ ರಾಮಾಯಣ ನೃತ್ಯನಾಟಕದ ಬಗೆಗೆ ಸೋದಾಹಾರ ಭಾಷಣವೇ ಅಲ್ಲದೆ, ನೃತ್ಯನಾಟಕ ಕಾರ್ಯಕ್ರಮವನ್ನು ಇತ್ತರು. ಇದಲ್ಲದೆ ಎಂದಿನಂತೆ ಕಿರಿಯ ಮತ್ತು ಹಿರಿಯ ಕಲಾವಿದರಿಂದ ಸಂಗೀತ ಕಚೇರಿಗಳು. ಇದರಲ್ಲಿ ಪಕ್ಕ ವಾದ್ಯದವರೂ ಸೇರಿ ಪಾಲುಗೊಂಡ ಸಂಗೀತಗಾರರ ಸಂಖ್ಯೆ ಒಟ್ಟು 40. ಇದರಲ್ಲಿ ಹತ್ತು ಮಂದಿ ಮಹಿಳೆಯರು. ಕಡೆಯ ದಿನ ವಿದ್ವತ್ ಸದಸ್ಸಿನಲ್ಲಿ ಸಮ್ಮೇಳನಾಧ್ಯಕ್ಷ ಡಿ. ಶೇಷಪ್ಪನವರಿಗೆ ''ಗಾನಕಲಾಭೂಷಣ'' ಎಂಬ ಬಿರುದು, ಅದರ ಲಾಂಛನ ಶಾಲು, ಬಿರುದು ಪತ್ರಗಳನ್ನಿತ್ತು ಸತ್ಕರಿಸಲಾಯಿತು. ಇದಲ್ಲದೆ ಇನ್ನು ನಾಲ್ವರು ಹಿರಿಯ ವಿದ್ವಾಂಸರನ್ನು ಪ್ರಶಂಸಾಪತ್ರ ಇತ್ತು ಪುರಸ್ಕರಿಸಲಾಯಿತು. ಪರಿಷತ್ತು ಇದುವರೆಗೂ 90 ಹಿರಿಯ ವಿದ್ವಾಂಸರನ್ನು ಹೀಗೆ ಪ್ರಶಂಸಾಪತ್ರ ಇತ್ತು ಗೌರವಿಸಿದೆ. ಇವರಲ್ಲಿ ಹತ್ತಿರ ಹತ್ತಿರ 40 ಮಂದಿ ನಿಧನರಾಗಿದ್ದಾರೆ. ಪರಿಷತ್ತು ಹುಟ್ಟಿ, ನಾಡಿನಲ್ಲಿ ಎಲೆಯ ಮರೆಯ ಕಾಯಿಯಂತೆ ಇದ್ದ ಅನೇಕ ವಿದ್ವಾಂಸರನ್ನು ಗುರುತಿಸಿ ಅವರು ಜೀವಿಸಿದ್ದಾಗಲೇ ಪುರಸ್ಕರಿಸಲು ಸಾಧ್ಯವಾಯಿತು. ಇಲ್ಲದಿದ್ದಲ್ಲಿ ಪ್ರಪಂಚವು ಅವರನ್ನು ಪೂರಾ ಮರೆತುಬಿಡುತ್ತಿದ್ದಿತು.

### ೨. ಬೆಂಗಳೂರು ಗಾಯನ ಸಮಾಜ

ವರುಷದ ಪ್ರಾರಂಭದಲ್ಲಿ ಕರ್ನಾಟಕ ಗಾನಕಲಾಪರಿಷತ್ತಿನ ಸಮ್ಮೇಳನವಾದರೆ, ವರುಷಾಂತ್ಯದಲ್ಲಿ ಇನ್ನೊಂದು ಸಂಗೀತ ಸಮ್ಮೇಳನ. ಬೆಂಗಳೂರು ಗಾಯನ

ಸಮಾಜ ನಡೆಸಿದ 23ನೆಯ ಸಂಗೀತ ಸಮ್ಮೇಳನ. 87 ವಯಸ್ಸು ತುಂಬಿದ ಬೆಂಗಳೂರು ಗಾಯನ ಸಮಾಜವು ಬಹುಶಃ ಇಡೀ ದಕ್ಷಿಣ ಭಾರತದಲ್ಲಿ ಅತೀ ಹಳೆಯ ಸಂಗೀತ ಸಂಸ್ಥೆ. ಸ್ಥಾಪಿತವಾದ ಕಾಲದಿಂದಲೂ ತಿಂಗಳಿಗೆ ಒಂದು ಅಥವಾ ಎರಡು ಸಂಗೀತ ಕಚೇರಿಗಳನ್ನು ಏರ್ಪಡಿಸುತ್ತಿತ್ತು. ಈ ಕಚೇರಿಗಳಲ್ಲಿ ಕರ್ನಾಟಕ ಸಂಗೀತ ಕ್ಷೇತ್ರದ ದಿಗ್ಗಜಗಳೆನಿಸಿಕೊಂಡ ಮಹಾನ್ ವಿದ್ವಾಂಸರೆಲ್ಲಾ ಭಾಗವಹಿಸಿದ್ದಾರೆ. ರಾಜ್ಯದ ಹಿರಿಯ ಸಂಸ್ಥೆಯಾಗಿ, ಕಲೆಗೆ ಇನ್ನೂ ಹೆಚ್ಚಿನ ಪ್ರಮಾಣದ ಸೇವೆ ಮಾಡಬೇಕೆಂಬ ಉದ್ದೇಶ್ಯದಿಂದ, 1969 ರಲ್ಲಿ ಪ್ರತಿ ವರುಷ ಸಂಗೀತ ಸಮ್ಮೇಳನಗಳನ್ನು ನಡೆಸಬೇಕೆಂದು ನಿರ್ಧರಿಸಿತು. ಈ ಸಮ್ಮೇಳನಗಳು ಪ್ರಾಯಶಃ ಮದರಾಸು ಮ್ಯೂಸಿಕ್ ಅಕಾಡೆಮಿಯ ಸಮ್ಮೇಳನಗಳ ರೀತಿಯಲ್ಲಿಯೇ ನಡೆಸಲಾಗುತ್ತಿವೆ. ಪ್ರಾತಃ ಕಾಲದಲ್ಲಿ ವಿದ್ವತ್ ಗೋಷ್ಠಿ, ಸಾಯಂಕಾಲದಲ್ಲಿ ಸಂಗೀತ ಕಚೇರಿಗಳು ಕಿರಿಯ ಮತ್ತು ಹಿರಿಯ ವಿದ್ವಾಂಸರಿಂದ, ಈ ಅಂತರದಲ್ಲಿ ಸಂಗೀತ ಸ್ಪರ್ಧೆಗಳು ಹೀಗೆ. ಇದುವರೆಗೆ ಈ ಸಮ್ಮೇಳನದ ಅಧ್ಯಕ್ಷತೆಗೆ ಕರ್ನಾಟಕದ ಹಿರಿಯ ಸಂಗೀತ ವಿದ್ವಾಂಸರನ್ನೇ ಆರಿಸಲಾಗಿದೆ. ಅಥವಾ ಹೊರಗಿನವರಾದರೆ ಕನ್ನಡ ವಿದ್ವಾಂಸರನ್ನೇ ಆರಿಸಲಾಗಿದೆ. ಇದರಲ್ಲಿ ಕರ್ನಾಟಕ ಸಂಗೀತದ ವಿದ್ವಾಂಸರೇ ಅಲ್ಲದೆ ಹಿಂದೂಸ್ತಾನಿ ಸಂಗೀತ ವಿದ್ವಾಂಸರೂ ಅಧ್ಯಕ್ಷರಾಗಿದ್ದಾರೆ.

ಡಿಸೆಂಬರ್ 8 ರಿಂದ ಒಂದು ವಾರ ನಡೆದ ಈ ವರುಷ ಸಮ್ಮೇಳನದ ಅಧ್ಯಕ್ಷರಾದವರು ಎಂ.ಎಸ್. ರಾಮಯ್ಯ. ಇಲ್ಲಿ ವಿಶೇಷವೆಂದರೆ ವರುಷದ ಈ ಎರಡೂ ಸಮ್ಮೇಳನಗಳ ಅಧ್ಯಕ್ಷರಾದವರುಗಳು ತಾಳವಾದ್ಯ ಪರಿಣತರು. ರಾಮಯ್ಯನವರು ರಾಜ್ಯದ ಹಿರಿಯ ಮೃದಂಗ ವಿದ್ವಾಂಸರು. ಅವರ ತಂದೆ ಶೇಷಪ್ಪನವರು, ಸೋದರರು ಎಲ್ಲಾ ಮೃದಂಗವಾದಕರೇ. ಹಿತವಾದ ನುಡಿಸುಗಾರಿಕೆಗೆ ಪ್ರಸಿದ್ಧರಾದ ರಾಮಯ್ಯನವರಿಗೆ ಕರ್ನಾಟಕ ಮತ್ತು ಹಿಂದೂಸ್ತಾನಿ ಎರಡೂ ತಾಳಪದ್ಧತಿಗಳ ಪರಿಚಯವಿದೆ. ಸಮ್ಮೇಳನದ ಅಧ್ಯಕ್ಷರು ತಾಳವಾದ್ಯ ಧುರೀಣರಾದುದರಿಂದ ವಿದ್ವತ್ ಗೋಷ್ಠಿಯ ಕಾರ್ಯಕಲಾಪಗಳಲ್ಲಿ ತಾಳ, ಲಯ ಅಂಶಗಳಿಗೆ ಆದ್ಯತೆ ಇರಬೇಕಾದುದು ಸಹಜವೇ. ಇದರ ಜೊತೆಗೆ ಶಾಸ್ತ್ರೀಯ ಸಂಗೀತದ ಅಭಿರುಚಿ ಹೆಚ್ಚಿಸುವ ಬಗೆಗೆ ಒಂದು ವಿಚಾರ ಗೋಷ್ಠಿಯು ಇದ್ದಿತು. ಕೊನೆಯ ದಿನದ ವಿದ್ವತ್ ಸದಸ್ಸಿನಲ್ಲಿ ಎಂ.ಎಸ್. ರಾಮಯ್ಯನವರಿಗೆ ಸಂಗೀತ ಕಲಾರತ್ನ ಎಂಬ ಬಿರುದು, ಆದರ ಲಾಂಛನ, ಶಾಲು, ಇತ್ಯಾದಿಗಳನ್ನು ಇತ್ತು ಗೌರವಿಸಲಾಯಿತು. ಅದೇ ಸಂದರ್ಭದಲ್ಲಿ ಖ್ಯಾತ ವಿಜ್ಞಾನಿ ರಾಜಾರಾಮಣ್ಣನವರನ್ನು ಸಂಗೀತದಲ್ಲಿ ಅವರು ಮಾಡಿದ ಸಂಶೋಧನೆಗಳನ್ನು ಮನ್ನಿಸಿ ವಿಶೇಷವಾಗಿ ಪುರಸ್ಕರಿಸಲಾಯಿತು. ಅಲ್ಲದೆ ಇನ್ನೂ ನಾಲ್ವರು ಹಿರಿಯ ವಿದ್ವಾಂಸರಾದ ಹೆಚ್.ಎಸ್. ಕೃಷ್ಣಮೂರ್ತಿ, ಹೆಚ್.ಟಿ. ರಾಮಸ್ವಾಮಿ, ಎಸ್.ಬಿ. ಕೇಶವಮೂರ್ತಿ, ಎ.ಡಿ. ಜಕರಿಯಾ ಮತ್ತು ಎಲ್. ಭೀಮಾಚಾರ್ ಇವರುಗಳನ್ನು ಪುರಸ್ಕರಿಸಲಾಯಿತು.

## ೩. ತಾಳವಾದ್ಯೋತ್ಸವ

ಪ್ರತಿವರುಷವೂ ಮೇ ಮಾಸದಲ್ಲಿ ಬೆಂಗಳೂರಿನಲ್ಲಿ ತಾಳವಾದ್ಯೋತ್ಸವ ನಡೆಯುತ್ತದೆ. ಇದನ್ನು ಏರ್ಪಡಿಸುವವರು ಪರ್ಕಸಿವ್ ಆರ್ಟ್ ಸೆಂಟರ್ ಅಥವಾ ತಾಳವಾದ್ಯ ಕಲಾಕೇಂದ್ರ. ಸಂಗೀತದಲ್ಲಿ ತಾಳ, ಲಯ ಭಾಗದ ಪ್ರಚಾರಕ್ಕಾಗಿ ಬೆಳವಣಿಗೆಗಾಗಿ ಸ್ಥಾಪಿತವಾದ ಸಂಸ್ಥೆ ಇದು. ಪ್ರತಿವರ್ಷವೂ ಖ್ಯಾತ ಮೃದಂಗ ವಾದ್ಯ ಧುರೀಣ ದಿವಂಗತ ಪಾಲಘಾಟ್ ಮಣಿ ಅಯ್ಯರ್ ಅವರ ಹೆಸರಿನಲ್ಲಿ ಒಂದು ಪ್ರಶಸ್ತಿ ನೀಡುತ್ತಿದೆ. ಈಚೆಗೆ ಎರಡು ವರುಷದಿಂದ ಪ್ರಸಿದ್ಧ ಮೃದಂಗವಾದಕ ಪಳನಿ ಸುಬ್ರಮಣ್ಯ ಪಿಳ್ಳೈ ಅವರ ಹೆಸರಿನಲ್ಲಿಯೇ ಒಂದು ಪ್ರಶಸ್ತಿ ನೀಡಲು ಪ್ರಾರಂಭಿಸಿದೆ.

ಈ ವರುಷ ಹತ್ತನೆಯ ತಾಳ ವಾದ್ಯೋತ್ಸವವನ್ನು ಆಚರಿಸಿತು. ಇದರ ಅಂಗವಾಗಿ 31ನೇ ಮೇ ಪಾಲಘಾಟ ಮಣಿ ಅಯ್ಯರ್ ಪ್ರಶಸ್ತಿಯನ್ನು ನೀಡಲಾಯಿತು. ಇದನ್ನು ಪಡೆದ ವಿದ್ವಾಂಸರು ಶ್ರೀ ಟಿ.ವಿ. ಗೋಪಾಲಕೃಷ್ಣನ್, ಕೇರಳದ ತ್ರಿಪುಣಿತ್ತುರಾದಲ್ಲಿ ಜನಿಸಿದ ಗೋಪಾಲಕೃಷ್ಣನ್ ಖ್ಯಾತ ಮೃದುಂಗವಾದಕರು. ಅವರದು ಬಹುಮುಖ ಪ್ರತಿಭೆ. ಮೃದಂಗ ವಾದನವೇ ಅಲ್ಲದೆ ಗಾಯನದಲ್ಲಿಯೂ ಪ್ರಾಧಿಮೆ. ಅದರಲ್ಲಿಯೂ ಕರ್ನಾಟಕ ಮತ್ತು ಹಿಂದೂಸ್ತಾನಿ ಎರಡೂ ಪದ್ಧತಿಗಳಲ್ಲಿಯೂ ಪಳಗಿದ ಕೈ. ದೇಶ ವಿದೇಶಗಳಲ್ಲಿ ಖ್ಯಾತರಾಗಿದ್ದಾರೆ.

ಇದರಂತೆಯೇ ಪಳನಿ ಸುಬ್ರಮಣ್ಯಂ ಪಿಳ್ಳೈ ಸ್ಮಾರಕ ಪ್ರಶಸ್ತಿ ಪಡೆದವರು ವಿದ್ವಾನ್ ಆರ್.ಆರ್. ಕೇಶವಮೂರ್ತಿ. ಕರ್ನಾಟಕದ ಹಿರಿಯ ಪಿಟೀಲು ವಾದಕರು. ಅಷ್ಟೇ ಪ್ರಸಿದ್ಧರಾದ ಗುರುಗಳು. ನೂರಾರು ಶಿಷ್ಯರನ್ನು ತಯಾರು ಮಾಡಿದ್ದಾರೆ. ಅಲ್ಲದೆ ಸಂಗೀತ ಕಲೆಯ ಬಗೆಗೆ ಹತ್ತಾರು ಪುಸ್ತಕಗಳನ್ನು ಬರೆದು ಪ್ರಕಟಿಸಿದ್ದಾರೆ.

ಈ ಪ್ರಶಸ್ತಿ ವಿತರಣವೇ ಅಲ್ಲದೆ ಒಂದು ವಾರ ಕಾಲ ನಡೆದ ಈ ತಾಳವಾದ್ಯೋತ್ಸವದಲ್ಲಿ ಭಾಷಣ, ವಿಚಾರಗೋಷ್ಠಿ ಹಾಗೂ ಸಾಯಂಕಾಲ ಸಂಗೀತ ಕಚೇರಿಗಳೂ ನಡೆದುವು. ಇದರಲ್ಲಿ ಸಂಗೀತ ವಾದ್ಯಗಳಿಗೆ ಸಂಬಂಧಿಸಿದ ವಿಚಾರಗೋಷ್ಠಿ ಗಮನಾರ್ಹವಾದುದು. ಹಾಗೆಯೇ, ಮದರಾಸಿನಲ್ಲಿರುವ ಕೇಂದ್ರ ಸರಕಾರದ ವಾದ್ಯಾಲಯದವರು, ಏರ್ಪಡಿಸಿದ ಸಂಗೀತ ವಾದ್ಯಗಳ ಪ್ರದರ್ಶನವೂ ಆಕರ್ಷಣೀಯವಾಗಿತ್ತು.

## ಸ್ಮರಣೆಯ ದಿನಾಚರಣೆಗಳು

### ಅರಿಯಕ್ಕುಡಿ ರಾಮಾನುಜಯ್ಯಂಗಾರರ ಜನ್ಮ ಶತಾಬ್ಧಿ

ಈ ವರುಷ ನಡೆದ ಇನ್ನೊಂದು ವಿಶೇಷ ಘಟನೆ–ಅರಿಯಕ್ಕುಡಿ ರಾಮಾನುಜಯ್ಯಂಗಾರ್ಯರ ನೂರನೆ ಹುಟ್ಟುಹಬ್ಬದ ಆಚರಣೆ. ಅರಿಯಕ್ಕುಡಿಯವರು

ಈ ಶತಮಾನದ ಪೂರ್ವಾರ್ಧದ ಪ್ರತಿಭಾವಂತ ಸಂಗೀತ ಕಲಾವಿದರಲ್ಲಿ ಒಬ್ಬರು. ಅವರ ವಿಶೇಷವೆಂದರೆ, ಸಂಗೀತ ಕಚೇರಿಗಳ ಆಕಾರವನ್ನೇ ಮಾರ್ಪಡಿಸಿದುದು. ಕೇವಲ ಬೌದ್ಧಿಕ ತೃಪ್ತಿ ನೀಡುತ್ತಿದ್ದ ಸಂಗೀತ ಕಚೇರಿಗಳು ವಿದ್ವಾಂಸರೇ ಅಲ್ಲದೆ ಸಭೆಯ ವಿವಿಧ ವರ್ಗದವರಿಗೆಲ್ಲಾ ರುಚಿಕರವಾಗುವಂತೆ ಹಾಡುವ ಕೃತಿಗಳ ಸರಣಿಯಲ್ಲಿ ಬದಲಾವಣೆ ಮಾಡಿದರು. ಸಂಪ್ರದಾಯಕ್ಕೆ ಚ್ಯುತಿ ಇಲ್ಲದಂತೆ ವೈವಿಧ್ಯಮಯ ಮಾಡಿದರು. ಜುಲೈ ತಿಂಗಳ ಮೊದಲ ಭಾಗದಲ್ಲಿ ನಾಲ್ಕು ದಿನಗಳ ಕಾಲ ಮಲ್ಲೇಶ್ವರಂ ಸಂಗೀತ ಸಭೆಯು ಅರಿಯಕ್ಕುಡಿಯವರ ಜನ್ಮ ಶತಾಬ್ದಿಯನ್ನು ಆಚರಿಸಿತು. ಈ ಆಚರಣೆಯ ಅಂಗವಾಗಿ ಅರಿಯಕ್ಕುಡಿಯವರ ಜೀವನ, ಸಾಧನೆ, ಅವರ ಕಚೇರಿ ಪದ್ಧತಿ, ಪಲ್ಲವಿ ಸಂಪ್ರದಾಯ, ಮುಂತಾದವುಗಳ ಬಗೆಗೆ ಭಾಷಣಗಳಾದುವು. ಅರಿಯಕ್ಕುಡಿ ಅವರ ಶಿಷ್ಯರಾದ ಕೆ.ವಿ. ನಾರಾಯಣಸ್ವಾಮಿ, ಬಿ. ರಾಜಂ ಅಯ್ಯರ್ ಅವರುಗಳ ಸಂಗೀತ ಕಚೇರಿಗಳೂ ಆದುವು.

## ಪಂಚಾಕ್ಷರಿ ಗವಾಯಿ

ಅದರಂತೆಯೇ ನಡೆದ ಇನ್ನೊಂದು ಶತಮಾನೋತ್ಸವ–ಕರ್ನಾಟಕದ ಪ್ರಸಿದ್ಧ ಅಂಧ ಗಾಯಕರಾದ ಪಂಚಾಕ್ಷರಿ ಗವಾಯಿ ಅವರದು. ಹುಟ್ಟಿನಿಂದ ಕುರುಡರಾದರೂ ಸಂಗೀತದಲ್ಲಿ ಶ್ರೀಮಂತಿಕೆಯನ್ನು ಸಾಧಿಸಿದವರು. ಪಂಚಾಕ್ಷರಿ ಗವಾಯಿ ಅವರು ಕರ್ನಾಟಕ ಮತ್ತು ಹಿಂದೂಸ್ತಾನಿ ಎರಡೂ ಪದ್ಧತಿಗಳಲ್ಲಿಯೂ ಪ್ರವೀಣರಾಗಿ, ಉಭಯಗಾಯನಾಚಾರ್ಯ ಎಂದೂ ಕರೆಯಲಾದ ಗವಾಯಿ ಅವರ ಸಂಗೀತ ಸೇವೆ, ಆ ಪದದ ನಿಜವಾದ ಅರ್ಥದಲ್ಲಿ ನಡೆದುದು. ಶಿಷ್ಯರನ್ನು ಜೊತೆಯಲ್ಲಿಯೇ ಇಟ್ಟುಕೊಂಡು ತರಪೇತು ಮಾಡಿ ಮುಂದಕ್ಕೆ ತಂದವರು ಅವರು. ಈ ಶಿಷ್ಯರೇ ಜನತೆಯ ಸಾಮಾನ್ಯ ವರ್ಗಕ್ಕೆ ಸೇರಿದವರು, ರೈತರು, ಕಾರ್ಮಿಕರು, ವರ್ತಕರು. ಅವರಲ್ಲಿ ಬಹುಮಂದಿ ಅಂಗಹೀನರು, ಅಂದರೆ ಕುರುಡರು, ಈ ಕುಟುಂಬದ ಪೋಷಣೆಗಾಗಿ ಊರೂರು ತಿರುಗಿ ಸಹಾಯ ಬೇಡಿ ತರುತ್ತಿದ್ದರು. ಉತ್ತರ ಕರ್ನಾಟಕದ ಜನಸಾಮಾನ್ಯರಲ್ಲಿ ಇಂದು ಹಿಂದೂಸ್ತಾನಿ ಸಂಗೀತದ ಈ ಪ್ರಮಾಣದ ಆದರ ಅಭಿರುಚಿ ಬೆಳೆದುದರಲ್ಲಿ ಪಂಚಾಕ್ಷರಿ ಗವಾಯಿ ಅವರ ಪಾತ್ರ ಮಹತ್ತರವಾದುದು. ಅವರ ಸಮಾಧಿ ಇರುವ ಗದುಗಿನ ವೀರೇಶ್ವರ ಪುಣ್ಯಾಶ್ರಮ ಸಂಗೀತ ಕಲೆಯ ಒಂದು ದೀವಿಗೆಯಂತಿದೆ. ನವೆಂಬರ್ 3 ಮತ್ತು 4 ರಂದು ಬೆಂಗಳೂರಿನಲ್ಲಿ ನಡೆದ ಪಂಚಾಕ್ಷರಿ ಗವಾಯಿ ಅವರ ಶತಮಾನೋತ್ಸವದಲ್ಲಿ ಎರಡೂ ಪದ್ಧತಿಗಳ ಸಂಗೀತಗಾರರು ಭಾಗವಹಿಸಿ ತಮ್ಮ ಭಕ್ತಿ ಸಲ್ಲಿಸಿದರು.

## ತ್ಯಾಗರಾಜ–ಪುರಂದರದಾಸ–ಕನಕದಾಸಾರಾಧನೆ

ಎಂದಿನಂತೆ ವರುಷದ ಪ್ರಾರಂಭದಲ್ಲಿ ತ್ಯಾಗರಾಜ, ಪುರಂದರದಾಸಾದಿಗಳ ಆರಾಧನೆಗಳನ್ನು ಸಂಗೀತಗಾರರು, ಸಂಗೀತಾಭಿಮಾನಿಗಳು ನಡೆಸಿದರು. ಇವರಲ್ಲಿ ಶ್ರೀರಂಗಪಟ್ಟಣದಲ್ಲಿ ನಡೆದ ತ್ಯಾಗರಾಜಾರಾಧನೆ ಗಮನಾರ್ಹವಾದುದು. ಪೇಟೆ

ಬೀದಿಯಲ್ಲಿರುವ ಕೋದಂಡ ರಾಮಸ್ವಾಮಿಯ ದೇವಾಲಯಕ್ಕೆ ಸೇರಿದಂತೆ ರಾಜ್ಯದ ಸುಪ್ರಸಿದ್ಧ ನಾಗಸ್ವರ ವಿದ್ವಾಂಸರಾದ ಎ.ವಿ. ನಾರಾಯಣಪ್ಪನವರು ದೇಶಾದ್ಯಂತ ತಿರುಗಿ ಧನ ಹಾಗೂ ಸಾಮಗ್ರಿಗಳನ್ನು ಸಂಗ್ರಹಿಸಿ ತ್ಯಾಗರಾಜ ಭವನವನ್ನು ಕಟ್ಟಿಸಿದ್ದಾರೆ. ಇಲ್ಲಿ ಪ್ರತಿವರುಷವೂ ತಮಿಳುನಾಡಿನ ತಿರುವಯ್ಯಾರಿನಲ್ಲಿ ನಡೆಯುವಂತೆ ತ್ಯಾಗರಾಜಾರಾಧನೆ ನಡೆಯುತ್ತದೆ. ಸಂಗೀತ ವಿದ್ವಾಂಸರೂ ಅದೇ ಭಕ್ತಿ ಶ್ರದ್ಧೆಗಳಿಂದ ಬಂದು ಪಾಲುಗೊಳ್ಳುತ್ತಿದ್ದಾರೆ. ಈ ವರುಷವೂ ಅದೇ ರೀತಿ ವಿಜೃಂಭಣೆಯಿಂದ ಅಲ್ಲಿ ತ್ಯಾಗರಾಜಾರಾಧನೆ ನಡೆಯಿತು.

ಅದೇ ಮಾಸದಲ್ಲಿ ಪುರಂದರದಾಸರ ಆರಾಧನೆ. ಹಿಂದೆ ಹಂಪೆಯಲ್ಲಿ ನಡೆಯುತ್ತಿದ್ದ ಈ ಆರಾಧನೆ ಸೌಕರ್ಯ ದೃಷ್ಟಿಯಿಂದ ಈಗ ಮುಳಬಾಗಿಲಿನಲ್ಲಿ ನಡೆಯಲು ಪ್ರಾರಂಭವಾಗಿದೆ. ಕರ್ನಾಟಕದಲ್ಲಿ ಈ ಹರಿದಾಸ ಪಂಥದ ಆದ್ಯರಾದ ಶ್ರೀಪಾದರಾಜರ ಬೃಂದಾವನ ಇರುವ ಸ್ಥಳ ಮುಳಬಾಗಿಲು. ಸಂಗೀತ ವಿದ್ವಾಂಸರು ಭಕ್ತಿಯಿಂದ ಈ ಆರಾಧನೆಯಲ್ಲಿ ಪಾಲುಗೊಂಡರು. ಇದರಂತೆಯೇ ಕಾಗಿನೆಲೆಯಲ್ಲಿ, ಕನಕದಾಸರ ದಿನಾಚರಣೆ, ಕೊಳ್ಳೇಗಾಲದಲ್ಲಿ ನಿಜಗುಣೋತ್ಸವ ಮತ್ತು ಕುಂದಗೋಳದಲ್ಲಿ ಸವಾಯಿಗಂಧರ್ವರ ಪುಣ್ಯತಿಥಿ, ಧಾರವಾಡದಲ್ಲಿ ಸಿತಾರ್ ರತ್ನ ರಹಮತ್ ಖಾನರ ಪುಣ್ಯತಿಥಿ ಮುಂತಾದ ಸಂದರ್ಭದಲ್ಲಿ ಸಂಗೀತೋತ್ಸವಗಳು ನಡೆದುವು.

## ಯುವ ಸಂಗೀತೋತ್ಸವ

ಅಕ್ಟೋಬರ್ ಮಾಸದ ಕೊನೆಯಲ್ಲಿ ಬೆಂಗಳೂರಿನಲ್ಲಿ ನಡೆದ ಯುವ ಸಂಗೀತೋತ್ಸವವು ಗಮನಾರ್ಹವಾದುದು. ಕರ್ನಾಟಕ ಗಾನಕಲಾ ಪರಿಷತ್ತಿನ ಯುವಜನ ವಿಭಾಗವು ಈ ಉತ್ಸವವನ್ನು ನಡೆಸಿತು. ಐವತ್ತು ವರುಷಗಳ ಹಿಂದೆ ಯುವಸಂಗೀತಗಾರರಲ್ಲಿ ಐಕ್ಯಮತ್ಯ ತಂದು ಅವರಿಗೆ ಪ್ರೋತ್ಸಾಹ ಹಾಗೂ ಮಾರ್ಗದರ್ಶನ ಮುಂತಾದ ಉದ್ದೇಶ್ಯಗಳಿಂದ ಸ್ಥಾಪಿತವಾದ ಈ ವಿಭಾಗ ಬಹುತೇಕ ಅಧ್ಯಯನ ಗೋಷ್ಠಿಗಳನ್ನು ನಡೆಸುತ್ತಿದ್ದು 1988 ರಿಂದ ಪ್ರತಿವರ್ಷವೂ ಯುವ ಸಂಗೀತೋತ್ಸವವನ್ನು ಪ್ರಾರಂಭಿಸಿದೆ. ಮೂರು ದಿನಗಳ ಈ ಉತ್ಸವದಲ್ಲಿ ವಿಚಾರಗೋಷ್ಠಿ ಪ್ರಾತ್ಯಕ್ಷಿಕೆಗಳೇ ಅಲ್ಲದೆ, ಪ್ರಬುದ್ಧ ಯುವ ಕಲಾವಿದರ ಸಂಗೀತ ಕಚೇರಿಗಳನ್ನೂ ಏರ್ಪಡಿಸಲಾಗುತ್ತದೆ. ಅಲ್ಲದೆ ಈ ಉತ್ಸವದ ಅಧ್ಯಕ್ಷತೆಗೆ ಒಬ್ಬ ಯುವ ಕಲಾವಿದರನ್ನು ಆರಿಸಿ ಕೊನೆಯ ದಿನದ ಸದಸ್ಸಿನಲ್ಲಿ ಅವರಿಗೆ "ಗಾನಕಲಾಶ್ರೀ" ಎಂಬ ಬಿರುದನ್ನು ಕೊಡಲಾಗುತ್ತದೆ. ಅದರಂತೆ 1991ರ ನಾಲ್ಕನೆಯ ಸಮ್ಮೇಳನದ ಅಧ್ಯಕ್ಷತೆಗೆ ಆರಿಸಲಾದವರು– ಸುಮ ಸುಧೀಂದ್ರ. ಉತ್ತಮ ವೀಣಾವಾದಕಿ. ತಂತೀ ವಾದ್ಯಗಳ ಇತಿಹಾಸ ಹಾಗೂ ಬೆಳವಣಿಗೆಗಳ ಬಗೆಗೆ ಪ್ರಬಂಧ ರಚಿಸಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪಡೆದಿದ್ದಾರೆ. ಭಾರತದ ಮುಖ್ಯ ನಗರಗಳಲ್ಲಿಯೇ ಅಲ್ಲದೆ ಇಂಗ್ಲೆಂಡ್, ಅಮೇರಿಕಾಗಳಲ್ಲಿಯೂ ಸಂಚರಿಸಿ ಕಾರ್ಯಾಗಾರ, ಕಚೇರಿ ಮುಂತಾದುವನ್ನು

ನಡೆಸಿದ್ದಾರೆ. ಸಂಗೀತಕ್ಷೇತ್ರದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುತ್ತಿದ್ದಾರೆ.

**ಸುರ್‌ಸಾಗರ್**

ಬೆಂಗಳೂರಿನ ಹಿಂದೂಸ್ತಾನಿ ಸಂಗೀತ ಕಲಾಭಿಮಾನಿಗಳಿಂದ ಕಟ್ಟಲಾದ ಸಂಸ್ಥೆ ಸುರ್‌ಸಾಗರ್. ಪ್ರಸಿದ್ಧ ಕಲಾಕಾರರಿಂದ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಜೊತೆಗೆ ಯುವ ಕಲಾವಿದರದೇ ಒಂದು ಪ್ರತ್ಯೇಕ ಉತ್ಸವವನ್ನು ನಡೆಸುತ್ತಿದೆ. ಈ ವರುಷದ ಅವರ ಕಾರ್ಯಕ್ರಮಗಳಲ್ಲಿ ವಿಶೇಷವಾದುದೊಂದು– 'ನಾಮಧಾರಿ' ಸಂಗೀತ ಸಮ್ಮೇಳನ. ಸಿಖ್‌ಮತಸ್ಥರಲ್ಲಿ ನಾಮಧಾರಿ ಎಂಬ ಪಂಗಡವಿದೆ. ಅವರು ಧರಿಸುವ ಪೂರ್ಣ ಬಿಳುಪು ಬಟ್ಟೆಗಳಿಂದ ಅವರನ್ನು ಗುರ್ತಿಸಬಹುದು. ಅವರಲ್ಲಿರುವ ಪ್ರತಿಭಾವಂತ ಯುವ ಕಲಾವಿದರ ಕಾರ್ಯಕ್ರಮವನ್ನು ಮೂರು ದಿನಗಳ ಕಾಲ ನಡೆಸಲಾಯಿತು. ಅವರಲ್ಲಿ ಸರೋದ್ ವಾದಕ ಅತೀಂದ್ರಪಾಲ್ ಸಿಂಗ್ ಮತ್ತು ತಾರ್‌ಷಹನಾಯ್ ವಾದಕ ಬಲ್‌ಜಿತ್‌ಸಿಂಗ್ ಅವರು ಚಾತುರ್ಯದಿಂದ ಮೆಚ್ಚುಗೆ ಗಳಿಸಿದರು.

ಎಂದಿನಂತೆ ರಾಜ್ಯದ ವಿವಿಧ ಭಾಗಗಳಲ್ಲಿ ಶ್ರೀರಾಮನವಮಿ ಮತ್ತು ಗಣೇಶ ಚತುರ್ಥಿಗಳ ಸಂದರ್ಭದಲ್ಲಿ ಸಂಗೀತೋತ್ಸವಗಳಾದುವು. ರಾಜ್ಯದ ಮತ್ತು ನೆರೆ ರಾಜ್ಯಗಳ ಹಿರಿಯ ಕಿರಿಯ ಕಲಾವಿದರನೇಕರು ಭಾಗವಹಿಸಿದ್ದರು. ಇವರಂತೆಯೇ ಸ್ಪಿಕ್ ಮ್ಯಾಕೆಯವರು ವಿದ್ಯಾರ್ಥಿಗಳಲ್ಲಿ ಸಂಗೀತಾಭಿರುಚಿ ಹೆಚ್ಚಿಸುವ ಅನೇಕ ಸಂಗೀತ ಕಾರ್ಯಕ್ರಮಗಳನ್ನು ಏರ್ಪಡಿಸಿದ್ದರು. ಇದರಲ್ಲಿ ಅನೇಕ ಹಿರಿಯ ಪ್ರತಿಷ್ಠಿತ ಸಂಗೀತವಿದ್ವಾಂಸರು ಪಾಲುಗೊಂಡಿದ್ದರು.

**ಪುಂಡರೀಕ ವಿಠಲನ ಸ್ಮರಣೆ**

ಈ ವರುಷದಲ್ಲಿ ನಡೆದ ಒಂದು ಮಹತ್ವಯುತ ಕಾರ್ಯಕ್ರಮವೆಂದರೆ ಪುಂಡರೀಕ ವಿಠಲನ ಗ್ರಂಥಗಳ ಬಗೆಗೆ ಬೋಧಪ್ರದ ಭಾಷಣ. ಕರ್ನಾಟಕದ ಹೆಸರು ಭಾರತೀಯ ಸಂಗೀತ ಇತಿಹಾಸದಲ್ಲಿನ ಒಬ್ಬ ಪ್ರಸಿದ್ಧ ಪುರುಷ–ಪುಂಡರೀಕ ವಿಠಲ. ಬೆಂಗಳೂರು ಜಿಲ್ಲೆಯ ಮಾಗಡಿ ತಾಲ್ಲೂಕಿನಲ್ಲಿರುವ ಸಾತನೂರು ಗ್ರಾಮದಲ್ಲಿ 16ನೆಯ ಶತಮಾನದಲ್ಲಿ ಹುಟ್ಟಿದ ಪುಂಡರೀಕ ವಿಠಲ, ಒಬ್ಬ ಅಸಾಧಾರಣ ವ್ಯಕ್ತಿ. ಸಂಸ್ಕೃತ ಮತ್ತು ಸಂಗೀತಗಳಲ್ಲಿ ಉದ್ದಾಮ ಪಂಡಿತ. ಭಾರತೀಯ ಸಂಗೀತದ ಉಭಯ ಪದ್ಧತಿಗಳೇ ಅಲ್ಲದೆ ನೃತ್ಯಕಲೆಯಲ್ಲಿಯೂ ಪ್ರವೀಣ. ಮೊದಲು ಅಹಮದ್ ನಗರದ ಸುಲ್ತಾನ್ ಬುರ್‌ಹಾನ್ ಖಾನನ ಆಸ್ಥಾನಕ್ಕೆ ಹೋಗಿ ಆತನ ಅಣತಿಯಂತೆ ಸದ್ರಾಗ ಚಂದ್ರೋದಯ ಎಂಬ ಗ್ರಂಥವನ್ನು ರಚಿಸಿದ. ಇದು ದಕ್ಷಿಣದ ಮೇಳ ಪದ್ಧತಿಯನ್ನು ಪ್ರತಿಪಾದಿಸುವ ಗ್ರಂಥ. ಮುಂದೆ ಗ್ವಾಲಿಯರ್ ಸಂಸ್ಥಾನಕ್ಕೆ ಹೋಗಿ ಅಲ್ಲಿ ಮಾನಸಿಂಹ ಮತ್ತು ಮಾಧವಸಿಂಹರ ಅಪೇಕ್ಷೆಯಂತೆ ರಾಗಮಾಲ ಮತ್ತು ರಾಗಮಂಜರಿ ಎಂಬ

ಗ್ರಂಥಗಳನ್ನು ಬರೆದ. ಇವು ಔತ್ತರೇಯ ರಾಗ, ರಾಗಿಣಿ ಪದ್ಧತಿಯನ್ನು ಪ್ರತಿಪಾದಿಸುವಂತಹುವು. ಮುಂದೆ ಮೊಘಲ್ ಚಕ್ರವರ್ತಿ ಅಕ್ಬರನ ಆಸ್ಥಾನಕ್ಕೆ ಹೋಗಿ ಆತನ ಅಪೇಕ್ಷೆಯಂತೆ ನರ್ತನ ನಿರ್ಣಯ ಎಂಬ ಗ್ರಂಥವನ್ನು ರಚಿಸಿ ಚಕ್ರವರ್ತಿಗೆ ಅರ್ಪಿಸಿದ. ಸಂಪರ್ಕ ಸಾಧನಗಳು ಸುಲಭವಾದ ಈ ಯುಗದಲ್ಲಿ ಕೂಡ ಈ ಪ್ರಮಾಣದ ಸಂಚಾರ ಸಾಧನೆ ಅಪರೂಪ. ಅಂತಹುದರಲ್ಲಿ ಅವು ಅಪರೂಪವಾದ ಕಾಲದಲ್ಲಿ ಮಾಡಿದ ಈ ಪುಂಡರೀಕ ವಿಠಲನ ಸಾಧನೆ ಅದ್ಭುತವಾದುದು. ಇದಲ್ಲದೆ ತನ್ನ ಗ್ರಂಥಗಳಲ್ಲಿ ಪದೇ ಪದೇ ತಾನು ಕರ್ನಾಟಕದವನೆಂದು ಹೇಳಿಕೊಳ್ಳಲು ಆತನಿಗೆ ಹೆಮ್ಮೆ. ಈ ಮಹಾನ್ ವ್ಯಕ್ತಿಯ ಬಗೆಗೆ ಬೆಂಗಳೂರು ಮಿಥಿಕ್ ಸೊಸೈಟಿಯವರು ಒಂದು ವಿಶೇಷೋಪನ್ಯಾಸವನ್ನು ಏರ್ಪಡಿಸಿದ್ದರು. ಉಪನ್ಯಾಸಕರು ಮಹಾಮಹೋಪಾಧ್ಯಾಯ ಡಾ: ರಾ. ಸತ್ಯನಾರಾಯಣ. ಪುಂಡರೀಕ ವಿಠಲನ ನಾಲ್ಕು ಗ್ರಂಥಗಳನ್ನು ಶೋಧಿಸಿ, ವಿಮರ್ಶಿಸಿ, ಟಿಪ್ಪಣಿಗಳ ಸಹಿತ ಒಂದು ದೊಡ್ಡ ಸಂಪುಟವನ್ನೆ ರಚಿಸಿದವರು. ಇದು ರಾಜ್ಯ ಸಂಗೀತ ನೃತ್ಯ ಅಕಾಡೆಮಿಯಿಂದ ಪ್ರಕಟವಾಗಿದೆ. ಮಿಥಿಕ್ ಸೊಸೈಟಿ ಉಪನ್ಯಾಸದಲ್ಲಿ ಸತ್ಯನಾರಾಯಣ ಅವರು ಪುಂಡರೀಕ ವಿಠಲನ ವ್ಯಕ್ತಿತ್ವ ಮತ್ತು ಆತನ ಗ್ರಂಥಗಳ ಮೌಲ್ಯಗಳ ಬಗೆಗೆ ಪಾಂಡಿತ್ಯಪೂರ್ಣ ಭಾಷಣ ಮಾಡಿದರು.

**ಬೇರೆ ನಗರಗಳಲ್ಲಿ**

ರಾಜ್ಯದ ಬೇರೆ ಬೇರೆ ನಗರಗಳಲ್ಲಿಯೇ ಸ್ಥಳೀಯವಾಗಿ ಅನೇಕ ಕಾರ್ಯಕ್ರಮಗಳು ನಡೆದಿವೆ. ಮೈಸೂರಿನ ಜಯಚಾಮರಾಜೇಂದ್ರ ಅಕಾಡೆಮಿ, ನಾದಬ್ರಹ್ಮ ಸಂಗೀತ ಸಭೆ, ಗಾನಭಾರತಿ, ಉಡುಪಿಯ ಸಂಗೀತ ಸಭಾ ಮುಂತಾದುವು ಎಂದಿನಂತೆ ಉತ್ಸವ ಹಾಗೂ ತಿಂಗಳು ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದವು.

ಇದರಲ್ಲಿ ಗಾನಭಾರತಿ ಸಂಸ್ಥೆಯದು ಒಂದು ವಿಶೇಷ. ಮೈಸೂರಿನ ಕು.ವೆಂ.ಪು. ನಗರದಲ್ಲಿ ಕಾರ್ಯಕಲಾಪಗಳನ್ನು ನಡೆಸುತ್ತಿರುವ ಈ ಸಂಸ್ಥೆ ಈ ವರುಷ ತನ್ನದೇ ಸ್ವಂತ ಕಟ್ಟಡವನ್ನು ನಿರ್ಮಿಸಲು ಸಾಧ್ಯವಾಯಿತು. ಮೈಸೂರು ವೀಣೆ ಶೇಷಣ್ಣನವರ ಹೆಸರನ್ನು ತಳೆದ ಈ ಗಾನಭಾರತಿಯ ಸಭಾ ಭವನ ಅಕ್ಟೋಬರ್ ಮಾಸದಲ್ಲಿ ಸಿದ್ಧವಾಯಿತು. ಅದರ ಪ್ರಾರಂಭೋತ್ಸವವಾಯಿತು. ಆ ಸಂದರ್ಭದಲ್ಲಿ ಒಂದು ಸಂಗೀತೋತ್ಸವವೂ ನಡೆಯಿತು.

* * *

# ನಮ್ಮನ್ನಗಲಿದ ಸಂಗೀತಗಾರರು



## ಬಸವರಾಜ ರಾಜಗುರು

– ಸದಾನಂದ ಕನವಳ್ಳಿ

೧೯೯೧ ಜುಲೈ ೨೧ರಂದು ಸ್ವರಲೋಕದಲ್ಲಿ ಲೀನವಾದ ಬಸವರಾಜ ರಾಜಗುರು ಅವರ ಒಂದು ಆಸೆ ಮಾತ್ರ ಈಡೇರಲಿಲ್ಲ. ಅದೇ ಅವರ ಆಹುತಿ ತೆಗೆದುಕೊಂಡಿತು. ಅಮೆರಿಕಗೆ ಹೋಗಿ ಅಲ್ಲಿ ತಮ್ಮ ಸಂಗೀತಸೌಗಂಧ ಬೀರುವುದೆ ಆ ಆಸೆಯಾಗಿತ್ತು. ವಿದೇಶಪಯಣಕ್ಕೆ ಸಿದ್ಧತೆಯೆಂದು ವಿಸಾ ಪಡೆಯಲು ಮದ್ರಾಸಿಗೆ ಹೋಗಿದ್ದರು. ಇದಕ್ಕೂ ಮುನ್ನ ಹೃದಯಾಘಾತದಿಂದ ಚೇತರಿಸಿಕೊಂಡಿದ್ದರು. ಈ ಸಲ ಅದು ಮರಣಾಂತಿಕವಾಯಿತು.

ಬಸವರಾಜ ರಾಜಗುರು ಕುಂದಗೋಳ ತಾಲೂಕಿನ ಎಲಿವಾಳ ಗ್ರಾಮದಲ್ಲಿ ಆಗಸ್ಟ್ ೨೪, ೧೯೨೦ ರಂದು ಜನಿಸಿದರು. ಮೂಲತಃ ಕೆಳದಿ ರಾಜರಿಗೆ ಧರ್ಮಗುರುಗಳಾಗಿದ್ದ ಮನೆತನ. ಎಂತಲೆ ರಾಜಗುರು ಎಂಬ ಅಡ್ಡಹೆಸರು. ಬಸವರಾಜರ ದೊಡ್ಡಪ್ಪ ಸಂಸ್ಕೃತ ವಿದ್ವಾಂಸ ಮತ್ತು ಜ್ಯೋತಿಷಿ. ತಂದೆ ಮಹಾಂತಸ್ವಾಮಿ ತಂಜಾವೂರಿಗೆ ಹೋಗಿ ಸಂಗೀತ ಕಲಿತುಬಂದವರು. ಪಿಟೀಲು ಚೆನ್ನಾಗಿ ನುಡಿಸುತ್ತಿದ್ದರು. ಚಿಕ್ಕಪ್ಪ, ಬಯಲಾಟಪಟು. ಇಂಪಾಗಿ ಹಾಡುತ್ತಿದ್ದರು ಮತ್ತು ಹಾರ್ಮೋನಿಯಂ ನುಡಿಸುತ್ತಿದ್ದರು. ಚಿಕ್ಕಂದಿನಿಂದಲೆ ಬಸವರಾಜರಿಗೆ ಸಂಗೀತದಲ್ಲಿ ಗಾಢ ಒಲವು. ಏಳು ವರ್ಷಕ್ಕೆ ತಂದೆ, "ಲಂಬೋದರ ಲಕುಮಿಕರ" ದೊಂದಿಗೆ ಸಂಗೀತಪಾಠ ಆರಂಭಿಸಿದರು. ಎರಡು ವರ್ಷಗಳಲ್ಲಿ ಸರಳೆ, ಜಂಟೆ,

ವರ್ಣ, ಕೀರ್ತನ ಕಲಿಸಿದರು. ಬಸವರಾಜರನ್ನು ತಂದೆ ತಮ್ಮ ಸ್ನೇಹಿತ ವಾಮನರಾವ ಮಾಸ್ತರ ವಿಶ್ವಗುಣಾದರ್ಶ ನಾಟಕ ಮಂಡಳಿಯಲ್ಲಿ ಒಯ್ದಿಟ್ಟರು. ಬಸವರಾಜ ಬಾಲ ನಟರಾಗಿ ಹಲವಾರು ಪಾತ್ರಗಳಲ್ಲಿ ಮಿಂಚಿದರು.

೧೯೩೦ರಲ್ಲಿ ಬಸವರಾಜರ ತಂದೆ ತೀರಿಕೊಂಡರು. ಕೆಳದಿ ಸಂಸ್ಥಾನದ ಮಠಾಧಿಪತಿಯಾಗಿದ್ದ ಬಸವರಾಜರ ದೊಡ್ಡಪ್ಪನ ಮಗ ರೇವಣಸಿದ್ದ ಶಿವಾಚಾರ್ಯರು ಬಸವರಾಜರ ಜವಾಬ್ದಾರಿ ವಹಿಸಿಕೊಂಡರು. ನಾಟಕ ಕಂಪನಿಯಲ್ಲಿ ಮುಂದುವರಿದರೆ ಹುಡುಗ ಉಡಾಳನಾಗುವನೆಂದು ಹುಬ್ಬಳ್ಳಿಯ ಮೂರು ಸಾವಿರ ಮಠದ ಸಂಸ್ಕೃತ ಪಾಠಶಾಲೆಯಲ್ಲಿ ಇಟ್ಟರು. ಆದರೆ, ವಿಧಿಲಿಖಿತ ಬದಲಾದೀತೆ? ಒಂದು ದಿನ ಅದೃಷ್ಟ ಬಸವರಾಜರನ್ನು ಅರಸಿಬಂತು. ಯಾವುದೂ ಊರಿಗೆ ಹೋಗಬೇಕಿದ್ದ ಪಂಚಾಕ್ಷರಿ ಗವಾಯಿಗಳು ಕೊನೆಯ ಬಸ್ಸು ತಪ್ಪಿಸಿಕೊಂಡು ಮೂರುಸಾವಿರಮಠಕ್ಕೆ ಬಂದರು.

ಗುರುಸಿದ್ಧಸ್ವಾಮಿಗಳು "ಈ ಹುಡುಗ ಛಲೋ ಹಾಡತಾನ. ನಿಮ್ಮ ಕೂಡ ಕರಕೊಂಡು ಹೋಗಿರಿ" ಎಂದರು. ಅಂಧರಾಗಿದ್ದ ಪಂಚಾಕ್ಷರಿ ಗವಾಯಿಗಳು ಬಸವರಾಜರನ್ನು ಕರೆದು ಮೈದಡವಿ "ಮಗೂ, ಒಂದು ಹಾಡು ಹೇಳಪಾ" ಎಂದರು. ಬಸವರಾಜ "ವೀರ ಅಭಿಮನ್ಯು" ನಾಟಕದ "ಕರುಣಾಸಾಗರಾ ಪ್ರಭು ಪರಮಾತ್ಮಾ" ಪದ ಹೇಳಿದರು. ಪ್ರಸನ್ನರಾದ ಪಂಚಾಕ್ಷರಿ ಗವಾಯಿಗಳು "ಎಷ್ಟು ಛಂದ ಗಿರಡಿ ಹೊರಳಿಸತೀಯಲ್ಲೋ! ಎಲ್ಲಿ, ಇನ್ನೊಮ್ಮೆ ಅನ್ನು" ಎಂದು ಹೇಳಿದರು. ಗುರುಸಿದ್ಧಸ್ವಾಮಿಗಳನ್ನುದ್ದೇಶಿಸಿ "ಬುದ್ಧೀ, ಹುಡುಗ ಪಸಂದ ಬಿದ್ದಾನ. ಇಂದೇ ಕರೆದೊಯ್ಯುವೆ" ಎಂದರು. ಅದೊಂದು ಅಮೃತ ಘಳಿಗೆ. ಪೂರ್ವಜನ್ಮದ ಪುಣ್ಯ.

ಬಸವರಾಜ, ಪಂಚಾಕ್ಷರಿ ಗವಾಯಿಗಳ ಗಿಳಿವಿಂಡು ಸೇರಿದರು. ಶಿವಯೋಗಮಂದಿರ (ಬಾದಾಮಿ ತಾಲೂಕು, ವಿಜಾಪುರ ಜಿಲ್ಲೆ)ದಲ್ಲಿ ಕೆಲವು ವರ್ಷವಿದ್ದು ಆಮೇಲೆ ಗವಾಯಿಗಳ ಸಂಚಾರಿ ಸಂಗೀತ ಶಾಲೆಯೊಂದಿಗೆ ಕರ್ನಾಟಕದ ತುಂಬ ಸುತ್ತಾಟ. ಪಂಚಾಕ್ಷರಿ ಗವಾಯಿಗಳಲ್ಲಿ ಒಟ್ಟು ಹನ್ನೊಂದು ವರ್ಷ ಕರ್ನಾಟಕಿ, ಹಿಂದುಸ್ತಾನಿ ಎರಡೂ ಪದ್ಧತಿಗಳಲ್ಲಿ ಶಿಕ್ಷಣ ಪಡೆದು ಪಳಗಿದರು. ಬಸವರಾಜ ಏಕಪಾಠಿ. ಒಂದು ಸಲ ಹೇಳಿಸಿಕೊಂಡರಾಯಿತು. ಮತ್ತೊಮ್ಮೆ ಹೇಳಿಸಿಕೊಳ್ಳುವ ಅಗತ್ಯವಿರಲಿಲ್ಲ. ಪಂಚಾಕ್ಷರಿ ಗವಾಯಿಗಳು ಶಿಷ್ಯನ ಸಾಧನೆ ಪ್ರದರ್ಶಿಸಲು ಅವಕಾಶಕ್ಕಾಗಿ ಕಾಯ್ದಿದ್ದರು. ೧೯೩೬ರಲ್ಲಿ ಹಂಪಿಯಲ್ಲಿ ವಿಜಯನಗರ ಸಾಮ್ರಾಜ್ಯ ಸಂಸ್ಥಾಪನೆಯ ಷಡಶತಮಾನೋತ್ಸವ. ಹದಿನೈದು ಸಾವಿರ ಶ್ರೋತೃಗಳು. ಪಂಚಾಕ್ಷರಿ ಗವಾಯಿಗಳು ಶಿಷ್ಯನನ್ನು ಹಾಡಿಸಿದರು. ಸ್ವತಃ ತಾವೇ ತಬಲಾಕ್ಕೆ ಕುಣಿದರು. ಪುಟ್ಟರಾಜ ಗವಾಯಿಗಳು ಹಾರ್ಮೋನಿಯಂ ಸಾಧನೆಗೆ ಕುಳಿತರು. ಕರ್ಣ ರಸಾಯನ ಬಾಗೇಶ್ರೀ ರಾಗದ ನಂತರ ಬಸವರಾಜ ರಾಜಗುರು ಖಮಾಜ ರಾಗದಲ್ಲಿ ನಿಜಗುಣ

ಶಿವಯೋಗಿಗಳ "ನೋಡಲಾಗದ ದೇವಾ" ಹಾಡಿದರು. ಆ ಬೃಹತ್ ಶ್ರೋತೃಸಮೂಹ ಕಿವಿ ಗಡಚಿಕ್ಕುವಂತೆ ಚಪ್ಪಾಳೆ ತಟ್ಟಿ ಅಭಿನಂದಿಸಿತು. ಬಸವರಾಜರಿಗೆ ಅದೇ ತಾನೆ ಹದಿನಾರು ವರ್ಷ. ಗುರುಕುಲದ ಏಕಾಂತದಿಂದ ಲೋಕಾಂತ ಪ್ರವೇಶಿಸಿದ್ದರು. ಹಕ್ಕಿ ರೆಕ್ಕೆ ಬಡಿದು ಗೂಡಿನಿಂದ ಆಗಸಕ್ಕೆ ಹಾರಿತ್ತು.

೧೯೩೮ರಲ್ಲಿ ಮುಂಬಯಿ ಆಕಾಶವಾಣಿ ಕೇಂದ್ರದಿಂದ ಪ್ರಥಮ ಕಾರ್ಯಕ್ರಮ ಬಿತ್ತರವಾಯಿತು. ೧೫ ನಿಮಿಷಕ್ಕೊಂದರಂತೆ ಎರಡು ರಾಗಗಳು. ಬೆಳಿಗ್ಗೆ ಬಿಲಾವಲ, ರಾತ್ರಿ ಗೌಡಮಲ್ಹಾರ. ಸುತ್ತೆಲ್ಲ ಖ್ಯಾತಿ ಪಸರಿಸಿತು. ೧೯೩೮–೪೧ರ ಮಧ್ಯೆ ಬಸವರಾಜ ರಾಜಗುರು ಅವರ ಹಲವು ಧ್ವನಿಮುದ್ರಿಕೆಗಳು ಹೊರಬಂದವು ಶ್ಯಾಮಕಲ್ಯಾಣ, ದೇಸಿ, ಮಾಲಕಂಸ, ಮೇಘ, ಚಾಂದನಿ ಕೇದಾರ, ಹಂಸಧ್ವನಿ; ೧೨ ವಚನಗಳು–ಪರಚಿಂತೆ ಎಮಗೆ ಏಕೆ ಅಯ್ಯಾ, ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ, ಮಡಕೆಯ ಮಾಡುವರೆ ಮಣ್ಣೆ ಮೊದಲು, ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ, ವಚನದಲ್ಲಿ ನಾಮಾಮೃತ ತುಂಬಿ ಇತ್ಯಾದಿ. ಎಲ್ಲರ ಬಾಯಲ್ಲೂ ಅವುಗಳೆ. ವಚನಗಾಯನವನ್ನು ಜನಪ್ರಿಯಗೊಳಿಸಿದ ಶ್ರೇಯಸ್ಸಿನಲ್ಲಿ ಬಸವರಾಜ ರಾಜಗುರು ಅವರದು ದೊಡ್ಡ ಪಾಲು.

ಈಗ ಬಸವರಾಜ ರಾಜಗುರು ಅವರಿಗ ಭಾರತಾದ್ಯಂತ ಸುತ್ತಬೇಕು, ಅನುಭವ, ಖ್ಯಾತಿ ಗಳಿಸಿಕೊಳ್ಳಬೇಕೆಂಬ ಹೆಬ್ಬಯಕೆ. ೧೯೪೧ರಲ್ಲಿ ಗುರು ಪಂಚಾಕ್ಷರಿ ಗವಾಯಿಗಳ ಆಶೀರ್ವಾದ ಪಡೆದು ಸಂಗೀತ ಯಶೋಯಾತ್ರೆ ಹೊರಟರು. ನೇರವಾಗಿ ಮುಂಬಯಿಗೆ ಬಂದರು. ಎರಡು ವರ್ಷಗಳವರೆಗೆ ಕಚೇರಿ ನೀಡುವುದು, ಶ್ರೇಷ್ಠ ಸಂಗೀತಗಾರರ ಕಛೇರಿ ಕೇಳುವುದೆ ಕಾಯಕವಾಯಿತು. ಮುಂಬಯಿಯಲ್ಲಿ ಸವಾಯಿ ಗಂಧರ್ವರ ಸಂಪರ್ಕ. ಇಬ್ಬರೂ ಒಂದೇ ಕೋಣೆಯಲ್ಲಿ ವಾಸ್ತವ್ಯ. ಬಸವರಾಜ ರಾಜಗುರು ಈ ಸದವಕಾಶ ಉಪಯೋಗಿಸಿಕೊಂಡು ಸವಾಯಿ ಗಂಧರ್ವರಿಂದ ಕಲಿತರು. ಅರ್ಧಾಂಗವಾಯು ಬಡಿದು ಮುಂಬಯಿ ಬಿಡುವಾಗ ಸವಾಯಿ ಗಂಧರ್ವರು ತಮ್ಮ ಗುರುಬಂಧು ಸುರೇಶಬಾಬು ಮಾನೆ ಅವರಿಗೆ "ಈ ಹುಡುಗನ ಕಾಳಜಿ ತಗೊಳ್ಳರಿ" ಎಂದು ಹೇಳಿದರು. ೧೯೪೩ರಲ್ಲಿ ನಾಗಪುರದ ಅಖಿಲ ಭಾರತ ಸಂಗೀತ ಸಮ್ಮೇಳನಕ್ಕೆ ಆಮಂತ್ರಣ ಬಂತು. ಅಂದಿನಿಂದ ಬಸವರಾಜ ರಾಜಗುರು ಸುತ್ತದ ಊರಿಲ್ಲ; ಹಾಡದ ಸಂಗೀತ ಸಮ್ಮೇಳನ, ಆಕಾಶವಾಣಿ ಕೇಂದ್ರವಿಲ್ಲ.

ವಿದ್ಯೆಯನ್ನರಸಿ ಬಸವರಾಜ ರಾಜಗುರು ಲಾಹೋರಿಗೆ ಕಿರಾಣಾ ಘರಾಣೆಯ ಅಧ್ವರ್ಯ ಅಬ್ದುಲ್ ವಹೀದ ಖಾನರಲ್ಲಿಗೆ ಹೋದರು. ಎರಡು ವರ್ಷ ಮಾರ್ಗದರ್ಶನ ಪಡೆದರು. ವಹೀದಖಾನರು ಗುರು ಪಂಚಾಕ್ಷರಿ ಗವಾಯಿಗಳ ಗುರುಗಳು. ಅಲ್ಲಿಂದ ೧೯೪೭ರಲ್ಲಿ ಕರಾಚಿಗೆ ಲತೀಫ ಖಾನರಲ್ಲಿಗೆ ನಡೆದರು. ಆರು ತಿಂಗಳು ಪಾಠ ಹೇಳಿಸಿಕೊಂಡಿದ್ದರು. ಅಷ್ಟರಲ್ಲಿ ಹಿಂದುಸ್ತಾನ–ಪಾಕಿಸ್ತಾನ

ವಿಭಜನೆಯ ಕಾಳ್ಗಿಚ್ಚು ಹಬ್ಬಿ ಅಲ್ಲಿಂದ ಕಾಲುಕಿತ್ತರು.

ಬಸವರಾಜ ರಾಜಗುರು ಗಾಯನ ಪೌರುಷ ಮೆರೆದ ಸಂದರ್ಭಗಳು ಅನೇಕ. ಅವರಿಗೆ ತಮ್ಮ ಗಾಯನ ಸಾಮರ್ಥ್ಯದಲ್ಲಿ ಅಚಲ ವಿಶ್ವಾಸ. ಸ್ಪರ್ಧೆಯೆಂದರೆ ಹುರುಪು. ೧೯ಳಳ ಶಿಕಾರಿಪುರ (ಸಿಂಧ ಪ್ರಾಂತ)ದ ಹೋಳಿ ಸಂಗೀತ ಸಮ್ಮೇಳನ. ಹಿಂದೂ–ಮುಸ್ಲಿಮ ಗಾಯಕರ ಮಧ್ಯೆ ಪೈಪೋಟಿ. ಛೋಟೆ ಗುಲಾಮ ತೋಡಿಯನ್ನು ಎಷ್ಟೊಂದು ಜಬರದಸ್ತ ಹಾಡಿದರೆಂದರೆ ಅವರ ನಂತರ ಹಾಡಲು ಯಾರೂ ಮುಂದೆ ಬರಲಿಲ್ಲ. ಬಸವರಾಜ ರಾಜಗುರು ಜೀವನಪುರಿ ಹಾಡಿ ಶ್ರೋತೃಮನ ಗೆದ್ದರು. ಆರಂಭಿಕ ಷಡ್ಜ ಹಚ್ಚುತ್ತಲೆ ಕರತಾಡನ.

೧೯ಜಜ ನಗರ ಭವನ, ದಿಲ್ಲಿ. ವಿಷ್ಣು ದಿಗಂಬರ ಪಲುಸ್ಕರರ ಪುಣ್ಯತಿಥಿ. ಭಾರತದ ಎಲ್ಲೆಡೆಯಿಂದ ಸಂಗೀತ ದಿಗ್ಗಜಗಳು ಪಾಲ್ಗೊಂಡಿದ್ದರು. ಓಂಕಾರನಾಥ ಠಾಕೂರರು ಹಾಡಿದ ಮೇಲೆ ಹಾಡಲು ಯಾರೂ ಒಪ್ಪಲಿಲ್ಲ. ಸಂಘಾಟಕರು ವಾದ್ಯಸಂಗೀತ ವ್ಯವಸ್ಥೆಗೊಳಿಸಲು ಅಣಿಯಾದರು. ಬಸವರಾಜ ರಾಜಗುರು "ನಾನು ಹಾಡುವೆ'' ಎಂದು ಎದ್ದರು. ಈ ಯುವಕನ ದುಸ್ಸಾಹಸ ಕಂಡು ಶ್ರೋತೃಗಳು ಕೊಂಕುನೋಟ ಬೀರಿದರು. ಆದರೆ, ಬಸವರಾಜ ರಾಜಗುರು ಆತ್ಮವಿಶ್ವಾಸದಿಂದ ನಾಯಕಿ ಕಾನಡಾ ಹಾಡಿ ಶ್ರೋತೃಗಳನ್ನು ಮಂತ್ರಮುಗ್ಧರಾಗಿಸಿದರು. ಅದವರ ಪ್ರಥಮ ದಿಲ್ಲಿ ಕಾರ್ಯಕ್ರಮ.

೧೯ಜಜ. ನಾಂದೇಡ ಸಂಗೀತ ಸಮ್ಮೇಳನ. ರಾತ್ರಿ ಹಾಡಬೇಕಿದ್ದ ರಾಜಗುರು ಬೆಳಿಗ್ಗೆ ಆಗಮಿಸಿ ವಿಶ್ರಮಿಸಿದ್ದರು. ಬೆಳಿಗ್ಗೆ ಬರಬೇಕಿದ್ದ ಡಿ.ವ್ಹಿ. ಪಲುಸ್ಕರ ಬಂದಿರಲಿಲ್ಲ. ಸಂಘಾಟಕರು ಬಸವರಾಜ ರಾಜಗುರು ಅವರನ್ನು ವಿನಂತಿಸಿಕೊಂಡರು. ಪಯಣದ ಆಯಾಸ ಲೆಕ್ಕಿಸದೆ ಹಾಡಿದರು. ಶ್ರೋತೃಗಳು ಬಿಡಲೊಲ್ಲರು. ಮಧ್ಯಾಹ್ನ ೧ ರವರೆಗೆ ಗಾಯನ ಮುಂದುವರಿಯಿತು. ಸಂಗೀತ ತಿಳಿದಿದ್ದ ಅಂದಿನ ಬಾನುಲಿ ಮಂತ್ರಿ ಬಿ.ವ್ಹಿ. ಕೇಸಕರ ಮಾತನಾಡಿದರು : "ಎಷ್ಟೊತ್ತಿನಲ್ಲಿಯೆ ಹಾಡಲಿ, ಬಸವರಾಜ ರಾಜಗುರು ಗಾಯನ ಹುಸಿ ಹೋದುದಿಲ್ಲ. ಅವರು ಹುಕುಮಿ ಎಕ್ಕಾ ಇದ್ದಂತೆ''.

ಬಸವರಾಜ ರಾಜಗುರು ಅವರದು ಚೆನ್ನದ ಕಂಠ. ಮೇಣದಂತೆ ಮಿದುವು. ಮಧುವಿನಂತೆ ಮಧುರ. ಅದಕ್ಕೊಪ್ಪುವಂತಹ ಆಪ್ಯಾಯಮಾನ ಗಾಯನ ಶೈಲಿ. ಕಿರಾಣಾ, ಗ್ವಾಲಿಯರ, ಪಟಿಯಾಲಾ ಘರಾಣೆಗಳ ತ್ರಿವೇಣಿ. ಹನ್ನೊಂದು ಗುರುಗಳ–ಪಂಚಾಕ್ಷರಿ ಗವಾಯಿ, ನೀಲಕಂಠಬುವಾ ಮಿರಜಕರ, ಸವಾಯಿ ಗಂಧರ್ವ, ಸುರೇಶಬಾಬು ಮಾನೆ, ಬಶೀರಖಾನ, ಮುಬಾರಕ ಅಲಿ ವಹೀದಖಾನ, ಲತೀಫಖಾನ, ಇನಾಯತುಲ್ಲಾಖಾನ, ರೋಶನ್ ಅಲಿ, ಗೋವಿಂದರಾವ ಟೇಂಬೆ–ಬಳಿ ಮಧುಕರ ವೃತ್ತಿಯಿಂದ ಸಂಗ್ರಹಿಸಿದ ಮಕರಂದ. ಈ ಪ್ರಭೃತಿಗಳ ಭಿನ್ನ ಭಿನ್ನ ಪ್ರಭಾವಗಳನ್ನು ತೇಪೆಯಾಗದಂತೆ ತಮ್ಮ ಪ್ರಭೆಯಲ್ಲಿ ಎರಕ ಹೊಯ್ದು

ವಿಶಿಷ್ಟ ರಾಜಗುರು ಛಾಪ ಗಾಯನ ಶೈಲಿ ರೂಪಿಸಿಕೊಂಡ ಹಿರಿಮೆ.

ಎಲ್ಲಿಲ್ಲದ ವೈವಿಧ್ಯ : ಧ್ರುಪದ, ಧಮಾರ, ಖಯಾಲ, ಠುಮರಿ, ಗಜಲ್, ಕನ್ನಡ ಮತ್ತು ಮರಾಠಿ ರಂಗಗೀತೆಗಳು, ವಚನಗಳು, ದಾಸರ ಪದಗಳು, ಕೀರ್ತನೆ, ದೊಡ್ಡಾಟದ ಪದಗಳು, ಎಲ್ಲದರಲ್ಲೂ ಅದೇ ಸುಶ್ರಾವ್ಯತೆ, ಪರಿಣತಿ. ಒಂದೊಂದು ರಾಗದಲ್ಲಿ ೪೦–೪೫ ಚೀಜು ಹಾಡಬಲ್ಲ ಬಹುಶ್ರುತತ್ವ. ಶ್ರುತಿಗೆ ಒಂದಿನಿತೂ ಚ್ಯುತಿಯಾಗದಂತೆ ಮೂರೂ ಸಪ್ತಕಗಳಲ್ಲಿ ಸಂಚರಿಸಬಲ್ಲ ಸಾಮರ್ಥ್ಯ. ತಾರಸಪ್ತಕದಲ್ಲಂತೂ ಸಂಭ್ರಮ. ತಾನುಗಳಲ್ಲಿ ನಿರಾಯಾಸತೆ ಮತ್ತು ಸಂಕೀರ್ಣತೆ. ತೀವ್ರಗತಿಯಲ್ಲೂ ಇಂಚರ ಅಬಾಧಿತ. ಸ್ವರಶುದ್ಧತೆಗೆ ಬಾಧೆ ತರದ ಸ್ಪಷ್ಟೋಚ್ಚಾರಣೆ. ಬಸವರಾಜ ರಾಜಗುರು ಗಾಯನದಲ್ಲಿ ಖಾಸೀಟ್, ಮುರ್ಕಿ, ಮೀಂಡ, ಸರಗಮ್, ಬೋಲತಾನ, ಏನೆಲ್ಲ ಮಸಾಲೆಗಳು. ಅದೊಂದು ನಳಪಾಕ. ಇದೆಲ್ಲಕ್ಕೆ ಉಪ್ಪಿನಕಾಯಿಯಂತೆ ಅವರ ಆಶು ಚಮತ್ಕಾರ.

ಬಸವರಾಜ ರಾಜಗುರು ಅವರಿಗೆ ಸಂದ ಗೌರವಗಳು ಹತ್ತು ಹಲವು. ಗಾನ ಕೋಕಿಲೆ, ಸಂಗೀತ ಸುಧಾಕರ, ಗಾನಗಂಧರ್ವ ಮೊದಲಾದ ಬಿರುದುಗಳು. ಕರ್ನಾಟಕ ರಾಜ್ಯಪ್ರಶಸ್ತಿ, ಕೇಂದ್ರ ಸಂಗೀತ ಅಕಾಡಮಿ ಪುರಸ್ಕಾರ, ಪದ್ಮಭೂಷಣ,
ಕರ್ನಾಟಕ ರಾಜ್ಯಪ್ರಶಸ್ತಿ, ಕೇಂದ್ರ ಸಂಗೀತ ಅಕಾಡಮಿ ಪುರಸ್ಕಾರ, ಪದ್ಮಭೂಷಣ,
ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್. ಎಲ್ಲಕ್ಕಿಂತ ಮಿಗಿಲಾದ ಭೌತಿಕವಾಗಿ ಇಂದು ಇಲ್ಲದಿದ್ದರೂ ಶಿಷ್ಯರ ಕಂಠಗಳಲ್ಲಿ ಜೀವಂತವಾಗಿರುವರು. ಅವರ ಶಿಷ್ಯವರ್ಗ ದೊಡ್ಡದು : ಸೋಮನಾಥ ಮರಡೂರ, ಷಣ್ಮುಖ ಗೋಜನೂರ, ಗಣಪತಿ ಭಟ್ಟ, ಪರಮೇಶ್ವರ ಹೆಗಡೆ, ಶಾಂತಾರಾಮ ಹೆಗಡೆ, ಶ್ರೀಪಾದ ಹೆಗಡೆ, ದತ್ತ ಜೋಶಿ, ಸಂಗೀತಾ ಕಟ್ಟಿ, ಪೂರ್ಣಿಮಾ ಭಟ್ಟ, ರೋಹಿಣಿ ದೇಶಪಾಂಡೆ, ನಚಿಕೇತ, ಹೀಗೆಯೇ ಪಟ್ಟಿ ಬೆಳೆಯುತ್ತದೆ. ಬಸವರಾಜ ರಾಜಗುರು ಅವರಲ್ಲಿ ಗುರುದಕ್ಷಿಣೆ ಕೊಡಲು ಏನೂ ಇಲ್ಲದುದನ್ನು ಅರಿತು ಪಂಚಾಕ್ಷರಿ ಗವಾಯಿಗಳು, "ನನ್ನಂತೆ ನೀನೂ ಪ್ರೀತಿಯಿಂದ ಶಿಷ್ಯರಿಗೆ ಕಲಿಸು. ಅದೇ ನನ್ನ ಗುರುದಕ್ಷಿಣೆ" ಎಂದು ಆಶೀರ್ವದಿಸಿದರು. ಬಸವರಾಜ ರಾಜಗುರು ಕೊನೆಯವರೆಗೂ ಆ ಕಾಯಕ ಪಾಲಿಸಿದರು.

* * *

## 1991ನೇ ಸಾಲಿನ ಕರ್ನಾಟಕ ಸಂಗೀತ, ನೃತ್ಯ ಅಕಾಡೆಮಿಯ 'ಕರ್ನಾಟಕ ಕಲಾತಿಲಕ' ಬಿರುದು ಹಾಗೂ ಪ್ರಶಸ್ತಿ ವಿಜೇತರು

| | | |
|---|---|---|
| ಶ್ರೀ ಕೆ. ಆರ್. ರಾಜಯ್ಯಂಗಾರ್ | – | ವೀಣೆ (ಕರ್ನಾಟಕ ಸಂಗೀತ) |
| ಶ್ರೀ ರಾ. ಚಂದ್ರಶೇಖರಪ್ಪ | – | ಗಾಯನ (ಕರ್ನಾಟಕ ಸಂಗೀತ) |
| ಶ್ರೀ ಬಿ. ರಾಮದಾಸಪ್ಪ | – | ನಾದಸ್ವರ (ಕರ್ನಾಟಕ ಸಂಗೀತ) |
| ಶ್ರೀ ವಿ.ವಿ. ರಂಗನಾಥನ್ | – | ಮೃದಂಗ (ಕರ್ನಾಟಕ ಸಂಗೀತ) |
| ಶ್ರೀ ಚಂದ್ರಶೇಖರ ಪುರಾಣಿಕ ಮಠ | – | ಗಾಯನ (ಹಿಂದೂಸ್ಥಾನಿ) |
| ಶ್ರೀಮತಿ ಕೃಷ್ಣಾ ಹಾನಗಲ್ಲ | – | ಗಾಯನ (ಹಿಂದೂಸ್ಥಾನಿ) |
| ಡಾ. ರಾಜೀವ್ ತಾರಾನಾಥ್ | – | ಸರೋದ್ (ಹಿಂದೂಸ್ಥಾನಿ) |
| ಶ್ರೀಮತಿ ವಸುಂಧರ ದೊರೆಸ್ವಾಮಿ | – | ನೃತ್ಯ (ಭರತನಾಟ್ಯ) |
| ಶ್ರೀ ಮೋಹನಕುಮಾರ್ ಉಳ್ಳಾಲ | – | ನೃತ್ಯ (ಭರತನಾಟ್ಯ) |
| ಶ್ರೀ ಬಿ.ಆರ್. ಶೇಷಾದ್ರಿ | – | ನೃತ್ಯ (ಮೃದಂಗ) |
| ಶ್ರೀ ಇಂದುಧರ ಹೆಚ್. ಪೂಜಾರ್ | – | ಸುಗಮ ಸಂಗೀತ |
| ವೇದಬ್ರಹ್ಮ ಶ್ರೀಪಾದ ಶಾಸ್ತ್ರಿ ಕುರ್ತಕೋಟಿ | – | ಹರಿಕಥೆ |
| ಶ್ರೀ ಸದಾನಂದ ಕನವಳ್ಳಿ | – | ಕಲಾವಿಮರ್ಶೆ |

# ಶೈಕ್ಷಣಿಕ ವೈಜ್ಞಾನಿಕ ಚಟುವಟಿಕೆಗಳು

– ಎಚ್. ಎಸ್. ನಿರಂಜನಾರಾಧ್ಯ

ನಮ್ಮ ರಾಜ್ಯದ ವಿವಿಧ ಸರ್ಕಾರಿ ಇಲಾಖೆಗಳು ಹಾಗೂ ಸರ್ಕಾರೇತರ ಸಂಸ್ಥೆಗಳು ಕನ್ನಡಿಗರಿಗೆ ವಿವಿಧ ವಿಷಯಗಳನ್ನು ಮನದಟ್ಟು ಮಾಡಿಕೊಡಲು ಪ್ರಯತ್ನಿಸುತ್ತಿವೆ. ಈ ಪ್ರಯತ್ನದಲ್ಲಿ ಯಶಸ್ವಿಯಾಗಲು ವಿವಿಧ ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಪದ್ಧತಿಗಳನ್ನು ಬಳಸುತ್ತಿವೆ. 1991ರ ಶೈಕ್ಷಣಿಕ ಚಟುವಟಿಕಗಳಲ್ಲಿ ರಾಷ್ಟ್ರೀಯ ಸಾಕ್ಷರತಾ ಆಯೋಗ ಹಾಗೂ ರಾಜ್ಯ ಸರ್ಕಾರದ ಶಿಕ್ಷಣ ಇಲಾಖೆಯು ಸಂಯುಕ್ತವಾಗಿ ಸಹಾಯ ಮಾಡಿ ಜನಾಂದೋಲನ ರೂಪದಲ್ಲಿ ಸಂಪೂರ್ಣ ಸಾಕ್ಷರತಾ ಆಂದೋಲನವನ್ನು ಜಾರಿಗೆ ತರುತ್ತಿರುವುದು ಅತ್ಯಂತ ವಿಶೇಷವಾದ ಚಟುವಟಿಕೆ.

ಸ್ವಾತಂತ್ರ್ಯ ಬಂದ ಮೊದಲ ವರ್ಷಗಳಿಂದ ನಮ್ಮ ದೇಶದಲ್ಲಿನ ಅನಕ್ಷರತೆಯನ್ನು ನಿವಾರಿಸುವುದಕ್ಕೆ ವಿವಿಧ ರೀತಿಯ ಪ್ರಯತ್ನಗಳು ಸಾಗಿದವು. ವಯಸ್ಕರ ಶಿಕ್ಷಣ ಯೋಜನೆ, ಪ್ರತಿಯೊಬ್ಬ ಅಕ್ಷರಸ್ಥ ಒಬ್ಬ ಅನಕ್ಷರಸ್ಥನನ್ನು ಅಕ್ಷರಸ್ಥನನ್ನಾಗಿ ಮಾಡುವುದು, ಪ್ರೇರಕರ ಮೂಲಕ ವಯಸ್ಕರ ಶಿಕ್ಷಣ ಜಾರಿಗೊಳಿಸುವುದು ಇತ್ಯಾದಿ. ಸರ್ಕಾರದ ಈ ಪ್ರಯತ್ನಗಳ ಜೊತೆಗೆ ಮಹಾತ್ಮ ಗಾಂಧಿಯವರ ಅನುಯಾಯಿಗಳು, ಸರ್ವೋದಯ ಕಾರ್ಯಕರ್ತರು ಹಾಗೂ ವಿವಿಧ ಕಾರ್ಮಿಕ, ರೈತ ಸಂಘಟನೆಗಳು ವಯಸ್ಕರ ಶಿಕ್ಷಣ ಜಾರಿಗೊಳಿಸಲು ಪ್ರಯತ್ನಿಸುತ್ತಿದ್ದವು. ಆದರೆ ಈ ಎಲ್ಲ ಪ್ರಯತ್ನಗಳು ಪೂರ್ಣ ಯಶಸ್ಸು ಗಳಿಸಿರಲಿಲ್ಲ. ಈ ಪ್ರಯತ್ನಗಳಲ್ಲಿ ಒಂದಲ್ಲ ಒಂದು ಕೊರತೆ ಎದ್ದು ಕಾಣುತ್ತಿತ್ತು. 1988ರಲ್ಲಿ ಭಾರತದಲ್ಲಿರುವ ಅನಕ್ಷರತೆಯನ್ನು ನಿವಾರಿಸುವ ದೃಢ ಉದ್ದೇಶದಿಂದ ರಾಷ್ಟ್ರೀಯ ಸಾಕ್ಷರತಾ ಆಯೋಗವನ್ನು ಕೇಂದ್ರ ಸರ್ಕಾರ ರಚಿಸಿತು. 1990ರಲ್ಲಿ ರಾಷ್ಟ್ರದ ವಿವಿಧ ರಾಜ್ಯದಲ್ಲಿರುವ ಜನ ವಿಜ್ಞಾನ ಸಂಘಟನೆಗಳು 'ಸಾಕ್ಷರತೆ ಮತ್ತು ಸ್ವಾವಲಂಬನೆಗಾಗಿ ವಿಜ್ಞಾನ ಮತ್ತು ತಂತ್ರಜ್ಞಾನ' ಎಂಬ ಘೋಷಣೆಯೊಂದಿಗೆ ಒಂದು ಬೃಹತ್ ಆಂದೋಲನ ಪ್ರಾರಂಭಿಸಿದವು. ಅದರ ಜೊತೆ ಜೊತೆಗೆ ಸಂಪೂರ್ಣ ಸಾಕ್ಷರತಾ ಆಂದೋಲನದ ಹೊಸ ಮಾದರಿಯೊಂದನ್ನು ಕೇರಳ ರಾಜ್ಯದ ಎರ್ನಾಕುಲಂ ಜಿಲ್ಲೆಯಲ್ಲಿ ನಡೆಸಲಾಯಿತು. ಸರ್ಕಾರ, ಅಧಿಕಾರಿಗಳು, ಸ್ವಯಂ ಸೇವಾ ಸಂಸ್ಥೆಗಳು ಹಾಗೂ ಜನರೆಲ್ಲರು ಸೇರಿ ಜನಾಂದೋಲನದ

ರೀತಿಯಲ್ಲಿ ನಡೆದ ಈ ಯಶಸ್ವಿ ಪ್ರಯೋಗವನ್ನು ಕರ್ನಾಟಕದ ಮಂಗಳೂರು ಹಾಗೂ ಬಿಜಾಪುರ ಜಿಲ್ಲೆಗಳಲ್ಲಿಯೂ ನಡೆಸಲಾಯಿತು. ಮಂಗಳೂರು ಜಿಲ್ಲೆಯಲ್ಲಿ ಸಂಪೂರ್ಣವಾಗಿ ಸಾಕ್ಷರತಾ ಆಂದೋಲನ ಯಶಸ್ವಿಯಾದದ್ದು ಮತ್ತು ಆ ಜಿಲ್ಲೆಯನ್ನು 1991ರಲ್ಲಿ ಕರ್ನಾಟಕದ ಪ್ರಥಮ ಸಂಪೂರ್ಣ ಸಾಕ್ಷರತಾ ಜಿಲ್ಲೆಯನ್ನಾಗಿ ಘೋಷಿಸಿದ್ದು ಅತ್ಯಂತ ಮಹತ್ವದ ಸಂಗತಿ. 15 ರಿಂದ 40 ವಯೋಮಾನದ ಯುವಕರಿಗೆ ಔಪಚಾರಿಕ ಹಾಗೂ ಅನೌಪಚಾರಿಕ ವಿಧಾನದಿಂದ ಸಾವಿರಾರು ಸ್ವಯಂಸೇವಕರು ಶಿಕ್ಷಣ ನೀಡಿದ್ದು ಕರ್ನಾಟಕ ಶೈಕ್ಷಣಿಕ ಚರಿತ್ರೆಯಲ್ಲೇ ಮೊದಲು ದಾಖಲಿಸಬೇಕಾದ ಸಂಗತಿ.

ಸಂಪೂರ್ಣ ಸಾಕ್ಷರತಾ ಆಂದೋಲನದ ವಿಶೇಷವೆಂದರೆ ಇಡೀ ಜಿಲ್ಲೆಯಲ್ಲಿ ಸಾಕ್ಷರತಾ ವಾತಾವರಣವನ್ನು ನಿರ್ಮಿಸುವುದು. ಜಿಲ್ಲೆಯ ಎಲ್ಲ ಅಕ್ಷರಸ್ಥ ಹಾಗೂ ಅನಕ್ಷರಸ್ಥರನ್ನು ತಲುಪುವಂತಹ ಬಹು ಮಾಧ್ಯಮಗಳ ಜಾಥ ನಡೆಸುವುದು. ಸಾಕ್ಷರತೆಯ ಮಹತ್ವ, ಸಾಮಾಜಿಕ ಋಣ, ಜನರ ಕರ್ತವ್ಯ ಮುಂತಾದವುಗಳ ಬಗ್ಗೆ ತಿಳಿಸುತ್ತಲೇ ಜಿಲ್ಲೆಯ ಎಲ್ಲ ಜನರನ್ನು ಕಲಿಸಲು ಅಥವಾ ಕಲಿಯಲು ಸಿದ್ಧಗೊಳಿಸುವುದು. ಸಾಕ್ಷರತಾ ಸಮಾವೇಶ, ವಿಚಾರ ಸಂಕಿರಣ, ಕಲಾ ಜಾಥ, ಚರ್ಚೆ, ಉಪನ್ಯಾಸ, ಭಿತ್ತಿ ಪತ್ರ ಮುಂತಾದವುಗಳ ಮೂಲಕ ಸಾಕ್ಷರತಾ ಕಾರ್ಯಕರ್ತರ ಪಡೆಯನ್ನು ಪ್ರತಿಹಳ್ಳಿಯಲ್ಲಿಯೂ ರಚಿಸುವುದು, ವಾತಾವರಣ ನಿರ್ಮಾಣದ ಮುಖ್ಯ ಉದ್ದೇಶ. ಪ್ರತಿ ಹತ್ತು ಅನಕ್ಷರಸ್ಥರಿಗೆ ಒಬ್ಬ ಅಕ್ಷರಸ್ಥ ಸ್ವಯಂಸೇವಕನನ್ನು ಯಾವುದೇ ಸಂಭಾವನೆಗಳನ್ನು ಬಯಸದೆ ಶಿಕ್ಷಣ ನೀಡುವುದಕ್ಕೆ ಸಿದ್ಧವಾಗುವಂತೆ ಮಾಡುವುದು ಮತ್ತೊಂದು ಉದ್ದೇಶ.

ಅನಂತರ ಕಲಿಕಾ ಕೇಂದ್ರಗಳನ್ನು ರಾತ್ರಿಯ ವೇಳೆ ನಡೆಸುವುದು ಮತ್ತು ಈ ಉದ್ದೇಶಕ್ಕಾಗಿಯೇ ಸಿದ್ಧಪಡಿಸಲಾದ ಪುಸ್ತಕಗಳನ್ನು ಬಳಸಿಕೊಂಡು ಅನಕ್ಷರಸ್ತರನ್ನು ಅಕ್ಷರಸ್ಥರನ್ನಾಗಿ ಮಾಡಬೇಕು. ಇಂತಹ ವಿಶಿಷ್ಟ ಪ್ರಯೋಗದಲ್ಲಿ ಹೆಚ್ಚಿನ ಪ್ರಮಾಣದ ಶಿಕ್ಷಕರು 7–8 ತರಗತಿಯ ವಿದ್ಯಾರ್ಥಿಗಳಾಗಿರುವುದು ಮತ್ತೊಂದು ವಿಶೇಷ. ವಯಸ್ಕ ಅನಕ್ಷರಸ್ಥರ ಆಸಕ್ತಿ ಉಳಿಸಿಕೊಳ್ಳಲು ಹಾಗೂ ಅವರ ಅನುಭವ ಹಾಗೂ ವಯೋಗುಣಗಳಿಗೆ ಅನುಗುಣವಾಗಿ ಶಿಕ್ಷಣ ರೀತಿ ನೀತಿಗಳನ್ನು ರೂಪಿಸಿರುವುದು ಎಲ್ಲ ಆಂದೋಲನಗಳಲ್ಲಿ ಕಂಡು ಬಂದಿದೆ. ಮೊದಲು ಅಕ್ಷರಗಳನ್ನು ಕಲಿಯುವ ಬದಲು ನೇರವಾಗಿ ಪದ ಪುಂಜಗಳನ್ನು ಕಲಿಸುವ ವಿಧಾನ ವಿನೂತನ. ಅಲ್ಲದೆ ಅನಕ್ಷರಸ್ಥರ ಜೀವನಕ್ಕೆ ನೇರ ಸಂಬಂಧವಿರುವ ಪದಗಳನ್ನು ಆಯ್ಕೆ ಮಾಡಿ, ಅವುಗಳ ತರಪೇತಿಯನ್ನು ಸ್ವಯಂ ಸೇವಕ ಶಿಕ್ಷಕರಿಗೆ ನೀಡಲಿಲ್ಲವಾಗಿದ್ದರಿಂದ ಕೆಲವೊಮ್ಮೆ ಶಿಕ್ಷಣ ವಿಧಾನದಲ್ಲಿ ವ್ಯತ್ಯಾಸ ಕಂಡುಬಂದಿದೆ.

1991ರಲ್ಲಿ ಕರ್ನಾಟಕ ಮೂರು ಜಿಲ್ಲೆಗಳು ಸಂಪೂರ್ಣ ಸಾಕ್ಷರತಾ ಆಂದೋಲನದ ಪ್ರಯೋಗಕ್ಕೆ ಒಳಗಾದವು. ರಾಯಚೂರು, ಮಂಡ್ಯ ಮತ್ತು ತುಮಕೂರುಗಳಲ್ಲಿ ಸಾಕ್ಷರ ಸಂಗ್ರಾಮ, ಸಾಕ್ಷರ ಜ್ಯೋತಿ ಹಾಗೂ ಸಾಕ್ಷರ ಮಿತ್ರ ಹೆಸರುಗಳಲ್ಲಿ ಸಾಕ್ಷರತಾ ಆಂದೋಲನದ ಚಟುವಟಿಕೆಗಳು ಪ್ರಾರಂಭವಾದವು. ಪ್ರತಿ ಜಿಲ್ಲೆಯಲ್ಲಿರಬಹುದಾದ ಅನಕ್ಷರಸ್ಥರ ಸಮೀಕ್ಷೆ ನಡೆಸುವುದೂ ಸಹ ಈ ಆಂದೋಲನದಲ್ಲಿ ನಡೆಯಿತು. ಆಯಾ ಜಿಲ್ಲೆಯ ಭಾಷೆಯ ಸೊಗಡಿಗೆ ಅನುಗುಣವಾದ ಹಾಗೂ ಅಲ್ಲಿಯ ವಯಸ್ಕರು ಮಾತನಾಡುವ ಭಾಷೆಯನ್ನು ಗಮನಿಸಿ ಪುಸ್ತಕಗಳನ್ನು ರಚಿಸಲಾಗಿದೆ. ಪ್ರತಿ ಅನಕ್ಷರಸ್ತನೂ ಮೂರು ತಿಂಗಳಿಂದ ನಾಲ್ಕು ತಿಂಗಳುಗಳೊಳಗಾಗಿ ಸುಲಭವಾಗಿ ಕಲಿಯಬಹುದಾದ ಮೂರು ಪುಸ್ತಕಗಳನ್ನು ಸಿದ್ಧಪಡಿಸಲಾಯಿತು. ಈ ಮೂರು ಜಿಲ್ಲೆಗಳಲ್ಲಿ ಸಾಕ್ಷರತಾ ಆಂದೋಲನದ ಯಶಸ್ಸಿಗೆ ಎಲ್ಲಾ ರೀತಿಯ ಪ್ರಯತ್ನಗಳನ್ನು ಮಾಡಲಾಗಿದೆ.

1991ರಲ್ಲಿ ಶಾಲಾ ವಿದ್ಯಾರ್ಥಿ ಮತ್ತು ಜನಸಾಮಾನ್ಯರಲ್ಲಿ ವೈಜ್ಞಾನಿಕ ಮನೋಭಾವ ಬೆಳೆಸುವ ದೃಷ್ಟಿಯಿಂದ ಆಕಾಶವಾಣಿ ಬೆಂಗಳೂರು ಮತ್ತು ರಾಷ್ಟ್ರೀಯ ವಿಜ್ಞಾನ ಮತ್ತು ತಂತ್ರಜ್ಞಾನ ಸಂವಹನ ಮಂಡಲಿಯ ಆಶ್ರಯದಲ್ಲಿ ಶ್ರವ್ಯಮಾಧ್ಯಮದ ವಿನೂತನ ಪ್ರಯೋಗ ನಡೆಯಿತು. ಮಾನವನ ವಿಕಾಸದ ಬಗ್ಗೆ ಸರಳ ಭಾಷೆಯಲ್ಲಿ ಹಾಗೂ ಆಕರ್ಷಕ ರೀತಿಯಲ್ಲಿ ಬಾನುಲಿ ಪ್ರಸಾರ ಮಾಡಲಾಯಿತು. ಈ ಕಾರ್ಯಕ್ರಮವನ್ನು ಕೇಳುವುದಕ್ಕಾಗಿ ನೋಂದಾಯಿಸಿಕೊಂಡ ವಿದ್ಯಾರ್ಥಿಗಳಿಗೆ ಪರೀಕ್ಷೆಯೊಂದನ್ನು ನಡೆಸುವ ಯೋಜನೆ ಪ್ರಕಟಿಸಲಾಯಿತು. ಈ ಕಾರ್ಯಕ್ರಮ 1992 ರಲ್ಲಿಯೂ ಮುಂದುವರೆದಿದೆ.

ಕರ್ನಾಟಕ ಅರಣ್ಯ ಇಲಾಖೆ ಹಾಗೂ ಬೆಂಗಳೂರು ಆಕಾಶವಾಣಿಯವರು 'ಸಸ್ಯ ಸಂಜೀವಿನಿ' ಎಂಬ ಮತ್ತೊಂದು ಶ್ರವ್ಯ ಶಿಕ್ಷಣ ವಿಧಾನವನ್ನು ಬಳಸಿದರು. ನಮ್ಮ ಹಿತ್ತಲಿನಲ್ಲಿಯೇ ಬೆಳೆಸಲು ಸಾಧ್ಯವಿರುವ ಹಾಗೂ ಔಷಧೀಯ ಗುಣವಿರುವ ಸಸ್ಯಗಳ ಬಗ್ಗೆ ತಜ್ಞರಿಂದ ತಿಳುವಳಿಕೆ ನೀಡಲಾಯಿತು. ಆಸಕ್ತಿ ತೋರಿಸಿದ ಕೇಳುಗರಿಗೆ ಔಷಧಿಯ ಸಸ್ಯಗಳನ್ನು ವಿತರಿಸಲಾಯಿತು. ಹಾಗೂ ಇದೊಂದು ಯಶಸ್ವಿ ಪ್ರಯೋಗ.

ಪರಿಸರದ ಬಗ್ಗೆ ವಿದ್ಯಾರ್ಥಿಗಳಿಗೆ ಹಾಗೂ ಜನಸಾಮಾನ್ಯರಿಗೆ ತಿಳುವಳಿಕೆ ನೀಡಲು ರಾಜ್ಯ ವಿವಿಧ ಸಂಘ ಸಂಸ್ಥೆಗಳು ಅನೇಕ ಅನೌಪಚಾರಿಕ ವಿಧಾನಗಳನ್ನು ಬಳಸಿದವು. ಭಾರತೀಯ ವಿಜ್ಞಾನ ಮಂದಿರದ ಅಸ್ತ್ರ ವಿಭಾಗ ವಿಸ್ತರಣಾ ಕೇಂದ್ರವು ಕುಣಿಗಲ್ ತಾಲ್ಲೂಕಿನ ಉಂಗ್ರ ಎಂಬ ಹಳ್ಳಿಯಲ್ಲಿ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗೆ ಪರಿಸರ ಪ್ರಜ್ಞೆ ಬೆಳೆಸುವ ಉದ್ದೇಶದಿಂದ ಪ್ರಯೋಗವೊಂದನ್ನು ನಡೆಸಿತು. ಈ ಪ್ರಯೋಗದಿಂದ ಪ್ರೇರಣೆಗೊಂಡ ಭಾರತೀಯ ವಿಜ್ಞಾನ ಮಂದಿರದ ಪರಿಸರ ಶಿಕ್ಷಣ ಕೇಂದ್ರದವರು ಆ ಪ್ರಯೋಗಗಳ ಪ್ರಕಟಣೆ ಕೈಗೊಂಡಿದ್ದಾರೆ.

ಶ್ರೀಗುಜ್ಜಾರಪ್ಪನವರ ಉತ್ತಮ ಚಿತ್ರಗಳಿರುವ 'ಪರಿಸರ ಪರಿಚಯ' ಪುಸ್ತಕವನ್ನು ಮಕ್ಕಳಲ್ಲಿ ಪರಿಸರ ಪ್ರಜ್ಞೆ ಉಂಟು ಮಾಡಲು ಬಳಸಿಕೊಳ್ಳಬಹುದು. ಅಲ್ಲದೆ ರಾಜ್ಯದ ಶಿಕ್ಷಣ ಸಂಶೋಧನಾ ಹಾಗೂ ತರಬೇತಿ ಕೇಂದ್ರದವರು ಇದೇ ರೀತಿಯ ಚಟುವಟಿಕೆಗಳನ್ನು ರಾಜ್ಯದ ಶಾಲೆಗಳಲ್ಲಿ ಕೈಗೊಳ್ಳಲು ಆಲೋಚಿಸುತ್ತಿದ್ದಾರೆ. ಕೇಂದ್ರ ಸರ್ಕಾರದ ಆಶ್ರಯದಲ್ಲಿ ನಡೆಯುವ ಪರಿಸರ ಶಿಕ್ಷಣ ಕೇಂದ್ರವು ಬೆಂಗಳೂರಿನಲ್ಲಿ ವಿಭಾಗೀಯ ಕಛೇರಿ ಹೊಂದಿದೆ. ರಾಷ್ಟ್ರೀಯ ಪರಿಸರ ಪ್ರಜ್ಞೆ ಆಂದೋಲನದ ಆಶ್ರಯದಲ್ಲಿ 1991ರಲ್ಲಿ ರಾಜ್ಯದ ಆಯ್ದ ಶಾಲೆಗಳಲ್ಲಿ ಪರಿಸರ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸಿತು. ತರಬೇತಿ ಪಡೆದ ಶಿಕ್ಷಕರ ಮೂಲಕ ಮಕ್ಕಳೇ ಮಾಡಬಹುದಾದ ಪ್ರಯೋಗಗಳಿಂದ ಪರಿಸರ ಪ್ರಜ್ಞೆ ಉಂಟು ಮಾಡುವ ಪ್ರಯತ್ನ ಸಾಗಿತು. ತರಪೇತಿಯನ್ನು ಇಂಗ್ಲೀಷ್ ಭಾಷೆಯಲ್ಲಿ ನೀಡಿದ ಪ್ರಯುಕ್ತ ಹಾಗೂ ಕೆಲವು ನಿರುತ್ಸಾಹ ಅಧ್ಯಾಪಕರನ್ನು ಒಳಗೊಂಡಿದ್ದರಿಂದ ಈ ಪ್ರಯತ್ನ ಹೆಚ್ಚಿನ ಯಶಸ್ಸು ಕಾಣಲಿಲ್ಲ. ಸಮೀಪವಿರುವ ಹಲವಾರು ಶಾಲೆಗಳ ಅಧ್ಯಾಪಕರಿಗೆ ಪರಿಸರ ಪ್ರಜ್ಞೆಯ ತರಪೇತಿ ನೀಡಿ, ಅವರ ಮೂಲಕ ಮಕ್ಕಳಲ್ಲಿ ಪರಿಸರ ಚಟುವಟಿಕೆಗಳನ್ನು ನಡೆಸುವ ಪ್ರಯತ್ನ ಸ್ತುತ್ಯವಾದುದು. 1992ರಲ್ಲಿ ಈ ರೀತಿಯ ಚಟುವಟಿಕೆಗಳನ್ನು ಮುಂದುವರೆಸುವ ಹಾಗೂ ಪ್ರತಿ ಶಾಲಾ ಸಮೂಹಕ್ಕೆ ಒಂದು ಸಂಪನ್ಮೂಲ ಕೇಂದ್ರವನ್ನು ಸ್ಥಾಪಿಸಲು ಪ್ರಯತ್ನ ಸಾಗಿದೆ.

ಕೃಷಿ ವಿಶ್ವವಿದ್ಯಾಲಯ ವಿಸ್ತರಣಾ ಕೇಂದ್ರಗಳು ಹಾಗೂ ರಾಜ್ಯದ ಹಲವಾರು ಸ್ವಯಂ ಸೇವಾ ಸಂಘಟನೆಗಳು ಕೃಷಿಕರಿಗೆ ಕೋಳಿ ಸಾಕಾಣಿಕೆ, ಜೇನು ಸಾಕಾಣಿಕೆ, ಜಾನುವಾರು ಸಾಕಣೆ ಮುಂತಾದ ವಿಷಯಗಳ ಬಗ್ಗೆ ತರಪೇತಿಯನ್ನು ನಡೆಸಿವೆ.

ರಾಜ್ಯ ಶಿಕ್ಷಣ ಇಲಾಖೆಯು ಶಾಲೆಯ ಪಠ್ಯಪುಸ್ತಕಗಳನ್ನು 1992ನೇ ಸಾಲಿನಿಂದ ಬದಲಿಸುವ ಉದ್ದೇಶದಿಂದ ತಜ್ಞರ ಹಲವಾರು ಸಭೆಗಳನ್ನು ನಡೆಸಿತು.

ರಾಜ್ಯದಲ್ಲಿ ವೈಜ್ಞಾನಿಕ ಮನೋಭಾವ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಜನಪ್ರಿಯಗೊಳಿಸಲು ಪ್ರಯತ್ನಿಸುತ್ತಿರುವ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ವಿಜ್ಞಾನ ಬೋಧನೆಯನ್ನು ಆಕರ್ಷಕವಾಗುವಂತೆ ಮಾಡಲು ಅನೇಕ ಚಟುವಟಿಕೆಗಳನ್ನು ನಡೆಸಿತು. ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಹಾಗೂ ಜನಸಾಮಾನ್ಯರಿಗಾಗಿ ವಿಜ್ಞಾನ ಮತ್ತು ತಂತ್ರಜ್ಞಾನದ ವಿಷಯಗಳನ್ನು ಕನ್ನಡದಲ್ಲಿ ತಿಳಿಸುವ ಉದ್ದೇಶದಿಂದ 'ಬಾಲ ವಿಜ್ಞಾನ' ಎಂಬ ಮಾಸಿಕವನ್ನು ಪ್ರಕಟಿಸುತ್ತಿದೆ. ಪಠ್ಯದ ವಿಷಯಗಳಿಗೆ ಪೂರಕವಾದ ಲೇಖನಗಳನ್ನು ಹಾಗೂ ವಿಜ್ಞಾನದ ಬಗ್ಗೆ ಸರಳ ಆಕರ್ಷಕ ಲೇಖನಗಳನ್ನು ಒಳಗೊಂಡಿರುವ ಬಾಲ ವಿಜ್ಞಾನ ಕನ್ನಡ ಮಾಧ್ಯಮದಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಹಾಗೂ ಶಿಕ್ಷಕರಿಗೆ ಉತ್ತಮ ಮಾರ್ಗದರ್ಶಿಯಾಗಿ ಮುಂದುವರೆದಿದೆ. ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಲ್ಲಿ

ವಿಜ್ಞಾನದ ಬಗ್ಗೆ ಕುತೂಹಲ ಕೆರಳಿಸಲು 'ವಿಜ್ಞಾನ ದೀಪ' ಮಾಸಿಕ ಗೋಡೆ ಪತ್ರಿಕೆಯನ್ನು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಪ್ರಕಟಿಸುತ್ತಿದೆ. 18,000ಕ್ಕೂ ಹೆಚ್ಚು ಚಂದಾದಾರರನ್ನು ಬಾಲ ವಿಜ್ಞಾನ ಹೊಂದಿದೆ ಮತ್ತು ವಿಜ್ಞಾನ ದೀಪಕ್ಕೆ 2100 ಚಂದಾದಾರರಿದ್ದಾರೆ.

ವಿಜ್ಞಾನ ಶಿಕ್ಷಣ ಉತ್ತಮವಾಗಬೇಕಾದರೆ ಅಧ್ಯಾಪಕರು, ಪರಿಣಾಮಕಾರಿ ಬೋಧನ ಸಾಧನಗಳನ್ನು ಬಳಸಬೇಕು. ಗ್ರಾಮೀಣ ಪ್ರದೇಶದಲ್ಲಿನ ಅನೇಕ ಶಾಲೆಗಳಲ್ಲಿ ಪ್ರಯೋಗಾಲಯವಾಗಲಿ, ಕಾರ್ಯ ಮಾದರಿಗಳಾಗಲೀ ಇರುವುದಿಲ್ಲ. ಅಧ್ಯಾಪಕರು ತಾವೇ ಕಾರ್ಯ ಮಾದರಿಗಳನ್ನು ತಯಾರಿಸಿಕೊಂಡಾಗ ಮಾತ್ರ ಗ್ರಾಮೀಣ ವಿದ್ಯಾರ್ಥಿಗಳು ವಿಜ್ಞಾನ ನಿಯಮಗಳನ್ನು ಅರಿಯಲು ಸಾಧ್ಯ. ಆದ್ದರಿಂದ ಪ್ರತಿವರ್ಷ ರಾಜ್ಯ ಶಿಕ್ಷಣ ತರಬೇತಿ ಮತ್ತು ಸಂಶೋಧನಾ ಸಂಸ್ಥೆ ಹಾಗೂ ವಿಶ್ವೇಶ್ವರಯ್ಯ ವಿಜ್ಞಾನ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ ಸಂಸ್ಥೆಯವರು ಕಾರ್ಯ ಮಾದರಿಗಳ ಸ್ಪರ್ಧೆಯನ್ನು ಜಿಲ್ಲೆ ಹಾಗೂ ರಾಜ್ಯ ಮಟ್ಟದಲ್ಲಿ ನಡೆಸುತ್ತಾ ಬಂದಿದ್ದಾರೆ. ಇದರಿಂದ ಪ್ರೌಢ ಶಾಲಾ ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರ ಪ್ರತಿಭೆಯ ವಿಕಾಸಕ್ಕೆ ಅವಕಾಶ ಮಾಡಿಕೊಟ್ಟಂತಾಗುತ್ತಿದೆ. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು 1991ರ ಸೆಪ್ಟೆಂಬರ್ 7,8 ಮತ್ತು 9ರಂದು ಸುಲಭ ಬೆಲೆ ವಿಜ್ಞಾನ ಬೋಧನಾ ಸಾಮಗ್ರಿಗಳಲ್ಲಿ ಸ್ಪರ್ಧೆ ಮತ್ತು ಪ್ರದರ್ಶನವನ್ನು ಏರ್ಪಡಿಸಿತ್ತು. ಗ್ರಾಮೀಣ ಶಿಕ್ಷಕರಲ್ಲಿ ಈ ವಸ್ತು ಪ್ರದರ್ಶನ ಹೆಚ್ಚಿನ ಉತ್ಸಾಹ ಮೂಡಿಸಿತು. ಸುಲಭ ಬೆಲೆ ಬೋಧನ ಸಾಮಗ್ರಿಗಳ ತಯಾರಿಕೆ ಹಾಗೂ ಬಳಕೆಯಲ್ಲಿ ತರಪೇತಿಯನ್ನು ಕ.ರಾ.ವಿ.ಪ. ವು ದಾರವಾಢ, ಬೆಳಗಾವಿ, ತುಮಕೂರು, ದಾವಣಗೆರೆ, ಮೈಸೂರು, ಮರಿಯಮ್ಮನ ಹಳ್ಳಿ (ರಾಯಚೂರು), ಸುಗಟೂರು (ಕೋಲಾರ ಜಿಲ್ಲೆ) ಮುಂತಾದ ಕಡೆ ನಡೆಸಿತು.

ವಿಜ್ಞಾನ, ತಂತ್ರಜ್ಞಾನ ಸಾಧನೆಯನ್ನು ಕನ್ನಡಿಗರಿಗೆ ತಲುಪಿಸಬೇಕಾದರೆ ವಿಜ್ಞಾನದ ಕ್ಲಿಷ್ಟ ವಿಷಯಗಳನ್ನು ಸುಲಭವಾಗಿ ಜನಸಾಮಾನ್ಯರಿಗೂ ಅರ್ಥವಾಗುವಂತೆ ಬರೆಯುವ ಲೇಖಕರು ಸಿದ್ಧರಾಗಬೇಕು. ವಿಷಯ ಸಂಗ್ರಹಣೆ, ಶೈಲಿ, ವಿಧಾನ ಹಾಗೂ ಲೇಖನ ಸಿದ್ಧಪಡಿಸುವ ಬಗ್ಗೆ ರಾಜ್ಯದ ಆಯ್ದ ಯುವ ಲೇಖಕರಿಗೆ 1991 ಮೇ 25 ರಿಂದ 31 ರವರೆಗೆ ಹಾಸನದಲ್ಲಿ ವಿಜ್ಞಾನ ಲೇಖಕರ ಶಿಬಿರವೊಂದನ್ನು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಏರ್ಪಡಿಸಿತ್ತು.

1991ರ ಜೂನ್‌ನಲ್ಲಿ ವಿಶ್ವಪರಿಸರ ದಿನಾಚರಣೆಯ ಅಂಗವಾಗಿ "ನೀರಿನ ಸಂರಕ್ಷಣೆ ಹಾಗೂ ಸದ್ಬಳಕೆ"ಯ ಬಗ್ಗೆ ಜನ ಸಾಮಾನ್ಯರಲ್ಲಿ ಅರಿವುಂಟು ಮಾಡಲು ರಾಯಚೂರು ಹಾಗೂ ಬೇಲೂರುಗಳಲ್ಲಿ ರಾಜ್ಯ ಮಟ್ಟದ ತರಪೇತಿ ಶಿಬಿರವನ್ನು ಕ.ರಾ.ವಿ.ಪ. ನಡೆಸಿತು. ಬಿತ್ತಿ ಚಿತ್ರಗಳ ಮೂಲಕ ತಿಳುವಳಿಕೆ ನೀಡಲಾಯಿತು. ಅತ್ಯುತ್ತಮವಾಗಿ ರಕ್ಷಿಸಲ್ಪಟ್ಟ ಅರಣ್ಯಗಳ ಪರಿಸರಕ್ಕೆ ಹಾಗೂ

ಮನುಷ್ಯನಿಂದ ಹಾಳಾಗಿರುವ ಹಾಗೂ ಮಾಲಿನ್ಯಗೊಂಡಿರುವ ಸ್ಥಳಗಳಿಗೆ ಕರ್ನಾಟಕದ ಆಯ್ದ ವಿದ್ಯಾರ್ಥಿಗಳಿಗೆ ಪ್ರಾತ್ಯಕ್ಷಿಕ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ಹರಿಹರ ಕೈಗಾರಿಕಾ ಮಾಲಿನ್ಯ, ಭದ್ರಾ ನದಿಯ ಮಾಲಿನ್ಯ, ಕೆಮ್ಮಣ್ಣು ಗುಂಡಿ, ಪಶ್ಚಿಮ ಘಟ್ಟಗಳಿಗೆ ಹಾಗೂ ಕೈಗಾ ಅಣು ಸ್ಥಾವರಕ್ಕೆ ವಿದ್ಯಾರ್ಥಿಗಳು ಭೇಟಿ ನೀಡಿದರು. ಆನಂತರ ಅವರ ಅನಿಸಿಕೆಗಳನ್ನು ದಾಖಲು ಮಾಡಿಕೊಳ್ಳಲಾಯಿತು. ಮಾನವನಿಂದ ಪರಿಸರ ನಾಶವಾಗಿರುವುದನ್ನು ಪ್ರತ್ಯಕ್ಷವಾಗಿ ನಿರೀಕ್ಷಿಸಿದ ವಿದ್ಯಾರ್ಥಿಗಳು ತಮ್ಮ ಆಕ್ರೋಶವನ್ನು ಕವನಗಳಲ್ಲಿ ಹಾಗೂ ಲೇಖನಗಳಲ್ಲಿ ವ್ಯಕ್ತಪಡಿಸಿದರು. 1991ರ ನವೆಂಬರ್ ತಿಂಗಳಲ್ಲಿ ಜಾಗತಿಕ ಪರಿಸರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಹಾಗೂ ಸ್ಥಳೀಯ ಪರಿಸರ ಸಮಸ್ಯೆಗಳನ್ನು ನಿವಾರಿಸುವುದಕ್ಕೆ ರಾಯಚೂರು ಹಾಗೂ ಅಮ್ಮಸಂದ್ರದಲ್ಲಿ ಪರಿಸರ ಅಧ್ಯಯನ ಶಿಬಿರಗಳನ್ನು ನಡೆಸಲಾಯಿತು. ಹಾಡು, ನಾಟಕ, ರೂಪಕ ಹಾಗೂ ವಿವಿಧ ಜಾನಪದ ಮಾಧ್ಯಮಗಳ ಮೂಲಕ ಪರಿಸರ ರಕ್ಷಣೆಗೆ ಜನರು ಮುಂದಾಗುವಂತಹ ಅನೌಪಚಾರಿಕ ಶಿಕ್ಷಣವನ್ನು ನೀಡಲಾಯಿತು.

1991ರಲ್ಲಿ ಗಮನಿಸಬೇಕಾದ ಶೈಕ್ಷಣಿಕ ಚಟುವಟಿಕೆಗಳಲ್ಲಿ ಗಮನಿಸಬಹುದಾದ ಅಂಶವೆಂದರೆ ಅನೌಪಚಾರಿಕ ಪದ್ಧತಿಯಲ್ಲಿ ಸಂಪೂರ್ಣ ಸಾಕ್ಷರತಾ ಆಂದೋಲನವನ್ನು ಯಶಸ್ವಿಗೊಳಿಸಲು ಅಧಿಕಾರಿಗಳು, ಸ್ವಯಂ ಸೇವಕರು ಹಾಗೂ ಎಲ್ಲ ವಿಭಾಗಗಳು ಪ್ರಯತ್ನಿಸುತ್ತಿರುವುದು. ಇಂತಹ ಚಟುವಟಿಕೆಗಳಲ್ಲಿ ಅಧ್ಯಾಪಕರೂ ಭಾಗವಹಿಸುತ್ತಿರುವುದರಿಂದ ನಿಧಾನವಾಗಿ ಔಪಚಾರಿಕ ಶಿಕ್ಷಣವನ್ನು ಮತ್ತಷ್ಟು ಆಕರ್ಷಕವನ್ನಾಗಿಸುವ ಪಠ್ಯೇತರ ಶಿಕ್ಷಣ ವಿಧಾನಗಳನ್ನು ಅಧ್ಯಾಪಕರು ಮೈಗೂಡಿಸಿಕೊಳ್ಳುತ್ತಿದ್ದಾರೆ. ಜನರು ಶಾಲೆಯ ವ್ಯವಸ್ಥೆಯಲ್ಲಿ ಮಧ್ಯಪ್ರವೇಶಿಸಿ ಅಲ್ಲಿಯ ಕುಂದುಕೊರತೆಗಳನ್ನು ನಿವಾರಿಸಲು ಮುಂದೆ ಬರುವಂತಾಗಿದೆ. ಸಾಕ್ಷರತಾ ಆಂದೋಲನಗಳು ನವಸಾಕ್ಷರರನ್ನು ಸೃಷ್ಟಿಸುತ್ತಿವೆ. ನವಸಾಕ್ಷರರು ನಿರಂತರ ಕಲಿಕೆ ಮಾಡದಿದ್ದರೆ, ಅವರು ಮತ್ತೆ ಅನಕ್ಷರಸ್ಥರಾಗುವ ಸಾಧ್ಯತೆಯೇ ಹೆಚ್ಚು. ನವ ಸಾಕ್ಷರರಿಗಾಗಿಯೇ ಹೊಸ ಪುಸ್ತಕಗಳ ಅಗತ್ಯ ಉಂಟಾಗಿದೆ. ನವ ಸಾಕ್ಷರ ಸಾಹಿತ್ಯ ದೃಷ್ಟಿ ಹಾಗೂ ನವಸಾಕ್ಷರ ಶಿಕ್ಷಣ ಮುಂಬರುವ ವರ್ಷಗಳ ಹೊಸ ಕ್ಷೇತ್ರವಾಗಲಿದೆ.

* * *

(1)

**ಅಕ್ಷರ ಕಲಿಕೆಯ ಜೊತೆಗೆ ಪರಿಸರ, ಜೀವನದ ಮೌಲ್ಯಗಳ ಅರಿವೂ ಮೂಡಿಸುವ ಒಂದು ಮಾದರಿ**

ಪಾಠ – 6 ಕಾಡು ಬೆಳೆದರೆ ನಾಡು ಬೆಳೆವುದು

ಚರ್ಚೆ:– ಕಾಡು ಇಂದು ನಾಶವಾಗಿರುವುದರಿಂದ ಆಗಿರುವ ಅನಾಹುತಗಳ ಬಗ್ಗೆ ಚರ್ಚಿಸಿರಿ. ಹಾಗೆಯೇ ಕಾಡಿನಿಂದ ದೊರಕಲಿರುವ ಹಲವಾರು ಬಗೆಯ ಪ್ರಯೋಜನಗಳನ್ನು ತಿಳಿಸಿ ಹೇಳಿರಿ. ಹೀಗಿದ್ದೂ ಕಾಡಿನ ನಾಶದಿಂದಲೇ ಬರ ಉಂಟಾಗುವ ಬಗ್ಗೆ, ಇದರಿಂದ ಉದ್ಭವಿಸುವ ಸಮಸ್ಯೆಗಳ ಬಗ್ಗೆ ಚರ್ಚಿಸಿ ಕಾಡು ಬೆಳೆದರೆ ನಾಡು ಹೇಗೆ ಬೆಳೆಯುವುದು ಎನ್ನುವುದನ್ನು ಚರ್ಚಿಸಿರಿ.

**ಕಲಿಸಬೇಕಾದ ಅಕ್ಷರಗಳು :–**

**ರ ಡ ವ**

**ಪಾಠ – 7 ಒಂದು ಎರಡು ಚಂದ**

ಚರ್ಚೆ:– ದೇಶದ ಇಂದಿನ ಸಮಸ್ಯೆಗಳ ಬಗ್ಗೆ ತಿಳಿಯಪಡಿಸಿರಿ. ಇದಕ್ಕೆ ಹೆಚ್ಚಿದ ಜನಸಂಖ್ಯೆ ಹೇಗೆಲ್ಲಾ ಕಾರಣ ಎಂದು ಚರ್ಚಿಸಿರಿ. ಹಾಗೆಯೇ ನಿಮ್ಮ ಊರಿನ ಹೆಚ್ಚು ಮಕ್ಕಳಿರುವ ಕಷ್ಟದ ಸಂಸಾರಕ್ಕೂ, ಕಡಿಮೆ ಮಕ್ಕಳಿರುವ ಇನ್ನೊಂದು ಸಂಸಾರಕ್ಕೂ ಹೋಲಿಕೆ ಮಾಡಿ ಹೇಳಿ. ಹೆಚ್ಚು ಮಕ್ಕಳಾದಷ್ಟೂ ಸಮಸ್ಯೆಗಳು ಹೆಚ್ಚಾಗಿ ಅದರಿಂದ ಉಂಟಾಗುವ ಅನಾಹುತಗಳ ಬಗ್ಗೆಯೂ, ಕಡಿಮೆ ಮಕ್ಕಳಿದ್ದಲ್ಲಿ ದೊರಕಬಹುದಾದ ಪ್ರಯೋಜನದ ಬಗ್ಗೆಯೂ ವಿವರವಾಗಿ ಚರ್ಚಿಸಿರಿ.

**ಕಲಿಸಬೇಕಾದ ಅಕ್ಷರಗಳು :–**

**ಬ ಎ ಚ**

**ಕೃಪೆ : ಸಚೇತಕರ ಕೈಪಿಡಿ 'ಕಲಿಯೋಣ ಬಾ ಪಠ್ಯಪುಸ್ತಕದ ಜೀವನೆಗಾಗಿ' ರಾಜ್ಯ ವಯಸ್ಕರ ಶಿಕ್ಷಣ ಸಮಿತಿ**

(2)

## ದಕ್ಷಿಣ ಕನ್ನಡ ಜಿಲ್ಲೆ : ಸಾಕ್ಷರ ಜಿಲ್ಲೆಯ ಮೌಲ್ಯಮಾಪನ

1–4–1991 ರಿಂದ 31–7–'91

ಏಪ್ರಿಲ್ ತಿಂಗಳಲ್ಲಿ 120 ಕಲಿಕಾ ಗುಂಪುಗಳನ್ನು ಆರಿಸಿಕೊಂಡು ಆರಂಭಿಕ ಮೌಲ್ಯಮಾಪನವನ್ನು ಮಾಡಲಾಗಿದೆ. ಈ ಮೌಲ್ಯಮಾಪನದಲ್ಲಿ ಶೇಕಡಾ 90ಕ್ಕಿಂತ ಹೆಚ್ಚು ಮಂದಿ ಸಾಕ್ಷರಸ್ಥರು ಆಗಿರುವುದು ಕಂಡು ಬಂದಿರುತ್ತದೆ.

ಮೌಲ್ಯಮಾಪನ ಮಾಡಲು ಜಿಲ್ಲಾ ಮಟ್ಟದಲ್ಲಿ ಮೌಲ್ಯಮಾಪನ ನಮೂನೆಯನ್ನು ರೂಪಿಸಲಾಗಿತ್ತು. ಮೌಲ್ಯಮಾಪನ ನಮೂನೆಯಲ್ಲಿ ಶಿಕ್ಷಣಾರ್ಥಿಗಳು ಓದು, ಬರಹ, ಲೆಕ್ಕಾಚಾರ ಮತ್ತು ಅರಿವು ಇತ್ಯಾದಿಗಳ ಮೌಲ್ಯಮಾಪನ ಮಾಡಲು

ಅನುಕೂಲಗಳನ್ನು ಕಲ್ಪಿಸಲಾಗಿತ್ತು. ಶಿಕ್ಷಣಾರ್ಥಿಗಳ ಮೌಲ್ಯಮಾಪನವನ್ನು ಗಣ್ಯ ಮಹನೀಯರ ಸಮಕ್ಷಮದಲ್ಲಿ ನಡೆಸಲು ವ್ಯವಸ್ಥೆ ಮಾಡಲಾಗಿತ್ತು.

ಶಿಕ್ಷಣಾರ್ಥಿಗಳ ಒಟ್ಟು ಕಲಿಕೆಯ ಮೌಲ್ಯಮಾಪನವನ್ನು ಜುಲೈ ತಿಂಗಳ 6 ನೇ ತಾರೀಕು ಹಮ್ಮಿಕೊಳ್ಳಲಾಗಿತ್ತು. ಮೌಲ್ಯಮಾಪನದ ನಮೂನೆಯನ್ನು ಮಂಡಲ ಮಟ್ಟದಲ್ಲಿ ಕಾಯ್ದಿರಿಸಲಾಗಿದೆ. ಆಸಕ್ತರು ಮಂಡಲ ಮಟ್ಟದಲ್ಲಿ ಅದನ್ನು ಪರಿಶೀಲಿಸಬಹುದಾಗಿದೆ. ಮೌಲ್ಯಮಾಪನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು 2.21 ಲಕ್ಷ ಶಿಕ್ಷಣಾರ್ಥಿಗಳಲ್ಲಿ 1.64 ಲಕ್ಷ ಶಿಕ್ಷಣಾರ್ಥಿಗಳು ಸಾಕ್ಷರಸ್ಥರಾಗಿರುವುದು ಕಂಡು ಬಂದಿರುತ್ತದೆ. ಉಳಿದವರು ಅಲ್ಪ ಸ್ವಲ್ಪ ಶಿಕ್ಷಣವನ್ನು ಪಡೆದುಕೊಂಡಿರುತ್ತಾರೆ.

(ಕೃಪೆ : ಸಂಪೂರ್ಣ ಸಾಕ್ಷರತಾ ಆಂದೋಲನ 90–91 ದ. ಕ. ಜಿಲ್ಲೆ)

# ಪ್ರಶಸ್ತಿ ಪಡೆದ ವಿಜ್ಞಾನಿಗಳು

## ಯು. ಆರ್. ರಾವ್

ಅಧ್ಯಕ್ಷರು, ಬಾಹ್ಯಾಕಾಶ ಆಯೋಗ ಮತ್ತು ಕಾರ್ಯದರ್ಶಿ ಬಾಹ್ಯಾಕಾಶ ಇಲಾಖೆ, ಭಾರತ ಸರ್ಕಾರ, ಬೆಂಗಳೂರು

ಅಧ್ಯಕ್ಷರು, ಭಾರತದ ಬಾಹ್ಯಾಕಾಶ ಸಂಶೋಧನಾ ಸಂಸ್ಥೆ (ISRO) ಬೆಂಗಳೂರು.

ಭಾರತದ ಬಾಹ್ಯಾಕಾಶ ವಿಜ್ಞಾನದ ಪಿತಾಮಹನೆನಿಸುರುವ ಪ್ರೊ. ವಿಕ್ರಂ ಸಾರಾಬಾಯಿರವರ ಮಾರ್ಗದರ್ಶಿನದಲ್ಲಿ ಡಾಕ್ಟರೇಟ್ ಪದವಿ ಪಡೆದ ಕನ್ನಡಿಗ ಉಡುಪಿ ರಾಮಚಂದ್ರರಾವ್‌ರವರು ಈಗ ಭಾರತದ ಬಾಹ್ಯಾಕಾಶ ವಿಜ್ಞಾನದ ಪ್ರಮುಖರಾಗಿರುವುದು ನಮಗೆಲ್ಲರಿಗೂ ಹೆಮ್ಮೆಯ ವಿಷಯ. 1932ರ ಮಾರ್ಚ್ 10 ರಂದು ಜನಿಸಿದ ಶ್ರೀಯುತರು ಮದ್ರಾಸ್ ವಿಶ್ವವಿದ್ಯಾಲಯದಿಂದ ಬಿ.ಎಸ್.ಸಿ. ಪದವಿ, ಬನಾರಸ್ ಹಿಂದು ವಿಶ್ವಾವಿದ್ಯಾಲಯದಿಂದ ಎಂ.ಎಸ್.ಸಿ. ಪದವಿ ಹಾಗೂ ಗುಜರಾತ್ ವಿಶ್ವವಿದ್ಯಾಲಯದಿಂದ ಪಿ.ಹೆಚ್.ಡಿ. ಪದವಿಯನ್ನು ಪಡೆದಿದ್ದಾರೆ.

ಕಾಸ್ಮಿಕ್ ಕಿರಣಗಳ ಬಗ್ಗೆ ಸಂಶೋಧನೆ ಪ್ರಾರಂಭಿಸಿದ ಯು.ಆರ್. ರಾವ್‌ರವರು ಬಾಹ್ಯಾಕಾಶ ವಿಜ್ಞಾನದ ವಿವಿಧ ಕ್ಷೇತ್ರಗಳಾದ ಅಂತರ ಗ್ರಹ ಭೌತ ಶಾಸ್ತ್ರ, ಎಕ್ಸ್–ರೇ, ಗ್ಯಾಮರೇ ಖಗೋಳ ಶಾಸ್ತ್ರ, ಸೌರ ಭೌತಶಾಸ್ತ್ರ, ಬಾಹ್ಯಾಕಾಶದ ಅನ್ವಹಿಕೆಗಳು, ಉಪಗ್ರಹ ಹಾಗೂ ರಾಕೆಟ್ ತಂತ್ರಜ್ಞಾನಗಳಲ್ಲಿ ಪರಿಣತಿ ಹೊಂದಿದ್ದಾರೆ. ಇವರು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಮಾನ್ಯತೆಯಿರುವ ಪತ್ರಿಕೆಗಳಲ್ಲಿ 200ಕ್ಕೂ ಹೆಚ್ಚಿನ ಸಂಶೋಧನಾ ಹಾಗೂ ತಾಂತ್ರಿಕ ಲೇಖನಗಳನ್ನು ಪ್ರಕಟಿಸಿದ್ದಾರೆ.

ಭಾರತದಲ್ಲಿ ಉಪಗ್ರಹದ ತಂತ್ರಜ್ಞಾನ ಅಭಿವೃದ್ಧಿಯಾಗುವುದಕ್ಕೆ ಮುಖ್ಯ ಕಾರಣಕರ್ತರಾದ ಪ್ರೊ. ಯು.ಆರ್. ರಾವ್‌ರವರ ಮಾರ್ಗದಶನನದಲ್ಲಿ ಸಿದ್ಧವಾದ

ಭಾರತದ ಮೊದಲನೆಯ ಉಪಗ್ರಹ 'ಆರ್ಯಭಟ' 1975ರಲ್ಲಿ ಅಂತರಿಕ್ಷಕ್ಕೆ ಏರಿತು. ಅನಂತರ ದೂರ ಗ್ರಾಹಿ ಉಪಗ್ರಹಗಳಾದ ಭಾಸ್ಕರ–1 (1979) ಮತ್ತು ಭಾಸ್ಕರ–1 (1981) ಅಂತರಿಕ್ಷ ಯಶಸ್ವಿಯಾಗಿ ಸೇರಿ ಮಾಹಿತಿ ನೀಡಿದವು.

ಭಾರತದ ಸಂಪರ್ಕ ಹಾಗೂ ಸಂವಹನ ಮಾಧ್ಯಮ ಕ್ರಾಂತಿಯನ್ನುಂಟು ಮಾಡಿದ ಹಾಗೂ ದೂರದರ್ಶನದ ಸಂಪರ್ಕ ಜಾಲವನ್ನು ಯಶಸ್ವಿಯಾಗಿ ನಿರ್ಮಿಸಿದ ಉಪಗ್ರಹಗಳ ಸೃಷ್ಟಿಗೆ ಪ್ರೊ. ಯು.ಆರ್. ರಾವ್‌ರವರು ಮಾರ್ಗದರ್ಶನ ನೀಡಿದ್ದಾರೆ. 1981ನಲ್ಲಿ ಭೂ ಕಕ್ಷೆಯೊಂದರಲ್ಲಿ ಸ್ಥಿರವಾಗಿ ನಿಲ್ಲಬಲ್ಲ ಆಪಲ್ (APPLE) ಸಂವಹನ ಉಪಗ್ರಹವನ್ನು ಹಾರಿಸಲಾಯಿತು. ಅನಂತರ ಎರಡು ರೋಹಿಣಿ ಉಪಗ್ರಹಗಳು, INSAT-1 ಸರಣಿ (ಭಾರತದ ಉಪಗ್ರಹಗಳ ಮೊದಲ ಸರಣಿ) ಯಲ್ಲಿ ನಾಲ್ಕು ಉಪಗ್ರಹಗಳು ಹಾಗೂ ದೂರಗ್ರಾಹಿ ಉಪಗ್ರಹಗಳಾದ IRS-1A ಮತ್ತು 1B ಉಪಗ್ರಹಗಳನ್ನು ಅಂತರಿಕ್ಷಕ್ಕೆ ಕಳುಹಿಸಲಾಗಿದೆ. INSAT-2 ಸರಣಿಯ ಮೊದಲ ಉಪಗ್ರಹವನ್ನು 1992ರ ಜುಲೈ 9ರಂದು ಯಶಸ್ವಿಯಾಗಿ ಅಂತರಿಕ್ಷಕ್ಕೆ ಕಳುಹಿಸಲಾಗಿದೆ. ಈ ಎಲ್ಲ ಉಪಗ್ರಹಗಳ ನಿರ್ಮಾಣದ ನಾಯಕತ್ವ ಯು. ಆರ್. ರಾವ್ ಅವರದು.

ಸ್ಥಿರವಾದ ಕಕ್ಷೆಯಲ್ಲಿರುವ ಬಹು ಉಪಯೋಗಿ ಸಂವಹನ ಉಪಗ್ರಹಗಳಿಂದ ನಾವಿಂದು ಅನೇಕ ಪ್ರಯೋಜನಗಳನ್ನು ಪಡಯುತ್ತಿದ್ದೇವೆ. ದೂರದರ್ಶನದ ಜಾಲ, ಹವಾಮಾನದ ಮುನ್ಸೂಚನೆಗಳನ್ನು ನೀಡುವುದರ ಜೊತೆಗ ದೂರಗ್ರಾಹಿ ಉಪಗ್ರಹಗಳಿಂದ ಭೂಮೇಲ್ಮೈಯ ಛಾಯಾ ಚಿತ್ರಗಳನ್ನು ಪಡೆಯಲು ಸಾಧ್ಯವಾಗಿದೆ. ಉಪಗ್ರಹಗಳಿಂದ ಸಂಗ್ರಹಿಸಿದ ಮಾಹಿತಿಯಿಂದ ವ್ಯವಸಾಯ, ಖನಿಜ ವಸ್ತುಗಳ ಪತ್ತೆ, ಅಂತರ್ಜಲ, ಅರಣ್ಯ ನಿರ್ವಹಣೆ ಬಂಜರು ಭೂಮಿ ಅಭಿವೃದ್ಧಿ, ಮೀನುಗಾರಿಕೆ ಮುಂತಾದ ನೈಸರ್ಗಿಕ ಸಂಪನ್ಮೂಲಗಳನ್ನು ವೈಜ್ಞಾನಿಕವಾಗಿ ನಿರ್ವಹಿಸಲು ಮತ್ತು ಪರಿಸರ ರಕ್ಷಿಸಲು ಉಪಯೋಗಿಸಿಕೊಳ್ಳಬಹುದಾಗಿದೆ. ಯು. ಆರ್. ರಾವ್‌ರವರ ಮಾರ್ಗದರ್ಶನದಲ್ಲಿ ದೂರಗ್ರಾಹಿ ಉಪಗ್ರಹಗಳ ಮಾಹಿತಿಯನ್ನು ಪಡೆದು ಇಂದು ವ್ಯವಸಾಯ, ಮೀನುಗಾರಿಕೆ, ಅರಣ್ಯ, ಅಂತರ್ಜಲ, ಬರಗಾಲ, ಪ್ರವಾಹ, ನಗರಾಭಿವೃದ್ಧಿ ಮುಂತಾದ ಕ್ಷೇತ್ರಗಳಲ್ಲಿ ಅನ್ವಹಿಸಲು ಪ್ರಯತ್ನ ಸಾಗಿದೆ. ಇಂದಿನ ಹಾಗೂ ಭವಿಷ್ಯದ ಅಗತ್ಯಗಳನ್ನು ಪರಿಗಣಿಸಿ ಪರಿಸರಕ್ಕೆ ಯಾವುದೇ ತೊಂದರೆ ಉಂಟಾಗದ ರೀತಿಯಲ್ಲಿ ಸಮಗ್ರ ನಿರ್ವಹಣಾ ತಂತ್ರವನ್ನು ಸೂಕ್ಷ್ಮ ಹಂತದಲ್ಲಿ ಅಭಿವೃದ್ಧಿಪಡಿಸಲಾಗಿದೆ. ಈ ತಂತ್ರದ ಅಭಿವೃದ್ಧಿಯಲ್ಲಿ ಯು. ಆರ್. ರಾವ್‌ರವರ ಪಾತ್ರ ಅನನ್ಯವಾದುದು.

ಹಲವಾರು ದೇಶೀಯ ಹಾಗೂ ವಿದೇಶಿ ವಿಶ್ವವಿದ್ಯಾಲಯಗಳಿಂದ ಗೌರವ ಡಾಕ್ಟರೇಟ್ ಪದವಿ ಪಡೆದಿರುವ ಪ್ರೊ. ಯು.ಆರ್. ರಾವ್‌ರವರಿಗೆ ಅನೇಕ ಪದಕ ಹಾಗೂ ಪ್ರಶಸ್ತಿಗಳು ಬಂದಿವೆ. 1975 ಮತ್ತು 1983ರಲ್ಲಿ ಕರ್ನಾಟಕ ಸರ್ಕಾರ ಶ್ರೀಯುತರಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಿದೆ. 1976ರಲ್ಲಿ ಕೇಂದ್ರ ಸರ್ಕಾರವು 'ಪದ್ಮ ಭೂಷಣ' ಪ್ರಶಸ್ತಿ ನೀಡಿತು. ಹರಿ ಓಂ ಆಶ್ರಮಂ ಪ್ರಶಸ್ತಿ, ಶಾಂತಿ ಸ್ವರೂಪ ಬಾಟ್ನಾಗರ್ ಪ್ರಶಸ್ತಿ, ವಾಸ್‌ವಿಕ್ ಸಂಶೋಧನಾ ಪ್ರಶಸ್ತಿ, ಮಹಾಲನೋಬಿಸ್ ಪದಕ. ಅವರು ಪಡೆದ ಪಡೆಯುತ್ತಿರುವ ಪ್ರಶಸ್ತಿ ಪದಕಗಳ ಪಟ್ಟಿ ಮುಂದುವರಿಯುತ್ತಿದೆ. ಬಾಹ್ಯಾಕಾಶ

ತಂತ್ರಜ್ಞಾನಕ್ಕೆ ಯು. ಆರ್. ರಾವ್ ನೀಡಿರುವ ಕೊಡುಗೆಯನ್ನು ಮನಗಂಡು 1991ರಲ್ಲಿ ಬಾಹ್ಯಾಕಾಶ ವಿಜ್ಞಾನಿಗಳ ಸಂಘಗಳ ಒಕ್ಕೂಟವು ಶ್ರೀಯುತರಿಗೆ ಯೂರಿಗಗಾರಿನ್ ಪದಕ ನೀಡಿ ಗೌರವಿಸಿತು.

## ಸಿ. ಎನ್. ಆರ್. ರಾವ್

ರಾವ್ ಅವರು ಭಾರತೀಯ ವಿಜ್ಞಾನ ಮಂದಿರದ ನಿರ್ದೇಶಕರು ಹಾಗೂ ಜವಹರಲಾಲ್ ನೆಹರೂ ಉನ್ನತ ಸಂಶೋಧನಾ ಕೇಂದ್ರದ ಅಧ್ಯಕ್ಷರಾಗಿದ್ದಾರೆ. 1934ರ ಜೂನ್ 30 ರಂದು ಚಿಂತಾಮಣಿ ನಾಗೇಶ ರಾಮಚಂದ್ರರಾವ್‌ರವರು ಬೆಂಗಳೂರಿನಲ್ಲಿ ಪ್ರಾಥಮಿಕ ಶಿಕ್ಷಣ ಪಡೆದು ಬನಾರಸ್ ಹಿಂದು ವಿಶ್ವವಿದ್ಯಾಲಯದಿಂದ ಎಂ.ಎಸ್.ಸಿ. ಪದವಿ ಪಡೆದರು. ಅಮೇರಿಕದ ಪರ್ಡ್ಯು ವಿಶ್ವವಿದ್ಯಾಲಯದಿಂದ ಪಿ.ಎಚ್.ಡಿ. ಹಾಗೂ ಮೈಸೂರು ವಿಶ್ವವಿದ್ಯಾಲಯದಿಂದ ಡಿ.ಎಸ್.ಸಿ ಪದವಿಯನ್ನು ಪಡೆದಿದ್ದಾರೆ. 600ಕ್ಕೂ ಹೆಚ್ಚು ಸಂಶೋಧನ ಲೇಖನಗಳನ್ನು ಹಾಗೂ 30 ಪುಸ್ತಕಗಳನ್ನು ಬರೆದಿರುವ ಶ್ರೀಯುತರಿಗೆ 20 ವಿಶ್ವವಿದ್ಯಾಲಯಗಳು ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿವೆ.

ಪ್ರೊ. ಸಿ.ಎನ್.ಆರ್. ರಾವ್‌ರವರ ಸಂಶೋಧನಾ ಆಸಕ್ತಿಯು ಘನ ವಸ್ತುಗಳ ಹಂತದ ರಸಾಯನಶಾಸ್ತ್ರ, ಮೇಲ್ಮೈ ವಿಧಾನಗಳು, ಸ್ಪೆಕ್ಟ್ರೊ ಸ್ಕೋಪಿ, ಅಣುರಚನೆ ಮುಂತಾದವುಗಳಲ್ಲಿದೆ. ಪ್ರಯೋಗಾಲಯದ ವಿವಿಧ ಉಪಕರಣಗಳನ್ನು ಬಳಸಿಕೊಂಡು ಘನವಸ್ತುಗಳ ಆಂತರಿಕ ರಚನೆಯನ್ನು ಅಧ್ಯಯನ ಮಾಡುವುದರಲ್ಲಿ ಪ್ರೊ. ಸಿ.ಎನ್.ಆರ್. ರಾವ್‌ರವರು ನಿಷ್ಣಾತರು. ಇಂತಹ ಅಧ್ಯಯನದಿಂದ ವಿನೂತನ ಗುಣಗಳಿರುವ ಹೊಸ ರೀತಿಯ ಘನ ವಸ್ತುಗಳನ್ನು ಸಿದ್ಧಪಡಿಸಬಹುದು. ಕೈಗಾರಿಕೆಗಳಲ್ಲಿ ಇಂತಹ ವಸ್ತುಗಳ ಬಳಕೆಗೆ ಹೆಚ್ಚಿನ ಬೇಡಿಕೆ ಇದೆ. ಅಲ್ಲದೆ ಪ್ರೊ. ಸಿ.ಎನ್.ಆರ್. ರಾವ್‌ರವರು ಘನವಸ್ತುಗಳಲ್ಲಿ ಉಂಟಾಗುವ ಸೂಕ್ಷ್ಮ ಬಂದಲಾವಣೆಗಳನ್ನು ಅಧ್ಯಯನ ಮಾಡಿದ್ದಾರೆ. ಕೈಗಾರಿಕಾ ಕ್ರಾಂತಿ ಹಾಗೂ ಸಂವಹನ ಕ್ಷೇತ್ರದಲ್ಲಿ ಕ್ರಾಂತಿ ಉಂಟುಮಾಡಬಹುದಾದ ಅರೆವಾಹಕ ಹಾಗೂ ಅತಿವಾಹಕಗಳ ಆವಿಷ್ಕಾರಕ್ಕೆ ಜಗತ್ತಿನ ಪ್ರತಿಷ್ಠಿತ ಸಂಶೋಧನಾಲಯಗಳಲ್ಲಿ ಅಹರ್ನಿಶಿ ಸಂಶೋಧನಾ ಪ್ರಯತ್ನ ನಡೆಯುತ್ತಿದೆ. ಇಂತಹ ಪ್ರಯತ್ನದಲ್ಲಿ ಪ್ರೊ. ಸಿ.ಎನ್.ಆರ್. ರಾವ್ ಅವರು ದುಡಿಯುತ್ತಿರುವ ಪ್ರಯೋಗಾಲಯವು ಮುಂಚೂಣಿಯಲ್ಲಿರುವುದು ಹೆಮ್ಮೆಯ ವಿಷಯ. ಕನ್ನಡ ಮಾಧ್ಯಮದಲ್ಲಿ ಓದಿ ಇಂದು ರಾಷ್ಟ್ರದ ಪ್ರಖ್ಯಾತ ವಿಜ್ಞಾನಿಯಾಗಿರುವ ಪ್ರೊ. ಸಿ.ಎನ್.ಆರ್. ರಾವ್‌ರವರಿಗೆ ಕರ್ನಾಟಕದ ಪ್ರಗತಿಯ ಬಗ್ಗೆ ತೀವ್ರ ಆಸಕ್ತಿ ಇದೆ. ಇವರು ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಮಂಡಲಿಯ ಅಧ್ಯಕ್ಷರಾಗಿದ್ದಾರೆ. ಅಲ್ಲದೆ ನಮ್ಮ ರಾಜ್ಯದಲ್ಲಿ ಸಂಪೂರ್ಣ ಸಾಕ್ಷರತಾ ಆಂದೋಲನದ ಯಶಸ್ಸಿಗೆ ಶ್ರಮಿಸುತ್ತಿರುವ ಭಾರತ ಜನ ವಿಜ್ಞಾನ ಸಮಿತಿಯ ಅಧ್ಯಕ್ಷರಾಗಿ ಉತ್ತಮ ಮಾರ್ಗದರ್ಶನ ನೀಡುತ್ತಿದ್ದಾರೆ.

ಅನೇಕ ಅಂತರಾಷ್ಟ್ರೀಯ ಸಂಸ್ಥೆಗಳು ಇವರಿಗೆ ಸದಸ್ಯ ಪದವಿ ನೀಡಿವೆ. ಇವುಗಳಲ್ಲಿ ಭಾರತದ ರಾಷ್ಟ್ರೀಯ ವಿಜ್ಞಾನ ಅಕಾಡೆಮಿ, ಲಂಡನ್ನಿನ ರಾಯಲ್ ಸೊಸೈಟಿ, ಅಮೆರಿಕಾ, ಸೋವಿಯತ್ ರಷ್ಯ, ಪೋಲೆಂಡ್ ಸರ್ಬಿಯ ಹಾಗೂ ಸ್ಲೋವಿಯನ್ ಅಕಾಡೆಮಿ ಮುಂತಾದವು ಪ್ರಮುಖವಾದವು.

ಪ್ರೊ: ಸಿ.ಎನ್.ಆರ್. ರಾವ್‌ರವರಿಗೆ ಬಂದಿರುವ ಪದಕಗಳು, ಪ್ರಶಸ್ತಿಗಳು ಹಲವಾರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಮಾರ್ಲೊ ಪದಕ (1967), ಬಾಟ್ನಗರ್ ಪ್ರಶಸ್ತಿ (1968), ಪದ್ಮಶ್ರೀ (1974), ಎಸ್.ಎಸ್. ಬೋಸ್ ಪ್ರಶಸ್ತಿ (1980), ಪದ್ಮ ವಿಭೂಷಣ (1985), ಮೋದಿ ಪ್ರಶಸ್ತಿ (1989), ಮೇಘನಾದ್ ಶಹ ಪದಕ (1990). 1991ರಲ್ಲಿ ಪ್ರೊ. ಸಿ.ಎನ್. ರಾವ್ ರವರಿಗೆ ಲಂಡನ್ನಿನ ರಾಯಲ್ ಸೊಸೈಟಿಯ ಬ್ಲಾಕೆಟ್ ಉಪನ್ಯಾಸಕ ಪ್ರಶಸ್ತಿ ಹಾಗೂ ಭಾರತದ ವಿಜ್ಞಾನ ಮತ್ತು ಕೈಗಾರಿಕಾ ಸಂಶೋಧನಾಲಯದ ಚಿನ್ನದ ಹಬ್ಬದ ಪ್ರಶಸ್ತಿ (ಭೌತ ವಿಜ್ಞಾನ) ದೊರಕಿವೆ.

ದಿವಂಗತ ರಾಜೀವ್ ಗಾಂಧಿಯವರು ಪ್ರಧಾನ ಮಂತ್ರಿಯಾಗಿದ್ದಾಗ ಪ್ರೊ. ಸಿ.ಎನ್.ಆರ್. ರಾವ್‌ರವರು ವಿಜ್ಞಾನ ಸಲಹಾ ಸಮಿತಿಯ ಮುಖ್ಯಸ್ಥರಾಗಿದ್ದರು. ಈಗ ಶ್ರೀಯುತರು 15ಕ್ಕೂ ಹೆಚ್ಚಿನ ತಾಂತ್ರಿಕ ಪತ್ರಿಕೆಗಳ ಸಂಪಾದಕ ಸಮಿತಿಯಲ್ಲಿದ್ದಾರೆ; ಪ್ರಗತಿಗಾಗಿ ರಸಾಯನ ಶಾಸ್ತ್ರ ಎಂಬ ಅಂತಾರಾಷ್ಟ್ರೀಯ ಸಂಸ್ಥೆಯ ಉಪಾಧ್ಯಕ್ಷರಾಗಿದ್ದಾರೆ. ಹಾಗೂ ಟ್ರಿಸ್ಟೆಯಲ್ಲಿರುವ ಶುದ್ಧ ಹಾಗೂ ಅನ್ವಯಿಕ ರಸಾಯನ ಶಾಸ್ತ್ರದ ಅಂತರಾಷ್ಟ್ರೀಯ ಕೇಂದ್ರದ ಅಧ್ಯಕ್ಷರಾಗಿದ್ದಾರೆ.

ಎಚ್.ಎಸ್. ನಿರಂಜನಾರಾಧ್ಯ

# ಕನ್ನಡ ಚಿತ್ರರಂಗ

ವಿಜಯಾ

1991 ರಲ್ಲಿ ಬಿಡುಗಡೆಯಾದ ಚಿತ್ರಗಳನ್ನು–ಘಟನೆಗಳನ್ನು, (ಕನ್ನಡ ಚಿತ್ರೋದ್ಯಮವನ್ನು) ಮಾತ್ರ ಒಳಗೊಂಡ ಒಂದು ಸ್ಥೂಲ ವಿವರಣೆಯನ್ನು ಈ ಲೇಖನದಲ್ಲಿ ನೀಡಲಾಗಿದೆ. ಯಾವುದೇ ಚಿತ್ರ–ಪಾತ್ರ ಇತ್ಯಾದಿಗಳ ವಿಮರ್ಶೆ ಇಲ್ಲಿ ಇಲ್ಲ. ಅಂತೆಯೇ ಬಿಡುಗಡೆಯಾದ ಎಲ್ಲ ಚಿತ್ರಗಳ ಬಗ್ಗೆ ವಿವರಗಳಿಲ್ಲ. ಇದು ಪ್ರಮುಖ ಎನಿಸುವ ವಿವರ–ಘಟನೆಗಳ ಸ್ಥೂಲ ನೋಟ ಮಾತ್ರ.

1991 ರಲ್ಲಿ ಒಟ್ಟು 78 ಕನ್ನಡ ಚಿತ್ರಗಳು ತೆರೆಕಂಡವು, ಇವುಗಳಲ್ಲಿ ಬಹಳ ಹಿಂದೆಯೇ ಆರಂಭವಾಗಿ ತಡವಾಗಿ ತೆರೆಗೆ ಬಂದಂತವು. ಸೆನ್ಸಾರ್ ಆಗಿಯೂ ತೆರೆಗೆ ಬಾರದೆ ಉಳಿದವು ಸೇರಿಕೊಂಡವು. ಕೆಲವು ಚಿತ್ರಗಳು ನಗರದಲ್ಲಿ ಬಿಡುಗಡೆಯಾಗದೆ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಮಾತ್ರ ಬಿಡುಗಡೆಯಾದವು. ಬಸವರಾಜ ಕೆಸ್ತೂರ್ ಅವರು ಅಂಬೇಡ್ಕರ್ ಶತಮಾನೋತ್ಸವ ವರ್ಷಕ್ಕಾಗಿ ವಿಶೇಷವಾಗಿ ಸಿದ್ಧಮಾಡಿದ 'ಬಾಲಕ ಅಂಬೇಡ್ಕರ್' ಕೇವಲ ಎರಡು ದಿನ ಪ್ರದರ್ಶನ ಆಯಿತು.

## ವಸ್ತು–ವಿನ್ಯಾಸ

ಕನ್ನಡ ಚಿತ್ರ ನಿರ್ಮಾಪಕರಿಗೆ ಮೂಲಕಥೆಗಳೇ ಅಭಾವವೋ ಎಂಬಂತೆ ಬಹುತೇಕ ರಿಮೇಕ್ ಚಿತ್ರಗಳೇ ಈ ವರ್ಷವೂ ತೆರೆಕಂಡಿತು. ಅವುಗಳಲ್ಲಿ ಕನ್ನಡ ನೆಲಕ್ಕೆ ಹೊಂದುವ ಯಾವ ಬದಲಾವಣೆಯನ್ನೂ ಮಾಡದೆ ಒಂದು ಭಾಷೆಯಿಂದ ಮತ್ತೊಂದಕ್ಕೆ ಜೆರಾಕ್ಸ್ ಪ್ರತಿಗಳಂತೆ ಬಂದವೇ ಹೆಚ್ಚು. ಸಿದ್ಧ ಕಥೆ – ನಿರೂಪಣೆಯನ್ನು ಹೆಚ್ಚು ಕಾಲವ್ಯಯ ಮಾಡದೆ ಅಲ್ಪಾವಧಿಯಲ್ಲೇ ಮುಗಿಸುವ ತರಾತುರಿ ಚಿತ್ರಗಳಲ್ಲಿ ಕಾಣುತ್ತಿತ್ತು. ಇದರ ಹಿಂದೆ ತೊಡಗಿಸಿದ ಹಣ ಹೆಚ್ಚು ಕಾಲ ಸ್ಥಗಿತವಾಗದೆ ಚಲಾವಣೆಯಲ್ಲಿ ಇರುತ್ತದೆಂಬ ಚಿತ್ರರಂಗದ ಅರ್ಥಶಾಸ್ತ್ರಜ್ಞರ ವ್ಯಾಖ್ಯಾನವೂ ಇದೆ. ಒಟ್ಟಾರೆ ಕನ್ನಡ ಚಿತ್ರಗಳು ಕನ್ನಡ ಸೊಗಡು ಕಳೆದುಕೊಂಡು ಅವರಿವರ ವೇಷದಲ್ಲೇ ಮೆರೆವ ಯಥಾ ಅಭ್ಯಾಸವನ್ನು ಈ ವರ್ಷವೂ ಮುಂದುವರೆಸಿತು.

ಸಾಹಿತ್ಯ ಕೃತಿಗಳನ್ನಾಧರಿಸಿ ತೆರೆಕಂಡ ಚಿತ್ರಗಳು ಸಂಖ್ಯೆಯಿಂದ ತುಂಬಾ ಕಡಿಮೆಯೇ ಆದರೂ ಒಂದರೆಡು ಗಮನಾರ್ಹ ಪ್ರಯತ್ನಗಳು ಈ ನಿಟ್ಟಿನಲ್ಲಾಗಿವೆ. ಇಂಥಲ್ಲಿ ಸೋಲು–ಗೆಲುವಿನ ಪ್ರಶ್ನೆಗಿಂತ ಹೊಸ ಸಾಧ್ಯತೆಯ ಹುಡುಕಾಟದಲ್ಲಿ ಆದ ಕಾಳಜಿಯುತ್ತ ಪ್ರಯತ್ನವೇ ಮುಖ್ಯ. ದಿವಂಗತ ಆಲನಹಳ್ಳಿ ಕೃಷ್ಣ ಅವರ ಕಾದಂಬರಿಯನ್ನಾಧರಿಸಿ ನಟ ಶ್ರೀ ಲೋಕೇಶ್ ನಿರ್ದೇಶಿಸಿದ 'ಭುಜಂಗಯ್ಯನ ದಶಾವತಾರ' ಒಂದು ಮುಖ್ಯ ಪ್ರಯತ್ನ. ಮೂಲತಃ ರಂಗಭೂಮಿಯವರಾದ ಶ್ರೀ ಲೋಕೇಶ್ ಅವರು ನಟಿಸಿ ನಿರ್ದೇಶಿಸಿದ್ದ ಈ ಚಿತ್ರದಲ್ಲಿ ಮುಂಬೈನ ಪಲ್ಲವಿಜೋಷಿ ಅವರು ಅಭಿನಯಿಸಿದ್ದು, ಹವ್ಯಾಸೀ ರಂಗಭೂಮಿಯ ಅನೇಕ ಕಲಾವಿದರು ಪಾತ್ರ ವಹಿಸಿದ್ದು, ರಂಗ ನಿರ್ದೇಶಕ ಸಿ. ಜಿ. ಕೃಷ್ಣಸ್ವಾಮಿಯವರು ಸಂಭಾಷಣೆ ರಚಿಸಿದ್ದು ವಿಶೇಷವಾದರೆ, ಜನಪ್ರಿಯ ಸಂಗೀತ ನಿರ್ದೇಶಕ ಸಿ. ಜಿ. ಕೃಷ್ಣಸ್ವಾಮಿಯವರು ಸಂಭಾಷಣೆ ರಚಿಸಿದ್ದು ವಿಶೇಷವಾದರೆ, ಜನಪ್ರಿಯ ಸಂಗೀತ ನಿರ್ದೇಶಕ ಹಂಸಲೇಖಾ ಅವರು ಈ ಚಿತ್ರದ ಗೀತೆಗಳಿಗೆ ನೆನಪಿನಲ್ಲುಳಿವಂತಹ ರಾಗಸಂಯೋಜನೆ ಮಾಡಿದ್ದು ಮತ್ತೊಂದು ಉಲ್ಲೇಖನೀಯ ಅಂಶ.

ಕಾದಂಬರಿಯನ್ನೋದಿದವರಿಗೆ ಚಿತ್ರದ ದೃಶ್ಯ ರಚನಾ ವಿಧಾನದಲ್ಲಿ ಅನೇಕ ಕೊರೆಗಳು ಕಂಡಿದ್ದಿರಬಹುದಾದರೂ ಒಂದೇ ಧಾಟಿಯ ಏಕತಾನತೆಯನ್ನು ಹಿಂದೆ ಸರಿಸುವಲ್ಲಿ ಇದೊಂದು ಮುಖ್ಯ ಹೆಜ್ಜೆ.

ಟಿ.ಜಿ. ರಾಘವ ಅವರ ನೀಳ್ಗಥೆ 'ಮನೆ'ಯನ್ನಾಧರಿಸಿ ಶ್ರೀ ಗಿರೀಶ್ ಕಾಸರವಳ್ಳಿ ನಿರ್ದೇಶಿಸಿದ ಅದೇ ಹೆಸರಿನ ಚಿತ್ರ ಕನ್ನಡ ಚಿತ್ರರಂಗಕ್ಕೆ ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದ ಮನ್ನಣೆ ಸಂದಿತು. ಹಿಂದಿ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಎನ್.ಎಫ್.ಡಿ.ಸಿ. ಯ ನೆರವಿನಿಂದ ಸಿದ್ಧವಾದ ಈ ಚಿತ್ರ ಗಲ್ಲಾಪೆಟ್ಟಿಗೆಯಲ್ಲಿ ಯಶಕಾಣದಿದ್ದರೂ ನಿರೂಪಣ ತಂತ್ರಕ್ಕೆ, ಬಣ್ಣಗಳ ಬಳಕೆಗೆ ಮತ್ತು ಗಿರೀಶ್‌ರ ಎಂದಿನ ಪ್ರಯೋಗಪ್ರಿಯ ಯತ್ನಗಳಿಗೆ ಮೆಚ್ಚಿಗೆ ಗಳಿಸಿತು. ಕಾದಂಬರಿಯನ್ನು ಆಧರಿಸಿದ್ದರೂ ಅದರ ತದ್ವತ್ ಪ್ರತಿಯಾಗದೆ ಮತ್ತೊಂದು ಪ್ರಭಾವಶಾಲಿ ಮಾಧ್ಯಮದಲ್ಲಿ ಹೊಸ ಅರ್ಥಗಳನ್ನು ಧ್ವನಿಸಿದ ಚಿತ್ರ ಇದು. ಕಾದಂಬರಿಯಲ್ಲಿ ಬರುವ 'ಶಬ್ಧಮಾಲಿನ್ಯ'ದ ಅಂಶ ಚಿತ್ರದಲ್ಲೂ ಬಳಕೆಯಾಗಿದೆ. ಆದರೆ ಅದೇ ಪ್ರಧಾನವಾಗದೆ ಮನುಷ್ಯ ತನಗೆ ಒಲ್ಲದ್ದಕ್ಕೆ ಒಗ್ಗಿಕೊಳ್ಳುವ ಅನಿವಾರ್ಯವನ್ನು, ಅದರೊಟ್ಟಿಗೆ ಹುಟ್ಟುವ ಶಂಕೆ–ಸಂಶಯದ ಸ್ವಭಾವವನ್ನು ಸಂವಾದಿ ಬಣ್ಣಗಳ ಬಳಕೆಯೊಡನೆ ಧ್ವನಿಸುತ್ತ, ಪೂರ್ಣ ಎನಿಸಿದರೂ ಅಪೂರ್ಣವಾಗಿಯೇ ಉಳಿದ 'ಮನೆ'ಯ ಅರ್ಥವನ್ನು ಚಿತ್ರ ಬಿಡಿಸತೊಡಗುತ್ತದೆ. ಇದು ಭಾರತೀಯ ಪನೋರಮಾದಲ್ಲಿ ಪ್ರವೇಶ ಪಡೆದುದಲ್ಲದೆ, ರಾಜ್ಯ ರಾಷ್ಟ್ರ ಪ್ರಶಸ್ತಿಗಳನ್ನೂ ಪಡೆಯಿತು.

ಈ ವರ್ಷದ ಬಿಡುಗಡೆಯಾದ ಏಕೈಕ ಮಕ್ಕಳ ಚಿತ್ರ 'ನಕ್ಕಳಾ ರಾಜಕುಮಾರಿ'ಗ

ಅದೇ ಹೆಸರಿನ ನಾಟಕ ಆಧಾರವಾಗಿತ್ತು. ಪ್ರೇಮಾಕಾರಂತ್ ನಿರ್ದೇಶಿಸಿದ ಈ ಚಿತ್ರಕ್ಕೆ ಅಬ್ದುಲ್ ರಹಮಾನ್ ಪಾಶಾ ಸಾಹಿತ್ಯ ಒದಗಿಸಿದ್ದರು. 'ಮನೆ' ಚಿತ್ರದ ಕಲಾ ನಿರ್ದೇಶಕರಾಗಿ ಅಪೂರ್ವ ಕೆಲಸ ಮಾಡಿದ್ದ ಜಾನ್ ದೇವರಾಜ್ ಅವರೇ ಈ ಚಿತ್ರಕ್ಕೂ ಕಲಾ ನಿರ್ದೇಶನ ಮಾಡಿ ತಮ್ಮ ವಿಶಿಷ್ಟ ಕೆಲಸವನ್ನು ಕಾಣಿಸಿದ್ದರು.

'ನಗುನಗುತಾ ನಲಿ' ಚಿತ್ರಕ್ಕೆ ತೆಲುಗಿನ ಕಾದಂಬರಿಯೊಂದು ಆಧಾರವಾಗಿತ್ತು. 'ಹೃದಯ ಹಾಡಿತು' ಚಿತ್ರಕ್ಕೆ ಸಾಯಿಸುತೆ ಅವರ ಕಾದಂಬರಿ ಆಧಾರ. 'ಹೃದಯ ಹಾಡಿತು' ಅತ್ಯಂತ ಜನಪ್ರಿಯವಾಗಿ ಯಶಸ್ವಿ ಚಿತ್ರಗಳ ಸಾಲಿಗೆ ಸೇರಿತು. ಈ ಚಿತ್ರದಲ್ಲಿನ ಅಭಿನಯಕ್ಕಾಗಿ ಅಂಬರೀಶ್–ಮಾಲಾಶ್ರೀ ಅವರಿಗೆ ಚಿತ್ರರಸಿಕರ ಪ್ರಶಸ್ತಿಗಳೂ ಲಭಿಸಿದವು. ಮಲ್ಲಾದಿ ವೆಂಕಟಕೃಷ್ಣಮೂರ್ತಿಗಳ 'ವೆಡ್ಡಿಂಗ್ ಬೆಲ್ಸ್' ಎಂಬ ತೆಲುಗು ಕಾದಂಬರಿಯನ್ನಾಧರಿಸಿ ಫಣಿರಾಮಚಂದ್ರ ನಿರ್ದೇಶನದಲ್ಲಿ ತೆರೆಕಂಡ 'ಗೌರಿ–ಗಣೇಶ' ಮತ್ತೊಂದು ಜನಪ್ರಿಯ ಚಿತ್ರ. ಅನಂತನಾಗ್ ಮತ್ತು ಮಾ। ಆನಂದ್ ಅವರ ಅಭಿನಯ ಮತ್ತು ಹಾಸ್ಯ–ಸನ್ನಿವೇಶ ರಂಜಿಸಿತ್ತು. 'ಮನೇಲಿ ಇಲಿ ಬೀದಿಲಿ ಹುಲಿ' ಎಂಬ ಚಿತ್ರಕ್ಕೆ ತಮಿಳಿನ ಜನಪ್ರಿಯ ನಾಟಕವೊಂದು ಆಧಾರವಾಗಿತ್ತು.

## ತಂತ್ರವೈಭವ

ರವಿಚಂದ್ರನ್ ಕನ್ನಡ ಚಿತ್ರರಂಗದಲ್ಲಿ ಅನೇಕ ಅಚ್ಚರಿಗಳನ್ನು ಸಾಧಿಸಿದವರು. ಅವರೇ ನಿರ್ದೇಶಿಸಿದ ಅತಿ ಹೆಚ್ಚು ಕಾಲ ಮತ್ತು ಹಣ ವ್ಯಯವಾದ, ಚತುರ್ಭಾಷೆಯಲ್ಲಿ ಏಕಕಾಲಕ್ಕೆ ತಯಾರಾದ 'ಶಾಂತಿ–ಕ್ರಾಂತಿ' ಈ ವರ್ಷ ತೆರೆಕಂಡಿತು. ಹಿಂದೆಂದೂ ಕಂಡಿರದಂತಹ ಅಪೂರ್ವ ತಂತ್ರಜ್ಞಾನವನ್ನು ಅಳವಡಿಸಿ ಅತ್ಯುತ್ತಮ ತಂತ್ರಜ್ಞರಾಗಿ ಹೆಸರಾದರು. ಚಿತ್ರವೊಂದಕ್ಕೆ ಕಥೆಯೇ ಪ್ರಧಾನ-ಎಂದು ನಂಬುವ ಕನ್ನಡ ಪ್ರೇಕ್ಷಕರಿಗೆ ಚಿತ್ರ ಮಾಧ್ಯಮದ ತಂತ್ರಗಾರಿಕೆಯೇ ಮುಖ್ಯವಾದ 'ಶಾಂತಿ–ಕ್ರಾಂತಿ' ಜನ ಸ್ವೀಕೃತಿಯನ್ನು ಗಳಿಸಲಿಲ್ಲ. ಆದರೂ ಸಹಸ್ರಾರು ಎಳೆಯ ಮಕ್ಕಳನ್ನು ಬಳಸಿದ ರೀತಿ, ಕಲಾನಿರ್ದೇಶನ, ಛಾಯಗ್ರಹಣ ಹಾಗೂ ದೃಶ್ಯ– ವಿನ್ಯಾಸಗಳು ವಿಶಿಷ್ಟವೆನ್ನಿಸಿದವು. ಇದಕ್ಕಾಗಿ 'ಚಿತ್ರಪ್ರಭ'ದ ವಿಶೇಷ ಪ್ರಶಸ್ತಿಯನ್ನೂ ರವಿಚಂದ್ರನ್ ಗಳಿಸಿದರು.

## ರಿಮೇಕ್

ಈ ವರ್ಷ ತೆರೆಕಂಡ ಅನೇಕ ಚಿತ್ರಗಳು ರಿಮೇಕ್ ಆದರೂ ಅವುಗಳಲ್ಲಿ ಕೆಲವು ಅತ್ಯಂತ ಜನಪ್ರಿಯವಾದವು. ರವಿಚಂದ್ರನ್ ಅಭಿನಯಿಸಿದ 'ರಾಮಾಚಾರಿ' ತಮಿಳಿನ 'ಚಿನ್ನತಂಬಿ' ಚಿತ್ರದ ಕನ್ನಡ ಅವತರಣಿಕೆ. ನಾಗರಹಾವು ಚಿತ್ರದ ರಾಮಾಚಾರಿ ಹೆಸರಿನ ಖ್ಯಾತಿಯನ್ನು ಈ ಚಿತ್ರಕ್ಕೆ ನೀಡುವುದರೊಂದಿಗೆ, ಸೊಗಸಾದ ಹಾಡು ಮತ್ತು ಅಭಿನಯ ಈ ಚಿತ್ರ ರಿಮೇಕ್ ಎಂಬುದನ್ನೇ ಮರೆಸುವ

ಸ್ಥಿತಿಗೇರಿಸಿತ್ತು. ಈ ಚಿತ್ರ ಗಲ್ಲಾಪೆಟ್ಟಿಗೆಯ ಅನೇಕ ದಾಖಲೆಗಳನ್ನೂ ಮುರಿಯಿತು. ಈ ಚಿತ್ರಕ್ಕೆ 'ಚಿತ್ರಪ್ರಭ'ದ ಅನೇಕ ಪ್ರಶಸ್ತಿಗಳು ದೊರೆತವು.

ಇದಲ್ಲದೆ ಅನೇಕ ತೆಲುಗಿನ ನಿರ್ಮಾಪಕರು ಕರ್ನಾಟಕಕ್ಕೆ ಬಂದು ರಿಮೇಕ್‌ಗಳನ್ನು ಸಾಲುಸಾಲಾಗಿ ನಿರ್ಮಿಸಿದರು. ಅವುಗಳಲ್ಲಿ ರಾಮಾನಾಯಿಡು –ವೆಂಕಟರಾಮಿರೆಡ್ಡಿ ನಿರ್ಮಿಸಿದ 'ತವರುಮನೆ ಉಡುಗೊರೆ' ಹಾಗೂ 'ಮಾಂಗಲ್ಯ' ಗಲ್ಲಾಪೆಟ್ಟಿಗೆಯ ಯಶ ಸಾಧಿಸಿದವು.

ಸಾಯಿಪ್ರಕಾಶ್, ಬಿ. ರಾಮಮೂರ್ತಿ, ಮುದ್ದುರಾಜ್ ಮೊದಲಾದವರು ಸಂಖ್ಯೆಯಿಂದಲೂ ಅಧಿಕ ಎನಿಸುವಷ್ಟು ರಿಮೇಕ್‌ಗಳನ್ನು ನಿರ್ದೇಶಿಸಿದರು. ಕೆಲವು ಚಿತ್ರಗಳು ಅನೇಕ ಪರಭಾಷಾ ಚಿತ್ರಗಳಿಂದ ಒಂದೊಂದು ದೃಶ್ಯವನ್ನೆತ್ತಿಕೊಂಡು 'ಕಿಚಡಿ' ಯಂತೆಯೂ ತೆರೆಕಂಡವು. ಇವು ಮೂಲ ಚಿತ್ರಗಳೆಂಬ ಹಣೆಪಟ್ಟಿಯಲ್ಲಿ ಬಿಡುಗಡೆಯಾದರೂ ಚಿತ್ರ ನೋಡಿದಾಗ ಹಾಗನ್ನಿಸಲಿಲ್ಲ. ರಾಜ್ಯ ಸರ್ಕಾರ ಕೊಡುವ ಸಹಾಯಧನದ ಲಾಭ ರಿಮೇಕ್‌ಗೆ ಇಲ್ಲವಾದ್ದರಿಂದ ಇಂಥ 'ಸ್ವಂತ' ಮಾಡಿಕೊಳ್ಳುವ ಜಾಣತನ ತೋರಲಾಗುತ್ತದೆ.

ಸಾಯಿಪ್ರಕಾಶ್ ನಿರ್ಮಿಸಿ ನಿರ್ದೇಶಿಸಿದ 'ಕಿತ್ತೂರಿನ ಹುಲಿ' ಚಿತ್ರಕ್ಕೆ ವಿಮರ್ಶಾಸ್ಪರ್ಧೆ ಯೊಂದನ್ನು ಏರ್ಪಡಿಸಿ ಕೆಲವು ಬಹುಮಾನಗಳನ್ನು ನೀಡಲಾಯಿತು.

## ಹೊಸಬರು

ಹಲಕಾಲ ಸಹನಿರ್ದೇಶಕರಾಗಿ ದುಡಿದಿದ್ದ 'ಮಹಮ್ಮದ್ ಗೌಸ್' ಅವರು 'ಹತ್ಯಾಕಾಂಡ'ದ ಮೂಲಕ ನಿರ್ದೇಶಕರಾಗಿ ರಂಗಪ್ರವೇಶ ಮಾಡಿದರು. ದೇವರಾಜ್ ನಾಯಕರಾಗಿ ಅಭಿನಯಿಸಿದ್ದ ಈ ಚಿತ್ರ 'ಕಥೆಯಲ್ಲಿ ಸತ್ವ ಇಲ್ಲ' ಎಂಬ ಟೀಕೆಗೆ ಒಳಗಾಯಿತು. ಮುಂಬಯಿಯ ಬ್ರಿಜ್ ಚೋಪ್ರ ಅವರು ನಿರ್ಮಿಸಿದ 'ಗರುಡ ಧ್ವಜ' ಚಿತ್ರದ ಮೂಲಕ ಕೇರಳದ ರಾಜ್‌ಭರತ್ ಕನ್ನಡ ಚಿತ್ರ ನಿರ್ದೇಶಕರೆನಿಸಿದರು. ಸುನಂದ್ ನಿರ್ದೇಶಿಸಿದ 'ಇದುವೇ ಜೀವನ' ಕೂಡ ವಿಫಲವಾಯಿತು.

ಮಹಮ್ಮದ್ ಫಕ್ರುದ್ದೀನ್ ನಿರ್ದೇಶನದ 'ಗಿರಿಮಲ್ಲಿಗೆ'ಗೆ ಗಲ್ಲಾಪೆಟ್ಟಿಗೆಯ ಭಾಗ್ಯ ದೊರೆಯಲಿಲ್ಲವಾದರೂ ಮಾಸ್ಕೋದಲ್ಲೂ ಪ್ರದರ್ಶನ ಕಂಡಿತೆಂಬುದೊಂದು ವಿಶೇಷ. 'ನಮ್ಮೂರ ರಾಮಾಯಣ' ಎಂಬ ಚಿತ್ರ ನಿರ್ದೇಶಿಸಿದ ವೈ.ಟಿ. ನಾಗರಾಜ್ ಅವರು ಒಂದೇ ಒಂದು ಪ್ರದರ್ಶನವನ್ನು ತಮ್ಮ ಊರಿನಲ್ಲಿ (ಮಂಡ್ಯ) ನೀಡಿದರಂತೆ.

ಸಹ ನಿರ್ದೇಶಕರಾಗಿದ್ದ ಉಪೇಂದ್ರ ಅವರು 'ಅಜಗಜಾಂತರ' ಚಿತ್ರದಿಂದ ಸಿಂಹ ಹೆಮ್ಮಿಗೆ ಅವರು 'ಪುಂಡ ಪ್ರಚಂಡ' ದಿಂದ ರುದ್ರಮೂರ್ತಿ ಶಾಸ್ತ್ರಿಗಳು 'ಹೊಸಮನೆ ಅಳಿಯ' ಚಿತ್ರದಿಂದ ಸಂಭಾಷಣಾಕಾರರಾಗಿ ಪ್ರವೇಶಮಾಡಿದರು.

ಖಲಂದರ್ ನಿರ್ದೇಶಿಸಿದ 'ಸತ್ಯಸಂದೇಶ' ಕ್ಯಾನ್ಸರ್ ಕುರಿತು ಅರಿವು ನೀಡುವ ನೆಪದಲ್ಲಿ ಲೈಂಗಿಕತೆಯನ್ನು ತುಂಬಿ ಗಲ್ಲಾಪೆಟ್ಟಿಗೆ ತುಂಬಿಸಿಕೊಂಡಿತು.

'ಕಲ್ಯಾಣ ಮಂಟಪ'ದಿಂದ ಗೋವಿಂದ ರಾಜ್, 'ಮೌನಹೋರಾಟ' ದಿಂದ ಎ.ಎನ್.ಆರ್. ಪ್ರಸಾದ್ 'ಪುಂಡ ಪ್ರಚಂಡ'ದಿಂದ ಸುಧೀಂದ್ರ ಕಲ್ಲೋಳ್ ನಿರ್ದೇಶಕರಾಗಿ, ಪರಿಚಿತರಾದರು. ಎಂ.ಪಿ. ಶಂಕರ್ ನಿರ್ಮಿಸಿದ 'ಹಳ್ಳಿರಂಭೆ–ಬೆಳ್ಳಿಬೊಂಬೆ' ಮೂಲಕ ಚಿ. ಉದಯ ಶಂಕರ್ ಅವರ ಮಗ ಗುರುದತ್ ನಾಯಕ ನಟನ ಪಟ್ಟಕ್ಕೇರಿದರು. ಕುಮಾರ್ ಬಂಗಾರಪ್ಪ ಅಭಿನಯಿಸಿದ 'ತೇಜ' ಚಿತ್ರದ ಮೂಲಕ ರವಿ ಕೊಟ್ಟಾರಕರ ನಿರ್ದೇಶಕರಾಗಿ ಮತ್ತು ಮೂನುವಾಲಿಯಾ ಎಂಬ ಹೊಸತಾರೆ ನಾಯಕಿಯಾಗಿ ಪರಿಚಿತರಾದರು. ಚಿತ್ರ ಯಶಕಾಣಲಿಲ್ಲ.

ಡಾ। ರಾಜಕುಮಾರರ ಮಕ್ಕಳಾದ ಶಿವರಾಜಕುಮಾರ್ ಅಭಿನಯದ 'ಅರಳಿದ ಹೂಗಳು' 'ಮೋಡದ ಮರೆಯಲ್ಲಿ' ಮತ್ತುರಾಘವೇಂದ್ರ ರಾಜಕುಮಾರ್ ಅಭಿನಯದ 'ಕಲ್ಯಾಣ ಮಂಟಪ' ಚಿತ್ರಗಳು ಸಹ ಪರಭಾಷ ಚಿತ್ರಗಳಿಂದ ಎರವಲು ಪಡೆದಂತಿದ್ದವು. ಇವು ಗಲ್ಲಾ ಪೆಟ್ಟಿಗೆಯಲ್ಲಿ ಸೋಲು ಕಾಣದಿದ್ದರೂ ದೊಡ್ಡ ಜಯ ಪಡೆಯಲಿಲ್ಲ.

## ಕೆಲವು ವಿಶೇಷಗಳು

ಸಿ.ಜಿ. ಕೃಷ್ಣಸ್ವಾಮಿ ಬಹು ಪರಿಶ್ರಮದಿಂದ ಕಥೆ–ಚಿತ್ರಕಥೆಗೆ ನೇರವಾಗಿ ಸಂಭಾಷಣೆ ಬರೆದು, ಅಥೆಂಟಿಸಿಟಿಗಾಗಿ ಹೆಣಗಿದ 'ವೀರಪ್ಪನ್' ಚಿತ್ರ ಅದೇ ಹೆಸರಿನ ಕುಖ್ಯಾತ ದಂತಚೋರನ ಕಥೆಯನ್ನೊಳಗೊಂಡಿತ್ತು. ಪ್ರಧಾನ ಪಾತ್ರದಲ್ಲಿ ದೇವರಾಜ್ ಸಮರ್ಥ ಅಭಿನಯ ನೀಡಿದ್ದರು. ಚಿತ್ರ ಉತ್ತಮವಾಗಿದ್ದು ಯಶಸ್ವಿಯಾಗಬಹುದೆಂದಿದ್ದಾಗಲೇ ಸಮಾಜಘಾತುಕರನ್ನು ದಂತ ಕಥೆಯಾಗಿಸಿ, ವೈಭವ ಮಾಡುವುದನ್ನು ಕುರಿತಂತೆ ಬಂದ ಕಟು ವಿಮರ್ಶೆಗಳಲ್ಲಿ ಸತ್ಯಾಂಶವಿದೆ ಎಂದು ಮನಗಂಡ ನಿರ್ಮಾಪಕ ಚಂದೂಲಾಲ್‌ಜೈನ್ ಅವರು ಚಿತ್ರವನ್ನು ಹಿಂತೆಗೆದುಕೊಂಡು, ಜನರಲ್ಲಿ ವೀರಪ್ಪನ್ ಕುರಿತು ಮೃದುಭಾವ ಮೂಡಿಬಿಡುವ ಅಪಾಯದಿಂದ ತಪ್ಪಿಸಿದರು.

'ಮುಟ್ಟಿದ್ರೆ ತಟ್ಟಿಬಿಡ್ತೀನಿ' ಎಂಬ ಹೆಸರಲ್ಲಿ ಆರಂಭವಾಗಿ ಕಡೆಗೆ 'ಬಾಂಬೆದಾದಾ' ಎಂದು ಕರೆಸಿಕೊಂಡ ಚಿತ್ರಕ್ಕೆ ಟೈಗರ್ ಪ್ರಭಾಕರ್ ನಟ, ನಿರ್ದೇಶಕರು, ಸೆನ್ಸಾರ್ ಮಂಡಳಿ ಆಕ್ಷೇಪಿಸಿ ತೆಗೆದು ಹಾಕಿದ್ದ ತುಣುಕುಗಳು ಚಿತ್ರದಲ್ಲಿ ಉಳಿದಿವೆ ಎಂಬ ದೂರಿನ ಹಿನ್ನೆಲೆಯಲ್ಲಿ ಚಿತ್ರವನ್ನು ಮುಟ್ಟುಗೋಲು ಹಾಕಿದ್ದೊಂದು ವಿಶೇಷ ಘಟನೆ.

'ರೌಡಿ ಎಂ.ಎಲ್.ಎ' ಚಿತ್ರದ ಶೀರ್ಷಿಕೆಯ ವಿಚಾರದಲ್ಲಿ ಸಾಕಷ್ಟು ವಿವಾದಗಳಾಗಿ ಕಡೆಗೆ ಒಂದು ಒಪ್ಪಂದಕ್ಕೆ ಬಂದು ಚಿತ್ರದ ಹೆಸರನ್ನು 'ರೌಡಿ ಮತ್ತು ಎಂ.ಎಲ್.ಎ.' ಎಂದು ಬದಲಾಯಿಸಲಾಯಿತು.

'ಶುಂಭ–ನಿಶುಂಭ' ಎಂಬ ಚಿತ್ರ ಮಾಡಿದ್ದರೂ ಸೆನ್ಸಾರ್ ಅನುಮತಿ ಸಿಗದೆ ತೆರೆಕಾಣದ ಚಿತ್ರದ ನಿರ್ದೇಶಕ ಅಸ್ರಾರ್ ಅಭಿದ್ 'ಕ್ರಮ' ಎಂಬ ಚಿತ್ರ ನಿರ್ದೇಶಿಸಿದರು. ವರದಕ್ಷಿಣೆ ಪದ್ಧತಿಯನ್ನು ವಿರೋಧಿಸಿದ ಈ ಚಿತ್ರ ತೆರೆಕಂಡಿತು. ಚಿತ್ರದ ಅಂತ್ಯದಲ್ಲಿ ವರದಕ್ಷಿಣೆಯ ಸಮಸ್ಯೆಗೆ ಕಾರಣರಾದ ಅತ್ತೆ, ಮಾವ, ಗಂಡ ಮೊದಲಾದವರನ್ನು ನಡುಬೀದಿಯಲ್ಲಿ ಕಂಬಕ್ಕೆ ಕಟ್ಟಿ ಪೆಟ್ರೋಲ್ ಸುರಿದು ಸುಟ್ಟು ಬಿಡುತ್ತಾರೆ. ಸೂಕ್ಷ್ಮವಾದರೂ ದಿಟ್ಟವಾದ ಚಿತ್ರೀಕರಣವಿದ್ದ ಈ ಚಿತ್ರ ಗಲ್ಲಾಪೆಟ್ಟಿಗೆಯಲ್ಲಿ ಯಶಕಾಣದಿದ್ದರೂ ಮಹಿಳಾ ಸಂಘಟನೆಗಳಿಗಾಗಿ ವಿಶೇಷ ಪ್ರದರ್ಶನಗಳನ್ನು ಕಂಡಿತು.

ಪುಟ್ಟಣ್ಣ ಕಣಗಾಲ್‌ರ ಸಹಾಯಕರಾಗಿ ದುಡಿದು ಅನುಭವ ಗಳಿಸಿದ ಚಂದ್ರಹಾಸ ಆಳ್ವ ಅವರ ಸ್ವತಂತ್ರ ನಿರ್ದೇಶನದ ಮೊದಲ ಚಿತ್ರ 'ಶಿವಯೋಗಿ ಅಕ್ಕಮಹಾದೇವಿ' ತಡವಾಗಿ ಈ ವರ್ಷ ತೆರೆ ಕಂಡಿತು. ಈ ಚಿತ್ರದಲ್ಲಿನ ಅಭಿನಯಕ್ಕಾಗಿ ಉಷಾ ಎಂಬಾಕೆಗೂ, ಈ ಚಿತ್ರದ ಛಾಯಾಗ್ರಾಹಕರಿಗೂ ಕೆಲವರ್ಷಗಳ ಹಿಂದೆಯೇ ರಾಜ್ಯ ಪ್ರಶಸ್ತಿ ಸಂದಿತು. ಈ ಚಿತ್ರಕ್ಕೆ, ಮೈಸೂರು ಅನಂತಸ್ವಾಮಿಯವರು ಸಂಗೀತ ಸಂಯೋಜಿಸಿ ಹಾಡಿದ್ದು ವಿಶೇಷ.

ವಿಷ್ಣುವರ್ಧನ್ ಅಭಿನಯಿಸಿದ 'ಪೊಲೀಸ್ ದಾದಾ' ಚಿತ್ರ ಹಿಂದಿ ಕನ್ನಡದಲ್ಲಿ ಸಿದ್ಧವಾಯಿತು. ಈ ಚಿತ್ರದ ಮೂಲಕ ಹಿಂದಿಯ ರಾಮ್‌ಸೇ ಸೋದರರು ನಿರ್ದೇಶಕರಾಗಿಯೂ, ಸಂಗೀತ ಬಿಜಲಾನಿ ಎಂಬ (ಹಿಂದಿ) ನಟಿಯೂ ಕನ್ನಡಕ್ಕೆ ಪರಿಚಿತರಾದರು. ನಟ ಪ್ರಭಾಕರ್ ನಿರ್ದೇಶನದ ಮತ್ತು ಅವರ ನಟನೆಯ 150ನೇ ಚಿತ್ರ 'ಕಲಿಯುಗ ಭೀಮ' ತಯಾರಿಕೆಗೆ ಹೆಚ್ಚು ಕಾಲ ತೆಗೆದುಕೊಂಡರೂ ತೆರೆಯ ಮೇಲೆ ಅನೇಕ ಕಾರಣಗಳಿಂದ ಜನ ಮೆಚ್ಚುಗೆ ಪಡೆಯಿತು.

ಟಿ. ಜನಾರ್ದನ್ ನಿದೇಶಿಸಿದ್ದ 'ಅನಾಥ ರಕ್ಷಕ' ಎಂಬ ಚಿತ್ರಕ್ಕೆ ಪತ್ರಕರ್ತ ಮೈಸೂರು ಹರೀಶ್ ಅವರು ಕಥೆ ಬರೆದರು. ಚಿತ್ರ ಯಶಸ್ವಿಯಾಗುವ ಸೂಚನೆಗಳಿದ್ದಾಗಲೇ ನಿರ್ಮಾಪಕರು ಮತ್ತು ನಿರ್ಮಾಣ ಸಹಾಯಕರು ಬ್ಯಾಂಕ್ ಹಗರಣವೊಂದರಲ್ಲಿ ಸಿಕ್ಕಿಹಾಕಿಕೊಂಡು ವಿಚಿತ್ರಸುದ್ದಿಯಾಯಿತು. ಫಿಲಂ ಛೇಂಬರ್‌ನ ನಿಯಮ ಉಲ್ಲಂಘಿಸಿ ಅಧಿಕ ಪ್ರಮಾಣದ ಜಾಹೀರಾತು, ಪ್ರಚಾರ ಮಾಡಿದ್ದಕ್ಕಾಗಿಯೂ ಈ ಚಿತ್ರ ವಿವಾದಕ್ಕೆ ಸಿಲುಕಿತ್ತು.

ನಿರ್ದೇಶಕ ಸೋಮಶೇಖರ್ ತಮ್ಮ ಎಂದಿನ ಶ್ರೀಮಂತಿಕೆ–ಆಡಂಬರ–ಅಬ್ಬರಗಳಿಲ್ಲದ ಸರಳ ನಿರೂಪಣೆಯ 'ವರಗಳ ಬೇಟೆ' ಎಂಬ ಚಿತ್ರ ಒಂದನ್ನು ಇತ್ತದ್ದು ವಿಶೇಷ ಗಮನ ಸೆಳೆಯಿತು. ಸೆಕ್ಸ್ ಚಿತ್ರಗಳ ನಿರ್ದೇಶಕನೆಂಬ ಇಮೇಜಿಂದ ಮುಕ್ತವಾಗಲು ಕಾಶೀನಾಥ್ 'ಅಜಗಜಾಂತರ' ಎಂಬ ಹಾಸ್ಯ ಚಿತ್ರ ತೆರೆಗಿತ್ತು ಗೆದ್ದರು. ನಂಜುಂಡೇಗೌಡರು ಕ್ರೀಡೆಯನ್ನೇ ಆಧರಿಸಿ ತಯಾರಿಸಿದ 'ನವತಾರೆ' ಚಿತ್ರದಲ್ಲಿ ಕ್ರೀಡಾಪಟು ವಿಶ್ವನಾಥ್ ಅಭಿನಯಿಸಿದ್ದರು. ಅನೂಪಾ

ಎಂಬ ಹೊಸನಟಿಯೂ ಈ ಚಿತ್ರದಿಂದ ರಂಗಪ್ರವೇಶ ಮಾಡಿದರು. ಈ ಚಿತ್ರಕ್ಕಾಗಿ ಹಂಸಲೇಖ ಅವರು ನೀಡಿದ ಸಂಗೀತ ಜನಪ್ರಿಯವಾಯಿತು.

ಶಂಕರ್‌ನಾಗ್ ಅವರು ದುರ್ಮರಣಕ್ಕೀಡಾಗುವ ಮುನ್ನಾ ದಿನ ಪಾತ್ರವಹಿಸಿದ 'ಸುಂದರಕಾಂಡ' ಆ ಕಾರಣಕ್ಕಾಗಿಯೇ ಪ್ರೇಕ್ಷಕರ ಕುತೂಹಲ ಕೆರಳಿಸಿತ್ತು. ಈ ಚಿತ್ರದಲ್ಲಿನ ದಿ। ಶಂಕರನಾಗ್ ಅವರು ಪಾತ್ರಕ್ಕೆ ಸೋದರ ಅನಂತನಾಗ್ ಕಂಠದಾನ ಮಾಡಿದ್ದು ವಿಶೇಷ.

## ಕೆಲವು ಪ್ರಮುಖ ಘಟನೆಗಳು

ಕೇಂದ್ರ ಸರ್ಕಾರ ಆಮದು-ರಫ್ತು ನಿಯಮಗಳಲ್ಲಿ ಮಾಡಿದ ಬದಲಾವಣೆಗಳಿಂದಾಗಿ ಚಲನಚಿತ್ರೋದ್ಯಮ ಕಚ್ಚಾಫಿಲಂ ಪಡೆಯಲು ಹಿಂದೆಂದೂ ಕಂಡಿರದಷ್ಟು ಸಮಸ್ಯೆಗಳನ್ನೆದುರಿಸಿತು.

ಸರ್ಕಾರ ಪುಟ್ಟಣ್ಣ ಕಣಗಾಲ್‌ರ ಹೆಸರಲ್ಲಿ ಕೊಡಮಾಡುತ್ತಿರುವ ಪ್ರಶಸ್ತಿ ನಿರ್ದೇಶಕರಿಗೆ ನೀಡಬೇಕೆಂಬ ನಿರ್ದೇಶಕ ಸಂಘದ ನಿಲುವಿನಿಂದ ಈ ಪ್ರಶಸ್ತಿ ಆಯ್ಕೆಯ ಸಮಯದಲ್ಲಿ ಗೊಂದಲಗಳಾದವು. ತಾತ್ವಿಕ ಕಾರಣಗಳನ್ನು ಮುಂದಿಟ್ಟು ನಿರ್ದೇಶಕರ ಸಂಘದ ಅಧ್ಯಕ್ಷರಾಗಿದ್ದ ರಾಜೇಂದ್ರಸಿಂಗ್ (ಬಾಬೂ) ಚಲನಚಿತ್ರ ಪತ್ರಕರ್ತರ ಪರಿಷತ್ತಿನ ಅಧ್ಯಕ್ಷರಾದ ಸಿ. ಸೀತಾರಾಂ ಅವರು ಆಯ್ಕೆ ಸಮಿತಿಗೆ ರಾಜೀನಾಮೆ ಕೊಟ್ಟರು. ಅವರನ್ನು ಹೊರತುಪಡಿಸಿ ಬಹುಮತದ ಆಧಾರದ ಮೇಲೆ ಈ ಪ್ರಶಸ್ತಿಯನ್ನು ಟಿ.ಎನ್. ಬಾಲಕೃಷ್ಣ ಅವರಿಗೆ ನೀಡಲಾಯಿತು. ಈ ಸಂದರ್ಭದಲ್ಲಿ ಬಾಲಣ್ಣನವರನ್ನು ಚಲನಚಿತ್ರ ಕಲಾವಿದರ ಸಂಘ ಸನ್ಮಾನಿಸಿ ಗೌರವಿಸಿತು.

ರಾಜ್ಯ ಸರ್ಕಾರ ಗುಬ್ಬಿ ವೀರಣ್ಣನವರ ಹೆಸರಲ್ಲಿ ಮತ್ತೊಂದು ಪ್ರಶಸ್ತಿಯನ್ನು ಸ್ಥಾಪಿಸಿ, ಚಿತ್ರರಂಗದ ಸರ್ವತೋಮುಖ ಪ್ರಗತಿಗೆ ಶ್ರಮಿಸಿದವರಿಗೆ ಈ ಪ್ರಶಸ್ತಿ ಸಲ್ಲಬೇಕೆಂದು ಸೂಚಿಸಿ ಪುಟ್ಟಣ್ಣ ಪ್ರಶಸ್ತಿ ನಿರ್ದೇಶಕರಿಗೆಂದು ನಿಗದಿಪಡಿಸುವ ಮೂಲಕ ವಿವಾದಗಳಿಗೆ ತೆರೆ ಎಳೆಯಿತು. ರಾಜ್ಯಪ್ರಶಸ್ತಿ ನೀಡಿಕೆಯ ನಿಯಮಗಳಲ್ಲಿ ಇದ್ದ ಕೆಲವು ಲೋಪದೋಷಗಳನ್ನು ಸರಿಪಡಿಸಿ ಮತ್ತು ಕೆಲವು ಪ್ರಶಸ್ತಿಗಳನ್ನು ಸೇರ್ಪಡೆ ಮಾಡಲಾಯಿತು. ಚಿತ್ರೋದ್ಯಮ ಈ ಬದಲಾವಣೆಗಳನ್ನು ಮುಕ್ತ ಮನಸ್ಸಿನಿಂದ ಸ್ವಾಗತಿಸಿತು.

'ಮನೆ' ಜಂಬೂಸವಾರಿ' ಚಿತ್ರಗಳು ವಿದೇಶಗಳ ಉತ್ಸವಗಳಲ್ಲಿ ಸುತ್ತಾಡಿ ಬಂದವು. ಬೆಂಗಳೂರಿನಲ್ಲಿ ನಡೆಯಬೇಕಿದ್ದ ಅಂತಾರಾಷ್ಟ್ರೀಯ ಚಲನಚಿತ್ರೋತ್ಸವದ ಸಮಯದಲ್ಲಿ ಎದ್ದ ಕಾವೇರಿ ವಿವಾದ ಬಹುದೊಡ್ಡ ಗೊಂದಲವನ್ನು ತಂದಿತ್ತು. ಚಿತ್ರನಟರ ಹೇಳಿಕೆಗಳು, ಜನರ ಉತ್ಸಾಹ-ಉದ್ರೇಕಗಳು ವಿಚಿತ್ರ ಪರಿಣಾಮ ಬೀರಿದವು. 'ಕಾವೇರಿ ಕಾಯಿರಿ ಸಮಿತಿ' ಯೊಂದು ಆರಂಭವಾಗಿ ಚಲನಚಿತ್ರೋತ್ಸವಕ್ಕೆ

ಬಹಿಷ್ಕಾರ ಹಾಕುವವರ ಮತ್ತು ಹಾಕದವರ ಎರಡು ಬಣಗಳು ಚಿತ್ರರಂಗದಲ್ಲುಂಟಾಯಿತು. ಇಂತಹ ಉತ್ಸವಗಳು ದೇಶದ ಮರ್ಯಾದೆ ಎಂಬುದರ ಅರಿವಿದ್ದರೂ ಪರಿಸ್ಥಿತಿಗೆ ಕರಗಿಹೋದ ಡಾ। ರಾಜಕುಮಾರ್ ತಾವು ಉತ್ಸವದಲ್ಲಿ ಭಾಗವಹಿಸುವುದಿಲ್ಲ ಎಂದರು. ಅವರೇ ಉದ್ಘಾಟಿಸಬೇಕಿದ್ದ ಚಲಚಿತ್ರೋತ್ಸವ ಅವರಿಲ್ಲದೆ, ಕನ್ನಡ ಕಲಾವಿದರ ಭಾಗವಹಿಕೆ ಇಲ್ಲದೆ ಉತ್ಸವದ ಸಡಗರ ಕಳೆದುಕೊಂಡು ಪೊಲೀಸ್ ಬಂದೋಬಸ್ತಿನಲ್ಲಿ ಅಂತೂ ನಡೆಯಿತು.

ಕೇಂದ್ರ ಸರ್ಕಾರದ ವಾರ್ಷಿಕ ಚಿತ್ರಪ್ರಶಸ್ತಿಯಲ್ಲಿ ನಾಗಾಭರಣ ನಿರ್ದೇಶಿಸಿದ 'ಮೈಸೂರು ಮಲ್ಲಿಗೆ' ಚಿತ್ರಕ್ಕೆ ಶ್ರೇಷ್ಠ ಪ್ರಾದೇಶಿಕ ಭಾಷಾ ಚಿತ್ರ ಪ್ರಶಸ್ತಿ ದಕ್ಕಿತು. ಕೆ.ಎಲ್. ನರಸಿಂಹ ಸ್ವಾಮಿಯವರ ಬಹುತೇಕ ಕವಿತೆಗಳನ್ನು ಆಧರಿಸಿ ಅವು ರಚಿತವಾದ ಕಾಲ, ಸಾಮಾಜಿಕ, ರಾಜಕೀಯ ಸಂದರ್ಭಗಳ ಹಿನ್ನೆಲೆಯಲ್ಲಿ ಒಂದು ಸ್ವತಂತ್ರಕಥೆ ಕಲ್ಪಿಸಿ ವಿನ್ಯಾಸ ಮಾಡಲಾಗಿದ್ದ ಈ ಚಿತ್ರದಲ್ಲಿನ ಹಾಡುಗಳಿಗಾಗಿ ಕೆ.ಎಸ್.ನ. ಅವರಿಗೆ ಉತ್ತಮ ಸಾಹಿತ್ಯಕ್ಕಾಗಿ ಪ್ರಶಸ್ತಿ ದೊರಕಿತು. (ಆದರ ಚಿತ್ರ 1991 ರಲ್ಲಿ ಬಿಡುಗಡೆಯಾಗಲಿಲ್ಲ)

## ಹಗರಣಗಳು

ಡಾ। ರಾಜಕುಮಾರ್ ಅವರ ಬಗ್ಗೆ ಬಹುದೊಡ್ಡ ಗಾಳಿಸುದ್ದಿಯೊಂದು ಹಬ್ಬಿ, ಅವರ ಅಭಿಮಾನೀ ಜನರಲ್ಲಿ ವಿಚಿತ್ರ ತಲ್ಲಣಗಳೆದ್ದವು. ರಾಜ್ ಅವರ ನಿಧನ ಆತ್ಮಹತ್ಯೆ ಎಂದೆಲ್ಲ ಹರಡಿದ ಗಾಳಿಸುದ್ದಿಯಿಂದಾಗಿ ಸ್ವತಃ ರಾಜ್ ಅವರೇ ದೂರದರ್ಶನ, ಆಕಾಶವಾಣಿ ಪತ್ರಿಕೆಗಳಲ್ಲಿ ಹೇಳಿಕೆ ನೀಡಿ ಪರಿಸ್ಥಿತಿಯನ್ನು ಸುಸ್ಥಿತಿಗೆ ತರಬೇಕಾಯಿತು. ತದನಂತರ ಡಾ। ರಾಜ್‌ರ ಮನೆಯ ಮುಂದೆ ಉಪವಾಸ ಸತ್ಯಾಗ್ರಹ, ನಿರಶನ ಮುಂತಾದವುಗಳನ್ನು ಮಾಡಿ ರಾಜ್ ಅಭಿಮಾನಿಗಳು ಮತ್ತೆ ಡಾ। ರಾಜ್‌ಕುಮಾರ್ ಅವರು ಚಿತ್ರಗಳಲ್ಲಿ ಅಭಿನಯಿಸುವಂತೆ ಒತ್ತಾಯಿಸಿದರು. ಈ ಒತ್ತಾಯಗಳಿಗೆ ಮಣಿದು, ರಾಜ್‌ಕುಮಾರ್ ಅವರು ಮೂರು ವರ್ಷಗಳ ನಂತರ 'ಜೀವನ ಚೈತ್ರ' ಸಿನಿಮಾಕ್ಕಾಗಿ ಬಣ್ಣ ಹಚ್ಚುವ ನಿರ್ಧಾರ ಕೈಗೊಂಡರು.

ಕನ್ನಡದ ಜನಪ್ರಿಯ ನಟಿಯಾದ ಮಾಲಾಶ್ರೀ ಅವರು ಪತ್ರಿಕೆಯೊಂದರ ಸಂದರ್ಶನದಲ್ಲಿ ಕನ್ನಡದ ನಟರನ್ನು ಕೋತಿಗಳಿಗೆ ಹೋಲಿಸಿದ್ದಾರೆಂಬ ತಪ್ಪು ವ್ಯಾಖ್ಯಾನದಿಂದಾಗಿ ಒಂದಿಷ್ಟು ಹಗರಣಗಳಾದವು. ಕೊನೆಗೆ ಪತ್ರಕರ್ತರ ಸಭೆಯೊಂದನ್ನು ಕರೆದು ಮಾಲಾಶ್ರೀಯವರೇ ಸಮಜಾಯಿಷಿ ನೀಡುವಂತಾಯಿತು.

ಕಾವೇರಿ ವಿವಾದ ಮತ್ತು ಚಲಚಿತ್ರೋತ್ಸವ ಸಂಬಂಧದ ಭಿನ್ನಾಭಿಪ್ರಾಯದಲ್ಲಿ ಕರ್ನಾಟಕ ಚಲಚಿತ್ರ ನಿರ್ದೇಶಕರ ಸಂಘದ ಅನೇಕರು ತಮ್ಮ ಸ್ಥಾನಗಳಿಗೆ

ರಾಜೀನಾಮೆ ಕೊಟ್ಟಿದ್ದರಿಂದ ನಿರ್ದೇಶಕರ ಸಂಘ ಹಂಗಾಮಿ ವ್ಯವಸ್ಥೆಯೊಡನೆ ಚಲಚಿತ್ರೋತ್ಸವದಲ್ಲಿ ಪಾಲ್ಗೊಳ್ಳುವ ನಿರ್ಧಾರ ಕೈಕೊಂಡಿತು.

## ಆರೋಗ್ಯಕಾರೀ ನಿಲುವುಗಳು

ಚಲನಚಿತ್ರ ಕಾರ್ಮಿಕರ ಒಕ್ಕೂಟ, ಸಹಕಲಾವಿದರು ಮತ್ತು ಸಹ ತಂತ್ರಜ್ಞರ ಅತಂತ್ರ ಸ್ಥಿತಿಯ ಹಿನ್ನೆಲೆಯಲ್ಲಿ, ಅವರ ಮಕ್ಕಳಿಗೆ ಮತ್ತು ಮನೆಯವರಿಗೆ ನಿಯತವಾದ ಸಂಪಾದನೆಯನ್ನೊದಗಿಸಲೆಂದು ವಿಸ್ತೃತ ಕಾರ್ಯಕ್ರಮ–ಯೋಜನೆಗಳನ್ನು ಹಾಕಿಕೊಂಡು, ಆ ನಿಟ್ಟಿನಲ್ಲಿ ಮುಂದುವರೆವ ನಿರ್ಧಾರ ಕೈಗೊಂಡಿತು. ಇದಕ್ಕಾಗಿ ಅನೇಕ ಸ್ವಯಂ ಸೇವಾ ಸಂಸ್ಥೆಗಳ ಮತ್ತು ಮಹಿಳಾ ಸಂಘಟನೆಗಳ ಅನುಭವಸ್ಥರೊಡನೆ ಸೇರಿ ಯೋಜನೆಗಳನ್ನು ರೂಪಿಸಿಲಾಯಿತು. ಈ ಎಲ್ಲ ಯೋಜನೆಗಳು 1992ರ ಒಳಗೆ ಕಾರ್ಯಗತವಾಗುವ ಸಾಧ್ಯತೆ ಇದೆ.

ಪ್ರಸಾದ್ ಸಂಸ್ಥೆಯವರು ಆದಾಗಲೇ ಆರಂಭಿಸಿದ್ದ ಡಬ್ಬಿಂಗ್ ಥಿಯೇಟರ್‌ನೊಡನೆ ರೀರೆಕಾರ್ಡಿಂಗ್ ವ್ಯವಸ್ಥೆಯುಳ್ಳ ಸಂಪೂರ್ಣ ಸುಸಜ್ಜಿತ ಸ್ಟುಡಿಯೋ ಆರಂಭಿಸಿದರು.

ಇಷ್ಟೆಲ್ಲದರ ಒಟ್ಟು ಸ್ಥಿತಿಯನ್ನು ಗಮನಿಸಿದಾಗ 1991 ಕನ್ನಡ ಚಿತ್ರರಂಗಕ್ಕೆ ಕೇವಲ ಮತ್ತೊಂದು ವರ್ಷವಾಗಿತ್ತು. ಚಿತ್ರ ನಿರ್ಮಾಣ ಒಂದು ಕಲೆ ಎನ್ನುವ ದೃಷ್ಟಿಯಿಂದಾಗಲಿ, ಆರ್ಥಿಕ ಮಾನದಂಡಗಳಿಂದಾಗಲಿ, ಸರ್ಕಾರದ ನೆರವಿನ ಹಿನ್ನೆಲೆಯಾಗಲಿ–ಯಾವುದೇ ನಿಟ್ಟಿನಿಂದಲೂ ಬದಲಾವಣೆಗಳೇನೂ ಆಗದೆ 1991 ಹಿಂದೆ ಸರಿಯಿತು. ಸಂಖ್ಯೆಯ ದೃಷ್ಟಿಯಿಂದ ಅತಿ ಹೆಚ್ಚು ಚಿತ್ರಗಳು ಮಾತ್ರ ಬಂದವು.

ಪ್ರಾಯಶಃ 1992 ರಲ್ಲಿ ಹೊಸ ಗಾಳಿ ಬೀಸಬಹುದು.

## ನಮ್ಮನ್ನಗಲಿದ ಸಿನಿಮಾರಂಗದ ಪ್ರಮುಖ ವ್ಯಕ್ತಿಗಳು

ಇದೇ ವರ್ಷ ಫೆಬ್ರುವರಿ ತಿಂಗಳಂದು ಹೊಸ ಅಲೆಗಳ ಚಿತ್ರ ನಿರ್ದೇಶಕರೆಂದೇ ಖ್ಯಾತರಾದ ಎಸ್. ಲಕ್ಷ್ಮೀನಾರಾಯಣ ಅವರು ತೀರಿಕೊಂಡರು. ಇವರ ಪ್ರಥಮ ಕಿರುಚಿತ್ರವೇ ('ಬ್ಲಿಸ್') ಪ್ರಶಸ್ತಿ ಗಳಿಸಿತು. ಅನೇಕ ಸಾಮಾಜಿಕ ಸಮಸ್ಯೆಗಳನ್ನುಳ್ಳ ಕಥಾವಸ್ತುವನ್ನು ಆಯ್ದು ಚಿತ್ರ ಮಾಡುವುದರಲ್ಲಿ ಇವರಿಗೆ ಹೆಚ್ಚು ಆಸಕ್ತಿ. ನಾಂದಿ, ಬೆಟ್ಟದ ಹೂ, ಅಬಚೂರಿನ ಪೋಸ್ಟ್ ಆಫೀಸು ಮುಂತಾದ ಚಿತ್ರಗಳಲ್ಲಿ ಲಕ್ಷ್ಮೀನಾರಾಯಣ್ ಅವರ ಒಲವನ್ನು ಸ್ಪಷ್ಟವಾಗಿ ಗುರುತಿಸಬಹುದು. ಮುಯ್ಯಿ, ಮುಕ್ತಿ, ಉಯ್ಯಾಲೆ – ಮಧ್ಯಮ ವರ್ಗದ ವಸ್ತುವನ್ನು ಪರಿಣಾಮಕಾರಿಯಾಗಿ ಚಿತ್ರಮಾಧ್ಯಮದಲ್ಲಿ ತೋರಿದ ಚಿತ್ರಗಳಾಗಿದ್ದು ಉತ್ತಮ ಚಿತ್ರಗಳೆಂಬ ಮೆಚ್ಚುಗೆ ಗಳಿಸಿದ್ದವು.

# ನಾಟಕ–ರಂಗಭೂಮಿ ಚಟುವಟಿಕೆಗಳು

ಪ್ರಕಾಶ ಕಂಬತ್ತಳ್ಳಿ

1991 ಕನ್ನಡ ರಂಗಭೂಮಿಯ ಪಾಲಿಗೆ ವಿಶೇಷ ಚಟುವಟಿಕೆಗಳೇನೂ ಕಾಣಿಸಿಕೊಳ್ಳದ ಮಾಮೂಲಿ ವರ್ಷ. ಆದರೂ ಮೇಲು ನೋಟಕ್ಕೆ ಅಂತಹ ಹೆಚ್ಚಿನ ಚಟುವಟಿಕೆಗಳು ನಡೆದಂತಿಲ್ಲ ಎಂದೆನ್ನಿಸಿದರೂ, ಗತ ವರ್ಷವನ್ನು ಒಮ್ಮೆ ಸಿಂಹಾವಲೋಕನ ಮಾಡಿದಾಗ, ಜಡ್ಡುಗಟ್ಟಿದ್ದ ಕನ್ನಡ ರಂಗಭೂಮಿಗೆ ಪುನಶ್ಚೇತನ ನೀಡಬಲ್ಲ ಕೆಲವಾದರೂ ವೈಶಿಷ್ಟ್ಯಪೂರ್ಣ ಘಟನೆಗಳು ಈ ಅವಧಿಯಲ್ಲಿ ಜರುಗಿರುವುದನ್ನು ಕಾಣಬಹುದು. ಒಂದಂತೂ ನಿಜ. ಅರುವತ್ತರ ದಶಕದಲ್ಲಾದಂತೆ ರಂಗಭೂಮಿಗೆ ಹೊಸ ತಿರುವನ್ನು ನೀಡಬಲ್ಲಂತಹ ಯಾವುದೇ ಪವಾಡಗಳು 1991ರಲ್ಲಿ ಘಟಿಸಿಲ್ಲ. ಆದರೆ ಈ ಅವಧಿಯ ಹಿಂದಿನ ಕೆಲವು ವರ್ಷಗಳಿಗೆ ಹೋಲಿಸಿದಾಗ 1991ರ ರಂಗಭೂಮಿ ಮತ್ತೆ ಮೈ ಕೊಡವಿ ನಿಲ್ಲುವ ಲಕ್ಷಣಗಳನ್ನು ತೋರಿದೆ. ಪ್ರಕಟವಾದ ನಾಟಕಗಳಿಗಿಂತಲೂ; ಪ್ರಯೋಗಗಳು, ನಾಟಕೋತ್ಸವಗಳು, ವಿಚಾರ ಸಂಕಿರಣಗಳು, ಕನ್ನಡ ರಂಗಭೂಮಿಗೆ ಲಭಿಸಿದ ಅಂತರರಾಷ್ಟ್ರೀಯ–ರಾಷ್ಟ್ರೀಯ ಪ್ರಶಸ್ತಿಗಳು ಇತ್ಯಾದಿಯಾಗಿ ರಂಗಭೂಮಿ ಚಟುವಟಿಕೆಗಳೇ ಈ ಬಾರಿ ಪ್ರಧಾನವಾಗಿವೆ.

## ಪ್ರಶಸ್ತಿಗಳು

ಈ ವರ್ಷದ ಗಮನಾರ್ಹ ಮತ್ತು ಮಹತ್ವದ ಸಂಗತಿಯೆಂದರೆ ಕನ್ನಡ ರಂಗಭೂಮಿ ಎರಡು ಪ್ರತಿಷ್ಠಿತ ಪ್ರಶಸ್ತಿಗಳನ್ನು ಪಡೆದುಕೊಂಡದ್ದು.

1. ಹೆಗ್ಗೋಡಿನ ಶ್ರೀ ಕೆ.ವಿ. ಸುಬ್ಬಣ್ಣನವರಿಗೆ ಸಂದ ಮ್ಯಾಗ್ಸೆಸೆ ಪ್ರಶಸ್ತಿ.

2. ಶ್ರೀಮತಿ ಬಿ. ಜಯಶ್ರೀ ಅವರಿಗೆ ಬಂದ 'ಸಫ್ದರ್ ಹಶ್ಮಿ' ಪ್ರಶಸ್ತಿ.

ಇಡೀ ಕನ್ನಡ ರಂಗಭೂಮಿಯ ಇತಿಹಾಸದಲ್ಲೇ ಮೊಟ್ಟಮೊದಲ ಬಾರಿಗೆ ಮ್ಯಾಗ್ಸೆಸೆ ಪ್ರಶಸ್ತಿಯನ್ನು ಶ್ರೀ ಕೆ.ವಿ. ಸುಬ್ಬಣ್ಣನವರು ಪಡೆದುಕೊಂಡಿದ್ದಾರೆ. ಹಲವಾರು ದಶಕಗಳಿಂದ ರಂಗಭೂಮಿಯ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀ ಸುಬ್ಬಣ್ಣನವರು ಉತ್ತಮ ಅನುವಾದಕರೂ ಹೌದು. ಅವರ 'ದಶರೂಪಕ' ರಂಗ ಅಭ್ಯಾಸಿಗಳಿಗೆ ಆಕರ ಗ್ರಂಥ. ರಂಗ ನಿರ್ದೇಶಕರೂ

ಆಗಿರುವ ಸುಬ್ಬಣ್ಣ ರಂಗಭೂಮಿಯಲ್ಲಿ ಹಲವಾರು ಪ್ರತಿಭೆಗಳನ್ನು ಬೆಳಕಿಗೆ ತಂದಿದ್ದಾರೆ. ಸಮರ್ಥ ಸಂಘಟನಕಾರರೆಂದು ಹೆಸರು ಗಳಿಸಿರುವ ಸುಬ್ಬಣ್ಣ ಹೆಗ್ಗೋಡಿನ ನಿನಾಸಂ (ನೀಲಕಂಠೇಶ್ವರ ನಾಟಕ ಸಂಘ) ಹಿಂದಿನ ಪ್ರೇರಕ ಶಕ್ತಿ. ಹಳ್ಳಿಗಾಡಿನಲ್ಲಿ ರಂಗಭೂಮಿಗೆ ಚಾಲನೆ ನೀಡುತ್ತಿರುವ ಸುಬ್ಬಣ್ಣನವರಿಗೆ ನೀಡಲಾಗಿರುವ ಮ್ಯಾಗ್ಸೆಸೆ ಪ್ರಶಸ್ತಿ ಕನ್ನಡ ರಂಗಭೂಮಿಯ ಹಿರಿಮೆಯನ್ನು ಮತ್ತಷ್ಟು ಎತ್ತಿ ಹಿಡಿದಿದೆ.

ಉತ್ತರ ಪ್ರದೇಶ ಸರಕಾರ "ಸಫ್ದರ್ ಹಶ್ಮಿ" ಅವರು ಹೆಸರಿನಲ್ಲಿ ಯುವ ನಿರ್ದೇಶಕರಿಗೆ ಪ್ರಶಸ್ತಿಯೊಂದನ್ನು ನೀಡಲಾರಂಭಿಸಿದೆ. "ಜಸ್ಮಾ ಒಡನ್" "ಘಾಸಿರಾಂ ಕೊತ್ವಾಲ" "ಕರಿಮಾಯಿ" 'ಲಕ್ಷಾಪತಿ ರಾಜನ ಕಥೆ' ಮುಂತಾದ ನಾಟಕಗಳನ್ನು ನಿರ್ದೇಶಿಸಿ ಪ್ರಸಿದ್ಧರಾಗಿರುವ ಕನ್ನಡದ ನಟಿ–ನಿರ್ದೇಶಕಿ ಶ್ರೀಮತಿ ಬಿ. ಜಯಶ್ರೀ ಅವರಿಗೆ ಪ್ರಪ್ರಥಮವಾಗಿ ನೀಡಲಾಗುತ್ತಿರುವ "ಸಫ್ದರ್ ಹಶ್ಮಿ" ಪ್ರಶಸ್ತಿ ಸಂದಿದೆ. ರಾಷ್ಟ್ರಮಟ್ಟದ ಈ ಪ್ರಶಸ್ತಿ ಕನ್ನಡದ ರಂಗ–ನಿರ್ದೇಶಕರೊಬ್ಬರಿಗೆ ದೊರೆತಿರುವುದು ರಂಗಭೂಮಿಗೆ ಹಿಗ್ಗು ತಂದಿದೆ.

## ಗುಬ್ಬಿ ವೀರಣ್ಣ ; ಬಿ. ಸಿ.

ಕನ್ನಡ ವೃತ್ತಿ ರಂಗಭೂಮಿಯ ಇತಿಹಾಸವೆಂದರೆ ಗುಬ್ಬಿ ಕಂಪನಿಯ ಚರಿತ್ರೆಯೇನೋ ಎಂಬಂತೆ ರಂಗಭೂಮಿಯಲ್ಲಿ ಅಸಾಧಾರಣ ಸಾಧನೆಯನ್ನು ಮಾಡಿದವರು ವೀರಣ್ಣನವರು ಕನ್ನಡ ರಂಗಭೂಮಿಗೆ ಘನತೆಯನ್ನು ತಂದುಕೊಟ್ಟ, ತಮ್ಮ ಕಾಲದಲ್ಲೇ ದಂತ ಕಥೆಯಾಗಿದ್ದ ನಾಟಕ ರತ್ನ ಗುಬ್ಬಿ ವೀರಣ್ಣನವರು ಜನಿಸಿ ಇಂದಿಗೆ ನೂರು ವರ್ಷಗಳಾದವು. ಅವರ ಶತಮಾನೋತ್ಸವವನ್ನು ಈ ವರ್ಷ ಹಲವಾರು ಕಡೆ ಆಚರಿಸಲಾಯಿತು.

ಬಿ.ಸಿ. (ಪ್ರೊ. ಬಿ. ಚಂದ್ರಶೇಖರ್) ಕನ್ನಡ ಹವ್ಯಾಸಿ ರಂಗಭೂಮಿಗೆ ಪರಿಚಿತ ಹೆಸರು. ಹವ್ಯಾಸಿ ರಂಗಭೂಮಿಯ ಬೆಳವಣಿಗೆಯಲ್ಲಿ ಅವರದು ಮಹತ್ವದ ಪಾತ್ರ. ಅನೇಕ ನಾಟಕಗಳನ್ನು ರಚಿಸಿರುವ ಮತ್ತು 'ತುಘಲಕ್' ಸೇರಿದಂತೆ ಹಲವಾರು ಯಶಸ್ವೀ ನಾಟಕಗಳನ್ನು ನಿರ್ದೇಶಿಸಿರುವ ಪ್ರೊ. ಬಿ. ಚಂದ್ರಶೇಖರ್ ಅವರಿಗೆ 75 ವರ್ಷಗಳಾದ ಸಂದರ್ಭದಲ್ಲಿ ಅವರನ್ನು ಸ್ನೇಹಿತರು–ಅಭಿಮಾನಿಗಳು ಸನ್ಮಾನಿಸಿ, ರಂಗಭೂಮಿಗೆ ಸಂಬಂಧಿಸಿದ ಲೇಖನಗಳುಳ್ಳ 'ಬಹುರೂಪಿ' ಗ್ರಂಥವನ್ನು ಅರ್ಪಿಸಿದರು.

## ವಿಚಾರ ಸಂಕಿರಣಗಳು

ನಾಟಕಗಳ ಪ್ರದರ್ಶನಕ್ಕಿಂತಲೂ, ನಾಟಕಗಳನ್ನು ಕುರಿತ ಚರ್ಚೆಯೇ ಹೆಚ್ಚಾಯಿತೇನೋ ಎಂಬಂತೆ ಈ ವರ್ಷ ರಂಗಭೂಮಿಯನ್ನು ಕುರಿತಂತೆ ಹಲವಾರು

ವಿಚಾರ ಸಂಕಿರಣಗಳು ನಡೆದವು. ಗುಬ್ಬಿ ವೀರಣ್ಣನವರ ಜನ್ಮ ಶತಮಾನೋತ್ಸವ ಆಚರಣೆಯ ಸಂದರ್ಭದಲ್ಲಿ ವಿಚಾರ ಸಂಕಿರಣಗಳನ್ನು ಬೆಂಗಳೂರು–ಮೈಸೂರುಗಳಲ್ಲಿ ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ ಮಂಡಿಸಿದ ಪ್ರಬಂಧಗಳು–ಚರ್ಚೆ 'ರಂಗ ಚಿಂತನ' ಎಂಬ ಹೆಸರಿನಲ್ಲಿ ಕರ್ನಾಟಕ ನಾಟಕ ಅಕಾಡೆಮಿಯು ಪ್ರಕಟಿಸಿದೆ. ಪ್ರೊ. ಬಿ. ಸಿ. ಅವರಿಗೆ ಎಪ್ಪತ್ತೈದು ವರ್ಷಗಳು ತುಂಬಿದ ಸಂದರ್ಭದಲ್ಲೂ ಒಂದು ವಿಚಾರ ಸಂಕಿರಣ ನಡೆಯಿತು. 'ಅಂತರಂಗ' ಕ್ಕೆ (ನಗರ ಹವ್ಯಾಸಿ ತಂಡ) ಹತ್ತು ವರ್ಷಗಳಾದ ನೆನಪಿಗೆ, ಹವ್ಯಾಸಿರಂಗ ಭೂಮಿಯನ್ನು ಕುರಿತು ವಿಚಾರ ಸಂಕಿರಣವೊಂದು ನಡೆಯಿತು. ಇನ್ನೂ ಒಂದು ವಿಶೇಷವೆಂದರೆ ಯುವ ನಾಟಕಕಾರ ಎಚ್.ಎಸ್. ಶಿವಪ್ರಕಾಶ್ ಅವರ ನಾಟಕಗಳನ್ನು ಕುರಿತೇ ಒಂದು ವಿಚಾರ ಸಂಕಿರಣ ನಡೆದದ್ದು. ಆರೇಳು ವಿಚಾರ ಸಂಕಿರಣಗಳು ನಡೆದರೂ ರಂಗಭೂಮಿಯ ಬೆಳವಣಿಗೆಗೆ ಪೂರಕವಾಗಬಹುದಾದಂತಹ ಚರ್ಚೆಯೇನೂ ನಡೆಯಲಿಲ್ಲ. ತಂಡಗಳು/ಸಂಸ್ಥೆಗಳ ಚಟುವಟಿಕೆಗಳ ದಾಖಲೆಯ ಅಂಗವಾಗಿ ನಡೆದ ಈ ವಿಚಾರ ಸಂಕಿರಣಗಳು ಕೇವಲ ದಾಖಲೆಯಾಗಿ ಮಾತ್ರವೇ ಉಳಿದವು. ಮೊದಲು ರಂಗಭೂಮಿ ಹತ್ತಾರು ವೈವಿಧ್ಯಮಯ ಚಟುವಟಿಕೆಗಳಿಂದ ತುಂಬಿ ತುಳುಕಬೇಕು. ನಂತರ ಅವುಗಳನ್ನು ಕುರಿತ ಚರ್ಚೆ ಇತ್ಯಾದಿ ನಡೆಯಬೇಕು. ಆದರೆ ರಂಗ ಚಟುವಟಿಕೆಗಳೇ ಸೀಮಿತಗೊಳ್ಳುತ್ತಿರುವ ಸಂದರ್ಭದಲ್ಲಿ ಇಂತಹ ವಿಚಾರ ಸಂಕಿರಣಗಳು ಮಹತ್ವ ಕಳೆದುಕೊಂಡು ಬಿಡುತ್ತವೆ. ಒಂದು ಉತ್ತಮ ಸಂಗತಿಯೆಂದರೆ ಮೇಲ್ಕಂಡ ವಿಚಾರ ಸಂಕಿರಣಗಳಲ್ಲಿ ಮಂಡಿತವಾದ ಪ್ರಬಂಧಗಳಲ್ಲಿ ಎರಡು ಸಂಕಿರಣಗಳ ಪ್ರಬಂಧಗಳು ಪುಸ್ತಕ ರೂಪ ತಾಳಿದ್ದು.

ಎಚ್.ಎಸ್. ಶಿವಪ್ರಕಾಶ್ ಅವರ ನಾಟಕಗಳನ್ನು ಕುರಿತಂತೆ ನಡೆದ ವಿಚಾರ ಸಂಕಿರಣದ ಸಂದರ್ಭದಲ್ಲಿ, ಇದೇ ಲೇಖಕರ 'ಸಿಂಗಿರಾಜ ಸಂಪಾದನೆ' ಕವನವು ನಾಟಕ ರೂಪದಲ್ಲಿ ಪ್ರಯೋಗವಾಯಿತು ಮತ್ತು 'ಹೊನ್ನ ಗಂಗಾಧರ' ಎಂಬ ಇನ್ನೊಂದು ಕವನವನ್ನು ಶಾಸ್ತ್ರೀಯ ನೃತ್ಯ ರೂಪದಲ್ಲಿ ಪ್ರದರ್ಶಿಸಲಾಯಿತು. ಈ ಪ್ರಯೋಗಗಳಿಗೆ ಉತ್ತಮ ಪ್ರತಿಕ್ರಿಯೆ ದೊರೆತರೂ ಮುಂದೆ ಇಂತಹ ಪ್ರಯೋಗಗಳು ಕೆಲವಾದರು ನಡೆದಿದ್ದರೆ ರಂಗಭೂಮಿಗೆ ಒಂದು ವೈವಿಧ್ಯತೆಯಾದರೂ ದಕ್ಕುತ್ತಿತ್ತು. ಆದರೆ ಹೊಸ ಪ್ರಯೋಗಗಳು ಅಲ್ಲಿಗೇ ನಿಂತು ಹೋದವು.

## ತುಘಲಕ್ ಟಿಕಿಕಲ್ – ಟಿ.ಓ. 100

ಗಿರೀಶ್ ಕಾರ್ನಾಡ್‌ರ ಹೊಸ ನಾಟಕ 'ತಲೆದಂಡ' ಇದೀಗ ಪ್ರಯೋಗಗಳ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುತ್ತಿರುವ ಸಂದರ್ಭದಲ್ಲೇ ಅವರದೇ ಆದ 'ತುಘಲಕ್' ನಾಟಕ ಈ ವರ್ಷ ನೂರು ಪ್ರದರ್ಶನಗಳನ್ನು ಕಂಡಿತು. ಕನ್ನಡ ರಂಗಭೂಮಿಗೆ ಹೊಸ ಆಯಾಮ ಒದಗಿಸಿದ ಈ ನಾಟಕ ಹಲವಾರು ಭಾಷೆಗಳಲ್ಲಿ ಪ್ರಕಟವಾಗಿ ಪ್ರಯೋಗವಾಗಿದೆ. ಪ್ರೊ. ಬಿ. ಚಂದ್ರಶೇಖರ್ ಅವರ ನಿರ್ದೇಶನದಲ್ಲಿ ಮೊದಲ

ಪ್ರಯೋಗ ಆರಂಭವಾದದ್ದು ಸಿ. ಆರ್. ಸಿಂಹ ಅವರ ನಿರ್ದೇಶನದಲ್ಲಿ 100 ಪ್ರಯೋಗಗಳನ್ನು ಪೂರ್ಣಗೊಳಿಸಿತು.

ಟಿಪಿಕಲ್ ಟಿ.ಪಿ. ಕೈಲಾಸಂ ಕನ್ನಡದಲ್ಲೇ ಒಂದು ವಿಶಿಷ್ಟ ಪ್ರಯೋಗ. ಕೈಲಾಸಂ ಅವರ ಜೀವನದ ಕೊನೆಯ ಅವಧಿ ಮತ್ತು ಅವರದೇ ನಾಟಕಗಳ ಪಾತ್ರಗಳೊಂದಿಗೆ ಮುಖಾ–ಮುಖಿ, ಇವೆಲ್ಲವೂ ಒಬ್ಬನೇ ವ್ಯಕ್ತಿಯ ಅಭಿನಯದಿಂದ ಪದರ ಪದರವಾಗಿ ರಂಗದ ಮೇಲೆ ತೆರೆದುಕೊಳ್ಳುತ್ತವೆ. ನಾಟಕದ ಏಕೈಕ ಪಾತ್ರಧಾರಿ ಸಿ.ಆರ್. ಸಿಂಹ, ಕೈಲಾಸಂ ಪಾತ್ರವನ್ನು ಮನತಟ್ಟುವಂತೆ ಅಭಿನಯಿಸಿದರು. ಈ ನಾಟಕವೂ ನೂರು ಪ್ರಯೋಗಗಳನ್ನು ಕಂಡಿತು.

ಹವ್ಯಾಸಿ ರಂಗಭೂಮಿಯಲ್ಲಿ ಒಂದು ನಾಟಕ ಕೆಲವಾರು ಪ್ರಯೋಗಗಳನ್ನು ಕಾಣುವುದೇ ಸುಯೋಗ ಎಂದುಕೊಳ್ಳುವಂತಹ ಸಂದರ್ಭದಲ್ಲಿ 2 ನಾಟಕಗಳು ಏಕಕಾಲದಲ್ಲಿ ನೂರು ಪ್ರಯೋಗಗಳನ್ನು ಕಂಡದ್ದು ಈ ವರ್ಷದ ಸಾಧನೆಗಳಲ್ಲೊಂದು.

## ತಂಡಗಳು–ಉತ್ಸವಗಳು

ಉತ್ಸಾಹದಲ್ಲಿ ಒಂದಿಷ್ಟು ಚಟುವಟಿಕೆಗಳನ್ನು ನಡೆಸಿ, ಅನೇಕ ತಂಡಗಳು ಹಾಗೆಯೇ ತಣ್ಣಗಾಗುತ್ತಿರುವ ಸಂದರ್ಭದಲ್ಲೂ ಕೆಲವು ತಂಡಗಳು ದೀರ್ಘಾವಧಿಯವರೆಗೆ ರಂಗ ಚಟುವಟಿಕೆಯಲ್ಲಿ ತೊಡಗಿ ರಂಗಭೂಮಿಯಲ್ಲಿ ಸಕ್ರಿಯವಾಗಿವೆ. ಕಳೆದ ದಶಕಗಳ ರಂಗ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿದ್ದ ಮೈಸೂರಿನ 'ಸಮತೆಂತೋ' ತಂಡ ಈ ವರ್ಷ ಬೆಳ್ಳಿ ಹಬ್ಬವನ್ನಾಚರಿಸಿತು. 'ಸುಚಿತ್ರಾ' ಸಂಸ್ಥೆ ನಾಟಕೋತ್ಸವವನ್ನು ನಡೆಸುವುದರೊಂದಿಗೆ ದ್ವಿ–ದಶಮಾನೋತ್ಸವವನ್ನು ಆಚರಿಸಿಕೊಂಡಿತು. 'ಅಂತರಂಗ' ತಂಡ; ವಿಚಾರ ಸಂಕಿರಣ, ನಾಟಕೋತ್ಸವಗಳೊಂದಿಗೆ ದಶಮಾನೋತ್ಸವನ್ನು ಆಚರಿಸಿತು. ಮೈಸೂರಿನ 'ಹೆಜ್ಜೆ–ಗೆಜ್ಜೆ' ಬೀದಿ ತಂಡವೂ ಸದ್ದಿಲ್ಲದೆ ದಶಮಾನೋತ್ಸವ ಆಚರಿಸಿತು.

–2–

ಸಂಕೇತ್ ನಾಟಕ ತಂಡವು ದಿ। ಶಂಕರ್‌ನಾಗ್ ಸ್ಮರಣಾರ್ಥ ಒಂದು ನಾಟಕೋತ್ಸವವನ್ನು ಏರ್ಪಡಿಸಿತ್ತು. ಈ ಸಂದರ್ಭದಲ್ಲಿ ನಟರಂಗ ತಂಡವು ಗಿರೀಶ್ ಕಾರ್ನಾಡರ 'ತಲೆದಂಡ' ನಾಟಕವನ್ನು, ಪ್ರಯೋಗ ರಂಗ ತಂಡವು 'ರಾಜಬೇಟೆ' ಯನ್ನು (ದಿ ರಾಯಲ್ ಹಂಟ್ ಆಫ್ ಸನ್ ನ ರೂಪಾಂತರ) ಮತ್ತು ಸಂಕೇತ್ ತಂಡವು 'ಹುಲಗೂರ ಹುಲಿಯವ್ವ' (ಬ್ರೆಕ್ಟ್‌ನ ಮದರ್ ಕರೇಜ್ ಅಂಡ್ ಹರ್ ಚಿಲ್ಡ್ರನ್ ನ ರೂಪಾಂತರ) ನಾಟಕಗಳನ್ನು ಪ್ರದರ್ಶಿಸಿದವು.

ಸಾಕಷ್ಟು ಚರ್ಚಿತವಾಗುತ್ತಿರುವ ಗಿರೀಶ್ ಕಾರ್ನಾಡರ 'ತಲೆದಂಡ' ಈ ಹಿಂದೆಯೇ ರಚಿತವಾಗಿದ್ದರೂ ಈ ಸಾಲಿನಲ್ಲಿ ಹೆಚ್ಚು ಪ್ರದರ್ಶನಗಳನ್ನು ಕಂಡಿತು.

ಸಿ.ಆರ್. ಸಿಂಹ ನಟರಂಗಕ್ಕಾಗಿ ಈ ನಾಟಕವನ್ನು ನಿರ್ದೇಶಿಸಿದರು. ಜೊತೆಗೆ ಇತರ ತಂಡಗಳೂ ಈ ನಾಟಕವನ್ನು ಪ್ರಯೋಗಿಸಿವೆ. ಹನ್ನೆರಡನೇ ಶತಮಾನದ ಸಾಮಾಜಿಕ ಬದುಕನ್ನು ಚಿತ್ರಿಸುವ ಈ ನಾಟಕ ಇಂದಿಗೂ ಪ್ರಸ್ತುತವಾಗಿದೆ. "ಒಂದು ಮಹಾಚಳವಳಿಯ ನಾಯಕನಿಗೂ ಆತನೇ ಮುನ್ನಡೆಸಿದ ಜನ ಸಮುದಾಯಕ್ಕೂ ನಡುವೆ ಘಟಿಸುವ ಬಿರುಕು, ಉದಾತ್ತ ತತ್ವಕ್ಕೂ, ಕಠೋರ ವಾಸ್ತವತೆಗೂ ನಡುವಿನ ದುರಂತ ಅಂತರ, ಎರಡೂ ದಂಡೆಯ ನಡುವೆ ಹೊಯ್ದಾಡುವ ರಾಜಕೀಯ ವ್ಯವಸ್ಥೆ–ಇವೆಲ್ಲವನ್ನೂ ಆ ಯುಗದತ್ತ ನೋಟ ಬೀರುತ್ತಲೇ ಸದ್ಯದ ರಾಜಕೀಯ ಸಾಮಾಜಿಕ ಪರಿಸ್ಥಿತಿಗಳ ಅರಿವನ್ನು ಮತ್ತಷ್ಟು ತೀವ್ರಗೊಳಿಸುವ ಈ ನಾಟಕದ ಬೀಸು ವಿಸ್ತಾರವಾಗಿದೆ" ಬಸವಣ್ಣ ಬಿಜ್ಜಳರನ್ನು ಈ ನಾಟಕದಲ್ಲಿ ತೀರ ಹೊಸ ಬಗೆಯಲ್ಲಿ ಚಿತ್ರಿಸಲಾಗಿದೆ. ಹಾಗೆ ನೋಡಿದರೆ ಬಸವಣ್ಣನಿಗಿಂತ ಬಿಜ್ಜಳನನ ದುರಂತವನ್ನು ಚಿತ್ರಿಸುವಲ್ಲಿಯೇ ಈ ನಾಟಕ ಹೆಚ್ಚು ಕೇಂದ್ರಿತವಾಗಿದೆ. ಬಿಜ್ಜಳನು ಅರಸನಾಗಿದ್ದರೂ ಜನಸಾಮಾನ್ಯನಂತೆ ಆಡು ಮಾತುಗಳನ್ನಾಡುವುದು ಮತ್ತೊಂದು ವೈಶಿಷ್ಟ್ಯ.

ಪ್ರಸಕ್ತ ವರ್ಷದಲ್ಲಿ ಇನ್ನೂ ಕೆಲವು ಹೊಸ ನಾಟಕಗಳು ಪ್ರಯೋಗವಾದವು. ನಟರಂಗ (ಮೂಟೆರಾಮನ ಸತ್ಯಾಗ್ರಹ) ಪ್ರಯೋಗ ರಂಗ (ರಾಜಬೇಟೆ, ಬ್ರಹ್ಮಚಾರಿ ಶರಣಾದ), ಸಂಚಯ (ಹಾವು ಹೊಕ್ಕ ಮನಗಳು), ಚಿತ್ತಾರ (ಗೂಡು, ದೋಣಿ), ಜನಪದ (ಏಕಲವ್ಯ), ರೂಪಾಂತರ (ಕಿರಗೂರಿನ ಗಯ್ಯಾಳಿಗಳು) ಸಂಕೇತ್ (ಹುಲಗೂರು ಹುಲಿಯವ್ವ) ಇತ್ಯಾದಿ. ಇವುಗಳ ಜೊತೆಗೆ ಹಳೆಯ ನಾಟಕಗಳ ಪ್ರಯೋಗಗಳೂ ಹೆಚ್ಚಿನ ಸಂಖ್ಯೆಯಲ್ಲಿ ಆಗಿವೆ.

ಕೆಲವಾದರೂ ತಂಡಗಳು ಉತ್ಸಾಹಗುಂದದೆ ಪ್ರಯೋಗಗಳಲ್ಲಿ ತೊಡಗಿರುವುದನ್ನು ಮೆಚ್ಚಬಹುದಾದರೂ ಈ ಉತ್ಸಾಹ ಎಲ್ಲಿಯವರೆಗೆ ಉಳಿದೀತು ಎಂದು ಹೇಳಲಾಗುವುದಿಲ್ಲ. ಹೊಸ ಪ್ರಯೋಗಗಳು ಒಂದೆರಡು ಪ್ರದರ್ಶನ ಕಾಣುವುದರಲ್ಲೇ ತಣ್ಣಗಾಗಿ ಬಿಡುತ್ತದೆ. ಯುವ ನಟ–ನಟಿಯರು ರಂಗಭೂಮಿಯಿಂದ ದೂರವಾಗುತ್ತಿದ್ದಾರೆ. ಇದನ್ನು ಅರಿತೇ ಪುನಃ ಕಾಲೇಜು ವಿದ್ಯಾರ್ಥಿಗಳನ್ನು ರಂಗಭೂಮಿಗೆ ಪರಿಚಯಿಸುವ ತೀವ್ರ ಪ್ರಯತ್ನ ನಡೆಯುತ್ತಿದೆ. ಇತ್ತೀಚೆಗೆ ಪ್ರತಿವರ್ಷ ವಿಶೇಷವಾಗಿ ಕಾಲೇಜು ವಿದ್ಯಾರ್ಥಿಗಳಿಗಾಗಿಯೇ ರಂಗತರಬೇತಿ ಶಿಬಿರವನ್ನು ಮತ್ತು ಅಂತರಕಾಲೇಜು ನಾಟಕಗಳ ಸ್ಪರ್ಧೆಯನ್ನು ಪ್ರಯೋಗ ರಂಗ ಮತ್ತು ರಂಗಭಾರತಿ ತಂಡಗಳು ನಡೆಸಿಕೊಂಡು ಬರುತ್ತಿವೆ. 'ಅಭಿನಯ ತರಂಗ'ವೂ ಸಹ ಭಾನುವಾರದ ರಂಗಶಾಲೆಯನ್ನು ಮುಂದುವರಿಸಿಕೊಂಡು ಹೋಗುತ್ತಿದೆ. ಇದರಿಂದಾಗಿ ರಂಗಭೂಮಿಗೆ ಒಂದಷ್ಟು ಹೊಸ ನೀರು ಹರಿಯಬಹುದು ಎಂದು ಭಾವಿಸಲು ಅವಕಾಶಗಳಿವೆ.

## ನಾಟಕ ಸ್ಪರ್ಧೆಗಳು

ರಾಜ್ಯಾದ್ಯಂತ ನಡೆಯುತ್ತಿರುವ ಹಲವಾರು ನಾಟಕ ಸ್ಪರ್ಧೆಗಳೂ ಸಹ ರಂಗಭೂಮಿಯ ಬೆಳವಣಿಗೆಗೆ ತಮ್ಮದೇ ಆದ ರೀತಿಯಲ್ಲಿ ಕಾಣಿಕೆ ಸಲ್ಲಿಸುತ್ತಿವೆ. ಅವುಗಳಲ್ಲಿ ಮುಖ್ಯವಾಗಿ ಪ್ರತಿವರ್ಷ ನಡೆಯುವ ಕೈಗಾರಿಕಾ ನಾಟಕ ಸ್ಪರ್ಧೆ, ಅಂತರ ಬ್ಯಾಂಕ್ ನಾಟಕ ಸ್ಪರ್ಧೆ, ಉಡುಪಿಯ ರಂಗಭೂಮಿ ನಾಟಕ ಸ್ಪರ್ಧೆ, ಉಲ್ಲಾಳ್ ಷೀಲ್ಡ್ ಸ್ಪರ್ಧೆ, ಯುವರಂಗ ನಾಟಕ ಸ್ಪರ್ಧೆ, ಜೋಗ್‌ನ ಯುವಕ ಮಂಡಳಿ ನಡೆಸುವ ನಾಟಕ ಸ್ಪರ್ಧೆ, ಮುಂತಾದವುದಗಳನ್ನು ಹೆಸರಿಸಬಹುದು. ಪ್ರಸ್ತುತ ರಂಗಭೂಮಿಯಲ್ಲಿರುವ ಅನೇಕ ನಟ–ನಟಿಯರು ಇಂತಹ ಸ್ಪರ್ಧೆಗಳಿಂದಲೇ ಖ್ಯಾತಿಗೆ ಬಂದವರು. ಅನೇಕ ಹೊಸ ನಾಟಕಗಳೂ ಈ ಸ್ಪರ್ಧೆಗಳ ಮೂಲಕ ಪ್ರಯೋಗವಾಗಿವೆ ಮತ್ತು ಹೊಸ ನಾಟಕಗಳು, ತಮ್ಮ ಸ್ಪರ್ಧೆಗಳ ಮೂಲಕ ಪ್ರಯೋಗವಾಗಲು ಈ ತಂಡಗಳು ವಿಶೇಷವಾಗಿ ಅವಕಾಶ ಮಾಡಿಕೊಡುತ್ತವೆ. ಈ ಸ್ಪರ್ಧೆಗಳು ರಂಗಭೂಮಿಯ ಬೆಳವಣಿಗೆಯಲ್ಲಿ ತಮಗೆ ಅರಿವಿಲ್ಲದೇ ಬಹುಮುಖ್ಯ ಪಾತ್ರ ವಹಿಸುತ್ತಿರುವುದನ್ನು ಕಾಣಬಹುದು. ಜೊತೆಗೆ ಇವು ರಂಗಭೂಮಿಗೆ ಪ್ರೇಕ್ಷಕರನ್ನು ಮರಳಿ ಕರೆತರುವಲ್ಲಿಯೂ ಗಮನಾರ್ಹ ಪಾತ್ರ ವಹಿಸುತ್ತಿವೆ. ವರ್ಷದ ವಿವಿಧ ಅವಧಿಗಳಲ್ಲಿ ನಡೆಯುವ ಈ ಸ್ಪರ್ಧೆಗಳು ರಂಗಭೂಮಿ ಸದಾ ಚಟುವಟಿಕೆಯಿಂದಿರುವಂತೆ ಮಾಡುತ್ತವೆ.

## ಬೀದಿ ನಾಟಕಗಳು

'ಚಿತ್ರಾ' 'ಹೆಜ್ಜೆ–ಗೆಜ್ಜೆ' 'ರಾಗ್ ಕಲಾವಿದರು' 'ಪ್ರಯೋಗ ರಂಗ' ಮೊದಲಾದ ತಂಡಗಳು ಬೀದಿ ನಾಟಕಗಳನ್ನು ಪ್ರದರ್ಶಿಸಿವೆ. ಅದರಲ್ಲೂ ಚಿತ್ರಾ ತಂಡವು 'ದಕ್ಷಿಣ ಮಧ್ಯ ಸಾಂಸ್ಕೃತಿಕ ವಲಯ'ದ ವತಿಯಿಂದ ಬಿಜಾಪುರ ಹಾಗೂ ನಾಗಪುರದಲ್ಲಿ ನಡೆದ ಬೀದಿ ನಾಟಕ ಸ್ಪರ್ಧೆಯಲ್ಲಿ ಭಾಗವಹಿಸಿ ಪ್ರಥಮ ಸ್ಥಾನವನ್ನು ಗಳಿಸಿಕೊಂಡು ಬಂದಿದೆ.

ದಕ್ಷಿಣ ವಲಯ ನಾಟಕೋತ್ಸವ ಈ ಬಾರಿ ಮೈಸೂರಿನಲ್ಲಿ ನಡೆಯಿತು. ಕನ್ನಡದ ಜೈಸಿದ ನಾಯಕ (ರಚನೆ . ಡಾ। ಚಂದ್ರಶೇಖರ್ ಕಂಬಾರ) ನಾಟಕ ಈ ನಾಟಕೋತ್ಸವದಲ್ಲಿ ಗಂಗಾಧರ ಸ್ವಾಮಿ ಅವರ ನಿರ್ದೇಶನದಲ್ಲಿ ಪ್ರದರ್ಶಿತವಾಯಿತು.

ಪ್ರತಿ ವರ್ಷದಂತೆ ಹೆಗ್ಗೋಡಿನ 'ತಿರುಗಾಟ' ತಂಡದ ನಾಟಕಗಳು ಕಳೆದ ಸಾಲಿನ ಕೊನೆಯಲ್ಲಿ ಆರಂಭವಾಗಿ ಈ ವರ್ಷದ ಮಧ್ಯದವರೆಗೆ ರಾಜ್ಯಾದ್ಯಂತ ತಿರುಗಾಡಿ ಪ್ರದರ್ಶನಗಳನ್ನು ನೀಡಿದವು. ಪ್ರಸನ್ನರ 'ಹದ್ದು ಮೀರಿದ ಹಾದಿ' ಮೋಹನ್ ರಾಕೇಶ್‌ರ 'ಆಷಾಢದ ಒಂದು ದಿನ', ಬ್ರೆಕ್ಟ್‌ನ 'ಪುಂಟಿಲಾ' ಮತ್ತು ಬಿ.ವಿ. ಕಾರಂತರ 'ಪಂಜರ ಶಾಲೆ' ನಾಟಕಗಳು ಈ ವರ್ಷ ಪ್ರಯೋಗವಾದವು.

ತಿರುಗಾಟದ ನಾಟಕಗಳಿಗೆ ಈಗ ಮೊದಲಿನ ಜನಾಕರ್ಷಣ ಶಕ್ತಿ ಉಳಿದಿಲ್ಲ. ಹೆಗ್ಗೋಡಿನ ನಾಟಕಗಳು ಎಂಬ ಖ್ಯಾತಿಯನ್ನು ಬಿಟ್ಟರೆ ಉಳಿದಂತೆ ತಿರುಗಾಟದ ಪ್ರಯೋಗಗಳು ಬರಬರುತ್ತಾ ಯಾಂತ್ರಿಕವಾಗುತ್ತಿವೆ.

ಕರ್ನಾಟಕ–ರೆಪರ್ಟರಿ–ನಾಟಕ ಕರ್ನಾಟಕ–ರಂಗಾಯಣದ ಚಟುವಟಿಕೆಗಳು ಮೈಸೂರಿನಿಂದಾಚೆಗೆ ಹರಡುತ್ತಿವೆ. ರಂಗಾಯಣಕ್ಕೆ ಈಗ 2 ವರ್ಷ ತುಂಬಿ 3 ವರ್ಷ ನಡೆಯುತ್ತಿದೆ. ಗೋವಿನಹಾಡು, ಕಿಂದರಿ ಜೋಗಿ, ಬೆಳೆಕಾಳು ಪ್ರಸಂಗ, ಷೇಕ್ಸ್‌ಪಿಯರ್‌ಗೆ ನಮಸ್ಕಾರ ಮೊದಲಾದ ರಂಗಾಯಣದ ಪ್ರಯೋಗಾಭ್ಯಾಸಗಳು ಜನರ ಗಮನ ಸೆಳೆದಿವೆ. ಪೂರ್ಣ ತರಬೇತಿ ಹೊಂದಿ, ಸಂಪೂರ್ಣ ಸಿದ್ಧರಾಗಿ ಹೊರಬಂದು ಪ್ರಯೋಗಗಳಲ್ಲಿ ತೊಡಗುವವರೆಗೆ ರಂಗಾಯಣದ ಬಗ್ಗೆ ಏನನ್ನೂ ಹೇಳಲಾಗುವುದಿಲ್ಲ. ಆದರೂ ಕರ್ನಾಟಕದ ರಂಗಾಸಕ್ತರು ರಂಗಾಯಣದ ಪ್ರಯೋಗಗಳನ್ನು ತೀವ್ರ ಆಸಕ್ತಿಯಿಂದ ಎದುರು ನೋಡುತ್ತಿದ್ದಾರೆ. ಶಾಲಾಕಾಲೇಜು ವಿದ್ಯಾರ್ಥಿಗಳನ್ನು ರಂಗಭೂಮಿಯೆಡೆಗೆ ಆಕರ್ಷಿಸುತ್ತಿದ್ದ 'ಜನಪ್ರಿಯ' ನಾಟಕಗಳು ಈಗ ಇಲ್ಲದಿರುವುದು ಒಂದು ಕೊರತೆ. ಇದರ ಬದಲಿಗೆ 'ಸಂಸಾರದಲ್ಲಿ ಸರಿಗಮ' 'ನರ್ಸ್ ಡಾಕ್ಟರ್ ಪರ್ಸು' 'ಇಂತದ್ದೆಲ್ಲ ಇದ್ದದ್ದೆ ಬಿಡಿ' ಮೊದಲಾದವು ಈ ವರ್ಷ ಪ್ರಯೋಗವಾಗಿರುವ ಜನಪ್ರಿಯ ನಾಟಕಗಳು. ಈ ನಾಟಕಗಳು ಹೆಚ್ಚಿನ ಸಂಖ್ಯೆಯ ಪ್ರೇಕ್ಷಕರನ್ನು ಆಕರ್ಷಿಸುತ್ತಿವೆ.

–3–

ಮೇಲಿನ ಮಾತುಗಳು ರಂಗಭೂಮಿ ಚಟುವಟಿಕೆಗಳನ್ನು ಕುರಿತಂತೆ ಆಯಿತು. ಇನ್ನು ಪ್ರಕಟಿತ ನಾಟಕಗಳನ್ನು ಕುರಿತು ಒಂದಿಷ್ಟು ಗಮನಿಸಬಹುದು. ಈ ವರ್ಷದಲ್ಲಿ ಸುಮಾರು 30ಕ್ಕೂ ಹೆಚ್ಚು ನಾಟಕಗಳು ಪ್ರಕಟವಾಗಿವೆ. ಸರಿ ಸುಮಾರು ತಿಂಗಳಿಗೆ ಎರಡಕ್ಕೂ ಹೆಚ್ಚು ನಾಟಕಗಳು ಪ್ರಕಟವಾಗಿದ್ದರೂ ಗಮನಿಸಬಹುದಾದ ನಾಟಕಗಳ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರವೇ. ಸಂಖ್ಯೆಯ ದೃಷ್ಟಿಯಿಂದ ಮಾತ್ರ ನಾಟಕಗಳ ಪ್ರಕಟಣೆ ವೃದ್ಧಿಸಿದೆ. ಇದ್ದವುಗಳಲ್ಲಿ ಎಚ್. ಎಸ್. ಶಿವಪ್ರಕಾಶ್ ಅವರ ಮಾರನಾಯಕನ ದೃಷ್ಟಾಂತ, ಮಂಟೇಸ್ವಾಮಿ ಕಥಾ ಪ್ರಸಂಗ, ಷೇಕ್ಸ್‌ಪಿಯರ್‌ನ ಸ್ವಪ್ನನೌಕೆ, ಟಿ.ಎನ್. ಸೀತಾರಾಂ ಅವರು 'ನಮ್ಮೊಳಗೊಬ್ಬ ನಾಜೂಕಯ್ಯ', ಜಯಪ್ರಕಾಶ್ ಮಾವಿನ ಕುಳಿ ಅವರ 'ಮಹಾಯಾತ್ರೆ' ಜಿ. ಬಾಲಕೃಷ್ಣಯ್ಯನವರ 'ಕಾಡಟ್ಟಿ', ಎಚ್.ಎಸ್. ಹಿರೇಮಠರ 'ಹಕ್ಕಿ ಅಮರ', ಚೆನ್ನಣ್ಣ ವಾಲೀಕಾರರ 'ಸೂರ್ಯ ಪತ್ರಿಕೆ', ಜೋಗತಿ ಮತ್ತು 5 ಸಮಾಜವಾದಿ ನಾಟಕಗಳು ಮೊದಲಾದವುಗಳನ್ನು ಹೆಸರಿಸಬಹುದು.

ಎಚ್. ಎಸ್. ಶಿವಪ್ರಕಾಶ್ ಅವರ ಮಂಟೇಸ್ವಾಮಿ ಈಗಾಗಲೇ ಪ್ರಯೋಗವಾಗಿ ಯಶಸ್ಸನ್ನು ಪಡೆದುಕೊಂಡಿರುವ ನಾಟಕ. ಜಾನಪದ ಶೈಲಿಯ ಈ ನಾಟಕದ

ಬಗ್ಗೆ ರಂಗವಲಯದಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಪೌರಾಣಿಕ–ಐತಿಹಾಸಿಕ ಜಾನಪದ ವಸ್ತುಗಳನ್ನು ಆಯ್ದುಕೊಂಡು ಅದಕ್ಕೆ ಹೊಸ ಅರ್ಥ ನೀಡಿ ನಾಟಕ ರಚಿಸುವಲ್ಲಿ ಶಿವಪ್ರಕಾಶರು ಈಗಾಗಲೇ ಹೆಸರುಗಳಿಸಿದ್ದಾರೆ. ಮಂಟೇಸ್ವಾಮಿಯೂ ಇದಕ್ಕೆ ಹೊರತಲ್ಲ. ನಾಟಕದ ನಡೆ ನಿಧಾನವೆನ್ನಿಸಿದರೂ ಪ್ರಯೋಗದಲ್ಲಿ ಉತ್ತಮ ನಿರ್ದೇಶಕ ಕೈಗೆ ಸಿಕ್ಕಲ್ಲಿ–ಇದನ್ನು ಸರಿಪಡಿಸಬಹುದು.

ಮ್ಯಾಕ್‌ಬೆತ್ ನಾಟಕವನ್ನು ಜನಪದ ಶೈಲಿಗೆ ರೂಪಾಂತರಿಸಿದ ನಾಟಕ 'ಮಾರನಾಯಕನ ದೃಷ್ಟಾಂತ'. ಓದಿನಲ್ಲಿ ಉತ್ತಮ ರೂಪಾಂತರದಂತೆ ಕಾಣುವುದಾದರೂ ಈ ನಾಟಕದ ಯಶಸ್ಸು ರಂಗದ ಮೇಲೆ ಸಾಬೀತಾಗಬೇಕು. ಷೇಕ್ಸ್‌ಪಿಯರ್‌ನ ನಾಟಕವೊಂದು ಕನ್ನಡದಲ್ಲಿ ಜಾನಪದ ಶೈಲಿ ಪಡೆದಿರುವುದೂ ಇದೇ ಪ್ರಥಮ.

'ಷೇಕ್ಸ್‌ಪಿಯರ್‌ನ ಸ್ವಪ್ನ ನೌಕೆ' ಒಂದು ವಿಶಿಷ್ಟವಾದ ನಾಟಕ. ಷೇಕ್ಸ್‌ಪಿಯರ್‌ನ ಬದುಕನ್ನೂ ಮತ್ತು ಜೊತೆಗೇ ಅವನ ಕಾಲದ ಷೇಕ್ಸ್‌ಪಿಯರ್‌ನ ಜೀವನವನ್ನೂ ಹಿಡಿದಿರುವ ಪ್ರಯತ್ನ ಇಲ್ಲಿದೆ. ಇಲ್ಲಿನ ಬಹಳಷ್ಟು ಮಾತುಗಳು ಷೇಕ್ಸ್‌ಪಿಯರ್‌ನ ನಾಟಕಗಳಿಂದಲೇ ಬಂದಿವೆ. ಆದರೆ ರಂಗದ ಮೇಲೆ ಈ ನಾಟಕದ ಯಶಸ್ಸಿನ ಸಾಧ್ಯತೆಗಳು ಕಡಿಮೆ ಎಂದೇ ಹೇಳಬೇಕು.

ವರ್ಷದ ಮತ್ತೊಂದು ಮುಖ್ಯವಾದ ನಾಟಕ ಟಿ.ಎನ್ ಸೀತಾರಾಂ ಅವರ 'ನಮ್ಮೊಳಗೊಬ್ಬ ನಾಜೂಕಯ್ಯ'. ಅವರ ಹಿಂದಿನ 'ಆಸ್ಫೋಟ' ನಾಟಕದಿಂದ ಈಗಾಗಲೇ ಸಾಕಷ್ಟು ಗಮನ ಸೆಳೆದಿರುವ ಸೀತಾರಾಂ ಕನ್ನಡದಲ್ಲಿ ಭಿನ್ನ ಕೃತಿಯೊಂದನ್ನು ರಚಿಸಿದ್ದಾರೆ. ವಸ್ತು ವೈವಿಧ್ಯತೆಯೊಂದಿಗೇ ಅವರು ಸಂಭಾಷಣಾ ಶೈಲಿಯೂ ಗಮನ ಸೆಳೆಯುವಂತಾದ್ದು. ಆದರಿಂದಾಗಿಯೇ ಅವರ ನಾಟಕಗಳು ಪ್ರಯೋಗದಲ್ಲಿ ಯಶಸ್ವಿಯಾಗುತ್ತವೆ. ಕೆಲವೊಮ್ಮೆ ಶ್ರೀರಂಗರ ವ್ಯಂಗ್ಯ ಇವರ ನಾಟಕದಲ್ಲಿ ಕಂಡಂತೆ ಭಾಸವಾಗುತ್ತದೆ. ಶ್ರೀರಂಗರು ಬಳಸುವ ಕಟು ವ್ಯಂಗ್ಯದ ತೀವ್ರತೆಗಿಂತಲೂ, ಸೀತಾರಾಂ ಅವರು ಬಳಸುವ ವ್ಯಂಗ್ಯದ ತೀವ್ರತೆ ಹೆಚ್ಚು ಪರಿಣಾಮಕಾರಿಯಾದುದು. ಬದುಕಿನ ಎಲ್ಲ ಹಂತಗಳಲ್ಲೂ ವ್ಯಾಪಿಸಿರುವ ರಾಜಕೀಯ, ಭ್ರಷ್ಟ ವ್ಯವಸ್ಥೆಯ ಹಿಡಿತದಲ್ಲಿ ಮುದುಡಿ ಹೋಗುವ ಯುವಕ–ಹೀಗೆ ವಿಷಾದ ಛಾಯೆ ನಾಟಕದುದ್ದಕ್ಕೂ ಮೂಡಿಬಂದಿದೆ. ಈ ನಾಟಕ ಈಗ ಮುದ್ರಣ ಕಂಡಿದ್ದರೂ, ಈಗಾಗಲೇ ರಂಗಭೂಮಿಯಲ್ಲಿ ಪ್ರಯೋಗವಾಗಿ ಯಶಸ್ಸನ್ನು ಗಳಿಸಿಕೊಂಡಿದೆ. 'ಆಸ್ಫೋಟ' 'ನಮ್ಮೊಳಗೊಬ್ಬ ನಾಜೂಕಯ್ಯ ನಾಟಕಗಳಿಂದ ತಾವೂ ಒಬ್ಬ ಮುಖ್ಯ ನಾಟಕಕಾರರೆಂದು ಸೀತಾರಾಂ ಸಾಬೀತುಪಡಿಸಿದ್ದಾರೆ.

ಪ್ರಕಟವಾದ ಇತರ ನಾಟಕಗಳಲ್ಲಿ 3 ನಾಟಕಗಳು 'ಜೋಗತಿ' ಪದ್ಧತಿಯನ್ನು ಕುರಿತಂತೆಯೇ ಇವೆ. (ಹಿರೇಮಠರ 'ಜೋಗತಿ ಕಲ್ಲು' ಚೆನ್ನಣ್ಣ ವಾಲಿಕಾರರ

'ಜೋಗುತಿ' ಇತ್ಯಾದಿ) ಆದರೆ ಇವು ಸಮಸ್ಯೆಯನ್ನು ವಿವರಿಸುತ್ತವೆಯೇ ಹೊರತು ನಾಟಕವಾಗಿ ಯಶಸ್ವಿಯಾಗುವುದಿಲ್ಲ. ಎಪ್ಪತ್ತರ ದಶಕದಲ್ಲಿ ಜನಪ್ರಿಯತೆ ಗಳಿಸಿದ ಜಾನಪದ ಶೈಲಿ ಇಂದಿಗೂ ನಾಟಕಕಾರರನ್ನು ಆಕರ್ಷಿಸುತ್ತಿದೆ. ದುಂಡಿರಾಜರ 'ಕೊರಿಯಪ್ಪನ ಕೊರಿಯಾಗ್ರಫಿ', ಪುಲಿಕೇಶಿ ಅವರ 'ರಮ್ಯ-ವಸಂತ' ಮುಂತಾದ ಹಾಸ್ಯ ನಾಟಕಗಳೂ ಈ ಸಾಲಿನಲ್ಲಿ ಪ್ರಕಟವಾಗಿವೆ.

ಎಷ್ಟೋ ಉತ್ತಮ ನಾಟಕಗಳಿಗೆ ಪ್ರಕಟಣೆಯ ಭಾಗ್ಯ ದೊರೆಯುವುದಿಲ್ಲ. ಪ್ರಕಟವಾದರೂ ರಂಗದ ಮೇಲೆ ಎಷ್ಟೋ ನಾಟಕಗಳು ಪ್ರಯೋಗವಾಗುವುದಿಲ್ಲ. ಈ ವರ್ಷ ಪ್ರಕಟವಾದ ಅನೇಕ ನಾಟಕಗಳು ಎರಡನೆಯ ಗುಂಪಿಗೆ ಸೇರುತ್ತವೆ.

**–4–**

1991 ನೇ ಸಾಲಿನ ನಾಟಕ–ರಂಗ ಚಟುವಟಿಕೆಗಳನ್ನು ಗಮನಿಸಿದಾಗ, ಚಟುವಟಿಕೆಗಳಿಗೆ ಕೊರತೆಯೇನಿಲ್ಲದಿದ್ದರೂ ಗಮನಾರ್ಹವಾದವುಗಳು ಕಡಿಮೆಯೇ. ಪ್ರಕಟವಾದ ಅನೇಕ ನಾಟಕಗಳು ಹೆಸರಿಗೆ ಮಾತ್ರ ನಾಟಕವಾಗಿವೆ. ಆದ್ದರಿಂದ ಪ್ರಕಟಿತ ನಾಟಕಗಳಿಂತಲೂ, ರಂಗಭೂಮಿ ಚಟುವಟಿಕೆಗಳೇ ಈ ವರ್ಷ ಎದ್ದುಕಾಣುತ್ತವೆ. ಅನುವಾದ ನಾಟಕಗಳ ಸಂಖ್ಯೆ ಕಡಿಮೆಯಾಗಿದೆ. ರೂಪಾಂತರ ಮತ್ತು ಸ್ವತಂತ್ರ ನಾಟಕಗಳ ರಚನೆ–ಪ್ರಯೋಗ ಈ ಸಾಲಿನ ಮತ್ತೊಂದು ವೈಶಿಷ್ಟ್ಯ. ರಂಗ ಕರ್ಮಿಗಳಿಗೆ ಲಭಿಸಿದ ಪ್ರಶಸ್ತಿ–ಪುರಸ್ಕಾರಗಳು, ರಂಗ ಚಟುವಟಿಕೆಗಳ ವ್ಯಾಪ್ತಿಯನ್ನು ಹಿಗ್ಗಿಸಿವೆ. ರಂಗಭೂಮಿ ಚಟುವಟಿಕೆಗಳು ಕೇವಲ ನಗರಗಳಿಗೆ ಸೀಮಿತವಾಗಿರದೆ ಹಳ್ಳಿಗಳಿಗೂ ಹರಡುತ್ತಿರುವುದು ಆರೋಗ್ಯಕರ ಬೆಳವಣಿಗೆ. ಈ ನಿಟ್ಟಿನಲ್ಲಿ ಈ ವರ್ಷ, ಸಿರಿಗೆರೆಯ 'ತರಳಬಾಳು ಸಂಘ', ಗದುಗಿನ 'ಅಭಿನಯ ರಂಗ' ತಂಡಗಳು 'ತಲೆದಂಡ' ದಂತಹ ದೊಡ್ಡ ನಾಟಕವನ್ನು ಪ್ರಯೋಗಿಸಿವೆ. ದೂರದ ಹೆಗ್ಗೋಡು ಮಂಗಳೂರು, ಉಡುಪಿ, ಸಿರಸಿ, ಬಿಜಾಪುರಗಳಲ್ಲೂ ರಂಗ ಚಟುವಟಿಕೆಗಳು ಸಾಗುತ್ತಿವೆ. ಕೊಡಗಿನ 'ಸೃಷ್ಟಿ–ಕೊಡವರಂಗ' ರೆಪರ್ಟರಿಯ ಮಾದರಿಯಲ್ಲಿ ವರ್ಷಕ್ಕೆ ಒಂದೆರಡು ನಾಟಕಗಳನ್ನು ಸಿದ್ಧಪಡಿಸಿಕೊಂಡು ನಾಲ್ಕೈದು ಜಿಲ್ಲೆಗಳಲ್ಲಿ ಪ್ರದರ್ಶಿಸುತ್ತಿದೆ. 'ಧ್ರುವರಂಗ' ತಂಡ ಅಲ್ಲಲ್ಲಿ ರಂಗ ಶಿಬಿರಗಳನ್ನು ಏರ್ಪಡಿಸಿ ಕಲಾವಿದರಿಗೆ ತರಬೇತಿ ನೀಡುತ್ತಿದೆ.

ದೂರದರ್ಶನ ಪ್ರಭಾವದಿಂದಾಗಿ ನಾಟಕ ಚಟುವಟಿಕೆಗಳು ಕುಗ್ಗುತ್ತಿವೆ ಎನ್ನುವುದೇನೋ ನಿಜ. ಆದರೆ ನಾಟಕ–ದೂರದರ್ಶನ ಮಾಧ್ಯಮಗಳೇ ಬೇರೆ ಬೇರೆಯಾದ್ದರಿಂದ ರಂಗಭೂಮಿ ಮತ್ತೆ ಚೇತರಿಸಿಕೊಳ್ಳುವ ಸಾಧ್ಯತೆಗಳಿವೆ.

ಇಡೀ ವರ್ಷದ ರಂಗ ಚಟುವಟಿಕೆಗಳು–ನಾಟಕಗಳು ಇವಿಷ್ಟೇ ಎಂದು

ಸಾರಾಸಗಟಾಗಿ ಹೇಳಲಾಗುವುದಿಲ್ಲ. ಪ್ರಮುಖ ಚಟುವಟಿಕೆಗಳನ್ನು ಮಾತ್ರ ಇಲ್ಲಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ಒಟ್ಟಿನಲ್ಲಿ, ಒಂದು ರೀತಿ ಕಲಸು ಮೇಲೋಗರದಂತಿರುವ ಪ್ರಸಕ್ತ ರಂಗಭೂಮಿಯ ದಿಕ್ಕನ್ನು ಖಚಿತವಾಗಿ ಹೀಗೇ ಎಂದು ಗುರುತಿಸಲಾಗುವುದಿಲ್ಲ. ಕಳೆದ ಕೆಲವು ವರ್ಷಗಳಿಂದ ರಂಗಭೂಮಿಯನ್ನು ಕುರಿತು ಬರೆಯುವ ಲೇಖಕರು ಸಾಮಾನ್ಯವಾಗಿ ತಮ್ಮ ಲೇಖನದಲ್ಲಿ "ರಂಗಭೂಮಿ ಈಗ ಸಂಕ್ರಮಣ ಸ್ಥಿತಿಯಲ್ಲಿದೆ" ಎಂಬ ಮಾತನ್ನು ಸೇರಿಸಿರುತ್ತಾರೆ. ಬಹುಶಃ ಈ ವರ್ಷದ ರಂಗ ಚಟುವಟಿಕೆಗಳಿಗೂ ಇದೇ ಮಾತನ್ನು ಅನ್ವಯಿಸಬಹುದು.

* * *

## 1991ರ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ ವಿಜೇತರು

ಪ್ರೊ. ಕು.ಶಿ. ಹರಿದಾಸಭಟ್ಟ
ಶ್ರೀ ಕೆ. ಆರ್. ಲಿಂಗಪ್ಪ
ಶ್ರೀ ಅಬ್ರಾಹಂ ಇಸ್ಮಾಯಿಲ್ ಮೇತ್ರೆ
ಶ್ರೀಮತಿ ಅಂಬವ್ವ ಭೀಮಣ್ಣಾ ಪಟ್ಟಣ
ಶ್ರೀ ಕೃಷ್ಣಮೂರ್ತಿ ಆರ್. ಆದೋನಿ
ಶ್ರೀ ಕಿಳ್ಳೇಕ್ಯಾತರ ಸಣ್ಣರಾಮಪ್ಪ
ಶ್ರೀಮತಿ ಗಂಗವ್ವ
ಶ್ರೀ ವಿಷ್ಣು ಪರಸಪ್ಪ ಕಂಚಗಾರ
ಶ್ರೀ ಹನುಮತಗೌಡ ವೀರನಗೌಡ ಮೇಲಿನಮನಿ
ಶ್ರೀ ಈರು ಜಟ್ಟುಗೌಡ
ಶ್ರೀ ಪೆರ್ಡೂರು ರಾಮಸೇರೆಗಾರ
ಶ್ರೀ ಎ.ಡಿ. ಕುಂಯ್ಲಿ
ಶ್ರೀ ಅಲಗಾಚಾರ್
ಶ್ರೀಮತಿ ಸೋಬಾನೆ ಕಾಟಮ್ಮ
ಶ್ರೀಮತಿ ಹನುಮಕ್ಕ
ಶ್ರೀಮತಿ ಓಳ್ಳಮ್ಮ
ಶ್ರೀ ರುದ್ರನ ಬೆಕ್ಕನ ದ್ಯಾವಯ್ಯ
ಶ್ರೀ ಆರ್. ಪುಟ್ಟಸ್ವಾಮಿ
ಶ್ರೀಮತಿ ಜಯಮ್ಮ
ಶ್ರೀ ಸಿ.ಬಿ. ಪುಟ್ಟಶ್ಯಾಮಾಚಾರ್
ಶ್ರೀಮತಿ ಸಾವಿತ್ರಮ್ಮ

# 1991ನೇ ಸಾಲಿನ ಕರ್ನಾಟಕ ನಾಟಕ ಅಕಾಡೆಮಿಯ ಫೆಲೋಷಿಪ್, ಪ್ರಶಸ್ತಿ ಮತ್ತು ಪುರಸ್ಕಾರ ವಿಜೇತರು

ಫೆಲೋಷಿಪ್ : ಶ್ರೀಮತಿ ಚಿ.ನ. ಮಂಗಳ

## ಪ್ರಶಸ್ತಿ

ಶ್ರೀಮತಿ ಜಿ.ವಿ. ಮಾಲತಮ್ಮ
ಶ್ರೀ ಕಲ್ಯಾಣ ಕುಮಾರ್
ಶ್ರೀ ಚಿದಂಬರ ಜೋಷಿ
ಶ್ರೀ ಕೀರ್ತಪ್ಪ ಇಳಕಲ್
ಶ್ರೀ ಆರ್ ಪರಮಶಿವನ್
ಶ್ರೀ ಶ್ರೀಕೃಷ್ಣ ದೇಶಪಾಂಡೆ
ಶ್ರೀ ಚಂದ್ರಕಾಂತ ಕುಸನೂರು
ಶ್ರೀ ಸಿ.ಜಿ. ಕೃಷ್ಣಸ್ವಾಮಿ
ಶ್ರೀ ತಿರುಕಪ್ಪ ಕಾಗಿನಲ್ಲಿ

## ಪುರಸ್ಕಾರ

ಶ್ರೀ ಹೆಚ್.ಟಿ. ಅರಸ್
ಶ್ರೀಮತಿ ಬಿ.ಎಸ್. ರಾಧಮ್ಮ
ಶ್ರೀ ಬೆಳಗಲ್ ವೀರಣ್ಣ
ಶ್ರೀಮತಿ ಖಣಿಗಿ ಲಕ್ಷ್ಮಿಬಾಯಿ
ಶ್ರೀ ಸುಧೀರ್
ಶ್ರೀ ವಿಶ್ವನಾಥ ಮಿರ್ಲೆ

# ಹೊರನಾಡುಗಳ ಕನ್ನಡದ ಚಟುವಟಿಕೆಗಳು
## (ಒಂದು ಪಕ್ಷಿನೋಟ)

ಬಿ. ಎ. ಸನದಿ

'ಎಲ್ಲಾದರು ಇರು, ಎಂತಾದರು ಇರು
ಎಂದೆಂದಿಗು ನೀ ಕನ್ನಡವಾಗಿರು.
ಕನ್ನಡ ಗೋವಿನ ಓ ಮುದ್ದಿನ ಕರು
ಕನ್ನಡತನವೊಂದಿದ್ದರೆ ನೀನಮ್ಮಗೆ ಕಲ್ಪತರು!'

ಎಂದು ನಮ್ಮ ರಾಷ್ಟ್ರಕವಿ ಕುವೆಂಪು ಹಾಡಿಕೊಂಡದ್ದು ಸಾರ್ಥಕಗೊಳ್ಳುವಂತೆ ಕರ್ನಾಟಕದ ಸೀಮೆಯಾಚೆಗಿನ ಸೀಮೆಗಳಿಗೆ ವಲಸೆ ಹೋಗಿ ನೆಲಸಿರುವ ಕನ್ನಡಿಗರು ಮೂಲತಃ ಕನ್ನಡಿಗರಾಗಿ ಉಳಿಯಲು–ಬೆಳೆಯಲು ಹಲವೊಂದು ಸಂಘ–ಸಂಸ್ಥೆಗಳನ್ನು ಕಟ್ಟಿಕೊಂಡಿದ್ದಾರೆ. ಆಯಾ ಪ್ರದೇಶಗಳಲ್ಲಿ ವಾಸವಾಗಿರುವ ಕನ್ನಡಿಗರನ್ನು ಒಂದುಗೂಡಿಸಿ ಕನ್ನಡಿಗರ ಅಸ್ಮಿತೆಯನ್ನು ಕಾಪಾಡಿಕೊಳ್ಳಲೆತ್ನಿಸುವುದರ ಜತೆಗೆ ಕನ್ನಡೇತರರಿಗೆ ಕನ್ನಡತ್ವದ ಪರಿಚಯ ಮಾಡಿಕೊಟ್ಟು ಅವರೊಡನೆ ಸುಗಮ ಸಹಬಾಳ್ವೆ ನಡೆಸಲು ಅನುಕೂಲಕರ ವಾತಾವರಣ ನಿರ್ಮಿಸುವುದೂ ಹೊರನಾಡ ಕನ್ನಡ ಸಂಘ–ಸಂಸ್ಥೆಗಳ ಸರ್ವಸಾಧಾರಣ ಉದ್ದೇಶವಾಗಿರುತ್ತದೆ. ಹಾಗೆ ನೋಡಿದರೆ, 'ಪರಭಾಷೆ ನಮಗೆ ಏಕೆ ಅಯ್ಯಾ, ನಮ್ಮ ಭಾಷೆ ನಮಗೆ ಸಾಲದೇ?' ಎಂದು ಹೊರನಾಡ ಕನ್ನಡಿಗರು ಕನ್ನಡವನ್ನೇ ಹಾಸಿ–ಹೊದ್ದು ನಿದ್ದೆ ಮಾಡುವ ಸ್ಥಿತಿಯಲ್ಲಿರಲಾರರು. ಹಾಗೆಂದು ಪರಭಾಷೆಯನ್ನೇ ತಲೆದಿಂಬಾಗಿಸಿಕೊಂಡು ಕನ್ನಡವನ್ನು ಕಾಲ್ದೆಸೆಗೆ ತಳ್ಳಿ ಬದುಕಲೂ ಆಗದು. ಕನ್ನಾಡಿನಿಂದ ಹಲವೊಂದು ಕಾರಣಗಳಿಂದಾಗಿ ಹೊರದೇಶ–ಪ್ರದೇಶಗಳಿಗೆ ವಲಸೆ ಹೋದ ಕನ್ನಡಿಗರು ಕನ್ನಡಿಗರಾಗಿ ಉಳಿಯಲು ಕನ್ನಡ ಭಾಷೆಯೇ ಒಂದು ಪ್ರಮುಖ ಸಾಧನವೆನಿಸುವುದಾದರೂ, ಆಯಾ ಪ್ರದೇಶ–ಪಟ್ಟಣಗಳ ಸ್ಥಾನಿಕ ಜನ–ಜೀವನದೊಡನೆ ಸಾಮರಸ್ಯ ಸಾಧಿಸುವ ದೃಷ್ಟಿಯಿಂದ ವೈಯುಕ್ತಿಕ ನೆಲೆಯಲ್ಲೂ ಸಾಂಘಿಕ ಸ್ತರದಲ್ಲೂ ಕನ್ನಡದ ಜತೆಗೆ, ಆಯಾ ಪ್ರದೇಶಗಳಲ್ಲಿ ಪ್ರಚಲಿತವಿರುವ ಕನ್ನಡೇತರ ಭಾಷೆಗಳನ್ನೂ ಮಾಧ್ಯಮವಾಗಿ ಬಳಸುವುದು ಅನಿವಾರ್ಯವಾಗುತ್ತದೆ. ಹೊರನಾಡುಗಳಲ್ಲಿ ಕನ್ನಡದ ಬಳಕೆಯ ಮೂಲಕ ಕನ್ನಡತ್ವವನ್ನು ಉಳಿಸಿ

ಬೆಳೆಸಿಕೊಳ್ಳಲು ಕನ್ನಡ ಕುಟುಂಬಗಳ ಮಕ್ಕಳಿಗೆ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆಯುವ ಸೌಕರ್ಯವೂ ಇರಬೇಕು. ಯಾವುದೇ ಪ್ರದೇಶದಲ್ಲಿ ಈ ಸೌಕರ್ಯವಿಲ್ಲದಿದ್ದರೆ ಅದನ್ನು ಸಂವಿಧಾನದ ನಿಯಮಾನುಸಾರವಾಗಿ ಸಂಪಾದಿಸಿಕೊಳ್ಳಲು, ಇದ್ದ ಸೌಕರ್ಯಗಳನ್ನು ಸೂಕ್ತವಾಗಿ ಬಳಸಿಕೊಳ್ಳಲು ಹೊರನಾಡ ಕನ್ನಡ-ಸಂಸ್ಥೆಗಳು ಸಾಂಘಿಕವಾಗಿ ಹೆಣಗಾಡಬೇಕಾಗುತ್ತದೆ. ಹೀಗೆ, ಒಳನಾಡ ಸಂಘ-ಸಂಸ್ಥೆಗಳ ಉದ್ದೇಶ, ಧ್ಯೇಯ -ಧೋರಣೆ ಹಾಗು ಕಾರ್ಯ-ಕಲಾಪಗಳಿಗೆ ಕೊಂಚ ಭಿನ್ನವಾದ ರೀತಿಯಲ್ಲಿ ಹೊರನಾಡಿನ ಕನ್ನಡಿಗರ ಕಾರ್ಯ-ಚಟುವಟಿಕೆಗಳು ನಡೆದಿರುತ್ತವೆ. 'ಕನ್ನಡವೆಸೆ ಕುಣಿದಾಡುವುದೆನ್ನದೆ' ಎನ್ನುವುದು ಕನ್ನಡಿಗರಿಗೆ ಸಹಜವಾದರೂ ಕನ್ನಡೇತರ ಭಾಷೆಗಳ ಬಗ್ಗೆ ಮೂಗು ಮುರಿದರೆ ಹೊರನಾಡ ಕನ್ನಡಿಗರ ಮೂಗೇ ಉಳಿಯಲಿಕ್ಕಿಲ್ಲ! ಅಂತೆಯೇ ಅವರಿಗೆ ನಿತ್ಯಜೀವನದ ನೆಮ್ಮದಿ ಮುಖ್ಯವೆನಿಸುತ್ತದೆ; ಸಾಮಾಜಿಕ ಸಾಮರಸ್ಯ ಮುಖ್ಯವೆನಿಸುತ್ತದೆ. ಈ ವ್ಯಾವಹಾರಿಕ ದೃಷ್ಟಿಕೋನದಿಂದಾಗಿ ಕನ್ನಡಿಗರ ಅನನ್ಯತೆಯೇ ನಶಿಸಿ ಹೋಗದಂತ ತೋಡಿಕೊಳ್ಳುವ ಸಾಂಘಿಕ ಜವಾಬ್ದಾರಿಯೂ ಅಷ್ಟೇ ಮುಖ್ಯವೆನಿಸುತ್ತದೆ.

ಕರ್ನಾಟಕದಲ್ಲೇ ಕನ್ನಡ ಭಾಷೆಗೆ ದೊರೆಯಬೇಕಾದಷ್ಟು ಸ್ಥಾನ-ಮಾನಗಳು ದೊರೆಯುತ್ತಿಲ್ಲವೆಂಬ ಕೊರಗು ಅನೇಕರಲ್ಲಿರುವಾಗ, ಕರ್ನಾಟಕದ ಹೊರಗೆ-ಅಂದರೆ ಭಾರತದ ಇತರ ಪ್ರದೇಶಗಳಲ್ಲೂ, ಭಾರತದ ಸೀಮೆಯಾಚೆಗಿನ ಪರದೇಶಗಳಲ್ಲೂ 'ಎಲ್ಲೆಲ್ಲಿ ಕನ್ನಡದ ಕಂಪು ಸೂಸಲಲ್ಲಲ್ಲಿ ಕರಣ ಚಾಚೇವು' ಎಂದು ಹೊರನಾಡ ಕನ್ನಡಿಗರು ವಿವಿಧಕಾರ್ಯ-ಚಟುವಟಿಕೆಗಳಲ್ಲಿ ತೊಡಗಿರುವುದು ಅಭಿಮಾನದ ಸಂಗತಿಯೇ ಎನ್ನಬೇಕು-ಮನುಷ್ಯ-ಮನುಷ್ಯನ ನಡುವೆ ವಿವಿಧ ಬಗೆಯ ಸಂಬಂಧಗಳನ್ನು ಜೋಡಿಸುವ ಹಾಗೂ ಅವುಗಳ ಜೋಪಾಸನೆ ಮಾಡುವ ಮಾಧ್ಯಮವಾದ ಯಾವುದೇ ಭಾಷೆಯ ಬಳಕೆಗೆ ಭೌಗೋಳಿಕ ಗಡಿಯೆಂಬುದೇ ಇರುವುದಿಲ್ಲವೆಂಬ ಸಂಗತಿಯನ್ನೇ ಈ ಚಟುವಟಿಕೆಗಳು ಸಾಬೀತುಗೊಳಿಸುತ್ತವೆ. ಅಂತೆಯೇ ಹಲವೊಂದು ಕಾರಣಗಳಿಂದಾಗಿ ಹೊರನಾಡುಗಳಿಗೂ ಹೊರದೇಶಗಳಿಗೂ ವಲಸೆ ಹೋದ ಕನ್ನಡಿಗರು ಆಯಾ ಪ್ರದೇಶಗಳ ಜನಜೀವನದಲ್ಲಿ ಸಮರಸ ಹೊಂದಿಯೂ ತಮ್ಮ ನಾಡು-ನುಡಿಗಳ ನೆನಹಿನ ತೇವು ಉಳಿಸಿಕೊಂಡಿದ್ದಾರಲ್ಲದೇ, ತಮ್ಮ ಸಂಘಟಿತ ಪ್ರಯತ್ನಗಳಿಂದ ಕನ್ನಡ ಸಂಸ್ಕೃತಿಯ ತಾಯಿಬೇರಿಗೆ ಆಗಾಗ ನೀರೆರೆಯುತ್ತಲೂ ಇರುತ್ತಾರೆ. ಮುಂಬಯಿಯ Gateway of Indiaದ ಬಳಿ ನಿಂತು ಕನ್ನಡ ದುರ್ಬೀನಿನ ಮೂಲಕ ವಿಶ್ವದುದ್ದಗಲಕ್ಕೂ ದೃಷ್ಟಿ ತೂರಿದಾಗ ಎಷ್ಟೆಲ್ಲ ಸಣ್ಣ ಪುಟ್ಟ ನಕ್ಷತ್ರಗಳು ಗೋಚರಿಸುತ್ತವೆ! ಕಾಶಿ, ದೆಹಲಿ, ಚಂಡೀಗಡ, ಲಕನೌ, ಆಗ್ರಾ, ಅಲಹಾಬಾದ್, ಹರಿದ್ವಾರ, ಜಮಶೆಡ್‌ಪುರ, ವಿಶಾಖ ಪಟ್ಟಣ, ಮದ್ರಾಸ್, ಸೇಲಂ, ಮಧುರೈ, ತಿರುಚ್ಚಿರಪಲ್ಲಿ, ನೈವೇಲಿ, ಪಾಂಡಿಚೆರಿ, ಧನಬಾದ್, ರಾಂಚಿ, ಭೋಪಾಲ್, ಇಂದೂರ್, ಜಬಲಪುರ, ಭಿಲಾಯಿ, ರೂರ್ಕಿ, ಕಾಲಿಕತ್, ತ್ರಿವೇಂದ್ರಮ್, ಹೈದ್ರಾಬಾದ್, ಸಿಂಕದ್ರಾಬಾದ್, ಗುಂತಕಲ್, ಆದೋನಿ, ಕರ್ನೂಲ್,

ದುರ್ಗಾಪುರ, ಕಲ್ಕತ್ತಾ; ಪಣಜಿ, ಮಾರ್ಗೋವಾ, ವಾಸ್ಕೋ, ಅಹಮ್ಮದಾಬಾದ್, ಬರೋಚ್, ಬರೋದಾ, ವಾಡಿ, ಈ ಎಲ್ಲ ಸ್ಥಳಗಳಲ್ಲೂ ಕನ್ನಡ ಸಂಘ-ಸಂಸ್ಥೆಗಳಿದ್ದು ವಿವಿಧ ಪ್ರಮಾಣದಲ್ಲಿ ಕನ್ನಡದ ಕೆಲಸದಲ್ಲಿ ನಿರತವಾಗಿವೆ. ಮಹಾರಾಷ್ಟ್ರದ ಜಿಲ್ಲೆ-ಜಿಲ್ಲೆಯಲ್ಲೂ ಇಂಥ ಕ್ರಿಯಾಶೀಲ ಕನ್ನಡ ಸಂಘಗಳಿರುವುದಲ್ಲದೆ, ಮಹಾರಾಷ್ಟ್ರದ ರಾಜಧಾನಿ ಮುಂಬಯಿಯೊಂದರಲ್ಲೇ ನೂರೊಂದು ಕನ್ನಡ ಸಂಘ-ಸಂಸ್ಥೆಗಳಿದ್ದು ಕೆಲವಂತೂ ಒಳನಾಡಿನ ಸಂಘಗಳೂ ಬೆರಗುಗೊಳ್ಳಬಹುದಾದಷ್ಟು ಭವ್ಯವಾದ ವಾಸ್ತುಶಿಲ್ಪಗಳನ್ನು ಹೊಂದಿವೆ. ನಮ್ಮ ದುರ್ಬೀನಿನ ದೃಷ್ಟಿ ಇನ್ನೂ ಮುಂದೆ ಚಾಚಿದರೆ ಹೊರದೇಶಗಳಲ್ಲೂ ಕನ್ನಡ ಸಂಘಸಂಸ್ಥೆಗಳು ತಲೆಯೆತ್ತಿ ಮೆರೆಯುತ್ತಿರುವ ಸಂಗತಿ ವಿದಿತವಾಗದಿರದು. ಇಂಗ್ಲಂಡ್, ಅಮೇರಿಕ, ಕೆನಡಾ, ಜರ್ಮನಿ, ದುಬಾಯಿ, ಬಹರಿನ್ ಮುಂತಾದ ದೇಶಗಳಲ್ಲಿ ಕನ್ನಡಿಗರು ತಮ್ಮವೇ ಆದ ಸಂಘಗಳನ್ನು ರಚಿಸಿಕೊಂಡು ಕನ್ನಡ ಚಟುವಟಿಕೆಗಲ್ಲಿ ತೊಡಗಿರುವ ವರದಿಗಳು ದೊರೆಯುತ್ತವೆ. ಒಂದು ಅಂತರ್ ಸಾಂಘಿಕ ಸಂಪರ್ಕ ವ್ಯವಸ್ಥೆಯಿಲ್ಲದ ಕಾರಣ, ಯಾವ ಯಾವ ಸಂಘ ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಯಾವ ಯಾವ ಕಾರ್ಯಚಟುವಟಿಕೆಗಳನ್ನು ಸಂಘಟಿಸಿತು, ಸಂಘದ ಸದಸ್ಯರ ಹಾಗೂ ಸದಸ್ಯೇತರರ ಮೇಲೆ ಆ ಚಟುವಟಿಕೆಗಳ ಪರಿಣಾಮವೇನಾಯಿತೆಂದು ಖಚಿತವಾಗಿ ಹೇಳುವುದು ಕಷ್ಟ. ಈ ಮೊದಲೇ ಸೂಚಿಸಿದಂತೆ ಇದು ಮುಂಬಯಿಯ Gate way of India ದ ಬಳಿ ನಿಂತು ಕನ್ನಡ ದುರ್ಬೀನಿನ ಮೂಲಕ ದೂರದ ನಕ್ಷತ್ರಗಳನ್ನು ಗುರುತಿಸುವ ಒಂದು ಪ್ರಯತ್ನ, ಅಷ್ಟೇ.

## ಅಮೇರಿಕನ್ನಡಿಗರು

ಅಮೇರಿಕದ ಕನ್ನಡ ಸಂಘಗಳಿಗೆ 30 ವರ್ಷಗಳ ಇತಿಹಾಸವೇ ಉಂಟು. ಅಮೇರಿಕೆಯಲ್ಲಿ ಪ್ರಥಮವಾಗಿ ಮಿಚಿಗನ್ ಆನ್ ಆರ್ಬರ್‌ನ ಕನ್ನಡಿಗರೊಂದಾಗಿ 1971ರಲ್ಲಿ 'ಪಂಪ ಕನ್ನಡ ಸಂಘ'ವನ್ನು ಸ್ಥಾಪಿಸಿದರು. ಮುಂದೆ ಈ ಸಂಘದ ಹೆಸರು ಕನ್ನಡ ಕೂಟವೆಂದು ಬದಲಾಯಿತು. ಆದರ ನಂತರ ಬೇರೆ ಬೇರೆ ಪ್ರಾಂತ ಪಟ್ಟಣಗಳಲ್ಲಿಯೂ ಇಂಥ ಕೂಟಗಳು ರೂಪುಗೊಂಡುವು-ವಾಷಿಂಗ್‌ಟನ್‌ನಲ್ಲಿ ಕಾವೇರಿ ಕನ್ನಡ ಕೂಟ, ಉತ್ತರ ಕ್ಯಾಲಿಫೋರ್ನಿಯಾದಲ್ಲಿ ಕರ್ನಾಟಕ ಸಂಘ, ದಕ್ಷಿಣ ಕ್ಯಾಲಿಫೋರ್ನಿಯಾದಲ್ಲಿ ಕನ್ನಡ ಕೂಟ, ಜಾರ್ಜಿಯಾದಲ್ಲಿ ನೃಪತುಂಗ ಕನ್ನಡ ಕೂಟ, ಮ್ಯಾಸಚ್ಯುಸೆಟ್ಸ್‌ನಲ್ಲಿ ಕನ್ನಡ ಕೂಟ, ಇಲ್ಲಿನಾಯ್‌ನಲ್ಲಿ ವಿದ್ಯಾರಣ್ಯ ಕನ್ನಡ ಕೂಟ, ನ್ಯೂಯಾರ್ಕ್‌ನಲ್ಲಿ ಕನ್ನಡ ಕೂಟ, ಫಿಲಾಡೆಲ್ಫಿಯಾದಲ್ಲಿ ತ್ರಿವೇಣಿ ಕನ್ನಡ ಸಂಘ ಇತ್ಯಾದಿ. ಅಮೇರಿಕನ್ನಡಿಗರು "ಅಮೇರಿಕನ್ನಡ" ಎಂಬ ತಮ್ಮದೇ ಆದ ಪತ್ರಿಕೆಯನ್ನು ಪ್ರಕಟಿಸುತ್ತಾರೆಂದರೆ ಯಾರಿಗಾದರೂ ಅಚ್ಚರಿಯೆನಿಸಬಹುದು. ಮುಖ್ಯವಾಗಿ ಈ ಅಮೇರಿಕನ್ನಡಿಗರು ತಮ್ಮ ಸಂಘಗಳಿಗಿಟ್ಟ

ಹೆಸರುಗಳೇ ನಮ್ಮ ಮೈಮನಗಳಿಗೆ ನವಿರೇಳಿಸುವಂತಿದೆ. ಉತ್ತರ ಅಮೇರಿಕೆಯ ಬಾನಾದಲ್ಲಿರುವ ಬಂಟ್ಸ್ ಅಸೋಸಿಯೇಶನ್ 1991ರ ಆಗಸ್ಟ್‌ನಲ್ಲಿ ತನ್ನ 3ನೆಯ ವಾರ್ಷಿಕೋತ್ಸವ ಆಚರಿಸಿತು. ಅಮೇರಿಕೆಯಿಂದ ಕೆನಡಾದ ಕಡೆಗೆ ದೃಷ್ಟಿ ಹರಿಸಿದರೆ ಅಲ್ಲಿ – ಟೊರೆಂಟೋದಲ್ಲಿಯ ಉತ್ಸಾಹೀ ಕನ್ನಡಿಗರು ಮುಂಬಂದು ಇಂಟರ್‌ನಾಶನಲ್ ಕರ್ನಾಟಕ ಕ್ಲಬ್ ಎಂಬ ಸಂಘವನ್ನು 1989ರಲ್ಲಿ ಕಟ್ಟಿಕೊಂಡದ್ದು ತಿಳಿದು ಬರುತ್ತದೆ. ವಿಜಾಪುರದ ಡಾ. ಚಂದ್ರಕಾತ ಬೀಳಗಿಯವರು ಈ ಕ್ಲಬ್ ಕಾರ್ಯದರ್ಶಿ. ತುಂಬ ಉತ್ಸಾಹಿಗಳು. ಅವರು ಇತ್ತೀಚೆಗೆ ಮುಂಬಯಿಗೆ ಬಂದಾಗ ತಮ್ಮ ಕ್ಲಬ್‌ನ ಧ್ಯೇಯ–ಧೋರಣೆಗಳ ಬಗ್ಗೆ ವಿವರಿಸಿದರು :

1) To pormote, co-ordinate and support philonthropic projects in Karnataka

2) To promote friendship, travel and business interests among people of Karnataka.

ಈ ಉದ್ದೇಶಗಳನ್ನು ನೋಡಿದರೆ ಕೆನಡಾದಲ್ಲಿ ನೆಲಸಿರುವ ಕನ್ನಡಿಗರು ತಮ್ಮ ತಾಯ್ನಾಡಿಗೆ ಆಗಾಗ ಬಂದು ಹೋಗುವುದಕ್ಕೆ, ಇಲ್ಲಿಯ ಜನಕಲ್ಯಾಣ ಯೋಜನೆಗಳಿಗೆ ನೆರವಾಗುವುದಕ್ಕೆ ಹಾಗೂ ಅಂತರ್‌ರಾಷ್ಟ್ರೀಯ ವ್ಯಾಪಾರ–ಉದ್ಯಮಗಳಿಗೆ ಉತ್ತೇಜನವೀಯುವುದಕ್ಕೆ ಉತ್ಸುಕರಾಗಿರುವುದು ವಿದಿತವಾಗುತ್ತದೆ. 1991 ರ ಮೇ ತಿಂಗಳಲ್ಲಿ ಈ ಕ್ಲಬ್‌ನವರು ಟೊರೆಂಟೋದಲ್ಲಿ ತಮ್ಮ ಪ್ರಥಮ ಕರ್ನಾಟಕೋತ್ಸವವನ್ನು ಆಚರಿಸಿ ಅಲ್ಲಿಯ ನಾಗರೀಕರಲ್ಲಿ ಕರ್ನಾಟಕದ ಬಗ್ಗೆ ಹೆಚ್ಚಿನ ತಿಳುವಳಿಕೆ ಮೂಡುವಂತೆ ಮಾಡಿದ್ದಾರೆ. ತನ್ನ ಉದ್ದೇಶಕ್ಕನುಸಾರವಾಗಿ ಈ ಕ್ಲಬ್ ಡಾ. ರಾಜಶೇಖರ ಮೂರ್ತಿಯವರ ಮೂಲಕ ಬೆಂಗಳೂರು ನಗರ ಪರಿಸರ ಸಂರಕ್ಷಣಾ ಯೋಜನೆಗೆ ಸಕ್ರಿಯ ಸಹಾಯ ನೀಡುತ್ತಿದ್ದು ಡಾ. ವಾಸುದೇವನ್ ಅವರ ನೆರವಿನಿಂದ ಭಾರತದ ಹಳ್ಳಿಗರಿಗೆ ಆರೋಗ್ಯ ಸೇವೆಯನ್ನೂ ಒದಗಿಸುತ್ತಿದೆ. ಕನ್ನಾಡಿಗೂ ಕೆನಡಾಕ್ಕೂ ಸೇವಾಬದ್ಧ ಸೇತುವೆಯಾಗಿ ನಿಲ್ಲಬಲ್ಲ ಈ ಕ್ಲಬ್ ಇನ್ನೂ ಶೈಶವಾವಸ್ಥೆಯಲ್ಲಿದ್ದು ತನ್ನ ಕಾರ್ಯಚಟುವಟಿಕೆಗಳನ್ನು ವಿಸ್ತರಿಸಿದಾಗ ಕನ್ನಡಿಗರಿಗೆ ಹೆಚ್ಚಿನ ಪ್ರಯೋಜನವಾಗಲೂ ಬಹುದು. ಕೆನಡಾದ ಟೊರೆಂಟೋನಲ್ಲಿರುವ ವೀರಶೈವ ಸಮಾಜವು ಈ ವರ್ಷ ಡಾ. ಎಂ. ಸಿ. ಮೋದಿಯವರನ್ನು ಸಮ್ಮಾನಿಸಿತು. ಕೆನಡಾದ ಈ ಕ್ಲಬ್‌ನಂತೆಯೇ ದುಬಾಯಿ.. ಕರ್ನಾಟಕ ಸಂಘವೂ ಕರ್ನಾಟಕದ ದುರ್ಬಲ ಕಲಾವಿದರಿಗೆ ಆರ್ಥಿಕ ಸಹಾಯವೊದಗಿಸುತ್ತಿರುವುದು ಅಭಿಮಾನದ ಸಂಗತಿಯಾಗಿದೆ. ಭಾರತದಿಂದ ಮುಖ್ಯವಾಗಿ, ಕರ್ನಾಟಕದಿಂದ ಹೊರದೇಶಗಳ ಸಂಚಾರಕ್ಕೆ ಹೋದ ಕನ್ನಡ–ಕವಿ–ಲೇಖಕ ಮತ್ತು ಕಲಾವಿದರ ಕಾರ್ಯಕ್ರಮಗಳನ್ನೇರ್ಪಡಿಸಿ ತಮ್ಮ ನಾಡುನುಡಿಗಳ ನೆನಕೆಗಳನ್ನು ಹಸಿರುಗೊಳಿಸುತ್ತಲೇ ಇರುತ್ತಾರೆ ಈ ದೂರದೇಶಗಳ ಕನ್ನಡಿಗರು.

## ಭಾರತದ ಮಹಾದ್ವಾರದಲ್ಲಿ

ಕರ್ನಾಟಕದ ನೆರೆಪ್ರದೇಶಗಳಲ್ಲಿ, ಮುಖ್ಯವಾಗಿ ಮಹಾರಾಷ್ಟ್ರದಲ್ಲಿ ಕನ್ನಡಿಗರು ಬಲು ದೊಡ್ಡ ಸಂಖ್ಯೆಯಲ್ಲಿದ್ದಾರೆ. ಭಾಷಾವಾರು ರಾಜ್ಯಗಳ ಪುನರ್ರಚನೆಯಾಗುವ ಮೊದಲು ಬೆಳಗಾವಿ-ಧಾರವಾಡ, ವಿಜಾಪುರ, ಕಾರವಾರ ಜಿಲ್ಲೆಗಳು ಮೊದಲಿನ ಮುಂಬಯಿ ಪ್ರಾಂತದಲ್ಲೇ ಇದ್ದು, 1956 ರಲ್ಲಿ ಕರ್ನಾಟಕ (ಮೈಸೂರು) ರಾಜ್ಯವಾದರೂ ಮಹಾರಾಷ್ಟ್ರದಲ್ಲಿದ್ದ ಕನ್ನಡಿಗರೆಲ್ಲ ಇಲ್ಲಿಂದ ಕಂಬಿ ಕಿತ್ತುಕೊಂಡು ಒಳನಾಡಿಗೆ ಧಾವಿಸಲಿಲ್ಲ. ಉದ್ಯೋಗ, ಧಂದೆ, ಶಿಕ್ಷಣ, ಬೀಗತನ ಮುಂತಾದ ಕಾರಣಗಳಿಂದಾಗಿ ಇಲ್ಲಿಯ ಬಹುಸಂಖ್ಯ ಕನ್ನಡಿಗರು ಇಲ್ಲಿಯೇ ಉಳಿದುಕೊಂಡು 'ಎಲ್ಲಾದರು ಇರು ಎಂತಾದರು ಇರು ನೀ ಕನ್ನಡವಾಗಿರು!' ಎಂದು ತಮ್ಮಷ್ಟಕ್ಕೆ ತಾವೆ ಸಮಾಧಾನ ಹೇಳಿಕೊಂಡರು. ಅಂತೆಯೇ ಮಹಾರಾಷ್ಟ್ರದ ರಾಜಧಾನಿ ಮುಂಬಯಿ ನಗರದಲ್ಲಿ ಹತ್ತು ಲಕ್ಷಕ್ಕೂ ಮೀರಿ ಕನ್ನಡಿಗರಿದ್ದಾರೆಂಬ ಅಂದಾಜಿದೆ. ಇಲ್ಲಿಯ ಕನ್ನಡಿಗರು ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಕಾಪಾಡಿಕೊಳ್ಳಲು ಹಲವೊಂದು ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡಿದ್ದಾರೆ- ಅಂಥವುಗಳಲ್ಲಿ ೧೮೩೮ ರಲ್ಲಿ ಹುಟ್ಟಿಕೊಂಡ 'ಶ್ರೀಮದ್ಭಾರತ ಮಂಡಳಿ' ಅತ್ಯಂತ ಹಳೆಯ ಸಂಸ್ಥೆಯೆನಿಸಿದ್ದು ಇಂದಿಗೂ ಅದು ಕ್ರಿಯಾಶೀಲವಾಗಿದೆ. ೧೯೯೧ ರಲ್ಲಿ ಅದು ತನ್ನ ಸದಸ್ಯರಿಗಾಗಿ ಪ್ರತಿವಾರ 'ಕುಮಾರವ್ಯಾಸ ಭಾರತ' ದ ವಾಚನದ ಕಾರ್ಯಕ್ರಮವಿಟ್ಟುಕೊಂಡದ್ದೇ ಈ ಮಾತಿಗೆ ಸಾಕ್ಷಿಯಾಗಿದೆ. ೧೯೦೨ ರಲ್ಲಿ ಆರಂಭವಾದ ಮೊಗವೀರ ವ್ಯವಸ್ಥಾಪಕ ಮಂಡಳಿಯು ೧೯೦೮ ರಲ್ಲಿ ಮೊಗವೀರ ಧರ್ಮಾರ್ಥ ಕನ್ನಡ ರಾತ್ರಿ ಶಾಲೆ ಸ್ಥಾಪಿಸಿ ಇಂದು ಮುಂಬಯಿಯ ಹಿರಿಯ ಸಂಸ್ಥೆಗಳಲ್ಲೊಂದಾಗಿ ಮೊಗವೀರ ಸಮಾಜದ ಶೈಕ್ಷಣಿಕ ಹಾಗೂ ಆರ್ಥಿಕ ವಿಕಾಸಕ್ಕಾಗಿ ಶ್ರಮಿಸುತ್ತಿದೆ. ಕಳೆದ ೫೪ ವರ್ಷಗಳಿಂದಲೂ 'ಮೊಗವೀರ' ಮಾಸಪತ್ರಿಕೆಯನ್ನೂ ನಡೆಸಿಕೊಂಡು ಬಂದಿದೆ. ಮೊಗವೀರ ರಾತ್ರಿಶಾಲೆಯಂತೆ, ಮುಂಬಯಿಯಲ್ಲಿ ಕರ್ನಾಟಕ, ಕೆನರಾ ವಿದ್ಯಾದಾಯಿನಿ, ಮದರ ಇಂಡಿಯಾ, ಯಂಗ ಮೆನ್ಸ್, ಶಾರದಾ ವಿಜಯ, ನಿತ್ಯಾನಂದ, ಕನ್ನಡ ಪ್ರೊಗ್ರೆಸ್ಸಿವ್, ಗುರುನಾರಾಯಣ ಧರ್ಮಾರ್ಥ ರಾತ್ರಿಶಾಲೆಗಳು ಮುಂಬಯಿಯ ಬಡ ಮತ್ತು ಮಧ್ಯಮ ವರ್ಗದ ವಿದ್ಯಾರ್ಥಿಗಳಿಗೆ ಕನ್ನಡದಲ್ಲೇ ಶಿಕ್ಷಣ ಕೊಡುತ್ತಿದ್ದು ಮುಂಬಯಿ ಮತ್ತು ಉಪನಗರಗಳಲ್ಲಿ ಕನ್ನಡದ ನಂದಾದೀಪ ಉರಿಯುತ್ತಲೇ ಇರಲು ನೆರವಾಗುತ್ತಿವೆ. ಕನ್ನಡಿಗರೇ ಸ್ಥಾಪಿಸಿದ ಈ ರಾತ್ರಿಶಾಲೆಗಳಲ್ಲದೆ, ಮುಂಬಯಿ ಮಹಾನಗರಪಾಲಿಕೆಯ ಐವತ್ತಕ್ಕೂ ಮಿಕ್ಕಿದ ಹಗಲು ಶಾಲೆಗಳಲ್ಲಿ ಕನ್ನಡದಲ್ಲಿ ಶಿಕ್ಷಣ ದೊರೆಯುತ್ತಿದೆ. ಮುಂಬಯಿ ಕನ್ನಡ ಸಂಘದ ಮುಂದಾಳತ್ವದಲ್ಲಿ ೧೯೩೯ ರಲ್ಲಿ ಆರಂಭಗೊಂಡ ರಾಷ್ಟ್ರೀಯ ಕನ್ನಡ ಶಿಕ್ಷಣ ಸಮಿತಿಯ ಮಾಧ್ಯಮಿಕ ಶಾಲೆಯಿಂದು ವಿಶಾಲವಾಗಿ ಬೆಳೆದು ಮುಂಬಯಿಯ

ಹಿರಿಯ ಸಂಸ್ಥೆಗಳಲ್ಲೊಂದೆನಿಸಿದೆ. ಅದರಂತೆ, ೧೯೫೩ ರಲ್ಲಿ ಸ್ಥಾಪನೆಗೊಂಡ ವಿದ್ಯಾಪ್ರಕಾಶಕ ಮಂಡಳದ ಹೈಸ್ಕೂಲು, ೧೯೬೪ ರಲ್ಲಿ ಆರಂಭವಾದ ಕನ್ನಡ ಭವನ ಸೊಸಾಯ್ಟಿ ಹೈಸ್ಕೂಲು, ಚೆಂಬೂರು ಕರ್ನಾಟಕ ಸಂಘದ ಹೈಸ್ಕೂಲು, ದೊಂಬೀವಲಿ ಕರ್ನಾಟಕ ಸಂಘದ ಮಂಜುನಾಥ ಹೈಸ್ಕೂಲು, ಅಂಬರನಾಥನ ನಿಜಲಿಂಗಪ್ಪ ಹೈಸ್ಕೂಲು ಇವೆಲ್ಲವು ಮುಂಬಯಿಯ ನಗರ–ಉಪನಗರಗಳಲ್ಲಿರುವ ಕನ್ನಡ ವಿದ್ಯಾರ್ಥಿಗಳಿಗೆ ಕನ್ನಡದ ಬೆಳಕು ನೀಡುತ್ತಿವೆ. ಮುಂಬಯಿಯ ಸೋಮಯ್ಯ, ಝುನ್ ಝುನ್‌ವಾಲಾ, ಎಂ. ಡೀ., ಎಂ. ವಿ. ಮುಂತಾದ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪನದ ಸೌಲಭ್ಯವಿದ್ದು ಮುಂಬಯಿ ವಿ. ವಿ. ಕನ್ನಡ ವಿಭಾಗವು ಈ ಎಲ್ಲ ಕಾಲೇಜುಗಳ ಹಾಗು ಸ್ಥಳೀಯ ಸಂಘ–ಸಂಸ್ಥೆಗಳ ಸಹಕಾರದಿಂದ ತನ್ನ ಸ್ನಾತಕೋತ್ತರ ಸಂಶೋಧನ, ಶಿಕ್ಷಣ, ಸಾಹಿತ್ಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ ನಡೆಸುತ್ತಲಿದೆ. ಕಳೆದ ೧೨ ವರ್ಷಗಳ ಕಾಲಾವಧಿಯಲ್ಲಿ ಈ ವಿಭಾಗವು ಗಣನೀಯ ಪ್ರಗತಿ ಸಾಧಿಸಿದ್ದು ವಿ. ವಿ. ಆವರಣ ಹಾಗೂ ಹೊರಗಿನ ಸಂಘ–ಸಂಸ್ಥೆಗಳ ಪ್ರೀತಿ–ವಿಶ್ವಾಸಗಳಿಗೆ ಪಾತ್ರವಾಗಿದೆ. ಆರಂಭದಲ್ಲಿ ಪ್ರೊ. ಚಿದಂಬರ ದೀಕ್ಷಿತ, ನಂತರ ಡಾ. ಶ್ರೀನಿವಾಸ ಹಾವನೂರರು ಹಾಕಿಕೊಟ್ಟ ತಳಪಾಯವನ್ನು ಈಗಿನ ವಿಭಾಗ ಪ್ರಮುಖ ಡಾ. ತಾಳ್ತಜೆ ವಸಂತಕುಮಾರರು ಮಜಬೂತುಗೊಳಿಸಿ ಕನ್ನಡ ಶಿಕ್ಷಣ ಹಾಗು ಸಾಹಿತ್ಯ–ಸಂಸ್ಕೃತಿಯ ಕಾರ್ಯವನ್ನು ಸಾಕಷ್ಟು ವಿಸ್ತಾರವಾಗಿ ಹಮ್ಮಿಕೊಂಡಿದ್ದಾರೆ. ೧೯೯೧ ರ ವರ್ಷದ ಮಟ್ಟಿಗೆ ಹೇಳುವುದಾದರೆ ಈ ವಿಭಾಗದಿಂದ ಈ ವರ್ಷ 8 ಎಂ. ಎ. 3 ಎಂ. ಫಿಲ್ ಹಾಗು 1 ಪಿಎಚ್. ಡಿ. ಪದವಿಗಳನ್ನು ನೀಡಲಾಗಿದೆ. ಹೊರನಾಡ ವಿ. ವಿ. ಗಳಲ್ಲಿರುವ ಕನ್ನಡ ವಿಭಾಗಗಳ ಪ್ರಗತಿಯ ದೃಷ್ಟಿಯಿಂದ ಇದೇನು ಸಣ್ಣಸಾಧನೆಯಲ್ಲ.

ಇದು ವಿಭಾಗದ ಶೈಕ್ಷಣಿಕ ಸಾಧನೆಯಾದರೆ, ವರ್ಷದಾರಂಭದಲ್ಲಿ ಶ್ರೀ ಬಿ. ಎ. ಸನದಿಯವರ ಅಧ್ಯಕ್ಷತೆಯಲ್ಲಿ ನಡೆಸಿದ ಪ್ರಶಸ್ತಿ ವಿಜೇತ ಕನ್ನಡ ಕೃತಿಗಳ ಮೇಲಿನ ವಿಚಾರ ಸಂಕಿರಣ, ನಂತರ ಜನಪರ ನಿಲುವು–ರಾಷ್ಟ್ರೀಯ ಸ್ತರದ ವಿಚಾರ ಸಂಕಿರಣ, ಅಂತರ್ಭಾಷಾ ಕವಿ ಸಮ್ಮೇಳನ, ಡಾ. ಜೀ. ಶಂ. ಪ. ಕನ್ನಡ ಜಾನಪದ ಕಥೆಗಳ ಕುರಿತು ನೀಡಿದ ೨ ಉಪನ್ಯಾಸಗಳು ಡಾ. ಎಂ. ಎಂ. ಕಲಬುರ್ಗಿಯವರು ಕನ್ನಡ ಸಂಶೋಧನಾ ಶಾಸ್ತ್ರದ ಬಗೆಗೆ ನೀಡಿದ ೨ ಉಪನ್ಯಾಸಗಳು, ಈ ವಿಭಾಗದ ಪರವಾಗಿ ಕರ್ನಾಟಕ ಸಂಘದ ಆಶ್ರಯದಲ್ಲಿ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರು "ಕಾಳಿದಾಸನ ಕೃತಿಗಳು'' ಬಗ್ಗೆ ನೀಡಿದ ಬೇಂದ್ರೆ ದತ್ತಿ ಉಪನ್ಯಾಸಗಳ ಪುಸ್ತಕದ ಪ್ರಕಟಣೆ, ಈ ವರ್ಷ ಡಾ. ಎ. ಆರ್. ತೊರೋ ಅವರು ಬೇಂದ್ರೆ ವಾಙ್ಮಯ: ಪ್ರೇರಣೆ ಹಾಗು ಪ್ರಭಾವಗಳನ್ನು ಕುರಿತಂತೆ ನೀಡಿದ ಬೇಂದ್ರೆ ದತ್ತಿ ಉಪನ್ಯಾಸಗಳು ಇವೆಲ್ಲ ಕನ್ನಡ ವಿಭಾಗದ ೧೯೯೧ರ ಪ್ರಮುಖ ಕಾರ್ಯ ಚಟುವಟಿಕೆಗಳು. ಇವೆಲ್ಲವುಗಳ ವಿವರಣೆ ಕೊಡುವುದು

ಈ ಲೇಖನದ ಮಿತಿಮೀರಿಸಬಹುದಾದ ಕೆಲಸವಾದರೂ ಕನ್ನಡ ವಿಭಾಗವು ಈ ಅವಧಿಯಲ್ಲಿ ಜನಪರ ನಿಲುವುಗಳ ಕುರಿತು ಹಮ್ಮಿಕೊಂಡಿದ್ದ ರಾಷ್ಟ್ರೀಯ ಸ್ತರದ ವಿಚಾರ ಸಂಕಿರಣ ಹಾಗು ಕವಿ ಸಮ್ಮೇಳನಗಳಿಂದಾಗಿ ವಿ. ವಿ. ಆವರಣದಲ್ಲಿ ಕನ್ನಡ ವಿಭಾಗದ ಪ್ರತಿಷ್ಠೆ ಬೆಳೆಯಲು ಸಹಕಾರಿಯಾಯಿತೆಂಬುದನ್ನು ಉಲ್ಲೇಖಿಸಲೇಬೇಕು.

ಮುಂಬಯಿಯಲ್ಲಿ ಶಿಕ್ಷಣರಂಗದ ಹೊರತಾಗಿ, ನೂರಾರು ಕನ್ನಡ ಸಂಘಸಂಸ್ಥೆಗಳು ತಮ್ಮ ತಮ್ಮ ರೀತಿಯಲ್ಲಿ ಕೆಲಸ ಮಾಡುತ್ತಿವೆ. ಮೊಗವೀರ ವ್ಯವಸ್ಥಾಪಕ ಮಂಡಳಿ, ಮುಂಬಯಿ ಕನ್ನಡ ಸಂಘ, ಮೈಸೂರು ಅಸೋಸಿಯೇಶನ್, ಬಿಲ್ಲವರ ಅಸೋಸಿಯೇಶನ್, ಕರ್ನಾಟಕ ಸಂಘ–ಮಾಹಿಮ್, ಗೋರೇಗಾಂವ ಕರ್ನಾಟಕ ಸಂಘ, ಬಾಂಬೆ ಬಂಟ್ಸ್ ಅಸೋಸಿಯೇಶನ್, ಬಂಟರ ಸಂಘ, ಕರ್ನಾಟಕ ವೆಲ್ಫೇರ್ ಸೊಸಾಯಿಟಿ, ಕನ್ನಡ ವನಿತಾ ಸಮಾಜ, ಯಂಗ ಮೆನ್ಸ್ ಬೋವಿ ಅಸೋಸಿಯೇಶನ್, ಬಾಂಬೆ ಸೌಥ್ ಕೆನರಾ ಬ್ರಾಹ್ಮಣ ಅಸೋಸಿಯೇಶನ್, ದೇವಾಡಿಗ ಸುಧಾರಕ ಸಂಘ, ಕುಲಾಲ ಸುಧಾರಕ ಸಂಘ, ಬಸವೇಶ್ವರ ಕಲ್ಚರಲ್ ಆ್ಯಂಡ್ ಫಿಲಾಸಫಿಕಲ್ ಸೊಸಾಯಿಟಿ, ಸತ್ಯಧ್ಯಾನ ವಿದ್ಯಾಪೀಠ, ದೊಂಬಿವಲಿ ಕರ್ನಾಟಕ ಸಂಘ ಮುಂತಾದವು ಬಹುಕಾಲದಿಂದ ತುಂಬ ಲವಲವಿಕೆಯಿಂದ ತಮ್ಮ ಕಾರ್ಯಚಟುವಟಿಕೆಗಳನ್ನು ನಡೆಸುತ್ತ ಬಂದ ಸಂಸ್ಥೆಗಳೆನಿಸಿವೆ. ಇತ್ತೀಚಿನ ಕನ್ನಡ ಪ್ರಚಾರ ಸಮಿತಿ ಸಾಕಷ್ಟು ಕಾಳಜಿ ವಹಿಸಿ ಕನ್ನಡ ಶಿಕ್ಷಣದ ಬಗ್ಗೆ ಜನಜಾಗೃತಿ ಮಾಡಲೆತ್ನಿಸುತ್ತಿದೆ. ಡಾ. ರಂಗನಾಥ್ ಭಾರದ್ವಾಜರ ನೇತೃತ್ವದಲ್ಲಿ ಈ ವರ್ಷ ಕರ್ನಾಟಕ ಹರಿದಾಸ ಸೈಂಟಿಫಿಕ್ ರಿಸರ್ಚ್ ಸೆಂಟರ್ ಮುಂಬಯಿಯಲ್ಲಿ ಕಾರ್‍ಯಾರಂಭ ಮಾಡಿದೆ.

ಮುಂಬಯಿ (ಮಾಹಿಮ್) ಕರ್ನಾಟಕ ಸಂಘವು ೧೯೯೧ ರ ಜನವರಿಯಲ್ಲಿ ನಡೆಸಿದ ನಾಲ್ಕು ದಿನಗಳ ಸಾಂಸ್ಕೃತಿಕ ಮಹೋತ್ಸವವು ಬಹುಕಾಲ ನೆನಪಿನಲ್ಲಿ ಉಳಿಯುವಂಥದು. ಮುಂಬಯಿಯ ಉಚ್ಚ ನ್ಯಾಯಾಲಯದ ನ್ಯಾಯಾಧೀಶ ಶ್ರೀ ಎಚ್. ಸುರೇಶ್ ಅವರು ಉದ್ಘಾಟಿಸಿದ ಈ ಮಹೋತ್ಸವದಲ್ಲಿ 'ಮಹಾರಾಷ್ಟ್ರ ಗೌರವ' ಪುರಸ್ಕಾರ ಪಡೆದ ಸರ್ವಶ್ರೀ ವ್ಯಾಸರಾಯ ಬಲ್ಲಾಳ, ಯಶವಂತ ಚಿತ್ತಾಲ, ಬದರಿನಾರಾಯಣ, ಜೆ. ಬಿ. ಮೊಲಾಯಿಸ್ ಅವರನ್ನು ಸತ್ಕರಿಸಲಾಯಿತಲ್ಲದೆ, ನಾಲ್ಕೂ ದಿನ ವೈವಿಧ್ಯಪೂರ್ಣ ಸಂಗೀತ–ನಾಟಕ–ಚಲನಚಿತ್ರ ಪ್ರದರ್ಶನಗಳನ್ನೂ, ಪ್ರಸಿದ್ಧ ಹಾಸ್ಯಲೇಖಕಿ ಶ್ರೀಮತಿ ಟಿ. ಸುನಂದಮ್ಮ ಅವರ ಹಿರಿತನದಲ್ಲಿ ಮಹಿಳಾ ಸಮ್ಮೇಳನವನ್ನು ನಡೆಸಲಾಯಿತು. ಈ ಉತ್ಸವದಲ್ಲಿ ಭಾಗವಹಿಸಲು ಬಂದ ಬೆಂಗಳೂರಿನ 'ರಂಗ ಗಂಗೋತ್ರಿ' ಯವರು ಗೊ.ರು.ಚೆ. ಅವರ 'ಬೆಳ್ಳಕ್ಕಿ ಹಿಂಡು ಬೆದರ್‍ಯಾವೋ' ನಾಟಕವನ್ನು ಥಾನೆಯ ಕನ್ನಡ ಸಂಘದ ವಾರ್ಷಿಕೋತ್ಸವದ ಅಂಗವಾಗಿಯೂ ಪ್ರದರ್ಶಿಸಿದರು. ಇದೇ ವರ್ಷ ಮುಂಬಯಿಯ 'ಧ್ವನಿ' ಬಳಗದವರು 'ರಂಗಧ್ವನಿ' ಎಂಬ ಪ್ರಾತಿನಿಧಿಕ ಪ್ರಬಂಧ ಸಂಕಲನವನ್ನೂ ಡಾ.

ರಂಗನಾಥ್ ಭಾರದ್ವಾಜ್ ಅವರ ಹಸ್ತದಿಂದ ಬಿಡುಗಡೆಗೊಳಿಸಿದರು. ಕರ್ನಾಟಕ ಸಂಘದ ಯುವ ವಿಭಾಗದವರು ಖ್ಯಾತ ನಾಟಕ ನಿರ್ದೇಶಕ ಬಿ. ಆರ್. ನಾಗೇಶ್, ಸಿ. ಆರ್. ಸಿಂಹ, ಕಪ್ಪಣ್ಣ ಮತ್ತು ಟಿ. ಆರ್.ಸೀತಾರಾಮಯ್ಯನವರೊಡನೆ ರಂಗಸಂವಾದ ಕಾರ್ಯಕ್ರಮಗಳನ್ನು ಏರ್ಪಡಿಸಿದ್ದರು., ಕವಿ ಶ್ರೀ ಬಿ. ಆರ್. ಲಕ್ಷ್ಮಣರಾವ್ ಅವರ ಅಧ್ಯಕ್ಷತೆಯಲ್ಲಿ ಮುಂಬಯಿ ಕರ್ನಾಟಕ ಸಂಘವು ಏರ್ಪಡಿಸಿದ ಹಾಸ್ಯ ಕವಿಸಮ್ಮೇಳನವು ಮುಂಬಯಿ ಕನ್ನಡಿಗರಿಗೆ ಅಪೂರ್ವ ರಸಾನಂದ ನೀಡಿತು. ಕರ್ನಾಟಕ ಸಂಘದ ಮಾಹಿತಿ ಕೇಂದ್ರ ಹಾಗು ಮೈಸೂರು ಅಸೋಸಿಯೇಶನ್‌ನವರ ಕರ್ನಾಟಕ ಪ್ರವಾಸಿ ಕೇಂದ್ರಗಳು ೧೯೯೧ ರ ಪ್ರವಾಸೀ ವರ್ಷದಲ್ಲಿ ಆಸಕ್ತ ಪ್ರವಾಸಿಗಳಿಗೆ ಅವಶ್ಯಕ ವಿವರಗಳನ್ನು ಪೂರೈಸಿದವು. ಕರ್ನಾಟಕ ಸಂಘದ ಮಾಹಿತಿ ಕೇಂದ್ರವು ಶ್ರೀ ವ್ಯಾಸರಾಯ ಬಲ್ಲಾಳರ ಮಾರ್ಗದರ್ಶನದಲ್ಲಿ ಕಾಂಪ್ಯೂಟರ್ ಮಾಹಿತಿ ಸಂಗ್ರಹದ ಜತೆಗೆ ಕರ್ನಾಟಕದ ಸಾಂಸ್ಕೃತಿಕ ವೈಶಿಷ್ಟ್ಯಗಳ ಕುರಿತು ಸ್ಲಾಯಿಡ್ ಪ್ರದರ್ಶನಗಳನ್ನೂ, ಬೇಂದ್ರೆ-ಗೋಕಾಕ್ ಗ್ರಂಥ ಪ್ರದರ್ಶನಗಳನ್ನೂ ಏರ್ಪಡಿಸಿತು. ದೊಂಬೀವಲಿ ಕರ್ನಾಟಕ ಸಂಘವು ಈ ವರ್ಷ ತನ್ನ ಬೆಳ್ಳಿ ಹಬ್ಬವನ್ನು ಬಲು ಉತ್ಸಾಹದಿಂದ ಆಚರಿಸಿತು. ಇಲ್ಲಿಯ ಮೈಸೂರು ಸಂಗೀತ ವಿದ್ಯಾಲಯವು ಸಂತ ಜ್ಞಾನೇಶ್ವರ 200 ನೇ ಜನ್ಮ ದಿನೋತ್ಸವವನ್ನು ವಿಜೃಂಭಣೆಯಿಂದ ಹಮ್ಮಿಕೊಂಡಿತ್ತು.

## ಸಾಹಿತ್ಯ ಸ್ಪರ್ಧೆಗಳು

ಮುಂಬಯಿಯ ಕಾಲೇಜುಗಳಲ್ಲಿ ವಿವಿಧ ಪ್ರತಿಭಾ ಸ್ಪರ್ಧೆಗಳು ಪ್ರತಿಸಲವೂ ನಡೆದೇ ಇರುತ್ತವೆ. ಈ ಬಾರಿ ಈ ಕಾಲೇಜುಗಳಲ್ಲದೆ ಮುಂಬಯಿ ಕರ್ನಾಟಕ ಸಂಘವು ನಡೆಸಿದ ಮಾಸ್ತಿ ಸ್ಮಾರಕ ಕನ್ನಡ ಕಥಾ ಸ್ಪರ್ಧೆ, 'ಮೊಗವೀರ' ಪತ್ರಿಕೆಯ ಕಥಾಸ್ಪರ್ಧೆ 'ಅಕ್ಷಯ' ಸಾಹಿತ್ಯ ಸ್ಪರ್ಧೆ, ಧ್ವನಿ ಬಳಗದ ೬ನೆಯ ವರ್ಷದ ಕಥೆ-ಕವನ ಸ್ಪರ್ಧೆ, ಕನ್ನಡ ಸಾಹಿತ್ಯ ಸಂಗಮದ ದಶಮಾನೋತ್ಸವ ಮಿನಿಕಾದಂಬರಿ ಸ್ಪರ್ಧೆಗಳು ಕರ್ನಾಟಕ ಒಳ-ಹೊರಗಿನ ಯುವ ಪ್ರತಿಭೆಗಳನ್ನು ಮುಂಬಯಿಯತ್ತ ಹೊರಳಿ ನೋಡುವಂತೆ ಮಾಡಿದವು. ಗೋರೆಗಾಂವ್ ಕರ್ನಾಟಕ ಸಂಘದವರು ನಡೆಸಿದ ಕಥಾ ಕಥನ ಮಾಲಿಕೆಯೂ ಹೊಸ ಕನ್ನಡ ಕತೆಗಾರರು ಕಥಾಸಂವಹನ ಕಲೆಯಲ್ಲಿ ಸ್ಪರ್ಧಾಭಾವ ಬೆಳೆಸಿಕೊಳ್ಳಲು ಪ್ರೇರಣೆ ನೀಡುವಂತಿತ್ತು.

## ಜ್ಞಾನಪೀಠಕ್ಕೆ ಕನ್ನಡದ ಪಂಚಕಲಶ

ಕೆಲಕಾಲದಿಂದ ಮುಂಬಯಿ ನಿವಾಸಿಗಳಾಗಿದ್ದ ಕನ್ನಡ ದಿಗ್ಗಜಗಳಲ್ಲೊಬ್ಬರಾದ ಡಾ. ವಿ. ಕೃ. ಗೋಕಾಕ ಅವರಿಗೆ ಈ ವರ್ಷ ಕನ್ನಡದ ಐದನೆಯ ಜ್ಞಾನಪೀಠ ಪ್ರಶಸ್ತಿ ಬಂದದ್ದೂ, ಆ ಪ್ರಶಸ್ತಿಯನ್ನು ನವೆಂಬರ್ ೧ರ ಕರ್ನಾಟಕ

ರಾಜ್ಯೋತ್ಸವದಂದು ಭಾರತದ ಪ್ರಧಾನಿ ಶ್ರೀ ನರಸಿಂಹರಾವ್ ಅವರು ಮುಂಬಯಿಯಲ್ಲೇ ವಿತರಣೆ ಮಾಡಿದ್ದು, ಈ ವರ್ಷದ ಡಿ. ೨೫ ರಂದು ಮುಂಬಯಿ ಕರ್ನಾಟಕ ಸಂಘದ ಮುಂದಾಳ್ತನದಲ್ಲಿ ಮುಂಬಯಿಯ ೮೨ ಸಂಘ–ಸಂಸ್ಥೆಗಳು ೮೨ ವಯಸ್ಸಿನ ಗೋಕಾಕರಿಗೆ ಮಹಾರಾಷ್ಟ್ರದ ನಗರವಿಕಾಸ ಮಂತ್ರಿ ಶ್ರೀ ಸುಶೀಲ ಕುಮಾರ ಶಿಂಧೆಯವರ ಅಧ್ಯಕ್ಷತೆಯಲ್ಲಿ ಅದ್ದೂರಿಯ ಸನ್ಮಾನ ಸಮಾರಂಭವೇರ್ಪಡಿಸಿದ್ದೂ ಮುಂಬಯಿಯ ಕನ್ನಡ ಪ್ರಪಂಚದ ಇತಿಹಾಸದಲ್ಲೇ ಅವಿಸ್ಮರಣೀಯ ಸಂಗತಿಯಾಗಿ ಉಳಿಯುವಂತಹದು. ಮುಂಬಯಿಯ ಹಾಗೂ ಇತರ ನಗರಗಳ ಬೇರೆ ಬೇರೆ ಸಂಘ–ಸಂಸ್ಥೆಗಳು ಗೋಕಾಕರ ಕೃತಿಗಳ ಕುರಿತು ಉಪನ್ಯಾಸ–ವಿಚಾರ ಸಂಕಿರಣಗಳನ್ನೂ ಏರ್ಪಡಿಸಿದ್ದವು. ಈ ಸಂದರ್ಭದಲ್ಲಿ ಡಾ. ಗೋಕಾಕ್ ಅವರು ಹೊರನಾಡಿನಲ್ಲಿದ್ದಂದು ಅವರಿಗೆ ದೊರೆತ ಜ್ಞಾನಪೀಠದಿಂದಾಗಿ ಬಲು ವ್ಯಾಪಕವಾದ ಪ್ರಚಾರ ದೊರೆತು ಅಪರೋಕ್ಷವಾಗಿ ಕನ್ನಡ ಭಾಷೆ ಹಾಗೂ ಸಾಹಿತ್ಯಕ್ಕೂ ಹೆಚ್ಚಿನ ಪುಟ ದೊರೆತಂತಾಯಿತು.

### ಯಕ್ಷಗಾನಗಳ ಸುಗ್ಗಿ!

ಹೊರನಾಡಿನ ಹಲವೊಂದು ನಗರಗಳಲ್ಲಿ ಯಕ್ಷಗಾನ ಪ್ರಸಂಗಗಳನ್ನು ಆಡುವ–ನೋಡುವ ಲವಲವಿಕೆ ಇದ್ದೇ ಇದೆಯಾದರೂ ಮುಂಬಯಿ ನಗರದಲ್ಲಿ – ಮುಖ್ಯವಾಗಿ ಮಳೆಗಾಲದ ದಿನಗಳಲ್ಲಿ ಯಕ್ಷಗಾನಗಳ ಸುಗ್ಗಿಯೇ ನಡೆಯುತ್ತದೆ. ಪದವೀಧರ ಯಕ್ಷಗಾನ ಸಮಿತಿ, ಕನ್ನಡ ಹರ್ಷಜ್ಯೋತಿ, ಕರ್ನಾಟಕ ಮಿತ್ರಮಂಡಳಿ, ಗೋರೇಗಾಂವ ಕರ್ನಾಟಕ ಸಂಘ, ಜನಪ್ರಿಯ ಯಕ್ಷಗಾನ ಕಲಾಮಂಡಳ, ಯಕ್ಷಗಾನ ಮಿತ್ರವೃಂದ, ಶ್ರೀ ದುರ್ಗಾಪರಮೇಶ್ವರಿ ಯಕ್ಷಗಾನ ಕಲಾಮಿತ್ರ ಮಂಡಳಿ, ಶ್ರೀ ನರಸಿಂಹ ದಶಾವತಾರ ಯಕ್ಷಗಾನ ಮಂಡಳಿ, ಶ್ರೀ ನಾರಾಯಣ ಗುರುಸ್ವಾಮಿ ಯಕ್ಷಗಾನ ಮಂಡಳಿ, ಶ್ರೀ ರಾಘವೇಂದ್ರ ಸ್ವಾಮಿ ಯಕ್ಷಗಾನ ಸಭಾ, ದಹಿಸರ ಕನ್ನಡ ಮಿತ್ರವೃಂದ, ಮಹೇಶ್ವರಿ ಯಕ್ಷಗಾನ ಮಂಡಳಿ, ಶ್ರೀ ಕೃಷ್ಣ ಕೃಪಾಪೋಷಿತ ಯಕ್ಷಗಾನ ಮಂಡಳಿ – ಇವೆಲ್ಲ ಯಕ್ಷಗಾನ ಕಲಾರಂಗಕ್ಕಾಗಿ ಶ್ರಮಿಸುತ್ತಿರುವ ಸಂಸ್ಥೆಗಳು. ಉಳಿದ ನಗರಗಳ ಮಾತು ಹಾಗಿರಲಿ, ಒಂದು ಮುಂಬಯಿಯಲ್ಲಿ ೧೯೯೧ ರಲ್ಲಿ ೨೫೦ ರಷ್ಟು ಯಕ್ಷಗಾನ ಪ್ರಸಂಗಗಳ ಪ್ರದರ್ಶನಗಳು ನಡೆದವೆಂಬುದು ಗಮನೀಯವಾಗಿದೆ. ಪದವೀಧರ ಯಕ್ಷಗಾನ ಸಮಿತಿಯವರು ಪ್ರೊ. ಅಮೃತ ಸೋಮೇಶ್ವರ ಅವರ ಅಧ್ಯಕ್ಷತೆಯಲ್ಲಿ ೫ ನೆಯ ಯಕ್ಷಗಾನ ಸಾಹಿತ್ಯ ಸಮ್ಮೇಳನವನ್ನು ನಾಲ್ಕು ದಿನ ನಡೆಸಿದ್ದು ಇಲ್ಲಿಯ ಯಕ್ಷಗಾನಗಳ ಸುಗ್ಗಿಯಲ್ಲಿ ರಸದೂಟ ನೀಡಿದಂತಾಗಿತ್ತು. ಸುಪ್ರಸಿದ್ಧ ಯಕ್ಷಗಾನ ಕಲಾವಿದ ಶ್ರೀ ಶಂಭು ಹೆಗ್ಡೆಯವರು ಈ ಸಮ್ಮೇಳನವನ್ನು ಉದ್ಘಾಟಿಸಿದರು. ಅನೇಕ ವಿದ್ವಾಂಸರು ಯಕ್ಷಗಾನ ಕಲೆಯ ವಿವಿಧ ಅಂಶಗಳನ್ನು ಕುರಿತು ಪ್ರಬಂಧಗಳನ್ನು ಮಂಡಿಸಿದರು.

ಈ ವರ್ಷ ಕರ್ನಾಟಕದ ಸಂಸ್ಕೃತಿ ಮತ್ತು ಯುವಜನ ಸೇವಾ ಸಚಿವ ಶ್ರೀ ಎಸ್. ರಮೇಶ ಅವರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತ ಡಾ. ಓ. ಎಸ್. ರಾಮಾನುಜಮ್ ಅವರು ಮುಂಬಯಿಗೆ ಬಂದು ಹೊರನಾಡ ಕನ್ನಡಿಗರ ಹಾಗು ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಪ್ರಸಾರ ಕುರಿತು ಸ್ಥಳೀಯ ಕಾರ್ಯಕರ್ತರೊಡನೆ ಚರ್ಚೆ ನಡೆಸಿದ್ದೊಂದು ವಿಶೇಷವಾದರೂ ಕರ್ನಾಟಕದಲ್ಲಿ ಹೊಸದಾಗಿ ರಚನೆಗೊಂಡ ಯಾವ ಅಕೆಡೆಮಿಯಲ್ಲೂ ಬೆಂಗಳೂರಿನ ಸಮ-ಸಮ ಕನ್ನಡ ಜನವಸತಿಯುಳ್ಳ ಮುಂಬಯಿಗೆ ಯಾವ ಪ್ರಾತಿನಿಧ್ಯವೂ ಇಲ್ಲವೆಂಬ ಕೊರಗು ಇಲ್ಲಿಯ ಕನ್ನಡಿಗರಲ್ಲಿ ಇದ್ದೇ ಇದೆ. ಈ ಸಲ ಭಾಷಾ ಅಲ್ಪ ಸಂಖ್ಯಾತರ ಕಮಿಷನರ್ ಶ್ರೀ ಕೆ. ಆರ್. ಸಯ್ಯದ್ ಅವರು ಮುಂಬಯಿ ಮತ್ತಿತರ ಹೊರನಾಡ ಪಟ್ಟಣಗಳಿಗೆ ಭೆಟ್ಟಿಯಿತ್ತು ಕನ್ನಡ ಭಾಷೆಯ ಹಿತರಕ್ಷಣೆಯ ಬಗ್ಗೆ ಸಂಘ-ಸಂಸ್ಥೆಗಳ ಪ್ರತಿನಿಧಿಗಳೊಡನೆ ಚರ್ಚಿಸಿದರು. ಕೆನಡಾದ ಇಂಟರ್‌ನ್ಯಾಷನಲ್ ಕರ್ನಾಟಕ ಕ್ಲಬ್ ಕಾರ್ಯದರ್ಶಿ ಡಾ. ಚಂದ್ರಕಾಂತ ಬೀಳಗಿ ಮುಂಬಯಿ ಕರ್ನಾಟಕ ಸಂಘಕ್ಕೆ ಭೆಟ್ಟಿ ನೀಡಿ ಚರ್ಚಿಸಿದರು. ಮೈಸೂರು ವಿ.ವಿ. ಯ ಜಾನಪದ ವಿಭಾಗ ಪ್ರಮುಖರೂ ಪ್ರಸಿದ್ಧ ಜಾನಪದ ವಿದ್ವಾಂಸರೂ ಆದ ಡಾ. ಜೀ.ಶಂ.ಪ. ಅವರು ಮುಂಬಯಿ ವಿ. ವಿ. ಕನ್ನಡ ವಿಭಾಗ ಹಾಗೂ ಕರ್ನಾಟಕ ಸಂಘದಲ್ಲಿ ನಡೆದ ಲೇಖಕರ ಕೂಟಗಳಲ್ಲಿ ಕರ್ನಾಟಕ ಸರಕಾರವು ಹೊರನಾಡ ಸಾಹಿತಿ-ಕಲಾವಿದರನ್ನು ಮರೆಯದಂತೆ ನೋಡಿಕೊಳ್ಳುವ ಕಳಕಳಿ ತೋರಿಸಿದರು. ಅಂತೆಯೇ ಕಲಬುರ್ಗಿ ವಿ. ವಿ. ಕನ್ನಡ ವಿಭಾಗ ಪ್ರಮುಖ ಡಾ. ಎಂ. ಜಿ. ಬಿರಾದಾರ ಅವರೂ ಮುಂಬಯಿ ವಿ. ವಿ. ದಲ್ಲಿ ಏರ್ಪಡಿಸಿದ್ದ ಮಾಸ್ತಿ ಜನ್ಮಶತಾಬ್ದಿಯಲ್ಲಿ ಭಾಗವಹಿಸಿ ಸ್ಥಳೀಯ ಸಂಘ-ಸಂಸ್ಥೆಗಳಿಗೆ ಭೆಟ್ಟಿಯಿತ್ತು ಒಳನಾಡ-ಹೊರನಾಡ ಸ್ನೇಹ-ಸಂಬಂಧಗಳನ್ನು ಕುರಿತು ಚರ್ಚಿಸಿದರು. ಜರ್ಮನಿಯ ಪ್ರೊ. ಹ್ಯಾನ್ಸ್ ಜರ್ಗನ್ ಫಿಂಡಿಸ್ ಮತ್ತು ಮಂಗಳೂರು ವಿ. ವಿ. ಕನ್ನಡ ವಿಭಾಗದ ಮುಖ್ಯಸ್ಥರಾದ ವಿವೇಕ ರೈ ಅವರೂ ಮುಂಬಯಿಯ ವಿ.ವಿ. ಕನ್ನಡ ವಿಭಾಗದಲ್ಲಿ ಅಂತರ್ ಸಾಂಸ್ಕೃತಿಕ ಅರ್ಥ ವಿವರಣೆಯ ಬಗ್ಗೆ ಚರ್ಚಿಸಿದರು.

## ಕನ್ನಡ ಪತ್ರಿಕೆಗಳು

ಮುಂಬಯಿಂದ ಪ್ರಕಟವಾಗುವ ಮೊಗವೀರ, ತಾಯಿನುಡಿ, ಬಂಟರವಾಣಿ, ಗೋಕುಲವಾಣಿ, ಪತ್ರಪುಷ್ಪ, ಅಕ್ಷಯ ಮಾಸಿಕಗಳಲ್ಲದೆ ಮೈಸೂರು ಅಸೋಸಿಯೇಶನ್‌ನವರ ನೇಸರು, ಕರ್ನಾಟಕ ಸಂಘದ ಸಂಬಂಧ-ಮುಖ ಪತ್ರಿಕೆಗಳು ಒಳನಾಡ-ಹೊರನಾಡ ಸ್ನೇಹ-ಸಂಬಂಧ ಕಾಪಾಡಿಕೊಳ್ಳಲು ನೆರವಾಗುತ್ತಿವೆ. ಅಂತೆಯೇ 'ದೆಹಲಿ ಕನ್ನಡಿಗ' ಕನ್ನಡದ ಕಹಳೆಯೂದಿ ಸರಕಾರವನ್ನೂ ಜನತೆಯನ್ನೂ ಎಚ್ಚರಿಸುತ್ತಲೇ ಇರುತ್ತದೆ. ಮದ್ರಾಸದ 'ಲಹರಿ' ಹತ್ತು ವರ್ಷ ದಾಟಿ ಹನ್ನೊಂದರಲ್ಲಿ ಕಾಲಿಟ್ಟಿದೆ. ಹೈದ್ರಾಬಾದ್‌ನ 'ಪರಿಚಯ' ದಂತೆ ದೆಹಲಿ

ಕರ್ನಾಟಕ ಸಂಘದ 'ಅಭಿಮತ'ವೂ ಕನ್ನಡದ ಕೈಂಕರ್ಯ ಮಾಡುತ್ತಿದೆ. 'ಅಮೇರಿಕನ್ನಡ' ದೆಹಲಿಯ ಪರಿಸರದಲ್ಲಿ ಅಮೇರಿಕನ್ನಡಿಗರ ದಾರಿದೀಪವಾಗಿದೆ.

ನಮ್ಮ ರಾಷ್ಟ್ರದ ರಾಜಧಾನಿಯಲ್ಲಿ ಎದ್ದು ಕಾಣುವ ಕನ್ನಡಿಗರ ಸಂಸ್ಥೆಯೆಂದರೆ ರಾಮಕೃಷ್ಣ ಪುರಂನಲ್ಲಿರುವ ದೆಹಲಿ ಕರ್ನಾಟಕ ಸಂಘ. ಕರೋಲಬಾಗದ ಕನ್ನಡ ಭಾರತಿ, ಜನಕಪುರಿಯ ಕನ್ನಡ ಕೂಟ, ಕೊಡವರ ಸಮಾಜ, ಜೆ. ಎಸ್. ವಿ. ವಿ. ದ ಕನ್ನಡ ಬಳಗಗಳೂ ಕನ್ನಡ ಸಾಹಿತ್ಯ ಸಂಸ್ಕೃತಿಯ ಕೆಲಸದಲ್ಲಿ ತೊಡಗಿವೆ. ಇವೆಲ್ಲಕ್ಕಿಂತಲೂ ಸದಾ ಸುದ್ದಿಯಲ್ಲಿರುವ 'ದೆಹಲಿ ಕನ್ನಡಿಗ'ನನ್ನು ನಾವು ಮರೆಯುವಂತಿಲ್ಲ. ಭವ್ಯ ಸ್ಥಾವರಾಸ್ತಿಯುಳ್ಳ ದೆಹಲಿ ಕರ್ನಾಟಕ ಸಂಘದ್ದು ಒಂದು ತೂಕವಾದರೆ ಜಂಗಮಸ್ವರೂಪೀ ಒಂಟಿಗೈ ಸಂಸ್ಥೆಯೆನಿಸಿದ ಶ್ರೀ ಭ. ಸಾಮಗರ 'ದೆಹಲಿ ಕನ್ನಡಿಗ'ನದು ಹತ್ತೂತ್ತು ತೂಕವೆನ್ನುವಂತೆ ಒಂದಿಲ್ಲೊಂದು ಕನ್ನಡ ಕಾರ್ಯಕ್ರಮಗಳು ನಡೆದೇ ಇರುತ್ತವೆ. ೧೯೯೧ ರಲ್ಲಿ 'ದೆಹಲಿ ಕನ್ನಡಿಗ' ಪರವಾಗಿ ದೆಹಲಿ ಕನ್ನಡಿಗರ ೮ನೆಯ ಸಮ್ಮೇಳನವು ಡಾ. ದೇ. ಜ. ಗೌ. ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಡಾ. ಸಿದ್ಧಯ್ಯ ಪುರಾಣಿಕ ಅವರು ಸಮ್ಮೇಳನವನ್ನು ಉದ್ಘಾಟಿಸಿದರು. ಈ ಸಲ ಡಾ. ಶ್ರೀನಿವಾಸ ಹಾವನೂರ ಅವರಿಗೆ 'ಶ್ರೇಷ್ಠ ಹೊರನಾಡ ಕನ್ನಡಿಗ' ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ದೆಹಲಿ ಕನ್ನಡಿಗ ಪರವಾಗಿ ಮಾಸ್ತಿ ಜನ್ಮ ಶತಾಬ್ದಿ, ಕನ್ನಡ ಶಿಕ್ಷಣದ ಬಗ್ಗೆ ವಿಚಾರ ಸಂಕಿರಣ, ಸಾಂಗಲಿಯಲ್ಲಿ ಕನ್ನಡ ಪ್ರಚಾರ ಸಭೆ ಇತ್ಯಾದಿ ಕಾರ್ಯಕ್ರಮಗಳನ್ನು ನಡೆಸಲಾಯಿತಲ್ಲದೆ ೧೯೯೧ ರಿಂದ ೨೦೦೦ದ ವರೆಗೆ ಹೊರನಾಡ ಕನ್ನಡ ಪ್ರಚಾರ ದಶಕವನ್ನಾಚರಿಸಬೇಕೆಂದೂ ನಿರ್ಣಯಿಸಲಾಯಿತು. ದೆಹಲಿಯ ಲಜಪತ ನಗರದಲ್ಲಿರುವ ವಿಶ್ವಕನ್ನಡ ಕೇಂದ್ರವು ದೆಹಲಿ ಕನ್ನಡ ವಿದ್ಯಾಸಂಸ್ಥೆಯ ಅಧ್ಯಕ್ಷ ಎಂ. ವೀರಪ್ಪ ಅವರ ಹಿರಿತನದಲ್ಲಿ ಸಾಂಸ್ಕೃತಿಕ ಸಂಧ್ಯಾ ಕಾರ್ಯಕ್ರಮವನ್ನು ಏರ್ಪಡಿಸಿತ್ತು. ದೆಹಲಿ ಕನ್ನಡ ಲೇಡೀಸ್ ಕ್ಲಬ್ ಪ್ರತಿ ತಿಂಗಳು ಸಭೆ ಸೇರಿ ಸಾಂಸ್ಕೃತಿಕ ಚರ್ಚೆಗಳನ್ನು ನಡೆಸುತ್ತಿದೆ.

ಮದ್ರಾಸ್‌ನ ಪ್ರಮುಖ ಸಾಂಸ್ಕೃತಿಕ ಸಂಸ್ಥೆಯಲ್ಲೊಂದಾದ 'ಕನ್ನಡ ಬಳಗ' ಈ ವರ್ಷ ಕರ್ನಾಟಕದ ಸಂಸ್ಕೃತಿ ಮಂತ್ರಿ ಶ್ರೀ ಎಸ್. ರಮೇಶ್ ಅವರ ಹಿರಿತನದಲ್ಲಿ ಹಾಗು ಕನ್ನಡ ಸಂಸ್ಕೃತಿ ಇಲಾಖೆಯ ಕಮಿಷನರ್ ಡಾ. ಓ. ಎಸ್. ರಾಮಾನುಜಮ್ ಅವರ ಅಧ್ಯಕ್ಷತೆಯಲ್ಲಿ ರಜತ ಮಹೋತ್ಸವ ಆಚರಿಸಿತು. ಅದರಂತೆಯೇ ಮದರಾಸಿನ 'ಲಹರಿ' ಪತ್ರಿಕೆಯ ದಶಮಾನೋತ್ಸವದ ಅಂಗವಾಗಿ ಹಾಸ್ಯ ಕವಿಗೋಷ್ಠಿಯೂ ನಡೆಯಿತು. ಕಾಸರಗೋಡಿನ ಕನ್ನಡ ಮಹಿಳಾ ಸಂಘವು ಈ ಸಲ ಯುವಕ ಲೇಖಕ–ಲೇಖಕಿಯರಿಗಾಗಿ ಡಾ. ಶ್ರೀ ಕೃಷ್ಣ ಭಟ್ಟ ಅವರ ಅಧ್ಯಕ್ಷತೆಯಲ್ಲಿ ಸಾಹಿತ್ಯ ರಚನಾ ಶಿಬಿರವನ್ನು ಸಂಘಟಿಸಿತು. ಪುಣೆಯಲ್ಲಿರುವ

ಮಹಾರಾಷ್ಟ್ರ ಪಠ್ಯಪುಸ್ತಕ ಸಂಸ್ಥೆಯ ಕನ್ನಡ ವಿಭಾಗದ ಪರವಾಗಿ ಶಿಕ್ಷಕ-ಲೇಖಕರ ಕಾರ್ಯಾಗಾರವೊಂದು ನಡೆಯಿತು.

ಪುಣೆಯ ಕರ್ನಾಟಕ ಸಂಘವು ಕರ್ನಾಟಕದ ಮುಖ್ಯಮಂತ್ರಿ ಶ್ರೀ ಎಸ್. ಬಂಗಾರಪ್ಪ ಅವರನ್ನು ಕರೆಸಿ ಸಂಭ್ರಮದಿಂದ ತನ್ನ ರಜತ ಮಹೋತ್ಸವ ಆಚರಿಸಿತು. ಪುಣೆಯ ಮರಾಠಿ-ಕನ್ನಡ ಸ್ನೇಹವರ್ಧನ ಕೇಂದ್ರವು ಕನ್ನಡೇತರರಿಗೆ ಕನ್ನಡ ಕಲಿಸುವ ವರ್ಗಗಳನ್ನು ನಡೆಸುತ್ತಿದ್ದು ವಚನಸಾಹಿತ್ಯ ಪ್ರಸಾರದ ದೃಷ್ಟಿಯಿಂದ ಡಾ. ಪ್ರಭುಶಂಕರ ಅವರು ಸಂಪಾದಿಸಿದ 'ನೂರೊಂದು ವಚನಗಳು' ಗ್ರಂಥವನ್ನು ಶ್ರೀಮತಿ ಶಾಂತಾ ಶೇಳಕೆ ಅವರಿಂದ ಮರಾಠಿಯಲ್ಲಿ ಅನುವಾದಿಸಿಕೊಂಡು ಪುಸ್ತಕ ರೂಪದಲ್ಲೂ ಕ್ಯಾಸೆಟ್ ರೂಪದಲ್ಲೂ ಪ್ರಕಟಿಸುವ ಯೋಜನೆ ಹಾಕಿಕೊಂಡಿದೆ. ೧೯೯೧ರ ಮಾರ್ಚದಲ್ಲಿ ಈ ಕೇಂದ್ರಕ್ಕೆ ಮುಂಬಯಿ ಕರ್ನಾಟಕ ಸಂಘದವರಿಟ್ಟ ಹತ್ತು ಸಾವಿರ ರೂ. ಗಳ ವರದರಾಜ ಆದ್ಯಸ್ಮಾರಕ ಪುರಸ್ಕಾರ ದೊರೆತಿದ್ದು ಕೇಂದ್ರವು ಹೊಸ ಉತ್ಸಾಹದಿಂದ ಹೆಚ್ಚಿನ ಕಾರ್ಯ ಕೈಗೊಳ್ಳಲು ಸಹಾಯಕಾರಿಯಾಗಿದೆ. ಮಿರಜದ ತುಳುನಾಡ ಸಂಘದ ಪರವಾಗಿ ಸಾಂಗಲಿಯಲ್ಲಿ ಸಂಘದ ಮೊಟ್ಟ ಮೊದಲ ನಾಟಕೋತ್ಸವ ನಡೆಯಿತು. ಗುಜರಾತದ ವಾಡಿಯಲ್ಲಿರುವ ಕನ್ನಡ ಸಂಘವು ವಲ್ಸಾರ್ ಜಿಲ್ಲಾಧಿಕಾರಿ ಕನ್ನಡಿಗ ಶ್ರೀ ಜಿ. ರವಿ ಅವರ ಹಿರಿತನದಲ್ಲಿ ಸಡಗರದಿಂದ ತನ್ನ ೧೨ನೆಯ ವಾರ್ಷಿಕೋತ್ಸವವನ್ನು ನಡೆಸಿತು. ಇಂಥ ವಾರ್ಷಿಕೋತ್ಸವಗಳಲ್ಲಿ ಆಯಾ ಸ್ಥಳದ ಕನ್ನಡಿಗರು ಒಂದೆಡೆ ಸೇರಿ ಪರಸ್ಪರ ಸ್ನೇಹ-ಸಂವರ್ಧನ ಮಾಡಿಕೊಳ್ಳಲು ಅನುವು ದೊರೆಯುತ್ತದೆ.

## ಹೊರನಾಡ ಕನ್ನಡಿಗರಿಗೆ ಮಾನ-ಸಮ್ಮಾನಗಳು

೧೯೯೧ರ ಅರುಣೋದಯವಾದದ್ದೇ ಒಂದು ಆನಂದ ಲಹರಿಯೊಂದಿಗೆ. ಎಂಟು ಮಂದಿ ಕನ್ನಡಿಗರಿಗೆ ಮಹಾರಾಷ್ಟ್ರ ಸರಕಾರವು ತಲಾ ೧ ಲಕ್ಷ ರೂ. ಗಳ 'ಮಹಾರಾಷ್ಟ್ರ ಗೌರವ ಪುರಸ್ಕಾರ' ನೀಡಿ ಸನ್ಮಾನಿಸಿದ ಸಂತೋಷದ ವಾತಾವರಣದಲ್ಲಿ ಈ ವರ್ಷ ಕಣ್ತೆರೆಯಿತು. ಸಾಹಿತಿಗಳಾದ ವ್ಯಾಸರಾಯ ಬಲ್ಲಾಳ, ಯಶವಂತ ಚಿತ್ತಾಲ, ಜೆ. ಬಿ. ಮೊರಾಂಬರ್, ಉಮಾ ಕುಲಕರ್ಣಿ ಕಲಾವಿದರಾದ ಡಾ. ಕೆ. ಕೆ. ಹೆಬ್ಬಾರ್, ಬದರಿ ನಾರಾಯಣ, ಸಂಗೀತ ಶಿರೋಮಣಿ ಭೀಮಸೇನ ಜೋಶಿ ಮತ್ತು ವಿಂಗ್ ಕಮಾಂಡರ್ ಆರ್. ಎಸ್. ಬೆನಗಲ್ ಇವರೇ ಆ ಎಂಟು ಜನ ಕನ್ನಡಿಗರು. ಡಾ. ಗೋಕಾಕರಿಗೆ ದೊರೆತ ಜ್ಞಾನಪೀಠ ಪ್ರಶಸ್ತಿ, ಪಂ. ಭೀಮಸೇನ ಜೋಶಿ ಅವರಿಗೆ ದೊರೆತ ತಾನಸೇನ ಸಮ್ಮಾನ, ಸಂಸ್ಕೃತ ವಿದ್ವಾಂಸ ಡಾ. ಬಿ. ಎನ್. ಕೆ. ಶರ್ಮ ಅವರಿಗೆ ದೊರೆತ ರಾಷ್ಟ್ರಪತಿ ಪ್ರಶಸ್ತಿ, ಸದಾನಂದ ಸುವರ್ಣ ಅವರ 'ಕುಬಿ ಮತ್ತು ಇಯಾಲ' ಚಿತ್ರದ ಶ್ರೇಷ್ಠ ನಿರ್ದೇಶಕ

ಪ್ರಶಸ್ತಿ, ಪುಣೆಯ ನಿವೃತ್ತ ನ್ಯಾಯಾಧೀಶ ಕೆ. ಎಸ್. ಕುಲಕರ್ಣಿಯವರಿಗೆ ದೊರೆತ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳೆಲ್ಲ ಈ ವರ್ಷ ಪ್ರಕಟಗೊಂಡ ಹೊರನಾಡ ಕನ್ನಡಿಗರ ಪ್ರತಿಭಾ ವಿಶೇಷದ ಪ್ರತೀಕಗಳೇ ಆಗಿವೆ.

# ರಾಜಕಾರಣ

ಎಂ. ಜಿ. ಕೃಷ್ಣನ್

ಕರ್ನಾಟಕ ರಾಜ್ಯದ ರಾಜಕಾರಣವನ್ನು ಕುರಿತಂತೆ ಸ್ಥೂಲವಾಗಿ ಎರಡು ಭಾಗಗಳಲ್ಲಿ ಚರ್ಚೆಯನ್ನು ಬೆಳೆಸಬಹುದು.

ಒಂದನೆಯ ಭಾಗದಲ್ಲಿ ಭಾರತದ ರಾಜಕೀಯ ವ್ಯವಸ್ಥೆಯ ಹಿನ್ನೆಲೆಯಲ್ಲಿ ರಾಜ್ಯಗಳ ಸಂಬಂಧವನ್ನು ಕುರಿತ ಹಾಗೆ ಒಂದು ತಾತ್ವಿಕ ಜಿಜ್ಞಾಸೆಯನ್ನು ಮಾಡಲಾಗುತ್ತದೆ. ಈ ಭಾಗದಲ್ಲಿ ರಾಜ್ಯ–ಕೇಂದ್ರಗಳ ಸಂಬಂಧ: ಕರ್ನಾಟಕದಲ್ಲಿ 1991 ರ ಆಡಳಿತ ಸ್ವರೂಪವನ್ನು ಕುರಿತ ತಾತ್ವಿಕ ನೋಟ ಸಂಕ್ಷಿಪ್ತವಾಗಿ ಇರುತ್ತದೆ.

ಎರಡನೇ ಭಾಗದಲ್ಲಿ 1991 ರಲ್ಲಿ ಕರ್ನಾಟಕದ ಸರ್ಕಾರದ ಸಾಮಾಜಿಕ ಯೋಜನೆಗಳನ್ನು ಕುರಿತ ಚರ್ಚೆಯು ಇರುತ್ತದೆ.

## ಭಾಗ ಒಂದು

ಭಾರತದ ರಾಜಕೀಯ ವ್ಯವಸ್ಥೆಯ ವೈಶಿಷ್ಟ್ಯವು ಸ್ವಾತಂತ್ರ್ಯ ಬಂದಾಗಿನಿಂದಲೂ ತಮ್ಮನ್ನು ಕಾಪಾಡುವ, ರಕ್ಷಿಸುವ–'ಅಸಾಮಾನ್ಯ' ಎಂದು ತಿಳಿದ ವ್ಯಕ್ತಿಗಳನ್ನೇ ಅವಲಂಬಿಸಿದೆ. ಪ್ರಜೆಗಳ ಮನೋಭಾವದಲ್ಲಿ ಈ ಅಸಾಮಾನ್ಯ ನಾಯಕನ ಕಲ್ಪನೆ ಬಲವಾಗಿ ಬೇರೂರಿದೆ. 'ಮಹಾತ್ಮಾ' 'ಪಂಡಿತ' ಎಂದು ಕರೆಯಲಾಗಿರುವ ವಿಶೇಷಣಗಳು ವಾಸ್ತವವಾಗಿ ಜನರ ಈ ನಂಬಿಕೆಯನ್ನೇ ಸೂಚಿಸುತ್ತವೆ. ಹೀಗಾಗಿ ಸಂಸದೀಯ ವ್ಯವಸ್ಥೆಯ ಎಲ್ಲಾ ಉದ್ದೇಶ ಮತ್ತು ಆಶಯಗಳೂ ಈ ಹಿನ್ನೆಲೆಯಲ್ಲೇ ನಡೆದುಕೊಂಡು ಬಂದಿವೆ.

ಇಪ್ಪತ್ತನೇ ಶತಮಾನದ ಕೊನೆಯ ಘಟ್ಟಗಳಲ್ಲಿ ಈ ಭಾವನಾತ್ಮಕ ಸಂಬಂಧದ ಸ್ವರೂಪ ಬದಲಾಗುತ್ತ ಬಂದಿದೆ. ರಾಜ್ಯ ಮತ್ತು ಕೇಂದ್ರಗಳ ನಡುವಣ ಸಂಬಂಧದಲ್ಲಿ ಒಂದು ಹೊಸ ಸ್ವರೂಪ ಮೂಡುವ ಹವಣಿಕೆಯಲ್ಲಿ ರಾಜಕಾರಣದ ಸ್ಥಿತಿಗತಿಗಳು ಇಂದು ಗೋಚರಿಸುತ್ತಿವೆ. ಇದು ಭಾರತದ ರಾಜಕಾರಣದ ಮುಖ್ಯ ಸ್ವರೂಪವಾಗಿ ಈಗ ತೋರುತ್ತಿದೆ.

ಪ್ರಸ್ತುತ ಕರ್ನಾಟಕದ 1991 ರ ರಾಜಕಾರಣದ ಚರ್ಚೆ ಮೇಲಿನ

ಬೆಳವಣಿಗೆಗಳ ಹಿನ್ನೆಲೆಯಲ್ಲೇ ಸಾಗುತ್ತದೆ. ಜಾಗತಿಕ ಬದಲಾವಣೆಗಳು, ಸಮಾಜವಾದೀ ರಾಷ್ಟ್ರಗಳ ಕುಸಿತ, ಪ್ರತಿಗಾಮೀ ಆರ್ಥಿಕ ಮೌಲ್ಯಗಳ ಪುನರುತ್ಥಾನ, ವಿವಿಧ ರಾಜ್ಯಗಳಲ್ಲಿ ವ್ಯಾಪಕವಾಗಿರುವ ಭಯೋತ್ಪಾದಕತೆ, – ಒಟ್ಟಾರೆ ಸಂವಿಧಾನದ ವೈಪರೀತ್ಯವಾದ ಫೆಡರಲ್ ವ್ಯವಸ್ಥೆ ರಾಜ್ಯಗಳ ರಾಜಕಾರಣವನ್ನು ಅಷ್ಟರಮಟ್ಟಿಗೆ ಅಮುಖ್ಯವಾಗಿಸಿಬಿಟ್ಟದ್ದವು. ಪಂಜಾಬು ಮತ್ತು ಕಾಶ್ಮೀರಗಳಲ್ಲಿ ಆಡಳಿತಾತ್ಮಕ ಸ್ವರೂಪವನ್ನು ಪುನಾರಚಿಸುವ ಇತ್ತೀಚಿನ ಪ್ರಯತ್ನಗಳು ರಾಜ್ಯ–ಕೇಂದ್ರ ಸಂಬಂಧದ ಹೊಸ ಚಟುವಟಿಕೆಯನ್ನು ಸೂಚಿಸುತ್ತದೆ.

ಕರ್ನಾಟಕದ ರಾಜಕಾರಣದಲ್ಲಿ ಪ್ರಮುಖ ಚಟುವಟಿಕೆ 1991 ರಲ್ಲಿ ಆಡಳಿತ ವಿಧಾನಕ್ಕೇ ಸಂಬಂಧಪಟ್ಟದ್ದಾಗಿದೆ. ಅಧಿಕಾರಶಾಹಿಗಳ ಬದಲಾವಣೆ, ಬಡ್ತಿ; ಮಂತ್ರಿಮಂಡಲ ವಿಸ್ತರಣೆ, ಕಾವೇರಿ ಜಲವಿವಾದದ ಸಂದರ್ಭ ಜಟಿಲಗೊಂಡ ಪರಿಸ್ಥಿತಿ ಇವೆಲ್ಲವೂ ರಾಜ್ಯ ರಾಜಕಾರಣದ ಸಂದರ್ಭದಲ್ಲಿ ನಡೆದ ಮುಖ್ಯ ಘಟನೆಗಳಾಗಿವೆ. ಮೇ ತಿಂಗಳು ಸಂಭವಿಸಿದ ಭಾರತದ ಅಂದಿನ ಪ್ರಧಾನಿ ರಾಜೀವ ಗಾಂಧಿಯವರ ಕ್ರೂರ ಹತ್ಯೆ ಭಾರತದ ರಾಜಕಾರಣದ ಅತ್ಯಂತ ದಾರುಣ ಘಟನೆಗಳಲ್ಲಿ ಒಂದು. ಅವರ ವೈಯುಕ್ತಿಕ ಶಕ್ತಿ, ಸಾಮರ್ಥ್ಯ ಮತ್ತು ಜನಪ್ರಿಯತೆಯಿಂದಾಗಿ ರಾಜ್ಯಗಳ ಆಡಳಿತ ಸಂದರ್ಭದಲ್ಲಿಯೂ ಪ್ರಮುಖವಾದ ಪ್ರಭಾವವಿದ್ದೇ ಇರುತ್ತಿತ್ತು. ಅವರ ಸಾವು ಒಂದು ರೀತಿಯಲ್ಲಿ ಕಾಂಗ್ರೆಸ್ ಪಕ್ಷದ ಶಕ್ತಿಯನ್ನು ಕುಗ್ಗಿಸಿತೆಂದೇ ಹೇಳಬೇಕು. ಆದರೆ ರಾಜ್ಯದ ಆಡಳಿತಕ್ಕೆ ಸಂಬಂಧಿಸಿದಂತೆ ಕೇಂದ್ರದ ಸ್ವರೂಪವೆಂಥದ್ದಿರಬೇಕು ಎನ್ನುವುದರ ಬಗ್ಗೆ ಹೊಸ ಯೋಚನಾ ವಿಧಾನ ಶುರುವಾಯಿತೆನ್ನಬಹುದು.

ಆಡಳಿತಾತ್ಮಕ ವಿಷಯಕ್ಕೆ ಸಂಬಂಧಿಸಿದಂತೆ ನಿರ್ಣಯಗಳನ್ನು ತೆಗೆದುಕೊಳ್ಳುವಲ್ಲಾಗಲೀ, ರಾಜ್ಯಕ್ಕೇ ಸಂಬಂಧಿಸಿದ ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದ ಅಂಶದಲ್ಲಾಗಲೀ ರಾಜ್ಯದ ನೆಲೆಯಲ್ಲೇ ಯೋಚಿಸುವಂತೆ ಆಗುವುದು, ರಾಜ್ಯಗಳ ಅಸ್ತಿತ್ವವನ್ನು ಮತ್ತೆ ದೊರಕಿಸಿಕೊಟ್ಟಂತಾಗುತ್ತದೆ. ಇಂಥ ಸಂಕ್ರಮಣಾವಸ್ಥೆಯಲ್ಲಿ ಈಗಿನ ರಾಜ್ಯಗಳ ರಾಜಕಾರಣವಿರುವುದರಿಂದ, ಸಂಕ್ರಮಣಾವಸ್ಥೆಯ ಅನೇಕ ಗೊಂದಲಗಳು, ಭಿನ್ನಾಭಿಪ್ರಾಯಗಳು, ವಿರೋಧ,– ಮುಂತಾದವುಗಳು ಹೆಚ್ಚುವುದು ಸಹಜ. ಆದರೆ ಆಡಳಿತಾತ್ಮಕ, ಶಾಸನೀಯ, ಮತ್ತು ಕಾರ್ಯ ನಿರ್ವಹಣಾತ್ಮಕವಾಗಿ, ಕೇಂದ್ರ ಮತ್ತು ರಾಜ್ಯಗಳ ನಡುವೆ ಸ್ಪಷ್ಟವಾದ ಮಿತಿಗಳನ್ನು ಹಾಕಿಕೊಳ್ಳುವುದು ಸಂಸಂದೀಯ ವ್ಯವಸ್ಥೆಯ ಮತ್ತು ಫೆಡರಲ್ ಪದ್ಧತಿಯ ಆರೋಗ್ಯಕರ ಬೆಳವಣಿಗೆಗೆ ಸಹಾಯವಾಗುತ್ತದೆ. ಈ ದೃಷ್ಟಿಯಿಂದ ಬಹುಶಃ ಹೊಸದಾಗಿ ರೂಪುಗೊಳ್ಳುತ್ತಿರುವ ಕೇಂದ್ರ, ರಾಜ್ಯ ಸಂಬಂಧಗಳು ಎಷ್ಟೇ ಗೊಂದಲ ಹುಟ್ಟಿಸಿದರೂ, ಇವೆಲ್ಲವೂ ಸಂಕ್ರಮಣಾವಸ್ಥೆಯ ಸ್ಥಿತಿಗಳೇ ಆಗಿವೆ ಎನ್ನಬಹುದು. ಇಂಥ ಗೊಂದಲದ ಸನ್ನಿವೇಶವನ್ನು ಕರ್ನಾಟಕದಲ್ಲಿ

1991 ರಲ್ಲಿಯ ಮೇಲೆ ಸೂಚಿಸಿದ ಹಲವಾರು ಘಟನೆಗಳಲ್ಲಿ ಗುರುತಿಸಬಹುದು.

## ಭಾಗ ಎರಡು

ಈ ಭಾಗದಲ್ಲಿ ರಾಜಕಾರಣ ಮತ್ತು ಆರ್ಥಿಕಾಭಿವೃದ್ಧಿಯನ್ನು ಕುರಿತಾದ ಚರ್ಚೆಯನ್ನು ಮಾಡಲಾಗಿದೆ.

ಸಾಮಾಜಿಕ ಬದಲಾವಣೆ, ಆರ್ಥಿಕ ಪ್ರಗತಿ ಮತ್ತು ಸಾಂಸ್ಕೃತಿಕ ಚಲನಶೀಲತೆ ರಾಜಕಾರಣದ ಪ್ರಮುಖ ಆಶಯಗಳೇ ಹೌದು. ಸಮಾಜವಾದೀ ರಾಷ್ಟ್ರಗಳ ಪ್ರಗತಿಪರ ಧೋರಣೆಗಳು ಪಶ್ಚಿಮದ ಪ್ರಜಾಸತ್ತೆಯ ಮೇಲೂ ಅಚ್ಚಳಿಯದ ಪ್ರಭಾವ ಬೀರಿ ತಮ್ಮ ನೀತಿ ನಿರೂಪಣೆಗಳನ್ನು ಬದಲಾಯಿಸಿಕೊಳ್ಳುವ ಪ್ರಯತ್ನ ಆರಂಭವಾಯಿತು. ಲಿಬರಲ್ ಆರ್ಥಿಕ ನೀತಿ ಪ್ರಗತಿಪರ ಧೋರಣೆಗಳನ್ನು ಹೊಂದುವಂತಾಯಿತು. ಭಾರತ ಮತ್ತು ಅದರ ರಾಜ್ಯಗಳೂ ಈ ಪರಿಧಿಯಲ್ಲೇ ಬರುತ್ತವೆ.

ಉತ್ತಮ ರಾಜಕಾರಣಿಗಳು, ಉತ್ತಮ ಆರ್ಥಿಕ ನೀತಿಯನ್ನು ರೂಪಿಸುತ್ತಾರೆ. ಮತ್ತು ಅಭಿವೃದ್ಧಿಪರ ಯೋಜನೆಗಳನ್ನು ಹಮ್ಮಿಕೊಳ್ಳುತ್ತಾರೆ. ಈ ದಿಕ್ಕಿನಲ್ಲಿ ಕರ್ನಾಟಕ ಸರ್ಕಾರ ಹಮ್ಮಿಕೊಂಡ 'ವಿಶ್ವ' 'ಅಕ್ಷಯ' ಮತ್ತು 'ಆಶ್ರಯ' ಹಾಗೂ 'ಶುಶ್ರೂಷ' ಯೋಜನೆಗಳು ಉತ್ತಮ ಉದ್ದೇಶವನ್ನು ಒಳಗೊಂಡಿದೆ.

ಸಣ್ಣ ಕೈಗಾರಿಕೆಗಳು– ಗುಡಿ ಕೈಗಾರಿಕೆಗಳ ಬೆಳವಣಿಗೆ ಭಾರತದಂತಹ ದೇಶದಲ್ಲಿ ಅತ್ಯಂತ ಮುಖ್ಯವಾದುದು ಬಂಡವಾಳ ಹೂಡಿಕೆ, ಕಚ್ಚಾ ಸಾಮಗ್ರಿಗಳನ್ನು ದೊರಕಿಸಿಕೊಳ್ಳುವುದು, ಮತ್ತು ತಯಾರಾದ ವಸ್ತುಗಳನ್ನು ಮಾರಾಟ ಮಾಡುವುದು 'ವಿಶ್ವ' ಕಾರ್ಯಕ್ರಮ. ಕರ್ನಾಟಕದ ಶ್ರೇಷ್ಠ ಇಂಜನಿಯರ್ ಆಡಳಿತಗಾರರಾಗಿದ್ದ ಸರ್. ಎಂ. ವಿಶ್ವೇಶ್ವರಯ್ಯನವರ ಹೆಸರಿನಲ್ಲಿ ರೂಪಿತಗೊಂಡಿರುವ ಅಬಿವೃದ್ಧಿ ಕಾರ್ಯಕ್ರಮ ಇದು. ಈ ಕಾರ್ಯಕ್ರಮದನ್ವಯ ಗ್ರಾಮೀಣ ಜನರ ಸಮಗ್ರ ವಿಕಾಸದ ಉದ್ದೇಶವನ್ನು ಕೈಗಾರಿಕಾ ಪ್ರಗತಿಯೊಂದಿಗೆ ಬೆಸೆಯಲಾಗಿದೆ. ಈ ಯೋಜನೆಯಲ್ಲಿ ತಾಂತ್ರಿಕಾಭಿವೃದ್ಧಿ, ಸಾಲ ಮಂಜೂರಾತಿ, ಕಚ್ಚಾ ಸಾಮಗ್ರಿ, ಎಲ್ಲರಿಗೂ ವರ್ಕ್‌ಶೆಡ್‌ಗಳು, ಅಗತ್ಯ ಉಪಕರಣಗಳು, ವಸ್ತುವಿನ್ಯಾಸ, ಗುಣ ನಿಯಂತ್ರಣ ಮತ್ತು ಮಾರುಕಟ್ಟೆಯ ಬೆಂಬಲ ಇವೆಲ್ಲಕ್ಕಿಂತ ಮಿಗಿಲಾಗಿ ಗ್ರಾಮೀಣ ಜನರು ನಗರಗಳತ್ತ ವಲಸೆಹೋಗುವುದನ್ನು ನಿಯಂತ್ರಿಸುವುದು.

ನಮ್ಮಲ್ಲಿ ದೊರೆತಿರುವ ಅಂಕಿ ಅಂಶಗಳ ಪ್ರಕಾರ (ಅಂಕಿ ಅಂಶಗಳ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಬೆಂಗಳೂರು) ಒಂದು ವರ್ಷದ ಅವಧಿಯಲ್ಲಿ 1084 ಹಳ್ಳಿಗಳನ್ನು ವಿಶ್ವ ಯೋಜನೆಯ ವ್ಯಾಪ್ತಿಗೆ ತರಲಾಗಿದೆ, ಹಾಗೆಯೇ ಈ ಹಳ್ಳಿಗಳಲ್ಲಿಯ ಸುಮಾರು 26,547 ಫಲಾನುಭವಿಗಳನ್ನು

ಗುರುತಿಸಲಾಗಿದೆ. ತಮ್ಮದೇ ಆದ ಸ್ವಯಂ ಉದ್ಯೋಗ ಸ್ಥಾಪಿಸಲು 9234 ಜನರಿಗೆ ತರಪೇತಿ ನೀಡಲಾಗಿದೆ. ಮತ್ತು ಈಗಾಗಲೇ 17,313 ಸಂಸ್ಥೆಗಳು ಉತ್ಪಾದನೆಯನ್ನು ಆರಂಭಿಸಿದ್ದಾರೆ – ಸುಮಾರು ರೂ. 900 ಲಕ್ಷ ಮೌಲ್ಯದ ಉತ್ಪಾದನೆಯಾಗಿ ರೂ. 749 ಲಕ್ಷ ಮೌಲ್ಯದ ಮಾರಾಟವಾಗಿದೆ.

'ವಿಶ್ವ' ಕಾರ್ಯಕ್ರಮ 2ನೇ ಅಕ್ಟೋಬರ್ 1991 ರಂದು ಆರಂಭಗೊಂಡರೂ, ಮೇಲಿನ ಅಂಕಿ ಅಂಶಗಳ ಪ್ರಕಾರ ಅದ್ಭುತ ಸಾಧನೆಯನ್ನೇ ಕಂಡಿದೆ. ಆದರೂ ಒಂದು ವರ್ಷದ ಅವಧಿಯಲ್ಲೇ ಯಾವ ಯೋಜನೆಯ ಯಶಸ್ಸನ್ನೂ ಅಳೆಯಲಾಗುದು. ಕಾಲಾನುಕ್ರಮೇಣ ಈ ಯೋಜನೆಯ ಯಶಸ್ಸು ವೇದ್ಯವಾಗುತ್ತದೆ.

ಕರ್ನಾಟಕ ಸರ್ಕಾರ ಶ್ರೀ ಬಂಗಾರಪ್ಪನವರ ನೇತೃತ್ವದಲ್ಲಿ ನಿಯೋಜಿಸಿರುವ ಮತ್ತೊಂದು ಪ್ರಮುಖ ಕಾರ್ಯಕ್ರಮವೆಂದರೆ 'ಆಶ್ರಯ'. ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿಯ ವಸತಿಹೀನರಿಗೆ ಉಚಿತ ನಿವೇಶನ, ಜೊತೆಗೆ ಸಣ್ಣ ಮನೆಗಳನ್ನು ಕಟ್ಟಿಸಿ ವಸತಿಹೀನರಿಗೆ ನೀಡುವುದು ನಾಡಿನ ಎಲ್ಲರಿಗೂ ವಸತಿ ಕಲ್ಪಿಸುವ ಉದ್ದೇಶವಿಲ್ಲದಿದ್ದರೂ, ತೀರ ಹಿಂದುಳಿದಿರುವವರಿಗೆ, ನಿರ್ಗತಿಕರಿಗೆ, ಕೊಳೆಗೇರಿಗಳಲ್ಲಿ ವಾಸಿಸುವರಿಗೆ ಮತ್ತು ಬಡತನದ ರೇಖೆಯ ಕೆಳಗಿರುವವರಿಗೆ ವಸತಿ ಕಲ್ಪಿಸುವ ಉದ್ದೇಶವನ್ನು 'ಆಶ್ರಯ' ಹಮ್ಮಿಕೊಂಡಿದೆ. ಕರ್ನಾಟಕ ಗೃಹ ನಿರ್ಮಾಣ ಮಂಡಳಿಗೆ ಈ ಜವಾಬ್ದಾರಿಯನ್ನು ವಹಿಸಲಾಗಿದೆ. ಈಗ ದೊರಕಿರುವ ಅಂಕಿ–ಅಂಶಗಳ ಪ್ರಕಾರ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮನೆಗಳನ್ನು, ಕೋಲಾರ ಜಿಲ್ಲೆಯಲ್ಲಿ 14,617 ಮನೆಗಳನ್ನು, ತುಮಕೂರು ಜಿಲ್ಲೆಯಲ್ಲಿ 11,423 ಮನೆಗಳನ್ನು ಕಟ್ಟಲು ನಿಯೋಜಿಸಲಾಗಿದ್ದು ಇವುಗಳ ಒಟ್ಟು ವೆಚ್ಚ ರೂ. 60.13 ಕೋಟಿ. 'ಆಶ್ರಯ' ಎಲ್ಲ ಪ್ರದೇಶಗಳಲ್ಲಿ ಯಶಸ್ವಿಯಾಗಿ ಜಾರಿಗೆ ಬಂದರೆ ಬಹುಶಃ ಭಾರತ ದೇಶದ ಯಾವುದೇ ರಾಜ್ಯಕ್ಕಿಂತ ಕರ್ನಾಟಕದ ವಸತಿ ವ್ಯವಸ್ಥೆ ಅತ್ಯುತ್ತಮವಾಗುವುದೇನೋ?

ಇದರ ಜೊತೆಗೆ 'ಸುಶ್ರುತ' ಸಾಮಾನ್ಯನ ಆರೋಗ್ಯ ಸುಧಾರಣೆಯತ್ತ ಮಹತ್ವದ ಹೆಜ್ಜೆ. ಈ ಯೋಜನೆಯಡಿ, ಸ್ಥಳೀಯ ಸಂಘ ಸಂಸ್ಥೆಗಳ ಸಹಕಾರದೊಡನೆ ಹಳ್ಳಿ ಹಳ್ಳಿಗಳಲ್ಲೂ ಮೆಡಿಕಲ್ ಕ್ಯಾಂಪ್‌ಗಳನ್ನು ಸಂಯೋಜಿಸಿ, ಸಂಪೂರ್ಣ ಚೆಕ್–ಅಪ್ ಮಾಡುವುದು. ಈಗಾಗಲೇ 3259 ಕ್ಯಾಂಪ್‌ಗಳನ್ನು ಸಂಯೋಜಿಸಿ, ಸುಮಾರು 1,18,915 ಜನರು ಸಂಪೂರ್ಣ ತಪಾಸಣೆಗೊಳಗಾಗಿ, ಸುಶ್ರುತ ಯೋಜನೆಯ ಫಲಾನುಭವಿಗಳಾಗಿದ್ದಾರೆ. ಈ ಯೋಜನೆಗೆ ಸರ್ಕಾರ ಸದ್ಯಕ್ಕೆ ಸುಮಾರು ರೂ. 1 ಕೋಟಿಯನ್ನು ತೆಗೆದಿರಿಸಲಾಗಿದೆ.

ಕರ್ನಾಟಕ ಸರ್ಕಾರ ಹಮ್ಮಿಕೊಂಡಿರುವ ಇವೆಲ್ಲ ಅಭಿವೃದ್ಧಿ ಪರ ಯೋಜನೆಗಳು ಮತ್ತು ಕಲ್ಯಾಣ ಕಾರ್ಯಕ್ರಮಗಳು ಆದರ್ಶವಾದುವು. ಸಮಾಜದ

'ಅಂತಿಮ ವ್ಯಕ್ತಿ'ಯ ಅಭಿವೃದ್ಧಿ ಮಹಾತ್ಮಗಾಂಧಿಯ ಆದರ್ಶವಾಗಿತ್ತು. ಮೇಲ್ಕಂಡ ಎಲ್ಲ ಕಾರ್ಯಕ್ರಮಗಳು ಸಮಾಜದ ಅಂತಿಮ ವ್ಯಕ್ತಿಯ ಅಭಿವೃದ್ಧಿಯನ್ನೇ ಆಶಯವನ್ನಾಗಿ ಉದ್ದೇಶಿತಗೊಂಡಿದೆ. ಆ ಎಲ್ಲ ಯೋಜನೆಗಳು ಯಶಸ್ವಿಯಾಗಿ ಉದ್ದೇಶಿತ ವ್ಯಕ್ತಿಗಳನ್ನು ತಲುಪಬೇಕಾದರೆ ರಾಜಕಾರಣಿಗಳು ನಿಸ್ಪೃಹರೂ ಮತ್ತು ದಕ್ಷರೂ ಆಗಿರಬೇಕು ಎಂದು ಹೇಳಬೇಕಾಗಿಲ್ಲ. ಸಂಕ್ರಮಣ ಸ್ಥಿತಿಯಲ್ಲಿರುವ ಭಾರತದ ಪ್ರಜಾಸತ್ತೆ ನಮ್ಮೆಲ್ಲ ಸಮಸ್ಯೆಗಳಿಗೆ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳುಬಹುದೇನೋ?

* * *

## ನಮ್ಮನ್ನಗಲಿದ ರಾಜಕೀಯ ವ್ಯಕ್ತಿಗಳು; ಅರ್ಥಶಾಸ್ತ್ರಜ್ಞರು

ಕುಣಿಗಲ್‌ನ ಕಾಂಗ್ರೆಸ್ ಶಾಸಕ ತುಮಕೂರು ತಾಲ್ಲೂಕು ಕೋಂಡಾಪುರದ ಲಕ್ಕಪ್ಪ ನವೆಂಬರ್ 1991 ರಂದು ನಿಧನರಾದರು. 1902 ರಲ್ಲಿ ಹೆಬ್ಬೂರು ವಿಧಾನ ಸಭಾ ಕ್ಷೇತ್ರದಿಂದ ಆಯ್ಕೆಯಾದರು. ಪ್ರಜಾಸೋಶಿಯಲಿಸ್ಟ್ ಪಕ್ಷದ ಮೂಲಕ ರಾಜಕೀಯ ಪ್ರವೇಶ ಮಾಡಿದ ಲಕ್ಕಪ್ಪ 1967 ರಿಂದ ನಾಲ್ಕು ಬಾರಿ ಲೋಕ ಸಭೆಗೆ ಆಯ್ಕೆಯಾಗಿದ್ದರು. 1970 ರಲ್ಲಿ ಕಾಂಗ್ರೆಸ್ ಸೇರಿದ್ದ ಇವರು 1989 ರ ವಿಧಾನಸಭೆ ಚುನಾವಣೆಗೆ ಕುಣಿಗಲ್ ಕ್ಷೇತ್ರದಿಂದ ಆಯ್ಕೆಯಾಗಿದ್ದರು.

ಮಾಜಿ ಸಚಿವ ಲಿಂಗಾರೆಡ್ಡಿಯವರೂ ನವೆಂಬರ್ 1991 ರಂದು ನಿಧನರಾದರು. ಹಿರಿಯ ಸ್ವಾತಂತ್ರ ಹೋರಾಟಗಾರರಾದ ಲಿಂಗಾರೆಡ್ಡಿ ಕೋಲಾರದ ಕಾಂಗ್ರೆಸ್ ಮುಖಂಡರು. 1959–62 ರಲ್ಲಿ ಬಿ. ಡಿ. ಜತ್ತಿಯವರ ಸಂಪುಟದಲ್ಲಿ ಯೋಜನೆ ಅಭಿವೃದ್ಧಿ ಖಾತೆ ಉಪಮಂತ್ರಿಯಾಗಿದ್ದರು. 1964 ರಲ್ಲಿ ಲೋಕಸಭೆಗೆ ಆಯ್ಕೆಯಾಗಿದ್ದರು.

ಮಾಜಿ ಲೋಕಸಭಾ ಸದಸ್ಯರಾದ ಟಿ. ವಿ. ಚಂದ್ರಶೇಖರಪ್ಪ. ನವೆಂಬರ್ ತಿಂಗಳಲ್ಲಿ ನಿಧನರಾದರು. ಲೋಕಸಭೆಗೆ ಶಿವಮೊಗ್ಗಯಿಂದ ಎರಡು ಸಾರಿ, ದಾವಣಗೆರೆಯಿಂದ ಒಂದು ಬಾರಿ ಆಯ್ಕೆಯಾಗಿದ್ದರು. ಮಾಜಿ ಶಾಸಕ ಉಮರಬ್ಬ ಅವರೂ, ರೈತ ಸಂಘದ ಅಧ್ಯಕ್ಷರಾದ ರುದ್ರಪ್ಪನವರೂ ಇದೇ ವರ್ಷ ನಿಧನರಾದರು. ರೈತ ಸಂಘವನ್ನು ಒಂದು ಬಲವಾದ ಶಕ್ತಿಯನ್ನಾಗಿ ಮಾಡುವಲ್ಲಿ ರುದ್ರಪ್ಪನವರ ಪಾತ್ರವು ಗಮನಾರ್ಹವಾದದ್ದಾಗಿದೆ. ರೈತ ಸಂಘಕ್ಕೆ ರಾಜಕೀಯ ಶಕ್ತಿಯನ್ನು ಕೊಡುವಲ್ಲಿ ರುದ್ರಪ್ಪನವರ ಪಾಲು ಬಹಳ ಮಹತ್ವದ್ದಾಗಿದೆ.

ಖ್ಯಾತ ಅರ್ಥಶಾಸ್ತ್ರಜ್ಞ ವಿ. ಕೆ. ಆರ್. ವಿ. ರಾವ್ ಅವರು ಜುಲೈ ತಿಂಗಳಲ್ಲಿ ನಿಧನ ಹೊಂದಿದರು. ರಾಜಕಾರಣದಲ್ಲೂ ಗಮನಾರ್ಹವಾಗಿ ಕ್ರಿಯಾತ್ಮಕವಾಗಿ ಇದ್ದವರು ಇವರು. ಒಳ್ಳಾರಿ ಲೋಕ ಸಭೆಯಿಂದ ಎರಡು ಬಾರಿ ಸ್ಪರ್ಧಿಸಿದ್ದರು. ಕೇಂದ್ರದಲ್ಲಿ, ಶಿಕ್ಷಣ, ಸಾರಿಗೆ, ನೌಕೋದ್ಯಮ ಖಾತೆಯ ಸಚಿವರಾಗಿದ್ದರು.

## ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ–1991

(ಕರ್ನಾಟಕ ಸರ್ಕಾರ 1991ರಲ್ಲಿ ಕೊಟ್ಟ ರಾಜ್ಯೋತ್ಸವ ಪ್ರಶಸ್ತಿಯ ಪಟ್ಟಿಯನ್ನು ಕೆಳಗೆ ಕೊಡಲಾಗಿದೆ)

### ಸಾಹಿತ್ಯ

1. ಪ್ರೊ. ಎಸ್. ಆರ್. ಮಳಗಿ, ಬೆಂಗಳೂರು
2. ಪ್ರೊ. ಜಿ. ವೆಂಕಟಸುಬ್ಬಯ್ಯ, ಬೆಂಗಳೂರು
3. ಶ್ರೀ ಸಿ. ಕೆ. ನಾಗರಾಜರಾವ್, ಬೆಂಗಳೂರು
4. ಪ್ರೊ. ಕೀರ್ತಿನಾಥ ಕುರ್ತಕೋಟಿ, ಧಾರವಾಡ
5. ಡಾ. ಚೆನ್ನಣ್ಣ ವಾಲೀಕಾರ, ಗುಲ್ಬರ್ಗಾ
6. ಶ್ರೀ. ಮೊಹಸೀನ್ ಕಮಾಲ್, ಬೀದರ್
7. ಶ್ರೀ. ಸುದರ್ಶನ ದೇಸಾಯಿ, ಧಾರವಾಡ
8. ಶ್ರೀ. ಬಿ. ಆರ್. ವಾಡಪ್ಪಿ, ಧಾರವಾಡ
9. ಡಾ. ಜ. ಚ. ನಿ., ಕೋಲಾರ
10. ಶ್ರೀಮತಿ ಕಮಲಾ ಹಮ್ಮಿಗೆ ಬೆಂಗಳೂರು
11. ಡಾ. ಶ್ರೀಮತಿ ಜ್ಯೋತ್ಸ್ನಾ ಕಾಮತ್ ಬೆಂಗಳೂರು

### ಸಂಶೋಧನೆ

12. ಡಾ. ಎಂ. ಎಂ. ಕಲಬುರ್ಗಿ, ಧಾರವಾಡ
13. ಡಾ. ಮಲ್ಲಿಕಾರ್ಜುನ ಸಿಂದಗಿ, ಹುಬ್ಬಳ್ಳಿ

### ಸಂಸ್ಕೃತ

14. ವಿದ್ವಾನ್ ಪ್ರೊ. ಎನ್. ಟಿ. ಶ್ರೀನಿವಾಸ ಅಯ್ಯಂಗಾರ್, ಬೆಂಗಳೂರು
15. ಶ್ರೀ ಬಿ. ರಾಂಭಟ್, ಬೆಂಗಳೂರು

### ಸಂಗೀತ

16. ಶ್ರೀ ಎಂ. ಎಸ್. ಗೋಪಾಲಕೃಷ್ಣ, ಮೂಡಬಿದ್ರಿ
17. ಶ್ರೀಮತಿ ರಾಜಮ್ಮ ಎ. ಕೇಶವಮೂರ್ತಿ, ಬೆಂಗಳೂರು
18. ಶ್ರೀ ಆನೂರು ಎಸ್. ರಾಮಕೃಷ್ಣ, ಬೆಂಗಳೂರು
19. ಶ್ರೀ ಕೆ. ಎಸ್. ಹಡಪದ, ಗುಲ್ಬರ್ಗಾ

20. ಶ್ರೀ ಶರಣಪ್ಪ ಬಸಪ್ಪ ಪುಷ್ಪದತ್ತ (ಹೂಗಾರ), ಗುಲ್ಬರ್ಗಾ
21. ಪಂಡಿತ ಸಂಗಮೇಶ್ವರ ಗವಾಯಿ, ಶಿವಮೊಗ್ಗ
22. ಪಂಡಿತ ಶಿವರಾಜ ಗವಾಯಿ
23. ಶ್ರೀ ಬಸಪ್ಪ ಮಾನಪ್ಪ ಹೆರಕಲ್, ವಿಜಾಪೂರ
24. ಶ್ರೀ ಬಿ. ನಾರಾಯಣಪ್ಪ, ಸೊರಬ
25. ಶ್ರೀ ಮೈಸೂರು ನಾಗರಾಜು, ಮೈಸೂರು

ಸುಗಮ ಸಂಗೀತ

26. ಶ್ರೀಮತಿ ಬಿ. ಕೆ. ಸುಮಿತ್ರ, ಬೆಂಗಳೂರು
27. ಶ್ರೀಮತಿ ಕಸ್ತೂರಿ ಶಂಕರ್, ಬೆಂಗಳೂರು
28. ಶ್ರೀ ವಿಲ್ಫಿ ರೆಬಿಂಬಸ್, ಮಂಗಳೂರು
29. ಶ್ರೀ ಹೊ. ನಾ. ರಾಘವೇಂದ್ರ, ಹೊಸನಗರ
30. ಶ್ರೀಮತಿ ರಾಘವದೇವಿ, ಬೆಂಗಳೂರು
31. ಶೀಮತಿ ರತ್ನಮಾಲಾ ಪ್ರಕಾಶ್, ಬೆಂಗಳೂರು
32. ಶ್ರೀ ಲಕ್ಷ್ಮೀಕೇಶವ

ನೃತ್ಯ

33. ಶ್ರೀ ಯು. ಎಸ್. ಕೃಷ್ಣರಾವ್, ಮಂಗಳೂರು
34. ಶ್ರೀಮತಿ ಲೀಲಾ ರಾಮನಾಥನ್, ಬೆಂಗಳೂರು

ಪತ್ರಿಕೋದ್ಯಮ

35. ಶ್ರೀ ವಿ. ಎನ್. ಸುಬ್ಬರಾವ್, ಬೆಂಗಳೂರು
36. ಶ್ರೀ ಕೆ. ಎಸ್. ನಾರಾಯಣಸ್ವಾಮಿ, ಬೆಂಗಳೂರು
37. ಶ್ರೀ ಅಲೀ ಹಫೀಜ್, ಬೆಂಗಳೂರು
38. ಶ್ರೀ ಕೆ. ಎಲ್. ಅಣ್ಣೀಗೇರಿ, ಗದಗ
39. ಶ್ರೀ ಗೋಪಾಲಕೃಷ್ಣ, ಕೊಡಗು
40. ಶ್ರೀ ಕೆ. ರಾಜಾರಾವ್, ಬೆಂಗಳೂರು
41. ಶ್ರೀ ಎಂ. ಎಸ್. ಸಿದ್ದಪ್ಪ, ಮಂಡ್ಯ
42. ಶ್ರೀ ವಿ. ಬಿ. ಪಾಟೀಲ, ಬೀದರ್
43. ಶ್ರೀ ವಿಠಲ, ಮೈಸೂರು

ರಂಗಭೂಮಿ

44. ಶ್ರೀಮತಿ ಬಳ್ಳಾರಿ ಲಲಿತಮ್ಮ, ಬಳ್ಳಾರಿ
45. ಶ್ರೀ ಹೆಚ್. ದ್ಯಾವಪ್ಪ ಮಾಸ್ತರ, ಸೊರಬ
46. ಶ್ರೀಮತಿ ರಹಿಮಾನವ್ವ ಕಲ್ಮನಿ, ರಾಯಚೂರು

47. ಪ್ರೊ॥ ಬಿ. ಚಂದ್ರಶೇಖರ್, ಬೆಂಗಳೂರು
48. ಶ್ರೀ ಹುಗ್ಗಿ ಹುಚ್ಚಪ್ಪ ಮಾಸ್ತರ, ಸಾಗರ
49. ಶ್ರೀ ಅನಂತರಾವ್ ಜೋಷಿ, ಧಾರವಾಡ
50. ಶ್ರೀ ದತ್ತೋಬರಾವ್ ಒಡೆಯರ್, ಕುಣಿಗಲ್
51. ಶ್ರೀ ರಾಮರಾವ್ ಒಡೆಯರ್, ಸಿರಸಿ
52. ಶ್ರೀ ರಾಜಾನಂದ, ಮೈಸೂರು

## ಗಮಕ

53. ಶ್ರೀ ಕೆ. ವೆಂಕಟಸುಬ್ಬಯ್ಯ, ಮೈಸೂರು

## ಲಲಿತಕಲೆ

54. ಶ್ರೀ ಕೆ. ಶಾಮರಾಯ ಆಚಾರ್ಯ, ದಕ್ಷಿಣ ಕನ್ನಡ
55. ಶ್ರೀ ವಿ. ಜಿ. ಸಿಂಧೂರ, ಜಮಖಂಡಿ
56. ಶ್ರೀ ಎಸ್. ವಿ. ಪದ್ಮನಾಭಾಚಾರ್ಯ, ಶಿವಾರಪಟ್ಟಣ
57. ಶ್ರೀ ಮಾಯಾಚಾರ್ಯ, ಬಾಗಲಕೋಟೆ
58. ಶ್ರೀ ಷಣ್ಮುಖಪ್ಪ ಕಾಳಪ್ಪ ಯರಕದ, ಹುನಗುಂದ

## ಚಲನಚಿತ್ರ

59. ಶ್ರೀ ಸಿ. ವಿ. ಎಲ್. ಶಾಸ್ತ್ರಿ, ಬೆಂಗಳೂರು
60. ಶ್ರೀಮತಿ ಎಂ. ಪಂಡರಿಭಾಯಿ
61. ಶ್ರೀಮತಿ ಭಾರತಿ ವಿಷ್ಣುವರ್ಧನ್
62. ಶ್ರೀ ಸಿ. ವಿ. ಶಿವಶಂಕರ್, ಬೆಂಗಳೂರು

## ಜಾನಪದ ಮತ್ತು ಯಕ್ಷಗಾನ

63. ಶ್ರಿ ಚಿಟ್ಟಾಣಿರಾಮಚಂದ್ರ ಹೆಗಡೆ, ದಕ್ಷಿಣ ಕನ್ನಡ
64. ಶ್ರೀ ಪುಟ್ಟಮಲ್ಲೇಗೌಡ, ಚಾಮರಾಜನಗರ
65. ಶ್ರೀ ಮಿಜಾರು ಅಣ್ಣಪ್ಪ, ದಕ್ಷಿಣ ಕನ್ನಡ
66. ಶ್ರೀ ಟಿ. ಕೆಂಪಹನುಮಯ್ಯ, ಬೆಂಗಳೂರು
67. ಶ್ರೀ ಲಂಕಪ್ಪ ಭಜಂತ್ರಿ, ರಾಯಚೂರು
68. ಶ್ರೀ ಜಿ. ಮಹಾಂತೇಶ, ದಾವಣಗೆರೆ
69. ಶ್ರೀ ಜನವಳ್ಳಿ ಹಾಲಪ್ಪ, ಭದ್ರಾವತಿ
70. ಶ್ರೀ ಶಿವಪ್ಪ ಗೋವಿಂದಪ್ಪ ಗೌಡ, ಉತ್ತರ ಕನ್ನಡ

## ವಿಜ್ಞಾನ

71. ಡಾ. ಎನ್. ಶೇಷಗಿರಿ, ಬೆಂಗಳೂರು

## ವೈದ್ಯಕೀಯ

72. ಡಾ. ಬಿ. ಎಂ. ಆಲೂರು, ಗದಗ
73. ಡಾ. ಹೆಚ್. ಬಿ. ರಾಜಶೇಖರ್, ಬೆಳಗಾಂ
74. ಡಾ. ಎನ್. ಅನಂತ, ಬೆಂಗಳೂರು
75. ಡಾ. ಸಬ್ನವಿಸ್ ಶೇಷಗಿರಿರಾವ್, ಬೆಂಗಳೂರು
76. ಡಾ. ಜಿ. ಗೋಪಾಲ್, ಬೆಂಗಳೂರು
77. ಡಾ. ಕೆ. ಎ. ಅಶೋಕ ಪೈ, ಶಿವಮೊಗ್ಗ
78. ಡಾ. ಎ. ಎಂ. ಶೇಖ್, ಬೆಳಗಾಂ
79. ಡಾ. ಎಂ. ಶಾಂತಾರಾಮ ಶೆಟ್ಟಿ, ಮಂಗಳೂರು
80. ಡಾ. ಟಿ. ವಿ ಮರಿಯಪ್ಪ, ಬೆಂಗಳೂರು
81. ಡಾ. ಚೆನ್ನಬಸವಣ್ಣ, ಬೆಂಗಳೂರು

## ಶಿಕ್ಷಣ

82. ಶ್ರೀ ಜಗನ್ನಾಥರಾವ್ ಚಂಡ್ರಿಕಿ, ಗುಲ್ಬರ್ಗಾ
83. ಶ್ರೀ ಬಿ. ಎನ್. ವಿ. ಸುಬ್ರಹ್ಮಣ್ಯಂ, ಬೆಂಗಳೂರು
84. ಡಾ. ಎಲ್. ಲೋಬೋ, ಬೆಂಗಳೂರು
85. ಪ್ರೊ ನಾಗರಾಜು

## ಕ್ರೀಡೆ

86. ಶ್ರೀ ಕೇಕಿ. ಬಿ. ತಾರಾಪುರ, ಬೆಂಗಳೂರು
87. ಶ್ರೀ ಎಂ. ಮಹಾದೇವ, ಬೆಂಗಳೂರು
88. ಶ್ರೀ ರಾಜನ್ ಜೋಸೆಫ್ ಜೋಯಲ್, ಬೆಂಗಳೂರು
89. ಶ್ರೀಮತಿ ಶೈನಿ ವಿಲ್ಸನ್, ಬೆಂಗಳೂರು
90. ಶ್ರೀ ಸೋಮೇಂದ್ರ ಸಿಂಗ್, ಮೈಸೂರು

## ಸಮಾಜಸೇವೆ

91. ಶ್ರೀ ದತ್ತಾತ್ರೇಯರಾವ್ ಅವರಾದಿ, ಗುಲ್ಬರ್ಗಾ
92. ಶ್ರೀ ಕೊಲ್ಲೂರು ಮಲ್ಲಪ್ಪ, ಬೆಂಗಳೂರು
93. ಶ್ರೀ ಎನ್. ಎಂ. ಮಹಾದೇವನ್, ಮೈಸೂರು
94. ಶ್ರೀ ವಿ. ಅಣ್ಣಯ್ಯ, ಬೆಂಗಳೂರು
95. ಡಾ ಸಿ. ಡಿ. ಜತ್ತಣ್ಣ, ಬೆಂಗಳೂರು
96. ಶ್ರೀ ಪ್ರಭುರಾವ್ ಕಂಬಳಿವಾಲೆ, ಬೀದರ್
97. ಶ್ರೀ ನಾಗರಾಜ್ ಎನ್. ಪಮೂಲಕರ್, ಬೆಂಗಳೂರು
98. ಶ್ರೀ ಸಂಭಾಜಿರಾವ್ ಲಕ್ಷ್ಮಣ ಪಾಟೀಲ, ಬೆಳಗಾವಿ

99. ಶ್ರೀ ಪಂಪಾಪತಿ, ದಾವಣಗೆರೆ
100. ಡಾ. ನಿತಿನ್ ಚಂದ್ರ ಹತ್ತೀಕಾಳ, ಬೆಳಗಾಂ
101. ಶ್ರೀ ಗುಲಾಂ ಅಬೀದ್, ಶಿವಮೊಗ್ಗ
102. ಶ್ರೀ ಎಂ. ಆರ್. ಎನ್. ಶಾಸ್ತ್ರಿ, ಮಂಡ್ಯ
103. ಶ್ರೀ ವಿ. ನಂಜಪ್ಪ, ಬೆಂಗಳೂರು
104. ಡಾ. ಉಷಾ ಬಾಪಟ್, ಬೆಂಗಳೂರು
105. ಶ್ರೀ ಚೆನ್ನವೀರ ಕಲ್ಯಾಣಶೆಟ್ಟಿ, ಸೋಲಾಪುರ
106. ಶ್ರೀ ಕೆ. ಎಸ್. ಕುಲಕರ್ಣಿ, ಪುಣೆ
107. ಶ್ರೀ ರಾಮದಾಸ್, ಮದ್ರಾಸ್
108. ಶ್ರೀ ಕೋದಂಡರಾಮ ಶ್ರೇಷ್ಠಿ, ಚಿಕ್ಕಮಗಳೂರು
109. ಶ್ರೀ ಕೆ. ಎಲ್ಲಿಅಣ್ಣ ಪೂಜಾರಿ, ಮಂಗಳೂರು
110. ಡಾ. ಎ. ಕೆ. ಲಕ್ಷ್ಮೀನಾರಾಯಣರಾವ್, ದಕ್ಷಿಣ ಕನ್ನಡ
111. ಶ್ರೀ ಮಹಾವೀರ ಚಂದ್ ಸಮದಾರಿಯಾ, ಬೆಂಗಳೂರು
112. ಶ್ರೀ ಚಂದ್ರಶೇಖರ ಬಿ. ಮಂಟೂರ, ಹುಬ್ಬಳ್ಳಿ
113. ಶ್ರೀ ಎಂ. ವಾಸುದೇವ, ಬೆಂಗಳೂರು
114. ಶ್ರೀ ಸುರೇಶ್ ಸಿ. ಷಾ, ಬೆಂಗಳೂರು

**ಕೃಷಿ**

115. ಶ್ರೀ ಎ. ಎಸ್. ವಿಶ್ವನಾಥ್, ಶಿವಮೊಗ್ಗ
116. ಶ್ರೀ ಮನಮೋಹನ್ ಅತ್ತಾವರ, ಬೆಂಗಳೂರು

**ಕನ್ನಡದಲ್ಲಿ ಐ. ಎ. ಎಸ್. / ಐ. ಓ. ಎಸ್.**

117. ಶ್ರೀ ಕೆ. ಶಿವರಾಮು, ಬೆಂಗಳೂರು
118. ಶ್ರೀ ಎಂ. ಆರ್. ಕಾಂಬ್ಳೆ, ಬೆಂಗಳೂರು
119. ಶ್ರೀ ವಿಜಯ ಸಾಸನೂರು, ಬೆಂಗಳೂರು

**ಸಂಗೀತ**

120. ಶ್ರೀ ಸುಬ್ಬಣ್ಣ, ಮೈಸೂರು

# ಕ್ರೀಡಾ ಚಟುವಟಿಕೆ

**ಕೆ.ಟಿ. ಕೃಷ್ಣಕಾಂತ್**

ಶತಮಾನದ ಕೊನೆಯ ದಶಕದ ಮೊದಲ ವರ್ಷ ಕರ್ನಾಟಕದ ಪಾಲಿಗೆ ಫಲಭರಿತ. ದೇಶದ ಅತಿವೇಗದ ಓಟಗಾರ್ತಿ, ಅತಿ ಚುರುಕಿನ ಈಜುಗಾರ್ತಿ, ಅತಿ ರಭಸದ ಬೌಲರ್, ಅತ್ಯುತ್ತಮ ಸ್ಕೇಟರ್ ಕರ್ನಾಟಕದವರು, ವಿಶ್ವ ಅತಿವೇಗದ ವಯೋವೃದ್ಧ ಓಟಗಾರರೂ ಇಲ್ಲಿಯವರೆ. ಚದುರಂಗ, ಅಂಗಸೌಷ್ಠವ ಸ್ಪರ್ಧೆಗಳಲ್ಲೂ ರಾಜ್ಯದವರ ಮೇಲುಗೈ.

ಇವರೆಲ್ಲರ ಪೈಕಿ ಅಗ್ರಸಾಧನೆ ಮೈಸೂರಿನ ಇಪ್ಪತ್ತೆರಡು ವರ್ಷದ ಇಂಜಿನಿರಿಂಗ್-ಕಾಲೇಜು ವಿದ್ಯಾರ್ಥಿ ಜಾವಗಲ ಶ್ರೀನಾಥ್ ಅವರದು. ಎರಡು ವರ್ಷಗಳ ಹಿಂದೆಯಷ್ಟೇ ಮೊದಲ ದರ್ಜೆ ಕ್ರಿಕೆಟ್ಟಿಗೆ ಇವರ ಪದಾರ್ಪಣ. ಈ ವರ್ಷ ಅಂತರಾಷ್ಟ್ರೀಯ ಮಟ್ಟದಲ್ಲಿ ಶ್ರೀಗಣೇಶ. ಶಾರ್ಜಾದಲ್ಲಿ ಪಾಕಿಸ್ತಾನದ ವಿರುದ್ಧ ಮತ್ತು ಭಾರತದಲ್ಲಿ ದಕ್ಷಿಣ ಆಫ್ರಿಕಾ ವಿರುದ್ಧ ಒಂದು ದಿನದ ಪಂದ್ಯಗಳನ್ನಾಡಿ ಆಸ್ಟ್ರೇಲಿಯಾ ಪ್ರವಾಸಕ್ಕೆ ಹೋದ ಭಾರತ ತಂಡದಲ್ಲೂ ಸ್ಥಾನ ಪಡೆದರು. ಅಲ್ಲಿ ಮೊದಲ ಟೆಸ್ಟ್ ಪಂದ್ಯದ ಮೊದಲ ಪಾಳಿಯಲ್ಲಿ ಮೂರು ಹುದ್ದರಿ ಕೆಡವಿ ವಿಶ್ವ ಶ್ರೇಷ್ಠರಿಂದ ಸೈ ಎನಿಸಿಕೊಂಡರು. ಶಾರ್ಜಾದಲ್ಲಂತೂ ಬೌಲಿಂಗ್ ವೇಗ ಮಾಪನ ನಡೆದಾಗ 120 ಕಿ.ಮೀ. ವೇಗದ ಪಾಕಿಸ್ತಾನದ ವಖರ್‌ಯೂನಿಸ್ ಮೊದಲಿಗರಾದರೆ, 113 ಕಿ.ಮೀ. ವೇಗದ ಶ್ರೀನಾಥ್‌ಗೆ ಎರಡನೆ ಸ್ಥಾನ. ವೆಸ್ಟಿಂಡೀಸ್ ವೇಗದ ವೀರರೂ ಇವರನ್ನು ಸರಿಗಟ್ಟಲಿಲ್ಲ. ಇನ್ನೊಂದಷ್ಟು ತಂತ್ರ, ಕೈಚಳಕ ರೂಢಿಸಿಕೊಂಡರೆ ಎದುರಾಳಿಗಳ ಎದೆ ನಡುಗಿಸಬಲ್ಲರು ಶ್ರೀನಾಥ್.

ಕರ್ನಾಟಕದ ಇನ್ನೊಬ್ಬ ಬೌಲರ್ ಲೆಗ್‌ಸ್ಪಿನ್ನರ್ ಅನಿಲ್ ಕುಂಬ್ಳೆ ಸಹ ಶಾರ್ಜಾ ಪಂದ್ಯಗಳಿಗೆ ಆಯ್ಕೆ ಆದರು. ವೆಸ್ಟ್ ಇಂಡೀಸ್ ವಿರುದ್ಧ ನಾಲ್ಕು ಹುದ್ದರಿ ಕೆಡವಿ ಗೆಲುವಿನ ರೂವಾರಿಗಳಲ್ಲಿ ಒಬ್ಬರಾದರು. ಆದರೆ ಅನಂತರ ಆಯ್ಕೆದಾರರ ಒಲವು ಗಳಿಸಲಿಲ್ಲ. ವಿಶಾಖಪಟ್ಟಣದಲ್ಲಿ ಆಂಧ್ರದ ವಿರುದ್ಧ ನಡೆದ 1991–92ರ ಸಾಲಿನ ರಣಜಿ ಕ್ರಿಕೆಟ್ ಪಂದ್ಯದಲ್ಲಿ ಅನಿಲ್ ಕುಂಬ್ಳೆ ಸತತವಾಗಿ ಮೂರು ಚೆಂಡುಗಳಲ್ಲಿ ವಿಕೆಟ್ ಉರುಳಿಸಿ ಹ್ಯಾಟ್ರಿಕ್ ಗಳಿಸಿದರು.

ಇದಕ್ಕೆ ಮೊದಲು ರಣಜಿ ಪಂದ್ಯಗಳಲ್ಲಿ ರಘುರಾಂ ಭಟ್ (1981) ಮತ್ತು ಜಾವಗಲ್ ಶ್ರೀನಾಥ್ (1989) ಮಾತ್ರ ರಾಜ್ಯದ ಪರವಾಗಿ ಹ್ಯಾಟ್ರಿಕ್ ಸಾಧಿಸಿದ್ದಾರೆ.

ಈ ವರ್ಷ ಬ್ಯಾಟಿಂಗ್ ಹ್ಯಾಟ್ರಿಕ್ ಸಹ ದಾಖಲಾಯಿತು. ಹದಿನೆಂಟರ ಬಾಲಕ ರಾಹುಲ್ ದ್ರಾವಿಡ್ ತಮ್ಮ ಚೊಚ್ಚಲ ರಣಜಿ ವರ್ಷದಲ್ಲಿ 90–91ರ ಸಾಲಿನ ಕೊನೆಯ ಪಂದ್ಯದಲ್ಲಿ ಬಂಗಾಳದ ವಿರುದ್ಧ ಹಾಗೂ 90–92 ಸಾಲಿನ ಮೊದಲೆರಡು ಪಂದ್ಯಗಳಲ್ಲಿ ಗೋವ ಮತ್ತು ಕೇರಳ ವಿರುದ್ಧ ಶತಕಗಳನ್ನು ಗಳಿಸಿದರು. ಈತ ಬಹುಬೇಗ ಅಂತರಾಷ್ಟ್ರೀಯ ಮಟ್ಟದಲ್ಲಿ ಮಿಂಚುತ್ತಾನೆಂದು ನಾಸ್ತಿಕರೂ ಕಣಿ ಹೇಳುತ್ತಿದ್ದಾರೆ.

ಕರ್ನಾಟಕದ ಕ್ರಿಕೆಟ್ ಪ್ರೇಮಿಗಳಿಗೆ ತೀವ್ರ ನಿರಾಸೆಯ ವಿಷಯವೆಂದರೆ ಕಲ್ಕತ್ತದಲ್ಲಿ ರಣಜಿ ಪ್ರಶಸ್ತಿ ಉಪಾಂತ್ಯ ಪಂದ್ಯದಲ್ಲಿ ಬಂಗಾಳದ ವಿರುದ್ಧ ರಾಜ್ಯ ತಂಡದ ಸೋಲು. ಐವತ್ತೇಳು ವರ್ಷಗಳ ರಣಜಿ ಪಂದ್ಯಾವಳಿಯ ಇತಿಹಾಸದಲ್ಲೇ ತನ್ನ ಅತಿ ಹೆಚ್ಚಿನ ಮೊತ್ತವಾದ 791 ಓಟಗಳನ್ನು ಆರು ಹುದ್ದರಿ ನಷ್ಟಕ್ಕೆ ಪೇರಿಸಿ ಪಾಳಿ ಮುಕ್ತಾಯ ಗೊಳಿಸಿತು ಕರ್ನಾಟಕ. ಆದರೆ ನಿಧಾನಗತಿಯ ಓಟ ಗಳಿಕೆ ಕೊನೆಗೆ ಕುತ್ತಿಗೆಗೆ ಬಂತು. ಪಂದ್ಯ ಮುಗಿದಾಗ ಬಂಗಾಳ ತಂಡ ಒಂಭತ್ತು ಹುದ್ದರಿ ನಷ್ಟಕ್ಕೆ 652 ಓಟ ಮಾತ್ರ ಕೂಡಿಸಿತ್ತಾದರೂ ಸರಾಸರಿ ಲೆಕ್ಕಾಚಾರದಲ್ಲಿ ಮೂಗಿನ ತುದಿಯ ಚರ್ಮದ ಅಂತರದಷ್ಟು ಮುಂದೆ ಸಾಗಿ ಫೈನಲ್ಸ್ ತಲುಪಿತು. ಬಂಗಾಳದ ಆಟಗಾರರು ಸಮಯ ಕೊಲ್ಲುವ ಅಕ್ರಮ ತಂತ್ರ ಬಳಸಿದರೆಂದು ಕರ್ನಾಟಕ ಲಿಖಿತ ಪ್ರತಿಭಟನೆ ದಾಖಲಿಸಿ ಅನಂತರ ಭಾರತೀಯ ಕ್ರಿಕೆಟ್‌ನ ಒಟ್ಟಾರೆ ಹಿತದೃಷ್ಟಿಯ ಕಾರಣ ನೀಡಿ ಅದನ್ನು ವಾಪಸು ಪಡೆಯಿತು.

ಕರ್ನಾಟಕದ ನಾಯಕ ನಲವತ್ತರ ಇಳಿವಯಸ್ಸಿನ ಸೈಯದ್ ಕಿರ್ಮಾನಿ ಅವರಿಗೂ ಈ ವರ್ಷ ಮನದ ಹಿರಿಯಾಸೆ ಭಗ್ನ. 88 ಕ್ರಿಕೆಟ್ ಟೆಸ್ಟ್ ಪಂದ್ಯ ಆಡಿ 198 ಬಲಿ ಗಳಿಸಿರುವ ಅವರು ಭಾರತ ತಂಡಕ್ಕೆ ಮರಳಿ ಒಂದು ನೂರು ಟೆಸ್ಟ್ ಹಾಗೂ ಇನ್ನೂರು ಬಲಿ ಪೂರೈಸಿ ವಿಶ್ವ ದಾಖಲೆ ಸ್ಥಾಪಿಸುವ ಹಂಬಲ ಹೊತ್ತಿದ್ದರು. ಮೊದಲ ದರ್ಜೆ ಪಂದ್ಯಗಳಲ್ಲಿ ಈ ವರ್ಷ ಹಲವು ಶತಕ ಹೊಡೆದರು. ರೆಸ್ಟ್ ಆಫ್ ಇಂಡಿಯ ತಂಡದ ನಾಯಕತ್ವವನ್ನು ಅವರಿಗೆ ನೀಡಲಾಯಿತು. ಆದರೆ ಭಾರತದ ಪರ ಮತ್ತೆ ಆಡುವಂತೆ ಕರೆ ಬರಲೇ ಇಲ್ಲ. ಕಡೆಯ ಅವಕಾಶ ಕಳೆದುಹೋಯಿತು. 1967ರಲ್ಲಿ ಕಿರ್ಮಾನಿ ಮೊದಲು ರಾಜ್ಯ ಪರ ಆಡಿದಾಗ ಈಗಿನ ರಾಜ್ಯತಂಡದ ಅರ್ಧದಷ್ಟು ಆಟಗಾರರು ಇನ್ನೂ ಹುಟ್ಟಿಯೇ ಇರಲಿಲ್ಲ ಎಂಬುದನ್ನು ಗಮನಿಸಿದಾಗ ಈ ಹಿರಿಯನ ಸಾಧನೆಯ ಅರಿವಾದೀತು.

ದಿಟ್ಟ ದಿರಸುಗಳಿಂದ ಭಾರತದ ಕ್ರೀಡಾಲೋಕದಲ್ಲಿ ಸಂಚಲನ ಉಂಟುಮಾಡಿದ ಬೆಡಗಿ ಅಶ್ವಿನಿ ನಾಚಪ್ಪ, ಬಣ್ಣದ ಲೋಕ ಸೇರಿ ಬೆಳ್ಳಿ ತೆರೆಯ ಮೇಲೆ ಮಿನುಗಿದ್ದು ಕೇವಲ ಸಹಜ ಬೆಳವಣಿಗೆ. ಚಿತ್ರ ಸಂಗೀತದ ಲಯಕ್ಕೆ ಗಿಡಮರ ಸುತ್ತಿದರೂ ಕ್ರೀಡಾಂಗಣ ಪರಿಭ್ರಮಣ ಕೌಶಲ್ಯಕ್ಕೆ ಕುಂದಿಲ್ಲ ಎಂದು ನಿರೂಪಿಸಿದರು. ಕಲ್ಕತ್ತದಲ್ಲಿ ರಾಷ್ಟ್ರೀಯ ಮುಕ್ತ ಅಥ್ಲೆಟಿಕ್ಸ್ ಸ್ಪರ್ಧೆಯಲ್ಲಿ ಅವರ 100, 200, 400 ಹಾಗೂ 4 X 100 ರಿಲೇ ಓಟಗಳಲ್ಲಿ ನಾಲ್ಕು ಚಿನ್ನದ ಪದಕ ಗೆದ್ದು ಅಗ್ರಮಾನ್ಯರಾದರು.

ಇದೇ ಕ್ರೀಡಾಕೂಟದ ಮತ್ತೊಂದು ಮಹತ್ವದ ಸಾಧನೆ ರಾಜ್ಯ ಹಿರಿಯ ಅಥ್ಲೆಟ್ ರೀತ್ ಅಬ್ರಹಾಂ ಅವರದು. ಮೂರು ವರ್ಷದ ಮಗುವಿನ ತಾಯಿಯಾದ ಇವರು ಉದ್ದ ಜಿಗಿತದಲ್ಲಿ ರಾಷ್ಟ್ರೀಯ ವಿಕ್ರಮ ಸ್ಥಾಪಿಸಿದರು (6.28ಮಿ). ಚಿನ್ನದ ಪದಕ ಪಡೆದ ರಿಲೇ ತಂಡದಲ್ಲೂ ಅವರಿದ್ದರು. ಶ್ರೀಲಂಕಾದಲ್ಲಿ ಸಾರ್ಕ್ ದೇಶಗಳ ಕ್ರೀಡಾಕೂಟದಲ್ಲಿ ಭಾರತವನ್ನು ಪ್ರತಿನಿಧಿಸಿ ಉದ್ದ ಜಿಗಿತದಲ್ಲಿ ಚಿನ್ನ ಹಾಗೂ 100 ಮೀ. ಹರ್ಡಲ್ಸ್‌ನಲ್ಲಿ ಬೆಳ್ಳಿ ಪದಕ ಗೆದ್ದು ಅಥ್ಲೆಟಿಕ್ಸ್ ಸ್ಪರ್ಧೆಗಳಿಂದ ನಿವೃತ್ತಿ ಪ್ರಕಟಿಸಿದರು. ಇಪ್ಪತ್ತೆಂಟು ವರ್ಷದ ರೀತ್ ಎಂಟು ವರ್ಷಗಳ ವೈವಾಹಿಕ ಜೀವನದಲ್ಲೂ ಮೊದಲ ಸ್ಥಾನ ನೀಡಿದ್ದು ಆಟೋಟದ ಅಭ್ಯಾಸಕ್ಕೆ. ಆದ್ದರಿಂದಲೇ ಕಠಿಣ ಸ್ಪರ್ಧೆಯಾದ ಹೆಪ್ಟಾಥ್ಲಾನ್‌ನಲ್ಲೂ ಹಲವು ವರ್ಷ ದೇಶದಲ್ಲಿ ಅವರಿಗೆ ಸವಾಲು ಇರಲಿಲ್ಲ. ಪತಿ, ಕ್ರೀಡಾತರಬೇತುದಾರ ಸುನಿಲ್ ಅಬ್ರಾಹಾಂ ಅವರಿಗೆ ಈ ಯಶಸ್ಸಿನ ಸಮಪಾಲು ಸಲ್ಲಬೇಕು. ಮಕ್ಕಳಿಗೆ ತರಬೇತಿ ನೀಡುವ ಮಹತ್ವಾಕಾಂಕ್ಷೆಯ 'ಶ್ಯೂರ್' ಕ್ರೀಡಾ ಸಂಸ್ಥೆಯನ್ನು ಈ ದಂಪತಿಗಳು ಈಗ ನಡೆಸುತ್ತಿದ್ದಾರೆ.

ರಾಷ್ಟ್ರೀಯ ದಾಖಲೆ ಮಾಡಿದ ರಾಜ್ಯ ಮತ್ತೊಬ್ಬ ಅಥ್ಲೆಟ್ ಕೆ.ಕೆ. ಗೀತ ದೆಹಲಿಯಲ್ಲಿ ನಡೆದ ಮಾಸ್ಟರ್ಸ್ ಅಥ್ಲೆಟಿಕ್ಸ್ ಕೂಟದಲ್ಲಿ ಅವರು ಹೆಪ್ಟಾಥ್ಲಾನ್‌ನಲ್ಲಿ 5083 ಅಂಕ ಸೇರಿಸಿ ಒಂಭತ್ತು ವರ್ಷಗಳ ರಾಷ್ಟ್ರೀಯ ದಾಖಲೆ ಮುರಿದರು. ಹಳೆಯ ದಾಖಲೆ ಇದ್ದದ್ದೂ ಕರ್ನಾಟಕದ ಏಂಜಲ್ ಮೇರಿ ಅವರ ಹೆಸರಿನಲ್ಲಿ.

ರಾಷ್ಟ್ರೀಯ ಅಥ್ಲೆಟಿಕ್ಸ್ ಸ್ಪರ್ಧೆಯ 200 ಮತ್ತು 400 ಮೀ. ಎರಡೂ ಓಟಗಳಲ್ಲಿ ಅರ್ಜುನ್ ದೇವಯ್ಯ ಎರಡನೆ ಸ್ಥಾನ ಪಡೆದರು. 400 ಮೀ. ಹರ್ಡಲ್ಸ್‌ನಲ್ಲಿ ಸಿಲ್ವೆನಿಯ ಪಾಯ್ಸ್ ಮತ್ತು ಎಚ್. ಜಿ. ಅಪ್ಸರ ಕ್ರಮವಾಗಿ ಎರಡನೆ ಮತ್ತು ಮೂರನೆ ಬಹುಮಾನ ಗಳಿಸಿದರು. ಗುಜರಾತ್‌ನಲ್ಲಿ ನಡೆದ ಅಂತರ ರಾಜ್ಯ ಕೂಟದ ಇದೇ ಸ್ಪರ್ಧೆಯಲ್ಲಿ ಅಪ್ಸರ ಮೊದಲಿಗರಾಗಿದ್ದರು.

ಮಲೇಶಿಯಾಗೆ ಏಶಿಯನ್ ಅಥ್ಲೆಟಿಕ್ಸ್ ಸ್ಪರ್ಧೆಗೆ ಹೋದ ಭಾರತ ತಂಡದಲ್ಲಿ ರಾಜ್ಯದ ಅಶ್ವಿನಿ, ರೀತ್, ಗೀತ, ಅರ್ಜುನ್ ದೇವಯ್ಯ, ವೇಗದ ಓಟಗಾರ್ತಿ ಇ.ಬಿ. ಶೈಲ ಮತ್ತು ಷಾಟ್‌ಪುಟ್ ಪಟು ಎಸ್.ಡಿ. ಈಶನ್ ಇದ್ದರು. ಅಶ್ವಿನಿ ನಾಚಪ್ಪ ಇದ್ದ 4X400 ಮೀ. ರಿಲೇ ತಂಡ ಚಿನ್ನದ ಪದಕ ಪಡೆಯಿತು.

ಜಪಾನ್‌ನಲ್ಲಿ ನಡೆದ ವಿಶ್ವ ಅಥ್ಲೆಟಿಕ್ಸ್ ಸ್ಪರ್ಧೆಗೆ ಹೋದ ಭಾರತದ 4×400 ಮೀ. ಮಹಿಳಾ ರಿಲೇ ತಂಡದಲ್ಲಿ ಅಶ್ವಿನಿ ಸಿಲ್ವೆನಿಯ ಪಾಯ್ಸ್ ಇದ್ದರು. ತಂಡ ಪದಕವಿಲ್ಲದೆ ಮರಳಿತು.

ವಿಶ್ವ ಮಟ್ಟದಲ್ಲಿ ಪದಕ ಪಡೆಯಲು ನಮ್ಮ ದೇಶ ಹಣ್ಣು ಮುದುಕರನ್ನು ಅಲಂಬಿಸಬೇಕಾಗಿದೆ ಎಂಬುದು ವಿಪರ್ಯಾಸ. ಈ ವಯಸ್ಸಿನಲ್ಲಿ ಒಟ್ಟಿಗೇ ಧರಿಸಿದರೆ ಕುತ್ತಿಗೆ ಗಾಯ ಎನ್ನುವಷ್ಟು ಚಿನ್ನದ ಪದಕಗಳನ್ನು ಬೆಂಗಳೂರಿನ ತೊಂಭತ್ತೊಂದು ವರ್ಷದ ಜಿ. ನಾರಾಯಣ ಮೂರ್ತಿ ಫಿನ್ಲೆಂಡಿನಲ್ಲಿ ನಡೆದ ವಿಶ್ವ ಹಿರಿಯರ ಅಥ್ಲೆಟಿಕ್ಸ್ ಕೂಟದಲ್ಲಿ ಗೆದ್ದರು. 100 ಮೀ. ಓಟದಲ್ಲಿ ಮೊದಲು ಗುರಿ ಮುಟ್ಟಿ ತೊಂಭತ್ತು ವರ್ಷ ಮೀರಿದವರ ವರ್ಗದಲ್ಲಿ ವಿಶ್ವದ ಅತಿವೇಗದ ಓಟಗಾರ ಎನಿಸಿದರು. 200, 400, 1500 ಮತ್ತು 10,000 ಮೀ ಸ್ಪರ್ಧೆಗಳಲ್ಲೂ ಇವರದು ಸಾಟಿಯಿಲ್ಲದ ಓಟ. ಬೆಂಗಳೂರಿನ ಕಂಠೀರವ ಕ್ರೀಡಾಂಗಣದಲ್ಲಿ ಐದಾರು ಕಿಲೋಮೀಟರ್ ಓಡಿ ಸತತ ಅಭ್ಯಾಸ ನಡೆಸುವ ಇವರು ಯುವಕರು ತುಳಿಯಬೇಕಾದ ದಾರಿ ಯಾವುದೆಂದು ತಾವೇ ನಡೆದು, ಅಲ್ಲಿ, ಓಡಿ ತೋರಿಸುತ್ತಿದ್ದಾರೆ.

ಫಿನ್ಲೆಂಡಿನ ಅದೇ ಕೂಟದಲ್ಲಿ ಐವತ್ತೈದು ವರ್ಷದ ವಯೋವರ್ಗದಲ್ಲಿ ರಾಜ್ಯದ ವಿ. ಸೀತಾಲಕ್ಷ್ಮಿ ಮತ್ತು ಕೆ. ಶಾರದಾಬಾಯಿ ತಲಾ ಒಂದು ಬೆಳ್ಳಿ ಮತು ಒಂದು ಕಂಚಿನ ಪದಕ ಪಡೆದರು. ಐವತ್ತಮೂರು ದೇಶಗಳ ಐದು ಸಾವಿರ ಹಿರಿಯರು ವಿವಿಧ ಸ್ಪರ್ಧೆಗಳಲ್ಲಿ ಪಾಲ್ಗೊಂಡಿದ್ದರು.

ಶ್ರೀಲಂಕಾದಲ್ಲಿ ನಡೆದ ಸಾರ್ಕ್ ದೇಶಗಳ ಕ್ರೀಡಾ ಕೂಟದಲ್ಲಿ ಕರ್ನಾಟಕದ ಹಲವು ಈಜುಗಾರ್ತಿಯರು ಭಾರತವನ್ನು ಪ್ರತಿನಿಧಿಸಿ ಗೆಲುವು ಸಾಧಿಸಿದರು. ಹದಿನಾರು ವರ್ಷದ ಸಂಗೀತರಾವ್ 400 ಮೀ. ಮುಕ್ತಶೈಲಿ ಈಜಿನಲ್ಲಿ ಹೊಸ ದಾಖಲೆಯೊಂದಿಗೆ ಚಿನ್ನದ ಪದಕ ಹಾಗೂ ಇತರ ಸ್ಪರ್ಧೆಗಳಲ್ಲಿ ಒಂದು ಬೆಳ್ಳಿ ಮತ್ತು ಒಂದು ಕಂಚಿನ ಪದಕ ಗೆದ್ದರು. ಅಶೀಮ ಶೆಟ್ಟಿಗೆ ಲಭಿಸಿದ್ದು ಎರಡು ಬೆಳ್ಳಿ ಪದಕ. ಆಕೆಯ ಸಹೋದರಿ ಕೇವಲ ಹನ್ನೆರಡು ವರ್ಷದ ಸಜನಿ ಶೆಟ್ಟಿ ಮತ್ತು ಹದಿಮೂರು ವರ್ಷದ ಮೇಘನಾ ನಾರಾಯಣ್ ವಯಸ್ಕರ ಈ ಅಂತರರಾಷ್ಟ್ರೀಯ ಸ್ಪರ್ಧೆಯಲ್ಲಿ ಕ್ರಮವಾಗಿ ಒಂದು ಕಂಚು ಹಾಗೂ ಒಂದು ಬೆಳ್ಳಿ ಪದಕ ಗೆದ್ದಿದ್ದು ಕುಣಿದಾಡುತ್ತ ಹೇಳುವಂತಹುದು.

ಭಾರದಲ್ಲಂತೂ ರಾಜ್ಯ ಮಹಿಳಾ ಈಜುತಂಡವನ್ನು ಮೀರುಸುವವರೇ ಇಲ್ಲ. ಕೇರಳದಲ್ಲಿ ನಡೆದ ನಲವತ್ತೇಳನೆ ರಾಷ್ಟ್ರೀಯ ಈಜು ಸ್ಪರ್ಧೆಗಳಲ್ಲಿ ಬೆಂಗಳೂರಿನ ವೈದ್ಯಕೀಯ ವಿದ್ಯಾರ್ಥಿನಿ ಇಪ್ಪತ್ತೊಂದು ವರ್ಷದ ಲೊರೈನ್ ವರ್ಗೀಸ್ ಏಳು ಚಿನ್ನದ ಪದಕ ಪಡೆದು ವೈಯುಕ್ತಿಕ ಚಾಂಪಿಯನ್ ಎನಿಸಿದರು. 50 ಮೀ. ಮುಕ್ತ ಶೈಲಿ ಈಜಿನಲ್ಲಿ ಮೊದಲಿಗರಾಗಿ ದೇಶದ ಅತಿವೇಗದ ಈಜುಗಾರ್ತಿ ಎಂಬ

ಗರಿಮೆಗೆ ಪಾತ್ರರಾದರು. ಇವರಲ್ಲದೆ ಅಶೀಮ, ಸಜನಿ, ತಲಾ ಮೂರು, ಸಂಗೀತ ಎರಡು, ಕೋಕಿಲ ಶೆಟ್ಟಿ ಮತ್ತು ಮೇಘನಾ ಒಂದೊಂದು ಚಿನ್ನದ ಪದಕಗೆದ್ದು ರಾಜ್ಯಕ್ಕೆ ಮಹಿಳಾ ಪಂಗಡ ಪ್ರಶಸ್ತಿ ತಂದಿತ್ತರು.

ಸಿಂಗಪುರದಲ್ಲಿ ನಡೆದ ಏಶಿಯಾ ಪ್ಯಾಸಿಫಿಕ್ ವಯೋವರ್ಗ ಆಹ್ವಾನ ಈಜು ಸ್ಪರ್ಧೆಗಳಲ್ಲಿ ಭಾರತ ತಂಡದಲ್ಲಿದ್ದ ಸಂಗೀತ, ಅಶೀಮ, ಬಿ. ರಮ್ಯ, ಸಾತ್ವಿಕ್ ರೈ ಮತ್ತು ರಕ್ಷಿತ್ ಜಗದಾಲೆ ಪದಕ ಗೆದ್ದರು.

ಮದರಾಸಿನಲ್ಲಿ ನಡೆದ ಮೊತ್ತ ಮೊದಲ ರಾಷ್ಟ್ರೀಯ ಟ್ರಯಾತ್ಲಾನ್ ಸ್ಪರ್ಧೆಯಲ್ಲಿ ಬೆಂಗಳೂರಿನ ಕಾಲೇಜು ವಿದ್ಯಾರ್ಥಿನಿ ಫರ್ನಾಡ್ ಇಂಜಿನಿಯರ್ ಮಹಿಳೆಯರ ವೈಯುಕ್ತಿಕ ಪ್ರಶಸ್ತಿ ಪಡೆದರು. 2 ಕಿ. ಮೀ. ಸಮುದ್ರ ಈಜು, 40 ಕಿ. ಮೀ. ಸೈಕ್ಲಿಂಗ್ ಮತ್ತು 10 ಕಿ. ಮೀ. ಓಟ ಒಳಗೊಂಡ ಈ ಸ್ಪರ್ಧೆಯಲ್ಲಿ ಎರಡನೆ ಸ್ಥಾನ ರಾಜ್ಯದವರೇ ಆದ ವಿ.ಟಿ. ಅನಸೂಯ ಅವರ ಪಾಲಾಯಿತು. ಆಸ್ಟ್ರೇಲಿಯಾದಲ್ಲಿ ನಡೆದ ವಿಶ್ವ ಟ್ರಯಾತ್ಲಾನ್ ಕೂಟಕ್ಕೆ ಭಾರತದ ಪರವಾಗಿ ಇವರಿಬ್ಬರನ್ನೂ ಆರಿಸಲಾಯಿತು.

ರಾಜ್ಯ ರೋಲರ್ ಸ್ಕೇಟರುಗಳು ಕಲ್ಕತ್ತದಿಂದ ಪದಕಗಳ ಹೊರೆಯನ್ನೇ ಹೊತ್ತು ತಂದರು. ಅಲ್ಲಿ ನಡೆದ ಇಪ್ಪತ್ತೊಂಭತ್ತನೆ ರಾಷ್ಟ್ರೀಯ ರೋಲರ್ ಸ್ಕೇಟಿಂಗ್ ಸ್ಪರ್ಧೆಯಲ್ಲಿ ಹತ್ತು ಚಿನ್ನ, ಹದಿನಾಲ್ಕು ಬೆಳ್ಳಿ ಮತ್ತು ಎಂಟು ಕಂಚಿನ ಪದಕಗಳೊಂದಿಗೆ ಕರ್ನಾಟಕ ತಂದ ಸ್ಪೀಡ್ ಚಾಂಪಿಯನ್ ಶಿಪ್ ಪಡೆಯಿತು. ಟಿ.ವಿ. ಶ್ರೀದೇವಿ ಮತ್ತು ಸಿ.ವಿ. ಚಂದ್ರು ತಲಾ ಮೂರು, ಕೆ. ಬೀನ ಎರಡು, ವಿಕ್ರಂ ಭೀಮಯ್ಯ ಮತ್ತು ಟಿ.ಎಸ್. ಕಾರ್ತಿಕ್ ತಲಾ ಒಂದು ಚಿನ್ನದ ಪದಕ ಗಳಿಸಿದರು.

ಜಬಲ್‌ಪುರದಲ್ಲಿ ನಡೆದ ರಾಷ್ಟ್ರೀಯ ಅಂಗಸೌಷ್ಟವ ಸ್ಪರ್ಧೆಗಳಲ್ಲಿ ಎಲ್ಲ ಪ್ರಶಸ್ತಿಗಳೂ ಕರ್ನಾಟಕದ ಕೊರಳಿಗೆ. ರೇಮಂಡ್ ಡಿಸೋಜ– ಭಾರತ್ ಶ್ರೇಷ್ಠ ಸುಧಾಕರ್ ಕಾಮತ್–ಭಾರತ್ ಶ್ರೀ, ಎ.ವಿ. ರವಿ– ಭಾರತ್ ಕುಮಾರ್, ಹಾಗೂ ಸಿ. ರಾಜಶೇಖರ್ – ಭಾರತ್ ಕಿಶೋರ್ ಎನಿಸಿದರು.

ಪಾಂಡಿಚೆರಿಯಲ್ಲಿ ನಡೆದ ರಾಷ್ಟ್ರೀಯ 'ಎ' ಚೆಸ್ ಪಂದ್ಯಾವಳಿಯಲ್ಲಿ ಕರ್ನಾಟಕದ ಮೂವತ್ತು ವರ್ಷ ವಯಸ್ಸಿನ ಡಿ.ವಿ. ಪ್ರಸಾದ್ ಪ್ರಶಸ್ತಿ ಉಳಿಸಿಕೊಂಡರು. 1990ರಲ್ಲಿ ಕೋಳಿಕೋಡ್‌ನಲ್ಲಿ ನಡೆದ ರಾಷ್ಟ್ರೀಯ ಪಂದ್ಯಾವಳಿಯಲ್ಲೂ ಪ್ರಶಸ್ತಿ ಇವರದಾಗಿತ್ತು. ರಾಷ್ಟ್ರೀಯ ಚೆಸ್ ಚಾಂಪಿಯನ್ ಆಗಿರುವ ಕರ್ನಾಟಕದ ಮೊದಲ ಆಟಗಾರ ಇವರು. 1990ರಲ್ಲಿ ಯುಗೋಸ್ಲಾವಿಯಾದಲ್ಲಿ ವಿಶ್ವ ಚೆಸ್ ಒಲಂಪಿಯಾಡ್‌ನಲ್ಲಿ ಭಾರತ ಹತ್ತನೆ ಸ್ಥಾನಕ್ಕೆ ಏರಿದ ಹೆಮ್ಮೆಗೆ ಪ್ರಸಾದ್ ಅವರ ಆಟವೂ ಕಾರಣ.

ಬ್ಯಾಡ್ಮಿಂಟನ್ ಆಟದಲ್ಲಿ ಬೆಳಗಲು ಪ್ರಕಾಶ್ ಪಡುಕೋಣೆ ಅವರ ನೆರವು ಪಡೆಯಲಿಕ್ಕಾಗಿ 1988ರಲ್ಲಿ ಕೇರಳದಿಂದ ಬೆಂಗಳೂರಿಗೆ ಬಂದು ನೆಲೆಸಿದರು ವಿಮಲ್ ಕುಮಾರ್. 1989 ಹಾಗೂ 90 ರಲ್ಲಿ ರಾಷ್ಟ್ರೀಯ ಪ್ರಶಸ್ತಿ ಗೆದ್ದರು. ಈ ಬಾರಿಯೂ ವಿಜೇತರಾಗಿ ಹ್ಯಾಟ್ರಿಕ್ ಗಳಿಸುವ ಆಸೆ ಮಾತ್ರ ಈಡೇರಲಿಲ್ಲ. ಹೈದರಾಬಾದ್‌ನಲ್ಲಿ ನಡೆದ ರಾಷ್ಟ್ರೀಯ ಬ್ಯಾಡ್ಮಿಟನ್ ಸ್ಪರ್ಧೆಯಲ್ಲಿ ವಿಮಲ್‌ಗೆ ಅಗ್ರ ಶ್ರೇಯಾಂಕವೇ ದೊರೆಯಿತು. ಆದರೆ ಎಂಟರ ಹಂತದಲ್ಲೇ ಮಣಿದರು. ವಿದೇಶಗಳಲ್ಲೂ ಹಲವು ಪಂದ್ಯಾವಳಿಗಳಲ್ಲಿ ಆಡಿ ವೆಲ್ಷ್ ಓಪನ್ ಮತ್ತು ಸ್ಟ್ಯಾಸ್ ಬರ್ಗ್ ಪ್ರಶಸ್ತಿಗಳನ್ನು ಗೆದ್ದರು. ವಿಶ್ವದಲ್ಲಿ ವಿಮಲ್ ಅವರ ಶ್ರೇಯಾಂಕ ಇಪ್ಪತ್ತೊಂದಕ್ಕೆ ಏರಿತು.

ರಾಜ್ಯದ ಮಹಿಳೆಯರು ದಕ್ಷಿಣವಲಯ ಅಂತರರಾಜ್ಯ ಬ್ಯಾಡ್ಮಿಂಟನ್‌ನಲ್ಲಿ ಅಗ್ರಸ್ಥಾನ ಪಡೆದರು. ಸುಧಾ ಪದ್ಮನಾಭನ್ ಮತ್ತು ಶಮ ಕಿತ್ತೂರ್ ಈ ಗೆಲುವಿನ ರೂವಾರಿಗಳು.

ದೆಹಲಿಯಲ್ಲಿ ಮುವ್ವತ್ತಾರನೆ ರಾಷ್ಟ್ರೀಯ ಬಾಲ್ ಬ್ಯಾಡ್ಮಿಂಟನ್ ಪಂದ್ಯಗಳಲ್ಲಿ ಕರ್ನಾಟಕದ ಮಹಿಳೆಯರಿಗೆ ಪ್ರಶಸ್ತಿ. ಇಷ್ಟು ವರ್ಷಗಳಲ್ಲಿ ರಾಜ್ಯ ಮಹಿಳಾ ತಂಡ ಒಮ್ಮೆ ಮಾತ್ರ ಸೋತಿದೆ.

ರಾಜ್ಯದ ಟೇಬಲ್ ಟೆನಿಸ್ ಲೋಕಕ್ಕೆ ಈ ವರ್ಷ ತಂಗಾಳಿಯಂತೆ ಬಂದರು ಚೇತನ್ ಬಬೂರ್. ಎಷ್ಟೋ ವರ್ಷಗಳ ಹಿಂದೆ ಉಷ ಸುಂದರರಾಜ್, ಕಬೀರ್ ಜಯಂತ್ ಮತ್ತು ಸಾಯಿಕುಮಾರ್ ರಾಷ್ಟ್ರೀಯ ಪ್ರಶಸ್ತಿ ಗೆದ್ದ ಬಳಿಕ ಮತ್ತೊಬ್ಬ ವೈಯುಕ್ತಿಕ ಚಾಂಪಿಯನ್ ಅನ್ನು ಕರ್ನಾಟಕ ಈ ಕ್ರೀಡೆಯಲ್ಲಿ ಕಂಡಿಲ್ಲ. ಹದಿನೇಳು ವರ್ಷದ ಚೇತನ್ ಬಬೂರ್ ಕೆಲವೇ ವರ್ಷಗಳಲ್ಲಿ ದೇಶದ ಅಗ್ರಮಾನ್ಯ ಆಟಗಾರನಾಗುವ ಎಲ್ಲ ಲಕ್ಷಣ ಹೊಂದಿದ್ದಾರೆ. ಇವರ ತಂದೆ ಡಾ! ವಿ. ಪಾಂಡುರಂಗ ಮೂಲತಃ ಹೊಳೆ ನರಸೀಪುರದವರು. ಉದ್ಯೋಗ ನಿಮಿತ್ತ ಮದರಾಸಿನಲ್ಲಿ ಸಂಸಾರ ಸಮೇತ ನೆಲಸಿ ಹದಿಮೂರು ವರ್ಷಗಳ ನಂತರ ಕರ್ನಾಟಕಕ್ಕೆ ಮರಳಿದ್ದಾರೆ. ಬೆಂಗಳೂರಿನ ಇಂಜಿನಿಯರಿಂಗ್ ಕಾಲೇಜೊಂದರಲ್ಲಿ ಕಲಿಯುತ್ತಿರುವ ಚೇತನ್ ಈಗಾಗಲೇ ರಾಷ್ಟ್ರೀಯ ಜೂನಿಯರ್ ಚಾಂಪಿಯನ್ ಆಗಿದ್ದಾರೆ. ಜಪಾನಿಗೆ ವಿಶ್ವ ಟೇಬಲ್ ಟೆನಿಸ್ ಸ್ಪರ್ಧೆಗೆ ಹೋದ ದೇಶದ ವಯಸ್ಕರ ತಂಡದಲ್ಲೂ ಸ್ಥಾನ ಪಡೆದರು. ನೈರೋಬಿಯಲ್ಲಿ ಕಾಮನ್‌ವೆಲ್ತ್ ಪಂದ್ಯಾವಳಿಯಲ್ಲಿ ಮೊಂಟು ಘೋಷ್ ಅವರೊಂದಿಗೆ ಮಿಶ್ರ ಜೋಡಿ ಪ್ರಶಸ್ತಿ ಗೆದ್ದರು. ಭಾರತ ತಂಡ ಒಟ್ಟಾರೆ ಎರಡನೆ ಸ್ಥಾನ ಪಡೆಯುವಲ್ಲೂ ಚೇತನ್ ಪಾತ್ರವಿತ್ತು. ಇವರ ತಮ್ಮ ರಿತಿನ್ ಬಬೂರ್ ಸಹ ತುಂಬ ಭರವಸೆ ಮೂಡಿಸಿರುವ ಬಾಲಕ.

ದಕ್ಷಿಣ ವಲಯ ಮುಕ್ತ ಟೇಬಲ್ ಟೆನಿಸ್ ಸ್ಪರ್ಧೆಯಲ್ಲಿ ಪುರುಷರು ಮತ್ತು ಮಹಿಳೆಯರ ಪ್ರಶಸ್ತಿಗಳೆರಡೂ ಕರ್ನಾಟಕದ ಮಡಿಲಿಗೆ ಬಿದ್ದವು.

ಸಾಧನೆಗೈದವರು ಬೋನ ಥಾಮಸ್ ಜಾನ್ ಮತ್ತು ಅರ್ಚನ ರಾವ್. ಇದು ರಾಷ್ಟ್ರೀಯ ರ್‍ಯಾಂಕಿಂಗ್ ಪಂದ್ಯಾವಳಿ ಆದ್ದರಿಂದ ದೇಶದ ಪ್ರಮುಖ ಆಟಗಾರರು ಪಾಲ್ಗೊಂಡಿದ್ದರು.

ಭಾರತದ ಲಾನ್ ಟೆನ್ನಿಸ್ ಸಂಸ್ಥೆ ಮತ್ತು ರಾಜ್ಯದ ಲಾನ್ ಟೆನ್ನಿಸ್ ಸಂಸ್ಥೆಗಳ ನಡುವಣ ವಿರಸ ಬೆಂಗಳೂರಿಗೆ ಪ್ರತಿವರ್ಷ ದೊರೆಯುತ್ತಿದ್ದ ಸ್ಯಾಟಲೈಟ್ ಟೆನ್ನಿಸ್ ಪಂದ್ಯಾವಳಿಗೆ ಮುಳುವಾಯ್ತು. ಸೆಡ್ಡು ಹೊಡೆದ ರಾಜ್ಯ ಸಂಸ್ಥೆ ಸ್ಯಾಟಲೈಟ್ ದರ್ಜೆಗೂ ಮೇಲ್ಮಟ್ಟದ ಚಾಲಾಂಜರ್ ಪಂದ್ಯಾವಳಿಯನ್ನು ದೇಶದಲ್ಲೇ ಮೊದಲ ಬಾರಿಗೆ ನಡೆಸಲು ರಾಜ್ಯ ಟೆನ್ನಿಸ್ ಆಟಗಾರರ ಸಂಘಕ್ಕೆ ಅನುಮತಿ ನೀಡಿತು. ಮೇಲ್ದರ್ಜೆಗೆ ಹೋಗಬಯಸುವ ಮಧ್ಯಮ ದರ್ಜೆಯ ಆಟಗಾರರು ಪಾಲ್ಗೊಳ್ಳುವ ಈ ಸ್ಪರ್ಧೆಗೆ ವಿದೇಶಗಳ ಹತ್ತಾರು ಪಟುಗಳು ಬಂದರು. ಜರ್ಮನಿಯ ಫ್ರ್ಯಾಂಕ್ ಡನ್‌ಹಾರ್ಟ್ ಭರ್ಜರಿ ಹೊಡೆತಗಳ ಆಟವಾಡಿ ಸೋವಿಯತ್ ಒಕ್ಕೂಟದ ವಿ. ಗಾಬ್ರಿಚೆಡ್ಸೆ ಅವರನ್ನು ಸೋಲಿಸಿ ಎಪ್ಪತ್ತು ಸಾವಿರ ರುಪಾಯಿ ಬಹುಮಾನ ಗೆದ್ದರು.

ರಾಷ್ಟ್ರೀಯ ಕಿರಿಯರ ಹಾರ್ಡ್ ಕೋರ್ಟ್ ಟೆನಿಸ್ ಪ್ರಶಸ್ತಿ ಕರ್ನಾಟಕ್ಕೆ ಬಂತು. ಏಳನೆಯ ಶ್ರೇಯಾಂಕ ಪಡೆದಿದ್ದ ಮೈಸೂರಿನ ಹದಿನೆಂಟು ವರ್ಷದ ಓ. ಶ್ರೀನಾಥ್ ದೊಡ್ಡ ಮುಂಡಾಸಿನವರ ಬಂಡಿಗಳನ್ನು ಬುಡಮೇಲು ಮಾಡಿದರು. ಬಾಲಕಿಯರ ವಿಭಾಗದಲ್ಲಿ ಬೆಂಗಳೂರಿನ ಹದಿನೈದು ವರ್ಷದ ಆರತಿ ಪೊನ್ನಪ್ಪ ಕೊನೆಯ ಸುತ್ತಿನಲ್ಲಿ ಎಡವಿದರು. ಜಪಾನ್, ಹಾಂಕಾಂಗ್, ಇಂಡೊನೇಶಿಯ ಅಲ್ಲದೆ ಯೂರೋಪ್ ಖಂಡದಲ್ಲಿ ಕಿರಿಯರ ಹಲವು ಪಂದ್ಯಾವಳಿಗಳಲ್ಲಿ ಆರತಿ ಆಡಿದರು. ಅಂಕಣದಲ್ಲಿ ಅತ್ಯುತ್ತಮ ನಡತೆಗಾಗಿ ವಿಶೇಷ ಬಹುಮಾನವನ್ನೂ ಗಳಿಸಿದರು.

ಅಖಿಲ ಭಾರತ ಅಂತರ ವಿಶ್ವ ವಿದ್ಯಾಲಯ ಟೆನಿಸ್ ಪ್ರಶಸ್ತಿ ಮೈಸೂರು ವಿ.ವಿ. ಕೈ ಸೇರಿತು. ನೀತ್ ದೇವಯ್ಯ ಮತ್ತು ಸಬಿತ ವಿಜೇತ ತಂಡದಲ್ಲಿದ್ದರು.

ಮಲೇಶಿಯಾದಲ್ಲಿ ಅಜ್ಲನ್ ಶಾ ಹಾಕಿ ಪ್ರಶಸ್ತಿ ಗೆದ್ದ ಭಾರತದ ತಂಡದಲ್ಲಿ ರಾಜ್ಯದ ಆಶೀಶ್ ಬಲ್ಲಾಳ್, ಸುಬ್ಬಯ್ಯ, ಪೂಣಚ್ಚ ಮತ್ತು ಜೂಡ್ ಫೆಲಿಕ್ಸ್ ಇದ್ದರು. ಪಾಕಿಸ್ತಾನವನ್ನು ಸೋಲಿಸಿದ ಭಾರತ, ಹಾಕಿ ಸುವರ್ಣಯುಗ ಮರಳುವ ದೂರದ ಆಸೆ ಮೂಡಿಸಿತು.

ಕಳೆದ ಬಾರಿಯ ಕಿರಿಯರ ಹಾಕಿ ರಾಷ್ಟ್ರೀಯ ಪ್ರಶಸ್ತಿ ವಿಜೇತ ರಾಜ್ಯ ತಂಡ, ಈ ಬಾರಿ ತಿರುಪತಿಯಲ್ಲಿ ಎಂಟರ ಹಂತದಲ್ಲೇ ಮುಡಿಯೊಪ್ಪಿಸಿ ಮರಳಿತು.

ಹಾಲೆಂಡ್ ದೇಶದ ಓ ಎಸ್ ವಿ ಐಂಡ್‌ಹೊವೆನ್ ಫುಟ್‌ಬಾಲ್ ತಂಡ

ಬೆಂಗಳೂರಿನಲ್ಲಿ ಭಾರತ ಏಕಾದಶ ತಂಡದ ವಿರುದ್ಧ ಪಂದ್ಯವಾಡಿತು. ಹೆಸರಾಂತ ಬಾಬಿ ರಾಬ್ಸನ್ ನಿರ್ವಾಹಕತ್ವದ ಈ ತಂಡ ಆಕಾರದಲ್ಲೂ ಆಟದಲ್ಲೂ ನಮ್ಮವರನ್ನು ಕುಬ್ಜರನ್ನಾಗಿಸಿ 8–1 ಗೋಲುಗಳ ಜಯ ಸಾಧಿಸಿತು. ಹಲವು ದೇಶಗಳ ಪ್ರಸಿದ್ಧ ಆಟಗಾರರು ಪ್ರವಾಸಿ ತಂಡದಲ್ಲಿದ್ದರು. ಸಮರ್ಥ ಆಟಗಾರರು ಯಾವ ದೇಶದವರಾದರೂ ಕ್ಲಬ್‌ಗಳು ಅಪಾರ ಹಣತೆತ್ತು ಅವರ ಸೇವೆ ಪಡೆಯುವುದು ಯೂರೋಪ್‌ನಲ್ಲಿ ಸರ್ವೆ ಸಾಮಾನ್ಯ.

ಕರ್ನಾಟಕದ ಏಕಮೇವ ಪ್ರಮುಖ ಫುಟ್‌ಬಾಲ್ ಸ್ಪರ್ಧೆಯಾದ ಸ್ಟಾಫರ್ಡ್ ಚಾಲೆಂಜ್ ಕಪ್ ಪಂದ್ಯಾವಳಿ ಈ ಬಾರಿಯೂ ಬೆಂಗಳೂರಿನಲ್ಲಿ ನಡೆಯಿತು. ಕಲ್ಕತ್ತದ ಮಹ್ಮಡನ್ ಸ್ಪೋರ್ಟಿಂಗ್ ತಂಡ ಸ್ಥಳೀಯ ಎಚ್ ಎ ಎಸ್ ಡಿ ತಂಡವನ್ನು 2–1 ಗೋಲುಗಳಿಂದ ಸೋಲಿಸಿ ಪ್ರಶಸ್ತಿ ಪಡೆಯಿತು.

ದೇಶದ ಸ್ನೂಕರ್ ಮತ್ತು ಬಿಲಿಯರ್ಡ್ಸ್ ರಾಜಧಾನಿ ಆಗುವ ಹಾದಿಯಲ್ಲಿದೆ ಬೆಂಗಳೂರು. ಈಚಿನ ವರ್ಷಗಳಲ್ಲಿ ಇಲ್ಲಿ ನಡೆದಿರುವಷ್ಟು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸ್ಪರ್ಧೆಗಳು ಬೇರೆಡೆ ನಡೆದಿಲ್ಲ. ಈವರ್ಷ ನಡೆದ ಅಂತರಾಷ್ಟ್ರೀಯ ಮಾಸ್ಟರ್ಸ್ ಸ್ನೂಕರ್ ಸ್ಪರ್ಧೆಗೆ ಹನ್ನೆರಡು ದೇಶಗಳ ಇಪ್ಪತ್ತು ಆಟಗಾರರು ಬಂದರು. ಬಹುಮಾನದ ಒಟ್ಟು ಮೊತ್ತ ಐದುವರೆ ಲಕ್ಷ ರೂಪಾಯಿ. ಕರ್ನಾಟಕದವರಾದ ಮಾಜಿ ರಾಷ್ಟ್ರೀಯ ಚಾಂಪಿಯನ್ ಬಿ. ವಿ. ಶ್ರೀನಿವಾಸಮೂರ್ತಿ ಎಂಟರ ಹಂತಕ್ಕೆ ಬಂದರು. ಪ್ರಶಸ್ತಿಗಳಿಸಿದ್ದು ಮಾಲ್ಟಾದ ಟೋನಿಡ್ರಾಗೋ. ಇಪ್ಪತ್ತೊಂದು ವರ್ಷದೊಳಗಿವನರ ವಿಶ್ವ ಸ್ನೂಕರ್ ಸ್ಪರ್ಧೆಯೂ ನಗರದಲ್ಲಿ ನಡೆಯಿತು. ಹದಿನಾರರ ಹಂತದಲ್ಲಿ ಭಾರತ ಎಂಟು ಆಟಗಾರರು ಇದ್ದರು. ರಾಜ್ಯ ಅಜೇಯ್ ಪ್ರಭಾಕರ್ ಎಂಟರ ಹಂತದವರೆಗೂ ಬಂದರು. ಇಂಗ್ಲೆಂಡಿನ ಹದಿನೈದು ವರ್ಷದ ಬಾಲಕ ರೊನಾಲ್ಡ್ ಓ ಸಾಲಿವಾನ್‌ಗೆ ಪ್ರಶಸ್ತಿ ದಕ್ಕಿತು.

ಕರ್ನಾಟಕ ಮೋಟಾರು ಕ್ರೀಡಾ ಸಂಘ ನಡೆಸಿಕೊಟ್ಟ ಕೆ –1000 ರ‍್ಯಾಲಿಯಲ್ಲಿ ಒಟ್ಟು ಎಂಬತ್ತನಾಲ್ಕು ಸ್ಪರ್ಧಿಗಳಿದ್ದರು. ಟಾರು ರಸ್ತೆ, ಮಣ್ಣಿನ ದಾರಿ, ಬೆಟ್ಟ ಗುಡ್ಡ ಎಲ್ಲ ಸೇರಿ ಒಂದು ಸಾವಿರ ಕಿಲೋಮೀಟರ್ ಕ್ರಮಿಸುವ ಈ ಸಾಹಸದಲ್ಲಿ ರಾಜ್ಯದ ಅನಿತಾ ಹಾಗೂ ಜಗತ್‌ನಂಜಪ್ಪ ದಂಪತಿಗಳು ದ್ವಿಚಕ್ರವಾಹನ ವರ್ಗದಲ್ಲಿ ವಿಜಯಿಗಳಾದರು. ನಾಲ್ಕು ಚಕ್ರವಾಹನ ವಿಭಾಗಲ್ಲಿ ತಮಿಳುನಾಡಿನ ಲೀಲಾಕೃಷ್ಣನ್ ಮೊದಲಿಗರಾದರು.

ಈ ವರ್ಷದ ಉಳಿದ ಉಲ್ಲೇಖನೀಯ ಅಂಶಗಳು ಹೀಗಿವೆ. ದಕ್ಷಿಣವಲಯ ಬ್ಯಾಸ್ಕೆಟ್‌ಬಾಲ್ ಸ್ಪರ್ಧೆಯಲ್ಲಿ ಕರ್ನಾಟಕಕ್ಕೆ ಜಯ. ಅಂತರವಲಯ ಪ್ರಶಸ್ತಿ ವಿಜೇತ ತಂಡವಾದ ತಮಿಳುನಾಡನ್ನು ಸೋಲಿಸಿದ ಹಿರಿಮೆ. ಏಶಿಯನ್ ಬ್ಯಾಸ್ಕೆಟ್‌ಬಾಲ್ ಸ್ಪರ್ಧೆಗೆ ಜಪಾನ್‌ಗೆ ಹೋದ ಭಾರತದ ತಂಡದಲ್ಲಿ ರಾಜ್ಯದ

ಆರ್. ಆರ್ ರಾಜನ್‌ಗೆ ಸ್ಥಾನ. ರಾಷ್ಟ್ರೀಯ ಟೆನಿಕಾಯ್ಟ್ ಸ್ಪರ್ಧೆಯಲ್ಲಿ ರಾಜ್ಯ ಮಹಿಳಾ ತಂಡಕ್ಕೆ ಎರಡನೆ ಬಹುಮಾನ. ರಾಷ್ಟ್ರೀಯ ಕೇರಂ ಪಂದ್ಯಗಳಲ್ಲಿ ರಾಜ್ಯ ಪುರುಷರ ತಂಡಕ್ಕೆ ಎರಡನೆ ಸ್ಥಾನ. ದಕ್ಷಿಣವಲಯ ಮುಕ್ತ ಶೈಲಿ ಕುಸ್ತಿಯಲ್ಲಿ ರಾಜ್ಯ ಮಲ್ಲರ ಮೇಲುಗೈ. ದಕ್ಷಿಣವಲಯ ಬ್ರಿಡ್ಜ್ ಸ್ಪರ್ಧೆಯಲ್ಲಿ ಬೆಂಗಳೂರಿನ ಪಲ್ಲಾರ್ ತಂಡಕ್ಕೆ ಎರಡನೆ ಸ್ಥಾನ. ಬೆಂಗಳೂರು ಗಾಲ್ಫ್ ಕ್ಲಬ್ ಶತಮಾನೋತ್ಸವ ಮುಕ್ತ ಸ್ಪರ್ಧೆಯಲ್ಲಿ ಡೇವಿಡ್ ಡಿಸೋಜಗೆ ಪ್ರಶಸ್ತಿ. ಏಶಿಯನ್ ಮಹಿಳಾ ಭಾರ ಎತ್ತುವ ಸ್ಪರ್ಧೆಗೆ ಶ್ಯಾಮಲಾ ಶೆಟ್ಟಿ ಆಯ್ಕೆ.

ರಾಜ್ಯ ಕ್ರೀಡಾ ಮಂಡಲಿ ಅಧ್ಯಕ್ಷರಾಗಿ ಈ ವರ್ಷ ಪ್ರಕಾಶ್ ಪಡುಕೋಣೆ ಅವರನ್ನು ನೇಮಿಸಲಾಯಿತು. ದೇಶದ ಈವರೆಗಿನ ಸರ್ವ ಶ್ರೇಷ್ಠ ಕ್ರೀಡಾಪಟುಗಳಲ್ಲಿ ಒಬ್ಬರಾದ ಇವರು ಈ ಸ್ಥಾನಕ್ಕೆ ಬಂದದ್ದು ಹೊಸ ಭರವಸೆ ಮೂಡಿಸಿತು.

ಬೆಂಗಳೂರಿನಲ್ಲಿರುವ ಭಾರತ ಕ್ರೀಡಾ ಪ್ರಾಧಿಕಾರದ ದಕ್ಷಿಣ ಕೇಂದ್ರದ ನಿರ್ದೇಶಕರಾಗಿ ದೇಶದ ಮಾಜಿ ಹಾಕಿ ಕ್ಯಾಪ್ಟನ್ ಕರ್ನಾಟಕದ ಎಂ.ಪಿ. ಗಣೇಶ್ ಅಧಿಕಾರ ವಹಿಸಿಕೊಂಡರು. ಅತ್ಯುತ್ತಮ ಸೌಲಭ್ಯಗಳನ್ನು ಹೊಂದಿರುವ ಈ ಕೇಂದ್ರಕ್ಕೆ ದೇಶದ ಬಹಳಷ್ಟು ಕ್ರೀಡಾಪಟುಗಳು ತರಬೇತಿಗೆ ಬರುತ್ತಾರೆ.

ಭಾರತ ಕ್ರಿಕೆಟ್ ನಿಯಂತ್ರಣ ಮಂಡಳಿ ಕಾರ್ಯದರ್ಶಿಯಾಗಿ ರಾಜ್ಯ ಸಿ. ನಾಗರಾಜ್ ಆಯ್ಕೆ ಆದರು. ದೇಶದ ಕ್ರೀಡಾಸಂಸ್ಥೆಗಳ ಅತಿ ಪ್ರತಿಷ್ಠಿತ ಹುದ್ದೆಗಳಲ್ಲಿ ಇದೂ ಒಂದು.

* * *

## ನಮ್ಮನ್ನಗಲಿದ ಕ್ರೀಡಾಲೋಕದ ಮುಖ್ಯವ್ಯಕ್ತಿಗಳು

ಕ್ರೀಡಾಲೋಕದ ಮೂವರು ಹಿರಿಯರು ಈ ವರ್ಷ ಅಗಲಿದರು. ಎಂ. ಚಿನ್ನಸ್ವಾಮಿ ಕರ್ನಾಟಕದ ಕ್ರಿಕೆಟ್ ರಂಗದ ಪಿತಾಮಹರೆನಿಸಿದ್ದವರು. ನವೆಂಬರ್ 8 ರಂದು ನಿಧನ ಹೊಂದಿದರು. ಭಾರತ ಕ್ರಿಕೆಟ್ ನಿಯಂತ್ರಣ ಮಂಡಳಿಯ ಮಾಜಿ ಅಧ್ಯಕ್ಷರಾಗಿದ್ದರು. ಕ್ರಿಕೆಟ್ ಆಟಕ್ಕೆ ಅವರು ಸಲ್ಲಿಸಿದ ಸೇವೆಗಾಗಿ ಮೆರ್ಲಿಬೋರ್ನ್ ಕ್ರಿಕೆಟ್ ಕ್ಲಬ್ ಅವರಿಗೆ ಗೌರವ ಸದಸ್ಯತ್ವ ನೀಡಿ ಗೌರವಿಸಿತ್ತು. ಈ ಗೌರವ ಪಡೆದ ಭಾರತದ ಮೊದಲ ವ್ಯವಸ್ಥಾಪಕರು ಇವರು.

ಐದು ದಶಕಗಳ ಕಾಲ ಕ್ರಿಕೆಟ್ ರಂಗಕ್ಕೆ ತಮ್ಮ ಸೇವೆಯನ್ನು ಆಡಳಿತರಂಗದಲ್ಲಿ ಸಲ್ಲಿಸಿದವರು ಇವರು. 1960–65 ರ ಅವಧಿಯಲ್ಲಿ ಭಾರತ ಕ್ರಿಕೆಟ್ ಮಂಡಳಿಯ ಗೌರವ ಕಾರ್ಯದರ್ಶಿಗಳಾಗಿದ್ದು 1977–80 ರ ಅವಧಿಯಲ್ಲಿ ಅಧ್ಯಕ್ಷರಾದರು. ಬೆಂಗಳೂರು ಟೆಸ್ಟ್ ಕೇಂದ್ರವಾಗಲು ಇವರೇ ಪ್ರಮುಖ

ಕಾರಣಕರ್ತರು. 1984 ರಲ್ಲಿ ರಾಜ್ಯ ಕ್ರಿಕೆಟ್ ಸಂಸ್ಥೆಯು ಸ್ವರ್ಣ ಮಹೋತ್ಸವ ಆಚರಿಸಿದಾಗ – ಈ ಕ್ರೀಡಾರಂಗಕ್ಕೆ ಚಿನ್ನಸ್ವಾಮಿ ಕ್ರೀಡಾಂಗಣ ಎಂದು ಹೆಸರಿಟ್ಟಿತು. ಚಿನ್ನಸ್ವಾಮಿಯವರು ಎರಡು ಬಾರಿ ರಾಜ್ಯ ಪ್ರಶಸ್ತಿಯನ್ನು ಗಳಿಸಿದ್ದರು.

ಅರವತ್ತೇಳನೆ ವಯಸ್ಸಿನಲ್ಲಿ ಬೆಂಗಳೂರಿನಲ್ಲಿ ನಿಧನಹೊಂದಿದ ಎಸ್ ರಾಮನ್ 1948ರಲ್ಲಿ ಲಂಡನ್ ಒಲಂಪಿಕ್ಸ್‌ನಲ್ಲಿ ಭಾರತದ ಮೊದಲ ಒಲಂಪಿಕ್ ಫುಟ್‌ಬಾಲ್ ಗೋಲು ಹೊಡೆದಿದ್ದರು. ನಮ್ಮ ದೇಶ ಇಂತಹ ಎಡಬದಿಯ ಆಟಗಾರನನ್ನು ಕಂಡೇ ಇಲ್ಲವೆಂದು ಹೇಳುತ್ತಾರೆ.

ಮತ್ತೊಬ್ಬ ಹಿರಿಯ ಕ್ರೀಡಾ ಆಡಳಿತಗಾರ ಆರ್ಥರ್ ಬಿ. ಈಶ್ವರ್ ಎಂಭತ್ತೊಂಭತ್ತನೆ ವಯಸ್ಸಿನಲ್ಲಿ ಕಾಲವಶರಾದರು. ರಾಜ್ಯ ಹಾಕಿ, ಬ್ಯಾಡ್ಮಿಂಟನ್ ಮತ್ತು ಲಾನ್ ಟೆನಿಸ್ ಸಂಸ್ಥೆಗಳ ಉನ್ನತ ಸ್ಥಾನಗಳಲ್ಲಿ ಅವರು ಸ್ಮರಣೀಯ ಸೇವೆ ಸಲ್ಲಿಸಿದ್ದರು.

# ನಮ್ಮ ಬರಹಗಾರರು

| | | |
|---|---|---|
| ಡಾ. ಎಚ್. ಎಸ್. ಗೋಪಾಲರಾವ್ | : | ಶಾಸನ ಕ್ಷೇತ್ರದಲ್ಲಿ ಪರಿಣತಿ ಪಡೆದ ಇವರು ಕರ್ನಾಟಕ ವಿದ್ಯುಚ್ಛಕ್ತಿ ಇಲಾಖೆ, ಕಾವೇರಿ ಭವನದಲ್ಲಿ ಕಿರಿಯ ಇಂಜಿನಿಯರ್ ಆಗಿದ್ದಾರೆ. |
| ಡಾ. ಬಸವರಾಜ ಕಲ್ಗುಡಿ | : | ವಿಮರ್ಶಕ ಕನ್ನಡ ಅಧ್ಯಯನ ಕೇಂದ್ರ. ಬೆಂಗಳೂರು ವಿಶ್ವವಿದ್ಯಾಲಯ ದಲ್ಲಿದ್ದಾರೆ. |
| ಸಿ.ವಿ. ರಾಜಗೋಪಾಲ | : | ಖ್ಯಾತ ಪತ್ರಕರ್ತರು. ಬೆಂಗಳೂರು |
| ಬರಗೂರು ರಾಮಚಂದ್ರಪ್ಪ | : | ಕವಿ ಕಥೆಗಾರರಾಗಿ, ಚಲಚ್ಚಿತ್ರ ನಿರ್ದೇಶಕರಾಗಿ, ಬಂಡಾಯ ಸಾಹಿತ್ಯ ಚಳುವಳಿಯ ಅಗ್ರ ಪಂಕ್ತಿಯಲ್ಲಿರುವ ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾರೆ. |
| ಡಾ. ಜಿ.ಎಸ್. ಶಿವರುದ್ರಪ್ಪ | : | ಕನ್ನಡದ ಮಹತ್ವದ ಕವಿ, ಮತ್ತು ಕಾವ್ಯ ಚಿಂತಕರು. ಕನ್ನಡ ಅಧ್ಯಯನ ಕೇಂದ್ರ ಬೆಂಗಳೂರು ವಿಶ್ವ ವಿದ್ಯಾಲಯದ ನಿವೃತ್ತ ನಿರ್ದೇಶಕರು, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಮಾಜಿ ಅಧ್ಯಕ್ಷರು. |
| ಸದಾನಂದ ಕನವಳ್ಳಿ | : | ಖ್ಯಾತ ಸಂಗೀತ ವಿರ್ಮಶಕರು, ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ನಿರ್ದೇಶಕರು |
| ಕಿ.ರಂ. ನಾಗರಾಜ | : | ಖ್ಯಾತ ವಿರ್ಮಶಕರು, ಸಾಹಿತ್ಯ ಚಿಂತಕರು. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕ ರಾಗಿದ್ದಾರೆ. |
| ಹಿ.ಚಿ. ಬೋರಲಿಂಗಯ್ಯ | : | ಜಾನಪದ ತಜ್ಞರು. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಸಹ ಪ್ರಾಧ್ಯಾಪಕರಾಗಿದ್ದಾರೆ. |

| | | |
|---|---|---|
| ಡಾ. ಎಚ್. ಎಸ್. ವೆಂಕಟೇಶಮೂರ್ತಿ | : | ಕನ್ನಡದ ಪ್ರಮುಖ ಕವಿಗಳಾಗಿರುವ ಇವರು ಸಂತ ಜೋಸೆಫ್ ಕಾಲೇಜು ಬೆಂಗಳೂರಿನಲ್ಲಿ ಅಧ್ಯಾಪಕರು. |
| ಡಾ. ನರಹಳ್ಳಿ ಬಾಲಸುಬ್ರಮಣ್ಯ | : | ವಿಮರ್ಶಕರು, ಶೇಷಾದ್ರಿಪುರಂ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ. |
| ಡಾ. ಕೆ.ವಿ. ನಾರಾಯಣ | : | ಕನ್ನಡದ ಮಹತ್ವದ ವಿಮರ್ಶಕರು, ಸಾಹಿತ್ಯ ಚಿಂತಕರು. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಭಾಷಾ ನಿಕಾಯದ ಮುಖ್ಯಸ್ಥರೂ, ಪ್ರಾಧ್ಯಾಪಕರೂ ಆಗಿದ್ದಾರೆ. |
| ಟಿ.ಪಿ. ಅಶೋಕ | : | ಪ್ರಮುಖ ವಿಮರ್ಶಕರು. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿದ್ದಾರೆ. |
| ಡಾ. ನಾಗಭೂಷಣಸ್ವಾಮಿ | : | ಪ್ರಮುಖ ವಿಮರ್ಶಕರು. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. |
| ಡಾ. ಕೆ. ಮರುಳಸಿದ್ದಪ್ಪ | : | ನಾಟಕ ವಿಮರ್ಶಕರಲ್ಲಿ ಅಗ್ರಗಣ್ಯರೆಂದು ಹೆಸರು ಪಡೆದಿದ್ದಾರೆ. ರಂಗಭೂಮಿಯ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿರುವವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. |
| ಡಾ. ಬಿ.ಕೆ. ಕರೀಗೌಡ | : | ಕನ್ನಡ ಹೊಸಹೋಳಿಗೆಯ ಪ್ರಮುಖ ಕತೆಗಾರರು, ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದಲ್ಲಿ ಸಹ ಪ್ರಾಧ್ಯಾಪಕರಾಗಿದ್ದಾರೆ. |
| ಮಲ್ಲೇಪುರಂ ಜಿ. ವೆಂಕಟೇಶ | : | ಸಾಹಿತ್ಯ ವಿಮರ್ಶಕರಾಗಿ, ಶಂಭಾ ಸಂಶೋಧನೆಯ ಚಿಂತಕರಾಗಿ, ಖ್ಯಾತವಾಗಿರುವ ಇವರು, ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಸಹ ಪ್ರಾಧ್ಯಾಪಕರಾಗಿದ್ದಾರೆ. |

ಡಾ. ಎಸ್. ವಿದ್ಯಾಶಂಕರ : ಪ್ರಾಚೀನ ಸಾಹಿತ್ಯ, ವಚನ ಸಾಹಿತ್ಯ ಅಧ್ಯಯನದಲ್ಲಿ ಪರಿಣಿತರಾದ ಇವರು ಪ್ರವಾಸ ಸಾಹಿತ್ಯದ ಬಗ್ಗೆ ಗಾಢವಾದ ಕುತೂಹಲ ಬೆಳೆಸಿಕೊಂಡವರು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಸಹಪ್ರಾಧ್ಯಾಪಕರಾಗಿದ್ದಾರೆ.

ನಾಗರಾಜು : ತರುಣ ವಿಜ್ಞಾನಿ, ಪರಿಸರ ಬಗ್ಗೆ ಕಾಳಜಿಯುಳ್ಳವರು.

ಶ್ರೀಕಂಠೇಶ್ವರಸ್ವಾಮಿ : ತರುಣ ವಿಜ್ಞಾನಿ. ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿದ್ದಾರೆ.

ಜಿ. ಶ್ರೀನಿವಾಸರಾಜು : ಕವಿಗಳು, ಕನ್ನಡದಲ್ಲಿ ಮೂಕ ನಾಟಕಗಳ ಪ್ರಯೋಗವನ್ನು ಮೊದಲು ಮಾಡಿದವರು, ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಮೂಲಕ ಅತ್ಯುತ್ತಮ ಸಾಹಿತ್ಯವನ್ನು ತರಲು ಕಾರಣರಾದವರು, ಎಳೆಯ ಸಾಹಿತಿಗಳಿಗೆ ಚೇತನರಾದವರು—ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರಸಾರಾಂಗದ ನಿರ್ದೇಶಕ ರಾಗಿದ್ದಾರೆ.

ಪ್ರೊ. ಅ.ರಾ ಮಿತ್ರ. : ಕನ್ನಡದ ಉತ್ತಮ ಪ್ರಬಂಧಕಾರರು, ವಾಗ್ಮಿಗಳು, ಛಂದಸ್ಸು ಕಾವ್ಯ ಮೀಮಾಂಸೆಯಲ್ಲಿ ಪರಿಣತರು

ಎಚ್. ಎಸ್. ರಾಘವೇಂದ್ರರಾವ್ : ಕನ್ನಡದ ಪ್ರಮುಖ ಸಾಹಿತ್ಯ ವಿಮರ್ಶಕರು, ಸದ್ಯ ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಭಾಷಾ ವಿಭಾಗದ ಪ್ರಾಧ್ಯಾಪಕರು.

ಅ. ಲ. ನರಸಿಂಹನ್ : ಕನ್ನಡದ ಕಲಾವಿಮರ್ಶಕರಲ್ಲಿ ಒಳ್ಳೆಯ ಹೆಸರನ್ನು ಪಡೆದ ಇವರು ಉತ್ತಮ ಛಾಯಾಗ್ರಾಹಕ. ಕರ್ನಾಟಕ ಗೆಝೆಟಿಯರ್‌ನಲ್ಲಿದ್ದಾರೆ.

ಬಿ.ವಿ.ಕೆ. ಶಾಸ್ತ್ರಿ : ಖ್ಯಾತ ಸಂಗೀತ ವಿಮರ್ಶಕರೆಯ ಹೆಸರುಗಳಿಸಿದ್ದಾರೆ. ಬೆಂಗಳೂರಿನಲ್ಲಿದ್ದಾರೆ.

| | | |
|---|---|---|
| ನಿರಂಜನಾರಾಧ್ಯ | : | ಪರಿಸರ ರಕ್ಷಣೆ, ವೈಜ್ಞಾನಿಕ ಮನೋಭಾವ ಬೆಳವಣಿಗೆಯ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿರುವ ವಿಜ್ಞಾನಿ, ವಿಜ್ಞಾನ ಪರಿಷತ್ತಿನ ಕಾರ್ಯದರ್ಶಿ ಯಾಗಿದ್ದಾರೆ. |
| ಡಾ. ವಿಜಯಾ | : | ಕನ್ನಡ ಲೇಖಕಿ, ನಾಟಕ ರಚನೆ ಮಾಡಿದ್ದಾರೆ. ಪತ್ರಕರ್ತೆ, ಸಾಮಾಜಿಕ ಕಳಕಳಿಯುಳ್ಳವರು. |
| ಸನದಿ. ಬಿ.ಎ. | : | ಮುಂಬೈನಲ್ಲಿ ಕನ್ನಡ ಸಂಘದ ಕಾರ್ಯ ಚಟುವಟಿಕೆಯನ್ನು ಕ್ರಿಯಾತ್ಮಕವಾಗಿರಿಸಿದವರು. |
| ಡಾ. ಎಂ.ಜೆ. ಕೃಷ್ಣನ್ | : | ರಾಜಕೀಯ ಚಿಂತಕರು, ಪ್ರಗತಿ ಪರ ಯೋಚನೆಯುಳ್ಳವರು ಬೆಂಗಳೂರು ವಿಶ್ವವಿದ್ಯಾಲಯದ ರಾಜಕೀಯ ಶಾಸ್ತ್ರ ವಿಭಾಗದಲ್ಲಿ ಅಧ್ಯಾಪಕರಾಗಿದ್ದಾರೆ. |
| ಪ್ರಕಾಶ್ ಕಂಬತ್ತಳ್ಳಿ | : | ನಾಟಕ ಚಟುವಟಿಕೆ, ರಂಗಭೂಮಿ ಪ್ರಯೋಗದಲ್ಲಿ ಗಾಢ ಆಸಕ್ತಿಯುಳ್ಳವರು. |
| ಕೆ.ಟಿ ಕೃಷ್ಣಕಾಂತ್ | : | ಕ್ರೀಡಾ ಚಟುವಟಿಕೆಯ ವಿಮರ್ಶಕರು. ಬೆಂಗಳೂರಿನ ಆಕಾಶವಾಣಿಯಲ್ಲಿ ಇದ್ದಾರೆ. |

‘ಕನ್ನಡ ವಾರ್ಷಿಕ’ ಕರ್ನಾಟಕದ ಆಯಾ ವರ್ಷದ ಸಾಂಸ್ಕೃತಿಕ ಅಭಿವ್ಯಕ್ತಿ ಹಾಗು ಸಾಧನೆಯನ್ನು ಕುರಿತ ಸಮೀಕ್ಷೆ. ಇದು ಕೇವಲ ವಿವರಗಳ ಪಟ್ಟಿ ಮಾತ್ರವಾಗದೇ ಸಾಂಸ್ಕೃತಿಕ ಮೌಲ್ಯಗ್ರಹಿಕೆ ಹಾಗೂ ಸಮೀಕ್ಷೆಗಳನ್ನು ಒಳಗೊಂಡಿರುವುದರಿಂದ ವಿಶಿಷ್ಟ ಮೂಲಕೃತಿಯೊಂದರ ಸ್ವರೂಪ ಅದಕ್ಕೆ ತಾನಾಗಿಯೇ ಒದಗಿದೆ. ಕನ್ನಡ ವಾರ್ಷಿಕದ ಅನ್ವೇಷಣೆಯ ಸ್ವರೂಪ ಮುಖ್ಯವಾಗಿ ಮೂರು ಭಾಗಗಳಲ್ಲಿ ಹರಡಿಕೊಂಡಿದೆ.

ಕರ್ನಾಟಕದ ಪ್ರಜ್ಞಾವಂತರು ಇಟ್ಟ ಹೆಜ್ಜೆಯನ್ನು, ಸಾಧಿಸಿದ ಸಾಧನೆಯನ್ನು ಲೋಕವು ಸಾಂಕೇತಿಕವಾಗಿ ಗೌರವಿಸಿದಾಗ ಅವುಗಳ ಸತ್ವ ಹಾಗೂ ಅರ್ಥವನ್ನು ಅರಸಿ ವಿವರಿಸುವುದು ‘ವಾರ್ಷಿಕ’ದ ಒಂದು ಅಂಶ.

ಕರ್ನಾಟಕದಲ್ಲಿ ಆಯಾ ವರ್ಷ ಸಂಭವಿಸಿದ ಪ್ರಮುಖವಾದ ಸಾಮಾಜಿಕ, ಸಾಂಸ್ಕೃತಿಕ ಘಟನೆಗಳ ವಿವರಣೆ ಹಾಗೂ ವಿಶ್ಲೇಷಣೆ ಕನ್ನಡ ವಾರ್ಷಿಕದ ಇನ್ನೊಂದು ಮುಖ್ಯ ಅಂಗವಾಗಿದೆ.

ವಾರ್ಷಿಕದ ಇನ್ನೊಂದು ಬಹುಮುಖ್ಯವಾದ ಭಾಗವು ಆಯಾ ವರ್ಷದಲ್ಲಿ ಅಭಿವ್ಯಕ್ತಿಗೊಂಡ ಸಂಸ್ಕೃತಿಯ ಹಲವು ವಿನ್ಯಾಸಗಳ ಸ್ವರೂಪವನ್ನು ಗುರುತಿಸಿ ಸಮೀಕ್ಷಿಸುವುದು. ಈ ಭಾಗದಲ್ಲಿ ಸಾಹಿತ್ಯಕ ಪ್ರಕಾರಗಳಾದ ಕಾವ್ಯ, ಕಾದಂಬರಿ, ಕಥೆ, ನಾಟಕ, ಪ್ರಬಂಧ ಮುಂತಾದ ಅಭಿವ್ಯಕ್ತಿಗಳ ಪರಿಶೀಲನೆಯ ಜೊತೆಗೆ, ಸಾಹಿತ್ಯೇತರ ಅಭಿವ್ಯಕ್ತಿಗಳಾದ ಸಂಗೀತ, ಕಲೆ, ರಂಗ ಚಟುವಟಿಕೆ, ಕ್ರೀಡೆ, ರಾಜಕಾರಣ, ಸಿನಿಮಾ, ವೈಜ್ಞಾನಿಕ ಚಟುವಟಿಕೆ- ಮೊದಲಾದವುಗಳ ಸಮೀಕ್ಷೆ ಇರುತ್ತದೆ.

ಕನ್ನಡ ಸಂಸ್ಕೃತಿಯ ವಿವಿಧ ಸ್ವರೂಪಗಳನ್ನು ಅರಿಯಲು ಯತ್ನಿಸುವ ಕನ್ನಡ ವಿಶ್ವವಿದ್ಯಾಲಯದ ವಿಶಿಷ್ಟ ಯೋಜನೆಯಾಗಿ ‘ಕನ್ನಡ ವಾರ್ಷಿಕ’ವು ಒಂದು ಮುಖ್ಯವಾದ ಸಾಧ್ಯತೆಯ ಕಡೆಗೆ ತನ್ನ ಹೆಜ್ಜೆಯನ್ನು ಇಟ್ಟಿದೆ.




ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೭೭